ಕನ್ನಡದ

# ಅತ್ಯುತ್ತಮ ಸಣ್ಣ ಕತೆಗಳು

ಮೂರನೆಯ ಸಂಪುಟ

(೧೯೪೬-೧೯೫೬)

ಸಂಪಾದಕ:

ಕೆ. ನರಸಿಂಹಮೂರ್ತಿ, ಎಂ.ಎ.



ಪ್ರಕಾಶಕರು:

ಡ ಸಾಹಿತ್ಯ ಪರಿಷತ್ತು

ಬೆಂಗಳೂರು-೨

೧೯೫೮

ಮೊದಲನೆಯ ಮುದ್ರಣ—೧೯೫೮

(ಬಳ್ಳಾರಿಯಲ್ಲಿ ನಡೆದ ನಲವತ್ತನೆ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ೧೯–೧–೧೯೫೮ರಂದು ಈ ಸಂಕಲನವು ಪ್ರಕಾಶಿತವಾಯಿತು.)



ಬೆಲೆ :

ಸಾದಾ ಪ್ರತಿ : ರೂ. ೪–೦–೦

ಕ್ಯಾಲಿಕೊ ಪ್ರತಿ : ರೂ. ೬  –೦

ಪುಟಗಳು ೧—೪೮೭ ಸ್ವತಂತ್ರ ಕರ್ಣಾಟಕ ಪವರ್ ಪ್ರೆಸ್, ಬಳೇಪೇಟೆ,
ಉಳಿದ ಪುಟಗಳು ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿ
ಬೆಂಗಳೂರು ೨

# ಮೊದಲ ಮಾತು

ಮೈಸೂರು ಸರ್ಕಾರವು ಸಂಸ್ಕೃತಿ ಪ್ರಸಾರ ಕಾರ್ಯಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತಿಗೆ ಒದಗಿಸಿದ ಧನಸಹಾಯದಿಂದ ಇತರ ಪ್ರಸಾರ ಕಾರ್ಯಗಳೊಡನೆ ಜ್ಞಾನಪ್ರಸಾರದ ಕಾರ್ಯವನ್ನೂ ಪರಿಷತ್ತು ಕೈಗೊಂಡು ಹೊಸ ಗ್ರಂಥಗಳ ರಚನೆಗೆ ಪ್ರೋತ್ಸಾಹ ಕೊಟ್ಟು ಹಲವಾರು ಗ್ರಂಥಗಳನ್ನು ಪ್ರಕಟಿಸಲು ಸಾಧ್ಯವಾಯಿತು. ಹಾಗೆ ಪ್ರಕಟವಾದ ಗ್ರಂಥಗಳಲ್ಲಿ "ಅತ್ಯುತ್ತಮ ಸಣ್ಣ ಕತೆಗಳು" ಎಂಬ ಈ ಸಣ್ಣ ಕತೆಗಳ ಸಂಗ್ರಹವೂ ಒಂದು. ಇದನ್ನು ಕನ್ನಡಿಗರಲ್ಲಿ ಅರ್ಪಿಸಲು ಪರಿಷತ್ತಿಗೆ ಬಹಳ ಸಂತೋಷವೆನಿಸಿದೆ.

ಹೊಸಗನ್ನಡದಲ್ಲಿ ಸಣ್ಣ ಕತೆಗಳ ಸಾಹಿತ್ಯ ವೈವಿಧ್ಯಪೂರ್ಣವಾಗಿ ಹುಲುಸಾಗಿ ಬೆಳೆದಿದೆ. ಅವುಗಳನ್ನು ಚಾರಿತ್ರಿಕ ದೃಷ್ಟಿಯಿಂದಲೂ ವಿಮರ್ಶಾ ದೃಷ್ಟಿಯಿಂದಲೂ ಒಮ್ಮೆಗೇ ಸಮೀಕ್ಷಿಸಿ ಅವುಗಳಲ್ಲಿ ಅತ್ಯುತ್ತಮವಾದ ಸಣ್ಣ ಕತೆಗಳನ್ನು ಆರಿಸಿ ಸಂಗ್ರಹಿಸಿ ಕೊಡುವ ಘನತರವಾದ ಕೆಲಸವನ್ನು ಪರಿಷತ್ತು ಮೈಸೂರು ವಿಶ್ವವಿದ್ಯಾನಿಲಯದ ಆಂಗ್ಲಭಾಷಾ ಅಧ್ಯಾಪಕರೂ ಒಳ್ಳೆಯ ವಿಮರ್ಶಕರೂ ಆದ ಶ್ರೀ ಕೆ. ನರಸಿಂಹಮೂರ್ತಿಗಳಿಗೆ ಒಪ್ಪಿಸಿತು. ಅಲ್ಲದೆ ಅವರು ಆರಿಸಿ ಸಂಗ್ರಹಿಸಿದ ಕತೆಗಳನ್ನು ಪರಿಶೀಲಿಸಲು ಸಂಪಾದಕ ಮಂಡಲಿಯೊಂದನ್ನೂ ಏರ್ಪಡಿಸಿತು. ಅದರಲ್ಲಿ [illegible]ಕೋಪಾಸಕ್ತ ಶ್ರೀ [illegible] ಕೆ. ವೆಂಕಟರಾಮಯ್ಯನವರು, ಶ್ರೀ ದೇವುಡು ನರಸಿಂಹಶಾಸ್ತ್ರಿಗಳು ಮತ್ತು ಶ್ರೀ ಕೆ. ಗೋಪಾಲಕೃಷ್ಣರಾಯರು, ಸದಸ್ಯರಾಗಿದ್ದು, ಶ್ರೀ ಕೆ. ನರಸಿಂಹಮೂರ್ತಿಗಳು ಸಂಗ್ರಹಿಸಿಕೊಟ್ಟ ಸಣ್ಣ ಕತೆಗಳನ್ನು ಪರಿಶೀಲಿಸಿ ಉಪಕರಿಸಿದ್ದಾರೆ.

"ಅತ್ಯುತ್ತಮ ಸಣ್ಣ ಕತೆಗಳು" ಎಂಬ ಸಂಗ್ರಹವನ್ನು ಮೂರು ಸಂಪುಟಗಳಾಗಿ ವಿಂಗಡಿಸಿ ಪ್ರಕಟಿಸಬೇಕೆಂದು ತೀರ್ಮಾನಿಸಲಾಗಿದೆ. ಈಗ ಪ್ರಕಟಿಸುತ್ತಿರುವುದು ಮೂರನೆಯ ಸಂಪುಟ. ಇದರಲ್ಲಿ ೧೯೪೬ರಿಂದ ಈಚೆಗೆ ಪ್ರಕಟವಾಗಿರುವ ನಲವತ್ತು ಅತ್ಯುತ್ತಮ ಸಣ್ಣ ಕತೆಗಳನ್ನು ಸಂಗ್ರಹಿಸಿದೆ. ಎರಡನೆಯ ಸಂಪುಟದಲ್ಲಿ ೧೯೩೬ ರಿಂದ ೧೯೪೬ರ ವರಿಗೆ ಬಂದಿರುವ ಸಣ್ಣ ಕತೆಗಳಲ್ಲಿ ಉತ್ತಮ ಸಣ್ಣ ಕತೆಗಳನ್ನೂ, ಮೊದಲನೆಯ ಸಂಪುಟದಲ್ಲಿ ಹೊಸಗನ್ನಡ ಸಾಹಿತ್ಯದ ಆರಂಭಕಾಲದಿಂದ ೧೯೩೬ರ ವರಿಗೆ ಕನ್ನಡದಲ್ಲಿ ಪ್ರಕಟವಾಗಿರುವ

ಸಣ್ಣಕತೆಗಳಲ್ಲಿ ಉತ್ತಮ ಕತೆಗಳನ್ನು ಸಂಗ್ರಹಿಸಿ ಕೊಡಲಾಗುವುದು. ಈ ಮೂರು ಸಂಪುಟಗಳಲ್ಲಿ ಕನ್ನಡದ ಒಟ್ಟು ಒಂದುನೂರು ಅತ್ಯುತ್ತಮ ಸಣ್ಣಕತೆಗಳನ್ನು ಒಂದೆಡೆ ಸಂಗ್ರಹಿಸಿ ಕನ್ನಡಿಗರಿಗೆ ಕೊಟ್ಟಂತಾಗುವುದು.

ಶ್ರೀಮಾನ್ ಕೆ. ನರಸಿಂಹಮೂರ್ತಿಗಳು ಸಣ್ಣಕತೆಗಳ ಸಂಗ್ರಹ ಕಾರ್ಯದೊಡನೆ ಕನ್ನಡ ಸಣ್ಣಕತೆಗಳ ಸಾಹಿತ್ಯದ ಇತಿಹಾಸವನ್ನೊಳಗೊಂಡ ದೀರ್ಘವೂ ಪ್ರೌಢವೂ ಆದ ಪ್ರಸ್ತಾವನೆಯನ್ನು ಬರೆದು ಕೊಟ್ಟಿದ್ದಾರೆ. ಅಲ್ಲದೆ ಕತೆಗಾರರ ಅಕಾರಾದಿ ಪಟ್ಟಿಯನ್ನೂ ಒದಗಿಸಿ ಕೊಟ್ಟಿದ್ದಾರೆ. ತಮಗೆ ಒಪ್ಪಿಸಿದ ಕೆಲಸವನ್ನು ಬಹಳ ಶ್ರದ್ಧೆಯಿಂದಲೂ ದಕ್ಷತೆಯಿಂದಲೂ ನಿರ್ವಹಿಸಿ ನಡೆಸಿಕೊಟ್ಟ ಶ್ರೀಮಾನ್ ಕೆ. ನರಸಿಂಹಮೂರ್ತಿಯವರಿಗೂ, ಸಂಪಾದಕ ಮಂಡಲಿಯ ಸದಸ್ಯರಿಗೂ, ಮುನ್ನುಡಿಯನ್ನು ಬರೆದುಕೊಟ್ಟ ಪರಿಷತ್ತಿನ ಅಧ್ಯಕ್ಷರಾದ ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೂ ಪರಿಷತ್ತು ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಈ ಸಂಕಲನದಲ್ಲಿ ತಮ್ಮ ಸಣ್ಣಕತೆಗಳನ್ನು ಉಪಯೋಗಿಸಿಕೊಳ್ಳಲು ಅನುಮತಿಕೊಟ್ಟ ಆಯಾ ಸಣ್ಣಕತೆಗಳ ಕರ್ತೃಗಳಿಗೆ ಪರಿಷತ್ತು ಚಿರಋಣಿ.

ಇದರ ಪ್ರಕಟನೆಗೆ ನೆರವಾದ ಮೈಸೂರು ಸರ್ಕಾರದ ಸಂಸ್ಕೃತಿ ಪ್ರಸಾರ ಶಾಖೆಯವರಿಗೆ ಪರಿಷತ್ತು ಕೃತಜ್ಞವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು
ತಾ॥ ೧೮-೧-೧೯೫೮

ಡಿ. ಆರ್. ರಾಮಯ್ಯ
ಕೆ. ಗೋಪಾಲಕೃಷ್ಣರಾಯ
ಗೌರವ ಕಾರ್ಯದರ್ಶಿಗಳು

# ಪರಿವಿಡಿ

# ಮುನ್ನುಡಿ

ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಉನ್ನತಿಗಾಗಿ ಹುಟ್ಟಿರುವ ಕನ್ನಡ ಸಾಹಿತ್ಯ ಪರಿಷತ್ತು ವಾಙ್ಮಯದ ವಿವಿಧಭಾಗಗಳ ಅಭಿವೃದ್ಧಿಯನ್ನೂ ಗಮನದಲ್ಲಿಟ್ಟುಕೊಂಡು ಕಾರ್ಯಮಾಡುತ್ತಿದೆ ಎಂಬುದಕ್ಕೆ ಈ ಅತ್ಯುತ್ತಮ ಸಣ್ಣಕತೆಗಳ ಸಂಗ್ರಹದ ಪ್ರಕಟನೆಯು ಒಳ್ಳೆಯ ನಿದರ್ಶನವಾಗಿದೆ.

ಸುಮಾರು ೫೦ ವರ್ಷಗಳಿಂದ ಕನ್ನಡದಲ್ಲಿ ಆಧುನಿಕ ಸಾಹಿತ್ಯ ಕ್ರಮ ಕ್ರಮವಾಗಿ ಬಳೆಯುತ್ತ ಬಂದಿದೆ. ಕತೆ, ಕಾದಂಬರಿ, ಭಾವಗೀತೆ, ಏಕಾಂಕ ನಾಟಕ, ನಾಟಕಗಳು, ವಿಮರ್ಶೆ, ಜೀವನಚರಿತ್ರೆ, ವಿಜ್ಞಾನ ಗ್ರಂಥಗಳು, ಹರಟೆಗಳು ಇತ್ಯಾದಿ ವಿವಿಧ ಮುಖಗಳಲ್ಲಿ ಕನ್ನಡ ಸಾಹಿತ್ಯವು ಈ ಅರ್ಧ ಶತಮಾನದಲ್ಲಿ ಬಳೆದುಕೊಂಡುಬಂದಿದೆ ಎಂಬುದನ್ನು ನಾವು ಅರಿತಿದ್ದೇವೆ.

ಆಧುನಿಕ ಸಾಹಿತ್ಯವು ಹೀಗೆ ಬಹುಮುಖವಾಗಿ ಕಾಣಿಸಿಕೊಂಡಿದ್ದರೂ ಸಣ್ಣಕತೆ, ಭಾವಗೀತೆ, ಕಾದಂಬರಿ ಎಂಬೀ ಮೂರು ರೀತಿಗಳಲ್ಲಿ ಹೆಚ್ಚು ಸಾಹಿತ್ಯ ಬಳೆದಿದೆ. ಈ ಕ್ರಾಂತಿಯು ಮೊದಮೊದಲು ಸಣ್ಣಕತೆಗಳಿಂದಲೇ ಮೊದಲಾಯಿತೆಂಬುದು ಗಮನಾರ್ಹವಾಗಿದೆ. ಈ ಸಣ್ಣಕತೆಗಳ ಸಾಹಿತ್ಯವನ್ನು ಶ್ರೀಗಳಾದ ಮಾಸ್ತಿ ವೆಂಕಟೇಶ ಅಯ್ಯಂಗಾರರು, ಬೆಟಗೇರಿ ಕೃಷ್ಣಶರ್ಮರು, ಎ. ಸೀತಾರಾಂ ಅವರು, ಅ. ನ. ಕೃಷ್ಣರಾಯರು, ಕೆ. ಗೋಪಾಲಕೃಷ್ಣರಾಯರು, ದೇವುಡು ನರಸಿಂಹಶಾಸ್ತ್ರಿಗಳು, ದಿವಂಗತ ಕೊಡಗಿನ ಗೌರಮ್ಮನವರು ಮೊದಲಾದ ಸಾಹಿತಿಗಳು ಚೆನ್ನಾಗಿ ಬಳೆಸಿಕೊಂಡು ಬಂದಿದ್ದಾರೆ. ದಿವಂಗತ ಪಂಜೆ ಮಂಗೇಶರಾಯರು ಈ ಸಣ್ಣಕತೆಗಳ ಸಾಹಿತ್ಯಕ್ಕೆ ಬುನಾದಿಯಾದರೆಂಬ ಮಾತು ಕೂಡ ನಾಡಿನಲ್ಲಿ ಕೇಳಿಬರುತ್ತಿದೆ.

ಭಾರತೀಯ ಸಾಹಿತ್ಯದಲ್ಲಿ ಸಣ್ಣಕತೆಗಳು ವೇದದಕಾಲದಷ್ಟು ಪ್ರಾಚೀನತೆ ಪಡೆದಿವೆ. ಉಪನಿಷತ್ತಿನಲ್ಲಿ, ಬೌದ್ಧಜಾತಕಗಳಲ್ಲಿ, ಭಾರತ ರಾಮಾಯಣಾದಿ ಗ್ರಂಥಗಳಲ್ಲಿ, ಶಿವಶರಣರ ಹರಿಶರಣರ ಜಿನಶರಣರ ವಾಙ್ಮಯದಲ್ಲಿ ಈ ಸಣ್ಣಕತೆಗಳು ಕಾಣಬರುತ್ತಿವೆ. ಕೀರ್ತನ ಪುರಾಣ ಶ್ರವಣಗಳಲ್ಲಿಯೂ ಸಣ್ಣಕತೆಗಳ ಬಳಕೆಯುಂಟು. ರಾಮಕೃಷ್ಣ ಪರಮಹಂಸರ ಉಪದೇಶದಲ್ಲಿ ಈ ಸಣ್ಣಕತೆಗಳು ಪ್ರಕಾಶಮಾನವಾಗಿ ಕಾಣಿಸಿಕೊಂಡಿವೆ. ಹಿತೋಪದೇಶ ಮತ್ತು ಪಂಚತಂತ್ರದಲ್ಲಿಯೂ ಸಣ್ಣಕತೆಗಳಿವೆ. ಆದರೆ ಈ ಹಿಂದಿನ ಸಾಹಿತ್ಯದ ಸಣ್ಣಕತೆಗಳು ವೇದಾಂತಬೋಧೆ, ಧರ್ಮಬೋಧೆ, ರಾಜನೀತಿ ಮತ್ತು ವಿನೋದ ಗೋಷ್ಠಿಗಾಗಿ ಸೃಷ್ಟಿಯಾದುವೆಂಬುದನ್ನು ನಾವು ವಿಮರ್ಶೆಯಿಂದ ತಿಳಿಯಬಹುದು.

ಪಾಶ್ಚಾತ್ಯ ಭಾಷಾಸಾಹಿತ್ಯದ ಸಂಪರ್ಕದಿಂದ ಆಧುನಿಕ ಭಾರತೀಯ ಭಾಷಾಸಾಹಿತ್ಯಗಳ ಮೇಲೆ ಆದ ಪರಿಣಾಮವೇ ಕನ್ನಡದಲ್ಲಿಯೂ ಆಗಿದೆ. ಸುಮಾರು ಐವತ್ತು ವರ್ಷಗಳಿಂದ ಕನ್ನಡದಲ್ಲಿ ಹುಲುಸಾಗಿ ಬೆಳೆದುಬಂದಿರುವ ಸಣ್ಣ ಕತೆಗಳು ಬಹುಮಟ್ಟಿಗೆ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಪ್ರಚೋದಿತವಾದುವೆಂದು ಹೇಳಬಹುದು.) ಈ ಆಧುನಿಕ ಸಣ್ಣ ಕತೆಗಳು ನವೀನ ಜನಜೀವನದ ಸಂದರ್ಭ ಸನ್ನಿವೇಶಗಳಿಗೆ ಅನುಗುಣವಾಗಿವೆ. ವಿವಿಧ ವಿಷಯಗಳನ್ನು ಕುರಿತು ಸುಂದರವೂ ಸರಳವೂ ಆದ ಶೈಲಿಯಲ್ಲಿ ಮನೋಹರವಾದ ಸಂವಿಧಾನದಿಂದ ರಸಭಾವ ಪೂರ್ಣವಾದ ಕಥಾವಸ್ತುಗಳನ್ನು ಅವಲಂಬಿಸಿ ನೂತನ ಸಾಹಿತಿಗಳಿಂದ ಬರೆಯಲ್ಪಟ್ಟಿರುವ ಈ ಸಣ್ಣ ಕತೆಗಳು ನಿಜಕ್ಕೂ ನಮ್ಮ ಸಾಹಿತ್ಯಕ್ಕೆ ಅಲಂಕಾರಪ್ರಾಯವಾದುವೇ ಸರಿ.

ಜನತೆಗೆ ಜ್ಞಾನಾನಂದಗಳನ್ನು ಉಂಟುಮಾಡಿ ಮಾರ್ಗದರ್ಶನ ಮಾಡುವುದೇ ಕಾವ್ಯ, ನಾಟಕ, ಕಾದಂಬರಿ ಮೊದಲಾದ ಸಾಹಿತ್ಯ ಕೃತಿಗಳ ಉದ್ದೇಶ. ಈ ಕಾರ್ಯವನ್ನೇ ನಾವು ಸಾಹಿತ್ಯದ ಸಂತಾನವೆನಿಸಿರುವ ಸಣ್ಣ ಕತೆಗಳಿಂದಲೂ ನಿರೀಕ್ಷಿಸಬಹುದು. ಈ ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು ನಮ್ಮ ಮಾತಿಗೆ ನಿದರ್ಶನವೆನಿಸಿವೆ.

ಇದು ಸಣ್ಣ ಕತೆ–ಕಾದಂಬರಿಗಳ ಯುಗ. ಸಣ್ಣ ಕತೆಗಳು ವಿಪುಲವಾಗಿ ಬೆಳೆಯುತ್ತಿವೆ. ಆದರೆ ಪ್ರಕಟವಾದ ಕತೆಗಳೆಲ್ಲ ಶ್ರೇಷ್ಠ ಕಲಾಕೃತಿಗಳಲ್ಲ. ಈ ವಿಷಯದಲ್ಲಿ ಬೆಳೆಗಿಂತಲೂ ಕಳೆಯೇ ಹೆಚ್ಚೆಂದರೂ ತಪ್ಪಿಲ್ಲ. ಜನತೆಗೆ ಈ ಸಂಬಂಧವಾದ ವಿಮರ್ಶಾ ಜ್ಞಾನವನ್ನುಂಟುಮಾಡಿಕೊಡಲು ಈ ಅತ್ಯುತ್ತಮ ಸಣ್ಣ ಕತೆಗಳು ನೆರವಾಗಬಹುದೆಂದು ನಮ್ಮ ನಂಬಿಕೆ.

ಸಣ್ಣ ಕತೆಗಳ ವಿಷಯವನ್ನು ಕುರಿತು ಪ್ರಸ್ತಾವನೆಯಲ್ಲಿ ಬಹಳ ಚೆನ್ನಾಗಿ ಸಂಪಾದಕರು ಹೇಳಿರುತ್ತಾರೆ. ಈ ಗ್ರಂಥ ಪ್ರಕಟನೆಯ ಉದ್ದೇಶವನ್ನು ಕುರಿತು ಗೌರವಕಾರ್ಯದರ್ಶಿಗಳು ಮೊದಲ ಮಾತಿನಲ್ಲಿ ನಿರೂಪಿಸಿದ್ದಾರೆ. ಇನ್ನು ನನ್ನ ಪಾಲಿನ ಕರ್ತವ್ಯ ಪರಿಷತ್ತು ಕೈಗೊಂಡಿರುವ ಈ ಸಾಹಿತ್ಯ ಸೇವಾರೂಪವಾದ ಮಹತ್ಕಾರ್ಯಕ್ಕೆ ಸರ್ಕಾರದವರೂ ಸಾರ್ವಜನಿಕರೂ ಉದಾರವಾಗಿ ಸಹಾಯಮಾಡಿ ಕನ್ನಡ ಸರಸ್ವತಿಯ ಈ ಮಂದಿರದಲ್ಲಿ ನಾಡಿನ ಹಿರಿಯರು ಹಚ್ಚಿ ಬೆಳಗುತ್ತಿರುವ ಜ್ಞಾನಮಯ ನಂದಾದೀಪವು ಇನ್ನೂ ಹೆಚ್ಚು ಹೆಚ್ಚು ಪ್ರಕಾಶಮಾನವಾಗಿ ಕಂಗೊಳಿಸುವಂತೆ ಮಾಡಬೇಕೆಂಬುದೇ ಆಗಿದೆ.

ಈ ಗ್ರಂಥಪ್ರಕಟನೆಗೆ ನೆರವಾದ ಮಹನೀಯರೆಲ್ಲರಿಗೂ ಪರಿಷತ್ತಿನ ಪರವಾಗಿ ವಂದನೆಗಳು.

ಕನ್ನಡ ಸಾಹಿತ್ಯ ಪರಿಷತ್ತಿನ ಇತರ ಗ್ರಂಥಗಳಂತೆಯೇ ಈ 'ಅತ್ಯುತ್ತಮ ಸಣ್ಣ ಕತೆಗಳು' ಎಂಬ ಗ್ರಂಥವು ಕೂಡ ನಾಡಿನಲ್ಲಿ ಜನಪ್ರಿಯವಾದೀತೆಂದು ನಂಬಲಾಗಿದೆ.

ಇಂತು

**ಬಿ. ಶಿವಮೂರ್ತಿಶಾಸ್ತ್ರೀ**

ಅಧ್ಯಕ್ಷ

ಕನ್ನಡ ಸಾಹಿತ್ಯ ಪರಿಷತ್ತು

ದಿನಾಂಕ ೧೮-೧-೧೯೫೮
ಬೆಂಗಳೂರು

# ಪ್ರಸ್ತಾವನೆ

ಹೊಸಗನ್ನಡ ಸಾಹಿತ್ಯದ ಬೆಳೆವಣಿಗೆಯಲ್ಲಿ ಸಣ್ಣಕತೆಯ ಪಾತ್ರ ಮಹತ್ವ ಪೂರ್ಣವಾದುದು. ಹೊಸಗನ್ನಡ ಸಾಹಿತ್ಯ ಹುಟ್ಟಿದುದೇ ಭಾವಗೀತೆ ಸಣ್ಣಕತೆಗಳಲ್ಲಿ. ವಾಸ್ತವಿಕವಾದ ಜೀವನ ಚಿತ್ರಣ ಮತ್ತು ಸರಳಸುಂದರ ಗದ್ಯಶೈಲಿ ಸಣ್ಣಕತೆಯಲ್ಲಿ ಮೊದಲು ಸಾಧಿತವಾದುವು. ಬಹುಕಾಲ ಉತ್ತಮ ಗದ್ಯಸಾಹಿತ್ಯವೆಂದರೆ ಸಣ್ಣಕತೆಯೇ ಎನ್ನಬೇಕಿತ್ತು. ಈ ನಲವತ್ತು ನಲವತ್ತೈದು ವರುಷಗಳಲ್ಲಿ ಕನ್ನಡ ಸಣ್ಣಕತೆ ಹುಲುಸಾಗಿ ಬೆಳೆದಿದೆ. ಗಟ್ಟಿಯಾದ ಕಾಳುಗಳನ್ನು ವಿಂಗಡಿಸಿ, ಒಟ್ಟುಗೂಡಿಸಿ, ಕನ್ನಡ ಸಣ್ಣಕತೆಯ ಸಂಪತ್ತು ಎಷ್ಟಿದೆ ಎಂದು ನಾವು ಅರಿತುಕೊಳ್ಳಬೇಡವೆ? ಈ ಕಾರ್ಯ ಇದಕ್ಕೆ ಮೊದಲೇ ಆಗಬೇಕಾಗಿದ್ದು ಈಗಾದರೂ ಆಗುತ್ತಿದೆಯಲ್ಲಾ ಎಂದು ಸಂತೋಷಪಡಬೇಕಾಗಿದೆ.

ಇಂದಿನವರೆಗೆ ಬಂದಿರುವ ಕೆಲವು ಸಂಕಲನಗಳಲ್ಲಿ ಶ್ರೀ ಅ. ನ. ಕೃ. ಅವರ 'ಕಾಮನ ಬಿಲ್ಲು' ಒಂದು ಮೈಲಿಗಲ್ಲು. ಆದರೆ ಅದು ಪ್ರಕಟವಾಗಿ ಕಾಲುಶತಮಾನವಾಯಿತು. ಈಚೆಗೆ ಇತರ ಸಾಹಿತ್ಯ ಪ್ರಕಾಶನ ಸಂಸ್ಥೆಗಳೂ ಸಣ್ಣಕತೆಯ ಸಂಕಲನೆಗಳನ್ನು ಹೊರತರಲು ಯತ್ನಿಸುತ್ತಿವೆ. ಆದರೆ ಪರಿಷತ್ತಿನ ಸಂಕಲನದ ವೈಶಿಷ್ಟ್ಯ ಇವುಗಳಿಗೆ ಯಾವುದಕ್ಕೂ ಇಲ್ಲವೆನ್ನಬಹುದು. ಪರಿಷತ್ತು ಉದ್ದೇಶಿಸಿರುವುದು ಚಾರಿತ್ರಿಕ ದೃಷ್ಟಿಯಿಂದಲೂ ವಿಮರ್ಶಾದೃಷ್ಟಿಯಿಂದಲೂ ಒಮ್ಮೆಗೇ ಸಮೀಕ್ಷಿಸಿ ಮೊದಲಿನಿಂದ ಇಲ್ಲಿಯವರೆಗೆ ನಮ್ಮಲ್ಲಿ ಬಂದಿರುವ ಸಣ್ಣಕತೆಗಳಲ್ಲಿ ಅತ್ಯುತ್ತಮವಾದುದನ್ನು, ಒಬ್ಬೊಬ್ಬ ಉತ್ತಮ ಲೇಖಕನಿಗೆ ಒಂದೊಂದು ಕತೆಯಂತೆ, ಆರಿಸಿ ಅರ್ಥವತ್ತಾದ ಕ್ರಮದಲ್ಲಿ ಅವುಗಳನ್ನು ಜೋಡಿಸಿ ಪ್ರಕಟಿಸುವುದು. ೧೯೩೭ಕ್ಕೆ ಹಿಂದೆ ಬಂದ ಕತೆಗಳಲ್ಲಿ ಅತ್ಯುತ್ತಮವಾದ ನಲವತ್ತನ್ನು ಮೊದಲ ಸಂಪುಟದಲ್ಲಿಯೂ ಮುಂದಿನ ಹತ್ತುವರ್ಷಗಳಲ್ಲಿ ಬಂದವುಗಳಲ್ಲಿ ಅತ್ಯುತ್ತಮವಾದ ಇಪ್ಪತ್ತನ್ನು ಎರಡನೆ ಸಂಪುಟದಲ್ಲಿಯೂ ಈಚಿನ ಹತ್ತುವರ್ಷಗಳಲ್ಲಿ ಬಂದವುಗಳಲ್ಲಿ ಅತ್ಯುತ್ತಮವಾದ ನಲವತ್ತನ್ನು ಮೂರನೆ ಸಂಪುಟದಲ್ಲಿಯೂ ಪ್ರಕಟಿಸಲು ಏರ್ಪಾಡಾಗಿದೆ. 'ಅತ್ಯುತ್ತಮ ಸಣ್ಣಕತೆಗಳು' ಎಂಬ ಶಬ್ದಗಳನ್ನು ಬಳಕೆಯಲ್ಲಿರುವಂತೆ ಉಪಯೋಗಿಸಿದೆ. ಎಂದರೆ ಕೆಲವು ಲೇಖಕರು ಕೆಲವು ಅಥವಾ ಹಲವು ಅತ್ಯುತ್ತಮ ಕತೆಗಳನ್ನು ಬರೆದಿದ್ದರೂ ಒಬ್ಬೊಬ್ಬರಿಂದ ಒಂದೊಂದು ಕತೆಯಂತೆಯೇ ಆರಿಸಿದೆ. ಆದುದರಿಂದ ಮೂರು ಸಂಪುಟಗಳೂ ಸೇರಿ ನೂರು ಜನ ಉತ್ತಮ ಸಣ್ಣಕತೆಗಾರರ ಪರಿಚಯವಾಗುತ್ತದೆ. ಒಂದೊಂದು ಸಂಪುಟದ ಕೊನೆಯಲ್ಲಿಯೂ ಆ ಕಾಲಾವಧಿಯಲ್ಲಿ ಬರೆಯತೊಡಗಿದ ಸಣ್ಣಕತೆಗಾರರ ಪಟ್ಟಿಯಿರುತ್ತದೆ. ಮೂರು ಸಂಪುಟಗಳ ಮುನ್ನುಡಿಗಳೂ ಸೇರಿ ಕನ್ನಡ ಸಣ್ಣಕತೆಯ ಸಂಕ್ಷಿಪ್ತ ಇತಿಹಾಸವನ್ನು ಕೊಡು

ತ್ತವೆ. ಇಷ್ಟು ದೊಡ್ಡ ಪ್ರಾತಿನಿಧಿಕ ಸಂಕಲನ ಇಷ್ಟು ಯೋಜನಾಬದ್ಧವಾಗಿ ತಯಾರಾಗುತ್ತಿರುವುದು ಇದೇ ಮೊದಲು. ಕನ್ನಡ ನಾಡಿನ ಎಲ್ಲ ಪ್ರದೇಶಗಳ, ಕನ್ನಡಿಗರ ಜೀವನದ ಎಲ್ಲ ಮುಖಗಳ, ಇಂದಿನ ಕನ್ನಡ ಭಾಷೆ, ಸಂಸ್ಕೃತಿ ಮತ್ತು ಕಥನಕಲೆಯ ಪ್ರಗತಿಯ ಎಲ್ಲ ಹೆಜ್ಜೆಗಳ ಚಿತ್ರಗಳನ್ನೂ ಆದಷ್ಟುಮಟ್ಟಿಗೆ ಒಳ ಗೊಳ್ಳುವಂತೆ ರೂಪಿತವಾಗುತ್ತಿರುವ ಈ ಸಂಕಲನ ಅಖಿಲ ಕರ್ನಾಟಕದ ಸಂಸ್ಥಾ ಪನೆಯಾದ ಹೊಸದರಲ್ಲಿ ಹೊರಬರುತ್ತಿರುವುದು ಉಚಿತವೂ ಆಗಿದೆ.

ಮೂರನೆ ಸಂಪುಟವೇ ಮೊದಲು ಹೊರಬೀಳುತ್ತಿರುವುದರಲ್ಲಿಯೂ ಅರ್ಥವಿದೆ. ನಮ್ಮಲ್ಲಿ ಹಲವರು ಸಣ್ಣಕತೆಯ ಕಾಲ ಆಗಿಹೋಯಿತೆಂದು ಅಭಿಪ್ರಾಯಪಡುತ್ತಿ ದ್ದಾರೆ. ಅವರ ದೃಷ್ಟಿಯಲ್ಲಿ ಇದು ಕಾದಂಬರಿಯ ಯುಗ. ಶ್ರೀನಿವಾಸರೇ ಕಾದಂಬರಿಗಳನ್ನು ರಚಿಸುತ್ತಿರುವ ಈ ಕಾಲ ಕಾದಂಬರಿಯ ಯುಗವೇ ಸರಿ. ಆದರೆ ಸಣ್ಣಕತೆಯ ಕಾಲ ಮುಗಿದುಹೋಗಿಲ್ಲ. ಯಾವ ಒಂದು ಕಾಲವೂ ಸಾಹಿತ್ಯದ ಒಂದು ರೂಪದ ಬೆಳೆವಣಿಗೆಗೇ ಮೀಸಲಲ್ಲ. ಈ ದಶಕದ ಸಣ್ಣಕತೆಗಾರರು ಯಾರೂ ಶ್ರೀನಿವಾಸರ ಮಟ್ಟಕ್ಕೆ ಏರಿಲ್ಲ, ನಿಜ. ಆದರೆ ಹಿಂದೆಂದೂ ಇರದಷ್ಟು ಮಂದಿ ಉತ್ತಮ ಸಣ್ಣಕತೆಗಾರರು ಇಂದಿದ್ದಾರೆ. ಇವರಲ್ಲಿ ಕೆಲವರಾದರೂ ಶ್ರೀನಿವಾಸ ರಷ್ಟು ದೊಡ್ಡ ಲೇಖಕರಾಗಲಿ ಎಂದು ಹಾರೈಸೋಣ. ಈಗ ಕಾದಂಬರಿಗಳು ವಿಪುಲವಾಗಿ ಬರುತ್ತಿವೆ. ಆದರೆ ಇವುಗಳ ಜೊತೆಗೆ ಸಣ್ಣಕತೆಗಳೂ ಹೆಚ್ಚಾಗಿ ಬರುತ್ತಿವೆ, ಉತ್ತಮ ಸಣ್ಣಕತೆಗಳೂ ಬರುತ್ತಿವೆ. ಈ ಸಂಪುಟದ ನಲವತ್ತು ಕತೆ ಗಳನ್ನು ಓದಿದವರಿಗೆ ಕನ್ನಡ ಸಣ್ಣಕತೆ ಜೀವಂತವೂ ಪ್ರಗತಿಪರವೂ ಆದ ಸಾಹಿತ್ಯ ರೂಪ ಎಂಬ ಸತ್ಯ ವಿದಿತವಾಗದಿರದು.

ಭಾವಗೀತೆಯಂತೆ, ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆಂಬ, ಈ ಸೂಕ್ಷ್ಮ ಸಾಹಿತ್ಯರೂಪದಲ್ಲಿ ಪ್ರಯೋಗ ನಾವೀನ್ಯಕ್ಕೆ ಹೆಚ್ಚಿನ ಆಸ್ಪದ, ಅನುಕೂಲ. ಕಾಲಕಾಲಕ್ಕೆ ಜೀವನವೂ, ಜ್ಞಾನವೂ, ಮನೋಧರ್ಮವೂ, ಧರ್ಮವೂ ಬದಲಾಯಿ ಸುವಂತೆ ಕಥನಕಲೆಯೂ ಶೈಲಿಯೂ ಬದಲಾಯಿಸುತ್ತವೆ. ಇಂಥ ಬದಲಾವಣೆ ಹೊಸಗನ್ನಡ ಸಾಹಿತ್ಯ ಸೃಷ್ಟಿಯಾಗತೊಡಗಿದ ಕಾಲದಲ್ಲಿ ಮೊದಲು ಸಣ್ಣಕತೆ ಭಾವ ಗೀತೆಗಳಲ್ಲಿ ಕಾಣಿಸಿಕೊಂಡಿತೆಂದು ಮೇಲೆ ಹೇಳಿದೆ. ಹೀಗೆಯೇ ಅದರ ಮುಂದಿನ ಬದಲಾವಣೆಗಳು ಪ್ರಗತಿಶೀಲ ಲೇಖಕರ ಮತ್ತು ನವ್ಯಕತೆಗಾರರ ಸಣ್ಣಕತೆಗಳಲ್ಲಿ ಸೂಚಿತವಾಗಿವೆ. ಈ ಸಂಪುಟದ ದಶಕದ ಮೊದಲ ಅರ್ಧದಲ್ಲಿ ಪ್ರಗತಿಶೀಲಸಾಹಿತ್ಯ ದೃಷ್ಟಿಯಲ್ಲಿ, ವಸ್ತುವಿನಲ್ಲಿ ಕ್ರಾಂತಿಯನ್ನುಂಟುಮಾಡಿತು. ಎರಡನೆ ಅರ್ಧದಲ್ಲಿ ನವ್ಯಸಾಹಿತ್ಯ ದರ್ಶನದಲ್ಲಿ, ಕಥನಕಲೆಯಲ್ಲಿ ಕ್ರಾಂತಿಯನ್ನುಂಟುಮಾಡಿದೆ. ಹೀಗೆ ಹೊಸ ಪ್ರಯೋಗಗಳು ಯಶಸ್ವಿಯಾಗಿ ನಡೆಯುತ್ತಿದ್ದರೂ ಹಿಂದೆ ಶ್ರೀನಿವಾಸರಿಂದ ಬೆಳೆಸಲ್ಪಟ್ಟ ಕಥನಕಲೆ ಇನ್ನೂ ಜೀವಂತವಾಗಿದೆ, ಪ್ರಬಲವಾಗಿದೆ, ಅವರ ಸಂಪ್ರ

ಡಾಯದಲ್ಲಿ ಹಲವರು ಬರೆಯುತ್ತಿದ್ದಾರೆ, ಉತ್ತಮ ಕತೆಗಳನ್ನು ಕೊಡುತ್ತಿದ್ದಾರೆ. ಈ ಸಂಪುಟದಲ್ಲಿ ಈ ಸಂಪ್ರದಾಯದ ಕತೆಗಳೇ ಹೆಚ್ಚಾಗಿವೆ. ಮೊದಲಿನಲ್ಲಿ ಹತ್ತು ಪ್ರಗತಿಶೀಲ ಕತೆಗಳೂ ಕಡೆಯಲ್ಲಿ ಐದು ನವ್ಯ ಕತೆಗಳೂ ಇದ್ದರೆ ಇವುಗಳ ನಡುವೆ ಇಪ್ಪತ್ತೈದು ' ಸಾಂಪ್ರದಾಯಿಕ ' ಕತೆಗಳಿವೆ.

ಶ್ರೀನಿವಾಸರ ಸಂಪ್ರದಾಯದ ಈ ಕತೆಗಳಲ್ಲಿ ನೇರವಾದ ಕಥನಮಾರ್ಗ, ಸರಳವಾದ ಭಾಷೆ, ಶೈಲಿ ಮತ್ತು ಮಾನವೀಯತೆಯಾದ ಇವೇ ಮುಖ್ಯ ಲಕ್ಷಣಗಳು. ' ಅಶ್ವತ್ಥ 'ರು ಬರೆದಿರುವ ' ವ್ಯಭಿಚಾರ ' ಎಂಬ ಕತೆಯಲ್ಲಿ ಈ ಲಕ್ಷಣಗಳು ಎದ್ದು ಕಾಣುತ್ತವೆ. ನಿಜವಾದ ವ್ಯಭಿಚಾರ ಇರುವುದು ಕಾಳಸಂತೆಯ ಲಾಭಕೋರತನದಲ್ಲಿ, ಇಚ್ಛಾಪೂರಯ (ಎಂಥಾ ಹೆಸರು !) ರಂತಹ ಲಾಯರರ ನರಿಬುದ್ಧಿಯ ಜೀತದಲ್ಲಿ. ಸಿಕ್ಕ ಅವಕಾಶವನ್ನು ಉಪಯೋಗಿಸಿಕೊಂಡು ಓಡಿಹೋಗಿ ಮರ್ಯಾದೆಯಿಂದ ಬಾಳಬೇಕೆಂದು ಅಪೇಕ್ಷಿಸುವ ಹೆಣ್ಣು ಖಂಡಿತ ವ್ಯಭಿಚಾರಿಣಿಯಲ್ಲ. ಈ ಕತೆಯ ವಾಸ್ತವಿಕ ಶೈಲಿ, ಸಾಮಾಜಿಕ ಪ್ರಜ್ಞೆ, ಅನಿರೀಕ್ಷಿತವಾದ ಅಂತ್ಯ ಇದನ್ನು ಅತ್ಯಂತ ಪರಿಣಾಮಕಾರಿಯನ್ನಾಗಿ ಮಾಡಿವೆ. ಆದರೆ ಕಥಾಂಶಕ್ಕಿಂತಲೂ ಹೆಚ್ಚಾಗಿ ' ವ್ಯಭಿಚಾರ ' ಎನ್ನುವ ಪದದ ವ್ಯಂಗ್ಯಾರ್ಥದ ಕಡೆಗೇ ' ಅಶ್ವತ್ಥ 'ರು ಗಮನ ಕೊಟ್ಟಿದ್ದಾರೆ. ಈ ವಿಡಂಬನೆಗೇ ಇಲ್ಲಿ ಹೆಚ್ಚು ಪ್ರಾಮುಖ್ಯ ಕೊಟ್ಟಿದ್ದರೂ ವೃತ್ತಿಯಲ್ಲಿ ವೇಶ್ಯೆಯಾಗಬೇಕಾಗಿಬಂದಿದ್ದರೂ ಪ್ರವೃತ್ತಿಯಲ್ಲಿ ಗೌರವಸ್ಥಳಾದ ಹೆಣ್ಣಿನ ವಿಷಯದಲ್ಲಿ ಮಾನವೀಯ ಸಹಾನುಭೂತಿ ಅಭಿವ್ಯಕ್ತವಾಗಿದೆ. ' ಕ್ರಿಮಿಗಳು ' ಎಂಬ ಅರ್ಥವತ್ತಾದ ಹೆಸರುಳ್ಳ ಕತೆಯ ಕೊನೆಗೆ ಕನಿಯಪ್ಪನಂತಹ ಕ್ರಿಮಿಯಲ್ಲಿಯೂ ಮಾನವೀಯತೆ ಪ್ರಚೋದಿತವಾಗುತ್ತದೆ. ವೈಜ್ಞಾನಿಕ ಅನ್ವೇಷಣೆಯಲ್ಲಿ ಮಾನವೀಯತೆಯನ್ನು ಮರೆಯಬಾರದೆಂಬ ಬುದ್ಧಿವಾದದ ಮಾತು ನೇರವಾಗಿ ನಾರಂಗಿಭಟ್ಟರ ಕತೆಯಲ್ಲಿಯೂ ಅನ್ಯೋಕ್ತಿರೂಪದಲ್ಲಿ ಕ. ವೆಂ. ರಾಜಗೋಪಾಲರ ಕತೆಯಲ್ಲಿಯೂ ಧ್ವನಿತವಾಗುತ್ತದೆ. ' ರೇವು ', ' ತೇಲಿಹೋದ ಮೋಡ ' ಇವುಗಳಲ್ಲಿ ಸಾಂಸಾರಿಕ ಜೀವನದ ಓರೆಕೋರೆಗಳನ್ನು ಮಾನವ ಸಹಜಗುಣಗಳಾದ ವಿಶ್ವಾಸ, ಸಹಾನುಭೂತಿ, ಪಶ್ಚಾತ್ತಾಪಗಳು ತಿದ್ದಬಲ್ಲವೆಂಬ ನಂಬಿಕೆ ಕಂಡುಬರುತ್ತದೆ. ಈ ಗುಣಗಳೂ ಅಸಹಾಯಕವಾಗುವಂಥ, ಆದರೂ ತಮ್ಮ ಪ್ರಭಾವವನ್ನು ಬೀರುವಂಥ, ಪರಿಸ್ಥಿತಿಯನ್ನು ' ಮರುಮದುವೆ ' ಎಂಬ ಕತೆಯಲ್ಲಿ ನೋಡಬಹುದು. ಲೇಖಕಿಯರು ಗಂಡಸರ ವ್ಯಕ್ತಿತ್ವವನ್ನು ಯಶಸ್ವಿಯಾಗಿ ಚಿತ್ರಿಸಲಾರರು ಎಂದು ಆಕ್ಷೇಪಿಸುವವರು ಈ ಕತೆಯ ' ಕೃಷ್ಣಪ್ಪ 'ನವರ ಪಾತ್ರವನ್ನು ಪರಿಶೀಲಿಸಬೇಕು. ಇಂಥದೇ ಅಸಹಾಯಕ ಸಹಾನುಭೂತಿ ಉಷಾದೇವಿಯವರ ' ಫರ್ಲಾಂಗಮ್ಮ 'ನಲ್ಲಿಯೂ ಕಂಡುಬರುತ್ತದೆ. ಎಂಥವರ ಹೃದಯದಲ್ಲಿಯೂ ಹುದುಗಿರುವ ಪ್ರೀತಿ ' ಡ್ಯಾಮು-ಕೆಂಚಿ 'ಯರ ಸ್ನಿಗ್ಧತೆಯಲ್ಲಿ ಎಷ್ಟು ಸೊಗಸಾಗಿ ಚಿತ್ರಿಸಲ್ಪಟ್ಟಿದೆ ! ' ಬೆಡ್ ನಂಬರ್ ಏಳು ' ವಿನ ಉಮಾ, ' ಭಾವಬಂಧನ 'ದ ಕಮಲ, ಈಶ್ವರನ್‌ರವರ ಕತೆಯ

ಪೂವಮ್ಮ, 'ಬಾಗಿಲು ತೆರೆದಿತ್ತು'ವಿನ ಶಾಂತಾ, 'ಯಕ್ಷಪ್ರಶ್ನೆ'ಯ ಅನಸೂಯೆ, 'ಒಂದೇ ದೇಟಿನ ಕಾಯಿಗಳು' ವಿನ ರಿಂದಕ್ಕ, 'ಗುಡಿ'ಯ ಸಾವಂತ್ರೆವ್ವ – ಈ ಪ್ರೇಮಮಯಿಯರನ್ನು ಮರೆಯುವುದೆಂತು ? 'ಜಾಗೀರಿಯ ದಿಂಬು'ವಿನ ಕೇಶಪ್ಪನ ಸ್ವಾಮಿನಿಷ್ಠೆ, 'ದುಃಖಸೇತು'ವಿನ ನಾಯಕನ ಪತ್ನೀಪ್ರೇಮ, ಇವು ನಮ್ಮ ಹೃದಯವನ್ನು ಸೂರೆಗೊಳ್ಳುತ್ತವೆ. 'ಯಕ್ಷಪ್ರಶ್ನೆ'ಯ ವಿಶ್ವನಾಥನ ದುರ್ವ್ಯಸನ ಎಷ್ಟೇ ಬಲವಾಗಿದ್ದರೂ ಅದೆಷ್ಟು ಬೇಗ ಅವನಿಗೆ ಹತ್ತಿದ್ದಿತೋ ಅಷ್ಟೇ ಬೇಗ ಹೇಗೆ ಇಳಿದು ಹೋಗುತ್ತದೆ ! 'ಮುಯ್ಯಿ' ತೆಗೆದುಕೊಳ್ಳಬೇಕೆಂದಿದ್ದ ಚಿನ್ನಪ್ಪನ ಮನಸ್ಸು ಹೇಗೆ ಬದಲಾಗುತ್ತದೆ ! 'ಹೊಸ ನೋಟ' ಹೇಗೆ ಡಾಕ್ಟರ್ ಬರುವಾರಿಗೆ ಬರುತ್ತದೆ ! ಇವು ನಿಜವಾದ ಮಾನವೀಯತೆಯ ವಿಜಯಗಳು. ಆದರೆ ಮಾನವೀಯ ಘನತೆಯನ್ನು ವ್ಯಂಗ್ಯವಾಗಿ ಮಾತ್ರ ಸೂಚಿಸುವ ವಿಡಂಬನಾತ್ಮಕ ಅಥವಾ ಖಂಡನಾತ್ಮಕ ಕತೆಗಳೂ ಈ ಗುಂಪಿನಲ್ಲಿವೆ : 'ಕ್ರಿಮಿಗಳು', 'ಶೂರ್ಪನಖಿ', 'ತ್ಯಾಗ', 'ಅನುಭವಾಮೃತ', 'ನಮ್ಮೂರ ನಾಯಕರು'. ದೇವರಾಯರ 'ಪವಾಡ ಪುರುಷ' ಮಾನವೀಯ ಕರುಣೆಗೂ ಇರುವ ಮೇರೆಯನ್ನು ಅದ್ಭುತವಾಗಿ ಚಿತ್ರಿಸುತ್ತದೆ. 'ಬೆಡ್ ನಂಬರ್ ಏಳು', 'ಬಾಗಿಲು ತೆರೆದಿತ್ತು', 'ತ್ಯಾಗ', 'ಫರ್ಲಾಂಗಮ್ಮ' ಇವುಗಳ ನಾಟಕೀಯತೆಯಲ್ಲಿಯೂ 'ಗುಡಿ', 'ಪೂವಮ್ಮ' ಇವುಗಳ ಕಾವ್ಯಮಯತೆಯಲ್ಲಿಯೂ ತಾಂತ್ರಿಕ ನಾವೀನ್ಯವನ್ನು ಗುರುತಿಸಬಲ್ಲೆವಾದರೂ ಒಟ್ಟಿನಲ್ಲಿ ಈ ಕತೆಗಳು ನೇರವಾಗಿ ಸರಳವಾಗಿ ಬರೆದವು. ಇಷ್ಟು ಉತ್ತಮ ಕೃತಿಗಳು ಬರುತ್ತಿರುವ ಸಂಪ್ರದಾಯವನ್ನು ಹಳತೆಂದು ಹಳಿಯುವುದು ಮೌಢ್ಯವೇ ಸರಿ. ಮೂಲಭೂತವಾದ ಮಾನವೀಯ ಪ್ರವೃತ್ತಿಗಳ ಸೂಕ್ಷ್ಮ ಸುಂದರ ಹೃದಯಸ್ಪರ್ಶಿ ಚಿತ್ರಣ ಚಿರನೂತನ.

ಆದರೆ ಮೂಲಭೂತ ಪ್ರವೃತ್ತಿಗಳ ಚಿತ್ರಣದಷ್ಟೇ ಅವುಗಳಮೇಲೆ ಪ್ರಭಾವ ಬೀರುವ ಆರ್ಥಿಕ ಸಾಮಾಜಿಕ ವ್ಯವಸ್ಥೆಗಳ ಚಿತ್ರಣವೂ ಆವಶ್ಯಕ. ಇಂಥ ಚಿತ್ರಣದಿಂದ ಪ್ರಗತಿಶೀಲ ಲೇಖಕರು ಸಣ್ಣಕತೆಗೆ ಹೊಸ ಜೀವ, ಹೊಸದಾದ ಕಾವನ್ನು ತಂದಿದ್ದಾರೆ. ಸಮಾಜದ ಆರ್ಥಿಕ ವರ್ಗೀಕರಣವನ್ನು ಒಪ್ಪಿಕೊಂಡು ಶೋಷಕ ವರ್ಗವನ್ನು ಖಂಡಿಸುವುದೂ ದಲಿತರೊಡನೆ ಸಹಾನುಭೂತಿಯೊಡನೆ ಸಹಕರಿಸುವುದೂ ಈ ಲೇಖಕರ ಧ್ಯೇಯ. 'ವ್ಯಭಿಚಾರ' ಎಂಬ ಕತೆಯನ್ನು ನಿರಂಜನರ 'ಕೊನೆಯ ಗಿರಾಕಿ' ಎಂಬ ಕತೆಯೊಡನೆ ಹೋಲಿಸಿ ನೋಡಿದರೆ ಈ ದರ್ಶನಕ್ರಾಂತಿ ಅರಿವಾಗುತ್ತದೆ. 'ವ್ಯಭಿಚಾರ'ದಲ್ಲಿನ ಕಾಳಸಂತೆಯ ವ್ಯಾಪಾರಿ ಒಂದು ವರ್ಗದ ಪ್ರತಿನಿಧಿಯಲ್ಲ ಮಾತ್ರ, ಅವನೊಬ್ಬ ವಿಶಿಷ್ಟನಾದ ಮನುಷ್ಯ. ಅವನ ಮತ್ತು ಅವನ ಹೆಂಡತಿಯ ಮಾತುಕತೆ ಮನೋಜ್ಞವಾಗಿದೆ. ಅವನೊಡನೆ ಲೇಖಕರು ತೋರುವುದು ತಿರಸ್ಕಾರಪೂರ್ಣವಾದ ಲಘುಹಾಸ್ಯ. ಆದರೆ ಪ್ರಗತಿಶೀಲರ ಕತೆಗಳಲ್ಲಿ ಶೋಷಕರನ್ನು ಕುರಿತು ಕ್ರಿಯಾಶೀಲವಾದ ಆಕ್ರೋಶ, ದಲಿತರನ್ನು

ಕುರಿತು ಅಪಾರವಾದ ಸಹಾನುಭೂತಿ ಕಂಡುಬರುತ್ತದೆ. ಈ ಭಾವಗಳ ತೀವ್ರತೆ ಕನ್ನಡ ಸಣ್ಣಕತೆಗೆ ಹೊಸದಾಯಿತು. ದಲಿತರನ್ನು ಕಿತ್ತು ತಿನ್ನುವ ಹದ್ದಿನಂತೆ ಶೋಷಕರೇ ಮೇಲುಗೈಯಾದ ಸಮಾಜಧೋರಣೆ ನಿರಂಜನರ ಕಣ್ಣಿಗೆ ತೋರಿದರೆ ಹಿಂದೆ ಸಿದ್ಧಾರ್ಥ ಜರೆಯನ್ನೂ ರುಜೆಯನ್ನೂ ಮೃತ್ಯುವನ್ನೂ ನೋಡಿ ಅರಮನೆಯನ್ನು ಬಿಟ್ಟು ಹೊರಟಂತೆ ಬಸವರಾಜ ಕಟ್ಟೀಮನಿಯವರ ಕತೆಯ ಗಿರಿಜೆ ಮತ್ತು ಸಿದ್ಧರಾಮು 'ನಿಜಜೀವನದ ಕಡೆಗೆ', ದಲಿತರ ಕ್ಲೇಶಪರಿಹಾರದ ಕಡೆಗೆ, ಹೊರಡುತ್ತಾರೆ. ದೇವತೆಗಳು ಮನುಷ್ಯರೊಡನೆ ಹೇಗೆ ವರ್ತಿಸುತ್ತಾರೆ ಎಂದು ವಿವರಿಸಲು ಷೇಕ್ಸ್‌ಪಿಯರ್ ಬಳಸುವ ಉಪಮಾನವನ್ನು ಚೆನ್ನಬಸಪ್ಪನವರು ತಮ್ಮ ದೃಷ್ಟಿಗೆ ಅನುಗುಣವಾಗಿ ಅಳವಡಿಸಿಕೊಂಡಿದ್ದಾರೆ: 'ಸಿರಿವಂತರಿಗೆ ಬಡವರ ಮನೆ ಮುರಿಯುವುದೆಂದರೆ ಹುಡುಗರು ನೊಣ ಬಡಿದುಹಾಕಿದಂತೆ'. ಈ ಕತೆಯಲ್ಲಿ ಬರುವ ಹಳ್ಳಿಗರ ಎತ್ತಿನಮೇಲಿನ ಪ್ರೀತಿಯ ಚಿತ್ರ ಹೃದಯಂಗಮವಾಗಿದೆ. ಒಂದು ದೃಷ್ಟಿಯಿಂದ 'ಮುಕ್ಕಣ್ಣ'ನಿಗೂ ಲಿಂಗಣ್ಣನಿಗೂ ಹೆಚ್ಚು ವ್ಯತ್ಯಾಸವೂ ಇಲ್ಲ. ಇಂದಿನ ನಾಗರಿಕತೆಯಲ್ಲಿ ಜನಪದ ಸಾಹಿತ್ಯದ ಬಗೆಗಿರುವ ಅಲಕ್ಷ್ಯ 'ರಾಜಮಾ'ದಲ್ಲಿ ಹೃದಯವನ್ನು ಚುಚ್ಚಿದರೆ, ಕಲಾಭಿಜ್ಞತೆಯಿಂದ ಸಮಾಜಜೀವನ ಎಷ್ಟು ಸುಂದರವಾಗಿರಬಹುದು, ಸುಖವಾಗಿರಬಹುದು ಎನ್ನುವ ಕಲ್ಪನೆ 'ರಂಗಸಾಮಿ'ಯಲ್ಲಿ ತೃಪ್ತಿಕರವಾಗಿ ಬರುತ್ತದೆ. ದಲಿತರ ಗುಂಪಿಗೆ ಹೆಣ್ಣೂ ಸೇರುವಳೆಂದು 'ತುಂಬಿದ ಕೊಡ'ದಲ್ಲಿ ಕಂಡುಕೊಳ್ಳಬಹುದು. ಆದರೆ ಇಲ್ಲಿಯೂ ಚದುರಂಗರ 'ನಾಲ್ಕು ಮೊಳ ಭೂಮಿ'ಯಲ್ಲಿಯೂ ಕಥಾನಾಯಕರ ವಿಷಯದಲ್ಲಿ ಪೂರ್ಣ ಜ್ಞಾನದಿಂದ ಬರುವ ಸಹಾನುಭೂತಿ ಕಂಡುಬರುತ್ತದೆ. ಅನುಪಮಾರ 'ದೇವರೇ ಬರಲಿಲ್ಲ' ಎಂಬ ಕತೆ ಸಮಾಜದ ಪುನರ್ರಚನೆ ಮನುಷ್ಯನ ಜವಾಬ್ದಾರಿಯೆಂದೂ ಇಲ್ಲದ ದೇವರಲ್ಲಿ ಪ್ರಾರ್ಥನೆಮಾಡುತ್ತಾ ಸೋಮಾರಿಗಳಾಗಿ ಸರ್ವಕಾಲಕ್ಕೂ ದುಃಖಿತರಾಗಿಯೇ ಉಳಿಯುವುದು ತರವಲ್ಲವೆಂದೂ ಸೂಚಿಸುತ್ತದೆ. ಆದರೆ 'ಮಾನವ ಪ್ರೇಮ' '೦-೦=೦'ಎಂಬ ಕತೆಗಳಲ್ಲಿ ಈ ದೃಷ್ಟಿ ಜೀವನರಹಸ್ಯವನ್ನು ಸಾಕಷ್ಟು ಪರಿಶೀಲಿಸಿಲ್ಲವೆಂದು ಧ್ವನಿತವಾಗುತ್ತದೆ. ಜನರ ಅತ್ಯಾಸೆ ಅತಿಪ್ರೇಮದಿಂದ ಹೀಗೆಂದು ಅನಂತನಾರಾಯಣರೂ ಜನರ ಅಜ್ಞಾನದಿಂದ ಹೀಗೆಂದು ತ. ರಾ. ಸು. ಅವರೂ ಮಾನವ್ಯದ ದೈವಿಕತೆಯು ಮತ್ತೆ ಮತ್ತೆ ವಿಫಲವಾಗುವ ದುರಂತದ ಕಡೆಗೆ ಬೊಟ್ಟು ತೋರಿದ್ದಾರೆ. ಪ್ರಗತಿಶೀಲ ಲೇಖಕರ ಕತೆಗಳು ಬರಬರುತ್ತಾ ಒಂದು ಸಿದ್ಧಾಂತವನ್ನು ಮಾತ್ರ ಮಂಡಿಸುತ್ತಲೇ ಹೋಗದೆ ಜೀವನವನ್ನು ಇನ್ನೂ ಆಳವಾಗಿ ಅರ್ಥಮಾಡಿಕೊಳ್ಳುವುದರ ಕಡೆಗೆ ಬೆಳೆಯುತ್ತಿವೆ. ಕಥನ ತಂತ್ರದಲ್ಲಿಯೂ ಎಲ್ಲ ಜನಕ್ಕೂ ತಿಳಿಯುವಂತಹ ನೇರವಾದ ಸರಳವಾದ ಮಾರ್ಗ ಬರಬರುತ್ತಾ ನವ್ಯತೆಗೆ ಜಾಗ ಕೊಡುತ್ತಿದೆ; ಉದಾಹರಣೆಗೆ, 'ನಾಲ್ಕು ಮೊಳ ಭೂಮಿ', 'ದೇವರೇ ಬರಲಿಲ್ಲ'

ಮತ್ತು '೦-೦=೦'. ತ. ರಾ. ಸು. ಅವರ '೦-೦=೦' ಕನ್ನಡದಲ್ಲಿ ಮೊದ ಮೊದಲು ಬಂದ ನವ್ಯಕತೆಗಳಲ್ಲಿ ಒಂದಾಗಿದೆ.

ಇತ್ತೀಚೆಗೆ ಬಂದಿರುವ ನವ್ಯಕತೆಗಳ ವಿಷಯವಾಗಿ ಕೆಲವು ತಪ್ಪು ಅಭಿಪ್ರಾಯ ಗಳಿವೆ. ಇವುಗಳಲ್ಲಿ ತಂತ್ರಸ್ವಾರಸ್ಯ ಮಾತ್ರವಿದೆಯೆಂದು ಕೆಲವರೂ ಇವುಗಳನ್ನು ಅರ್ಥಮಾಡಿಕೊಳ್ಳುವುದೇ ಕಷ್ಟವೆಂದು ಕೆಲವರೂ ಆಕ್ಷೇಪಣೆ ಮಾಡುವುದುಂಟು. ಆದರೆ ಇವುಗಳ ತಂತ್ರನಾವೀನ್ಯ ವಸ್ತುನಾವೀನ್ಯಕ್ಕೆ ಸಂಬಂಧಿಸಿದುದು; ಅಂಥ ವಸ್ತುವನ್ನು ಅಂಥ ಮಾರ್ಗದಲ್ಲಿ ನಿರೂಪಿಸುವುದರಿಂದಲೇ ಅದು ಪರಿಣಾಮಕಾರಿ ಯಾಗಲು, ಅರ್ಥವಾಗಲು, ಸಾಧ್ಯ. ಆಧುನಿಕ ಆರ್ಥಿಕ ಸಿದ್ಧಾಂತವನ್ನು ಅನುಸರಿಸಿ ಪ್ರಗತಿಶೀಲರು ನವಸ್ಫೂರ್ತಿಯನ್ನು ತಂದಂತೆ ಆಧುನಿಕ ಮಾನಸಿಕ ವಿಜ್ಞಾನದ ಸಂಶೋಧನೆಗಳನ್ನನುಸರಿಸಿ ನವ್ಯಲೇಖಕರು ಕನ್ನಡ ಸಣ್ಣಕತೆಗೆ ಹೊಸ ಚೈತನ್ಯವನ್ನು ತಂದಿದ್ದಾರೆ. ಸುಪ್ತಚಿತ್ತದ ಪ್ರವೃತ್ತಿವೈಚಿತ್ರ್ಯವನ್ನು ಇದ್ದಕ್ಕಿದ್ದಂತೆ ನಾಟಕೀಯ ವಾಗಿ ಒಡಮೂಡಿಸಲು ಇವರು ಯತ್ನಿಸುತ್ತಾರೆ. ತಾವೇ ಕತೆಯನ್ನು ಹೇಳ ಹೋಗದೆ ಪಾತ್ರಗಳ ಒಳಮನಸ್ಸಿನ ಭಾವತರಂಗಗಳನ್ನು ಪ್ರತಿಮೆಗಳ ಮೂಲಕ ಇವರು ಪ್ರತಿಬಿಂಬಿಸುತ್ತಾ ಹೋಗುತ್ತಾರೆ. 'ಸೆರಗಿನ ಕೆಂಡ' ಎಂಬ ಕತೆಯು ಭೀತಿಯ ಭೂತ ಚೇಷ್ಟೆಯ ನಾಟಕೀಯ ಚಿತ್ರಣ. ಮೀನಾಕ್ಷಿಯ ಪಾಪಪ್ರಜ್ಞೆ ಅವಳನ್ನು ಉನ್ಮಾದಾವಸ್ಥೆಗೆ ಎಳೆಯುತ್ತದೆ. ತಾನು ಪರಪುರುಷನೊಡನೆ ಓಡಿ ಬಂದವಳು ಎಂಬ ಸತ್ಯ ಜನಜನಿತವಾಗಿ ಎಲ್ಲಿ ತನ್ನ ಮಗಳನ್ನು ಅಳಿಯ ಬಿಟ್ಟು ಬಿಡುವನೋ ಎಂಬ ಭಯ ಅವಳನ್ನು ಬುದ್ಧಿಗೆಡಿಸುತ್ತದೆ. ಅವಳ ನಾಟಕೀಯ ಸ್ಮೃತಿಗಳೂ ಮನಸ್ಸಿನಲ್ಲೇಳುವ ಪ್ರತಿಮೆಗಳೂ ಅವಳ ಪರಿಸ್ಥಿತಿಗೆ ಸಹಜವಾಗಿವೆ. 'ತಾಯಿ' ಎಂಬ ಕತೆಯಲ್ಲಿ ಕಳೆದುಕೊಂಡ ಮಗನಿಗಾಗಿ ಕಣ್ಣೀರು ಹಾಕುತ್ತಲೂ ತೊಡೆಯ ಮೇಲಿರುವ ಕೂಸಿಗೆ ಹಾಲೂಡುತ್ತಲೂ ಇರುವ ತಾಯಿಯ ಚಿತ್ರ ಮಾತೃತ್ವದ ಚಿರಂತನ ಪ್ರತಿಮೆಯಂತಿದೆ. ಇನ್ನೊಂದು ಮಗುವಿಗೆ ಅವಳು ಹೇಳುವ ಕತೆ ವ್ಯಂಗ್ಯವಾಗಿ ಅವಳ ಪುತ್ರಶೋಕವನ್ನೂ ಆತ್ಮಖಂಡನೆಯನ್ನೂ ಹೊರಗೆಡುವು ತ್ತದೆ. ಈ ಕತೆಯಲ್ಲಿ ಕೆಲವು ವಾಕ್ಯಗಳು ಅರ್ಥಕ್ಕೇ ನಿಂತು ಹೋಗುತ್ತವೆ, ಕಾರಣ, ಮನಸ್ಸು ವಿಷಯದಿಂದ ವಿಷಯಕ್ಕೆ ಹಾರುವ ರೀತಿಯ ವಾಸ್ತವಿಕ ಚಿತ್ರಣದ ಉದ್ದೇಶ. ನಿಜವಾದ ಪ್ರೇಮವನ್ನು ಗುರುತಿಸಿದ ಆನಂದ 'ಭೂಮಿ ಕಂಪಿಸಲಿಲ್ಲ', 'ಆವೇ ಮರೀಯಾ'ಗಳಲ್ಲಿ ಅದ್ಭುತವಾಗಿ ಚಿತ್ರಿಸಲ್ಪಟ್ಟಿದೆ. ಸದಾಶಿವರ ಕತೆಯಲ್ಲಿ ನಲ್ಲಿಯಲ್ಲಿ ಇದ್ದಕ್ಕಿದ್ದಂತೆ ನೀರು ಬಂದಾಗ ಮಾನವ ಹೃದಯದಲ್ಲಿಯೇ ಕಲ್ಲೊಡೆದು ಪ್ರೇಮಜಲ ಪುಟಿದಂತಾಗಿ ಓದುಗನ ಮೈ ರೋಮಾಂಚಿತವಾಗುತ್ತದೆ. ವಸ್ತುವೇ ನವ್ಯಕತೆಗಳಲ್ಲಿ ಸಂಕೇತವಾಗಿ ಪರಿಣಮಿಸಿ, ಇದು ವಸ್ತು ಇದು ವಿರಚನಾವಿಧಾನ ಎಂದು ಹೇಳುವುದಕ್ಕಾಗದೆ, ಎರಡಕ್ಕೂ ಇರುವ ಅಂತರ ಮಾಯವಾಗಿ, ಎರಡೂ

ಗುಹ್ಯತರವಾದ ದರ್ಶನವೊಂದರ ಸಂಕೇತವನ್ನು ಸೃಷ್ಟಿಸಲು ಕೂಡಿಯೇ ಶ್ರಮಿಸುತ್ತವೆ.

ಈ ಸಂಪುಟದಲ್ಲಿ ಕತೆಗಳನ್ನು ಚಾರಿತ್ರಕವಾಗಿ ಪ್ರಗತಿಶೀಲ, ಸಾಂಪ್ರದಾಯಿಕ, ನವ್ಯ ಎಂದು ಹೀಗೆ ಹಿನ್ನೆಲೆಯಲ್ಲಿ ವಿಂಗಡಿಸಿಕೊಂಡಿದ್ದರೂ ಈ ವಿಭಜನೆ ಎದ್ದು ಕಾಣುವಂತೆ ಸಂಪುಟವನ್ನು ಪ್ರಕಟಿಸದಿರಲು ಕಾರಣ ಇವೆಲ್ಲ ಕತೆಗಳಲ್ಲಿ ಸಮಾನ ಲಕ್ಷಣಗಳೂ ಇವೆ, ಎಲ್ಲವೂ ಒಂದೇ ಮಟ್ಟಕ್ಕೆ ಏರುತ್ತವೆ ಎನ್ನುವುದೇ. ಕತೆ ಅತ್ಯುತ್ತಮ ಕತೆಯಾಗಬೇಕಾದರೆ ಕತೆಯನ್ನು ಮೀರಿದ ಒಂದು ಹಿರಿದಾದ ಅರ್ಥ ಅದರಲ್ಲಿ ಹೊಮ್ಮಬೇಕು ; ಹೀಗೆ ಇಂಥ ಅರ್ಥ ಹೊಮ್ಮಲು ಸಹಾಯಕವಾದ ಕಥನ ಮಾರ್ಗ ಕತೆಯಷ್ಟೇ ಸ್ವಾರಸ್ಯವಾಗಿರಬೇಕು. ಉತ್ತಮ ಸಾಹಿತ್ಯದಲ್ಲಿ ವಸ್ತುವಿಗಿಂತಲೂ ಧ್ವನಿಗೇ ಪ್ರಾಶಸ್ತ್ಯ. ಕಥಾಂಶ ಸವಿವರವಾಗಿ ಚಿತ್ರಿತವಾಗಬೇಕು. ಆದರೆ ಕಡೆಗೆ ಅದೂ ಒಂದು ಸಂಕೇತ. ಜೀವನದ ಮೇಲೆ ಅದು ಎಷ್ಟು ಬೆಳಕು ಚೆಲ್ಲಬಹುದೋ, ಎಷ್ಟು ಸೂಕ್ಷ್ಮವಾಗಿ ಅದು ತನ್ನ ಕೆಲಸಮಾಡಬಲ್ಲುದೋ, ಎಷ್ಟು ಪರಿಣಾಮಕಾರಿಯಾಗಿ ಸಹೃದಯನಲ್ಲಿ ಉದ್ದಿಷ್ಟ ರಸವನ್ನು ಉದ್ರೇಕಿಸಬಲ್ಲುದೋ ಅಷ್ಟಷ್ಟೂ ಕತೆ ಉತ್ತಮವಾಗುತ್ತದೆ. ಸಾಮಾನ್ಯ ಕತೆಗಳಲ್ಲಿ ಕಥಾಂಶಕ್ಕೇ, ಕುತೂಹಲ ಪ್ರಚೋದನೆಗೇ, ಪ್ರಾಧಾನ್ಯ ಕೊಡುವುದರಿಂದ ಎರಡು ದುಷ್ಪರಿಣಾಮಗಳು ಉಂಟಾಗುತ್ತವೆ. ಮೊದಲನೆಯದಾಗಿ ಅಸಂಭಾವ್ಯವಾದ ಸಂಗತಿಗಳನ್ನು ಸ್ವಾರಸ್ಯ ಹೆಚ್ಚಿಸುವುದಕ್ಕಾಗಿ ಬಳಸಿಕೊಳ್ಳುವುದರಿಂದ ವಾಸ್ತವಿಕತೆಗೆ ಲೋಪವಾಗಿ ಕೃತಕತೆಯಿಂದ ಪರಿಣಾಮ ಕೆಡುತ್ತದೆ. ಎರಡನೆಯದಾಗಿ ಕತೆಯನ್ನು ಒಮ್ಮೆ ಓದಿ ಮುಗಿಸಿದ ಮೇಲೆ ಅದನ್ನು ನೆನಪಿನಲ್ಲಿಡಲಾಗಲೀ ಮತ್ತೆಮತ್ತೆ ಓದಲಾಗಲೀ ಕಾರಣವಿರುವುದಿಲ್ಲ. ಇಂಥ ಕತೆಗಳು ಹಳೆಯ ವಾರಪತ್ರಿಕೆ ಮಾಸಿಕಗಳಲ್ಲಿ ಹೂತುಹೋಗುತ್ತವೆ. ಆದರೆ ಉತ್ತಮ ಕತೆಗಳು ಸರ್ವಕಾಲಕ್ಕೂ ಮಾನ್ಯವಾದುವು, ಅವುಗಳನ್ನು ಎಷ್ಟುಸಲ ಓದಿದರೂ ಆನಂದವೇ ಆಗುತ್ತದೆ.

ವಸ್ತುವಿನಂತೆ ವಿರಚನಾಮಾರ್ಗವೂ ಭಾಷಾಶೈಲಿಯೂ ಧ್ವನಿಯ, ರಸದ, ಅರ್ಥದ ಪುಷ್ಟಿಗಾಗಿ ಮಾತ್ರ ಇರುವುವು. ಕಥಾಂಶವನ್ನು ಗೌಣವಾಗಿಟ್ಟುಕೊಂಡು ಜೀವನದ ಚಿತ್ರಣಕ್ಕೆ ಪ್ರಾಮುಖ್ಯ ಕೊಟ್ಟುಕೊಂಡು ಬರೆಯುವ ರೀತಿ ಮೊದಮೊದಲು ಚೆಕಾಫ್ ಎಂಬ ರಷ್ಯನ್ ಸಣ್ಣಕತೆಗಾರನಲ್ಲಿ ಕಾಣುತ್ತದೆ. ಈ ಶತಮಾನದ ಎರಡನೆ ಮತ್ತು ಮೂರನೆ ದಶಕಗಳ ಪಾಶ್ಚಾತ್ಯ ಸಣ್ಣಕತೆಗಳಲ್ಲಿ, ಹೆಚ್ಚಾಗಿ ಜನತಾವಾದಿ ಅಥವಾ ಸಮಾಜವಾದಿ ಬರವಣಿಗೆಯಲ್ಲಿ, ಈ ಮಾರ್ಗ ಪ್ರಬಲವಾಗುತ್ತದೆ. ಈ ಮಾರ್ಗವನ್ನು ಮೋಪಾಸಂಟ್ ಎಂಬ ಫ್ರೆಂಚ್ ಕತೆಗಾರನ ನಾಟಕೀಯ ಕಥಾಂಶ ನಿರೂಪಣೆಯ ಮಾರ್ಗದೊಂದಿಗೆ ಹೋಲಿಸಿದರೆ ಈ ಭೇದ ಸುಸ್ಪಷ್ಟವಾಗುತ್ತದೆ. ಶ್ರೀನಿವಾಸರ ಸಂಪ್ರದಾಯದ ಕತೆಗಳು ಹಾಥಾರ್ನ್, ಬ್ರೆಟ್‌ಹಾರ್ಟ್, ಓ. ಹೆನ್ರಿ, ಸ್ಟೀವನ್‌ಸನ್, ಕಿಪ್ಲಿಂಗ್, ಗ್ಯಾಲ್ಸ್‌ವರ್ದಿ, ವೆಲ್ಸ್, ಡಾಡೆಟ್, ಮೋಪಾಸಂಟ್,

ಮೋಂ, ಟ್ಯಾಗೋರ್ ಇವರ ಪ್ರಭಾವದಿಂದ ರೂಪಿತವಾಗಿದ್ದರೆ, ಚೆಕಾಫ್, ಗಾರ್ಕಿ, ಲಾರೆನ್ಸ್ ಇವರ ಪ್ರಭಾವದಿಂದ ಪ್ರಗತಿಶೀಲ ಕತೆಗಳೂ, ಪೋ, ಜೇಮ್ಸ್, ಕಾನ್ರ್ಯಾಡ್, ಲಾರೆನ್ಸ್ ಜಾಯ್ಸ್, ಚೆಕಾಫ್, ಕ್ಯಾದರೀನ್ ಮ್ಯಾನ್ಸ್‌ಫೀಲ್ಡ್, ಹೆಮಿಂಗ್ವೆ, ಫಾಕ್ನರ್ ಮುಂತಾದವರ ಪ್ರಭಾವದಿಂದ ನವ್ಯಕತೆಗಳೂ ರೂಪಿತ ವಾಗಿವೆ. ನವ್ಯಕಥನಮಾರ್ಗದ ಉತ್ತಮ ಪಾಶ್ಚಾತ್ಯ ಕತೆಗಳಿಗೆ ಚೆಕಾಫ್‌ನ 'ದಿ ಬ್ರಿಡ್ಜ್' 'ಗೂಸ್‌ಬೆರ್ರೀಸ್' 'ದಿ ಡಾರ್ಲಿಂಗ್' ಎಂಬ ಕತೆಗಳನ್ನಾಗಲೀ ಜೇಮ್ಸ್‌ಜಾಯ್ಸ್‌ನ 'ದಿ ಡೆಡ್' ಎಂಬ ಕತೆಯನ್ನಾಗಲೀ ಹೆಮಿಂಗ್ವೇ ಬರೆದಿರುವ 'ದಿ ಕಿಲ್ಲರ್ಸ್' ಅಥವಾ 'ದಿ ಸ್ನೋಸ್ ಆಫ್ ಕಿಲಿಮಂಜೀರೋ'ವನ್ನಾಗಲೀ ಉದಾಹರಣೆಯಾಗಿ ಕೊಡಬಹುದು. ಈ ಮಾರ್ಗದಲ್ಲಿ ಬರೆಯುತ್ತಿರುವ ಇತರರು ಎಲಿಜಬೆತ್ ಬೋವೆನ್, ಕ್ಯಾಥರೀನ್ ಆನ್ ಪೋರ್ಟರ್, ಯೂಡೋರಾ ವೆಲ್ಟಿ, ಸ್ಯಾನ್ಸಂ, ಬೇಟ್ಸ್, ಪ್ರಿಚೆಟ್, ಸರಾಯನ್, ಕಪೋಟ್. ಸುಪ್ತಚಿತ್ತದ ವ್ಯಾಪಾರ, ಪ್ರತಿಮೆಗಳ ಬಳಕೆ, ಇವುಗಳೊಡನೆ ಇಂಥ ಕತೆಗಳಲ್ಲಿ ಇನ್ನೊಂದು ತಂತ್ರವನ್ನೂ ನೋಡಬಹುದು. ನೇರವಾಗಿ ಕತೆಯನ್ನು ಹೇಳಿಕೊಂಡು ಹೋಗದೆ ಅಥವಾ ಜೀವನದ ಚಿತ್ರವನ್ನು ಕೊಡುತ್ತಾ ಹೋಗದೆ ಎರಡು ಅಥವಾ ಹೆಚ್ಚಿನ ಅನುಭವಗಳನ್ನು ಅಥವಾ ಪ್ರತಿಮೆಗಳನ್ನು ಸಾದೃಶ್ಯದಿಂದಲೋ ಅಥವಾ ವಿರೋಧಕ್ಕಾಗಿಯೋ ಅಥವಾ ಒಂದು ಅಭಿಪ್ರಾಯದ ಬೆಳವಣಿಗೆಗೋ ಸಂಯೋಜಿಸುವ ಒಂದು ವೈಶಿಷ್ಟ್ಯ ಈ ಮಾರ್ಗದ ಹಲವು ಕತೆಗಳಲ್ಲಿ ಕಾಣುತ್ತದೆ. ಈ ಸಂಪುಟದ 'ದೇವರೇ ಬರಲಿಲ್ಲ', 'ಂ–ಂ=ಂ', 'ನಾಲ್ಕು ಮೊಳ ಭೂಮಿ', 'ಆವೇ ಮರೀಯಾ', 'ತಾಯಿ', ಸೆರಗಿನ ಕೆಂಡ' ಎಂಬ ಕತೆಗಳಲ್ಲಿ ಈ ತಂತ್ರವನ್ನು ಗುರುತಿಸಬಹುದು. ತಂತ್ರದಲ್ಲಿ ಈ ಹೊರಗಣ ಪ್ರಭಾವವನ್ನು ನಾವು ಗುರುತಿಸಬಹುದಾದಂತೆ ದರ್ಶನದಲ್ಲಿಯೂ ಗುರುತಿಸಬಹುದು. ಹತ್ತೊಂಬತ್ತನೆ ಶತಮಾನದಲ್ಲಿ ಪಾಶ್ಚಾತ್ಯರಲ್ಲಿಯೂ ಭಾರತದಲ್ಲಿಯೂ ಬೆಳೆದ ಮಾನವೀಯತಾವಾದ ಶ್ರೀನಿವಾಸರ ಸಂಪ್ರದಾಯದ ಕತೆಗಳಲ್ಲಿಯೂ ಮಾರ್ಕ್ಸ್, ಎಂಜೆಲ್ಸ್ ಅವರ ಆರ್ಥಿಕ ಸಿದ್ಧಾಂತ ಪ್ರಗತಿಶೀಲ ಕತೆಗಳಲ್ಲಿಯೂ ಫ್ರಾಯ್ಡ್, ಯೂಂಗ್ ಅವರ ಮನೋವಿಜ್ಞಾನ ಸಿದ್ಧಾಂತಗಳು ನವ್ಯಕತೆಗಳಲ್ಲಿಯೂ ಸ್ಪಷ್ಟ ವಾಗಿಯೇ ಕಂಡುಬರುತ್ತವೆ. ಈ ಮಾತುಗಳು ಕನ್ನಡ ಸಣ್ಣಕತೆ ಹೇಗೆ ಪ್ರಪಂಚದ ಜ್ಞಾನದ ಅಭಿವೃದ್ಧಿಯ ಮತ್ತು ಸಾಹಿತ್ಯದ ಪುನರ್ನವೀಕರಣದ ಪ್ರವೃತ್ತಿಗಳಿಗೆ ಹೊರತಾಗಿಲ್ಲ, ವಿಶ್ವಸಾಹಿತ್ಯದ ಪ್ರಗತಿಯಲ್ಲಿ ಭಾಗಿಯಾಗಿದೆ ಎಂದು ಒತ್ತಿಹೇಳಲು ಮಾತ್ರ ಆಡಿದ ಮಾತುಗಳು. ಹೊರಗಣ ಪ್ರಭಾವಗಳಿಂದ ನಮ್ಮ ಲೇಖಕರು ತಮ್ಮ ದರ್ಶನ ಮತ್ತು ರಚನಾ ಮಾರ್ಗಗಳನ್ನು ತಿದ್ದಿಕೊಳ್ಳಬೇಕು, ತಿದ್ದಿಕೊಂಡಿದ್ದಾರೆ. ಇದರಿಂದ ಅವರ ಸ್ವತಂತ್ರ ಸೃಷ್ಟಿ ವೃದ್ಧಿಯಾಗಿದೆಯೇ ಹೊರತು ಬೇರೆಯಲ್ಲ. ಹೀಗೆ ಬೇರೆ ಬೇರೆ ಪ್ರಭಾವಗಳಿಂದ ಬೇರೆ ಬೇರೆ ಮಾರ್ಗಗಳಲ್ಲಿ ನಮ್ಮ ಲೇಖಕರು ಕಥಾರಚನೆ ಮಾಡಿದ್ದರೂ ಎಲ್ಲ ಉತ್ತಮ ಕತೆಗಳಲ್ಲಿಯೂ ಇರಬೇಕಾದ ಸವಿವರವಾದ

ಜೀವನಚಿತ್ರಣ, ಶೈಲಿಯ ವಿಹಿತತೆ ಮತ್ತು ಧ್ವನಿಸ್ವಾರಸ್ಯ ಇವುಗಳೆಲ್ಲವುಗಳ ಸಮಾನ ಲಕ್ಷಣಗಳಾಗಿವೆ.

ಈಚಿನ ಹತ್ತು ವರ್ಷಗಳಲ್ಲಿ ಬಂದಿರುವ ಕತೆಗಳಲ್ಲಿ ಆದಷ್ಟು ಮಟ್ಟಿಗೆ ಎಲ್ಲವನ್ನೂ ಓದಿ ಈ ದೃಷ್ಟಿಯಿಂದ ನನಗೆ ಉತ್ತಮ ಸಾಹಿತ್ಯವೆಂದೂ ಸಂಕಲನಯೋಗ್ಯವೆಂದೂ ಕಂಡುಬಂದ ನಲವತ್ತನ್ನು ಈ ಸಂಪುಟಕ್ಕೆ ಆರಿಸಿದ್ದೇನೆ. ಈ ನಲವತ್ತು ಕತೆಗಳಲ್ಲಿ ಕಥಾಂಶಕ್ಕಿಂತ, ರಚನಾವಿಧಾನಕ್ಕಿಂತ, ಭಾಷಾಶೈಲಿಗಿಂತ, ಇವುಗಳೆಲ್ಲ ಯಾವುದಕ್ಕೆ ಸಾಧಕಗಳು ಮಾತ್ರವೋ ಆ ಧ್ವನಿಗೇ, ರಸಕ್ಕೇ ಪ್ರಾಶಸ್ತ್ಯ. ಇವುಗಳ ಕರ್ತೃಗಳು ಕಟ್ಟುಕತೆಗಾರರಲ್ಲ, ಜೀವನ ದ್ರಷ್ಟಾರರು. ಜೀವನದ ಮೂಲ ಸಮಸ್ಯೆಗಳನ್ನು ಕುರಿತು, ಸಮಾಜದ ವ್ಯವಸ್ಥೆ ವ್ಯವಹಾರಗಳನ್ನೂ ಕುರಿತು, ಈ ಕತೆಗಳಲ್ಲಿ ಗಂಭೀರವಾದ ನಿಲುವನ್ನು ಕಾಣುತ್ತೇವೆ. ಇಂದಿನ ಬದುಕಿನ ವಿಮರ್ಶೆ, ವಿವರಣೆ ಒಮ್ಮೆಗೇ ಇಲ್ಲಿ ಸಿಗುತ್ತವೆ. ಅಲ್ಲದೆ ಎಲ್ಲ ಬಗೆಯ ವಿಷಯ, ಭಾವ, ಚಿಂತನೆಗಳನ್ನೂ ಚಿತ್ರಿಸಬಲ್ಲ ಶಕ್ತಿ ಕನ್ನಡ ಗದ್ಯಕ್ಕೆ ಎಷ್ಟಿದೆ, ಎಂಥ ಉತ್ತಮ ಕನ್ನಡ ಗದ್ಯ ಸೃಷ್ಟಿಯಾಗುತ್ತಿದೆ ಎಂದೂ ಈ ಸಂಪುಟದಲ್ಲಿ ಕಾಣಬಹುದು.

ಈ ಕತೆಗಳಲ್ಲಿ ವಸ್ತುವಿನಲ್ಲಿ, ತಂತ್ರದಲ್ಲಿ, ಭಾಷಾ ಶೈಲಿಯಲ್ಲಿ ಎಂತಹ ವೈವಿಧ್ಯ, ಎಂತಹ ಸಂಪತ್ತು! 'ಮುಕ್ಕಣ್ಣನ ಮುಕ್ತಿ'ಯಲ್ಲಿ ಹಳ್ಳಿಯ ಸರಳಜೀವನ, 'ಭಾವಬಂಧನ'ದಲ್ಲಿ ನಗರಜೀವನದ ಜಟಿಲತೆಯ ಜಾಲ. ವೆಂ. ಮು. ಜೋಶಿಯವರು ಭಾರತದ ಹಿಂದೂ – ಮುಸ್ಲಿಂ ಮತೀಯ ಗಲಭೆಗಳನ್ನು ಇಂಡೋನೇಷ್ಯಾದ ಭಾರತ ಸೈನ್ಯದ ಬೀಡಿನ ದೂರದಿಂದ ವೀಕ್ಷಿಸಿದ್ದಾರೆ, ವಿಮರ್ಶಿಸಿದ್ದಾರೆ. ತ್ರಿವೇಣಿ, ಸಾವಿತ್ರಮ್ಮ, ಗೀತಾದೇವಿ, ಅನುಪಮಾ, ರಾಜಲಕ್ಷ್ಮಿ, ಇವರ ಕತೆಗಳಲ್ಲಿ ಹೆಣ್ಣಿನ ದೃಷ್ಟಿಗೆ ನಮ್ಮ ಜೀವನ ಹೇಗೆ ಕಾಣುತ್ತಿದೆ ಎಂಬುದರ ಅರಿವಾಗುತ್ತದೆ. ಕೆಲವು ಕತೆಗಳಲ್ಲಿ ಉತ್ತರ ಕರ್ಣಾಟಕದ ಅಥವಾ ಕರೆನಾಡಿನ ಚಿತ್ರವಿದ್ದರೆ, ಕೆಲವು ಕತೆಗಳಲ್ಲಿ ಮೈಸೂರು ಕರ್ಣಾಟಕದ ಜೀವನದ ಬೇರೆಬೇರೆ ಚಿತ್ರಗಳಿವೆ. 'ಒಂದೇ ದೇಟಿನ ಕಾಯಿಗಳು' ಎಂಬ ಕತೆಯ ಜೀವನಚಿತ್ರಕ್ಕೂ ಭಾಷೆಗೂ 'ಮರುಮದುವೆ' ಎಂಬ ಕತೆಯ ಜೀವನಚಿತ್ರಕ್ಕೂ ಭಾಷೆಗೂ ಎಂತಹ ವ್ಯತ್ಯಾಸ! 'ಶೂರ್ಪನಖಿ' ಮತ್ತು 'ವ್ಯಭಿಚಾರ' ಇವುಗಳ ತಿಳಿಹಾಸ್ಯಕ್ಕೂ 'ತ್ಯಾಗ'ದ ಕಟು ಭ್ರಮನಿರಸನಕ್ಕೂ ವಿ. ಜಿ. ಭಟ್ಟರ ಚುಟಕ ಕತೆಗಳ ವಿಡಂಬನೆಗೂ ಸೂಕ್ಷ್ಮ ವ್ಯತ್ಯಾಸಗಳಿವೆ. ಇವುಗಳಿಗಿಂತ ತೀರ ಭಿನ್ನವಾಗಿ, ಘೋರವಾಗಿ, 'ಯಕ್ಷ ಪ್ರಶ್ನೆ'ಯ ದುರಂತ ಹೃದಯವನ್ನು ಹಿಂಡುತ್ತದೆ. 'ಒಂದೇ ದೇಟಿನ ಕಾಯಿಗಳು' ಎಂಬ ಕತೆಯಲ್ಲಿ ಕಾದಂಬರಿಯಾಗಬಹುದಾದಷ್ಟು ಕಥಾಂಶವಿದ್ದರೆ '೦–೦=೦' ಎಂಬುದರಲ್ಲಿ ಕಥಾಂಶ ಸೊನ್ನೆಯೆಂದೇ ಹೇಳಬಹುದು. 'ಆಶೆಯ ಶಿಶು', ಭೂತದ ಕತೆ. 'ಪವಾಡ ಪುರುಷ', ಚಾರಿತ್ರಕ ಕತೆ. 'ಮಾನವ ಪ್ರೇಮ', ದೃಷ್ಟಾಂತ. 'ರಾಜನಾಮಾ', ಡೈರಿಯ ಒಂದು

ಭಾಗ. ಹನಿಗತೆಗೆ ಉದಾಹರಣೆಗಳಾಗಿ ವಿ. ಜಿ. ಭಟ್ಟರ ನವೀನ ಉತ್ತರರಾಮ ಚರಿತೆಯ ಮೂರು ಚುಟಕ ವಿಡಂಬಕ ದೃಶ್ಯಗಳನ್ನು ಆರಿಸಿ ಪೋಣಿಸಿದೆ. 'ತಾಯಿ', 'ಸೆರಗಿನ ಕೆಂಡ', 'ಬೆಡ್ ನಂಬರ್ ಏಳು' ಇವುಗಳ ಆರಂಭ, 'ವ್ಯಭಿಚಾರ', 'ತ್ಯಾಗ', 'ಕೊನೆಯ ಗಿರಾಕಿ', 'ಯಕ್ಷಪ್ರಶ್ನೆ', 'ಜಾಗೀರಿಯ ದಿಂಬು' ಇವುಗಳ ಮುಕ್ತಾಯ, 'ಬಾಗಿಲು ತೆರೆದಿತ್ತು', 'ಆಶೆಯ ಶಿಶು', 'ಪವಾಡ ಪುರುಷ' ಇವುಗಳ ಬೆಳೆವಣಿಗೆ ಹೆಚ್ಚಿನ ಮೆಚ್ಚುಗೆಗೆ ಅರ್ಹವಾಗಿವೆ. ಅಲ್ಲದೆ ಒಂದೇ ಮುಖ್ಯ ವಿಷಯದ ಮೇಲೆ ಭಿನ್ನಭಿನ್ನ ದೃಷ್ಟಿಗಳಿಂದ ಬೆಳಕು ಚೆಲ್ಲುವಂತಹ ಹಲವು ಕತೆಗಳಿವೆ; ಇವುಗಳು ಆದಷ್ಟುಮಟ್ಟಿಗೆ ಒಟ್ಟೊಟ್ಟಿಗೆ ಬರುವಂತೆ ಏರ್ಪಡಿಸಿದೆ. ದೇವರ ಅಸ್ತಿತ್ವವನ್ನು ಕುರಿತು ಒಂದು ವಿಚಾರ ಸಂಕಿರಣವೇ 'ಮಾನವಪ್ರೇಮ', 'ದೇವರೇ ಬರಲಿಲ್ಲ', '೦–೦=೦', 'ಗುಡಿ' ಮತ್ತು 'ಫರ್ಲಾಂಗಮ್ಮ' ಎಂಬ ಕತೆಗಳಲ್ಲಿ ಸಿಗುತ್ತದೆ. ಹೀಗೆಯೇ ವಿಷಯಲಂಪಟತೆ ಮತ್ತು ವೇಶ್ಯಾಜೀವನವನ್ನು ಬೇರೆಬೇರೆ ದೃಷ್ಟಿಗಳಿಂದ ಖಂಡಿಸುವ, ಪುನರ್‌ವಿಮರ್ಶಿಸುವ ಕೆಲವು ಕತೆಗಳೂ ಇಲ್ಲಿವೆ. ಅಹಿಂಸೆಯ ವಾದಕ್ಕೂ ನಿಜವಾದ ಅದರ ಜ್ಞಾನಕ್ಕೂ ಆಚರಣೆಗೂ ಇರುವ ಭೇದ 'ಹೊಸ ನೋಟ'ದಲ್ಲಿ ಬಂದರೆ ಅಹಿಂಸೆಗೂ ಇರಬೇಕಾದ ಮಿತಿಯ ಸೂಚನೆ 'ಪವಾಡ ಪುರುಷ'ದಲ್ಲಿ ಬರುತ್ತದೆ. ಶೈಲಿಯ ದೃಷ್ಟಿಯಿಂದ 'ಪೂವಮ್ಮ' ಎಂಬ ಕತೆಯಲ್ಲಿ ವಚನಸಾಹಿತ್ಯದ ಇಂಪು ಕೇಳಿಸುತ್ತದೆ, 'ಆವೇ ಮರೀಯಾ'ದಲ್ಲಿ ಸುಂದರ ಉಪಮೆ ಅಥವಾ ಪ್ರತಿಮೆಗಳು ಕಣ್ಣಿಗೆ ಕಟ್ಟುತ್ತವೆ, 'ಭೂಮಿ ಕಂಪಿಸಲಿಲ್ಲ' ಎಂಬ ಕತೆಯಲ್ಲಿ ಏಕಪಾತ್ರದ ಮಾತಿನ ನಾಟಕೀಯತೆ ಇದೆ, '೦–೦=೦' ಎಂಬುದರಲ್ಲಿ ಆಳವಾದ ಯೋಚನೆಯ ಶೀಘ್ರಗತಿಯನ್ನು ಗದ್ಯ ಪ್ರತಿಬಿಂಬಿಸಲು ಯತ್ನಿಸಿದೆ. ಇವುಗಳಿಗೂ 'ಮರುಮದುವೆ', 'ಯಕ್ಷಪ್ರಶ್ನೆ' ಇವುಗಳ ಗಂಭೀರಶೈಲಿಗೂ 'ಪವಾಡ ಪುರುಷ'ದ ಉನ್ನತ ಐತಿಹಾಸಿಕ ಶೈಲಿಗೂ ಇನ್ನಷ್ಟು ವ್ಯತ್ಯಾಸವಿದೆ. ಒಟ್ಟಿನಲ್ಲಿ ಹೇಳುವುದಾದರೆ 'ಗುಡಿ', 'ಫರ್ಲಾಂಗಮ್ಮ', 'ಮರುಮದುವೆ', 'ಡ್ಯಾಮು–ಕೆಂಚಿ', 'ಬಾಗಿಲು ತೆರೆದಿತ್ತು', 'ಯಕ್ಷಪ್ರಶ್ನೆ', 'ಕೊನೆಯ ಗಿರಾಕಿ', 'ವ್ಯಭಿಚಾರ', 'ಹೊಸ ನೋಟ', 'ಪವಾಡ ಪುರುಷ', 'ತಾಯಿ', 'ಆಶೆಯ ಶಿಶು', 'ಸೆರಗಿನ ಕೆಂಡ', 'ನಲ್ಲಿಯಲ್ಲಿ ನೀರು ಬಂದಿತು!!!' ಮುಂತಾದ ಅತ್ಯುತ್ತಮ ಕತೆಗಳು ಈ ಹತ್ತು ವರ್ಷಗಳಲ್ಲಿ ಸೃಷ್ಟಿಯಾಗಿರುವುದು ಕನ್ನಡ ಸಣ್ಣಕತೆಯ ಉಜ್ವಲ ಭವಿಷ್ಯದ ದ್ಯೋತಕವಾಗಿದೆ. ಇವೂ ಉಳಿದೆರಡು ಸಂಪುಟಗಳ ಕತೆಗಳೂ ಕನ್ನಡದಲ್ಲಿ ಪ್ರಚಾರವಾದ ಮೇಲೆ ಇತರ ಭಾಷೆಗಳಿಗೂ ಪರಿವರ್ತಿತವಾಗಿ ಕನ್ನಡ ಸಣ್ಣಕತೆ ಲೋಕವಿಶ್ರುತವಾಗಲಿ.

ಕತೆಗಳ ವಿಷಯವಾಗಿ ಹೇಳಬೇಕೆನಿಸಿದುದನ್ನು ಈ ಪ್ರಸ್ತಾವನೆಯಲ್ಲಿಯೇ ಸೂಚಿಸಿರುವುದರಿಂದಲೂ, ಕಡೆಯಲ್ಲಿ ಕೊಟ್ಟಿರುವ ಪಟ್ಟಿಯಿಂದ ಲೇಖಕರು ಪ್ರಕಟಿಸಿರಬಹುದಾದ ಕಥಾಸಂಗ್ರಹಗಳ ವಿವರಗಳು ದೊರಕುವುದರಿಂದಲೂ, ಪ್ರತಿ ಕತೆಯ

ಮೊದಲಲ್ಲಿ ಸಂಪಾದಕೀಯ ಪೀಠಿಕೆಯನ್ನು ಕೊಟ್ಟಿಲ್ಲ. ಲೇಖಕರ ಪರಿಚಯವನ್ನು ಮಾಡಿಕೊಡಬೇಕೆಂದಿದ್ದರೂ ಕೆಲವರಿಂದ ಅವರ ಜೀವನದ ವಿಷಯವಾಗಿ ವಿವರಗಳು ದೊರಕದಿದ್ದುದರಿಂದ ಈ ಮುದ್ರಣದಲ್ಲಿ ಆ ಅನುಬಂಧವನ್ನು ಬಿಡಲಾಗಿದೆ. ಪುನರ್ಮುದ್ರಣವಾದಾಗ ಸಾಧ್ಯವಾದರೆ ಇದನ್ನೂ ಲೇಖಕರ ಭಾವಚಿತ್ರಗಳನ್ನೂ ಕೊಡಲಾಗುವುದು. ಎಷ್ಟೋ ಎಚ್ಚರಿಕೆ ತೆಗೆದುಕೊಂಡಿದ್ದರೂ ಮುದ್ರಾರಾಕ್ಷಸನ ಹಾವಳಿಯನ್ನು ಪೂರ್ಣವಾಗಿ ತಡೆಗಟ್ಟಲಾಗಿಲ್ಲ. ಆದರೆ ತಪ್ಪುಗಳು ಸುಲಭವಾಗಿ ಓದುಗರೇ ತಿದ್ದಿಕೊಳ್ಳಬಹುದಾದುವೆಂದು ಕಂಡುದುದರಿಂದ ದೀರ್ಘವಾದ ಒಂದು ತಿದ್ದುಪಡಿಯನ್ನು ಕಡೆಯಲ್ಲಿ ಕೊಡಲುಹೋಗಿಲ್ಲ. ಈ ವಿಷಯದಲ್ಲಿ ಓದುಗರು ಸಹನೆಯನ್ನು ತೋರಬೇಕೆಂದು ಬೇಡಿಕೆ.

ಈ ಸಂಕಲನವನ್ನು ಸಂಪಾದಿಸುವಂತೆ ನನ್ನನ್ನು ಕೇಳುವ ಗೌರವವನ್ನು ನನಗೆ ಮಾಡಿರುವ ಕನ್ನಡ ಸಾಹಿತ್ಯ ಪರಿಷತ್ತಿಗೂ, ಕತೆಗಳನ್ನು ಆರಿಸಲೂ ಕಡೆಯಲ್ಲಿ ಕೊಟ್ಟಿರುವ ಈ ಹತ್ತುವರ್ಷಗಳ ಸಣ್ಣಕತೆಗಾರರ ಅಕಾರಾದಿ ಪಟ್ಟಿಯನ್ನು ತಯಾರಿಸಲೂ ನನಗೆ ಹಲವು ವಿಧಗಳಲ್ಲಿ ಸಹಾಯ ಮಾಡಿದ ಗೆಳೆಯರಿಗೂ, ನನ್ನ ಆಯ್ಕೆಯನ್ನು ಸಹೃದಯತೆಯಿಂದ ಪರಿಶೀಲಿಸಿ ಒಪ್ಪಿದ ಮೂವರು ಹಿರಿಯರಿಗೂ, ತಮ್ಮ ಕತೆಗಳನ್ನು ಪ್ರಕಟಿಸಲು ಅನುಮತಿ ಕೊಟ್ಟ ಕತೆಗಾರರಿಗೂ ನನ್ನ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ.

ಬೆಂಗಳೂರು
ಡಿಸೆಂಬರ್ ೨೪, ೧೯೫೭

**ಕೆ. ನರಸಿಂಹಮೂರ್ತಿ**

# ಗಿರಿಜಾ ಕಂಡ ಸಿನಿಮಾ

ರಾಗವಾಗಿ ಗಿರಿಜಾ 'ರೀss' ಎಂದರೆ ಸಾಕು—ಏನೋ ಬಂತು ಪೀಕಲಾಟ ಎಂದು ಗೊತ್ತು ಸಿದ್ಧರಾಮನಿಗೆ. ಮನಸ್ಸಿಲ್ಲದಿದ್ದರೂ ಅವಳ ಕಡೆ ಕಣ್ಣು ಹೊರಳಿಸುತ್ತಾನೆ.

'ರೀssss'

'ಏನೇ ?'

'ರೀssss'

'ಏನು ಹೇಳೇ ?'

'ಏನು ಅಂತ ನನ್ನೇ ಕೇಳ್ತೀರಲ್ಲ ! ಬಹಳ ಘಾಟಿ ಕಣ್ರೀ ನೀವು !' ಎಂದು ಅವಳೊಂದು ಕಣ್ಣ ಬಾಣ ಬಿಡುತ್ತಾಳೆ.

ಆ ಬಾಣದಿಂದ ಏಟು ತಿಂದು ತಿಂದೂ ಅಭ್ಯಾಸವಾಗಿಹೋಗಿದೆ ಅವನಿಗೆ. ಅದರಿಂದ ಪರಿಣಾಮವಾಗುವಂಥ ಮನಃಸ್ಥಿತಿಯೂ ಅವನಿಗಿರುವದಿಲ್ಲ. ಬೆಳಗಿನಿಂದ ಸಾಯಂಕಾಲದವರೆಗೂ ಡಿಪೋವಿನಲ್ಲಿ ಕತ್ತೆಯಂತೆ ದುಡಿದು ದುಡಿದು ದಣಿದಿರುತ್ತದೆ ದೇಹ. ಜೀವರಹಿತ ಯಾಂತ್ರಿಕ ಕೆಲಸದಿಂದ ಬೇಸರಗೊಂಡಿರುತ್ತದೆ ಮನಸ್ಸು. ಹಾಸುಗೆಯು ಸ್ಪರ್ಶವಾಗುವುದೇ ತಡ, ಕಣ್ಣು ತಾವಾಗಿಯೇ ಮುಚ್ಚಿಕೊಳ್ಳುತ್ತವೆ ಕಠೋರ ಪ್ರಪಂಚದ ಹೋರಾಟದಲ್ಲಿ ದಣಿದ ಮನಸ್ಸು ರಹಸ್ಯಮಯ ನಿದ್ರಾ-ಪ್ರಪಂಚದಲ್ಲಿ ಶಾಂತವಾಗಲಾಶಿಸುತ್ತದೆ. ಇಂಥ ಸಮಯದಲ್ಲಿ ಪ್ರಣಯಾಲಾಪಕ್ಕೆಲ್ಲಿಯ ಉತ್ಸಾಹ ಬಂದೀತು ? ಮದುವೆಯಾದ ಹೊಸದರಲ್ಲಿ ಮುದ್ದು ಮುದ್ದಾಗಿ ತೋರುತ್ತಿದ್ದ ಗಿರಿಜೆಯ ಮಾತು ಈಗ ಮೊದ್ದು ಮೊದ್ದಾಗಿ ಕಾಣುತ್ತಿವೆ. 'ಈಕೆ ಮಾತನಾಡದೆ ಸುಮ್ಮನಿದ್ದರೆ ಬದುಕಿಕೊಂಡೀತು ನನ್ನ ಬಡಜೀವ, ತೆಪ್ಪಗೆ ಬಿದ್ದುಕೊಂಡಿರಬಾರದೇ ಇವಳು !' ಎಂದು ಅನ್ನಿಸುತ್ತದೆ ಅವನಿಗೆ. ಆದರಾಕೆ ಬಿಡಬೇಕಲ್ಲ! ತನ್ನ ಕಡೆ ಬೆನ್ನುಮಾಡಿ ಗೋಡೆಯ ಕಡೆ ಮುಖ ಹೊರಳಿಸಿ ನಿದ್ರೆ ಹೋಗಲೆತ್ನಿಸುವ ಪತಿಯ ತಲೆಗೂದಲನ್ನು ಹಿಡಿದು ಎಳೆಯುತ್ತಾಳೆ. ಅವನ ಮೂಗಿನ ಬಳಿ ತನ್ನ ಮೂಗನ್ನೊಯ್ದು ತುಂಟತನದಿಂದ ಉಜ್ಜುತ್ತ 'ರೀss' ಎನ್ನುತ್ತಾಳೆ-ಕೊಂಚ ಗಟ್ಟಿಯಾಗಿಯೆ.

ನಿದ್ರೆಯಿಂದ ಜಡವಾಗುತ್ತಿದ್ದ ಕಣ್ಣುಗಳನ್ನು ಅವಳ ಕಡೆ ತಿರುಗಿಸಿ ಆತ ಕೇಳುತ್ತಾನೆ.

'ಏನೇ?'

'ಏನು ಅಂತ ನನ್ನೇ ಕೇಳ್ತೀರಲ್ಲ? ಬಹಳ-ಬಹಳ ಘಾಟಿ ಕಣ್ರೀ ನೀವು' ಎಂಹು ಹೇಳಿ ಆಕೆ ಅವನ ಕೆನ್ನೆಯ ಮೇಲೊಂದು ಮೃದುವಾದ ಏಟು ಹಾಕುತ್ತಾಳೆ.

ಆಗ ಮಾತ್ರ ಆತ ನಿದ್ರೆಯ ಆಸೆ ಬಿಟ್ಟುಬಿಡಲೇಬೇಕಾಗುತ್ತದೆ. ಎಷ್ಟು ಬೇಸರ ವಾಗಿದ್ದರೇನು—ಎಂಥ ನಿದ್ರೆ ಬರುತ್ತಿದ್ದರೇನು—ತಾರುಣ್ಯದಿಂದ ತುಂಬಿ ತುಳುಕುವ ನಲ್ಲೆ ನಗುನಗುತ್ತ ಪಕ್ಕದಲ್ಲೊರಗಿದ್ದರೆ ಮುಖ ತಿರುಗಿಸಲು ಎಲ್ಲಿ ಸಾಧ್ಯ.

ಅವನ ಮುಖವನ್ನೆತ್ತಿ ತನ್ನ ಮುಖದ ಮೇಲಿಟ್ಟುಕೊಳ್ಳುತ್ತ ಅವನ ದೃಷ್ಟಿಗೆ ದೃಷ್ಟಿ ಬೆರಸುತ್ತ ಆಕೆ ಕೇಳುತ್ತಾಳೆ.

'ಯಾವಾಗ ಹೋಗೋದು ಸಿನಿಮಾಕ್ಕೆ ?'

'ಸಿನಿಮಾ ?'

'ಹೂಂ. ಅಲ್ಲವೇನು ಮತ್ತೆ? ಇಲ್ಲಿಗೆ ಬಂದಾಗಿನಿಂದ ಕೇಳುತ್ತಿದೇನೆ ನಾನು. ಹೋಗೋಣ ಹೋಗೋಣ ಅಂತಾಲೇ ಇದೀರಿ. ಕಳೆದ ಭಾನುವಾರ ಖಂಡಿತ ಹೋಗೋಣ ಅಂದಿದ್ದಿರಿ. ಆದರೂ ಚಕ್ಕರು ಹಾಕಿದಿರಿ. ಈ ಭಾನುವಾರಾನಾದ್ರೂ ತೋರಿಸಲೇ ಬೇಕು. ಯಾವಾಗಲೂ ಹೀಗೇ ನೀವು! ಮಾತು ಕೊಡೋದು! ಮರೆತು ಬಿಡೋದು!' ಎಂದು ಹೇಳಿ ಆಕೆ ಕೆನ್ನೆ ಉಬ್ಬಿಸಿಬಿಟ್ಟು ಕಣ್ಣು ಕುಣಿಸುತ್ತಾಳೆ.

ಆ ಉಬ್ಬಿದ ಕೆನ್ನೆಗಳನ್ನು ಒತ್ತಿ ಸರಿಪಡಿಸುತ್ತ ಆತ ಹೇಳುತ್ತಾನೆ.

'ಇಲ್ಲ ಕಣೇ ಮರೆತಿಲ್ಲ! ಖಂಡಿತ ಹೋಗೋಣ!'

ಅವನ ಮುಖವನ್ನು ತಲೆದಿಂಬಿನ ಮೇಲೊರಗಿಸಿ ಬಿಟ್ಟು ಆಕೆ ಹುಸಿ ಮುನಿಸಿನಿಂದ—

'ಗೊತ್ತು ನೀವು ಕರಕೊಂಡು ಹೋಗೋದು! ಬಲೆ! ಬಲೆ!' ಎಂದು ಕೈ ತಿರುವುತ್ತಾಳೆ.

ಅವಳು ಕೈ ತಿರುಗಿಸುವದೂ ಒಂದು ತಮಾಷೆಯೇ. ಆಗಿನ ಅವಳ ಆ ಸಹಜಾ ಭಿನಯವೋ! ಆ ಕೊಂಕು ನೋಟವೋ! ಆ ಡೊಂಕು ಹುಬ್ಬೋ! ಆ ತುಟಿಯ ಕುಣಿತವೋ! ಎದೆಯ ಮಣಿತವೊ! ಕೊರಳಿನ ನಾಜೂಕು ಹೊರಳುವಿಕೆಯೋ! ಮದುವೆಯಾದ ಎರಡು ವರ್ಷಗಳಿಂದ ಆ ಸೊಗಸು ನೋಡಿ ನೋಡಿ ರೂಢಿ ಯಾಗಿದ್ದರೂ ಆ ಕ್ಷಣ- ಒಂದೇ ಒಂದು ಕ್ಷಣ ಸಿದ್ಧರಾಮನಿಗೆಸ್ವಾರ ಸ್ಯವೆನಿಸದಿರುವು ದಿಲ್ಲ. ಅವಳು ಕೈ ತಿರುಗಿಸುವದೇ ಒಂದು ಶೋಭೆ! 'ಬಲೆ! ಬಲೆ!' ಎನ್ನುವದೇ ಒಂದು ಶೋಭೆ. ಆ ರಸನಿಮಿಷದಲ್ಲ ಆತ ಅವಳಿಗೆ ಸಂಪೂರ್ಣವಾಗಿ ಸೋತು ಹೋಗುತ್ತಾನೆ ಅವಳ ಬಗ್ಗೆ ಅವನ ಎದೆಯಲ್ಲಿರುವ ಪ್ರಿತಿಯಲ್ಲಾ ಉಕ್ಕಿ ಬರುತ್ತದೆ. ಮೋಹವೆಲ್ಲಾ ಚಿಮ್ಮಿ ಬರುತ್ತದೆ. ಪ್ರೀತಿ-ಮೋಹಗಳ ಆ ವಿಲಕ್ಷಣ ಸಂಗಮ ದಿಂದ ಉತ್ಪನ್ನವಾದ ವಿದ್ಯುಲ್ಲತೆಯಿಂದ ಉನ್ಮತ್ತವಾದ ಅವನ ತೋಳು ಅವಳ ಶರೀರವನ್ನು ರಭಸದಿಂದ ಸೆಳೆದುಕೊಳ್ಳುತ್ತವೆ. ಅವಳ ತುಟಿಗಳಿಗೆ ತುಟಿಯಿಟ್ಟು ಆತ ಹೇಳುತ್ತಾನೆ.

'ಭಾನುವಾರದವರೆಗೂ ಕಾಯೋದೇಕೇ ಹುಚ್ಚಿ? ಈಗಲೇ-ಈ ಗಳಿಗೆಯಲ್ಲೇ ಈ ಕೊಟಡಿಯಲ್ಲೇ ನಡೆದಿದೆಯಲ್ಲ ಸಿನಿಮಾ ! ನಮ್ಮ ಸಿನಿಮಾ!'

ಮಾತನಾಡುವದಿಲ್ಲ ಆಕೆ. ಮಾತನಾಡಲು ತುಟಿ ತೆರೆದಿದ್ದರೆ ತಾನೆ!

ಆದರೆ ಒಂದೊಂದು ಬಾರಿ ಮಾತ್ರ ಅವಳ ಮಾತು ನಿಲ್ಲುವದಿಲ್ಲ. ಆವನ ತುಟಗಳಿಗೆ ತನ್ನ ತುಟಿಗಳನ್ನೂ ಆಕೆ ಕೊಡುವದಿಲ್ಲ. ಒಂದು ಭಾನುವಾರವೇ? ಎರಡೇ? ಎಷ್ಟೋ ಭಾನುವಾರಗಳು ಕಳೆದುಹೋದರೂ ಆತ ಸಿನಿಮಾಕ್ಕೆ ಕರೆದೊಯ್ಯದಿದ್ದಾಗ ಅವಳಿಗೆ ಕೋಪ ಬರುವದೂ ಸ್ವಾಭಾವಿಕವೇ ಸರಿ. ಇನ್ನೂ ಹದಿನೇಳರ ಜವ್ವನೆ. ಹೊಸ ಹರಯದ ಹೊಸ ಉತ್ಸಾಹದ ಜೀವ. ಆರು ದಿನಗಳ ಕಾಲ ಹಗಲು ಹೊತ್ತು ಗಂಡನ ಮುಖವನ್ನೇ ನೋಡುವಂತಿಲ್ಲ. ಇಬ್ಬರೂ ಕೊಂಚ ಹೊತ್ತು ಕೂಡಿ ತಿರುಗಾಡಿ ಸೊಗಸಾಗಿ ಕಾಲಕಳೆಯುವಂತಿಲ್ಲ. ಭಾನುವಾರ ರಜದದಿನ. ಅಂದಾದರೂ ತನ್ನ ಕಡೆ ಗಮನವೀಯಬಾರದೇ ಅವರು? ಬೆಳಗಿನ ರೈಲಿನಲ್ಲಿ ಬೆಂಗಳೂರಿಗೆ ಹೋಗಿ ಬಿಟ್ಟು ಒಂದು ಮ್ಯಾಟ್ನಿ ಆಟ ನೋಡಿಕೊಂಡು ಎಂಟುಗಂಟೆಯ ರೈಲಿಗೆ ಮರಳಿ ಬರಬಹುದು. ಅಕ್ಕ ಪಕ್ಕದ ಮನೆಗಳವರೆಲ್ಲ ಹೋಗಿ ಬರುವದಿಲ್ಲವೇ? ಇವರಿಗೇನು ಬಂದಿರೋದು ಧಾಡಿ? ಈ ವಯಸ್ಸಿನಲ್ಲೂ ಸನ್ಯಾಸಿಯಂಥ ಜೀವನವೇಕೋ ಇವರಿಗೆ? ತಮ್ಮ ಮನೆಯವಳ ಸುಖ ದುಃಖ ನೋಡಿಕೊಳ್ಳಲಾರದವರು ಪರರ ಸುಖದುಃಖ ಏನು ತಿಳಿದುಕೊಳ್ಳುತ್ತಾರೋ! ಇವರ ಸೋಶಲಿಸಮ್ಮೋ! ಕಮ್ಯುನಿಸಮ್ಮೋ! ಎಂಥ ದಮ್ಮೋ ಅದು-ಯಾವಾಗಲೂ ಅದರದೇ ಧ್ಯಾನ! ಕೈ ಹಿಡಿದವಳನ್ನ ಬಳಲಿಸೋ ಈ ಇಸಮ್ಮು! ಎಂದುಕೊಂಡು ಉದ್ವೇಗದಿಂದ ಬಳಲುತ್ತಾಳೆ. ಅಂಥ ಉದ್ವೇಗವಿದ್ದಾಗ ತುಟಿಗೆ ತುಟಿ ಬೆರೆತೀತೇ?

ಅವಳನ್ನು ತನ್ನ ಬಾಹುಪಾಶದಲ್ಲಿ ಬಿಗಿದು ಸಿದ್ಧರಾಮ 'ಬಾ! ಬಾ ನನ್ನ ಹುಡುಗೀ ಬಾ! ಒಂದೇ ಒಂದು ಕೊಡು! ಹೆಚ್ಚು ಬೇಡ! ಒಂದೇ ಒಂದು!' ಎಂದು ಒತ್ತಾಯದಿಂದ ಅವಳನ್ನು ಮುತ್ತಿಡಲು ಪ್ರಯತ್ನಿಸುತ್ತಾನೆ.

ಹೌದು. ಆಗ ಅವಳಿಗೆ ಕೋಪ ಬರುತ್ತದೆ. 'ಮುತ್ತು ಮಾತ್ರ ಬೇಕು ಇವರಿಗೆ! ನನಗೆ ಸಿನಿಮಾ ತೋರಿಸೋದು ಬೇಡ. ಎಂಥಾ ಸ್ವಾರ್ಥಿ ಜಾತಿ ಇದು ಈ ಗಂಡಸರದು! ಇವರಿಗ್ಯಾಕೆ ಮುತ್ತು ಕೊಡಬೇಕು ನಾನು ?' ಎಂದುಕೊಂಡು ಕೈಯಿಂದ ತನ್ನ ತುಟಿಗಳನ್ನು ಮುಚ್ಚಿಕೊಳ್ಳುತ್ತಾಳೆ. ಆತ ತಡೆಯಲಾರ. ಅವಳ ಕೈಯನ್ನು ಎತ್ತಿ ಆಚೆಗೆ ಸರಿಸಿ ತುಟಿಗೆ ತುಟಿ ಸೇರಿಸುತ್ತಾನೆ. ಮರುಕ್ಷಣವೇ ತನ ತುಟಿಗಳನ್ನು ತೆಗೆದುಬಿಟ್ಟು 'ಅಯ್ಯೋ ಗಂಡುಬೀರೀ! ಕಚ್ಚಿಬಿಟ್ಟೆಯಲ್ಲೇ ಬಜಾರಿ!' ಎನ್ನುತ್ತಾನೆ.

'ಇನ್ನೇನು ಮಾಡೋದು ಕರಡೀ ಹಾಗೆ ನೀವು ಮೈಮೇಲೆ ಬಿದ್ದರೆ?'

'ನಾನು ಕರಡಿಯಾದರೆ ನೀನೇನು ಕೋತೀ ಮರಿಯೇನು ಹೀಗೆ ಕಚ್ಚಿ ಬಿಡೋಕೆ?

'ಹೌದು ಕಣ್ರೀ! ನಾನು ಕೋತಿ! ನಿಮ್ಮ ಮುಖ ಮಾತ್ರ ಬಹಳ ಚಂದಾಗಿದೆ-ನರಿಯ ಹಾಗೆ!'

'ಇಲ್ಲ ಕಣೇ! ಅಷ್ಟು ಚೆನ್ನಾಗಿಲ್ಲ ನನ್ನ ಮುಖ! ನಿನ್ನ ಮೂಗು ಮಾತ್ರ ಬಹಳ ಚೆಂದಾಗಿದೆ ಬೆಕ್ಕಿನ ಹಾಗೆ' ಎಂದ ಬಿಟ್ಟು ಆತ ಅವಳ ನಸು ಚಪ್ಪಟೆ ಮೂಗನ್ನು ಕುರಿತು ಹಾಸ್ಯ ಮಾಡುತ್ತಾನೆ.

'ನನ್ನ ಮೂಗಿಗೇನೂ ನೀವು ನಗಬೇಕಾಗಿಲ್ಲ. ನಿಮ್ಮದೇನು ಮಹಾ ಸೌತೇ ಕಾಯಿಯಂಥಾದ್ದು!' ಎಂದು ಹೇಳಿ ಆಕೆ ಮುಯ್ಯಕ್ಕೆ ಮುಯ್ಯ ತೀರಿಸಿಬಿಡುತ್ತಾಳೆ.

'ಇಂಥಾ ಮೂಗಿನವನ್ನ ನೀ ಯಾಕೆ ಮಾಡಿಕೊಂಡೆ ?'

'ಇಂಥಾ ಮೂಗಿನವಳನ್ನ ನೀವು ಯಾಕ್ರೀ ಕಟ್ಟಿಕೊಂಡ್ರಿ ?'

'ನನ್ನೇ ಆಗಬೇಕು ಅಂತ, ಅತ್ತುಕೊಂಡು ಕಣ್ಣೀರಿಟ್ಟೆಯಲ್ಲ ನೀನು, ಮನಸ್ಸು ಕರಗಿ ಆಗಿಬಿಟ್ಟೆ!'

'ಹೌದು ಪಾಪ! ನಮ್ಮಪ್ಪ ನಿಮಗೆ ನನ್ನ ಕೊಡೋಲ್ಲಾಂತ ಅಂದಾಗ ಊಟ ನೀರು ಬಿಟ್ಟು ಮೂರು ನಾಲ್ಕು ದಿನ ಬೆಂಗಳೂರೆಲ್ಲ ಹುಚ್ಚರಂತೆ ಅಲೆದೋರು ಯಾರೊ!'

'ಹೂಂ! ನಾನೊಬ್ಬ ಹುಚ್ಚ! ನಿನ್ನಂಥ ಹುಚ್ಚಿಯನ್ನ ಕಟ್ಟಿಕೊಂಡಿರೋನು!'

'ನೀವು ಹುಚ್ಚರಾದ್ರೆ ಹುಚ್ಚಾಸ್ಪತ್ರೆಗೆ ಹೋಗಿ ಬನ್ನಿ. ನನಗೇನೂ ಹುಚ್ಚು ಹಿಡಿದಿಲ್ಲ!'

'ಹಿಡಿದಿದೆಯಲ್ಲ ಒಂದು ಭಾರಿ ಹುಚ್ಚು—ಸಿನಿಮಾ ಹುಚ್ಚು!'

'ಬಲೆ! ಬಲೆ! ಬಹಾಳ ತೋರಿಸೋವ್ರು ನೀವು! ನೋಡೀ ನೋಡೀ ನೋಡೀ ಹುಚ್ಚು ಹಿಡಿದಿದೆ ನನಗೆ ಅಲ್ವೆ?'

'ತೋರಿಸೋಕೆ ಪುರಸತ್ತು ಎಲ್ಲಿರುತ್ತೇ ಗಿರಿಜಾ?'

'ಅವರಿವರ ಮನೆ ತಿರುಗೋಕೆ ಪುರಸತ್ತಿರುತ್ತೆ. ಸಿನಿಮಾಗೆ ಮಾತ್ರ ಇರೋಲ್ಲ!

'ಅವರಿವರ ಮನೆ ಅಂದ್ರೇನೇ? ಪಾಪ. ಏನೂ ತಿಳಿಯದ ಬಡ ಕೂಲಿಕಾರರು ಅವರು. ಅವರ ಸುಖದುಃಖ ತಿಳಿದುಕೊಂಡು ಸಂಘಟನೆ ಮಾಡಬೇಡವೇ?'

'ಏನು ಸುಖವೊ! ಏನು ದುಃಖವೊ! ಮೊದಲು ಯುದ್ಧ ಯುದ್ಧ ಅಂತಿದ್ದಿರಿ· ಈಗ ಯುದ್ಧ ಮುಗಿದು ವರ್ಷವಾಗ್ತಾ ಬಂತು. ಇನ್ನೂ ಮೊದಲಿನ ಹಾಡೇ ಹಾಡ್ತೀರಲ್ಲ!'

'ಯುದ್ಧ ಮುಗೀತು ಅಂತ ಯಾರು ಹೇಳಿದರು ಗಿರಿಜಾ?'

'ನೀವೇ ಹೇಳಿದಿರಲ್ಲ ಒಮ್ಮೆ! ಅವತ್ತು ಎರಡು ದಿನ ರಜಾ ಬಂದಿರಲಿಲ್ಲೇನು ವಿಜಯೋತ್ಸವಕ್ಕೇಂತ?'

'ವಿಜಯೋತ್ಸವ ಅಲ್ಲ ಅದು ಗಿರಿಜಾ! ಮತ್ತೊಂದು ಯುದ್ಧದ ಪ್ರಾರಂಭೋ-ತ್ಸವ. ಮುಗಿದ ಯುದ್ಧಕ್ಕಿಂತ ಭಾರಿ ಯುದ್ಧ ಇದು. ಬಡವರ ಯುದ್ಧ! ಕೂಲಿ ಕಾರರ ಯುದ್ಧ! ರೈತರ ಯುದ್ಧ! ಈ ಯುದ್ಧ ನಡೆದಿರೋದು ಹೊಟ್ಟೆಗಾಗಿ! ಅನ್ನ ಕ್ಕಾಗಿ! ಒಂದು ಮುಷ್ಟಿ ಮುದ್ದೆಗಾಗಿ! ಒಂದು ತಟ್ಟೆ ಎಸರಿಗಾಗಿ! ಸಾವಿರಾರು ಜನ ಬಡಪಾಯಿಗಳು ಇಲ್ಲಿ-ಈ ಕಾಡುಗೋಡಿಯಲ್ಲಿ ಹೊಟ್ಟೆಯ ಹೋರಾಟ ನಡೆಸಿದಾರಲ್ಲ ಗಿರಿಜಾ! ಅವರ ಗೋಳಿನ ಕೂಗು ನನ್ನನ್ನು ಹುಚ್ಚನನ್ನಾಗಿ ಮಾಡಿದೆ! ಅಂತೇ ಭಾನುವಾರ ಬರುತ್ತಲೂ ಅವರ ಮನೆಗಳಿಗೆ ಹೋಗುತ್ತೇನೆ. ಅವರ ಹೋರಾಟದ ಕತೆ ಕೇಳುತ್ತೇನೆ. ನನ್ನ ಕೈಲಾದ ಸೇವೆ ಮಾಡುತ್ತೇನೆ........'

'ಸಾಕು ಸಾಕು ನಿಮ್ಮ ಪುರಾಣ! ನಾನು ಸಿನಿಮಾ ಅನ್ನುತ್ತಲೂ ಸುರು ವಾಗುತ್ತೆ ನಿಮ್ಮ ಲೆಕ್ಚರು!'

'ಲೆಕ್ಚರಲ್ಲ ಗಿರಿಜಾ ಇದು! ಹೃದಯದಿಂದ ನೇರವಾಗಿ ಹೊರಡುವ ಉದ್ಗಾರ ಇದು! ನನ್ನ ಹೃದಯ—ನನ್ನ ಮಾತು ನಿನಗೆ ಹೇಗೆ ಅರ್ಥವಾದೀತು ? ನೀನು ಇನ್ನೂ ಕೊಂಚ ಓದಿದ್ದರೆ? ಓದಿದ್ದರೆ........?'

'ನೀವು ಓದಿ ಅಮುಲ್ದಾರಿ ಮಾಡ್ತಾ ಇರೋದನ್ನ ನೋಡಲಿಲ್ಲವೇ ನಾನು ? ಎಸೆಸೆಲ್ಸಿ ಆದರೂ ಈ ಕೂಲಿ ಕೆಲಸಕ್ಕೆ ಬಂದು ಸೇರಿದ್ದೀರಲ್ಲ!'

'ಅಮುಲ್ದಾರ ಆಗೋದಕ್ಕಿಂತ ಕೂಲಿ ಆಗೋದು ಸಾವಿರ ಪಾಲಿಗೆ ವಾಸಿ ಗಿರಿಜಾ! ನಿನಗದು ತಿಳಿಯೋದಿಲ್ಲ!'

'ಹೌದು ಕಣ್ರೀ! ನನಗೆ ತಿಳಿಯೋಲ್ಲ! ನನಗೆ ತಲೇನೇ ಇಲ್ಲ! ಒಳಗಡೆ ಇರೋದು ಬರೀ ಆಲೂಗಡ್ಡೆ. ಹೀಗೇ ಅಲ್ವೇ ನೀವು ಹೇಳೋದು!'

'ಏನಂದಿ? ಆಲೂಗಡ್ಡೇನೇ? ಬಹಳ ಒಳ್ಳೇದಾಯ್ತು. ಇಷ್ಟು ದಿನ ಯಾಕೆ ಹೇಳಲಿಲ್ಲ ನನಗೆ? ಸರಿ. ತೆಗೆದುಬಿಟ್ಟು ಬೆಳಿಗ್ಗೆ ಪಲ್ಯ ಮಾಡಿಬಿಡು. ಆಲೂಗಡ್ಡೆ ಪಲ್ಯ ತುಂಬ ರುಚಿ. ನಿನ್ನ ತಲೇಲಿ ಬೆಳದಿರೋದು ಅಂದಮೇಲೆ ಇನ್ನೂ ರುಚಿ ಕಟ್ಟಾಗಿದ್ದೀತು!'

'ಶುರು ಮಾಡಿದ್ರು ತಮಾಷೆಗೆ! ಬಹಾಳ ಜಾಣರು ಕಣ್ರೀ ಮಾತು ಕೊರಳಿ ಸೋದ್ರಲ್ಲಿ!' ಎನ್ನುತ್ತಾ ಆಕೆ ಅವನ ಕೆನ್ನೆ ಚಿವುಟುತ್ತಾಳೆ. ತನಗರಿಯದಂತೆಯೇ ಅವಳ ನಗೆ ಹೂ ಅರಳುತ್ತದೆ. ಕಂಗಳಲ್ಲಿ ಪ್ರಣಯಭಾವ ಚಿಮ್ಮುತ್ತದೆ. ಕೆನ್ನೆಗೆ ರಕ್ತವೇರುತ್ತದೆ. ಆಗ ಆಕೆಯೇ ಸೋತು ಹೋಗುತ್ತಾಳೆ. ಆ ಕ್ಷಣಕ್ಕಂತೂ ಅವರ ಯುದ್ಧ ಮುಗಿದು ಒಪ್ಪಂದವಾಗುತ್ತದೆ. ನಲ್ಲನಲ್ಲೆಯರ ದೃಢಾಲಿಂಗನದಲ್ಲಿ ಶಾಂತಿ ಮೊಗದೋರುತ್ತದೆ.

೨

ಆ ಶನಿವಾರ ಸಾಯಂಕಾಲ ಸಿದ್ಧರಾಮು ಮನೆಗೆ ಬಂದಾಗ ಗಿರಿಜಾ ಹೆಳಲು ಹಾಕಿ ಹೂ ಮುಡಿದುಕೊಂಡು ನಗುನಗುತ್ತ ನಿಂತಿದ್ದಳು ಅವನ ಬರವನ್ನೇ ಎದುರು ನೋಡುತ್ತ.

ಬಟ್ಟೆ ತೆಗೆದುಹಾಕಿ, ಮುಖ ತೊಳೆದುಕೊಂಡು ಆತ ಹಾಸುಗೆಗೊರಗಿ ಕುಳಿತುಕೊಂಡ. ಯಾವದೋ ಒಂದು ಪತ್ರಿಕೆಯನ್ನೆತ್ತಿಕೊಂಡು ಓದಲಾರಂಭಿಸಿದ.

ಎಂದೂ ಇಲ್ಲದೆ ಗಿರಿಜಾ ಅಂದು ಕಾಫಿ ಮಾಡಿರಿಸಿದ್ದಳೇನೋ! ಒಂದು ಲೋಟ ದಲ್ಲಿ ಅದನ್ನು ತುಂಬಿಕೊಂಡು ಅವನ ಬಳಿ ಬಂದಳು.

'ರೀsss !'

ಪತ್ರಿಕೆಯ ಮೇಲಿನ ದೃಷ್ಟಿಯನ್ನು ಕದಲಿಸದೆ ಆತ 'ಏನೇ?' ಎಂದ

ಒಡನೆಯೇ ಆ ಪತ್ರಿಕೆಯನ್ನು ಕಿತ್ತುಕೊಂಡು ಮೂಲೆಯಲ್ಲಿಟ್ಟು ಗಿರಿಜಾ 'ಬಲೆ ಓದೋದು ನೀವು ಬಿಡಿ! ಈ ಕಾಫೀನಾದ್ರೂ ಕುಡೀರಿ!' ಎಂದಳು.

'ಕಾಫಿ? ಅದೇನೇ ಇಂದು ಇಷ್ಟು ಸಡಗರ?'

'ಸಡಗರಾನೂ ಇಲ್ಲ. ಗಿಡಗರಾನೂ ಇಲ್ಲ. ಆಚೆಮನೇ ದೇವಮ್ಮನ ಗಂಡ ಮೈಸೂರಿಗೆ ಹೋಗಿದ್ದರಂತೆ. ಒಳ್ಳೆ ಕಾಫಿಪುಡಿ ತಂದಿದ್ದರಂತೆ. ಸ್ವಲ್ಪ ಕೊಟ್ಟಳು. ವಾಸನೆ ಚೆನ್ನಾಗಿದೆ. ಇಂದೇ ಕುಡೀಲಿ ಅಂತ ಮಾಡಿದ್ದೆ.'

'ದೇವಮ್ಮ?'

'ಆ ಸೂಪರ್‌ವೈಜರ್ ಇಲ್ವೆ? ಅವರ ಹೆಂಡತಿ'

'ಸೂಪರ್‌ವೈಜರ್?'

'ನಿಮಗೆ ಕೂಲಿಕಾರರೆಲ್ಲಾ ಗೊತ್ತು. ಸೂಪರ್‌ವೈಜರ್ ಮಾತ್ರ ಗೊತ್ತಿಲ್ಲ!'

'ಹೇಗೆ ಗೊತ್ತಾಗಬೇಕು ಹೇಳು ಗಿರಿಜಾ! ಅವರು ಹೆಚ್ಚು ಸಂಬಳ ಪಡೆ ಯೋರು. ಡಿಪೋನಲ್ಲಿ ಅವರು ಹೇಳಿದ ಹಾಗೆ ಕೆಲಸ ಮಾಡಬೇಕಾಗುತ್ತೆ ನಾವು. ಅವರ ಜತೆ ಸ್ನೇಹ ಮಾಡೋಕಾಗುತ್ತೇನೇ ನಮಗೆ?'

'ಎಲ್ಲಾ ಆಗುತ್ತೆ. ನಿಮಗೆ ಮೊದಲು ಮನಸ್ಸಿರಬೇಕಲ್ಲ! ಅವರು ಗಂಡಹೆಂಡಿರು ಎಷ್ಟು ನೆಮ್ಮದಿಯಿಂದಿದ್ದಾರೆ! ವಾರಾವಾರಾ ಬೆಂಗಳೂರಿಗೆ ಹೋಗೋದು ತಪ್ಪೋದಿಲ್ಲ. ಅಂದ ಹಾಗೆ ಮನ್ನೆ ದೇವಮ್ಮ ಹೊಸ ಸೀರೆ ಒಂದನ್ನ ಕೊಂಡು ತಂದಿದ್ದಾಳೆ. ನೂರಿ ಪ್ಪತ್ತು ರೂಪಾಯಿಯಂತೆ. ಬಹಳ ಚಂದಾಗಿದೆ ಕಣ್ರೀ ! ನಯವಾದ ರೇಷ್ಮೆ ಕಲಾಬತ್ತಿಂದು.'

ಪತ್ನಿಯ ವಿಚಾರಧಾರೆ ಯಾವ ಕಡೆ ಹೊರಳುತ್ತಿದೆಯೆಂಬುದರ ಅರಿವಾಯಿ ತೇನೊ ಅವನಿಗೆ! ನೊಂದ ದನಿಯಲ್ಲಿ ನುಡಿದ.

'ಅವರ ಸೀರೆಯ ವಿಚಾರ ನನಗೆ ಹೇಳಬೇಡ ಗಿರಿಜಾ ! ನನ್ನ ತಲೆ ಕೆಟ್ಟು ಹೋಗುತ್ತೆ!'

ಆ ನೊಂದ ನನಿ, ಅದರಲ್ಲಿ ಅವಿತಿದ್ದ ಆ ಆಳವಾದ ವೇದನೆ ಅವಳಿಗೆ ಅರ್ಥ ವಾಗಲಿಲ್ಲ—ಹೇಳಿದಳು.

'ಅಂಥಾದನ್ನು ನನಗೆ ತಂದುಕೊಡೋ ಯೋಗ್ಯತೆ ಅಂತೂ ನಿಮಗಿಲ್ಲ! ಇನ್ನು ಅವರು ಉಡುತ್ತಾರೆ ಅಂತ ಹೊಟ್ಟೆ ಉರಿಯೇಕೋ?'

'ಹೊಟ್ಟೆ ಉರಿ ಅಲ್ಲ ಅದು ಗಿರಿಜಾ! ನಿನಗರ್ಥವಾಗುವದಿಲ್ಲ. ನಾವು ಬಡವರು ಅವರು ಶ್ರೀಮಂತರು. ನನಗೆ ಬರೋದು ನಲವತ್ತು ರೂಪಾಯಿ, ಅವರಿಗೆ ಬರೋದು ಎರಡು ನೂರು ರೂಪಾಯಿ. ಒಂದೇಕೆ ಹತ್ತು ಸೀರೆಗಳನ್ನೂ ಕೊಂಡಾರು ಅವರು. ನನಗೆ ಬರೋ ನಲವತ್ತು ರೂಪಾಯಿನಲ್ಲಿ ಹೊಟ್ಟೆ ತುಂಬಿಕೊಳ್ಳೋದೇ ಕಷ್ಟ. ನಿನಗೂ ಗೊತ್ತೇಇದೆಯಲ್ಲ! ಇನ್ನು ಅಂಥ ಸೀರೆಯ ವಿಚಾರ ಮಾತನಾಡೋದು ತಪ್ಪಲ್ವೆ? ಅಂಥ ರೇಷ್ಮೆ ಸೀರೆಯನ್ನು ಕಣ್ಣಿಂದ ನೋಡೋದಕ್ಕೂ ಅಧಿಕಾರವಿಲ್ಲ ನಮಗೆ. ಹತ್ತು ರೂಪಾಯಿನ ಸೀರೆಗಳಲ್ಲೇ ನಾವು ತೃಪ್ತಿಪಟ್ಟುಕೊಳ್ಳಬೇಕು....'

'ಏನು ತೃಪ್ತಿಯೋ! ಏನು ಕತೆಯೋ! ಮದುವೆಯಲ್ಲಿ ತಂದದ್ದೆಷ್ಟೋ ಅಷ್ಟೆ. ಅಂದಿನಿಂದ ಹತ್ತು ರೂಪಾಯಿನ ಸೀರೇನಾದ್ರೂ ಒಂದಾದ್ರೂ ತಂದಿದೀರಾ?' ಎಂದಳಾಕೆ.

'ಎಲ್ಲಿಂದ ತರಲಿ? ದುಡ್ಡು ಉಳಿದರೆ ತಾನೇ ತರೋದು? ಅಕ್ಕಿ, ಬೇಳೆ, ಕಾಳು, ಸೌದೆ ಎಲ್ಲಾ ಒಂದಕ್ಕೆರಡು ಬೆಲೆ. ಹೊಟ್ಟೆ ತುಂಬೋದೆ ಕಷ್ಟ. ನನಗಾದರೂ ಬಟ್ಟೆಗಳಿವೆಯೇನೆ? ಇರೋದು ಎರಡು ಶರಟು. ಅವೂ ಹರಿದು ಚಿಂದಿಯಾಗಿವೆ. ಇಲ್ಲಿ ನೋಡಿಲ್ಲಿ....'ಎಂದು ವಿಷಾದದಿಂದ ಹೇಳುತ್ತ ಸಿದ್ಧರಾಮು ಎದೆಯಮೇಲೆ ಹರಿದಿದ್ದ ಭಾಗವನ್ನು ತೋರಿಸಿದ.

'ನೀವೇನು ಮಾಡೀರಿ ? ನನ್ನ ಅದೃಷ್ಟ. ಒಂದು ಒಳ್ಳೇ ಸೀರೆ ಉಡೋ ಭಾಗ್ಯವೂ ನನಗಿಲ್ಲ. ಒಂದು ಸಿನಿಮಾ ನೋಡೋ ಭಾಗ್ಯವೂ ಇಲ್ಲ. ಪಕ್ಕದ ಮನೆಯವರೆಲ್ಲ ವಾರಕ್ಕೊಂದು ಬಾರಿ ನೋಡಿಕೊಂಡು ಬರ್ತಾರೆ. ನನಗೆ ವರ್ಷಕ್ಕೊಂದು ಬಾರಿಯಾದರೂ........' ಎಂದು ಹೇಳುತ್ತಿದ್ದ ಹಾಗೇ ಅವಳಿಗೆ ಅಳವುಕ್ಕಿ ಬಂತು. ಸೆರಗಿನಲ್ಲಿ ಮುಖ ಮುಚ್ಚಿಕೊಂಡು ಅಡಿಗೆ ಮನೆಗೆ ಹೊರಟುಬಿಟ್ಟಳು.

ವೇದನಾಪೂರ್ಣ ದೃಷ್ಟಿಯನ್ನು ಸಿದ್ಧರಾಮು ಕಾಫಿಯ ಕಡೆಗೆ ತಿರುಗಿಸಿದ. ಅದು ಆರಿಹೋಗಿತ್ತು. ಲೋಟ ಎತ್ತಿ ಕಿಟಕಿಯಲ್ಲಿ ಬಾಗಿಸಿದ.

ಚರಂಡಿಯ ಕೊಳಚೆಯೊಂದಿಗೆ ಹರಿದುಹೋಯಿತು ಕಾಫಿ.

೩

ತಿಗಣೆಯೊಂದು ಬಲವಾಗಿ ಕಚ್ಚಿ ಸಿದ್ಧರಾಮುನನ್ನು ಎಚ್ಚರಗೊಳಿಸಿತು. ಕಣ್ದೆರೆದು ನೋಡಿದ. ಭಾನುವಾರದ ಬೆಳಗು ಅವನನ್ನು ಸ್ವಾಗತಿಸುತ್ತಿತ್ತು.

ಪಕ್ಕದಲ್ಲಿ ಗಿರಿಜಾ ಇನ್ನೂ ಗಾಢ ನಿದ್ರೆಯಲ್ಲಿ ತಲ್ಲೀನಳಾಗಿದ್ದಳು. ಎಂಥ ವಿಲಕ್ಷಣ ನಿದ್ರೆ ಅದು ಬೆಳಗಿನ ಜಾವದ್ದು! ಬಲಗಡೆ ಮಗ್ಗುಲಾಗಿ ಮಲಗಿದ್ದಳಾಕೆ. ತುಟಿಗಳೆರಡೂ ತೆರೆದಿದ್ದವು. ಅವುಗಳೊಳಗಿನ ನಸು ಹಳದಿ ಬಣ್ಣದ ದಂತಪಂಕ್ತಿ ಅಸ್ಫುಟವಾಗಿ ಕಾಣುತ್ತಿತ್ತು. ತುಟಿಗಳ ಮೂಲೆಯಿಂದ ಮುಖರಸ ಸೋರುತ್ತಿತ್ತು. ಬಲಗೈ ಗೋಡೆಯ ಮೇಲೊರಗಿಕೊಂಡಿತ್ತು. ಉದ್ದವಾದ ಜಡೆ ತಲೆದಿಂಬಿನಿಂದಿಳಿದು ಈಚೆ ಬಂದು ಬಿದ್ದಿತ್ತು. ಅದರ ಕೊನೆಗೆ ಕಟ್ಟಿದ್ದ ಬಣ್ಣಬಣ್ಣದ ಆ ಟೇಪು!- ಅವನಿಗೆ ನಗೆ ಬಾರದಿರಲಿಲ್ಲ. ಎಂಥ ಮಾಟಗಾತಿ ಈ ನಿದ್ರೆ!- ಎಂದುಕೊಂಡು ಮೆಲ್ಲನೆ ಬಾಗಿ ಅವಳ ಸೀರೆಯ ಸೆರಗಿನಿಂದ ಮುಖರಸವನ್ನೊರಸಿದ. ಹಣೆಯ ಮೇಲೆ ಬಂದಿದ್ದ ಮುಂಗುರುಳುಗಳನ್ನೆತ್ತಿ ಹಿಂದೆ ಹಾಕಿದ. ಕೆನ್ನೆಗಳನ್ನೊರಸಿ ಒಂದು ಬಾರಿ ಅವುಗಳ ಮೇಲೆ ತುಟಿ ಒತ್ತಿದ. ಎಷ್ಟು ಮುದ್ದಾಗಿ ಕಾಣಿಸುತ್ತಿದ್ದಳು ಗಿರಿಜಾ ಆಗ! ಪುಟ್ಟದೊಂದು ಮಗುವಿನ ಹಾಗೆ! ಹೌದು. ಮಗುವಿನ ಹಾಗೆ! ನಿನ್ನೆ ತಾನು ಆ ರೀತಿ ಮಾತನಾಡಿದುದರಿಂದ ಎಷ್ಟು ನೊಂದುಕೊಂಡಿದಾಳೊ ! ಎಂಥ ನಿಷ್ಠುರಿ ತಾನು. ತನ್ನ ಕೈಹಿಡಿದು ಏನು ಸುಖಪಡಬೇಕು ಈ ಮುಗ್ಧೆ? ಜೀವನದ ಕಠೋರ ಹೋರಾಟ ಅವಳಿಗರ್ಥವಾಗದು. ಅದಕ್ಕೆ ಅವಶ್ಯವಾದ ಶಿಕ್ಷಣವೂ ದೊರೆತಿಲ್ಲ ಅವಳಿಗೆ. ಪ್ರಪಂಚದ ಅನುಭವವೂ ಇಲ್ಲ. ತನ್ನ ವಿಚಾರಗಳೊಂದಿಗೆ ಅವಳು ಸಮರಸವಾಗದಿರುವಲ್ಲಿ ಅವಳ ತಪ್ಪೇನೂ ಇಲ್ಲ........

ಅವನ ಮನಸ್ಸು ಏನೋ ನಿರ್ಧಾರಕ್ಕೆ ಬಂದಂತಾಯಿತು. ಇಂದು ತನ್ನ ಹತ್ತಿರ ಮೂರು ರೂಪಾಯಿ ಇದೆ—ಸಂಬಳ ಬರುವದಕ್ಕೆ ಇನ್ನೂ ಎಂಟು ದಿನ. ಪರವಾಯಿಲ್ಲ. ಇಂದು ಈ ಮೂರು ರೂಪಾಯಿಯೂ ಖರ್ಚಾಗಿ ಹೋಗಲಿ. ಒಲವಿನ ಈ ಜೀವಕ್ಕೆ ಇಷ್ಟು ಸಂತೋಷವಾದರೂ ಆಗಲಿ. ಇವತ್ತು ಅವಳ ಆಸೆಯನ್ನು ಪೂರೈಸಿಯೆ ಬಿಡೋಣ ಎಂದುಕೊಂಡು ಅವಳ ಗದ್ದವನ್ನು ಹಿಡಿದು ಮೆಲ್ಲನೆ ಅಲುಗಾಡಿಸಿದ.

'ಏಳು ಗಿರಿಜಾ! ಏಳು! ಏಳು ನನ್ನ ರಾಣೀ! ಏಳು! ಏಳು! ಬೆಳಗಾಯಿತು!' ಎಂದ.

ಕಣ್ಣುಜ್ಜಿಕೊಳ್ಳುತ್ತ ಅವಳು ಎದ್ದು ಕುಳಿತಳು.

'ಬೇಗ ಬೇಗ ಅನ್ನ ಸಾರು ಮಾಡಿಬಿಡು. ಊಟಮಾಡಿಬಿಟ್ಟು ಬೆಂಗಳೂರಿಗೆ ಹೋಗೋಣ. ಇಂದು ಖಂಡಿತವಾಗಿಯೂ ಸಿನಿಮಾ ನೋಡಿಸ್ತೇನೆ ನಿನಗೆ!' ಎಂದ ಸಿದ್ಧರಾಮು.

ಅವನ ಮೈಯ ಸುತ್ತ ತನ್ನ ತೋಳು ಹೆಣೆಯುತ್ತ ಆನಂದದಿಂದ ಕೇಳಿದಳಾಕೆ.

'ಹೌದೇ? ನಿಜವಾಗಲೂ?'

'ಇನ್ನೂ ಸಂಶಯವೇನೇ ನಿನಗೆ—ನನ್ನ ಬೆಪ್ಪು ಹುಡುಗೀ?'

'ನಂಬೋದೇ ಕಷ್ಟ ಅಮ್ಮಾ ನಿಮ್ಮ ಮಾತನ್ನ! ಇಂದೇನೋ ಸೂರ್ಯ ಉತ್ತರದಲ್ಲಿ ಹುಟ್ಟಿರಬೇಕು.' ಎಂದು ನಗುತ್ತ ಆಕೆ ಎದ್ದುಬಿಟ್ಟಳು.

ಅಡಿಗೆ ಮಾಡುವಾಗ ಅವಳ ಸಡಗರವೋ ಸಡಗರ! ಒಲೆಯ ಮೇಲೆ ಅನ್ನ ಕುದಿಯುತ್ತಿದ್ದ ಹಾಗೆ ಸಬಕಾರ ಹಚ್ಚಿ ಮುಖ ತೊಳೆದುಕೊಂಡಳು. ಜಡೆ ಹಾಕಿ ಟೇಪು ಕಟ್ಟಿಕೊಂಡಳು. ರಾತ್ರಿ ನೀರಿನಲ್ಲಿ ತೋಯಿಸಿ ಬಟ್ಟೆಯಲ್ಲಿ ಕಟ್ಟಿ ಇಟ್ಟಿದ್ದ ಕೆಂಪು ಹೂ ಮುಡಿದುಕೊಂಡಳು. ಕುಂಕುಮ ಇಟ್ಟುಕೊಂಡಳು. ಟ್ರಂಕಿನಲ್ಲಿದ್ದ ನಾಲ್ಕು ಸೀರೆಗಳನ್ನು ಹೊರದೆಗೆದು ಯಾವುದನ್ನುಡುವುದು—ಎಂದು ಹದಿನೈದು ನಿಮಿಷ ಯೋಚಿಸಿದಳು. 'ರೀssss, ಯಾವುದನ್ನುಟ್ಟುಕೊಳ್ಳಲಿ ಹೇಳ್ರೀssss' ಎಂದು ಪತಿಯ ಸಲಹೆಯನ್ನೂ ಕೇಳಿದಳು. 'ಯಾವುದನ್ನಾದರೂ ಉಟ್ಟುಕೊಂಡುಬಿಡು ಎಂಥದು ಉಟ್ಟರೂ ನೀನು ಚೆಂದಾಗಿಯೇ ಕಾಣುತ್ತೀಯ!' ಎಂದು ಆತ ಉತ್ತರವಿತ್ತ. ಕೊನೆಗೆ ಬಿಳಿಯ ವಾಯಲ್ ಸೀರೆಯೆ ಸರಿಯೆಂದು ನಿಶ್ಚಯಿಸಿ ಉಟ್ಟುಕೊಂಡು ಬಿಳಿಯ ರವಕೆ ತೊಟ್ಟುದೂ ಆಯಿತು. ಮೂರುನಾಲ್ಕು ಸಲ ಕನ್ನಡಿಯಲ್ಲಿ-ಹೌದು- ಅರ್ಧ ಒಡೆದ ಕನ್ನಡಿಯಲ್ಲಿ-ಮುಖ ನೋಡಿಕೊಂಡು, ಕೆನ್ನೆ ಉಜ್ಜಿಕೊಂಡು ಕುರುಳು ತಿದ್ದಿಕೊಂಡು, ಹುಬ್ಬು ತೀಡಿಕೊಂಡು, ಮೂಗು ಒರೆಸಿಕೊಂಡು ತನ್ನಷ್ಟಕ್ಕೆ ತಾನೇ ನಕ್ಕು—ಅನ್ನ ಹೊತ್ತಿಕೊಂಡ ವಾಸನೆ ಬರುತ್ತಲೂ ಅವಸರದಿಂದ ಓಡಿಹೋಗಿ ಅದನ್ನಿಳಿಸಿದ್ದಾಯಿತು. ಅವಳ ಚಲನವಲನಗಳನ್ನೆಲ್ಲ ಕೌತುಕದಿಂದ ನಿರೀಕ್ಷಿಸುತ್ತ ಕೊಟಡಿಯಲ್ಲಿ ಕುಳಿತಿದ್ದ ಸಿದ್ಧರಾಮು. ಅವನ ಸಿದ್ಧತೆಯೇನೂ ಇರಲಿಲ್ಲ. ಸೂಟು ಹಾಕಿ, ಬೂಟು ಧರಿಸಿ ಹೊರಡಬೇಕಾದರೆ ಸಿದ್ಧತೆ ಬೇಕು. ಅಂಗಿ ತೊಟ್ಟು, ಪಂಚೆ ಉಟ್ಟು ಹೊರಡಲು ಎಂಥ ಸಿದ್ಧತೆ?

ಊಟ ತೀರಿಸಿಕೊಂಡು ಪ್ಲಾಟ್‌ಫಾರ್ಮಿಗೆ ಬಂದುದೂ ಆಯಿತು. ಅವಸರದಿಂದ ಟಿಕೆಟ್ ಕೊಂಡುಕೊಂಡು ಪ್ಲಾಟ್‌ಫಾರ್ಮಿಗೆ ಬಂದರು.

'ಅದೋ! ದೇವಮ್ಮನೂ ಬಂದಿದ್ದಾಳೆ ನೋಡಿ. ಅವರೂ ಹೊರಟಂತೆ ಕಾಣುತ್ತೆ ಸಿನಿಮಾಕ್ಕೆ?'

ಸಿದ್ಧರಾಮು ಅತ್ತ ಹೊರಳಿದ. ದೇವಮ್ಮ! ಅವಳನ್ನಾತ ನೋಡಿದ್ದು ಇದೇ ಮೊದಲನೆಯ ಸಲ. ಭಾರಿ ಬೆಲೆಯ ರೇಷ್ಮೆ ಸೀರೆ ಉಟ್ಟಿದ್ದಾಳೆ. ರೇಷ್ಮೆ ರವಕೆ ತೊಟ್ಟಿದ್ದಾಳೆ. ಕಿವಿಗಳಲ್ಲಿ ಕೆಂಪಿನ ಲೋಲಾಕು ಇಟ್ಟಿದ್ದಾಳೆ. ಕತ್ತಿನಲ್ಲಿ ಚಿನ್ನದ ಹಾರ ಹಾಕಿ ಕೈಗಳಲ್ಲಿ ಚಿನ್ನದ ಬಳೆ ತೊಟ್ಟಿದ್ದಾಳೆ. ಬೆರಳುಗಳಲ್ಲಿ ರತ್ನದುಂಗುರ

ಗಳಿವೆ. ಕಾಲಿಗೆ ಹೊಳಪಿನ ಪೂಸು! ಮುಖದ ಮೇಲೆಲ್ಲ ಪೌಡರಿನ ತೆರೆ! ತುಟಿಗಳಲ್ಲಿ ಬಿಂಕದ ನಗೆ! ತಿಂಗಳಿಗೆ ಇನ್ನೂರು ರೂಪಾಯಿ ಸಂಪಾದಿಸುವ ಸೂಪರ್‌ವೈಜರ್ ಪತ್ನಿ ತಾನು-ಎಂಬುದನ್ನು ಸೂಚಿಸಲೆತ್ನಿಸುವಂಥ ದೃಷ್ಟಿ!

ಪಕ್ಕದಲ್ಲೇ ನಿಂತಿದ್ದ ಅವಳ ಕೈಹಿಡಿದ ಮಹಾನುಭಾವ-ಆಗತಾನೆ ಯೂರೋಪಿನಿಂದ ಮರಳಿದವರಂಥ ವೇಷದಲ್ಲಿ. ಮ್ಯಾಂಚೆಸ್ಟರ್ ಸರ್ಜಿನ ಸೂಟು, ಟೈ, ಕಾಲರ್, ಹ್ಯಾಟು; ಬೆಳಕು ಬೀರುವ ಬೂಟು. ಬಿಂಕದಿಂದ ಸೆಟೆದು ನಿಂತ ಕತ್ತು!

ಸಿದ್ಧರಾಮನ ದೃಷ್ಟಿ ಆ ದಂಪತಿಗಳಿಂದ ಹೊರಳಿ ತಮ್ಮಿಬ್ಬರನ್ನು ನೋಡಿಕೊಂಡಿತು. ಆ ಸೂಪರ್‌ವೈಜರ್ ಮಹಾಶಯನ ಸೂಟು—ಬೂಟು; ತನ್ನ ಶರ್ಟು-ಪಂಚೆ, ಅವನ ಪತ್ನಿಯ ರೇಷ್ಮೆ ಸೀರೆ, ತನ್ನ ಪತ್ನಿಯ ಸಾದಾ ಸೀರೆ, ಅವಳ ಕತ್ತಿನಲ್ಲಿನ ಚಿನ್ನದ ಹಾರಗಳು, ಇವಳ ಕತ್ತಿನಲ್ಲಿದ್ದ ಕರಿಮಣಿಗಳು, ಅವಳ ಚಿನ್ನದ ಬಳೆ, ಇವಳ ಗಾಜಿನ ಬಳೆ, ಅವಳ ರತ್ನದುಂಗುರದ ಬೆರಳು, ಶೂ ಮೆಟ್ಟಿದ ಕಾಲು— ಇವಳ ಬೆರಳೂ ಬರಿಯವು— ಕಾಲೂ ಬರಿಯವು........

ಈ ಬಗೆಯ ತುಲನೆ ಸರಿಯಲ್ಲ-ಸರಿಯಲ್ಲ ಎಂದು ಎಷ್ಟು ಹೇಳಿದರೂ ಕೇಳಲಿಲ್ಲ ಮನಸ್ಸು. ಮತ್ತೆ ಮತ್ತೆ ಆ ವೈಷಮ್ಯದ ಭಾವನೆಯೆ ಎದೆಯನ್ನು ಕಲಕುತ್ತಿತ್ತು. ಅವರೂ ಸಿನಿಮಾಗೆ ಹೋಗುತ್ತಿದ್ದಾರೆ—ನಾವೂ ಸಿನಿಮಾಗೆ ಹೋಗುತ್ತಿದ್ದೇವೆ. ಆದರೆ ಅವರ ಸ್ಥಿತಿಗೂ ನಮ್ಮ ಸ್ಥಿತಿಗೂ ಎಷ್ಟು ವ್ಯತ್ಯಾಸ! ಆ ಸೂಪರ್‌ವೈಜರ್ ಅಮ್ಮನೆದುರಿಗೆ ಎಷ್ಟು ದೀನೆಯಾಗಿ ಕಾಣುತ್ತಾಳೆ ನನ್ನ ಗಿರಿಜಾ! ಆಕೆಗಿಂತಲೂ ಚೆಲುವೆ ಈಕೆ. ಆದರೆ........

ಧಾವಿಸುತ್ತ ಬಂತು ಉಗಿಬಂಡಿ. ಒಂದು ಡಬ್ಬಿಯಲ್ಲೂ ಸ್ಥಳವಿರಲಿಲ್ಲ. ಗಂಡಸರು, ಹೆಂಗಸರು, ಹುಡುಗಿಯರು, ಕೂಸುಗಳು ! ಕಾಲಿಟ್ಟುಕೊಂಡು ನಿಂತಿರಲೂ ಸಹ ಸಾಧ್ಯವಿರಲಿಲ್ಲ. ಬಾಗಿಲು ತೆರೆದು ಒಳಸೇರುವುದೇ ಅಸಾಧ್ಯವಾಗಿತ್ತು. ಅವುಗಳ ಮೇಲೂ ಸವಾರಿ ಮಾಡಿದ್ದರು ಜನ. ಬಾಗಿಲು ತೆಗೆಯುವುದು ಹಾಗಿರಲಿ. ಹತ್ತಿರ ಹೋದರೆ ಸಾಕು—ಆ ದ್ವಾರರಕ್ಷಕರು ಉರಿದು ಬೀಳುತ್ತಿದ್ದರು. ಕನ್ನಡ, ತೆಲುಗು ತಮಿಳು, ಹಿಂದೀ ಎಲ್ಲ ಭಾಷೆಗಳಲ್ಲೂ ಗಲಾಟೆಗಾರಂಭವಾಗುತ್ತಿತ್ತು.

ಎಲ್ಲ ಡಬ್ಬಿಗಳನ್ನೂ ಹುಡುಕಿದ್ದಾಯಿತು. ಒಂದರಲ್ಲೂ ಪ್ರವೇಶ ದೊರೆಯುವಂತಿರಲಿಲ್ಲ. ದೇವಮ್ಮನೂ ಅವಳ ಪತಿಯೂ ಇಂಟರ್ ವರ್ಗದಲ್ಲಿ ಕುಳಿತುಕೊಂಡುಬಿಟ್ಟರು. ಅಲ್ಲಿ ಹಾಯ್ದು ಹೋಗುತ್ತಿದ್ದಹಾಗೆ ದೇವಮ್ಮ ಗಿರಿಜೆಯನ್ನು ನೋಡಿದಳು.

'ನಾವೂ ಬರೋಣವೇನಮ್ಮಾ ಒಳಕ್ಕೆ?' ಎಂದಳು ಗಿರಿಜಾ.

'ಟಿಕೆಟ್ ತಕ್ಕೊಂಡಿದ್ದೀರೇನು ಇಂಟರಿನದು?' ಎಂದು ಉಪಹಾಸದಿಂದ ಹೇಳಿ ದೇವಮ್ಮ ಮುಸಿ ಮುಸಿ ನಕ್ಕಳು.

ಮುಖಭಂಗವಾಯಿತು ಸಿದ್ಧರಾಮುನಿಗೆ. 'ಇಲ್ಲಿ ಬೇಡ ಬಾ ಗಿರಿಜಾ! ನಮ್ಮ ಸ್ಥಳವಲ್ಲ ಇದು! ಅಲ್ಲಿ– ಹೆಂಗಸರ ಡಬ್ಬಿಯಲ್ಲಿ ನೀ ಕೂತಿರು. ನಾನು ಎಲ್ಲಾದರೂ ನಿಂತುಕೊಂಡಿರ್‍ತೀನೆ' ಎಂದು ಹೇಳಿ ಆ ಕಡೆ ನಡೆದ.

ಅಲ್ಲೂ ಅದೇ ಗತಿ, ಅಷ್ಟೇ ಗಲಾಟೆ. ದಪ್ಪಗಿನ ಶರೀರದ ಮದ್ರಾಸೀ ಸ್ತ್ರೀಯೊಬ್ಬಳು ಬಾಗಿಲಿಗೆ ಅಡ್ಡವಾಗಿ ಕೂತುಕೊಂಡುಬಿಟ್ಟಿದ್ದಳು. ಅವಳ ಆ ದೀರ್ಘ ಕಾಯವನ್ನು ಬದಿಗೆ ಸರಿಸಿ ಬಾಗಿಲು ತೆಗೆಯುವುದೂ ಅಸಾಧ್ಯವಾಗಿತ್ತು. ಹೇಗೋ ಪ್ರಯಾಸಪಟ್ಟು ಬಾಗಿಲ ಮೇಲಿಂದ ಗಿರಿಜಳನ್ನೇರಿಸಿ ಒಳಕ್ಕೆ ತೂರಿಸಿಬಿಟ್ಟು ಸಿದ್ಧರಾಮು ಪಕ್ಕದ ಡಬ್ಬಿಗೆ ಹೋದ. ಹತ್ತಾರು ಜನರ ಬೈಗಳ ಮಳೆಯಲ್ಲಿ ತೋಯಿಸಿ ಕೊಳ್ಳುತ್ತ ಹೇಗೋ ಒಳಕ್ಕೆ ನೆಗೆದ. 'ಉಸ್ಸಪ್ಪಾ' ಎಂದು ಒಂದು ಸಲ ದೀರ್ಘ ಉಸಿರು ಹಾಕಿ ನಿಂತುಕೊಂಡ.

ಗಾಡಿಯೂ ಉಸಿರೆಳೆಯುತ್ತ ಧಾವಿಸತೊಡಗಿತು.

ಅಷ್ಟರಲ್ಲಿ ತಿಂದ ಅನ್ನ, ಕಟ್ಟಿತಂದ ಉತ್ಸಾಹ ಅರ್ಧಕ್ಕರ್ಧ ಕರಗಿಹೋಗಿತ್ತು ಸಿದ್ಧರಾಮುನಿಗೆ.

ಬೆಂಗಳೂರು ನಗರದ ನಿಲ್ದಾಣ ಬಂತು. ಬಾಗಿಲಿನಿಂದ ಪ್ಲಾಟ್‌ಫಾರ್ಮಿಗೆ ಜಿಗಿದುಬಿಟ್ಟು ಈಚೆಗೆ ಬಂದು ಪತ್ನಿಯನ್ನು ಕರೆದುಕೊಂಡು ಹೊರಕ್ಕೆ ಬಂದ. ಓಡಾಡುತ್ತಿದ್ದವರಲ್ಲಿ ಅನೇಕರು ಬೇಕೆಂತಲೇ ಅವಳ ಮೈಗೆ ಮೈ ತಗಲಿಸಿಕೊಂಡು ಹೋಗುತ್ತಿದ್ದರು. ಅವಳೆಷ್ಟು ಎಚ್ಚರದಿಂದ ನಡೆದರೂ ಪ್ರಯೋಜನವಾಗಲಿಲ್ಲ.

'ಅದ್ಯಾಕೆ ಹೀಗೆಲ್ಲಾ ತಟ್ಟಿಕೊಂಡು ಹೋಗುತ್ತಾರೆ ಇವರು?' ಎಂದು ಬೇಸರ ದಿಂದ ಕೇಳಿದಳಾಕೆ.

'ಇದು ಬೆಂಗಳೂರಿನ ಫ್ಯಾಶನ್ ಗಿರಿಜಾ! ಬಡವರನ್ನು ಕಂಡರೆ ಎಲ್ಲಾ ಹೀಗೇ. ನಾವು ನೋಡಹೊರಟಿರುವ ಸಿನಿಮಾದಲ್ಲಿ ಮೊದಲನೇ ದೃಶ್ಯ ಇದು!' ಎಂದ ಸಿದ್ಧರಾಮು. ಅವನ ಮಾತಿನಲ್ಲಿ ಎಷ್ಟು ಅರ್ಥವಾಯಿತೋ ಅವಳಿಗೆ!

ನಿಲ್ದಾಣದ ಹೊರಗಡೆ ಬಂದಾಗ ದೇವಮ್ಮನೂ ಅವಳ ಪತಿಯೂ ಕುದುರೆ ಗಾಡಿಯಲ್ಲಿ ಹತ್ತಿ ಹೊರಡಲಣಿಯಾಗಿದ್ದುದು ಕಾಣಿಸಿತು. ಗಿರಿಜಳ ಕಡೆ ದೃಷ್ಟಿ ಹೊರಳಿಸುತ್ತಲೂ ಮತ್ತೆ ದೇವಮ್ಮ ಮುಸಿ ಮುಸಿ ನಕ್ಕಳು. ಆ ನಗೆಯ ಅರ್ಥವೇ ನೆಂಬುದನ್ನರಿತುಕೊಳ್ಳುವಷ್ಟು ಸೂಕ್ಷ್ಮ ಬುದ್ಧಿಯೆಲ್ಲಿ ಬಂದೀತು ಗಿರಿಜಾಗೆ?

'ನೋಡಿದ್ರಾ ! ಗಾಡಿ ಮಾಡ್ಕೊಂಡು ಹೊರಟಿದ್ದಾರೆ. ಎಲ್ಲಿಗೆ ಹೋಗ್ತಾ ಇದಾರೋ!' ಎಂದಳು.

'ಎಲ್ಲಿಯಾದರೂ ಹೋಗಲೇಳು. ಗಾಡಿ ಆದ್ರೂ ಮಾಡಿಕೊಳ್ಳಲಿ, ವಿಮಾ ನಾದ್ರೂ ಏರಿಕೊಳ್ಳಲಿ, ನಮಗೇನಂತೆ, ನಾವು ನಡೆದು ಹೋಗೋದೇ ಮೇಲು, ಬಾ' ಎಂದ ಸಿದ್ಧರಾಮು.

'ಎಲ್ಲಿಗೆ ಹೋಗೋದು ಈಗ?'

'ಚಿಕ್ಕ ಲಾಲ್‌ಬಾಗಿಗೆ.'

'ಲಾಲ್‌ಬಾಗ್? ದೇವಮ್ಮ ಅಲ್ಲಿಗೇ ಹೊರಟಿದ್ದಾಳೋ ಏನೋ! ಅಲ್ಲಿ ಪಾರಿವಾಳಗಳಿವೆಯಂತಲ್ಲ? ಹೌದೇನು?'

'ಇವೆಯಂತೆ. ನಾನೇನೂ ನೋಡಿಲ್ಲ. ಅದು ದೊಡ್ಡ ಲಾಲ್‌ಬಾಗ್. ನಾವೀಗ ಹೋಗೋದು ಅಲ್ಲಿಗಲ್ಲ. ಚಿಕ್ಕ ಲಾಲ್‌ಬಾಗಿಗೆ!'

'ಅಲ್ಲಿಗ್ಯಾತಕ್ಕೆ? ದೊಡ್ಡ ಲಾಲ್‌ಬಾಗಿಗೇ ಹೋಗೋಣ. ಪಾರಿವಾಳಗಳ ನ್ನಾದ್ರೂ ನೋಡಬಹುದು.'

'ದೊಡ್ಡ ಲಾಲ್‌ಬಾಗ್ ದೊಡ್ಡ ಮನುಷ್ಯರದು ಗಿರಿಜಾ! ಪಾರಿವಾಳ, ಗಿಳಿ, ಗೊರವಂಕ, ಗ್ಲಾಸ್‌ಹೌಸ್- ಎಲ್ಲಾ ಅವರದೇ! ನಾವು ಚಿಕ್ಕ ಜನ, ನಮಗೆಲ್ಲಾ ಚಿಕ್ಕ ಲಾಲ್‌ಬಾಗೇ ಸರಿಯಾದ ಸ್ಥಳ. ಈ ವೇಷದಲ್ಲಿ ನಾವು ದೊಡ್ಡ ಲಾಲ್‌ಬಾಗಿಗೆ ಹೋದರೆ ರೇಷ್ಮೆ ಸೀರೆಯುಟ್ಟುಕೊಂಡು ಶೂ ಹಾಕಿಕೊಂಡು ಅಲ್ಲಿ ತಿರುಗುವ ಥಳುಕಿನ ಹುಡುಗಿಯರು ಬಿದ್ದು ಬಿದ್ದು ನಕ್ಕಾರು. ಚಿಕ್ಕಲಾಲ್‌ಬಾಗಿನಲ್ಲಾದರೊ ಹಾಗೆ ನಗುವರಾರೂ ಇರೋದಿಲ್ಲ. ಇಲ್ಲಿಗೆ ಬರೋದು ಅಂದರೆ ಅವರ ಮರ್ಯಾದೆಗೆ ಕಡಿಮೆ. ನಮ್ಮಂಥ ಬಡವರೇ ಬರೋದು ಇಲ್ಲಿಗೆ. ಬಾ ಹೋಗೋಣ. ಮೂರೂ ವರೆಗೆ ಸಿನಿಮಾ ಸುರುವಾಗುತ್ತೆ. ಅಲ್ಲಿಯವರೆಗೆ ಮಾಡೋದೇನು? ಕೂತಿರೋಣ ವಂತೆ ತೋಟದಲ್ಲಿ........'

ತೋಟಕ್ಕೆ ಬಂದು ತಲುಪಿದರು. ಆಗಲೆ ಸೂರ್ಯ ನೆತ್ತಿಯಮೇಲೆ ಏರಿ ಬಂದಿದ್ದ. ಗಿಡಮರಗಳ ನೆರಳಿನಲ್ಲಿ ಅಲ್ಲಿ ಇಲ್ಲಿ ಅಸ್ತವ್ಯಸ್ತವಾಗಿ ಬಿದ್ದುಕೊಂಡಿತ್ತು ಬಡಜನ. ಶಿಲಾಸನವೊಂದರಮೇಲೆ ಇಬ್ಬರೂ ಕುಳಿತುಕೊಂಡರು.

ಸೆರಗಿನಿಂದ ಬೆವರನ್ನೊರೆಯಿಸಿಕೊಳ್ಳುತ್ತ ಕೇಳಿದಳು ಗಿರಿಜಾ.

'ಇನ್ನೇನು ಮಾಡೋದು?'

'ಸಿನಿಮಾ ನೋಡೋದು' ಎಂದ ಸಿದ್ಧರಾಮು, ಅರ್ಥಗರ್ಭಿತ ಸ್ವರದಲ್ಲಿ.

'ಸಿನಿಮಾ? ಈಗೆಲ್ಲಿಯ ಸಿನಿಮಾ? ಮೂರೂವರೆಗಲ್ಲವೇನು ನೀವು ಹೇಳಿದ್ದು?'

'ಮೂರೂವರೆಗೆ ನಡೆಯೋದು ನಿಜವಾದ ಸಿನಿಮಾ ಅಲ್ಲ. ಸುಳ್ಳು ಸಿನಿಮಾ! ನಿಜವಾದ ಸಿನಿಮಾ ಇಲ್ಲೇ ನಡೆದಿದೆ ನೋಡು. ನಮ್ಮ ಅಕ್ಕ ಪಕ್ಕದಲ್ಲೇ, ನಮ್ಮ ಕಣ್ಣೆದುರಿನಲ್ಲಿ!'

'ಸುರು ಮಾಡಿದ್ರೇನು ಹಾಸ್ಯಕ್ಕೆ? ಇಲ್ಲೆಲ್ಲಿದೆ ಸಿನಿಮಾ? ಈ ತೋಟದಲ್ಲಿ?'

'ಹೂಂ! ಈ ತೋಟದಲ್ಲಿ!'

'ಎಲ್ಲಿ? ಕಾಣೋದಿಲ್ಲವಲ್ಲಾ?'

'ಕಣ್ಣಿದ್ದವರಿಗೆ ಮಾತ್ರ ಕಾಣಿಸುತ್ತೆ ಅದು!'

'ಕಣ್ಣಿದ್ದವರಿಗೆ ಅಂದ್ರೆ? ಅಂದ್ರೆ ನನ್ನೇನು ಕುರುಡಿ ಅಂತ ತಿಳಕೊಂಡಿರೊ?'

'ಹೂಂ! ಕುರುಡಿಯೇ ಸರಿ- ಇನ್ನೇನು?'

'ಕಣ್ಣಿದ್ದೂ?'

'ಹೌದು, ಕಣ್ಣಿದ್ದೂ ಕುರುಡಿ ನೀನು ಗಿರಿಜಾ! ಈ ಹೊರಗಿನ ಕಣ್ಣುಗಳಿಂದ ಕಾಣಲಾರದು ಈ ಸಿನಿಮಾ! ಅದಕ್ಕೆ ಒಳಗಿನ ಕಣ್ಣು ಬೇಕು! ಜ್ಞಾನದ ಕಣ್ಣು ಬೇಕು. ಬುದ್ಧಿಯ ಕಣ್ಣು ಬೇಕು. ಸಹಾನುಭೂತಿಯ ಕಣ್ಣು ಬೇಕು.'

'ಅಂದ್ರೆ ?'

'ನಮ್ಮ ಸುತ್ತಮುತ್ತ ಏನು ನಡೆದಿದೆ, ನಮ್ಮ ದೇಶದ ಗತಿ ಏನಾಗಿದೆ, ಜನ ಯಾವ ಸ್ಥಿತಿಯಲ್ಲಿದ್ದಾರೆ, ಅವರ ಕಷ್ಟ ಸುಖ ಹೇಗಿದೆ—ಅನ್ನೋದನ್ನ ತಿಳಿದು ಕೊಳ್ಳೋ ವಿಚಾರ ಬೇಕು ನಮಗೆ ಗಿರಿಜಾ! ಅದೋ ಆ ಗಿಡದ ಕೆಳಗೆ ಒಬ್ಬ ಹೆಂಗಸು ಬಿದ್ದುಕೊಂಡಿದ್ದಾಳೆ, ಕಾಣಿಸುತ್ತೆ ತಾನೇ ನಿನಗೆ?'

'ಹೌದಲ್ರಿ! ಪಾಪ! ಯಾಕೆ ಹಾಗೆ ಬಿದ್ದುಕೊಂಡಿದಾಳೋ? ಹತ್ತಿರ ಇರೋವು ಆ ನಾಲ್ಕು ಪಿಳ್ಳೆಗಳು ಮಕ್ಕಳು ಅಂತ ಕಾಣುತ್ತೆ!'

'ಮಕ್ಕಳೇ! ಇನ್ನಾರಿದ್ದಾರು! ನೋಡು, ಆಕೆಯೂ ನಮ್ಮ ಹಾಗೆ ಮನುಷ್ಯಳೇ ನಿನ್ನ ಹಾಗೆ ಹೆಂಗಸೇ. ಮಾನ ಮರ್ಯಾದೆ ಎಲ್ಲಾ ಮರತುಬಿಟ್ಟು ಒಬ್ಬಳೇ, ಈ ಮಕ್ಕಳನ್ನು ಕಟ್ಟಿಕೊಂಡು ಈ ತೋಟಕ್ಕೆ ಬಂದು ಈ ರೀತಿ ಬಿದ್ದುಕೋಬೇಕಾದರೆ ಅವಳಿಗೆ ಯಾವ ಗತಿ ಬಂದಿದ್ದೀತು?— ಅವಳಿಗೆ ಇಂಥಾ ಸ್ಥಿತಿ ಬರಲು ಕಾರಣ ಏನು? ಅನ್ನೋ ವಿಚಾರ ನಮಗೆ ಬರಬೇಡವೇ?'

ಗಿರಿಜಾ ಮಾತನಾಡಲಿಲ್ಲ. ಅವಳ ಮನಸ್ಸಿಗೆ ಮುತ್ತಿಕೊಂಡಿದ್ದ ಮೌಢ್ಯದ ಪರದೆ ಮೆಲ್ಲಮೆಲ್ಲನೆ ಕಳಚಿಬೀಳತೊಡಗಿತ್ತು.

'ಆ ಹೆಂಗಸಿನ ಮಾತು ಹಾಗಿರಲಿ. ಈ ಕಡೆ ಎಡಗಡೆ ಆ ಬೇಲಿಯ ಹತ್ತಿರ ನೋಡು; ಹರಕು, ಹೊಲಸು ಬಟ್ಟೆ ಹಾಕಿಕೊಂಡು ಆ ನಾಲ್ಕು ಹುಡುಗರು ಹೇಗೆ ಬಿದ್ದಿವೆ ನೋಡು ಬಿಸಿಲಿನಲ್ಲೇ! ಪಾಪ! ಅವುಗಳ ವಯಸ್ಸಾದರೂ ಎಷ್ಟಿದ್ದೀತು! ಆರರಿಂದ ಏಳರ ವರೆಗೆ! ಹೆಚ್ಚಾಗಿರಲಿಕ್ಕಿಲ್ಲ. ಶಾಲೆ ಕಲಿಯೋ ವಯಸ್ಸಿದು. ಇವು ಇಲ್ಲಿ ಬಿದ್ದುಕೊಂಡಿವೆ. ಎಲ್ಲಿಯಾದರೂ ಕೂಲಿನಾಲಿ ಮಾಡೋದು—ಆರು ಕಾಸಿನ ಕಡಲೆ ಪುರಿ ತಿನ್ನೋದು, ಮುಸುರೆ ಎಲೆ ಹುಡುಕಿ ಎಂಜಲು ತಿನ್ನೋದು—ಇಲ್ಲಿ

ಬಂದು ಬಿದ್ದುಕೊಳ್ಳೋದು—ಇದೂ ಜೀವನವೇ ಗಿರಿಜಾ! ಈ ಮಕ್ಕಳೂ ಮಕ್ಕಳೇ! ನೋಡಿದರೆ ನಾಯಿಯ ಕುನ್ನಿಗಳು ಬಿದ್ದುಕೊಂಡ ಹಾಗೆ ಕಾಣಿಸೋಲ್ಲವೆ ಅವು?—ನಮ್ಮ ದೇಶದಲ್ಲಿ ನೂರಕ್ಕೆ ತೊಂಬತ್ತರಷ್ಟು ಮಕ್ಕಳ ಗತಿಯೂ ಹೀಗೇ ಆಗಿದೆ ಗಿರಿಜಾ! ನಾಯಿಯ ಕುನ್ನಿಗಳ ಹಾಗೆ. ನಾವು ನೋಡುತ್ತಿರುವ ಸಿನಿಮಾದಲ್ಲಿ ಎರಡನೇ ದೃಶ್ಯ ಇದು!........' ಎಂದ.

• ಕೆಲಕಾಲ ದಂಪತಿಗಳಿಬ್ಬರೂ ಮೌನವಾಗಿದ್ದರು. ಯಾರ ಬಾಯಿಂದಲೂ ಮಾತು ಹೊರಡುವ ಹಾಗಿರಲಿಲ್ಲ.

'ಕಳ್ಳೇಕಾಯಿ! ಕಳ್ಳೇಕಾಯಿ!'

ತಲೆಯೆತ್ತಿ ನೋಡಿದಳು ಗಿರಿಜಾ.

ಮುದುಕನೊಬ್ಬ ಬುಟ್ಟಿಯೊಂದನ್ನು ಹೊತ್ತುಕೊಂಡು ಕೂಗುತ್ತ ಬರುತ್ತಿದ್ದ. ವಯಸ್ಸಾದ ಮುದುಕ, ಅರವತ್ತು ಎಪ್ಪತ್ತು ಆದರೂ ಆಗಿದ್ದೀತು. ಕೈಯಲ್ಲೊಂದು ಕೋಲು ಹಿಡಿದುಕೊಂಡು ಅದರ ಆಧಾರದಿಂದ ತನ್ನ ಕೋಲಿನಂಥ ಶರೀರವನ್ನು ಮುಂದುವರೆಯಿಸುತ್ತ ಬಾಗುತ್ತ, ಬರುತ್ತಿದ್ದಾನೆ. ಹರಿದುಹೋದ ಪಂಚೆಯೊಂದನ್ನು ಮೊಳಕಾಲಿನವರೆಗೆ ಸುತ್ತಿಕೊಂಡು ಹೊಲಸು ಅಂಗಿಯೊಂದನ್ನು ತೊಟ್ಟಿದ್ದಾನೆ. ತಲೆಗೊಂದು ಚಿಂದಿಬಟ್ಟೆ. ಮುಖದ ಮೇಲೆ ಬೆಳೆದುನಿಂತ ಬಿಳಿಯ ಗಡ್ಡ ಮೀಸೆ. ಮೊದಲೇ ಕಳಾಹೀನವಾದ ಆ ಮುಖ ಬಿಸಿಲಿನಲ್ಲಿ ಸುತ್ತಿ ಸುತ್ತಿ ಇನ್ನೂ ಕಂದಿ ಹೋಗಿದೆ. 'ಕಳ್ಳೇಕಾಯಿ! ಕಳ್ಳೇಕಾಯಿ!' ಎಂಥ ಕುಗ್ಗಿದ ದನಿ ಅದು.

'ಹಸಿವಾಗಿದೆಯೇನೇ?' ಎಂದ ಸಿದ್ಧರಾಮು.

ಹೌದು. ಹಸಿವಾಗಿತ್ತು ಅವಳಿಗೆ. ಬೆಳಗಿನಲ್ಲಿ ತಿಂದ ಆ ಅನ್ನ ಯಾವಾಗಲೋ ಕರಗಿ ಹೋಗಿತ್ತು. ಆ ರೈಲು ಪ್ರಯಾಣ-ಆ ಗಲಾಟೆ-ಆ ಬಿಸಿಲು-ಆ ದಾಹ........

'ಕೊಡಯ್ಯಾ ಒಂದಾಣೆಯದು!'

ನಡುಗುವ ಕೈಗಳಿಂದ ಬುಟ್ಟಿಯನ್ನಿಳಿಸಿ ಆ ಮುದುಕ ಕುಳಿತುಕೊಂಡ. ಒಂದು ಪಾವು ಕಡಲೇಕಾಯಿಗಳನ್ನಳೆದುಕೊಟ್ಟು ದುಡ್ಡು ತೆಗೆದುಕೊಂಡು ಹೊರಟುಹೋದ. ಭಾರತದ ದಾರಿದ್ರ್ಯ, ದೈನ್ಯತೆ, ಅಸಹಾಯಕತೆಗಳೇ ಮೂರ್ತಿವೆತ್ತು ಬಂದಂತಿದ್ದ ಆ ಮುದುಕನನ್ನು ಶೂನ್ಯ ದೃಷ್ಟಿಯಿಂದ ನಿಟ್ಟಿಸುತ್ತ ಸಿದ್ಧರಾಮುನೆಂದ.

'ನಾವು ನೋಡುತ್ತಿರುವ ಸಿನಿಮಾದಲ್ಲಿ ಮೂರನೇ ದೃಶ್ಯ ಇದು ಗಿರಿಜಾ! ಇನ್ನೂ ಕೊಂಚ ಕಣ್ದೆರೆದು ನೋಡು. ಮುಪ್ಪಿನ ಮುದುಕ ಈತ. ಅರವತ್ತಕ್ಕೂ ಹೆಚ್ಚಾಗಿದ್ದೀತು ವಯಸ್ಸು ಮೈಯಲ್ಲಿ ಶಕ್ತಿಯಾದರೂ ಇದೆಯೇ ಅವನಿಗೆ? ಅವನ ಕತ್ತಿನಲ್ಲಿ ನರಗಳಾದರೂ ಇವೆಯೇ? ಕೈಯಲ್ಲಿ ರಕ್ತವಾದರೂ ಇದೆಯೇ? ಆದರೂ

ಆತ ಆ ಬುಟ್ಟಿ ಹೊತ್ತುಕೊಂಡು ಈ ಭೀಕರ ಬಿಸಿಲಿನಲ್ಲಿ ತಿರುಗುತ್ತಾನೆ. ಊಟ ಮಾಡಿ ತಂಪಾದ ಸ್ಥಳದಲ್ಲಿ ಮಲಗಿಕೊಂಡು ವಿರಮಿಸುವ ಹೊತ್ತು ಇದು. ಇವನ ವಯಸ್ಸಿನ ಶ್ರೀಮಂತರೆಷ್ಟು ಜನ ಸೋಫಾಗಳ ಮೇಲೆ ಒರಗಿ ನಿದ್ರಿಸುತ್ತಿದಾರೋ; ಇವನು ಮಾತ್ರ ಹೊಟ್ಟೆಪಾಡಿಗಾಗಿ ಈ ಕಳ್ಳೇಕಾಯಿಯ ಕ್ಷುಲ್ಲಕವ್ಯಾಪಾರ ಮಾಡುತ್ತ ತಿರುಗಬೇಕಾಗಿದೆ. ದಿನವೆಲ್ಲಾ ಈ ರೀತಿ ತಿರುಗಿದರೆ ಅವನಿಗೆ ದೊರೆಯುವ ಲಾಭ ವಾದರೂ ಎಷ್ಟಿದ್ದೀತು ಅಂತೀಯಾ? ನಾಲ್ಕಾಣೆ ಐದಾಣೆ ಆದರೆ ಬಹಳ ಆಯಿತು. ಈ ಅಲ್ಪ ಲಾಭಕ್ಕಾಗಿ ಈ ಮುದುಕ ಪಡುತ್ತಿರುವ ಕಷ್ಟ ನೋಡಿದೆಯಾ? ಇಂಥ ಕಷ್ಟವೇ ಇವನಂಥ ಕೋಟ್ಯಾವಧಿ ಜನ ಮುದುಕರಿಗೂ ಇದೆ, ಇಂದಿನ ಹಿಂದುಸ್ಥಾನ ದಲ್ಲಿ! ಇದು ನಿಜವಾದ ಸಿನಿಮಾ ಗಿರಿಜಾ! ಅಲ್ಲಿ—ಆ ಥೇಟರನಲ್ಲಿ ಈ ನಿಜ ದೃಶ್ಯ ಗಳನ್ನು ನೋಡಿಸೋಲ್ಲ. ಅದೆಲ್ಲಾ ಸುಳ್ಳು ಸೃಷ್ಟಿ. ಬರೀ ಶ್ರೀಮಂತರ ಅಟ್ಟಹಾಸ, ಅವರ ಸೂಟು, ಅವರ ಬೂಟು, ಅವರ ಭಾರಿ ಭಾರಿ ಬಂಗಲೆಗಳು, ಮೋಟಾರು ಕಾರುಗಳು, ಅವರ ಪ್ರೇಯಸಿಯರು, ಅವರ ಚಿತ್ರ ವಿಚಿತ್ರ ಸೀರೆ-ರವಕೆಗಳು.... ಅವರ ವಿಲಕ್ಷಣ ಪ್ರೇಮ! ಈ ಜಗತ್ತಿನಲ್ಲಿ ನಿಜವಾಗಿ ನಡೆದಿರೋದು ಆ ಸಿನಿಮಾ ಗಳಲ್ಲಿ ಕಾಣಿಸೋದಿಲ್ಲ ಗಿರಿಜಾ! ಅದ್ಯಾವುದೋ ಬೇರೆ ಜಗತ್ತಿನ ಸಿನಿಮಾ! ಅದಕ್ಕಾಗಿ ಹಣ ಹಾಳು ಮಾಡ್ತೀವೆ ಹುಚ್ಚರು ನಾವು!........'

ಬೇರಾವುದಾದರೂ ಸಮಯವಾಗಿದ್ದರೆ ಗಿರಿಜಾ ಸುಮ್ಮನಿರುತ್ತಿರಲಿಲ್ಲ. 'ದುಡ್ಡು ಖರ್ಚಾಗುತ್ತೆ ಅಂತ ಸುರುವಾಯ್ತೇನೋ ನಿಮ್ಮ ಲೆಕ್ಚರು!' ಎಂದು ಹೇಳಿ ಮೂಗು ಮುರಿಯದಿರುತ್ತಿರಲಿಲ್ಲ. ಆದರೆ ಈಗ ಹಾಗೇನೂ ಮಾಡಲಿಲ್ಲ ಆಕೆ. ಅದು ಸಾಧ್ಯವೂ ಇರಲಿಲ್ಲ. ಈ ವಾತಾವರಣವೇ ವಿಲಕ್ಷಣವಾಗಿತ್ತು. ಮನೆಯಲ್ಲಿ ಕೂತು ಕೂತು ಸಂಕುಚಿತವಾಗಿದ್ದ ಅವಳ ದೃಷ್ಟಿ ಹೊರ ಜಗತ್ತಿನ ಸಂಪರ್ಕದೊಂದಿಗೆ ವಿಶಾಲವಾಗು ತ್ತಿತ್ತು ಅವಳ ಕಣ್ಣು ಮೆಲ್ಲನೆ ಬಿಚ್ಚಿಕೊಳ್ಳುತ್ತಿತ್ತು-ಸಿದ್ಧರಾಮನೆಂದ ಆ ಒಳಗಣ್ಣು....

'ಇಂಥ ಬಡತನ, ಇಂಥ ದೈನ್ಯತೆ, ಇಂಥ ಅಸಹಾಯ ಸ್ಥಿತಿ ನಮ್ಮದು!— ಇದನ್ನೆಲ್ಲ ಹೋಗಲಾಡಿಸಲು ನಾವು ದುಡಿಯಬೇಕಲ್ಲವೇ ಗಿರಿಜಾ! ಈ ಬಡವರೂ ನಮ್ಮವರೆ! ನಮ್ಮ ದೇಶದವರೆ! ನಮ್ಮ ಅಣ್ಣ ತಮ್ಮ ಅಕ್ಕ ತಂಗಿಯರೇ! ಅವರ ದುಃಖ ಹೇಗೆ ಹೋದೀತು-- ಅದಕ್ಕಾಗಿ ಎಂಥ ಕೆಲಸ ಮಾಡಬೇಕು— ಎನ್ನುವುದನ್ನು ನಾವು ಯೋಚಿಸಬೇಕಲ್ಲವೇ? ಭಾನುವಾರ ಬರುತ್ತಲೂ ಅದೇ ಕೆಲಸದಲ್ಲಿ ತೊಡ ಗಿರುತ್ತೇನೆ ನಾನು. ಕಾಡುಗೋಡಿಯಲ್ಲಿರುವ ಇಂಥ ಬಡ ಕೂಲಿಕಾರರ ಸಂಘಟನೆ ಮಾಡುತ್ತಿರುತ್ತೇನೆ. ಈ ಅಸಹ್ಯ ಬಡತನ ಹೋಗಬೇಕು. ಅವರೂ ಮನುಷ್ಯರಾಗಿ ಬದುಕುವಂತಾಗಬೇಕು. ಅವರ ಮಕ್ಕಳೂ ಶಾಲೆಗೆ ಹೋಗಿ ಕಲಿಯಬೇಕು. ನಾಯಿ ಕುನ್ನಿಗಳಂತೆ ಎಂಜಲು ತಿಂದು ಈ ರೀತಿ ಬಿಸಿಲಲ್ಲಿ ಬೀಳಬಾರದು. ಅವರ ಹೆಂಗಸರೂ ಮರ್ಯಾದೆಯಿಂದ ಸುಖದಿಂದ ಇರುವಂತಾಗಬೇಕು. ಈ ರೀತಿ ಅನಾಥೆಯರಾಗಿ

ತೋಟದಲ್ಲಿ ಬಿದ್ದುಕೊಳ್ಳಬಾರದು. ಅವರ ಮುದುಕ ತಂದೆಗಳೂ ಸುಖವಾಗಿ ಊಟ ಮಾಡಿ ವಿಶ್ರಮಿಸುವಂತಾಗಬೇಕು- ಇಂಥ ಉರಿ ಬಿಸಿಲಿನಲ್ಲಿ ಕಳ್ಳೇಕಾಯಿ ಮಾರುತ್ತ ತಿರುಗಿ ಕೊನೆಗೆ ಕೆಮ್ಮುತ್ತ ಕೆಮ್ಮುತ್ತ ಪ್ರಾಣ ಬಿಡಬಾರದು....'

'ಅದೆಲ್ಲಾ ಸರಿ, ಆದರೆ ನೀವೊಬ್ಬರೇ ಏನು ಮಾಡೀರಿ ಇವರಿಗೆಲ್ಲ? ನಿಮ್ಮೊಬ್ಬರಿಂದ ಏನಾದೀತು?'

'ನಾನೊಬ್ಬನು ಮಾತ್ರವಲ್ಲ ಗಿರಿಜಾ! ಎಷ್ಟೋ ಜನ ಇಂಥ ಕಾರ್ಯ ಮಾಡುತ್ತಿದ್ದೇವೆ. ಒಂದೊಂದು ಊರಿನಲ್ಲಿ ನಮ್ಮಂತಹವರು ಇಬ್ಬರಿದ್ದರೆ ಸಾಕು. ಎಷ್ಟೋ ಕೆಲಸವಾದೀತು. ಇಂದಿಲ್ಲ ನಾಳೆ ಈ ಬಡ ಜನರಿಗೆಲ್ಲ ಒಳ್ಳೆಯ ದಿನ ಬಂದೀತು. ಅವರೂ ಸುಖವಾಗಿ ಬಾಳಿಯಾರು! ಇದೊಂದು ದೊಡ್ಡ ಸಿನಿಮಾ! ಅದರಲ್ಲಿ ಪಾತ್ರ ವಹಿಸಿರುವವರು ಹತ್ತಿಪ್ಪತ್ತು ಮಂದಿ ಮಾತ್ರವಲ್ಲ—ದೇಶದ ಬಡಜನರೆಲ್ಲಾ ಅದರಲ್ಲಿ ಅಭಿನಯಿಸುತ್ತಿದ್ದಾರೆ. ನಾವೇ ಅದರ ನಿರ್ಮಾತೃಗಳು—ನಿರ್ದೇಶಕರು- ಕಳ್ಳೇಕಾಯಿ ತಿನ್ನು ಗಿರಿಜಾ! ಹಸಿದಿದ್ದೀಯ!'

ತಿನ್ನಲಾಗಲಿಲ್ಲ ಅವಳಿಗೆ. ಭಾವನಾವೇಗದಿಂದ ಅವಳ ಬಾಯಿ ಕಟ್ಟಿ ಹೋಗಿತ್ತು. ಕತ್ತಿನ ಶಿರವುಬ್ಬಿಕೊಂಡಿತ್ತು.

೪

ಸೂರ್ಯ ಪಶ್ಚಿಮದ ಕಡೆ ಮೆಲ್ಲಮೆಲ್ಲನೆ ಇಳಿಯಲಾರಂಭಿಸಿದ್ದ. ಗಿಡಗಳ ನೆರಳು ಪೂರ್ವಕ್ಕೆ ಹೊರಳುತ್ತಿದ್ದುವು. ಸಿದ್ಧರಾಮನ ಹತ್ತಿರ ಗಡಿಯಾರವೆಲ್ಲಿಂದ ಬಂದೀತು? ಸೂರ್ಯನನ್ನು ನೋಡಿಯೇ ಹೊತ್ತು ಗುರುತಿಸಬೇಕು ಆತ.

'ಮೂರು ಗಂಟೆ ಆಯ್ತೇನೊ—ಏಳು ಹೋಗೋಣ' ಎಂದ.

ಮೂರು ಗಂಟೆಯಲ್ಲ—ಮೂರೂವರೆ ಗಂಟೆಯಾಗಿ ಹೋಗಿತ್ತು, ಅವರು ಸಿನಿಮಾ ಮಂದಿರಕ್ಕೆ ಬಂದು ತಲುಪಿದಾಗ. ಗಿರಿಜಳಿಗೆ ಮೂರೂಮುಕ್ಕಾಲಾಣೆಯದೊಂದು ಟಿಕೆಟ್ ತೆಗೆಯಿಸಿ ತನಗಾಗಿ ಎಂಟಾಣೆಯದೊಂದನ್ನು ಕೊಳ್ಳಲು ಹೋದರೆ 'ಟಿಕೆಟ್ ತೀರಿವೆ, ಹದಿಮೂರಾಣೆಯದೂ ಇಲ್ಲ, ರೂಪಾಯಿನಾಲ್ಕಾಣೆಯದಿದೆ' ಎಂದು ಉತ್ತರ ಬಂತು. ಒಂದುರೂಪಾಯಿ ನಾಲ್ಕಾಣೆ! ಅಷ್ಟು ದಂಡ ತೆತ್ತು ಸಿನಿಮಾ ನೋಡುವುದು! ಅದೂ ತನ್ನಂಥ ನಲವತ್ತು ರೂಪಾಯಿ ಸಂಬಳದವ! ಅಷ್ಟು ಹಣವೂ ಹತ್ತಿರ ಇಲ್ಲ—ಸರಿ. ಮುಖ ಬಾಡಿಸಿಕೊಂಡು ಹೊರಳಿ ಬಂದ.

'ಏನು ಮಾಡೋಣ ಗಿರಿಜಾ! ಎಂಟಾಣೆಯ ಟಿಕೆಟ್ ತೀರಿಹೋಗಿವೆ!'

'ಇನ್ನು ಎಷ್ಟರದಿದೆ?'

'ಒಂದೂಕಾಲು ರೂಪಾಯಿಂದು'

'ತೆಗೆಸಿ ಬಿಡಿ. ಇನ್ನೇನು ಮಾಡೋದು? ನಾನಂತೂ ಕೊಂಡಾಯಿತಲ್ಲಾ?'

'ಒಂದೂಕಾಲು ರೂಪಾಯಿ ಟಿಕೆಟ್ಟಿಗೆ ಕೊಟ್ಟರೆ ರೈಲಿಗೆ ಹಣವನ್ನೆಲ್ಲಿಂದ ತರೋದು? ಇಬ್ಬರಿಗೂ ಹತ್ತಾಣೆ ಬೇಕು ರೈಲಿಗೆ.'

ಈ ರೀತಿ ಲೆಕ್ಕಾಚಾರ ನಡೆದಿರುವಾಗಲೇ ದೇವಮ್ಮ ಬಂದಳು ಗಂಡನ ಜತೆಯಲ್ಲಿ. ಇವರನ್ನು ನೋಡಿಯೂ ನೋಡದವರಂತೆ ಅವರಿಬ್ಬರೂ ನೇರವಾಗಿ ಮಂದಿರವನ್ನು ಸೇರಿದರು.

'ಅವರು ಹೋದರಲ್ಲ? ಯಾವ ಜಾಗಾಕ್ಕೆ?' ಎಂದಳು ಗಿರಿಜಾ.

'ಎರಡು ರೂಪಾಯಿ ನಾಲ್ಕಾಣೆಯದಕ್ಕೆ!'

'ಅಂದ್ರೆ? ಇವರಿಬ್ಬರಿಗೆ ಸೇರಿ ನಾಲ್ಕೂವರೆ ಆಯ್ತಲ್ಲ ? ಬರೀ ಸಿನಿಮಾಕ್ಕೆ ಇಷ್ಟು ಖರ್ಚು ಮಾಡ್ತಾರೇ ಅವರು?'

'ದುಡ್ಡಿದೆ, ಮಾಡುತ್ತಾರೆ. ನಮ್ಮ ಹತ್ತಿರ ದುಡ್ಡಿಲ್ಲ, ನಾವು ಮಾಡಲಾಗೋದಿಲ್ಲ. ಇದೇ ಇಂದಿನ ಜಗತ್ತಿನ ರೀತಿ ಗಿರಿಜಾ ! ಹಾಳಾಯ್ತು ಈ ಸಿನಿಮಾ ! ಹೊರಟುಬಿಡೋಣ' ಎಂದ ಸಿದ್ಧರಾಮು.

'ಬೇರ್‍ಯಾವುದಾದರೂ ಸಿನಿಮಾಕ್ಕೆ ಹೋಗಿದ್ದರೆ?'

'ಸೆಲೆಕ್ಟ್‌ಗೆ ಹೋಗೋಣ ಬಾ. ಅಲ್ಲಿಯಾದರೂ ಟಿಕೆಟ್ ಸಿಕ್ಕಿದರೆ! ಇಂದು ಭಾನುವಾರ. ತುಂಬ ಗಲಾಟೆ. ಸಮಯಾನು ಮೀರಿ ಹೋಗಿದೆ. ಆದರೂ ಪ್ರಯತ್ನಿಸೋದಕ್ಕೇನಂತೆ ಬಾ' ಎಂದ.

ಅವರ ಪ್ರಯತ್ನವೇನೂ ಸಫಲವಾಗಲಿಲ್ಲ. ಆಗಲೇ ಅಲ್ಲಿಯೂ ಟಿಕೆಟ್ಟು ಮುಗಿದುಹೋಗಿದ್ದುವು.

ಮೆಜೆಸ್ಟಿಕ್ ಆಯಿತು; ಸಾಗರ್, ಪ್ರಭಾತ್, ಸ್ಟೇಟ್ಸ್ ಎಲ್ಲ ಸುತ್ತಿ ಮುಗಿಯಿತು. ಎಲ್ಲೂ ಟಿಕೆಟ್ಟು ಸಿಕ್ಕುವಂತಿರಲಿಲ್ಲ. ಎಲ್ಲೆಲ್ಲೂ 'ಹೌಸ್‌ಫುಲ್' ಪಟ. ಟಿಕೆಟ್ ಸಿಕ್ಕದೆ ನಿರಾಶರಾಗಿ ಹಿಂತಿರುಗುತ್ತಿದ್ದ ಜನಗಳ ತಂಡ ತಂಡ. ಅಲ್ಲಲ್ಲಿ ನಾಲ್ಕಾರು ಜನ ಧಡಿಯರು ನಿಂತುಕೊಂಡು ಕಾಳಸಂತೆಯ ವ್ಯಾಪಾರವನ್ನೇನೋ ನಡಸುತ್ತಿದ್ದರು. ಒಂದಕ್ಕೆರಡು ಬೆಲೆ ಕೊಟ್ಟು ಅವರ ಟಿಕೆಟ್ ಕೊಂಡು ಸಿನಿಮಾ ನೋಡುವ ಆಸೆಯೇನೂ ಸಿದ್ಧರಾಮುನಿಗಿರಲಿಲ್ಲ. ಆರೂವರೆ ಗಂಟೆಯ ಆಟಕ್ಕೆ ಹೋಗಬೇಕೆಂದರೆ ಅದೂ ಅಸಾಧ್ಯವೆ. ಎಂಟು ಗಂಟೆಯ ರೈಲಿಗೆ ಮನೆಗೆ ಮರಳಬೇಕು. ಅದನ್ನು ಬಿಟ್ಟರೆ ಬೇರೆ ರೈಲಿಲ್ಲ. ಬೆಂಗಳೂರಿನಲ್ಲಿ ಪರಿಚಿತರ ಮನೆಗಳೂ ಇಲ್ಲ. ರಾತ್ರಿಯನ್ನೆಲ್ಲಿ

ಕಳೆಯುವದು ಈಕೆಯನ್ನು ಕಟ್ಟಿಕೊಂಡು? ನಿಲ್ದಾಣದ ವೇಟಿಂಗ್‌ರೂಮಿನಲ್ಲೇ?-ಛೆ! ಅದೆಲ್ಲ ತೊಂದರೆ ಯೇತಕ್ಕಂತೆ? ಈಗಲೇ ಹೊರಡುವುದೇ ವಾಸಿ-ಎಂದುಕೊಂಡು-

'ನನಗಂತೂ ಟಿಕೀಟು ಸಿಕ್ಕೋಹಾಗಿಲ್ಲ, ನೀನೊಬ್ಬಳೇ ಹೋಗಿ ನೋಡಿ ಬರ್‍ತೀಯಾ ಗಿರಿಜಾ? ನಾನು ಥೇಟರ್ ಹೊರಗಡೆ ಕಾದಿರ್‍ತೇನೆ' ಎಂದ.

ಅವಳು ಒಪ್ಪಲಿಲ್ಲ. 'ನಿಮ್ಮನ್ನು ಬಿಟ್ಟು ನಾನೊಬ್ಬಳೇ ನೋಡೋದೇ! ಏನೂ ಬೇಡ! ಕಾಡಗೋಡಿಗೆ ಹೋಗೋಣ ನಡೀರಿ' ಎಂದಳು.

ಅಷ್ಟರಲ್ಲಿ ಹತ್ತಿರದಲ್ಲೆ ಯಾರದೋ ಆರ್ತನಾದ ಕೇಳಿ ಬಂದಿತು. ಅತ್ತ ಹೊರಳಿದರು. ಬಡ ಕೂಲಿಕಾರನೊಬ್ಬನನ್ನು ನಾಲ್ಕು ಜನ ಸೇರಿ ಹೊಡೆಯುತ್ತಿದ್ದುದು ಕಾಣಿಸಿತು. 'ಇಲ್ಲೇ ನಿಂತಿರು ಗಿರಿಜಾ! ಪಾಪ! ಅವನನ್ಯಾಕೆ ಹೊಡೆಯುತ್ತಿದಾರೊ ನೋಡ್ತೇನೆ' ಎಂದು ಹೇಳಿ ಸಿದ್ಧರಾಮು ಗಲಾಟೆ ನಡೆದಿದ್ದಲ್ಲಿಗೆ ಹೋದ.

ಆ ನಾಲ್ಕು ಜನ ಧಡಿಯರಿಂದ ಕೂಲಿಕಾರರನ್ನು ಬಿಡಿಸಿಕೊಂಡು 'ಏನು, ಏನಾಯಿತು? ಯಾಕೆ ಹೊಡೆದಾಟ?' ಎಂದ.

ಆ ಬಡಪಾಯಿ ಅಳುತ್ತಳುತ್ತ ಹೇಳಿದ.

'ಐದಾಣೆಯ ಒಂದು ಟಿಕೆಟ್ ಎಂಟಾಣೆಗೆ ಕೊಡ್ತೇನೆ ಅಂದರು. ನನ್ನ ಹತ್ತಿರ ಇದ್ದದ್ದೂ ಅಷ್ಟೆ. ಕೊಟ್ಟುಬಿಟ್ಟೆ. ಈಗ ಟಿಕೆಟ್ಟೂ ಕೊಡಲೊಲ್ಲರು. ದುಡ್ಡಾದರೂ ವಾಪಸು ಮಾಡಿ ಅಂದ್ರೆ ಅದನ್ನೂ ಕೊಡಲೊಲ್ಲರು.'

ಕಾಳಸಂತೆಯ ಆ ಕಳ್ಳರನ್ನು ಕ್ರುದ್ಧ ದೃಷ್ಟಿಯಿಂದ ನಿಟ್ಟಿಸುತ್ತ ಸಿದ್ಧರಾಮು 'ಹೌದೇನು? ಈತ ಹೇಳೋದು ನಿಜವೇನು?' ಎಂದ.

'ಅರೆ! ನೀನೆಲ್ಲಿಯೋನೋ ಬಂದೆ ಮಹಾರಾಜ! ನಿನ್ನ ಹಾದಿ ಹಿಡಿದು ಹೋಗು!' ಎಂದು ಉಪಹಾಸದ ದನಿಯಲ್ಲಿ ಉತ್ತರ ಬಂತು.

'ಒಳ್ಳೇ ಮಾತಿನಿಂದ ಇವನ ಹಣ ಇವನಿಗೆ ವಾಪಸು ಕೊಡ್ತೀರೋ ಇಲ್ಲ, ಪೋಲೀಸರಿಗೆ ತಿಳಿಸಬೇಕೊ?' ಎಂದ ಸಿದ್ಧರಾಮು ಇನ್ನೂ ಕ್ರುದ್ಧನಾಗಿ.

ಆ ನಾಲ್ಕು ಜನರೂ ಗಹಗಹಿಸಿ ನಕ್ಕುಬಿಟ್ಟು 'ಪೋಲೀಸರಿಗೆ ತಿಳಿಸುತಾನಂತೆ ಪೋಲೀಸರಿಗೆ! ನಮ್ಮ ಮಾವನ ಮಕ್ಕಳು ಕಣೋ ಅವರು! ನಿನ್ನನ್ನೆ ಬೇಕಾದರೆ ಸ್ಟೇಶನ್ನಿಗೆ ಸಾಗಿಸುತ್ತಾರೆ—ಒಂದು ಮಾತು ಹೇಳಿದ್ರೆ, ಸುಮ್ಮನೆ ಹೋಗೋ ನಿನ್ನ ಹಾದಿ ಹಿಡಿದು' ಎಂದರು.

ಸಿದ್ಧರಾಮನಿಗೆ ವಿಪರೀತ ಕೋಪವೇರಿತು. ಮುಷ್ಟಿಯನ್ನು ಮುಂದೆ ಮಾಡಿ ಗರ್ಜಿಸಿದ. 'ಕೊಡ್ತೀರೋ ಇಲ್ಲವೋ ಇವನ ಎಂಟಾಣೆ?'

ಸರಿ. ಮತ್ತೆ ಹೊಡೆದಾಟಕ್ಕಾರಂಭವಾಯಿತು. ನಾಲ್ಕು ಜನ ಪೈಲ್ವಾನರ ಮುಂದೆ ಒಬ್ಬನ ಆಟ ಎಷ್ಟು ನಡೆದೀತು? ಮುಖಕ್ಕೆ, ಮೂಗಿಗೆ, ತಲೆಗೆ, ಎದೆಗೆ-ದೇಹದ ಎಲ್ಲ ಕಡೆಗಳಲ್ಲೂ ಬಲವಾದ ಏಟು ಬಿತ್ತು ಸಿದ್ಧರಾಮನಿಗೆ. ಹಣೆಯೊಡೆದು ರಕ್ತ ಬಳಬಳನೆ ಸುರಿಯ ತೊಡಗಿತು. ನೋಡುತ್ತ ನಿಂತಿದ್ದ ಗಿರಿಜೆ ಗಾಬರಿಗೊಂಡು ಕೂಗತೊಡಗಿದಳು. ಪೋಲೀಸರು ಬಂದರು. ಹೊಡೆದಾಟವನ್ನು ನಿಲ್ಲಿಸಿ, ಸಿದ್ಧರಾಮನನ್ನು ಬಿಡಿಸಿ, ಆ ಪೈಲ್ವಾನರನ್ನು ಬೈದ ಹಾಗೆ ಮಾಡಿ ಹೊರಟುಹೋದರು. ಆ ಕೂಲಿಯುವನ ಹಣವೂ ಸಿಕ್ಕಲಿಲ್ಲ. ಸಿದ್ಧರಾಮನ ಪ್ರತಿಭಟನೆಯಿಂದ ಯಾವ ಪ್ರಯೋಜನವೂ ಆಗಲಿಲ್ಲ.

ಕೈವಸ್ತ್ರದಿಂದ ಹಣೆ ಕಟ್ಟಿಕೊಂಡು ಪತ್ನಿಯ ಕೈಹಿಡಿದುಕೊಂಡು ನಿಲ್ದಾಣಕ್ಕೆ ಹೊರಟ ಸಿದ್ಧರಾಮ. ಮೆಜಸ್ಟಿಕ್ ಹಿಂದೆಹಾಕಿ ಧರ್ಮಾಂಬುಧಿ ಕೆರೆಯಲ್ಲಿ ಹಾದು ಬರುತ್ತಿದ್ದಹಾಗೆ ಆತ ಕಂಪಿಸುವ ಕಂಠದಿಂದ ಉದ್ಗಾರ ತೆಗೆದ.

'ಇಂದಿನ ನಮ್ಮ ಸಿನಿಮಾದಲ್ಲಿ ನಾಲ್ಕನೇ ದೃಶ್ಯ ಇದು ಗಿರಿಜಾ! ಇದಕ್ಕೆ ಕ್ಲೈಮಾಕ್ಸ್ ಅಂತಾರೆ........'

ರೈಲಿನ ಸಮಯವಾಗುವವರೆಗೂ ಕೆರೆಯ ಅಂಗಳದಲ್ಲಿ ಕುಳಿತಿದ್ದು ನಿಲ್ದಾಣಕ್ಕೆ ಬಂದರು. ಟಿಕೆಟ್ ತೆಗೆಯಿಸುವುದಕ್ಕಾಗಿ ಜೇಬಿಗೆ ಕೈ ಹಾಕಿದ ಸಿದ್ಧರಾಮ. ಹಣದ ಸುಳಿವೇ ಇರಲಿಲ್ಲ! ಇಳಿದ ಮುಖದಿಂದ ಪತ್ನಿ ನಿಂತಲ್ಲಿಗೆ ಮರಳಿದ.

'ತೆಗೆಸಿದಿರಾ ಟಿಕೆಟ್ಟನ್ನ?'

'ಇಲ್ಲ'

'ಯಾಕೆ?'

'ದುಡ್ಡು ಎಲ್ಲೋ ಕಳೆದುಹೋಯಿತು. ಬಹಳ ಮಾಡಿ ಹೊಡೆದಾಟ ನಡೆದಿದ್ದಾಗ ಆ ಪೋಕರಿಗಳಲ್ಲಿ ಯಾರೋ ಹಾರಿಸಿರಬೇಕು.'

'ಇನ್ನೇನು ಮಾಡೋದು?'

'ಮಾಡೋದೇನು ಬಂತು? ಉಪವಾಸ ಮಾಡೋದು. ಬೆಳಿಗ್ಗೆ ಬೇಗನೆ ಎದ್ದು ಹದಿನೈದು ನೈಲು ನಡೆದುಕೊಂಡು ಹೋಗೋದು.'

'ರಾತ್ರಿ ಮಲಗುವದಾದರೂ ಎಲ್ಲಿ?'

'ಇದೆಯಲ್ಲ ಅನಾಥರ ಧರ್ಮಛತ್ರ— ಆ ಚಿಕ್ಕ ಲಾಲ್‌ಬಾಗ್....'

'ಅಲ್ಲಿ? ನಾವು?'

'ಯಾಕೆ ಹೀಗೆ ದಿಗಿಲುಗೊಳ್ತೀ? ನಮ್ಮಂತೇ ಎಷ್ಟೋ ಜನ ಮಲಗೋದಿಲ್ಲವೆ? ಹೆಂಗಸರು, ಗಂಡಸರು ಎಲ್ಲಾ? ದುಡ್ಡಿದ್ದವರೇನೊ ಹೊಟೆಲುಗಳಿಗೆ ಹೋಗುತ್ತಾರೆ.

ದುಡ್ಡಿಲ್ಲದವರಿಲ್ಲ. ಇನ್ನೆಲ್ಲಿಗೆ ಹೋಗೋದು? ಚಿಕ್ಕಲಾಲ್‌ಬಾಗಿಗೇ. ಹೆದರಿಕೆಯೇನು ನಿನಗೆ?'

'ಹೆದರಿಕೆಯೇನು? ನೀವು ಜೊತೆಗಿದ್ದಾಗ?'

'ಸರಿ. ಹಾಗಾದರೆ ಬಾ!'

ಮತ್ತೆ ನಿಲ್ದಾಣವನ್ನು ಬಿಟ್ಟು ಹೊರಟರು. ಮೆಟ್ಟಿಲು ಇಳಿಯುತ್ತಿದ್ದ ಹಾಗೆ ಎದುರಿನಲ್ಲಿ ದೇವಮ್ಮನೂ ಅವಳ ಪತಿಯೂ ಕಾಣಿಸಿಕೊಂಡರು.

'ಸಿನಿಮಾ ನೋಡಿದ್ದಾಯ್ತೇನು ಗಿರಿಜಮ್ಮ?' ದೇವಮ್ಮನೇ ಮಾತನಾಡಿಸಿದಳು.

ಅವಳೊಂದಿಗೆ ಮಾತನಾಡುವ ಮನಃಸ್ಥಿತಿಯಲ್ಲಿಲ್ಲದಿದ್ದರೂ ಸಹ ಗಿರಿಜಾ ಉತ್ತರವಿತ್ತಳು.

'ಹೂಂ. ನೋಡಿದೆವು!'

'ಊರಿಗೆ ಬರೋದಿಲ್ಲವೇನು ಮತ್ತೆ? ಎಲ್ಲಿ ಹಿಂದಿರುಗುತ್ತಿದ್ದೀರಲ್ಲ?'

'ಲಾಲ್‌ಬಾಗಿಗೆ ಹೋಗಿ ಬರ್ತೀವೆ- ನೀವು ಹೊರಡಿ' ಎಂದು ಹೇಳಿ ಗಿರಿಜಾ ಅಲ್ಲಿ ನಿಲ್ಲದೆ ಮುಂದುವರೆದಳು.

'ಲಾಲ್‌ಬಾಗಿಗೆ! ಅಂತೂ ಮಜಾ ಐತಪ್ಪ ನಿಮ್ಮಿಬ್ಬರದೂ! ಸಾಗಲಿ ಸಾಗಲಿ!' ಎಂದು ಹಾಸ್ಯ ಮಾಡಿ ದೇವಮ್ಮ ಗಂಡನ ಕಡೆ ತಿರುಗಿ ನಕ್ಕಳು.

'ನಾವು ಹೋಗೋದು ದೊಡ್ಡ ಲಾಲ್‌ಬಾಗಿಗಲ್ಲ—ಚಿಕ್ಕ ಲಾಲ್‌ಬಾಗಿಗೆ—ಇಂದಿನ ನಮ್ಮ ಸಿನಿಮಾದ ಕೊನೆಯ ದೃಶ್ಯಕ್ಕೆ-ಅನ್ನೋದು ಅವಳಿಗೇನು ತಿಳಿದೀತು ಗಿರಿಜಾ! ಬಾ, ಬೇಗ ಬೇಗ ಹೆಜ್ಜೆಯಿಡು' ಎಂದ ಸಿದ್ಧರಾಮು.

ಗಿರಿಜಾ ಹೆಜ್ಜೆ ಹಾಕತೊಡಗಿದಳು. ಚಿಕ್ಕ ಲಾಲ್‌ಬಾಗಿಗೆ; ಅಲ್ಲ—ನಿಜ ಜೀವನದ ಕಡೆಗೆ!

—ಬಸವರಾಜ ಕಟ್ಟೀಮನಿ

# ಕೊನೆಯ ಗಿರಾಕಿ

ಆ ಸರ್ಕಲಿನಾಚೆ ಯಾರೂ ಹೋಗಲೊಲ್ಲರು. ಕಟ್ಟಡಗಳ ಅಡೆತಡೆಯಿಲ್ಲದ ವಿಸ್ತಾರ ಭೂಮಿಯ ಮೇಲಿಂದ ಬೀಸುತ್ತಿದ್ದ ಶೀತಲ ಗಾಳಿ ದುರ್ಗಂಧವನ್ನು ತರುತ್ತಿತ್ತು. ಜನ ಗುಜುಗುಜು ಮಾತಾಡುತ್ತಿದ್ದರು. ಅದೆಲ್ಲ ಅಸ್ಪಷ್ಟ ಕಲರವ.

ಸೂರ್ಯ ಮೇಲಕ್ಕೆ ಬಂದಂತೆ ಕಾವೇರತೊಡಗಿತು. ಸರ್ಕಲನ್ನು ಹಾದು ಹೋಗಲೇಬೇಕಾದವರು, ಭೀತಿಯಿಂದೊಮ್ಮೆ ಎಡಕ್ಕೆ ಕಣ್ಣು ಹೊರಳಿಸಿ, ಮತ್ತೆ ತಲೆ ಕೆಳಗೆ ಮಾಡಿ, ಸರಸರನೆ ನಡೆದು ಹೋಗುತ್ತಿದ್ದರು.

ಎಲ್ಲರೂ ಚಲಿಸುತ್ತಲೇ ಇದ್ದರು........ನಿಲ್ಲುವವರು ಯಾರೂ ಇರಲಿಲ್ಲ........

ನಿಧಾನವಾಗಿ ಪೌರ ಸಭೆಗೆ ವರದಿ ಹೋಯಿತು.

* * * * * *

ಅದೊಂದು ದಿನ ಬೆಳಿಗ್ಗೆ ಕಾಣಿ ಎದ್ದು ನೋಡುತ್ತಾಳೆ—ರಾತ್ರಿ ಜತೆಯಲ್ಲಿ ಮಲಗಿದ್ದ ಸಂಗಡಿಗನಿಲ್ಲ. ಹದಿನಾರರ ಆ ಹುಡುಗಿ ಹತ್ತು ದಿನಗಳ ಹಿಂದೆ ಅವನ ಬೆಂಬತ್ತಿ ಕರ್ನಾಟಕದ ರಾಜಧಾನಿಗೆ ಓಡಿ ಬಂದಿದ್ದಳು—ತಮಿಳು ನಾಡಿನೊಂದು ಊರಿಂದ. ತಿರುಪೆ ಎತ್ತುವ ಗರೀಬ ಆತ, ಒಂದು ಕೈ ಮೊಂಡು. ಆದರೆ ಒಂದು ರಾತ್ರಿ, ಇನ್ನೊಂದು ತೋಳಿನಿಂದ ಆಕೆಯನ್ನು ಆತ ಬಳಸಿ ಬರಸೆಳೆದಿದ್ದ. ಕಂಪಿಸುತ್ತಿದ್ದ ಹೃದಯದಿಂದ ಆಕೆ ಆತನನ್ನು ನೋಡಿದಳು; ಆ ಬಲಿಷ್ಟ ತೋಳನ್ನು ನೋಡಿದಳು. ಎರಡು ಕೈಗಳ ಶಕ್ತಿಯೂ ಇತ್ತದಕ್ಕೆ.

ಅಲ್ಲಿಂದ ಆ ರಾತ್ರೆಯೇ ಅವರು ಓಡಿಹೋದರು.

ಮನೆ ಇತ್ತು ಆಕೆಗೆ—ಚಿಕ್ಕ ಗುಡಿಸಲು. ಹೊಲವಿತ್ತು ಆಕೆಯ ತಾಯ್ತಂದೆಯರಿಗೆ—ಒಕ್ಕಲುತನದ ಒಂದಿಷ್ಟು ಹೊಲ. ಆ ವರ್ಷವೇ ಎಲ್ಲವೂ ಹೊರಟು ಹೋದವು. ದೇಶಪ್ರೇಮಿಯಾದ ಆ ಹಿರಿಯ ಜಮಿನ್ದಾರ ಹೆಚ್ಚು ಗೇಣಿ ಕೇಳಿದ. ಕೊಡದೇಹೋದರೆ ಹೊಸ ಒಕ್ಕಲನ್ನು ಹುಡುಕುವುದಾಗಿ ಹೇಳಿದ. ಹಾಗೆಯೇ ಆಯಿತು. ಕಾಣಿಯ ತಾಯ್ತಂದೆಯರು ಹೊಲ ಕಳೆದುಕೊಂಡರು. ಮಡಿಕೆ ಕುಡಿಕೆಗಳೊಡನೆ ಗುಳೆ ಹೊರಟಿತು ಆ ಸಂಸಾರ. ಹಿರಿಯ ಮಗ ಕೂಲಿಯಾಗುವೆನೆಂದು ಮದರಾಸಿಗೆ ಹೋದ. ಕಿರಿಯವನು ಜಗಳಾಡಿ ದೇಶಾಂತರ ಹೋದ. ತಂದೆ-ತಾಯಿ ಮೂಕಿಯಾದ ಮಗಳನ್ನು ಕಟ್ಟಿಕೊಂಡು ಊರೂರು ಸುತ್ತಿದರು.

ಎಷ್ಟು ಸುತ್ತಾಡಿದರೂ ಕೆಲಸ ಸಿಗಲಿಲ್ಲ. ಬೇಡಿ ಬೇಡಿ ಸರ್ವೀಸಾದ ಬಳಿಕ ಭಿಕ್ಷೆ ಎತ್ತುವ ಕೆಲಸ ಅವರಿಗೆ ಖಾಯಮಾಯಿತು.

ತಾಯ್ತಂದೆಯರನ್ನು ಬಿಟ್ಟು ಬಂದಾಗ ಆ ಮೂಕಿಗೆ ಸ್ವಲ್ಪ ದುಃಖವಾಗಿತ್ತು—ಎಂಬುದನ್ನು ಒತ್ತಿ ಹೇಳುವುದು ಪಾಪ. ಯಾಕೆಂದರೆ ಯಾವುದೋ ಮನೆಯ ಮಾಡಿನ ಕೆಳಗೆ ಬೀದಿಯ ಬಳಿ ಆ ರಾತ್ರಿ ತನ್ನೊಡನೆ ಹೊರಳಾಡಿದ ಮೊಂಡುಕೈಯ ಯುವಕ ಭಿಕ್ಷುಕ, ಆಕೆಗೊಂದು ಆಧಾರವಾಗಿದ್ದ.

ನಿಮಿಷ ನಿಮಿಷಕ್ಕೂ ಕುಸಿದು ಬೀಳುವ ಆಧಾರ ಅದು.

ಓಡಿಬಂದ ಮೇಲೆ ಆ ದೊಡ್ಡ ನಗರದಲ್ಲಿ ಕಳೆದುದು ಹತ್ತೇದಿನ. ಹನ್ನೊಂದನೆಯ ಬೆಳಗು ಮುಂಜಾನೆ ಆಕೆ ಒಬ್ಬಳೇ, ಆಶ್ರಯಕ್ಕೆ ಹುಲ್ಲು ಕಡ್ಡಿಯೂ ಇಲ್ಲದ ಮಹಾ ಆಳದಲ್ಲಿ ಕೈಕಾಲು ಬಡಿಯುತ್ತಿದ್ದಳು.

ಆ ದಿನವೆಲ್ಲ ಆ ಮೂಕಿಯ ಕಣ್ಣುಗಳಿಂದ ಬಳಬಳ ಕಣ್ಣೀರು ಸುರಿಯುತ್ತಲೇ ಇತ್ತು. ಆಕೆ ಹೊಟ್ಟೆ ಹಿಸುಕಿಕೊಂಡು, ಕೂತಲ್ಲೇ ಗೋಡೆಗೆ ಹಣೆ ಚಚ್ಚಿಕೊಂಡು, ಗೊಳೋ ಎಂದು ರೋದಿಸಿದಳು. ಅಲ್ಲಿ ಇಲ್ಲಿ ಸುತ್ತಾಡಿದಳು. ಆತ ಸಿಗಲಿಲ್ಲ. ಯಾವ ಗಾಡಿ ಹತ್ತಿ ಯಾವ ಊರಿಗೆ ಟಿಕೆಟಿಲ್ಲದ ಪ್ರವಾಸವನ್ನು ಕೈಗೊಂಡಿದ್ದನೋ ಆ ಮಹಾರಾಯ!

ರೈಲು ನಿಲ್ದಾಣದ ಹಿಂದಿದ್ದ ಕೆರೆಗೆ ಕಾಣಿ ಹೋದಳು. ನೀರಲ್ಲಿ ಕಾಲುಗಳನ್ನು ಇಳಿಬಿಟ್ಟು ಕುಳಿತಳು. ರವಕೆಗೆ ಸಿಕ್ಕಿಸಿದ್ದ ಬಾಚಣಿಗೆಯನ್ನು ತೆಗೆದು, ತಲೆಗೆ ಕೈಯಿಂದ ನೀರು ಹನಿಸಿ, ಬಾಚಿದಳು. ಅದೇ ಕೆರೆಯ ನೀರನ್ನು ಸ್ವಲ್ಪ ಕುಡಿದಳು. ಹಾಗೆಯೇ ಉದ್ದಕ್ಕೂ ಆ ಕಾಲು ಹಾದಿಯಲ್ಲಿ ನಡೆದುಹೋದಳು.

ಆಕೆ ರೂಪವತಿಯಲ್ಲ. ತೆಳ್ಳನೆಯ ಜೀವ. ಆದರೆ ವಯಸ್ಸಿಗೆ ಮೀರಿ ಮೈ ತುಂಬಿತ್ತು. ಬರಿಯ ದೇಹ ಮಾಂಸಕ್ಕಾಗಿ ಹಂಬಲಿಸುವವರಿಗೆ ಆಕೆ ಮನದಣಿಯುವ ಊಟವಾಗಿದ್ದಳು.

ನಡೆದು ಹೋಗುತ್ತ ಹೋಗುತ್ತ ಆಕೆಯೊಮ್ಮೆ ತಿರುಗಿ ನೋಡಿದಳು. ಯಾವನೋ ಒಬ್ಬ ಸಿಗರೇಟು ಕುಡಿದುಕೊಂಡು ಹಿಂಬಾಲಿಸಿ ಬರುತ್ತಿದ್ದ. ಬೀದಿಯ ದೀಪಗಳು ಹತ್ತಿಕೊಂಡವು. ಯಾವುದೋ ಹೊಸ ಪ್ರಪಂಚದ ಬಾಗಿಲು ತನ್ನ ಪಾಲಿಗೆ ತೆರೆದ ಹಾಗೆ ಕಾಣಿ ಆ ದೀಪಗಳತ್ತ ಪಿಳಿ ಪಿಳಿ ನೋಡಿದಳು. ಒಂದು ಸೈಕಲ್ ಎದುರು ಭಾಗದಿಂದ ಹರಿದುಹೋಯಿತು. ಪೋಲೀಸನ ಸಿಳ್ಳೊಂದು ಎಲ್ಲಿಂದಲೋ ಸದ್ದು ಮಾಡಿತು................ಆಕೆ ಮತ್ತೊಮ್ಮೆ ಹಿಂತಿರುಗಿ ನೋಡಿದಳು. ಆತ ಬರುತ್ತಲೇ ಇದ್ದ.

ಫುಟ್‌ಪಾತಿನ ಮೇಲೆಯೇ ಒಂದು ದೇವದಾರು ಮರದ ಬಳಿ ಆಕೆ ನಿಂತಳು. ಆತನೂ ಸಮೀಪ ಬಂದ. ತಿಂಡಿಯ ಪೊಟ್ಟಣವನ್ನು ಆತ ಮುಂದಕ್ಕೆ ನೀಡಿದ.

'ಆ ಆ' ಎಂದು ಆಕೆಯ ಗಂಟಲಿಂದ ಸ್ವರ ಹೊರಟಿತು. ಪೊಟ್ಟಣವನ್ನಾಕೆ ಬಿಚ್ಚಿ ಆ ಚೌ ಚೌವನ್ನು ಗಬಗಬನೆ ತಿಂದಳು. ಆತ ಇನ್ನೊಂದು ಸಿಗರೇಟು ಹಚ್ಚಿದ.

'ಬೆಳಿಗ್ಗಿನಿಂದಲೇ ನಿನ್ನ ನೋಡ್ತಾ ಇದ್ದೆ' ಎಂದನಾತ.

ಆಕೆ ಆತನ ತುಟಿಯಲುಗುತ್ತಿದ್ದುದರಿಂದಲೇ ಎಷ್ಟನ್ನೋ ಅರ್ಥ ಮಾಡಿಕೊಂಡಳು. ಕಿವಿಯ ಭೇರಿಯ ಮೇಲೆ ಸದ್ದೇನೋ ಆಗುತ್ತಿತ್ತು; ಆದರೆ ಅರ್ಥವಾಗುತ್ತಿರಲಿಲ್ಲ.

ಆಕೆ 'ಕಕಾಕ ಅ ಆ ಅ' ಎಂದೇನೋ ಹೇಳಿದಳು. ಕಣ್ಣೀರು ಚಿಮ್ಮತೊಡಗಿತು.

'ಚು ಚು ಚ್' ಎಂದು ಆತ ಸಂತಾಪ ಸೂಚಿಸಿದ. ಬಾ, ಎಂದು ಕೈ ಸನ್ನೆ ಮಾಡಿದ. ಆಕೆ ತಲೆಬಾಗಿಸಿಕೊಂಡು ಆತನನ್ನೆ ಹಿಂಬಾಲಿಸಿದಳು—ನಾಯಿ ವಿನಮ್ರವಾಗಿ ಹಿಂದಿನಿಂದ ಹೋಗುವಂತೆ ಸಾಗಿದಳು.

ಯಾವುದೋ ಆಶ್ರಯದಲ್ಲಿ ಹಾಗೆ ಆ ರಾತ್ರೆ ಬೆಳಗಾಯಿತು.

* * * * * *

ಆ ರೀತಿ ನಾಲ್ಕು ದಿನ ಕಳೆದುವು. ಆಕೆಯನ್ನು ಅವನು ಸಿಂಗರಿಸಿದ.

ಅರ್ಧಮಾತಿನಿಂದ ಅರ್ಧ ಕೈಸನ್ನೆಯಿಂದ ವಿವರಿಸಿ ವಿವರಿಸಿ ಹೇಳಿದ:

'ನಾನು ಹೊಸಬರನ್ನು ಕರಕೊಂಡು ಬರ್‍ತೀನಿ. ನೀನು ಸುಮ್ಮಗಿರಬೇಕು. ಬಾಯಿ ಬಿಚ್ಚಬಾರದು. ಮೂಕಿ ಅಂತ ತೋರಿಸಬಾರದು.'

ಆಕೆ ಕುಂಯ್ ಕುಂಯ್ ಎನ್ನುತ್ತಿದ್ದಳು. ತನ್ನನ್ನು ಮೂಕಿ ಎಂದು ಸಂಬೋಧಿಸಿದ ಆತ ಹಾವ ಭಾವ ಮಾಡಿದಾಗ ಆಕೆಗೆ ತುಂಬ ಸಿಟ್ಟು ಬರುತ್ತಿತ್ತು. ಆದರೆ ಕುಂಯ್ ಕುಂಯ್ ಶಬ್ದದಲ್ಲೇ ಆ ಸಿಟ್ಟು ಮುಕ್ತಾಯವಾಗುತ್ತಿತ್ತು.

ಆತ ಯಾರನ್ನೋ ಕರೆದು ತಂದ. ಸಂಭಾವಿತರಂತೆ ಕಾಣುತ್ತಿದ್ದರವರು. ಅವರೆದುರು ಆತ ಹಾಗೆ ಹಲ್ಲು ಕಿರಿಯುತ್ತಿದ್ದ. ತಿಂಡಿಯ ತುಣುಕಿನ ಮೇಲೆ ನಾಯಿಯ ಕಣ್ಣಿದ್ದ ಹಾಗೆ! ಅವನ ದೃಷ್ಟಿ ಅವರ ಜೇಬುಗಳ ಮೇಲಿತ್ತು.

ಬಂದವರಲ್ಲೊಬ್ಬ ಶುದ್ಧ ಪಶು. ಆಕೆಯ ಅಂಗಾಂಗಗಳನ್ನೆಲ್ಲಾ ಹಿಡಿದು ನೋಯಿಸ ತೊಡಗಿದ.

ಆಕೆ ನೋವು ತಡೆಯಲಾರದೆ 'ವೆ ವೆ ವೆ ವೆ' ಎಂದು ಪ್ರತಿಭಟಿಸಿದಳು. ಎರಡೂ ಕೈಯಿಂದ ದಬ್ಬಿ ಅವನನ್ನು ಕೆಳಕ್ಕೆ ಬೀಳಿಸಿದಳು. ರಂಪವಾಯಿತು. ಆಕೆಯ ಯಜಮಾನನು ಬಡ ನಾಯಿಗೆ ಹೊಡೆದ ಹಾಗೆ ಆಕೆಗೆ ಬಡೆದ. ಆಕೆ ಮುದುಡಿಕೊಂಡು ಮೂಲೆಯಲ್ಲಿ ಬಿದ್ದಳು. ಬಂದವರು ಮುಖ ಸಿಂಡರಿಸಿಕೊಂಡು ಹೊರಟು ಹೋದರು.

ನಡುರಾತ್ರಿ ಆತ, ಬಿದ್ದಿದ್ದ ಜಾಗದಿಂದ ಆಕೆಯನ್ನೆತ್ತಿ ಚಾಪೆಯ ಮೇಲೆ ಇರಿಸಿದ. 'ನೋವಾಯಿತೆ? ನೋವಾಯಿತೆ?' ಎಂದ. ಆಕೆ ಏನನ್ನೂ ಹೇಳಲಿಲ್ಲ. ಕಣ್ಣುಗಳಲ್ಲಿ ಮಾತ್ರ ಏನೇನೋ ವಿವಿಧ ವಿಕಾರಗಳಾಗುತ್ತಿದ್ದವು. ಆದರೆ ಆ ಅಲ್ಪ ಜ್ಞಾನವನಿಗೆ ಅದರ ಅರ್ಥವಾಗಲಿಲ್ಲ.

ಅಂದಿನಿಂದ ಕಾಣಿ ಬಲು ಮೆದುವಾದಳು.

ಆತನನ್ನು ಆಕೆ ಪ್ರೀತಿಸಲಿಲ್ಲ. ಮೊದಲಸಾರೆ ಮೊಂಡು ಕೈಯವನನ್ನು ಪ್ರೀತಿಸಿದ ಹಾಗೆ ಯಾರನ್ನೂ ಆಕೆ ಪ್ರೀತಿಸಲಿಲ್ಲ.

ದುಡ್ಡಿನ ಬೆಲೆ ಕಾಣಿಗೆ ತಿಳಿಯದು- ಎಷ್ಟು ಬರುತ್ತಿತ್ತೋ ಏನೋ. ಎರಡು ಸೀರೆ-ರವಕೆ, ಜಂಪರ್, ರಾತ್ರೆ ಹೊರಹೋಗುವಾಗ ಹಾಕಿಕೊಳ್ಳಲು ತೂತಾಗಿದ್ದ, ಆದರೆ ಉಣ್ಣೆಯ, ಸ್ತ್ರೀ ಕೋಟು; ಮುಡಿಯಲು ಹೂ; ಮೂಗಿಗೆ ಹೊಡೆಯುವ ಎಣ್ಣೆ-ಕೂದಲಿಗೆ; ಹೊಟ್ಟೆ ತುಂಬ ಊಟ—ತಿಂಡಿ....ಹಾಗೆಯೇ ದಿನ ಕಳೆಯಿತು.

ಸದ್ಯಃ ಆಕೆ ಬಸುರಿಯಾಗಲಿಲ್ಲ!

ಇಷ್ಟಿದ್ದರೂ ಒಂದು ದಿನ ಆಕೆಗೆ ಎದೆ ನೋವಾಯಿತು. ಹೊರಳಾಡಿದಳು, ವಿಲಿವಿಲಿ ಒದ್ದಾಡಿದಳು. ತನ್ನ ಹಳ್ಳಿಯ, ತಾನು ಹುಟ್ಟಿದ ಗುಡಿಸಲಿನ ತನ್ನ ಭಾಷೆ ಯಾಡುವ ಜನರ, ಮೊಂಡುಕೈಯ ಮೊದಲ ಜತೆಗಾರನ ನೆನಪಾಯಿತು. ಓಹೋ ಓ ಓ-ಎಂದೆಲ್ಲ ಸ್ವರವೆತ್ತಿದಳು. ಎರಡು ದಿನವೂ ರಾತ್ರೆಯೂ ಹೀಗೇ ಆಯಿತು. ಗಿರಾಕಿಗಳು ಬರುವುದಾಗಲೇ ಇಲ್ಲ.

ಮೂರನೆಯ ಬೆಳಗು ಮುಂಜಾನೆ, ಅಲ್ಲಿದ್ದ ತಿಂಡಿಯನ್ನೆಲ್ಲ ಬಟ್ಟೆ ಬರೆಯನ್ನೆಲ್ಲ ಕಟ್ಟಿಕೊಂಡು ಆಕೆ ಓಡಿಹೋದಳು. ನಗರದ ಇನ್ನೊಂದು ಅಂಚನ್ನು ತಲುಪಿ ಅದನ್ನೂ ದಾಟಿದಳು.

* * * * * *

ದಾಟಿ ಮುಂದೆ ನಡೆದುದೊಂದು ಹಳ್ಳಿಗೆ. ಹೊಲ ಉಳುತ್ತಿದ್ದ ಒಂದು ಜತೆ ಎತ್ತು, ರೈತರು.......ಎಲ್ಲವನ್ನೂ ಆಕೆ ಮೌನದಿಂದ ನೋಡಿದಳು. ಕೆದರಿದ ತಲೆ ಕೂದಲನ್ನು ಬಾಚುವುದೂ ನೆನಪಾಗಲಿಲ್ಲ ಆಕೆಗೆ. ಒಂದಾಣೆಯ ಪುಟ್ಟ ಕನ್ನಡಿಯಲ್ಲಿ ತನ್ನ ಪ್ರತಿರೂಪವನ್ನು ನೋಡುವ ಬಯಕೆಯೂ ಆಗಲಿಲ್ಲ. ತಿಂಡಿ ತಿನ್ನುವುದೂ ಬೇಕೆನಿಸಲಿಲ್ಲ.

ಮಳೆ ಹನಿ ಬಿದ್ದು ಸುತ್ತಲಿನ ನೆಲವೆಲ್ಲ ಹಸುರಾಗಿತ್ತು. ಚಿಗುರುಹುಲ್ಲಿನ ಮೇಲೆ ಕಾಣಿ ಒಂದೆಡೆ ಕುಳಿತಳು.

ತನ್ನ ಬಾಲ್ಯದ ನೂರೊಂದು ನೆನಪುಗಳು ಬಂದವು. ಮುಖ ಸಣ್ಣದಾಯಿತು. ನಿಧಾನವಾಗಿ ಜೊಂಪು ಹತ್ತಿ ಅಲ್ಲೇ ಒರಗಿ ನಿದ್ದೆ ಹೋದಳು.

ಸಂಜೆ, 'ಶ್ ಶ್ ಏಯ್ ಏಯ್' ಎಂದು ಕೆಲವು ರೈತ ಹೆಂಗಸರು ಎಬ್ಬಿಸಿದಾಗಲೇ ಆಕೆ ಕಣ್ಣು ತೆರೆದದ್ದು.

ಕತ್ತಲಾದಂತೆ ಆ ಹಳ್ಳಿಯಲ್ಲಿ ಆಕೆಗೆ ಹೆದರಿಕೆಯಾಯಿತು. ಧಾವಿಸುತ್ತ ಧಾವಿಸುತ್ತ ಕಾಣಿ ನಗರ ಸೇರಿದಳು.

ಒಂದು ಕೊನೆಯಲ್ಲಿ ಆ ಶಾಲೆ ಇತ್ತು. ರಾತ್ರಿ ಅಲ್ಲಿ ಯಾರೂ ಇರುತ್ತಿರಲಿಲ್ಲ. ಅಲ್ಲಿಯೇ ಜಗಲಿಯ ಒಂದು ಮೂಲೆಯಲ್ಲಿ ಆಕೆ ಮಲಗಿದಳು.

* * * * * *

ಬೆಳಗಾದೊಡನೆಯೇ ಎದ್ದು ಹೋದಳಾಕೆ. ಹೋಗುತ್ತ ಮೈಮೇಲಿನ ಬಟ್ಟೆ ಸರಿಪಡಿಸಿಕೊಂಡಳು; ಕೊಂಚವಟ್ಟಿಗೆ ಸಿಂಗರಿಸಿಕೊಂಡಳು.

ಹಾಗೆಯೇ ಸುತ್ತಾಡಿದಾಗ ಆ ಜಾಗದ ಪರಿಚಯವಾಯಿತು. ವಿಸ್ತಾರ ಭೂಮಿ—ಸುತ್ತಲೂ ಹಸುರು ಹುಲ್ಲು. ಅಲ್ಲೆ ಆ ಸರ್ಕಲ್— ಅದರ ನಡುವಿನಲ್ಲಿ ಕಾರಂಜಿ. ಯಾರದೋ ಒಂದು ಪ್ರತಿಮೆ. ದೂರದಲ್ಲಿ ಒಂದೇ ಒಂದಾದ ಯಾವುದೋ ದೊಡ್ಡ ಕಟ್ಟಡ.

ಮೂಲೆಯಲ್ಲಿ ಕಡಲೆಕಾಯಿ ಮಾರುತ್ತ ಕುಳಿತಿದ್ದವನೊಬ್ಬನಿಗೆ ಇದ್ದ ಪುಡಿ ಕಾಸು ಸುರಿದು, ಕಾಸಿನ ಬೆಲೆ ಏನೆಂಬುದನ್ನು ಆ ಮೂಕಿ ಕಲಿತಳು.

ಹಸಿವು ಇಂಗಲಿಲ್ಲ.

ಕತ್ತಲಾದಾಗ ಆ ಸರ್ಕಲಿನ ಬಳಿ ಹೋಗಿ ಒಂದು ಮೂಲೆಯಲ್ಲಿ ಕುಳಿತಳು. ಕೇಂದ್ರದ ಒಂದೇ ಒಂದು ದೀಪದಿಂದ ಮಂದಪ್ರಕಾಶವಷ್ಟೇ ಬೀಳುತ್ತಿತ್ತು. ಹಾದು ಹೋಗುತ್ತಿದ್ದವರು ಆಕೆಯನ್ನು ನೋಡಿ ಹೋಗುತ್ತಿದ್ದರು. ನೋಡಿದ ಒಬ್ಬಿಬ್ಬರು ಮುಂದೆ ಹೋದ ಬಳಿಕ ತಿರುಗಿ ನೋಡುತ್ತಿದ್ದರು.

ಗಂಭೀರನಾಗಿ ಕಾಣುತ್ತಿದ್ದ ಮನುಷ್ಯನೊಬ್ಬ ಕನ್ನಡಕವನ್ನು ಸರಿಪಡಿಸುತ್ತ ಆ ಹಾದಿಯಲ್ಲೆ ಎರಡು ಬಾರಿ ಸುಳಿದ. ಕಾಣಿ ಎದ್ದು ನಿಂತು ಸರ್ಕಲಿನಿಂದ ಹೊರಕ್ಕೆ ಬಯಲಿನತ್ತ ನಡೆದಳು—ಎಲ್ಲೋ ಮರದತ್ತ. ಯಾವುದೋ ಪೊದೆಯ ಬಳಿಗೆ. ಆ ಮನುಷ್ಯ ಹಿಂದೆ ಮುಂದೆ ನೋಡುತ್ತಾ ಆಕೆಯನ್ನು ಹಿಂಬಾಲಿಸಿದ.

....ಮರುದಿನ ಕಾಗದದ ಚೂರನ್ನು ಕೊಟ್ಟರೆ ತಿಂಡಿಯೂ ಬರುವುದು, ಊಟವೂ ಬರುವುದು, ಚಿಲ್ಲರೆ ಕಾಸೂ ವಾಪಸು ಬರುವುದು, ಎಂದು ಕಾಣಿ ಕಲಿತಳು. ಎಷ್ಟು ವಾಪಸು ಬರುತ್ತಿತ್ತೊ ಏನು ಕತೆಯೋ—ಅಷ್ಟೆಲ್ಲ ಜ್ಞಾನವಿರಲಿಲ್ಲ ಆಕೆಗೆ.

ಅಂದಿನಿಂದ ಹಗಲು ಅಲೆದಾಟ. ಸಂಜೆ ಸರ್ಕಲಿನಲ್ಲಿ ಒಂದೋ ಎರಡೋ ಪರಿಚಯ; ಸಮೀಪದ ಹುಲ್ಲುಗಾವಲಿನ ಹಾಸಿಗೆಯಲ್ಲಿ ಆಕೆಯೇ ಒಂದು ಸಾರಿಯೋ ಎರಡು ಮೂರು ಸಾರಿಯೋ ಸಾಯುವುದು—ಸತ್ತು ಜೀವಿಸುವುದು.

ಜೀವಿಸಿ ಮತ್ತೆ ಮಾರನೆದಿನ ರಾತ್ರಿ ಸಾಯುವುದು.

ಹಾಗೆಯೇ ಕಾಲ ಕಳೆಯಿತು...........

ಎಂಥೆಂಥವರೆಲ್ಲ ಆಕೆಯ ಬಳಿಗೆ ಬರುತ್ತಿದ್ದರೋ ಆಕೆಗೆ ತಿಳಿಯದು. ಕುಡುಕ 'ಲಫಂಗ'ರಿರಬಹುದು; ದಿಕ್ಕುಗೆಟ್ಟ ಭ್ರಮರ ಜೀವನದ ವಿಲಾಸಿಗಳಿರಬಹುದು; ಹಗಲೆಲ್ಲ ಸಾಂಪ್ರದಾಯಿಕ ಬುದ್ಧಿ ಮತ್ತೆಯ ಸೋಗು ಧರಿಸುವ ಕಾಮುಕರಿರಬಹುದು. ಮನೆಯ ಅತೃಪ್ತಿಯನ್ನು ಹೋಗಲಾಡಿಸುವ ದಾಹಿಗಳಿರಬಹುದು........ಆಕೆಗೆ ತಿಳಿಯದು. ಮಾತು ಬರುತ್ತಿದ್ದರೆ, ಏನಾದರೂ ಅರ್ಥವಾಗುತ್ತಿತ್ತೋ ಏನೋ. ಮುಖ ನೋಡಿದರೆ ಅದರ ಹಾವಭಾವದಿಂದ ಸ್ವಲ್ಪವಾದರೂ ತಿಳಿಯುವುದು ಆಕೆಗೆ. ಆದರೆ ಆ ರಾತ್ರೆ ಹೊತ್ತಿನಲ್ಲಿ ಬಂದವರ ಮುಖ ಕಾಣುವುದೇನು ಬಂತು?

ಇದು ಮಾನವೀಯವೆ? ಪಾಶವಿಕವೆ? ಎಂಬುದೂ ಆಕೆಗೆ ತಿಳಿಯದು. ಪ್ರೇಮ–ಕಾಮಗಳ ವಿಚಾರವನ್ನು ಬಲ್ಲವಳಲ್ಲ ಆಕೆ. ಎಳೆ ಮೀಸೆಯವರಿರಲಿ–ಮುದುಕರಿರಲಿ, ಆಕೆಗೆರಡೂ ಸಮವೇ. ದೇಹ ಬಳಲಿದಾಗ ಆಕೆ ನರಳುವಳು. ನೋವಾದಾಗ ಗಂಟಲಿನಿಂದ ಅರ್ಥವಾಗದ ವಿಕೃತ ಸ್ವರ ಹೊರಡಿಸುವಳು....

ತಾನು ಮೂಕಿ. ಮೂಕಿಯಿಂದ ತೃಪ್ತಿ ಬಯಸುವವರ ಮನಸ್ಸಿನಲ್ಲಿ ಏನೇನು ಅನುಭವಗಳಾಗುತ್ತವೆಂಬುದೂ ಗೊತ್ತಿಲ್ಲ ಕಾಣಿಗೆ. ನಡೆಯುವುದೆಲ್ಲ ಯಾಂತ್ರಿಕ ವ್ಯವಹಾರ. ಆಕೆಯೊಂದು ಉಸಿರಾಡುವ ಯಂತ್ರ.

* * * * * *

ಮಳೆ ಬಲವಾಯಿತು. ಗಿರಾಕಿಗಳು ಬರಲಿಲ್ಲ. ಆಗಾಗ್ಗೆ ಸಂಪಾದನೆ ಕಡಿಮೆಯಾಯಿತು. ಜೀವ ಸಣ್ಣಗಾಯಿತು. ಕಾಣಿ ಬಡಕಲಾದಳು. ತಾನೇ ಎದ್ದು ಜನರಿದ್ದೆಡೆಗೆ ಹೋಗಿ ಅವರ ಸುತ್ತ ಮುತ್ತು ಸುಳಿಯಲಾರಂಭಿಸಿದಳು.

ಕೆನ್ನೆಗಳು ಗುಳಿಬಿದ್ದುವು; ಕಣ್ಣು ಕೆಳಕ್ಕಿಳಿಯಿತು. ಜ್ವರ ಬರತೊಡಗಿತು.

ಮತ್ತಷ್ಟು ಹೆಚ್ಚು ಸಿಂಗಾರ ಮಾಡಿಕೊಂಡಳಾಕೆ.

ಆಕೆ ದೂರದಲ್ಲಿ ಬಳುಕುತ್ತ ನಡೆಯುತ್ತಿದ್ದರೆ, ಆ ಉಣ್ಣೆ ಕೋಟನ್ನು ಧರಿಸಿದ್ದರೆ, ತಲೆಗೆ ಹೂ ಮುಡಿದಿದ್ದರೆ, ಸುಮಾರಾಗಿ ಕಾಣಿಸುತ್ತಿದ್ದಳು. ಆದರೆ ಹತ್ತಿರದಲ್ಲಿ ಮುಖವಿಟ್ಟು ನೋಡಿದರೆ, ಎರಡು ಕಣ್ಣುಗಳಲ್ಲಿ ಎರಡು ದೆವ್ವಗಳು ನರ್ತಿಸುತ್ತಿದ್ದಂತೆ ತೋರುತ್ತಿತ್ತು.

ಕೆಲವು ಪುಂಡರು ಆಕೆ ಮಲಗುತ್ತಿದ್ದ ಶಾಲೆಗೇ ಬರುತ್ತಿದ್ದರು ರಾತ್ರಿ ಹೊತ್ತು. ಆದರೆ ಪುಡಿಕಾಸು ಬಿಚ್ಚುತ್ತಿರಲಿಲ್ಲ. ಆಕೆ ಜಗಳಾಡುತ್ತಿದ್ದಳು. ಆದರೂ ಪೀಡಿಸಿ ಬಲಾತ್ಕರಿಸುತ್ತಿದ್ದರು. ಅವರ ನಗೆಯೋ-ವಿಕಟ ಅಟ್ಟಹಾಸಗಳೋ! ಕಾಣಿ ಪ್ರತಿಭಟನೆ ವಿಫಲವಾದಾಗ ತೇಕುತ್ತ ತೇಕುತ್ತ ಆದದ್ದಾಗಲೆಂದು ತಲೆಬಾಗುತ್ತಿದ್ದಳು.

ಜ್ವರ ಹೆಚ್ಚಿತು. ಕೆರೆಯಲ್ಲಿ ಸ್ನಾನ ಮಾಡಬೇಡವೆಂದು-ಆಕೆಯ ಮನಸ್ಸು ಹೇಳಿದಂತಾಯಿತು.

ಚರ್ಮಕ್ಕೇನೋ ರೋಗ ಬಡಿಯಿತು. ಯುವತಿ ಕಾಣಿ ತುಂಬ ನರಳಾಡಿದಳು.

ಮೈಯಿಂದ ಕೆಟ್ಟ ವಾಸನೆ ಬರತೊಡಗಿತು.

ಕಾಣಿ ಇರುವ ತಾಣ ಬದಲಿಸಿದಳು. ಒಂದು ಫರ್ಲಾಂಗಿನಾಚೆ ಇದ್ದ ಮುರುಕು ಮನೆಯೊಂದರ ಬಳಿಗೆ ಹೋದಳು. ಅಲ್ಲೊಬ್ಬ ನಡುವಯಸ್ಸಿನ ಭಿಕ್ಷುಕ ತನ್ನ ಅರಮನೆ ಕಟ್ಟಿಕೊಂಡಿದ್ದ.

ಆತ ಮೂರುದಿನ ಅವಳಿಗಿಷ್ಟು ಗಂಜಿ ನೀಡಿದ.

ಆಕೆ, ಮುರಿದಿದ್ದ ಮಾಡಿನೆಡೆಯಿಂದ ಆಕಾಶದತ್ತ ಬಿರಬಿರನೆ ನೋಡುತ್ತ ಮಲಗಿದಳು.

ನಾಲ್ಕನೆಯ ದಿನ ಜ್ವರ ಸ್ವಲ್ಪ ವಾಸಿ ಎಂದು ತೋರುತ್ತಿತ್ತು. ಆಕೆ ಎದ್ದು ಕುಳಿತಳು. ಆ ಭಿಕ್ಷುಕ, ಆಶೆಯಿಂದ ಅವಳ ಕಡೆ ನೋಡಿದ. ಆಕೆಯ ಮುಖದ ಮೇಲೆ ಯಾವ ಭಾವನೆಯೂ ಇರಲಿಲ್ಲ. ಇಂಥ ಭಾವನೆಗಳನ್ನು ಅನುಭವಿಸುವ ಸಾಮರ್ಥ್ಯವೆಲ್ಲ ಆಕೆಯಲ್ಲಿ ನಶಿಸಿ ಹೋಗಿತ್ತು. ಆತ ಆ ದಿನ ಭಿಕ್ಷವೆತ್ತುವುದಕ್ಕೂ ಹೋಗದೆ ಅವಳೊಡನೆಯೇ ಇದ್ದು ಬಿಟ್ಟ. ರೋಗಪೀಡಿತವಾಗಿದ್ದ ಆತನ ದೇಹ, ಬಹಳ ದಿನಗಳ ಬಯಕೆಯನ್ನು ಈಡೇರಿಸಹೊರಟಿತ್ತು.

ಸಂಜೆ ಕಾಣಿ, ತನ್ನ ಕರಿಯ ಕೋಟನ್ನು ಹೊದ್ದುಕೊಂಡು, ನಿಧಾನವಾಗಿ ನಡೆಯುತ್ತ ಹುಲ್ಲುಗಾವಲನ್ನು ದಾಟಿ, ಸರ್ಕಲಿನತ್ತ ಹೋಗಿ, ಕತ್ತಲೆ ಇದ್ದ ಆ ಒಂದು ಮೂಲೆಯಲ್ಲಿ ನಿಂತಳು. ಆಕೆಗೆ ಬವಳಿ ಬಂದಹಾಗಾಗುತ್ತಿತ್ತು. ಊರಿನ ಹೊಲ, ತಾಯಿ-ತಂದೆ, ಮೊಂಡು ಕೈಯ ಜತೆಗಾರ—ಇವರೆಲ್ಲ ಕಣ್ಣ ಮುಂದೆ ಬಂದಹಾಗಾಯಿತು. ಕೂಲಿಯಾಗಲೆಂದು ಮದರಾಸಿಗೆ ಹೋದ ಅಣ್ಣನೂ, ಜಗಳಾಡಿ ಮನೆ ಬಿಟ್ಟ ತಮ್ಮನೂ ಎದುರಿನಲ್ಲಿ ನಿಂತು 'ಕಾಣೀ' ಎಂದು ಕರೆದಹಾಗಾಗುತ್ತಿತ್ತು ........ಹೃದಯವೆಲ್ಲ ನೋವಿನಿಂದ ತುಂಬಿತು........

ಬಹಳ ಹೊತ್ತು ನಿಂತಿರಲಾರದೆ ಆಕೆ ಅಲ್ಲಿಯೇ ಮೂಲೆಯಲ್ಲಿ ಕುಸಿ ಕುಳಿತಳು. ದೂರದಲ್ಲಿ ಕಡಲೆಕಾಯಿ ಮಾರುವಾತನ ಕಾಗದದೊಳಗಿನ ದೀಪ ಬಾ ಎನ್ನುತ್ತಿತ್ತು.

ಆದರೆ ಪುಡಿಕಾಸಿರಲಿಲ್ಲ. ಕೈ ಚಾಚಿ ಬಾಚಿ ಕಡಲೆಕಾಯಿ ಒಯ್ದು ಬಿಡಬೇಕೆಂದು ತೋರಿತು. ಆದರೆ ಸಾಮರ್ಥ್ಯವಿರಲಿಲ್ಲ.

ಗಂಟೆ ಒಂದು ಕಳೆಯಿತು—ಒಂದೂವರೆಯಾಯಿತು. ಕಾರಂಜಿಯ ಬಳಿ ಕುಳಿತವರೆಲ್ಲ ಒಬ್ಬೊಬ್ಬರಾಗಿ ಮನೆಯ ಕಡೆ ಹೊರಟರು. ಕಾಣಿ ಒಬ್ಬೊಬ್ಬರನ್ನೇ ಆಸೆಯ ದೃಷ್ಟಿಯಿಂದ ನೋಡಿದಳು.

ಕೊನೆಗೊಬ್ಬ ಬಂದು ದೂರದಲ್ಲಿ ನಿಂತ. ಧಾಂಡಿಗ ದೇಹ. ಪೋಲಿ ಸ್ವರೂಪಿ. ತೋಳು ಬೀಸಿ ಸನ್ನೆ ಮಾಡಿದ. ಆಕೆ ಎದ್ದುನಿಂತು ಪ್ರಯಾಸದಿಂದ ಕಾಲೆಳೆದು ಕೊಂಡು ಆತನನ್ನು ಹಿಂಬಾಲಿಸಿದಳು.

ಆತ ಯಾವನೋ ಹೊಸಬ. ಅಲ್ಲೇ ಪೊದರಿನಾಚೆ ಆಕೆಯನ್ನಾತ ಕೆಡವಿದ. 'ಗೊರಕ್' ಎಂದಳು ಕಾಣಿ...........

........ಸಿಡಿಮಿಡಿಗೊಂಡು ಆತ ಎದ್ದುನಿಂತು ಮೈ ಕೊಡವಿದ. 'ಥುತ್!' ಎಂದು ಆಕೆಯ ಮೇಲೆ ಉಗುಳಿದ. ಕಾಣಿ ಎದ್ದು ಕುಳಿತುಕೊಳ್ಳಲು ಯತ್ನಿಸಿದಳು. ಆದರೆ ಶಕ್ತಿಯೇ ಇರಲಿಲ್ಲ.

ಆತ ಮತ್ತೊಮ್ಮೆ 'ಥುತ್' ಎಂದು ಹೊರಟ.

ಕಾಸು ಕೊಡಲಿಲ್ಲ.

ಕಾಣಿ ಆರ್ತನಾದ ಮಾಡುವಂತೆ ಬಾಯಿ ತೆರೆದಳು; ಆದರೆ ಸ್ವರ ಹೊರಡ ಲಿಲ್ಲ. ಏಳಬೇಕೆಂದು ಮತ್ತೊಮ್ಮೆ ಪ್ರಯತ್ನಿಸಿದಳು; ಸಾಧ್ಯವಾಗಲೇ ಇಲ್ಲ.

ಆತ ಬೇಗಬೇಗನೆ ಹೆಜ್ಜೆ ಇಡತೊಡಗಿದ.

ಕೊನೆಗೊಮ್ಮೆ ಆಕೆ ತೆವಳಿ ಎದ್ದಳು.

ಹೆತ್ತ ಎಳೆಗೂಸನ್ನು ಕಸಿದೊಯ್ಯುವ ಪಾಪಿಯ ಬೆನ್ನಟ್ಟುವಂತೆ ಆಕೆ ಓಡಿದಳು.

'ಲೊಬೊಲೊಬೊ' ಎಂದಾಕೆ ಬೊಬ್ಬಿಟ್ಟಳು. 'ಯವವಾ ತಕಕಾ ಆಆ' ಎಂದು ಚೀರಿದಳಾಕೆ.

ಈತ ದುಡ್ಡು ಕೊಡದೆ ಓಡುತ್ತಿದ್ದಾನೆ; ಆಕೆ ತನ್ನ ಭಾಷೆಯಲ್ಲಿ ನ್ಯಾಯ ಮೀರಿ ವರ್ತಿಸಬೇಡವೆಂದು ಕೇಳುತ್ತಿದ್ದಾಳೆ. ನಾಳೆಯ ಒಂದು ತುತ್ತು ಅನ್ನ ಕಸಿಯಬೇಡ ವೆಂದು ಮೊರೆಯಿಡುತ್ತಿದ್ದಾಳೆ.

ಈತ ಗಾಬರಿಯಾಗಿ ನಿಂತು ನೋಡಿದ. ಜನರಿನ್ನೂ ಇದ್ದರು. ಅವರಿಗೆ ಕೇಳಿಸಬಹುದು. ಯಾರಾದರೂ ತನ್ನ ಬೆನ್ನಟ್ಟಬಹುದು........

ಆ ಆಸಾಮಿ ಥಟಕ್ಕನೆ ಹಿಂತಿರುಗಿದ. ಆಕೆಯ ಗಂಟಲಿಗೆ ಕೈಹಾಕಿ ಹಿಸುಕಿ ನೆಲಕ್ಕುರುಳಿಸಿದ. 'ಹೊಲಸು ರಂಡೆ!' ಎಂದು ಶಪಿಸಿದ. ಆಕೆಯ ಹೊಟ್ಟೆಗೆ ಬೂಟು ಗಾಲಿನಿಂದ ಒದೆದ.

ಕಾಣಿ ಹಾಗೆಯೇ ಬಿದ್ದುಕೊಂಡಳು............ಗಂಟಲಲ್ಲಿ ಏನೋ ಸ್ವರ ಬರುತ್ತಿತ್ತು. ಆದರೆ ಅದು ಹೊರಗೆ ಕೇಳಿಸುತ್ತಿರಲಿಲ್ಲ.

ಉಸಿರಾಡುತ್ತಿತ್ತು......ಮೆಲ್ಲಮೆಲ್ಲನೆ........ನಿಂತು ನಿಂತು........ನಿಧಾನವಾದ ಉಸಿರು........ಕೊನೆಯ ಒಂದೆರಡು ಉಸಿರಾಟ.

* * * * * *

ಬೆಳಗಾಯಿತು.

....ಸೂರ್ಯ ಮೇಲಕ್ಕೆ ಬಂದಂತೆ ಕಾವೇರತೊಡಗಿತು. ಸರ್ಕಲನ್ನು ಹಾದು ಹೋಗಲೇಬೇಕಾದವರು, ಭೀತಿಯಿಂದೊಮ್ಮೆ ಎಡಕ್ಕೆ ಕಣ್ಣು ಹೊರಳಿಸಿ, ಮತ್ತೆ ತಲೆ ಕೆಳಗೆ ಮಾಡಿ, ಸರಸರನೆ ನಡೆದುಹೋಗುತ್ತಿದ್ದರು.

ಎಲ್ಲರೂ ಚಲಿಸುತ್ತಲೇ ಇದ್ದರು. ನಿಲ್ಲುವವರು ಯಾರೂ ಇರಲಿಲ್ಲ......

............ಪೌರಸಭೆಯ ವ್ಯಾನು ಬಂದು ಕಳೇಬರವನ್ನು ಒಯ್ಯುವುದೆಂದು ಯಾರೋ ಹೇಳುತ್ತಿದ್ದರು.

ಕಾಣಿಯ ದೇಹದ ಮೇಲೆ ಎತ್ತರದಲ್ಲಿ ಗಿಡುಗವೊಂದು ಸುತ್ತು ಸುತ್ತು ಬರುತಿತ್ತು.

ಅದನ್ನೇ ನೋಡುತ್ತಿದ್ದ ಹಾಗೆ ಕಣ್ಣರಳಿಸಿ ಕಾಣಿ ಮಲಗಿದ್ದಳು.

ಸುತ್ತು ಬರುತ್ತಲೇ ಇತ್ತು ಗಿಡುಗ, ಕೆಳಗೆ ನೋಡುತ್ತ.

—ಕೊನೆಯ ಗಿರಾಕಿ.

**—ನಿರಂಜನ**

# ಮುಕ್ಕಣ್ಣನ ಮುಕ್ತಿ

ಗಾಡಿ ಹೊಡೆಯುತ್ತಿದ್ದ ಲಿಂಗಣ್ಣನ ಮಗ ಗಂಗ ಎಡಕ್ಕೆ ಹೂಡಿದ್ದ ಹೋರಿ-'ಮುಕ್ಕಣ್ಣ'ನನ್ನು ಬಾರುಕೋಲಿನಿಂದ ಬೀಸಿ ಒಮ್ಮೆ ಸೆಳೆದ. ಮುಕ್ಕಣ್ಣನ ಹೊಟ್ಟೆಯ ಮೇಲೆ ಬಾರುಕೋಲಿನ ಸೆಳೆಯು ಬಾಸಾಳ ಬರೆದಂತೆ ಮೂಡಿತು! ಹೊಟ್ಟೆಯಲ್ಲಿ ಉರಿಬಿದ್ದ ಮುಕ್ಕಣ್ಣ, ಅರೆಪೆಟ್ಟು ಮಾಡಿದ ನಾಗರಹಾವಿನಂತೆ ಬುಸ್‌ಗರೆದು ಮುನ್ನುಗ್ಗಿತು! ಬಲಕ್ಕೆ ಹೂಡಿದ್ದ 'ಆಲ' ಮುಕ್ಕಣ್ಣನೊಡನೆ ಪ್ರಯಾಸದಿಂದ ಸ್ಪರ್ಧಿಸುತ್ತಿತ್ತು!

ಮೂಲು ತುಂಬಿದ ಬಂಡಿಯನ್ನು ಗೌರೀಪುರದ ಕಣಿವೆಯಲ್ಲಿ ಎಳೆಯುವುದು ಎತ್ತುಗಳಿಗೊಂದು ಯಮಯಾತನೆ! ಹೆಜ್ಜೆ ಹೆಜ್ಜೆಯಿಟ್ಟು ಕಣಿವೆ ಹತ್ತಿ ನಿಂತರೆ ಮತ್ತೊಮ್ಮೆ ತಾಯಿ ಹೊಟ್ಟೆಯಲ್ಲಿ ಹುಟ್ಟಬಂದಂತೆ! ಎಂಥ ಹೆಸರಾದ ಎತ್ತುಗಳೂ ಗೌರಿಪುರದ ಕಣಿವೆಯಲ್ಲಿ ಮುಗ್ಗರಿಸಿ ಮಣ್ಣು ತಿಂದು ಹೋಗುತ್ತವೆ! ಮೂಕ ಜೀವದ ಯಾತನೆ ನೋಡಲಾರದೆ ಗಂಗನ ತಂದೆ ಲಿಂಗಣ್ಣ ಹಿಂದಿನಿಂದ ಗಾಡಿ ದಬ್ಬುತ್ತಿದ್ದ. ಇಳಿ ವಯಸ್ಸಿನ ಆ ಲಿಂಗಣ್ಣ, ತಲೆಗೆ ಸುತ್ತಿದ ಒಲ್ಲಿಯನ್ನು ಉಂಡೆಮಾಡಿ, ನೆತ್ತಿಗೆ ಕಟ್ಟಿಕೊಂಡು ತಾನೂ ಒಂದು ಮೂಕ ಬಸವನಂತೆ ಉಸಿರು ಕಟ್ಟಿ ಗಾಡಿಯನ್ನು ಹಿಂದಿನಿಂದ ದಬ್ಬುತ್ತಿದ್ದ! ಮುಕ್ಕಣ್ಣ ಸರಕ್ಕನೆ ಎಳೆದುದರಿಂದ ಲಿಂಗಣ್ಣನಿಗೆ ಜೋಲಿ ಬಂದು ಮುಗ್ಗರಿಸುವಂತಾಯಿತು! ಗಂಗನ ಕೈಯಲ್ಲಿದ್ದ ಮುಕ್ಕಣ್ಣನ ಹಿಡಿಹಗ್ಗ ಕೈಯಿಂದ ಜಾರಿತು. ಮೂಗಿನ ಅಳುಕು ತಪ್ಪಿ ಮುಕ್ಕಣ್ಣ ಬಲಗಡೆ ಆಲನನ್ನು ಮುರಿದು ಮುಂದಕ್ಕೆ ಹೋಯಿತು. ಭಾರವೆಲ್ಲ ತನ್ನ ಮೇಲೆಯೇ ಬಿದ್ದುದರಿಂದ ಆಲ ನಿಂತುಬಿಟ್ಟಿತು!

'ಮುಕ್ಕಣ್ಣನ್ನ ಹಿಡ್ದು ಹೊಡೆಯೋ ತಮ್ಮ' ಎಂದು ಲಿಂಗಣ್ಣ ಬಂಡಿಯ ಹಿಂದಿನಿಂದ ಕೂಗಿದ.

ಗಂಗ ಇನ್ನೂ ೧೪-೧೫ರ ಹುಡುಗ. ಹೋರಿ ಮುರಿಗೆಮಾಡಿ ಎಳೆದರೆ ಹಿಡಿಯುವ ತ್ರಾಣ ಅವನಿಗೆಲ್ಲಿಯದು! ಪಾಪ ಕೊಸರಿ ಹೋದ ಹಗ್ಗವನ್ನು ಜಗ್ಗಿ ಹಿಡಿದು ನೊಗಕ್ಕೆ ಕಾಲೊದೆದು ಬಲಗೈಯಲ್ಲಿದ್ದ ಬಾರುಕೋಲಿನಿಂದ ಮತ್ತೊಮ್ಮೆ ಜಡಿದ.

'ಕೊಚ್ಚಿ ಎಳಿತೀಯೇನು? ಕೊಚ್ಚಿ! ಕಳ್ಳಭಡವ....!' ಎಂದು ಗಂಗ ರೇಗಿದ. ಮುಕ್ಕಣ್ಣ ಅವನಿಗಿಂತಲೂ ರೇಗಿ ಮತ್ತೂ ಕೊಸರಿ ಎಳೆಯಿತು. ಮೊದಲೇ ರೋಷದ ಹೋರಿ! ಹೊಡೆತ ತಿಂದರಂತೂ ಹುಲಿಯೇ ಹುಲಿ! ರಸ್ತೆಯ ಮೇಲಿನ ಕಲ್ಲು ಹರಳು, ಗೊರಸಿನ ತುಳಿತಕ್ಕೆ ಕಿಡಿಕಾರಿ ಸಿಡಿದು ಮಾರುದ್ದ ಹಾರುವಷ್ಟು ರಭಸವಾಗಿ ಕಾಲು

ತುಳಿದು ನುಗ್ಗಿಬಿಟ್ಟಿತು! ಎದುರಿಗೆ ನಿಂತಿದ್ದ ಘಟ್ಟವನ್ನೇ ಸೀಳಿ ಎತ್ತಿ ಒಗೆಯುವಷ್ಟು ಸಿಟ್ಟಿನಿಂದ ಮುಂದುವರಿಯಿತು. ಮುಕ್ಕಣ್ಣನೊಡನೆ ಜೀವನವೆಲ್ಲ ಕಳೆದಿದ್ದ ಆಲ ನಾಲ್ಕು ಹೆಜ್ಜೆ ಎಣಗಿ ಸುಮ್ಮನೆ ನಿಂತುಬಿಟ್ಟಿತು. ಗಾಡಿ ಏಕಾಏಕಿ ಬಲಕ್ಕೆ ತಿರುಗಿ ರಸ್ತೆಗೆ ಅಡ್ಡವಾಗಿ ನಿಂತುಬಿಟ್ಟಿತು!

ಲಿಂಗಣ್ಣನಿಗೆ ಸಿಟ್ಟು ಬಂತು. ಗಾಡಿಯನ್ನು ಕೈಬಿಟ್ಟು ಮುಂದಕ್ಕೆ ಬಂದು: 'ಹಂಗೇ ರಮ್ಮಿಸಿ ಹೊಡೆಯಾಕ ಬರಲ್ಲ ಅಮ್ತಾತೇನಲೆ ನಿನಗೆ? ಬಾರುಕೋಲು ತಾಯಿಲ್ಲಿ. ನಿನ್ನ ತಲೆ ಬೋಳಿಸ್ತು' ಎಂದ.

'ಕತ್ತೆ ಎಳದಂಗ್ಽ ಎಳದ್ರೆ ಏನು ಮಾಡ್ಬೇಕು ಮತ್ತೆ?'

'ಅದು ಯಾತಕ್ಕಾದೀತು ಕತ್ತೆ! ನೀನು ಕತ್ತೆ. ಅನ್ನ ತಿಂಬೋ ಅರಿವಿನ ಪ್ರಾಣೀಗೆ ತಿಳೀಯದ್ದು ಅದಕೇನು ತಿಳೀತದೆ ಪಾಪ!' ಎಂದ ಲಿಂಗಣ್ಣ.

ಬಂಡಿಯ ಕತ್ತರಿಯಿಂದ ಗಂಗ ಇಳಿದುಬಂದು, ಮುಕ್ಕಣ್ಣನ ಮೂಗುದಾರ ಹಿಡಿದುಕೊಂಡು ಬಾರುಕೋಲಿನ ಕಾವಿನಿಂದ ಮುಖಕ್ಕೆ ಒಮ್ಮೆ ತಿವಿದು: 'ಸರಿ, ಸರಿ! ಬಾಡ್ ಖಾವ್—' ಎಂದು ಗದರಿಸಿದ.

ಲಿಂಗಣ್ಣನಿಗೆ ಹೊಟ್ಟೆಯಲ್ಲಿ ಉರಿಬಿತ್ತು! ಗಂಗನ ಕೈಯೊಳಗಿನ ಬಾರುಕೋಲು ಕಿತ್ತುಕೊಂಡು ತನ್ನ ಹೊಟ್ಟೆಯ ಮಗನೆಂಬುದನ್ನು ಮರೆತು, 'ಅದೇ ಬಾರುಕೋಲೀಲಿ ನಿನ್ನ ಬಡಿದ್ರೆ?' ಎಂದು ಜೋರಾಗಿ, ಗಂಗನಿಗೆ ಬಾರಿಸಿಯೇ ಬಿಟ್ಟ! ಗಂಗ ಸೆಳೆಯ ಚುರುಕು ತಗಲಿ ಚಿಟ್ಟನೆ ಚೀರಿದ! ಲಿಂಗಣ್ಣ ಮುಕ್ಕಣ್ಣನ ಕೆಳಹೊಟ್ಟೆ ನೋಡಿದ. ಎರಡು ಸಾರಿ ಸೆಳೆದ ಬಾರು ಕೋಲಿನ ಸೆಳೆಯ ಬಾಸಾಳ ಕಿರುಬೆರಳು ಗಾತ್ರ ಒಂದೊಂದು ಮೊಳದುದ್ದ ಮೂಡಿದ್ದವು. ಲಿಂಗಣ್ಣನಿಗೆ ದುಃಖ ತಡೆಯಲಾಗಲಿಲ್ಲ! ಎತ್ತುಗಳ ಕೊರಳು ಸರಿದು ಮುಕ್ಕಣ್ಣನನ್ನು ಹಿಡಿದುಕೊಂಡು ರಸ್ತೆಯ ಪಕ್ಕಕ್ಕೆ ಹೋಗಿ ಮೈಮೇಲೆ ಕೈಯಾಡಿಸಿದ. ಬಾಸಾಳವನ್ನು ಮುಟ್ಟಿ ಮುಟ್ಟಿ ನೇವರಿಸಿದ. ಮುಕ್ಕಣ್ಣನ ಹಣೆಯಮೇಲೆ ತಲೆಯಿಟ್ಟು ಮಗುವಿನಂತೆ ಅತ್ತುಬಿಟ್ಟ!!

'ಹೊಟ್ಗೆ ಏನ್ ತಿಮ್ತೀ ಹಿಂಗ್ ಬಡೀಯಾಕೆ? ಅನ್ನ ತಿಂಬೋ ಕೈಲಿ ಬಾಯಿಲ್ಲದ ಬಸ್ವನ್ನ ಬಡೀಬ್ಹಾದೇನು?' ಎಂದು ಲಿಂಗಣ್ಣ ಗಂಗನ ಕಡೆ ನೋಡಿದ. ಗಂಗ ಮರುಮಾತನಾಡದೆ ಎದುರಿಗಿದ್ದ ಬೆಟ್ಟವನ್ನೇ ನೋಡುತ್ತಿದ್ದ!

'ಅನ್ನ ಹಾಕಿದ ಕೈಗೆ, ಬರೆಯಿಕ್ಕಾರದಲೇ ಮನಶ್ಯಾನಾದಮೇಲೆ! ಈಸುವರ್ಷ ದುಡುದು ದುಡುದು ನಿನ್ನ ಮೈ ಬೆಳಿಸ್ತೆಲ್ಲ, ಅದ್ಕೇ ಕೈಯೆತ್ತಿ ಬಡಿಯಂಗಾದೇನು? ನಿಮ್ಮಂಥ ತಾಯಿಗ್ಗಂಡ್ರು ಹುಟ್ಟೋ ಬದ್ಲು........' ಲಿಂಗಣ್ಣನಿಗೆ ಕಣ್ಣೀರು ಗಳಗಳನೆ ಸುರಿಯತೊಡಗಿತು. ಮಾತು ಬಾರದೆ ಮುಕ್ಕಣ್ಣನ ಮುಖವನ್ನು ಅಪ್ಪಿಕೊಂಡು

ದುಃಖಿಸತೊಡಗಿದ ! ಮುಕ್ಕಣ್ಣ ತನ್ನೊಡೆಯನ ಎದೆಯುರಿಯನ್ನರಿತೋ ಏನೋ ತನ್ನ ಕಣ್ಣಲ್ಲೂ ನೀರು ಸುರಿಸತೊಡಗಿತು!

ಲಿಂಗಣ್ಣನಿಗೆ ತಾನು ಮನುಷ್ಯ, ಮುಕ್ಕಣ್ಣ ಪಶು, ಎಂಬ ಭೇದಬುದ್ಧಿ ಇರಲೇ ಇಲ್ಲ! ಲಿಂಗಣ್ಣನ 'ಒರಟು' ತಿಳಿವಿಗೆ ಮುಕ್ಕಣ್ಣನಿಗಿಂತ ತಾನು ಶ್ರೇಷ್ಠ ಎನಿಸಿರಲಿಲ್ಲ. ತನ್ನ ಬಾಳು, ತನ್ನ ಬೆಳಕು, ಎಲ್ಲವೂ ಆಲ ಮುಕ್ಕಣ್ಣಗಳ ದುಡಿಮೆಯ ಫಲ ! ಕಾಡಾಗಿದ್ದ ಹೊಲವನ್ನು ನಗುವ ಹೂದೋಟ ಮಾಡಿದ ಸೃಷ್ಟಿಕರ್ತ ತನ್ನ ಎರಡೆತ್ತುಗಳು ! ಮೈಯ ಮೂಳೆಯನ್ನೆಲ್ಲ ನುಗ್ಗು ನುಗ್ಗು ಮಾಡಿಕೊಂಡು ಹದಿನೈದು ವರ್ಷ ದುಡಿದು ದುಡಿದು ಮುಪ್ಪಾಗಿ ಬಿಟ್ಟಿದ್ದವು ! ಅವುಗಳಿಗೆ ಈ ಮನುಷ್ಯ ಏನು ಪ್ರತಿಫಲ ಕೊಟ್ಟು ಋಣ ತೀರಿಸಬಲ್ಲ ! ಹಿಡಿ ಹುಲ್ಲು, ಸೆರೆ ನೀರು—ಇಷ್ಟಾದರೆ ಆ ಋಣ ತೀರಬಹುದೆ........?

ಎಷ್ಟೋ ಹೊತ್ತಿನ ಮೇಲೆ ಮುಕ್ಕಣ್ಣನನ್ನು ಹಿಡಿದು ತಂದು ಗಾಡಿಗೆ ಹೂಡಿ ತಾನೇ ಹೊಡೆಯಲು ಕುಳಿತ. ಗಂಗ ಗಾಡಿ ಹತ್ತಿ ಹೇರಿನಮೇಲೆ ಕುಳಿತುಕೊಂಡ. ತುಂಬಿದ ಬಂಡಿಯನ್ನು ಮೈಯೆಲ್ಲ ಬಿಗಿಹಿಡಿದು, ಉಸಿರು ಕಟ್ಟಿ ಎಳೆಯುತ್ತ ಆಲ ಮುಕ್ಕಣ್ಣ ಕಣಿವೆ ಹತ್ತುತ್ತಿದ್ದವು. ಎತ್ತುಗಳ ಆ ಅವಸ್ಥೆಯನ್ನು ಕಂಡು ಲಿಂಗಣ್ಣ ಮರುಗಿಬಿಟ್ಟ !

'ಈ ಕಣಿವೆ ಕಡ್ದು ದಾರಿ ಸರಿ ಮಾಡಾಕೆ ಸರಕಾರಕ್ಕೆ ಏನಾಗೈತೋ ? ವರುಷಕ್ಕೊಮ್ಮೆ ಗುರಿಯಿಟ್ಟಂಗ್ಬಂದು ಕಂದಾಯ ಸುಲಿಯೋದು ಮಾತ್ರ ಗೊತ್ತು.......' ಎಂದು ತನ್ನ ಸಂಕಟದ ಉರಿಯನ್ನು ಸರಕಾರದ ಮೇಲೆ ಕಾರಿದ !

ಬಾರುಕೋಲಿನ ಕುಡಿಚಾಟಿ ಏಟು ತಿಂದ ಗಂಗ ಬಂಡಿಯಲ್ಲಿ ಮುಖ ಸಣ್ಣದು ಮಾಡಿಕೊಂಡು ಕುಳಿತಿದ್ದ. ತಂದೆ ಹಿಂದಿರುಗಿ ಮಗನನ್ನು ನೋಡಿದ. ಮಗನ ಮುಖನೋಡಿ ಎಲ್ಲಿಲ್ಲದ ಸಂಕಟ ಎದೆಯಲ್ಲಿ ಭುಗಿಲ್ ಎಂದು ಎದ್ದುಬಿಟ್ಟಿತು! ಈ ಕಾಡಿನಲ್ಲಿ ಅವನನ್ನು ಕಡಿದರೂ ಯಾರು ಕೇಳಬೇಕು ? ದೂರಿಕೊಳ್ಳಲು ತಾಯಿಯೇ ? ತಿರುಗಿಬೀಳಲು ಶಕ್ತಿಯೇ ? ಎದುರಾಗದ ಮಗನನ್ನು ಬಡಿದದ್ದು ನೆನೆಸಿಕೊಂಡು ಲಿಂಗಣ್ಣನ ಕರುಳಿಗೆ ಕೊಳ್ಳಿಇಟ್ಟಂತಾಯಿತು. ಕಣ್ಣು ನೀರು ತುಂಬಿ ಮಂಜುಗವಿದವು. ಗಾಡಿಯನ್ನು ನಿಲ್ಲಿಸಿ ಮಗನ ಹತ್ತಿರಕ್ಕೆ ಬಂದ.

'ಬಾಳಾ ಪೆಟ್ಟಾತೇನು ?' ಎಂದು ಅಂಗಿಯನ್ನು ಎತ್ತಿ ಬೆನ್ನು ನೋಡಿದ. ಎತ್ತಿನ ಮೈಮೇಲೆ ಬಿದ್ದಂತಹ ಬಾಸಾಳ ಮಗನ ಬೆನ್ನಮೇಲೆ ಸ್ಪಷ್ಟವಾಗಿ ಮೂಡಿದ್ದುವು. ಲಿಂಗಣ್ಣ, ಮಗನನ್ನು ತಬ್ಬಿಕೊಂಡು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ ! ಗಂಗನೂ ಗಟ್ಟಿಯಾಗಿ ಅತ್ತುಬಿಟ್ಟ ! ತಂದೆಮಕ್ಕಳ ದುಃಖಕ್ಕೆ ಮೂಕ ಸಾಕ್ಷಿಯಾಗಿ ಆ ಬೆಟ್ಟ ಕಾಡು ಮೌನವಾಗಿ ನಿಂತಿದ್ದವು.

'ಮೂಕ ಬಸವಣ್ಣನ ಬಡಿಬಾರ್ದಪ್ಪಾ. ನಮ್ಮಂಗ ಅವಕೇನು ಬಾಯೇ? ತಿರುಗಿ ಹಾಕಿ ಬಡೀಬಲ್ವೇ ? ನೂರೇಟು ಬಡುದ್ರೂ ಬಡಿಸಿಕೊಳ್ತಾವೆ........ಪುತ್ರೆ ದನದಂಗ ಎಳೀತಾವೆ. ಬಡೀಬಾರ್ದಪ್ಪಾ.......' ಕಣ್ಣೀರಿನಲ್ಲಿ ತನ್ನೆದೆಯ ಭಾರದ ಹೊರೆಯನ್ನು ನೀಗಿ, ಯಾವುದೋ ಒಂದು ನೆಮ್ಮದಿ ನೆಲೆಸಿತ್ತು.

'ಹಿಡ್ಕೊ....ಹಿಡ್ಕೊ....ಸಾಕಾತು. ಎಡಗೈಯೆಲ್ಲ ಬೊಬ್ಬೆ ಬಂದೈತೆ. ಕೊಸರಿ ಎಳದ್ರೆ ನಾನೆಂಗ್ ಹಿಡೀಲಿ........ಸಿಟ್ಟು ಬಂತು, ಒಂದೇಟು ಹೊಡೆದೆ.' ಎಂದ ಗಂಗ.

'ಹಂಗೇ ಅದು. ಮುಕ್ಕಣ್ಣ ಯಾವಾಗ್ಲೂ ಮುಂಗೋಪಿ! ಕಳ್ಳು ಹರಕೊಳ್ಳೋ ತನಕ ಎಳದದ್ದೂ ಎಳದದ್ದೇ. ಅದು ಹೋದಂಗೇ ಬಿಟ್ರೆ ನಾಲ್ಕು ದಿನದಾಗೆ ಎದೆ ಕಳಕಂಡು ಬಿಡ್ತದೆ! ದುಡುಕಂಡು ತಿಂಬೋ ಬಾಯ್ಗೆ ಮಣ್ಣೇ........'

ಲಿಂಗಣ್ಣ ಮತ್ತೆ 'ಕತ್ತರಿ'ಯಮೇಲೆ ಕುಳಿತು ಮುಕ್ಕಣ್ಣನ ಬೆನ್ನ ಮೇಲೆ ಕೈಯಾಡಿಸಿ ತನ್ನೆದೆಯ ಪ್ರೇಮವನ್ನು ಅದರ ಮೇಲೆ ಸುರಿದ. ನಾಲ್ಕು ಸೇರು ಜೋಳವನ್ನು ಮುಕ್ಕಣ್ಣನ ಬೆನ್ನಮೇಲೆ ಸುಲಭವಾಗಿ ಹರಡಬಹುದಾಗಿತ್ತು! ಅದರ ಬೆನ್ನು ಅಷ್ಟು ಅಗಲ, ಅಷ್ಟು ದಷ್ಟ ಪುಷ್ಟ ದೇಹ! ಒಂದೊಂದು ಕಾಲು ಒಂದೊಂದು ಗದೆ! ಎತ್ತಿಟ್ಟರೆ ನೆಲ ಕುಳಿ ಬೀಳಬೇಕು. ಆಲನೂ ಅಷ್ಟೇ; ಮುಕ್ಕಣ್ಣನಿಗೆ ಸರಿಜೋಡಿಯಾದ ಹೋರಿ. ಮುಕ್ಕಣ್ಣನ ಮುಖ ನೋಡಿದರೆ ಸಿಂಹವನ್ನು ನೋಡಿದಂತಾಗುತ್ತಿತ್ತು. ಹರೆಯದ ಪ್ರಾಯ ಇಳಿಮುಖವಾಗಿದ್ದರೂ ಮುಪ್ಪಿನ ಛಾಯೆ ಸುಳಿದಿರಲಿಲ್ಲ. ಅದಕ್ಕೆ ತಕ್ಕ ಚಲುವಾದ ಕೋಡುಗಳು. ಕೋಡಿಗೆ ತಕ್ಕ ಹಿತ್ತಾಳೆಯ ಕೋಡಣಸು. ಕೋಡಿಗೆ ಕುಚ್ಚು ಕಟ್ಟಿ ಜೂಲು ಹಾಕಿದರೆ ಮುಕ್ಕಣ್ಣನನ್ನು ಜನ ನಿಂತು ನೋಡಬೇಕು! ಆ ವೃಷಭ ಠೀವಿ ಅದರದು.

ಮುಕ್ಕಣ್ಣನ ಭಯಂಕರ ರೂಪಕ್ಕೂ ಅದರ ಸೌಮ್ಯ ಗುಣಕ್ಕೂ ಸಾಮ್ಯವೇ ಇರಲಿಲ್ಲ. ಗಂಗ ಮೂರು ವರ್ಷದ ಮಗುವಾದಾಗ ಮುಕ್ಕಣ್ಣ ಮನೆಗೆ ಬಂತು. ಅಂದಿನಿಂದ ಗಂಗ ಅದನ್ನು ಹಿಡಿಯಲು ಕಲಿತಿದ್ದಾನೆ. ಅದರ ಹೊಟ್ಟೆಯ ಕೆಳಗೆ ತೂರಾಡಿದ್ದಾನೆ. ಕಾಲು ಸಂದಿಯಲ್ಲಿ ನಿಂತು ಉಣ್ಣೆ ಕಿತ್ತಿದ್ದಾನೆ. ಚಿಕ್ಕ ಮಕ್ಕಳು ಮಾಡುವ ಎಲ್ಲ ಚೇಷ್ಟೆಯನ್ನು ಅವನು ಮುಕ್ಕಣ್ಣನೊಡನೆ ಮಾಡಿದ್ದಾನೆ. ಆದರೂ ಅದೆಂದೂ ಏನೂ ಅಪಾಯ ಯಾರಿಗೂ ಮಾಡಿರಲಿಲ್ಲ. ಮುಕ್ಕಣ್ಣನ ಬುದ್ಧಿ ಮನುಷ್ಯರ ಬುದ್ಧಿಗಿಂತಲೂ ಚುರುಕು. ಲಿಂಗಣ್ಣ ಗಾಡಿ ಹೂಡಿ ಗಂಗನನ್ನು ಗಾಡಿಯ ಮೇಲೆ ಕೂಡಿಸಿ ಬಿಟ್ಟರೆ ತೀರಿತು; ಎಲ್ಲಿಗೆ ಹೋಗಬೇಕೋ ಅಲ್ಲಿಗೇ ಹೋಗಿ ನಿಲ್ಲುತ್ತಿದ್ದವು. ದಾರಿಯ ಒಗ್ಗಾಲಿ, ಕಲ್ಲು, ದುಂಡಿಯನ್ನೆಲ್ಲ ತಪ್ಪಿಸಿ ತಾವೇ ಹೋಗಿ ಬಿಡುತ್ತಿದ್ದವು. ಗಂಗನ ಕೈಲಿ ಗಾಡಿಯ ನೊಗ ಎತ್ತುವುದಕ್ಕಾಗುತ್ತಿರಲಿಲ್ಲ. ಅವನು

ಆಲ ಮುಕ್ಕಣ್ಣಗಳನ್ನು ನೊಗಕ್ಕೆ ನಿಲ್ಲಿಸಿ, ನೊಗದ ಒಂದು ಕೋಪು ತುಳಿದರೆ ಮುಕ್ಕಣ್ಣ ತಾನಾಗಿಯೇ ಬಂದು ಹೆಗಲು ಕೊಡುತ್ತಿತ್ತು !! ಇಂಥ ಮುಕ್ಕಣ್ಣನನ್ನು ಲಿಂಗಣ್ಣ ತನ್ನ ಮಗನಿಗಿಂತ ಹೆಚ್ಚಾಗಿ ಪ್ರೀತಿಸಿದ್ದರಲ್ಲಿ ಏನು ಆಶ್ಚರ್ಯ! ಲಿಂಗಣ್ಣನ ಅರ್ಧ ಜೀವವೇ ಅವನೆತ್ತುಗಳು. ದನಕಟ್ಟುವ ಮನೆಯಲ್ಲಿ ಮನುಷ್ಯರು ಮಲಗ ಬಾರದೆಂದು ಆರೋಗ್ಯಶಾಸ್ತ್ರ ಹೇಳುತ್ತಿದ್ದರೂ ಲಿಂಗಣ್ಣನಿಗೆ ತನ್ನೆತ್ತುಗಳ ಗಂಟೆಯ ಟ್ಣಂಟಣಿಯ ನಾದ ಕೇಳುತ್ತ ಮಲಗಿದರೆ ನಿದ್ರೆ ಹತ್ತುತ್ತಿತ್ತು! ಗಂಟೆಯ ಸದ್ದು ಕೇಳದಿದ್ದರೆ ಅವನಿಗೆ ಕಿವಿ ಕಿವುಡಾದಷ್ಟು ತೊಂದರೆಯಾಗುತ್ತಿತ್ತು. ಅಲ್ಲದೆ, ಆಲ ಮುಕ್ಕಣ್ಣ ದುಡಿಯುತ್ತಿದ್ದುದೇನು ಕಡಿಮೆಯೇ ? ಅವು ದುಡಿದ ಹಣವನ್ನೆಲ್ಲ ಹಾಗೇಯೇ ಇಟ್ಟಿದ್ದರೆ ಒಂದು ಖಜಾನೆ ತುಂಬುತ್ತಿತ್ತು! ಆದರೆ, ಲಿಂಗಣ್ಣ ತನ್ನ ದೊಡ್ಡ ಕುಟುಂಬದ ಪೋಷಣೆ ಮಾಡುವುದಲ್ಲದೆ, ಅವರಪ್ಪ ಮಾಡಿದ್ದ ಸಾಲದ ಹೊರೆಯೂ ಅವನ ಹೆಗಲಮೇಲೆ ಭೂತದಂತೆ ಕುಳಿತಿತ್ತು !

ತಂದೆ ಮಕ್ಕಳಿಬ್ಬರೂ ಹೊಸಪೇಟೆಯ ಸಂತೆ ಮಾಡಿಕೊಂಡು ಊರು ಸೇರಿದರು. ಮರುದಿನ ಸೋಮವಾರ ಕಾರುಹುಣ್ಣಿಮೆಯ ಹಬ್ಬ ! ಮುಂಗಾರು ಮಳೆ 'ಧೋ' ಎಂದು ಸುರಿದುಬಿಟ್ಟಿತ್ತು ! ಬೇಸಿಗೆಯ ಬೇಗೆ ಮೆಲ್ಲ ಮೆಲ್ಲನೆ ಅಡಗಿ ಮಳೆಗಾಲದ ಮಾಧುರ್ಯ, ಗಾಳಿಯಲ್ಲಿ ತೀಡಿ ಬರುತ್ತಿತ್ತು. ಬೇವು ಬಾಗೆಯ ಹೂವು ಮೊದಲ ಮಳೆಯಲ್ಲಿ ತೇಲಿಬಂದು ಹಳ್ಳದ ಎರಡೂ ದಂಡೆಯಲ್ಲಿ ಹೆಪ್ಪು ಕಟ್ಟಿಕೊಂಡಿತ್ತು. ಸಕಾಲಕ್ಕೆ ಮಳೆ ಬಂದರೆ ರೈತರಿಗೆ ಶಿವ ಪ್ರತ್ಯಕ್ಷನಾದಂತೆ. ಅವರ ಆನಂದವೇ ಆನಂದ! ಕಾರುಹುಣ್ಣಿಮೆಯಲ್ಲಿ ಉನ್ಮಾದಗ್ರಸ್ತರಾಗುತ್ತಾರೆ! ಮುಕ್ಕಣ್ಣನಂಥ ಮಿಕ್ಕ ಹೋರಿಯನ್ನು ಕಟ್ಟಿದ ಲಿಂಗಣ್ಣನಿಗೆ ಅಪಾರ ಸಂತೋಷ. ಹೊಸಪೇಟೆಯಿಂದ ತಂದಿದ್ದ ಬಣ್ಣವನ್ನು ಎತ್ತುಗಳ ಕೋಡುಗಳಿಗೆ ಸವರಿ ಶೃಂಗಾರ ಮಾಡಿದ. ಮೈ ತೊಳೆದುಕೊಂಡು ತಂದು ನಿಲ್ಲಿಸಿದ. ಆಲ ಮುಕ್ಕಣ್ಣ ಮುತ್ತಿನ ಮುದ್ದೆಯಂತೆ ಕಾಣುತ್ತಿದ್ದವು. ಜನರ ದೃಷ್ಟಿ ಆಗಬಾರದೆಂದು ಮೈತುಂಬ ಜೂಲು ಹಾಕಿ ಲಿಂಗಣ್ಣ ಹಗಲೆಲ್ಲ ಶೃಂಗಾರ ಮಾಡಿದ. ಹಣೆತುಂಬ ಆಗುವ ಬಾಸಿಂಗ ಸಿದ್ಧಗೊಳಿಸಿದ.

ಕಾರುಹುಣ್ಣಿಮೆಯಲ್ಲಿ ಎಲ್ಲರೂ ಎತ್ತು ಹಿಡಿಯುವುದು ರೈತರ ಜೀವನದಲ್ಲಿ ಬಂದ ಒಂದು ವ್ರತ. ಊರ ಸಾಹುಕಾರ ತಿಪ್ಪಣ್ಣನವರು, ಮಠದಯ್ಯನವರು, ಗೊಂಚಿಗಾರರು............ಎಲ್ಲರ ಎತ್ತುಗಳೂ ಕಾರುಹುಣ್ಣಿಮೆಯಲ್ಲಿ ಮೆರವಣಿಗೆ ಹೊರಡುತ್ತವೆ. ಮಠದಯ್ಯನವರ ಹೋರಿಯ ಹಿಂದೆ ಎಲ್ಲರೂ, ಮೆರವಣಿಗೆಯಲ್ಲಿ ಭಾಗವಹಿಸುವರು. ಅಯ್ಯನವರ ಮನೆಯ ಪಕ್ಕದಲ್ಲಿದ್ದ ಲಿಂಗಣ್ಣನ ಮುಕ್ಕಣ್ಣ ಅವರ ಹೋರಿಯ ಹಿಂದೆ ಮೊದಲನೆಯದಾಗಿ ಪ್ರತಿವರ್ಷ ಮೆರವಣಿಗೆ ಹೊರಡುತ್ತದೆ. ಈ ವರ್ಷವೂ ಹಾಗೆಯೇ ಬಂದರು. ಊರ ಮಧ್ಯದ ಅಂಗಳಕ್ಕೆ ಬಂದಾಗ ಸಾಹುಕಾರ

ತಿಪ್ಪಣ್ಣನ ಮಗ ಗುಡ್ಡದಪ್ಪ ತನ್ನ ಹೋರಿಯನ್ನು ಮುಂದಕ್ಕೆ ಹೊಡೆದುಕೊಂಡು ಬಂದ. ಲಿಂಗಣ್ಣನ ಮಗ ಗಂಗ ರಿಪ್ಪೆ ಬಡೆಯುವುದರ ಒಳಗಾಗಿ ಮುಕ್ಕಣ್ಣನನ್ನು ಸಾಹುಕಾರರ ಹೋರಿಯ ಮುಂದೆ ತಂದು ನಿಲ್ಲಿಸಿದ! ಗುಡ್ಡದಪ್ಪನಿಗೆ ಕೋಪ ಬಂತು. ಹಗಲೆಲ್ಲ ಕಷ್ಟಪಟ್ಟು, ಮನೆಯ ಆಭರಣಗಳನ್ನೆಲ್ಲ ಕೋಡಿಗೆ ಸುತ್ತಿ ಅಲಂಕರಿಸಿದ ತನ್ನೆತ್ತು ಹಿಂದೆ ಬೀಳುವುದನ್ನು ಆತ ಸಹಿಸಲಾರದೆ ಹೋದ. ಐದಾರು ಮಾರು ದಾಟಿದ ಮೇಲೆ ಮತ್ತೆ ಗುಡ್ಡದಪ್ಪ ಮುಂದಾಗಲು ಬಂದ. ಅವರ ಮೇಲೆಯೇ ಕಣ್ಣಿಟ್ಟಿದ್ದ ಗಂಗ ಸೊನ್ನೆಯಿಟ್ಟು ಮುಕ್ಕಣ್ಣನನ್ನು ಮೂರು ಮಾರು ಕುಪ್ಪಳಿಸಿದ! ಗುಡ್ಡದಪ್ಪ ಈ ಸೋಲು ಸಹಿಸಲಾರದೆ ತನ್ನ ಹೋರಿ ಅರುಗು ಮಾಡಿಸಿಕೊಂಡು ಹಾರಿಕೆ ಹಾರಿಸಿಕೊಂಡು ಮೆರವಣಿಗೆಯ ಮುಂದಕ್ಕೆ ತಂದು ನಿಲ್ಲಿಸಿಯೇ ಬಿಟ್ಟ! ಆಗ ಈಗ ಎನ್ನುವುದರ ಒಳಗಾಗಿ ಎಲ್ಲರೂ ತಮ್ಮ ತಮ್ಮ ಹೋರಿಗಳನ್ನು ಮುಂದಕ್ಕೆ ಹಿಡಿ ತರಲು ಪ್ರಯತ್ನಿಸಿದರು. ಗಂಗ ಕೇಕೆ ಹಾಕಿ ಮುಕ್ಕಣ್ಣನನ್ನು ಹಾರಿಸಿಯೇ ಬಿಟ್ಟ! ಗುಡ್ಡದಪ್ಪನಿಗೂ ಗಂಗನಿಗೂ ಮಾತು ಬಿಸಿಯಾಯಿತು. ಊರ ಜನ ಒಬ್ಬೊಬ್ಬರು ಒಂದೊಂದು ಪಕ್ಷಕ್ಕೆ ನಿಂತು ಗದ್ದಲವೇ ಪ್ರಾರಂಭವಾಯಿತು. ಮಠದಯ್ಯನವರು ಬಂದು ಲಿಂಗಣ್ಣನ ಮುಕ್ಕಣ್ಣನಿಗೆ ಅಗ್ರಸ್ಥಾನ ಕೊಟ್ಟು ನ್ಯಾಯ ಬಗೆಹರಿಸಿ ಹೋದರು.

ಗುಡ್ಡದಪ್ಪನಿಗೆ ಕೂಡಿದ ಜನರಲ್ಲಿ ಊರ ಮಧ್ಯದಲ್ಲಿ ಆದ ಈ ಅವಮಾನವನ್ನು ಸಹಿಸುವುದಾಗಲಿಲ್ಲ- ಅವನ ಹೊಟ್ಟೆಯಲ್ಲಿ ಹೊಟ್ಟೆಕಿಚ್ಚಿನ ಕಿಡಿ ಧಗಧಗಿಸಿ ಉರಿಯ ಲಾರಂಭಿಸಿತು.

'ಹೊಟ್ಟೆಗೆ ಗತಿಯಿಲ್ಲದಿದ್ದರೂ ಈ ಸೂಳೆ ಮಕ್ಕಳಿಗೆ ಬಲು ಅಭಿಮಾನ........' ಎಂದ ಗುಡ್ಡದಪ್ಪ, ಗಂಗನ ಕಿವಿಗೆ ಬೀಳುವಂತೆ!

'ಕೈಲಿ ಕಡಿಯೋದು ಆಗದಿದ್ರೂ ಒಣ ಜಂಭ ಸಾಹುಕಾರ್‍ರಿಗೆ' ಎಂದ ಇವನು. 'ಅಂತ ಭೂಪ ರುಸ್ತುಂ ಹೋರಿ ಕಟ್ಟಿ ಮುಂದೆ ನಿಲ್ಲಬೇಕು!' ಎಂದೂ ಆಡಿಬಿಟ್ಟ.

ಗುಡ್ಡದಪ್ಪನಿಗೆ ಈ ಮಾತು ಕೇಳಿ ಎದೆಗೆ ಈಟಿ ಇರಿದಂತಾಯಿತು. ಅವನಿಗೆ ಸಿಟ್ಟು-ಅವಮಾನ, ಅಶಕ್ತಿ ಎಲ್ಲ ಮುತ್ತಿಕೊಂಡು ಕಣ್ಣೇ ಕಾಣಲಾರದಂತಾಯಿತು. ಅವರ ಆಳಿಗೆ ಹೇಳಿ ತಾನು ಮನೆಗೆ ಬಂದು ಮಲಗಿಬಿಟ್ಟ. ಅವನಿಗೆ ನೂರಾರು ಯೋಚನೆ. ತಾನೂ ಮುಕ್ಕಣ್ಣನಂಥ ಹೋರಿ ತರಬೇಕು........

* * * * * *

ಮರುದಿನ ಬೆಳಿಗ್ಗೆ ತಿಪ್ಪಣ್ಣ ಸಾಹುಕಾರ್‍ರು ಲಿಂಗಣ್ಣನನ್ನು ಕರೆ ಕಳಿಸಿದರು. ಹಿಂದಿನ ದಿನದ ಮೆರವಣಿಗೆಯ ಗದ್ದಲ ಅವನಿಗೂ ಗೊತ್ತಿತ್ತು. ಆದರೆ ಅವನ ಧೃಷ್ಟಿ

ಯಲ್ಲಿ ಅದೇನೂ ಮಹತ್ವದ ಸಂಗತಿಯಾಗಿರಲಿಲ್ಲ! ಊರ 'ದೈವ'ದ ಮುಂದೆ ಬಡವ-ಬಲ್ಲಿದರ ಪ್ರಶ್ನೆಯೆಲ್ಲಿದೆ ? 'ದೈವ'ವೆಲ್ಲ ಮೆರವಣಿಗೆ ಹೊರಟಾಗ ಬಲ್ಲಿದರಿಗೇ ಹೆಚ್ಚಿನ ಗೌರವ ಬೇಕೆಂದು ತಿಪ್ಪಣ್ಣನವರು ಯಾಕೆ ಬಯಸಬಹುದು ? ಅದು ಅವನ ಭಾಗ ಕ್ಕಾದರೂ ಮರೆತ ಮಾತಾಗಿತ್ತು.

ಲಿಂಗಣ್ಣ ಬಂದಾಗ ಸಾಹುಕಾರರ ಮನೆಯೊಳಗಿನ ಹಕ್ಕೆಯಿಂದ ಹೋರಿಗಳು ಬಂದುವು. ಲಿಂಗಣ್ಣ ಅವುಗಳನ್ನು ತುರಿಸಿ, ಗಂಗೆದೊಗಲಿನ ಮೇಲಿನ ಉಣ್ಣೆ ಕಿತ್ತು, ಮೈದೂಬಿ ಆದರಿಸುತ್ತಾ : 'ಮೈ ಎಷ್ಟು ಗಬ್ಬಾಗೈತ್ರೀ ಸಾವುಕಾರ್ರೀ. ನಿನ್ನೆ ಮೈ ತೊಳದಿದ್ರೋ ಹ್ಯಾಂಗೊ........ಆಗಲೇ ಕಣ್ಣೀಲಿ ನೋಡಂಗಿಲ್ಲ. ಹಕ್ಕೆಲ್ಲ ಸಗಣಿ, ಗಂಜು ನಿಂತಂಗೈತಿ ನೋಡ್ರಿ' ಎಂದ.

'ಏನು ಮಾಡೋದು ಲಿಂಗಣ್ಣ........ನಮ್ಮ ಕೈಲಿ ಕಡಿಯೋದು ಆಗಲ್ಲ. ಈ ಆಳು ಮಕ್ಕಳು ಅಂಬೋ ತಾಯಿಗ್ಗಂಡ್ರು ತಮಗಿಷ್ಟ ಬಂದಂಗ ಹಕ್ಕೆ ಹೊಡಿತಾರೆ....'

'ಆಳು ಮಾಡಿದ ಕೆಲಸ ಹಾಳೇ ಧಣೇರ. ನಮ್ಮ ಹಕ್ಕೆ, ಉಂಬೋ ಮನೆ ಇದ್ದಂಗಿದ್ರೇ ನಮ್ಮ ಎತ್ತು ನಿಲ್ಲೋದು. ಕಾಲಾಗ ಸಗಣಿಯಿದ್ರೆ ಬೆಳಗಾತನಕ ನಮ್ಮೆತ್ತು ಮೈ ನೆಲಕೆ ಹಾಕೇವೇನ್ರಿ........' ಎಂದ ಲಿಂಗಣ್ಣ ಸಲುಗೆಯಲ್ಲಿ. ಸಾಹು ಕಾರರು ಏನೋ ತಮ್ಮ ಕೆಲಸದಲ್ಲಿ ತಾವು ತೊಡಗಿದ್ದರು. ಲಿಂಗಣ್ಣ ಮುಂದುವರಿ ಸಿದ:— 'ಹತ್ತಿಪ್ಪತ್ತು ದನದಾಗೆ ಯಾವುದನ್ನು ನೋಡ್ತಾರೋ ಯಾವುದಿಲ್ಲೋ ಈ ಆಳುಮಕ್ಳು. ಹೋದ್ರಾ ಗ್ವಾದ್ಲೀಗೆ, ಹುಲ್ಲೆಳೆದ್ರು. ಬಂದುಬಿಟ್ರು. ಯಾವುದು ತಿಂತು, ಯಾವುದಕ್ಕೆ ಸಿಕ್ಕಿತು, ಅಂಬೋದು ಅವರಿಗೇನ್ರೀ—ನೀವು. ಹೊಟ್ಟೆ ಮಕ್ಳಂಗೆ ಪೋಷ್ಣೆ ಮಾಡಿದ್ರೆ ದನಗಳ್ರೀ ಸಾವುಕಾರೆ....' ಎಂದ ಲಿಂಗಣ್ಣ.

'ಇದ್ದ ದನಗಳದೇ ಈ ಹಾಡು, ಮತ್ತೊಂದು ಜತೀ ತರಬೇಕು ಅಂತ ನಮ್ಮು ಡಗ ಕುಣೀತಾನೆ,' ಎಂದರು ಸಾಹುಕಾರರು.

'ಒಳ್ಳೇ ಮುಂಗಾರಿ ಹಂಗಾಮಿನಾಗೆ ಯಾರು ಕೊಡ್ತಾರೀ ಸಾಹುಕಾರ್ರೆ. ಎಲ್ಲ ರಿಗೂ ಹಸುವು...........ದಾವಣಗೇರಿಗೆ ಹೋದ್ರೆ ಅಪ್ಪ ಅಂಬೋ ಅಂತವು ಬರ್ತಾವೆ ನೋಡ್ರಿ'.

'ಈಗ ಯಾರು ಹೋಗಿ ತರಬೇಕು. ನಿನ್ನ ಜತೆ ಕೊಟ್ಟುಬಿಡು........' ಎಂದು ನಕ್ಕರು. ಲಿಂಗಣ್ಣನಿಗೆ ಈ ಮಾತು ಕೇಳಿ ಸಿಡಿಲು ಹೊಡೆದಂತಾಯ್ತು! ತನ್ನ ಕಣ್ಣೋ ಕಾಲೋ ಕಡಿದಿಟ್ಟು ಹೋಗೆಂದರೆ ಲಿಂಗಣ್ಣ ಅಷ್ಟು ವ್ಯಸನ ಮಾಡುತ್ತಿರಲಿಲ್ಲ. ಅವನು ಕಣ್ಣು ಸುಕ್ಕಿ, ಬಾಯಿ ತೆರೆದು ಹೆದರಿಕೆಯಿಂದ : 'ಇರೋವು ಒಂದು ಜತೀ. ಆದ ಕೊಂಡು ತಿಂಬೋ ಕೋಳಿ ಕಾಲು ಮುರುದಂಗೆ ಆದೀತ್ರೀ ಧಣೇರ........' ಎಂದು ಒಂದು ತರಹ ದುಃಖ ಮಿಶ್ರಿತ ದೈನ್ಯದಿಂದ ಅರಿಕೆ ಮಾಡಿಕೊಂಡ.

'ನಮ್ಮನೆಗಳವು ಒಂದು ಜತೆ ಹಿಡಕೊಡ್ತೀನಿ. ನಿನ್ನವು ಕೊಟ್ಟು ಬಿಡು........' ಎಂದರು ತಿಪ್ಪಣ್ಣ.

'ಇ........ಇಲ್ಲ ಬಿಡ್ರೀ ಸಾಹುಕಾರ್ರೀ, ಆದಾಗಲ್ಲ ನನ್ನ ಕೈಲಿ.'

'ಆಗದಿದ್ರೆ, ನನ್ನ ಹಣ ಹಣಬಡ್ಡಿ ಇಲ್ಲಿ ಬಡದು ಎದ್ದೋಗು. ತಿಳಿತೋ ಇಲ್ಲೋ. ಏ ಕಾಶೀಮ! ಲಿಂಗಣ್ಣನ ತರಬಿ ವಸೂಲು ಮಾಡಲೇ,' ಎಂದು ಸಾಹುಕಾರರು ಇದ್ದಕ್ಕಿದ್ದಂತೆ ಭೀಕರವಾಗಿಬಿಟ್ಟರು. ಪೆಟ್ಟಿಗೆಯ ಬಾಗಿಲನ್ನು 'ಧಡಂ'ನೆ ಮುಚ್ಚಿ ಬೀಗದ ಕೈಯನ್ನು ಉಡಿದಾರದಲ್ಲಿ ಕಟ್ಟಿಕೊಳ್ಳುತ್ತಾ ಸಾಹುಕಾರರು ಎದ್ದು ಮನೆಯೊಳಗೆ ಹೋಗಿಬಿಟ್ಟರು.

ಲಿಂಗಣ್ಣನಿಗೆ ಆಕಾಶವೇ ಕಳಚಿಬಿದ್ದಂತಾಯಿತು. ಸಜೀವವಾಗಿ ಅವನನ್ನು ಭೂಮಿಯಲ್ಲಿ ಹೂಳಿದ್ದರೂ ಅಷ್ಟು ಯಾತನೆ ಅವನಿಗಾಗುತ್ತಿರಲಿಲ್ಲ. ಉಸಿರಾಡುವುದಕ್ಕೂ ಅವನಿಗೆ ಪ್ರಯಾಸವೆನಿಸತೊಡಗಿತು. ಬುದ್ಧಿಗೆ ಜೋಮು ಹಿಡಿದಂತೆ ಲಿಂಗಣ್ಣ ತತ್ತರಿಸಿಹೋದ. ಕೊಲುಮೆಯಲ್ಲಿ ಕಾಸಿದ ಹಿಕ್ಕಳದಿಂದ ಕರುಳು ಕೀಳುವಂತೆ ಅವನಿಗೆ ಯಮಯಾತನೆಯಾಯಿತು. ಹದಿನೈದು ವರ್ಷ ದುಡಿದ ತನ್ನ ಆಲ ಮುಕ್ಕಣ್ಣ ನಿಲ್ಲದೆ ತಾನು ಬದುಕುವುದನ್ನು ಅವನು ಊಹಿಸಿಯೂ ಇರಲಿಲ್ಲ! ಇಂದು ಏಕಾಏಕಿ ಈ ಮಾರಣ ಸದೃಶ ಏಟು ಬಿದ್ದುದರಿಂದ ಲಿಂಗಣ್ಣ ಮೂಕನಂತೆ ಕುಳಿತುಬಿಟ್ಟ. ಕಾಶೀಮ ಮತ್ತೊಂದು ಕಡೆ ನಿಂತುಬಿಟ್ಟ. ಎಷ್ಟೋ ಹೊತ್ತಿನ ಮೇಲೆ ಸಾಹುಕಾರರು ಬಂದು, 'ಏನಮ್ತಿಯೋ ಲಿಂಗಣ್ಣ ಹಣ ಹಣದ ಬಡ್ಡಿ ಬಡ್ದು ಓಗ್ತಿಯೋ, ಆಲ ಮುಕ್ಕಣ್ಣನ್ನ ಹಿಡಕೊಡ್ತೀಯೋ' ಎಂದರು.

'ನನ್ನ ವಲ ಮನೆ ಬೇಕಾದ್ರೆ ಕಟ್ಟಿಕೊಟ್ಟೇನು, ಆಲ ಮುಕ್ಕಣ್ಣನ್ನ ಮಾತ್ರ ಕೇಳಬ್ಯಾಡ್ರಿ' ಎಂದು ಲಿಂಗಣ್ಣ ಗಟ್ಟಿ ಮನಸ್ಸು ಮಾಡಿ ಹೇಳಿಬಿಟ್ಟ!

'ನಿನ್ನ ಹೊಲ ಮನೆ ಬರ್ಸಿಕೆಂಬೋದ್ಕಲ್ಲ ನಾವು ಬೆಳ್ಳಿರೂಪಾಯಿ ನಿನಗೆ ಮುಂಡ್ ಮೋಚಿದ್ದು! ಒಳ್ಳೇ ಮಾತೀಲಿ ನಮ್ಮ ಬಾಕಿ ಚುಕ್ತಮಾಡಿ ಎದ್ದು ಓಗು' ಎಂದು ಗುಡುಗು ಹಾಕಿದರು.

'ಈಗ ನನ್ನ ಮೈಯಿಳೇ ಬಡದ್ರೂ ಒಂದು 'ದಮ್‌ಡಿ' ರೊಕ್ಕಾ ಇಲ್ರೀ. ಸುಗ್ಗೀತನಕ ತಡಕಂಡ್ರೆ ನಾವು ಉಪಾಸಯಿದ್ದು ನಿಮ್ಮ ಬಾಕೀ ಹರೀತೀನಿ. ಮಾಡೋದು ಮಾಡಿಕೊಳ್ಳಿ' ಎಂದು ಲಿಂಗಣ್ಣ ಎದ್ದು ದಡದಡ ಹೋಗಿಯೇಬಿಟ್ಟ! ಕೋಪವೇ ಮೈವೆತ್ತು ಬಂದಂತೆ ಹೋಗುತ್ತಿದ್ದ ಲಿಂಗಣ್ಣನನ್ನು ತರುಬುವುದು ಕಾಶೀಮನ ಮನಸ್ಸಿಗೂ ಹೊಳೆಯಲಿಲ್ಲ! ಸಾಹುಕಾರರು ಕಾಶೀಮನನ್ನು ಬಾಯಿಗೆ ಬಂದಂತೆ ಬೈದುಬಿಟ್ಟರು. ಸಾಹುಕಾರರ ಮನಸ್ಸಿನಲ್ಲ ಕೀಟ ಕೊರೆಯಲಾರಂಭಿಸಿತು. ಅಭಿಮಾನ ಚುಚ್ಚಿದ ಅವರು, ಗದ್ದಕ್ಕೆ ಕೈ ಕೊಟ್ಟು ಎಷ್ಟೋ ಹೊತ್ತು ಕುಳಿತ್ತು

ಕೊಂಡು: 'ಮುಕ್ಕಣ್ಣನ್ನ ಉಳ್ಸಿಕೊಳ್ಲೀ ಆ ಮುಂಡೇ ಮಗ........' ಎಂದು ಗೊಣಗಿಕೊಂಡರು. ಸಾಹುಕಾರರಿಗೆ ನೆಮ್ಮದಿ ಜಾರಿತು! ಲಿಂಗಣ್ಣ ಎತ್ತು ಕೊಡದಿದ್ದುದಕ್ಕಿಂತ ಅವನು ಅವರನ್ನು ಉಲ್ಲಂಘಿಸಿ ನಡೆದ 'ಅವಿಧೇಯತೆ'ಯನ್ನು ನೆನೆದು ತಿಪ್ಪಣ್ಣನವರ ಹೃದಯ ಕುದಿಯತೊಡಗಿತು! ಅಭಿಮಾನ ಭಂಗವಾಯಿತೆಂದು ಅವರು ಉರಿ ಉರಿಯಾದರು. ಮೇಲುಪ್ಪರಿಗೆಯ ಸಿರಿವಂತರ ಮಾತನ್ನು ಧಿಃಕ್ಕರಿಸಿ ನಡೆದೆದ್ದು ಹೋದ ಆ ಬೀದಿಯ ಭಿಕಾರಿಯ ಸೊಕ್ಕು ಕಂಡು ತಿಪ್ಪಣ್ಣನವರಿಗೆ ಆಶ್ಚರ್ಯವಾಯಿತು!

'ಏನಲೇ ಕಾಶೀಮಾ......ಾ ಾ, ಎಷ್ಟಲೇ ಸೊಕ್ಕು, ಆ ನನ್ನ ಮಗನೀಗೆ? ಎಂದು ದೊಡ್ಡ ಗಂಟಲಿನಿಂದ ಅಬ್ಬರಿಸಿದರು!

'ಸೊಕ್ಕಿದವರೂ ಸೊರಗಿದವರೂ ಒಂದೇ ಅಮ್ತಾರಲ್ರೀ ಧಣೇರೆ............... ಹಂಗೇೀs' ಎಂದು ಕಾಶೀಮ ತಿಪ್ಪಣ್ಣನವರ ಕೋಪಕ್ಕೆ ಉಪಶಾಂತಿ ಹೇಳಿದ. 'ಅಲ್ಲೋೀ ಅವನು ಎದ್ದುಹೋಗಾಕೆ ನೀನು ಯಾಕೆ ಬಿಟ್ಟೇ ಅಂತ' ಎಂದರು ತಿಪ್ಪಣ್ಣನವರು. 'ಅವನ್ನ ತಡವು ಬೌದೇನ್ರೀ ಸಾವುಕಾರ್ರೇ? ಎಲ್ಲೆನ್ನ ಉಂಟೇ? ನಮ್ಮ ಮರ್ಯಾದಿ ಉಳೀತು ಅಂತ ಇಟ್ಟುಕೊಳ್ರಿ.'

ತಿಪ್ಪಣ್ಣನವರಿಗೆ ಲಿಂಗಣ್ಣ ಎದ್ದು ಹೋದ ಎದೆಗಾರಿಕೆ, ಅವನ ಕೆರಳಿದ ಮೂರ್ತಿ, ಮಾತಿನಲ್ಲಿದ್ದ ಗಡುಸತನ........ಎಲ್ಲ ಕಣ್ಣ ಮುಂದೆ ಸುಳಿದವು. ಅವನನ್ನು ತಡವಿದ್ದರೆ ಬಾಲತುಳಿದ ನಾಗರಹಾವು ಕೆಣಕಿದಂತೆ ಎಂದು ತಿಪ್ಪಣ್ಣನವರಿಗೆ, ಅಸ್ಪಷ್ಟವಾಗಿ ಗೋಚರವಾಯಿತು. ಕಾಶೀಮ ಲಿಂಗಣ್ಣನನ್ನು ತರುಬಿದ್ದರೆ ಏನಾಗುತ್ತಿತ್ತು? ಬಹುಶಃ ಲಿಂಗಣ್ಣ ಕಾಶೀಮನನ್ನು ಕೆಳಕ್ಕೆ ದಬ್ಬಿ ಮುಂದುವರಿಯುತ್ತಿದ್ದ. ಸಾಹುಕಾರರು ಕೋಪದ ಭರದಲ್ಲಿ ಲಿಂಗಣ್ಣನನ್ನು ರಟ್ಟೆ ಹಿಡಿದು ನಿಲ್ಲಿಸುತ್ತಿದ್ದರು. ಆಗ.... 'ಏನು ಮಾಡ್ತಿದ್ದ್ರೋ ಏನಿಲ್ಲೋೀ? ಹ್ಯಾಂಗ್ ಹೇಳ್ಬೇಕ್ರೀ ಧಣೇರ?' ಎಂದು ಕಾಶೀಮ ತಿಪ್ಪಣ್ಣನವರ ಯೋಚನೆಯನ್ನೇ ಹಿಂಬಾಲಿಸಿದವನಂತೆ, ನುಡಿದ.

'ಹೋಗ್ಲಿ ಬಿಡು; ಮತ್ತೆ ಏನ್ಮಾಡ್ಬೇಕು ಅವ್ನ್ಯಯೋ?' ಎಂದರು.

'ದಾವಾ ಮಾಡಿ ಕೋರ್ಟಿಗೆ ಎಳೀಬೇಕ್ರೀ ಆ ಮಾದರ್ ಚೋದ್ಗ' ಎಂದ ಕಾಶೀಮ.

'ಥೂತ್........ನಿನಗೆ ತಿಳೀಲಿಲ್ಲ ಬಿಡೋ ಸಾಬಾ' ಎಂದು ತಿಪ್ಪಣ್ಣನವರು ಎದ್ದು ಒಳಗೆ ಹೋಗಿಬಿಟ್ಟರು.

* * * * * *

ಲಿಂಗಣ್ಣ ಕೋಪದ ಭರದಲ್ಲಿ ತಿಪ್ಪಣ್ಣನವರನ್ನು ಉಲ್ಲಂಘಿಸಿ ಎದ್ದು ಬಂದ ಮೇಲೆ ಅವನ ಮನಸ್ಸಿನಲ್ಲಿ ಯಾವುದೋ ಒಂದು ಅಸ್ಪಷ್ಟ ಭೀತಿಯ ಭೈರಿಗೆ ಕೊರೆ

ಯಲಾರಂಭಿಸಿತು. ಕೋಪಗೊಂಡ ತಿಪ್ಪಣ್ಣನವರು ಏನು ಮಾಡಲಾರರು? ಅವರು ವಿಷವಿಟ್ಟುಕೊಂಡು ಸೇಡು ತೀರಿಸಿಕೊಳ್ಳಬೇಕೆಂದರೆ ತನ್ನ ಮನೆ ಉಳಿದೀತೆ? ಹೊಲದ ಪೈರು ನಿಂತೀತೆ? ಕಣದಲ್ಲಿ ಒಟ್ಟಿದ್ದ ಬಣವೆ ಇದ್ದೀತೆ? ಮನೆಯ ಮುಂದೆ ನಿಲ್ಲಿಸಿದ ಗಾಡಿಯನ್ನೇ ಎಲ್ಲಿಗಾದರೂ ಹೊಡೆಸಿದರೆ? ನೇಗಿಲಿಗೆ ಹೂಡಿದ ಮುಕ್ಕಣ್ಣನನ್ನು ಹಾಡು ಹಗಲೇ ಬಿಚ್ಚಿ ಹೊಡೆಸಿಕೊಂಡು ಹೋದರೆ ಅವರನ್ನು ಯಾರು ಕೇಳ ಬೇಕು?........ಲಿಂಗಣ್ಣ ತನ್ನ ಉದ್ಧಟತನದಿಂದಾಗಬಹುದಾದ ಭೀಕರ ಪರಿಣಾಮ ಗಳನ್ನು ಕುರಿತು ಯೋಚಿಸುತ್ತ ಮನೆ ಸೇರಿದ. ಜಗುಲಿಯ ಕಂಬಕ್ಕೆ ಒರಗಿ ಕೂತು ಬುದ್ಧಿ ತತ್ತರಿಸುವಂತೆ ಯೋಚಿಸಿಯೇ ಯೋಚಿಸಿದ. ಯೋಚನೆ ಮಾಡಿದಂತೆಲ್ಲ ಅವನ ಬುದ್ಧಿ ಸ್ವಾಧೀನ ತಪ್ಪಿ ನಡೆಯಲಾರಂಭಿಸಿತು ! ಪ್ರಜ್ವಲಿಸಿ ಉರಿವ ದೀಪ ಮಂಕು ಕಟ್ಟಿ ಕ್ಷೀಣವಾಗುವಂತೆ ಅವನ ಬುದ್ಧಿ ಮಂಕಾಯಿತು. ಕಣ್ಣು ಮಸಕಾದವು. ಕಂಬದಲ್ಲಿದ್ದ ತಗಣಿಗಳು ಲಿಂಗಣ್ಣನ ಮೈಯ ರಕ್ತವನ್ನು ಯಥೇಚ್ಛವಾಗಿ ಹೀರಿದವು. ಆದರೆ ಲಿಂಗಣ್ಣನಿಗೆ ಪ್ರಜ್ಞೆಯೇ ಇರಲಿಲ್ಲ!

ಮಧ್ಯಾಹ್ನ ಎತ್ತುಗಳಿಗೆ ನೀರು ಕುಡಿಸಲೆಂದು ಗಂಗ, ಆಲ, ಮುಕ್ಕಣ್ಣಗಳನ್ನು ಕಣದಿಂದ ಬಿಟ್ಟುಕೊಂಡು ಬಂದ. ಲಾಳ ಕಟ್ಟಿದ ಕಾಲುಗಳನ್ನು ಛಂದೋಬದ್ಧವಾಗಿ ಎತ್ತಿಡುತ್ತಾ, ಕುತ್ತಿಗೆಯಲ್ಲಿ ಕಟ್ಟಿದ್ದ ಹುಬ್ಬಳ್ಳಿಯ ಗಂಟೆಯನ್ನು ಸದ್ದುಮಾಡುತ್ತಾ ಮುಕ್ಕಣ್ಣ ಬರುವದನ್ನು ಲಿಂಗಣ್ಣ ದೂರದಿಂದಲೇ ಗುರುತಿಸಿದ. ಕಳೆದ ಹದಿನೈದು ವರ್ಷಗಳಿಂದ ಮುಕ್ಕಣ್ಣನ ನಡಗೆ, ಗಂಟೆಯ ಸದ್ದನ್ನು ಕೇಳಿದ್ದ! ನಡುರಾತ್ರಿಯಲ್ಲಿ ಕಗ್ಗತ್ತಲೆಯ ಹೆಗ್ಗಾಡಿನಲ್ಲಿ ಬೇಕಾದರೂ ಮುಕ್ಕಣ್ಣನ ಆಗಮನವನ್ನು ಲಿಂಗಣ್ಣ ಕಣ್ಣು ಮುಚ್ಚಿಕೊಂಡು ಗುರುತಿಸುತ್ತಿದ್ದ! ಮುಕ್ಕಣ್ಣ ಮನೆಯೊಳಗೆ ಬಂದು ಮುಸು ರೆಯ ಬಾನಿಗೆ ಬಾಗದೆ ಲಿಂಗಣ್ಣನ ಮುಂದಕ್ಕೆ ಬಂದು ನಿಂತಿತು! ಪರವಶನಾಗಿ ದಿಕ್ಕು ತೋಚದೆ, ಕಣ್ಣು ಕಾಣದೆ ಕುಳಿತಿದ್ದ ಲಿಂಗಣ್ಣನಿಗೆ ಮುಕ್ಕಣ್ಣ ಬಂದು ಮೂರನೆಯ ಕಣ್ಣು ತೆರೆದಂತಾಯಿತು. ನೀರಡಿಸಿ ಬಂದಿದ್ದ ಮುಕ್ಕಣ್ಣನ ಹಣೆಯ ಮೇಲೆ ಕೈಯಾಡಿಸಿ, ಕೋಡುಗಳ ಸಂದಿನಲ್ಲಿ ಬೆರಳು ತುರಿಸಿ, ಆದರಿಸಿದ. ಕುಲು ಗುರು ಮನೆಗೆ ಬಂದರೆ ಎದ್ದು ಹೋಗಿ ಕರೆತರುವ ಭಕ್ತನಂತೆ ಲಿಂಗಣ್ಣ ಮುಕ್ಕಣ್ಣ ನನ್ನು ನೈದಡವಿ ನೀರಿನ ಬಾನಿಗೆ ಕರೆದುಕೊಂಡು ಹೋದ. ಆಲ ಮುಕ್ಕಣ್ಣಗಳೆರಡು ನೀರು ಕುಡಿದು ಹಕ್ಕೆಯಲ್ಲಿ ಜೋಡಿಯಾಗಿ ನಿಂತುಕೊಂಡವು. ಗಂಗಣ್ಣ ಕಣ್ಣಿಯಿಟ್ಟು ಊಟಕ್ಕೆ ಮನೆಯೊಳಕ್ಕೆ ಹೋದ.

ಲಿಂಗಣ್ಣ ಮತ್ತೆ 'ತಗಣೆಯ ಕಂಬಕ್ಕೆ' ಒರಗಿ ಕೂತುಕೊಂಡು ಯೋಚನೆಯ ಕಡಲಿನಲ್ಲಿ ಮುಳುಗಿಬಿಟ್ಟ ! ಅದರ ಆಳದಲ್ಲಿ ಸಿಲುಕಿ ಅವನು ಉಸಿರುಕಟ್ಟಿ ಏದು ವಂತಾಯಿತು! ಎಂಟೆತ್ತಿನ ರಂಟೆಯನ್ನು ಹೊಡೆಯುವಂತೆ ಲಿಂಗಣ್ಣ ಉಸಿರು ಬಿಗಿ

ಹಿಡಿದು ನಿಧಾನವಾಗಿ ಬಿಡುತ್ತಿದ್ದ! ಎದುರಿಗೇ ನಿಂತಿದ್ದ ಮುಕ್ಕಣ್ಣನ ಮುಖವನ್ನು ತದೇಕ ದೃಷ್ಟಿಯಿಂದ ನೋಡಿದ. ಮರುಕ್ಷಣವೇ, ಮುಕ್ಕಣ್ಣನಿಗೆ 'ದೃಷ್ಟಿ'ಯಾದೀತೆಂದು ನೋಟವನ್ನು ಬೇರೆ ಕಡೆ ತಿರುಗಿಸಿದ. ಮುಕ್ಕಣ್ಣ ಮನುಷ್ಯರ ಮನಸ್ಸಿನ ಒಳಿತು ಕೆಡುಕು, ನಗೆ ದುಗುಡುಗಳನ್ನು ತಿಳಿಯಲಾರದ ಮಗುತನದ ಮೌಢ್ಯದಿಂದ ಲಿಂಗಣ್ಣನನ್ನೇ ಬಿಟ್ಟ ಕಣ್ಣುಗಳಿಂದ ನೋಡುತ್ತಿತ್ತು ! ಲಿಂಗಣ್ಣನ ಕಣ್ಣಲ್ಲಿ ನೀರು ನಿರಾತಂಕವಾಗಿ ಹರಿಯುತ್ತಿತ್ತು. ಲಿಂಗಣ್ಣನ ಹೆಂಡತಿ ಗೌರಮ್ಮ ಬ್ಯಾನಿಗೆ ಮುಸುರೆ ಸುರಿಯಲು ಬಂದಾಕೆ, ಲಿಂಗಣ್ಣನ ಕಣ್ಣೀರು ಕಂಡು ಗಾಬರಿಗೊಂಡು, 'ಅದ್ಯಾಕ್ರೀ ಕಣ್ಣೀರು ತಂದ್ರೆಲ್ಲ ? ತುಂಬಿದ ಮನಿಯಾಗs ಗಂಡು ಮಕ್ಳು ಕುಂತ್‌ಗೊಂಡ್ ಕಣ್ಣೀರ್ತಂದ್ರೆ ಒಳ್ಳೇದೇನ್ರೀ........'ಎಂದಳು.

ಲಿಂಗಣ್ಣ ಉಟ್ಟ ಪಂಚೆಯಿಂದ ಕಣ್ಣುಜ್ಜಿಕೊಂಡು ಮತ್ತೆ ಮೂಕ ಬಸವಣ್ಣನಂತೆ ಕೈಕಟ್ಟಿ ಕುಳಿತುಕೊಂಡ.

'ಯಾಕ್ರೀ ಕಣ್ಣೀರು ತಂದ್ರೆಲ್ಲ ?.? ಎಂದಳು ಮತ್ತೊಮ್ಮೆ.

'ಇನ್ ನಮ್ಮನೆ ಉಳಿಯಾಂಗಿಲ್ಲ ನೋಡು....'ಎಂದ ಲಿಂಗಣ್ಣ.

'ಐ ಬಿಡ್ರೀ! ಯಂತಾ ಮಾತಾಡ್ತೀರೀ !' ಎಂದು ಗೌರಮ್ಮ ಸರಕ್ಕನೆ ಒರೆಯಿಂದ ಕತ್ತಿಯನ್ನು ಕಿತ್ತಂತೆ ಅತೃಪ್ತಿಯನ್ನೂ ಅಸಮಾಧಾನವನ್ನೂ ವ್ಯಕ್ತಪಡಿಸಿದಳು. ಗೌರಮ್ಮ ಮುಸುರೆಯ ಬೋಗಣಿಯನ್ನು ಒಳಗಿಟ್ಟು ಬಂದು ಬಾಗಿಲ ತೋಳಿಗೆ ಒರಗಿ ನಿಂತು:

'ಏನಾತ್ರಿ ಮಾರಾಯ್ರು....ಏನೇನೋ ಅನ್ನಿತ್ತೀರಲ್ಲ' ಎಂದಳು.

'ಇನ್ನೇನಾಗಬೇಕೇ ಮಾರಾಳೇ...............ಮುಕ್ಕಣ್ಣನ್ನ ಸಾವುಕಾರ್‍ರಿಗೆ ಕೊಡಬೇಕಂತೆ !'

'ಕೊಡಲ್ಲಾ ಅಂದ್ರೆ ಆತ್ರಿ. ಅದಕೆಲ್ಲ....'

'ಅಷ್ಟು ಸುಲೂಬ ಅಂತ ತಿಳಿದೇನು ನೀನು. ಕೊಡಲ್ಲ ಅಂತ ಅಂದ್ರೆ ಸೌಕಾರ ಏನ್ ಮಾಡ್‌ಬೌದು ಗೊತ್ತೇನು....?'

'ಏನು ಮಾಡ್ಯಾರ್‍ರೀ ಅವರು. ಏನ್ ನಮ್ಮ ಅಣೇಬರಾನೇ ಒತ್ತುಕೊಂಡು ಓದಾರೇನ್ರಿ ?'

'ಮುಕ್ಕಣ್ಣ ಅಂದ್ರೆ ನಮ್ಮ ಅಣೇಬರ ಅಲ್ಲ ಅಂತ ಮಾಡೀದಿ ಏನು ನೀನು? ಮುಕ್ಕಣ್ಣ ನಮ್ಮ ಮನೆಗೆ ಕಾಲಿಟ್ಟಾಗಿನಿಂದ ನಮಗೇನೂ ದರಿದ್ರಿಲ್ಲೋಡು. ಮುಕ್ಕಣ್ಣನ ಕಾಲುಗುಣ! ನಾವೂ ಒಬ್ಬ ಬಾಳ್ಳೇದಸ್ತ್ರಾಗಿ ಅದೀವಿ. ಇಲ್ದಿದ್ರೇ....'ಎಂದು ಲಿಂಗಣ್ಣ ನಿಟ್ಟುಸಿರು ಬಿಟ್ಟ.

'ಏನು ಮೊಗಲಾಯಿ ಆಗ್ಲಿಲ್ಲ ಬಿಡ್ರೀ ನೀವಂತು. ಒಳ್ಳೆ ಗಂಡುಮಕ್ಳು ಕುಂತ್ಗಂಡು ಈ ಬುಳ್ಳಣ್ಣಗಳಿಗೆ ಹೆದ್ರಿ ಕುಂತ್ರೇ ಊರಾಗ ಬಾಳ್ವೇ ಮಾಡಿದಂಗೇ ಆತು ಬಿಡ್ರಿ' ಎಂದು ಗೌರಮ್ಮ ಒಳಗೆ ಹೋದಳು.

ಲಿಂಗಣ್ಣನಿಗೆ ಮಾತ್ರ ಶಿಪ್ಪಣ್ಣನವರ ಭಯ ತಪ್ಪಲಿಲ್ಲ. ಅವನಿಗೆ ತನ್ನ ಹೊಲ, ಕಣ, ಮನೆ, ಮುಕ್ಕಣ್ಣನನ್ನು ಕಾಯುವುದೇ ಮಹಾ ಕಷ್ಟವಾಯಿತು. ತನ್ನ ಕಣ್ಣ ಬೊಂಬೆಯಂತೆ ಮುಕ್ಕಣ್ಣನನ್ನು ಜೋಪಾನ ಮಾಡುತ್ತಿದ್ದ. ಮುಕ್ಕಣ್ಣ ಕಣ್ಮರೆಯಾದರೆ ಅವನಿಗೆ ಕಣ್ಣೇ ಇಂಗಿದಂತಾಗುತ್ತಿತ್ತು. ಸಾವುಕಾರರ ಸಿಟ್ಟು ನೆನಸಿಕೊಂಡರಂತೂ ಅವನಿಗೆ ಎದೆಯೊಡೆಯುತ್ತಿತ್ತು....

ಮಳೆಗಾಲ ಬಂತು. ಬಿತ್ತನೆಯ ಕೆಲಸವೆಲ್ಲ ಮುಗಿದು ಎತ್ತುಗಳಿಗೆ ಕೊಂಚ ವಿರಾಮ ದೊರಕಿತು. ಅಲ್ಲಲ್ಲಿ ಹಸಿಯ ಹುಲ್ಲೂ ಬಿತ್ತು ! ಊರ ಸುತ್ತಮುತ್ತ ಎತ್ತ ನೋಡಿದರೂ ದೃಷ್ಟಿ ಹಬ್ಬುವವರೆಗೆ ಎದೆ ಎತ್ತರದ ಹಸಿರು ಜೋಳ ಕೊಬ್ಬಿನಿಂತು ತೂಗುತ್ತಿತ್ತು. ಜನಗಳಿಗೂ ದನಗಳಿಗೂ ಹರುಷದ ಕಡಲು ಭೂಮಿಯ ಮೇಲೆ ಬೆಳೆದಂತೆ, ಪೈರು ಹುಲುಸಾಗಿ ಬಂತು. ಲಿಂಗಣ್ಣನ ಈ ಆನಂದದಲ್ಲಿ ಸಾವುಕಾರರ ಭೂತದ ನೆನಪು ಕ್ರಮೇಣ ಕುಗ್ಗಿತು.

ಒಂದು ದಿನ ಹಸಿಯ ಹುಲ್ಲು ಮೇಯಲು ಹೋಗಿ ಮುಕ್ಕಣ್ಣ, ಆಳ್ಳೆ ಬಿರಿದು ಬಂತು ! ಲಿಂಗಣ್ಣ ರಾತ್ರಿ ಎತ್ತುಗಳ ಮೈ ತಿಕ್ಕುವಾಗ ಮುಕ್ಕಣ್ಣನ ಬಿರಿದ ಆಳ್ಳೆ ನೋಡಿ: ' ಏ ತಮ್ಮಾ, ಎಲ್ಲನ್ನ ಜೋಳ ಗೀಳಕ್ಕೆ ಮುಕ್ಕಣ್ಣ ಬಿದ್ದಿತ್ತೇನೋ' ಎಂದು ಕೇಳಿದ.

' ಇಲ್ಲ' ಎಂದ ಗಂಗ.

' ಹೆಂಗಾರ ಹೊಟ್ಟೆ ಯಾಕೋ ಒಂದಿಷ್ಟು ಊದ್ದೆಂಗ್ ಐತೆಲ್ಲೋ.... '

' ಊದಾಕ ಏನಾಗ್ಯೆತೆ. ಸಂಜೇತನಕ ಹುಲ್ಲು ತಿಂದ್ಯೆತೆ. '

' ದಿನಾ ಹುಲ್ಲು ತಿಂದ್ ಬರಲ್ಲೇನು ? ದಿನಾ ಇಂಗೇ ಇರುತ್ತಿತ್ತೆ ?'

' ಏನೋ ಅಪ್ಪ. ಇವೊತ್ಯಾಕ ಹೆಂಗಾಗೇತೋ ಏನೋ ?'

ಲಿಂಗಣ್ಣನಿಗೆ ಕಳವಳಕ್ಕಿಟ್ಟುಕೊಂಡಿತು. ಮುಕ್ಕಣ್ಣ ಬುಸ್‌ಗರೆಯುತ್ತಿತ್ತು. ಹೊಟ್ಟೆ ತುಂಬ ಮೇದು ಬಂದ ದನ ದೀರ್ಘ ಶ್ವಾಸೋಚ್ಛ್ವಾಸ ಮಾಡುವುದು ಸಹಜ; ಸ್ವಾಭಾವಿಕ.

' ಬಂದ ಮ್ಯಾಲೆ ನೀರು ಕುಡಿತೇನೋ ತಮ್ಮ ?'

' ಊ, ಹಳ್ಳದಾಗೆ ಕುಡೀತಲ್ಲ ?'

ಲಿಂಗಣ್ಣನಿಗೆ ಸಮಾಧಾನವಾಗಲಿಲ್ಲ. ಅಟ್ಟದ ಮೇಲಿನ ಹುಲ್ಲನ್ನು ಗೋದಲಿಗೆ ಹಾಕಿದ. ಆದರೆ ಮುಕ್ಕಣ್ಣ ಅದನ್ನು ಮೂಸಲಿಲ್ಲ. ಆಲ, ಎದ್ದು ನಿಂತು ಒಂದೆ ರಡು ಪಾಸೆ ಹುಲ್ಲು ತಿಂದಿತು. 'ಯಾಕೋ ಮುಕ್ಕಣ್ಣ ಹುಲ್ಲು ತಿನ್ನಲೊಲ್ಲದಲ್ಲೋ' ಎಂದ ಲಿಂಗಣ್ಣ.

'ಹಗಲೆಲ್ಲ ಹಸೇ ಹುಲ್ಲು ಮೇದು ಬಂದು ಇನ್ನೇನ್ ತಿಂದೀತಪ್ಪ ?'

ಲಿಂಗಣ್ಣ ಇರಬಹುದು ಎಂದು ಊಹಿಸಿದ. ಸುತ್ತಲೂ ಲಾಟೀನು ಹಿಡಿದು ಮುಕ್ಕಣ್ಣನ ಮೈ ಸವರಿ ನೋಡಿದ. ಮುಕ್ಕಣ್ಣನ ಸಗಣಿಯನ್ನು ಪರೀಕ್ಷಿಸಿದ. ತಂದೆಯ ಪೇಚಾಟವನ್ನು ನೋಡಿ ಗಂಗ 'ಒಂದಿಷ್ಟು ಮಲಗಿ ಎದ್ರೆ ಎಲ್ಲ ತಿಳೀತದೆ ಬಿಡಪ್ಪ. ಮಲಿಕ್ಕೊಂಡು ಮೆಲುಕು ಹಾಕ್ಲೀ. ನಾವು ಉಂಬಾನ ಬಾ' ಎಂದು ಕರೆದ. ಲಿಂಗಣ್ಣ ಮನಸ್ಸಿನಲ್ಲಿ ಮನಸ್ಸಿಲ್ಲದೆ ಊಟಕ್ಕೆಂದು ಹೋದ. ಲಿಂಗಣ್ಣ ಊಟ ಮಾಡಿ ಕೈ ತೊಳೆಯುವಾಗ ಮುಕ್ಕಣ್ಣ ಮಲಗಿಕೊಂಡ ಸದ್ದು ಕೇಳಿಸಿತು: 'ಮುಕ್ಕಣ್ಣ ಮಲಗಿತೇನು ?' ಎಂದು ಹೆಂಡತಿಯನ್ನು ಕೇಳಿದ. 'ಊ' ಎಂದು ಗೌರಮ್ಮ ಹೇಳಿದಳು. ಊಟ ಮುಗಿಸಿ ಎದ್ದು ಬಂದು ಮುಕ್ಕಣ್ಣನನ್ನು ನೋಡಿದ. ಮೆಲುಕು ಹಾಕುತ್ತಿರಲಿಲ್ಲ. ಬಾಯಲ್ಲಿ ಜೊಲ್ಲು ದಾರದಂತೆ ಇಳಿಬಿದ್ದಿತ್ತು. ಲಿಂಗಣ್ಣ ನಿಗೆ ದಿಗಿಲಾಯಿತು ! ಮುಕ್ಕಣ್ಣನಿಗೆ ಏನೋ ಆಗಿದೆ ಎಂದು ಖಂಡಿತವಾಯಿತು. ಗಿಡ ತರಲೆಂದು ಲಾಟೀನು ಹಿಡಿದುಕೊಂಡು ಬೀಸುಕಾಲು ಹಾಕಿಕೊಂಡು ಅವನಿಗೆ ಗೊತ್ತಿದ್ದ ಎಡೆಗಳಿಗೆಲ್ಲ ಕತ್ತಲಲ್ಲಿ ನುಗ್ಗಿದ ! ಅವನ ದುರಾದೃಷ್ಟಕ್ಕೆ ಎಲ್ಲಿಯೂ ಸಿಕ್ಕ ಲಿಲ್ಲ ! ಊರ ಸ್ಮಶಾನದಲ್ಲೂ ಅಲೆದಾಡಿದ. ತಲೆಬುರುಡೆಯನ್ನು ಎಡವಿದ! ಮೂಳೆ ಯನ್ನು ತುಳಿದು ಮುಂದುವರಿದ ! ಸಿದಿಗೆಯ ಕಟ್ಟಿಗೆಯನ್ನು ತೆಗೆದೊಗೆದ ! ಅವನೇ ಭೂತದಂತಿರಲು ಬೇತಾಳನ ಹೆದರಿಕೆ ಅವನಿಗೆಲ್ಲಿಯದು ? ಸ್ಮಶಾನವನ್ನೆಲ್ಲ ಸುತ್ತಾಡಿ ಮುಕ್ಕಣ್ಣನಿಗೆ ಗಿಡ ಹುಡುಕಿ ತಂದ, ಲಿಂಗಣ್ಣ ಮನೆ ಸೇರುವ ಹೊತ್ತಿಗೆ ಮುಕ್ಕಣ್ಣನ ಹೊಟ್ಟೆ ನಗಾರಿಯಾಗಿತ್ತು. ನಾಲ್ಕೂ ಕಾಲು ಚಾಚಿಕೊಂಡು ಮುಕ್ಕಣ್ಣ ಕಕ್ಕಸ ಬಡುತ್ತಿತ್ತು ! ಹಕ್ಕೆಯ ತುಂಬ ಮುಕ್ಕಣ್ಣ ಬಿದ್ದುಕೊಂಡು ಕಣ್ಣು ಅರಳಿಸಿ ದೈನ್ಯ ದಿಂದ ನೋಡುತ್ತಿತ್ತು. ಮುಕ್ಕಣ್ಣನ ಸ್ಥಿತಿಯನ್ನು ನೋಡಿ ಲಿಂಗಣ್ಣನ ಬುದ್ಧಿ ಕುಸಿದುಬಿತ್ತು. ಗಿಡವನ್ನು ಬಿಸಾಡಿ ಮುಕ್ಕಣ್ಣನ ಮುಖದ ಮೇಲೆ ಬಿದ್ದು ಲಿಂಗಣ್ಣ ಕಣ್ಣು ಕಿತ್ತ ಕರಡಿಯಂತೆ 'ಹೋ' ಎಂದು ಅಬ್ಬರಿಸಿಕೊಂಡ. ಕೇರಿಯ ಜನರೆಲ್ಲಾ ನೆರೆದರು, ಮುಕ್ಕಣ್ಣನಿಗೊದಗಿದ ದುಃಸ್ಥಿತಿಯನ್ನು ಕಂಡು ರೈತರ ಎದೆಯೊಡೆದು ಕಣ್ಣೀರು ಚಿಮ್ಮಿತು. ಕೆಲವರು ಗಿಡವನ್ನು ಅರೆದು ಗೊಟ್ಟದಲ್ಲಿ ಹಾಕಿ ಮುಕ್ಕಣ್ಣನ ಬಾಯಿಗಿಟ್ಟರು. ಆದರೆ ಗಿಡದ ಒಂದು ಹನಿ ಹೊಟ್ಟೆಗೆ ಸೇರಲಿಲ್ಲ. ಬೆಳಗಾಗುವು ದರಲ್ಲಿ ಮುಕ್ಕಣ್ಣನ ಕಣ್ಣಲ್ಲಿ ಪಾಪೆ ಇರಲಿಲ್ಲ. ಮನೆಯ ಮಂದಿಯೆಲ್ಲಾ ತಮ್ಮ ತಂದೆ

ತೀರಿದಾಗ ಅಳುವಂತೆ ರೋದಿಸಿದರು. ಎದೆ ಬಿರಿದು ಸೀಳುವಂತೆ ಮೊರೆಯಿಟ್ಟರು. ಲಿಂಗಣ್ಣ ಮುಕ್ಕಣ್ಣನ ಮುಂಗಾಲ ಮೇಲೆ ಬಿದ್ದು ಗೋಳಾಡಿದ.

ಮುಕ್ಕಣ್ಣನನ್ನು ತನ್ನ ಹೊಲದ ಮೂಲೆಯಲ್ಲಿ ಹೂಳಿ ಬಂದ. ಮುಕ್ಕಣ್ಣನಿಲ್ಲದೆ ಆಲ ಒಂಟಿಯಾಗಿ ಹಕ್ಕೆಯಲ್ಲಿ ನಿಲ್ಲಲಾರದೆ ಹಂಬಲಿಸಿತು. ಸಣ್ಣ ಕರುವಿನಂತೆ 'ಅಂಬಾ' ಎಂದು ಕೂಗಿಕೊಂಡಿತು; ಕಣ್ಣುಗಳೆರಡೂ ನೀರು ಸುರಿಸಿ ಬರಿದಾದವು. ಲಿಂಗಣ್ಣ ಎದೆಯೊಡೆದು ಒಂದೇ ವಾರದಲ್ಲಿ ಮುಕ್ಕಣ್ಣನ ದಾರಿ ಹಿಡಿದ !

ವಯಸ್ಸಾಗದ ಮಗನನ್ನು ಕಟ್ಟಿಕೊಂಡು ಅಲ್ಲಿ ಬದುಕುವುದು ಗೌರಮ್ಮನಿಗೆ ಅಸಾಧ್ಯವೆನಿಸಿತು. ತನ್ನ ತೌರುಮನೆಗೆ ಹೊರಟುಹೋದಳು. ಲಿಂಗಣ್ಣನ ಮನೆ ಮುರಿದು ಕದ ಕಟ್ಟಿತು !

ಸಿರಿವಂತರಿಗೆ, ಬಡವರ ಮನೆ ಮುರಿಯುವುದೆಂದರೆ ಹುಡುಗರು ನೊಣ ಬಡಿದು ಹಾಕಿದಂತೆ.

—ಕೋ. ಚೆನ್ನಬಸಪ್ಪ

# ರಾ ಜ ಮಾ

ದಿನದಿನವೂ ಕೊರಗುತ್ತಿರುವ ಈ ನನ್ನ ಆಸೆಯ ಹೊನಲು ಗಂಗೆಯ ಗತಿಯಾಂತು ನುಡಿಗಡಲಿಗೆ ಕೂಡಲೆಂದು ಹರಿಯುತ್ತಿದೆ, ಹಳ್ಳಿಗರ ನೈಜನೀತಿಯ,ಮಹಾಮತಿಯ ದೀಪಗಂಬಗಳನ್ನು, ನುಡಿಗೊಲಿದವರು ಆ ಹಿರಿನೀರನಿಧಿಯುದ್ದಗಲಕ್ಕೂ ಹೃದಯಕೌತುಕದ ನೌಕೆಯನ್ನೇರಿ ಸಂಚರಿಸುವಾಗ, ಬೆಳಕೀಯಲು ಅಮಿತ ಸಂಖ್ಯೆಯಲ್ಲಿ ನಿಲ್ಲಿಸುತ್ತದೆ.... ಈಗಿನ ನನ್ನ ಹವಣಿಕೆಗೆ ಈ ನೆಲ ಹರಕೆಯ ಆಸರೆ ಕೊಡಲಿ.... ಸಾಕು.... ಹಳ್ಳಿಯ, ಸಂಜೀವಿನಿಯಂತಹ, ಹಾಡುಗಳನ್ನು ಸಂಗ್ರಹಿಸುವುದೊಂದೇ ನನ್ನ ಆಜನ್ಮದುದ್ಯಮವಾಗಿರಲಿ.... ಇದನ್ನುಳಿದು ಇನ್ನೊಂದುತನ ನನಗೆ ಸೇರದು........

ಎಂದಿನಿಂದಲೋ ಹೀಗೆಯೇ ಪೂಣ್ಕೆಗೊಳ್ಳುತ್ತಲಿದ್ದ ನನ್ನ ಬಗೆ ಒಮ್ಮೆ ದಿಗಿಲುಗೊಳ್ಳಬಾರದಾಗಿದ್ದ ರೀತಿಯಲ್ಲಿ ದಿಗಿಲುಗೊಂಡಿತು.

ಜೀವ ಆಗ ರೊಚ್ಚಿಗೆದ್ದು, ಹುಚ್ಚಿಗೆದ್ದು, ಬಡಬಡಿಸುತ್ತಿತ್ತು.

'ಕಿವುಡ ಕಿಚಡಿ ಬೇಡಿದರ‍್ರ, ಗೌಡ ಹಚಡಾ ಕೊಟ್ಟನಂತ !'

ನುಡಿಯ ಸೇವೆಯನ್ನು ಮಾಡಿ, ಹಳ್ಳಿಯ ಗೌಡರಂಥ ಸ್ಥಾನ ಮಾನಗಳನ್ನು ಗಳಿಸಿಕೊಂಡ ಸಾಹಿತ್ಯದ ಜನಕರಿಗೆ, ನನ್ನ ಹಸಿವನ್ನು ಅರಿಯಲಾಗಲಿಲ್ಲ ; ನನ್ನ ಭಿಕ್ಷೆಯ ರೂಪದ ಮಾತುಗಳಿಗೆ ಪ್ರತಿಯಾಗಿ ನಾನು ಅವರಿಂದ ಪಡೆದುಕೊಂಡ ಮಾತುಗಳು ನನ್ನ ಕಿವಿಯನ್ನು ಗಡಚುಗೊಳಿಸಿದವು........ ಮೈಗೆ ಅಂಜಿಕೆಯ ನಂಜು ಬೆರೆಸಿದವು.

ಅವ್ವ, ಮೂರು ವರುಷದ, ನನ್ನ ಸಂಗ್ರಾಹಕನಾದ ಗುಣವನ್ನು ವಿಮರ್ಶಿಸಿ, ನೂರಾರು ನಿಟ್ಟುಸಿರುಗಳೊಂದಿಗೆ :

' ಮಗೂಳಾ, ನಿನ್ನ ಹಣ್ಯಾಗ ನೌಕರೀ ಮಾಡೂವ ಬರದೈತಿ ; ಮುನ್ನಾಡಿಂದ ನನ್ನ ಮಾತ ಕೇಳಬಾರ್ದ‍್ರ ?.'

ಎಂದು ನನ್ನ ಕೈಗೆ ನೌಕರಿಗೆ ಅರ್ಜಿ ಬರೆಯುವ ಅಣತಿಯಿತ್ತಳು–ಸಂಗ್ರಾಹಕನಾಗಿಯೇ ನಾನು ಗಳಿಸಲಾರೆನೆಂಬುದನ್ನರಿತು....

ನಾನು ಚಿತ್ರಿಸಿಕೊಳ್ಳುತ್ತಿದ್ದ ಕಡಲು ಬತ್ತಿ, ನೈರಾಶ್ಯ ತನ್ನ ನಿಗ್ಗರದ ಬಾವುಟವನ್ನೆತ್ತಿ 'ನನ್ನಡಿಯ ಪೂಜೆ ಗೈ' ಎಂದಿತು. 'ನೀನು ಹೀಗೇಕಾದೆ ?'—ಮೂಕತನ

ನನ್ನನ್ನು ನಿಕಟದನಿಯಿಂದ ಪೀಡಿಸತೊಡಗಿತು. ಮನಸ್ಸು ಯಾರು ಯಾರನ್ನೋ ಕಟುವಾಗಿ ಟೀಕಿಸುತ್ತಿತ್ತು, ನನ್ನ ಕಣ್ಣಿನ ಕನಸು ನನ್ನಾಸೆಗೆ ಕ್ಷಮಿಸೆಂದು ಕೈಯೊಡ್ಡಿ ಬೇಡಿಕೊಳ್ಳುತ್ತಿತ್ತು.

**Ist May 1944**-ಸರಕಾರ ಅಂದು ನನಗೆ 'Rationing Enumerator' ಎಂದು ತನಗೆ ತಿಳಿದಂತೆ ನಾಮಕರಣ ಮಾಡಿತು. ಈ ಸುದ್ದಿಯನ್ನು ಕೇಳಿದ ತಾಯಿಗೆ ಅಂದು ಸಮಾಧಾನವಾಗಲಿಲ್ಲ. ಒಂದೇ ಒಂದು ಅಳುನುಡಿಯೊಡನೆ: ' ನಿನ್ನ ಹಡದಾಂವಾ ಇಲ್ಲೀ ತನ್ನಾ ಬದಕಿ....' ....ಸರಕಾರ ವನ್ನೋ....ಇನ್ನಿತರರನ್ನೋ ಶಪಿಸಿದಳು. ಆ ಶಾಪದ ಸಹಸ್ರ ಪ್ರತಿಗಳನ್ನು ಎಸೆದೆ....ಯಾರೂ ತೆರೆದು ಓದಲಿಲ್ಲ....

ನನ್ನ ದಿಕ್ಕು ತಪ್ಪಿತು. ನವಿಲೂರನ್ನು ಸುತ್ತುಗಟ್ಟಿದ ಹೊಲ ಹಳ್ಳಿಗಳು ನನ್ನ ಪಾಲಿಗೆ ಎರವಾದವು. ನನಗೊಂದು ಕುತ್ತಾಗಿ ಪರಿಣಮಿಸಿ ಈ ರೇಶನಿಂಗ್ ಕೆಲಸ ನರನಾಡಿಗಳನ್ನು ಹಿಂಡಲೆಳಸಿತು. ಬೇಡಾದ ಬಾಳಿಗೂ ಓಗೊಟ್ಟು ಅಡ್ಡದಾರಿಯನ್ನೇ ಹಿಡಿದೆ. ಅದೇ ಮೊದಲು, ಅದೇದಿನ, ಅಸಹಾಯ ಹೀನನಾಗಿ ಸಂಗ್ರಹದ ಹೊಣೆಗೆ ಎರಡು ಬಗೆದೆ, ಗೋಗರೆದೆ.

ನನ್ನ ಗುರಿಯ ದಾರಿಯ ತುಂಬ ಚೂಪುಗಲ್ಲುಗಳು......ಗೊನೆಮುಳ್ಳುಗಳು—

' ಯಾರಿರಿಸಿದರು ಕಾಡಿನ ಒಡಲಿಂದಿಲ್ಲೀಗೆ ತಂದು ? '

ಮೌನ-ಚಡಪಡಿಕೆಗೆ ಯಾವ ತೃಪ್ತಿಯೂ ತಾಗಲಿಲ್ಲ-ಬಾಗಲಿಲ್ಲ.

ಈ ಮಿಡುಕಿನೊಂದಿಗೆ ಮತ್ತೊಂದು ವಿರಸ-ಜಸ-ಕತೆ ಜತೆ ಬೇಡಿತು. ಅದಕ್ಕೂ ಎದೆ ಸೀಳಿ, 'ಇದೋ ಇಲ್ಲಿ-ನಿನಗೂ-ತಾಣ ಬೇಕಷ್ಟಿದೆ, ಬಾ; ಒಳಸೇರು! ' ಎಂದೆ, ಔತಣವಿತ್ತೆ.

ಧಾರವಾಡದಲ್ಲೆಲ್ಲ ತಿರುಗಾಡಿ ಮನೆಮನೆಯ ಜನಗಣನೆ ಮಾಡುವ ಡಾಂಬರಿನಿಂದ ಬಾಗಿಲುಗಳಿಗೆ ನಂಬರು ಹಾಕುವ ನಮ್ಮ ಕಾರ್ಯ ಪ್ರಾರಂಭವಾಯಿತು. ಅನ್ಯ ಮನಸ್ಕನಾಗಿ ಕೆಲಸ ಮಾಡುವ ನನ್ನನ್ನು ಅಧಿಕಾರಿಗಳು ಹಾಗೆಂದು ಹೀಗೆಂದು, ಹೀಗಳೆಯಲಾರಂಭಿಸಿದರು ಒಂದು ವಾರದೊಳಗಾಗಿಯೇ.

ಹತ್ತೊಂಭತ್ತು ವರುಷದ ತನ್ನ ಮಗ, ತನ್ನೆದೆಯ ಬೇಗೆಯನ್ನು ನೀಗಿಸಿಕೊಳ್ಳಲು, ತನ್ನ ನೋವುಗಳನ್ನು ಮಾಗಿಸಿಕೊಳ್ಳಲು, ಮತ್ತೊಂದು ಬೇರೆ ಯಾವ ಯುಕ್ತಿಯೂ ತೋಚದೆ, ದಿನಕ್ಕೆ ದಿನ ಹೆಚ್ಚಿದಂತೆ, ತಾಸಿಗೆ ಎರಡು ಮೂರು ಸಿಗರೇಟು ಸೇದುವ ಕಲೆ ಕಲಿತುದನ್ನು ತಾಯಿ ಕಾಣಬೇಕಾಯಿತು.

'ನೀನಿನ್ನು ನನಗೆ ಹೊರತಾದೆ....'

'ನೀನು ಹುಟ್ಟಿದ ಮನೆ ಬೆಳಗಲಾರೆ....'

'ಬಾಳಲಾರೆ....'

'ನೀನು ನನ್ನ ಕೈಮೀರಿದೆ....'

ಇದೇ ಪಲ್ಲವಿಯ, ಇದೇ ಪರಿಪಿಡಿಯ, ಉದ್ಗ್ರಂಥವೊಂದು ನಾನೆಷ್ಟು ಓದಿದರೂ, ಮುಗಿಯದಂತಾಗಿ, ತಾಯಿಯ ಬೃಹತ್ ಭಾಷೆಯಿಂದ ನೆರವು ಪಡೆದು ನವಿಲೂರ ಮನೆಯಲ್ಲಿ ರೂಪುಗೊಳ್ಳುತ್ತಿತ್ತು.

ಆದರೂ 'ಯಾದರಾ ಕೆಲಸಿರ್ಲಿ ಒಪ್ಪುಡತ ಮೀರಿತೆಂದ್ರ ಕಟೀಣಾ ಮತ್ತ ಮುಂದ ಮಾಡೂದು' ಎಂದು ಹೇಳುವ ತಾಯಿಗೆ ಮತಿಗೆಟ್ಟಂತಾದ ನನಗೆ ನಗೆಯುಳಿಸಿಕೊಡುವ ಹಂಚಿಕೆ ತೋರುವ ಚಿಂತನೆ ಇತ್ತು ಮನೆ ಮಾಡಿಕೊಂಡು.

ಇವು ನನ್ನ ಹುಸಿದಿನಗಳು—ಈ ದಿನಗಳನ್ನುಪಚರಿಸಿ ನಾನು ಏನನ್ನೂ ಸಾಧಿಸಲಾರೆ. Rationing Enumerator ಆಗಿ, ಹುಟ್ಟು ಗುಣವನ್ನು ಕಟುಕನಂತೆ ಮೆಟ್ಟಿ, ಹೃದಯಗುಡಿಗೆ ತೊತ್ತಳಿದುಳಿಯುವ ತೊಡಕುಗಳ ತೋರಣ ಕಟ್ಟಿ; ನಾನು ಏನೂ....ಇಲ್ಲ....ಬದುಕಿಗೆ ಕತ್ತಲೆ ಆವರಿಸಲಿನ್ನು ಬಹಳದಿನ ಬೇಕಿಲ್ಲ...... ಅದಕ್ಕೆಂದೇ ಕತ್ತಲೆಯ ಕುರುಹಾಗಿ ನಾವು ಬಳಸುವ ಡಾಂಬರಿನ ಹನಿಗಳು ನನ್ನ ಅರಿವೆಯ ಮೇಲೆ ಬಿದ್ದು ಬಿದ್ದು, ಮುಖಕ್ಕೆ ಕಪ್ಪು ಬಳಿಯುವಂತಾದಾಗ 'ಇದೇ ಸಿಂದಿಯ ಕುಂಚದಿಂದ-ಸರಕಾರ ಗುತ್ತಿಗೆ ಹಿಡಿದ ಇದೇ ಕೈಯಿಂದ......ಹಿಂದೆ ಸಂಗ್ರಹಿಸಿದ ನುಡಿಗಳನ್ನು ಮನೆಮನೆಯ ಚೌಕಟ್ಟಿಗೆ ಬರೆದುಬಿಡಲೇ?' ಎನ್ನುವಂತಾಗುತ್ತಿತ್ತು. ಚಣ ಚಣಕ್ಕೂ supervision ಮಾಡುತ್ತಿದ್ದ Senior Inspectorರ ಸುಳಿಹಾಟ ನನ್ನ ಬಯಕೆಗೆ ತಡೆಯೊಡ್ಡುತ್ತಿತ್ತು.

ನನ್ನ ಇತಿಮಿತಿಯನ್ನು ನಿರೀಕ್ಷಿಸುತ್ತಿದ್ದ ಕಣ್ಣು ನನ್ನನ್ನು ಅಣಕಿಸಲು ಉದ್ಯುಕ್ತವಾದವು. ಅಕರಾಳ ವಿಕರಾಳತೆಯ ಅಂತರಾಳ ಬೆಂತರಕುಣಿತ ನಡೆಸಿತು.

ಉದಯ ರವಿಯೊಂದಿಗೆ ಕೆಲಸಕ್ಕೆ ಪ್ರಾರಂಭವಾದರೆ ಉದಯಚಂದ್ರನ ಬರವನ್ನೂ ಕಂಡು ನಾವೆಲ್ಲ ಮನೆ ಸೇರುತ್ತಿದ್ದೆವು. ಒಂದೊಂದು ದಿನ ಅಫೀಸಿನಲ್ಲಿಯೇ ಇರುಳು ಕಳೆಯಬೇಕಾಗುತ್ತಿತ್ತು. ಮಾಡುವ ಕೆಲಸ ಬಹಳಿರುತ್ತಿರಲಿಲ್ಲ. ಆಫೀಸರರಿಗೆ ಹೊಸ ಯೋಜನೆಯ ಹದಗಾಣುವುದೇ ಬಿಗಿಯಾಗಿ ಬಂದಿತ್ತು.

ಅನಿಯಮಿತ ಚಟುವಟಿಕೆಗಳ ಪರಿಣಾಮವಾಗಿ ನನ್ನ ಸಹೋದ್ಯೋಗಿಗಳ ನೇಕರಿಗೆ ಬೇರೆ ಬೇರೆ ಬಗೆಯ-ಮೊದಲಿದ್ದ-ರೋಗಗಳೇ ಬಲಿಯತೊಡಗಿದವು-ನನಗೆ ಹುರುಕು ತನ್ನ ಮುದ್ರೆಯೊತ್ತಿತು.

ಅವ್ವನ ಸೋಲರಿಯದ ಕಣ್ಣಿಗೆ ನನ್ನನ್ನು ಈ ಸ್ಥಿತಿಯಲ್ಲಿ ಕಾಣುವ ಆಸೆಯಿರಲಿಲ್ಲ. ಒಂದೆರಡು ವಾರದ ಅವ್ವನ ದೀರ್ಘ ವಿಚಾರದ ಫಲವಾಗಿ ನನಗೂ ಒಂದು ಹೊಸ ಯೋಜನೆ ದೊರಕಿತು. ಅವ್ವ ನನ್ನನ್ನು ಕೇಳಿದಳು.

' ಹಿಂಗ ರಣಾರಣಾ ಮಾಡಬ್ಯಾಡ ಸುಮ್ಮನ್ಸ ನೀನಂದೂ, ನಿಂದೂ ಮನಸು. ನಿನಗೊಂದ ಹಂಚಿಕೀ ಹೇಳಲ್ಯಾ? '

' ನನ್ನವೆಲ್ಲಾ ಹಂಚಿಗಿ ಮಣ್ಣಾಗಿ....'

' ಹಂಗ ಸಿಟ್ಟಿನ ಕೂಡ ಓಡೂದಲ್ಲದು, ಕಿಂವ್ಯಾಗ ಹಕ್ಕ್ಯೋ–ನಾ ಹೇಳೂದರಾ ಕೇಳ ಮೊದಲ....ಬರೇ ನಿನ್ನ ಹಟಾನ ಹಿಡೀಬ್ಯಾಡಾ.

' ಧಾರೋಡ್ಡಾಗ ಆಡ್ಯಾಡುವಾಗ ಯಾರ್ಯ್ಯಾರ ಹಾಡ್ತಾರನ್ನೂದರ ಗುರ್ತ ಆಗೂದುಲ್ಲs ತೀರs. ಹಂತಾ ಮನಿ ನೋಡಿ ಇಟ್ಗೋ....ಕೆಲ್ಸ ಮುಗ್ದಿಂದ ಹೋಗಿ ಕೇಳಿ ಬರಕೋ....ಬೇಕಾsದ್ರ ನಮ್ಮವ್ವ ಹೇಳ್ಯಾಳ ಹಂತ್ಲೇಳು....ಯಾರೂ ಒಲ್ಲೆನ್ನೂದುಲ್ಲಾ, ಮನಿಮುಟ್ಟ ಹೋಗಿ ಕೇಳಿದ್ರ......'

' ಕೆಲಸ ಮುಗ್ಯೂದ ಇಲ್ಲಾ............ಮುಗದಿಂದರಾ ಎಲ್ಲೆ ಉಳೀತೈತಿ ಹೊತ್ತು ?....'

' ನೀ ಏನ ಊರಿಗೆ ಬರಬ್ಯಾಡಾ. ಸಾಯಕಲ್ ಐತಿ, ದಿನಾ ಇಷ್ಟಮಂದಿ ದಾರೋಡ್ಕ ಎಡತಾಕ್ತಾರು....ಯಾರ್ಯ್ಯಾರ ಕೈಯಾಗ ರೊಟ್ಟೀ ಕೊಟ್ಟ ಕಳಸ್ತೇನಿ.... ಅಲ್ಲೇ ಇದ್ಬಿಡು....ಅಂದ್ರರಾ ನಿನಗ ಮನಸ ತುಂಬತೈತೇ....ಚಂಡಾಳಿ ಗುಣಾ.... ಪಂಟ ಓದಬ್ಯಾಡಾ....ಇಷ್ಟನಕೀ ನನಗ ಹೊಳೀತಿ...ಹೇಳಿದ್ನಿ..ಇನ್ನ ಇಲ್ಲದ್ದ ಎಲ್ಲಿಂದs ಬರಬೇಕು....ನಾ ಏನsರಾ....'

ತಾಯಿಯ ಕರುಳಿನ, ಕರುಣೆಯ, ಸಲಹೆ ಶಕ್ತಿಯ ನುಡಿಗಳನ್ನಾಲಿಸಿ, ನನ್ನ ಹೃದಯ ಹಗುರಾಯಿತು. one at a time ಅಲ್ಲ....Killing two birds with one stone ಎಂದು ಹಿಗ್ಗಿದೆ.

ಅವ್ವನ ಅಮೃತವಾಣಿಯನ್ನೇ, ಅವ್ವನ ಧ್ಯೇಯ–ಧೈರ್ಯಗಳನ್ನೇ ಆಸರೆಗೆ ಕೊಂಡು, ತಣಿಯಲೆತ್ನಿಸಿದೆ.

ಜೀವಕೊಟ್ಟ ತಾಯಿಗೆ ನನ್ನನ್ನು ಹೇಗೆ ಮುದಬೀದಿಯಲ್ಲಿ ಮುನ್ನಡೆಸಬೇಕೆಂಬುದು ಗೊತ್ತಿಲ್ಲದಿರುತ್ತದೆಯೇ ?

' ಇಲ್ಲ....ಬಿಡಬೇ....ನಾ ಈ ನೌಕರೀನ ಒಲ್ಯಾ....'

ಎಂದು ದನಿಯೆಳೆದಿದ್ದರೆ ಅವ್ವ ನೊಂದುಕೊಳ್ಳುತ್ತಿದ್ದಳು.

ತಾಯಿಯ ಹಂಚಿಕೆಯ ಪಾಲನೆಗೆ, ನನ್ನ ಜೀವ ಮತ್ತೆ ಹುರಿಗೊಂಡಿತು.

ಅವ್ವ ಬೀಸುವಾಗ ಹಾಡುತ್ತಿದ್ದ ಒಂದೊಂದೇ ನುಡಿಗಳು ನನಗೆ ಬಲಗೊಡಲು ಮುಂದೆ ಬಂದವು. 'ಇದೋ ನೀನು ಹೀಗೆ ಹೆಜ್ಜೆಯಿಡಬೇಕು.... ಅಲ್ಲಿ ಒಂದು ಮನೆಯಿದೆ.... ಅಲ್ಲಿ ಹಿಂತವರು ಹಾಡುತ್ತ ನಿನ್ನನ್ನು ಕೂಗಿ ಕರೆಯುತ್ತಾರೆ.... ಅಲ್ಲಿಗೆ ಹೋಗು' ಎಂದವು. ಮಾರ್ಗದರ್ಶನದಲ್ಲಿ ನನಗೆ ನೆರವಾದವು.

May 44—July 44.... ಸರಕಾರದ ಸೊತ್ತಾಗಿ....

ಮೂರು ತಿಂಗಳಿನಲ್ಲಿ ಎಷ್ಟೋ ಹಾಡು ಸಂಗ್ರಹಿಸಿದೆ. ಕಡಲೆದೆಯ, ಕಲ್ಲೆಡೆಯ ನಾಡತಾಯಿಯುದ ಹಾಡಿನ ತೊಟ್ಟಿಲಿನಲ್ಲಿ ಮತ್ತೊಮ್ಮೆ ಶೈಶವ ಸಂಭ್ರಮವನ್ನು ಕಂಡೆ. ಆ ದಿನಗಳ ನನ್ನ ಮನೋರಾಜ್ಯದ ರಾಜ್ಯಶ್ರೀ-ರಾಜಮ್ಮಾ!

ಉಳಿದ ಹಾಡುಗಾತಿಯರನ್ನೂ ಮೀರಿಸುವ, ನನ್ನನ್ನು ಅರಿತು, ಅಳಿದುಹೋದ ತನ್ನ ಒಬ್ಬನೇ ಒಬ್ಬ ಮಗನೆಂದು ನನ್ನನ್ನುಭಾವಿಸಿ, ಸಂತಸದಿಂದ ಬರಮಾಡಿಕೊಳ್ಳುವ, ಹಾಡುವ ನುಡಿಯೊಂದೊಂದರಲ್ಲಿಯೂ ನಾಡು-ನುಡಿಗಳ ಸತೇಜ-ಸವಿಸ್ತಾರಗಳನ್ನು ಬಿಂಬಿಸುವ ಹೃದಯ ವೈಶಾಲ್ಯದ, ಕರುಣೆಯ ವೈಭವದ ವೈಖರಿಯ ವೈಜಯಂತಿಯ ರಾಜಮ್ಮಾಳ ಕುಲಗೋತ್ರ ವಿವರಣೆ ಹೇಳಿದರೆ ನಾನು ಪಾಪಿ; ಮಾನವತೆಯ ಪಾವನತೆಗೆ ನಾನು ಅಡ್ಡಗಟ್ಟಿದಂತಾಗುವುದು, ಕುಲ ಸಂಚಲನ ಸೂತ್ರಧಾರಿಗಳ ಹೇಯಃ ಉಪಾಯಗಳನ್ನು ಸದೆ ಬಡೆಯುವ ಸ್ಪಷ್ಟೋಕ್ತಿಗಳನ್ನು ಆ ತಾಯಿ ಹಾಡುತ್ತಿದ್ದ ಕೇನುವಾಗ.

ರಾಜಮ್ಮಾ—

ಜನಪದ ನುಡಿ—

ನಾನು—

ಬಾಳು ತುಂಬಿತು.

ನನ್ನ ಸ್ವಪ್ನಧ್ವಜಕ್ಕೆ, ಆಗಸವಸನವಾಯಿತು; ನಾನದಕ್ಕೆ ಕೋಲಾದೆ. ವಿಶ್ವದ ಎದೆಯ ಮೇಲೆ, ಎಡರುತೊಡರುಗಳನ್ನೆಲ್ಲ ದೂರ ದೂರಕ್ಕಟ್ಟುತ್ತ ನನ್ನ ಸ್ವಪ್ನಧ್ವಜ 'ಜನಪದ ಸಾಹಿತ್ಯ'ಎಂಬ ನನ್ನ ಮನತುಂಬಿದ ಎರಡು ಶಬ್ದಗಳ ಏಳು ಅಕ್ಷರಗಳನ್ನೆಲ್ಲ ತನ್ನ ಮೈತುಂಬ ಮೂಡಿಸಿಕೊಂಡು ಹಾರತೊಡಗಿತು.

ಸಂಗ್ರಹದ ಕೊರಗು ಬಲಿಯಿತು. ಇದ್ದಷ್ಟು ಸಿಕ್ಕಷ್ಟು ಸಾಕಾಗಲಿಲ್ಲ ನನಗೆ. ಹಸುಗೂಸಿಗೆ ಅರೆಗುಟುಕಿನಷ್ಟು ಹಾಲುಣಿಸಿದಾಗ ತಾಯಿಯ ಮಡಿಲಿನಿಂದ ಕೂಸನ್ನು ಯಾರೋ ಎಲ್ಲಿಗೋ ಕಸಿದೊಯ್ಯುವಂತಹ ಪಾಡು ನನ್ನದಾಯಿತು.

ಆಗಿನ ನನ್ನ ಬಳಲಿಕೆಯನ್ನು ಇಳಿಮುಖಕ್ಕೆತಂದ ಗೌರವ ರಾಜಮಾನ ಬಾಳಿಗೆ ಸಲ್ಲುತ್ತದೆ. ನಾನು ಆಕೆಯನ್ನು ಕಂಡ ಸಲವೂ ಒಮ್ಮೊಮ್ಮೆಗೂ ನಾವಾಡಿದ ಮಾತು ಗಳು ನನ್ನಜೀವನಕ್ಕೆ ಬೆಳಕಾಗಿವೆ. ನನಗೊಗ್ಗದ Rationing Enumerator ಕೆಲಸದ ನನ್ನ ಚಿಂತನೆಯನ್ನು ರಾಜಮಾ ನಿರ್ಮೂಲಗೊಳಿಸುತ್ತಿದ್ದಳು. ಆಕೆಯ ಧ್ವನಿ ಯಲ್ಲಿ, ಜೀವನದಲ್ಲಿ ಅಂಥ ಓಜಸ್ಸು ನೆಲೆನಿಂತಿತ್ತು. ಆಕೆಯ ನೆನವಿಗೊಮ್ಮೆ ನನ್ನ ಕೈ ಜನಪದ ನುಡಿಯ ಮಹಿಮೆಯನ್ನು ಚಿತ್ರಿಸಲೆಳೆಸುತ್ತದೆ. ಪ್ರತಿಸಲವೂ ನನ್ನ ಯತ್ನ ಮುಗಿತಾಯವಿಲ್ಲದೆ, ಮುಂದುವರಿಯುತ್ತದೆ.

ನನ್ನ ಬಾಳಿಗೆ ರಾಜಮಾ ಒಂದು ಅನಂತ ಚರಿತೆಯ ಕಳೆ ನೀಡಿದಳು. ಆ ಕಳೆ ಬೆಳೆ ಕಾಣುವಂತಹ ನುಡಿಮಾಲೆಯನ್ನೂ ನಾಡ ದೇವಿಗೆ ಮುಡಿಸಿದಳು. ತನ್ನ ಚಿತ್ರ ನನ್ನೆದೆಯಲ್ಲಿ ಚಿರವಾಗಿರುವಂತೆ ಮೂಡಿಸಿದಳು.

ರಾಜಮಾನ ಮನೆಕಂಡದ್ದು, ಮನಕಂಡದ್ದು, ಅವ್ವ ಕಟ್ಟಿದ ಬುತ್ತಿಯನ್ನು ಆಕೆಯ ಮನೆಯಲ್ಲಿ ಉಚ್ಚಿ ಮೊದಲಬಾರಿಗೆ ಉಂಡಿದ್ದು, June 44ರ ಒಂದು ಮಧ್ಯಾಹ್ನ, ಅದೇ ದಿನ ರಾಜಮಾ ನನ್ನನ್ನು ತನ್ನ ಉಡಿಯಲ್ಲಿಟ್ಟುಕೊಂಡಳು.

ಧಾರವಾಡ ಸ್ಟೇಶನ್ ಎದುರಿಗಿರುವ ಟಾಂಗಾವಾಲಾರ ಗುಡಿಸಲುಗಳಿಗೆ ನಂಬರು ಹಾಕುವುದನ್ನು ಮುಗಿಸಿ, ಅದೇ ನಿಟ್ಟಿನ ರಾಜಮಾನ ಬಡಗುಡಿಸಲಿಗೂ ಹೋಗಿ ನಂಬರು ಹಾಕಿಯಾದಮೇಲೆ ನನ್ನೊಂದಿಗೆ ಬಂದಿದ್ದ ಇನ್ನೊಬ್ಬ ಗೆಳೆಯ ತನ್ನ ಮನೆಗೆ ಹೋದ–ಊಟದ ಬಿಡುವಿನಲ್ಲಿ.

ನಾವು ರಾಜಮಾನ ಗುಡಿಸಲಿಗೆ ಹೋದಾಗ ರಾಜಮಾ ಬೀಸುತ್ತಿದ್ದಳು, ಹಾಡುತ್ತಿದ್ದಳು. ನಾನು ನೇರವಾಗಿ ಒಳಗೆ ಅಡಿಯಿಟ್ಟೆ. ರಾಜಮಾ ನನ್ನನ್ನು ಸ್ವಾಗತಿಸಿದಳು. ಒಂದು ಪಕ್ಕದಲ್ಲಿ ಆಕೆಯ ಸೊಸೆ ನರಳುತ್ತಿದ್ದಳು,—ಗರ್ಭಿಣಿ ಯಾಗಿರುವಾಗಲೇ ಅವಳನ್ನು ಆವರಿಸಿದ ಬೇನೆ ಸಣ್ಣದಾಗಿರಲಿಲ್ಲ. ಆಕೆಯ ಒಬ್ಬನೇ ಒಬ್ಬ ಮಗ ದೂರದ ಥಾಂಡೋಲಿಗೆ ದುಡಿಯಹೋಗಿದ್ದ. ವಾರಕ್ಕೊಮ್ಮೆ ತಿಂಗಳಿ ಗೊಮ್ಮೆ ಧಾರವಾಡಕ್ಕೆ ಬರುತ್ತಿದ್ದ.

ಉರ್ದುವಿನಲ್ಲಿಯೇ ನಮ್ಮ ಮಾತುಕತೆ ಮುಂದುವರಿದಿತ್ತು. 'ತನ್ನ ಸೊಸೆ ಯನ್ನು ತವರವರು ಹೆರಿಗೆಗೆ ಕರೆಯಬರಲಿದ್ದಾರೆ. ಇನ್ನೂ ರೋಗ ಮರುಕಳಿಸಿ ಬರುತ್ತಲೇ ಇದೆ. ಇಂಥವಳನ್ನು ಕಿತ್ತೂರಿಗೆ ಹೇಗೆ ಕಳಿಸುವುದು?'....ಇವೇ ಮೊದಲಾಗಿ ರಾಜಮಾನ ಕರುಳು ಕುದಿಸುವ ಬೇಗುದಿಯ ಬೆರಕೆ ನುಡಿಯಾಗಿದ್ದವು. ನಾವು ಊಟ ಮಾಡುವಾಗ ರಾಜಮಾನ ಕತೆ ಕೇಳಿದೆ.

ಅದು ಕ್ಷಾಮಕಾಲ. ರಾಜಮಾ ನಿಪ್ಪಾಣಿಯನ್ನು ಬಿಟ್ಟು ಧಾರವಾಡಕ್ಕೆ ಬಂದು ಒಂದು ವರುಷವಾಗಿದೆ....ನಡುವೆ ನುನಗುಂಡಿ ಮನಸೂರುಗಳಿಗೆ ಎಳೆಂಟು

ದಿನಗಳ ಮಟ್ಟಿಗೆ ಭತ್ತ ಮಾಡಲು ಹೋಗಿ ಮರಳಿ ಬರುವನಿತರಲ್ಲಿ ನೀರು ಹತ್ತಿದ ನೆವದಿಂದ ಎರಡು ಮೂರು ತಿಂಗಳ ನೆಲಹಿಡಿದದ್ದು, ಆಗಿನ ಈ ಮೂವರ ಕಷ್ಟಪೂರ್ಣ ಜೀವನ....ದುಡ್ಡಿಲ್ಲದಿದ್ದುದಕ್ಕೆ ಧೂಳೀಕೊಪ್ಪದ ಬೀಗರಿಂದ ಅವನ ಅರೈಕೆಗಲ್ಲ.... ಹೊಟ್ಟೆಯ ಹೊರೆಯನ್ನು....ತುತ್ತನ್ನು ಉಣ್ಣಲು....ಸಾಲ ಮಾಡಿದ್ದು....ಊರಿನಿಂದ ತಂದ ಎರಡು ಆಡಿನ ಮರಿಗಳನ್ನು ಕಡಿಮೆಕ್ರಯಕ್ಕೆ ಸಾಲ ತರುವ ಮುನ್ನ ಮನಕರಗಿ ಮಾರಿದ್ದು....ಚಳಿಜ್ವರ ಕಡಿಮೆಯಾದರೂ ಮಗ ಬಲಹೀನನಾಗಿ ತಿಂಗಳುಗಟ್ಟಲೆ, ರಕ್ತ ತುಂಬುವಂಥ ಅನ್ನ ಸಿಗದೆ ಯಾವ ಕೆಲಸವನ್ನೂ ಮಾಡಲು ಬರದಂತಾಗಿ ಮನೆ ಹಿಡಿದದ್ದು....ಆಗ ರಾಜಮಾ ನಿರುಪಾಯಳಾಗಿ ಸಾರಸ್ವತಪುರದವರೊಬ್ಬರ ಮನೆಯಲ್ಲಿ ಕಸ ಮುಸುರೆಯ ಕೆಲಸಕ್ಕೆ ನಿಂತದ್ದು......ಅವರು ರಾಜಮಾನ ಮೇಲೆ ತುಡುಗಿನ ಅಪರಾಧ ಹೊರಿಸಿ ಸಂಬಳ ಕೊಡದೆ ಕೆಲಸ ಬಿಡಿಸಿದರಂತೆ....ಬಳಿಕ ಊರಿನಲ್ಲಿ ಮತ್ತೊಬ್ಬರ ಮನೆಯಲ್ಲಿ ಕೆಲಸ....ಬಿಜಾಪುರದ ಮಗಳ ಮನೆಗೆ ನಾಲ್ಕೈದು ವರುಷಗಳಿಂದ ಹೋಗುವುದಾಗದೆ ದೂರದಿಂದಲೇ ಮಗಳ ಮುಖದ ಸಾಮಿಪ್ಯದ ಕನಸುಣಿಯಾದದ್ದು.........

ಇನ್ನೂ ಹಲವು, 'ಜಾಲಿಯ ಗಿಡದ ಮುಳ್ಳೆಣಿಸಬಹುದೇ?' ಎಂದಳು ರಾಜಮಾ. 'ಇಲ್ಲ' ಎಂದೆ. 'ಹಾಗೆಯೇ ನನ್ನ ದುಃಖದ ಮಾತುಗಳು' ಎಂದು ರಾಜಮಾ ತನ್ನ ಆ ದಿನದ ಪರಿಚಯಕ್ಕೆ ಮೊದಲು ಮಾಡಿದ್ದಳು.

ಅವ್ವ ಕಟ್ಟಿದ ಬುತ್ತಿಯಲ್ಲಿ ರೊಟ್ಟಿಯಿತ್ತು. ಖಾರ ಉಪ್ಪಿನಕಾಯಿ—ಉಳ್ಳೀಗಡ್ಡಿ—ಕಡಲೆಯ ಹಿಂಡಿ—ಸೆಂಬಿಯ ಪಲ್ಯ—ಇಷ್ಟೆಲ್ಲ ಇತ್ತು. ಅನ್ನ ಇದ್ದಿರಲಿಲ್ಲ—ಅಕ್ಕಿಯ ಅಭಾವ—ರಾಜಮಾನ ಸೊಸೆ ಅನ್ನ ಉಣ್ಣದೆ ತಿಂಗಳು ತಿಂಗಳುಗಳು ರುಳಿದ್ದಳಂತೆ. ಮಗನು ಕೂಲಿಯ ಭತ್ತ ತರಲು ಹೋದಾಗ ಸರಕಾರದವರು ದಂಡ ಹೇರುವೆವೆಂದು ಅಂಜಿಸಿ ಅವನ ದುಡಿತದ ಪ್ರತಿಫಲದ ಭತ್ತವನ್ನೂ ಕಸಿದುಕೊಂಡು ಕಳಿಸಿದ ದಾರುಣ ಕತೆಯನ್ನೂ ರಾಜಮಾ ಕಣ್ಣೀರು ಬೆರೆಸಿ ನನಗೆ ಹೇಳಿದಳು.

ಒಂದೂವರೆ ಗಂಟೆಗೆ ನಾನು ಮದೀಹಾಳ ಸೇರಬೇಕಿತ್ತು ಆಫೀಸರರ ಹೇಳಿಕೆಯಂತೆ. ಮತ್ತೊಮ್ಮೆ ಹಾಡು ಬರೆದುಕೊಳ್ಳಲು ಬರುತ್ತೇನೆಂದು ಪೂರ್ವಸೂಚನೆ ಇತ್ತು,

'ರಾಜಮಾ—ನಾ ಹೋಗ್ತೇನಿನ್ನs' ಎಂದೆ.

ರಾಜಮಾ ತನ್ನ ಗರ್ಭಿಣಿ ಸೊಸೆಯ ಬಯಕೆಯ ಊಟ ಹಿಂಗಿತು ಎಂದು ತನ್ನ ಮುಪ್ಪಿನ ನಾಲಿಗೆಯಿಂದ ನುಡಿದು ನನ್ನನ್ನು ಹರಸಿ, 'ಅಚ್ಛಾ–ಬೇಟಾ' ಎಂದು, 'ಬಾರ'ಂದು ಸಮ್ಮತಿಸಿದಳು.

ಸಾಯಕಲ್ ಹತ್ತಿದೆ. ಸ್ಟೇಶನ್-ಧಾರವಾಡದ ಒಂದು ತುದಿ-! ಮದೀಹಾಳ-ಮತ್ತೊಂದು ತುದಿ. ಎರಡೂ ತುದಿಗಳ ನಡುವಿನ ದಾರಿಯಲ್ಲೆಲ್ಲ ತಪ್ತಹೃದಯನಾಗಿ, ತಲೆ ತಿರುಗಿಸಿಕೊಳ್ಳುತ್ತ ಮಳೆಯ ಬರವನ್ನು ಸೂಚಿಸುತ್ತಿದ್ದ ಬಿಸಿಲಿನಲ್ಲಿ ಮದೀಹಾಳಕ್ಕೆ ಹೋದೆ. ದಾರಿಯಲ್ಲಿ 'ನಾನು ರಾಜಮಾಳನ್ನು ಬೇಗ ಕಾಣುವಂತಾಗಿ, ಸಂಗ್ರಹಿಸಬೇಕು—ರಾಜಮಾನ ಸೊಸೆಗೆ ತೀವ್ರ ಗುಣವಾಗಬೇಕು—ಮನೆಗೆ ಇಂದು ಹೋಗಿ ನವಿಲೂರ ತಾಯಿಗೆ ಈ ದಿನದ ಕತೆ ಹೇಳಬೇಕು'. ಈ ವಿಚಾರ ಚಕ್ರ ನನ್ನ ಸಾಯಕಲ್ ಗಾಡಿಯ ವೇಗಕ್ಕಿಂತಲೂ ಹೆಚ್ಚು ವೇಗದಿಂದ ತಿರುಗತೊಡಗಿತ್ತು.

ಎರಡನೆಯ ಸಲ, ನಾಲ್ಕೈದು ದಿನಗಳ ನಂತರ, ಒಂದು ಮಂಗಳವಾರ ಆಫೀಸಿಗೆ ಸಂತೆ ರಜೆಯಿದ್ದುದರಿಂದ, ಇನ್ನೂ ಎರಡು ತಾಸಿನಷ್ಟು ಹೊತ್ತಿರುವಾಗ ರಾಜಮಾನ ಬಳಿಗೆ ಹೋದೆ. ಆಗ ಆಕೆಯ ಸೊಸೆ ಕಿತ್ತೂರಿಗೆ ಹೋಗಿದ್ದಳು. ಮನೆಯಲ್ಲಿ ರಾಜಮ್ಮ ಒಬ್ಬಳೇ ಇದ್ದಳು. ಡಾಂಬರಿನ ಡಬ್ಬಿಯನ್ನು ಹಿಡಿದುಕೊಳ್ಳಲು ನಾಚುತ್ತಿದ್ದ ಗೆಳೆಯರು ಅದನ್ನು ನನ್ನ ಸಾಯಕಲ್ ಹ್ಯಾಂಡಲಿಗೆ ತೂಗು ಹಾಕಿ ಬಿಡುತ್ತಿದ್ದರು.

ರಾಜಮಾನ ಗುಡಿಸಲಿನ ನಡುಗಂಬದಲ್ಲಿ ತಗಣಿಯ ಬಳಗ ಮನೆ ಮಾಡಿತ್ತು. ಮತ್ತೊಂದು ಜಾಜಿಯ ಸಂದಕಕ್ಕೆ ಗೆದ್ದಲಿ ಹತ್ತುತ್ತಿತ್ತು. ರಾಜಮಾ ಆ ಕಂಬಕ್ಕೆ, ಆ ಸಂದಕದ ತಳ ಭಾಗಕ್ಕೆ, ಡಾಂಬರು ಹಚ್ಚಬಹುದೇ, ಉಪಯೋಗಿಸಬಹುದೇ, ಎಂದು ನನ್ನನ್ನು ಕೇಳಲಾರದೆ ಕೇಳಿದಳು.

ಮಾತಿನಿಂದ ಉತ್ತರಿಸದೆ ರಾಜಮಾನಿಗೆ ಸುಮ್ಮನೆ ಕೊಡಲು ಹೇಳಿ ಕಂಬಕ್ಕೆಲ್ಲ ಡಾಂಬರು ಬಳಿದೆ—ಸಂದಕಕ್ಕೂ; 'ಇನ್ನೊಂದರೆತಾಸಿನಲ್ಲಿ ರಾಜಮಾ ಹಾಡುತ್ತಾಳೆ. ಬೀಸುವ ಕಲ್ಲಿಗೆ ಆ ತಾಯಿಯ ಡಾಂಬರ ಗುರುತಿನ ಕೈಸ್ಪರ್ಶ ಬೇಡ.' ಎಂದು ನನ್ನ ಮನ ತನಗೆ ತಾನೇ ಹೇಳಿಕೊಳ್ಳುತ್ತಿತ್ತು.

ಆ ದಿನ ಸುಮಾರು ಮೂವತ್ತರಷ್ಟು ನುಡಿಗಳನ್ನು ರಾಜಮಾ 'ಸರಸತಿಯು ತಲೆದೂಗೆ,' ಹಾಡಿದಳು; ನಾನು ಬರೆದುಕೊಂಡೆ.

ಬೀಸುವಕಲ್ಲಿಗೆ ಕೊನೆ ಮುಕ್ಕುಹಾಕುವಾಗ ರಾಜಮಾನ ಮೈ ಬೆವರೊಡೆದಿತ್ತು, ತಲೆಯ ಶ್ವೇತವರ್ಣದ ಕೂದಲು ಕಲ್ಲಿನ ಎದೆಯ ಮೇಲೆ ನಗೆಯಾಡುತ್ತಿದ್ದುವು. ಹಿಂಬದಿಯ ಹತ್ತಿಯ ಕೊಳ್ಳದಲ್ಲೆಲ್ಲ ರಾಜಮಾ ಹಾಡಿದ ನುಡಿಗಳ ಸಾಲು ಸಾಲೂ, ಅಕ್ಷರ ಅಕ್ಷರಗಳೂ ಪ್ರತಿಧ್ವನಿಗೊಳ್ಳುತ್ತಿದ್ದುವು. ಹಕ್ಕಿಗಳ ಕಂಠದಲ್ಲಿ, ಹುಬ್ಬಳ್ಳಿ-ಪುಣೆಯತ್ತ ಹೊರಟು ನಿಂತ ಗಾಡಿಯ ಕೂಗಿನಲ್ಲಿ ಅದೇ ಧ್ವನಿ ತುಂಬಿಕೊಂಡಿತ್ತು.

ಸಂಜೆಯ ರವಿ, 'ರಾಜಮ್ಮಾ! ಇಂಥ ದಿವ್ಯ ಧ್ವನಿಯೆನ್ನು ನಾನೆಂದೂ ಆಲಿಸಿರಲಿಲ್ಲವಲ್ಲ' ಎನ್ನುತ್ತ ರಾಜಮಾನ ಪ್ರಶಂಸೆ ಮಾಡದಿದ್ದರೆ ತನ್ನ ಮನ ತುಂಬದೆಂದು ಪಡುವಣ ದಿಕ್ಕಿನ ಮುಖದ ಮೇಲೆ ರಾಜಮಾನ ಹೆಸರನ್ನು ಹೊಂಗಿರಣಗಳಿಂದ ಬರೆದು, ಆ ತಾಯಿಯಿಂದ ಮುಳುಗಲಪ್ಪಣೆ ಬೇಡಿದ. ಆ ಹಿರಿ ಹೆಸರನ್ನೇ ನಾನು ಕಣ್ತುಂಬ ನೋಡಿ ಪಠಿಸುತ್ತಿದ್ದೆ.

ಹಾಡು ಮುಗಿಸುತ್ತ, ಕಲ್ಲಿಗೆ ನಮಿಸುತ್ತ:

'ನೀನಿನ್ನೂ ಮೂರು ಮೈಲು ಹೋಗಬೇಕು, ತಡವಾದೀತು, ಹೊರಡು; ಹುಟ್ಟುವ ಮೊಮ್ಮಗನೊಡನೆ, ಮಗ-ಸೊಸೆಯೊಡನೆ ನಾನು ಒಮ್ಮೆ ನಿಮ್ಮ ಊರಿಗೆ ಬರುತ್ತೇನೆ—ನಿಜವಾಗಿ —ನಿಮ್ಮ ಊರಿನ, ನಿಮ್ಮ ಮನೆಯ ಉಪ್ಪಿನಕಾಯಿ ತಿಂದ ನನ್ನ ಮೊಮ್ಮಗ ನಿಮ್ಮ ಊರಿಗೆ, ನಿಮ್ಮ ಮನೆಗೆ ಬಾರದಿರುವನೇ ? ' ಎಂದು ತನ್ನ ಭಾಷೆಯಲ್ಲಿ ನನ್ನನ್ನು ಬೀಳ್ಕೊಡುವಾಗ, ತಾನು ಕೊಳ್ಳದಿಂದ ತಂದಿದ್ದ 'ಇಸರುಡಿಗ್ಯಾನ ಪಲ್ಯೆ'ಯನ್ನು ಮನೆಗೊಯ್ಯಲೆಂದು ನನಗಿತ್ತಳು. ಮತ್ತೆ ಮತ್ತೆ ಬರಲು ಹೇಳಿದಳು.

ಅಷ್ಟೊಂದು ವೇಗದಿಂದ, ಇನ್ನೂ ತನ್ನ ಸೊಸೆಯ ಹೊಟ್ಟೆಯಲ್ಲಿದ್ದ ಮೊಮ್ಮಗನನ್ನು ಕಾಣುವ ಆಸೆಯನ್ನು ಆಕೆಯ ವೃದ್ಧ ಕಣ್ಣುಗಳು ಹೊರಗೆಡಹುತ್ತಿದ್ದುವು.

ಮತ್ತೆ ಮುಂದಿನ ಮಂಗಳವಾರ ರಾಜಮಾನನ್ನು ನಾನು ಕಂಡು ಮತ್ತೊಂದು ಹತ್ತು ನುಡಿಗಳನ್ನು ಬರೆದುಕೊಳ್ಳುವ ಹೊತ್ತಿಗೆ, ಕಿತ್ತೂರಿನ ನೆರೆಯ ಹಳ್ಳಿಯಿಂದ ಧಾರವಾಡದ ಸಂತೆಗೆ ಬಂದವರೊಬ್ಬರು ರಾಜಮಾನನನ್ನು ಕಂಬನಿಮಿನೆಯ ಕಣ್ಣುಗಳಿಂದ, ತಲೆ ಕೆಳಗೆ ಮಾಡಿ ನೋಡಿ ಹೇಳಿದರು.

' ನಿನ್ನ ಸೊಸಿ ಹಡದ್ಳು-ಅದ್ರs ನಿನ್ನ ಬಾಗೇವ್ ಇಲ್ಲಾ......
ಮರದಿವ್ಸs ಹುಡುಗಾ ಜೀಂವಾ ಬಿಟ್ತೇ....'

ರಾಜಮಾನ, ನನ್ನ, ಎದೆಯ ಹುಲ್ಲುಗಾವಲ ಸೀಮೆಯ ಸಿರಿ ಒಣಗಿದಂತಾಯಿತು, ಅದಕ್ಕೆ ಬೇಗೆ ಹಚ್ಚಿದಂತಾಯಿತು, ಆ ಬೇಗೆಗೊಂಡ ಕರಕು ನೆಲದ ಅಮಂಗಳ ವರ್ಣ ನಮ್ಮ ಮುಖದಲ್ಲಿ ಬಿಡಾರಬಿಟ್ಟಿತು.

ಆಗ ನನಗೆ ಉರ್ದು ಮರೆತಂತಾಯಿತು-ಸಂತೈಸ ಹೊರಟೆ.

' ರಾಜಮಾ, ನಿನಗಿನ್ನ ಇವತ್ತ ರಾತ್ರಿ ಇಲ್ಲಿರೂದು ಆಗೂದುಲ್ಲಾ, ಬ್ಯಾಡಾ.... ....ಅಳಕೊಂತ ಕುಂಡರತೀ....ಇಲ್ಲಿರೂದ ಬ್ಯಾಡಿವತ್ತ....ನಮ್ಮೂರಿಗೆ....ಬಾ.'

ರಾಜಮ್ಮಾ ಕೃಶದೇಹವನ್ನು ಮುದುಡಿಸಿಕೊಂಡು ಎಳೆಯ ಹಕ್ಕಿಯಂತಾಗಿ, ಕುಳಿತಲ್ಲಿಂದ ಏಳಲಾರದಾದಳು. ಆ ದುಃಖವನ್ನು ಮರೆಸುವ ಕೆಲ ನುಡಿಗಳು ರಾಜಮ್ಮನಿಗೆ ಬುದ್ಧಿ ಹೇಳಬಹುದಿತ್ತು....ಆದರೆ ದೀರ್ಘಯಾತನೆ ದೆವ್ವದಂತೆ ಅವಳೆದೆಯಿಂದ ಅವಳು ಬಾಳಿದ್ದಕ್ಕೂ ಬಳಸಿಕೊಂಡ ನುಡಿಗಳನ್ನು ನುಂಗಲು ಬಾಯಿ ತೆರೆದಿತ್ತು.

ಆಗ ಅವ್ವನ ಮಾತು ನೆನಪಿಗೆ ಬಂತು.

'ಅಂವ [ನನ್ನ ತಂದೆ] ಸತ್ತಿಂದ ನಾಕೈದ ವರ್ಷ ನನಗ ಹಾಡಾಕ ಬಾಯಿ ಬರಲೇ ಇಲ್ಲಾ. ಇನ್ನ ಆ ಹಾಡಾಗಿನ ಮಾತೆಲ್ಲಿಂದ ನೆನಪಿಗೆ ಬರಬೇಕು........ ? ಸುಡುಗಾಡ........ಅಳಸೂವಂತಾವೂ ಹಾಡ ಇರತಾವಲ್ಲಾ........ಅವs ಬಾಯಾಗ ಬರತ್ತಿದ್ವು....'

ಸುದ್ದಿಯನ್ನು ಹೇಳಿದವರು 'ಕಿತ್ತೂರಿಗೆ ಕರಕೊಂಡ ಹೊಕ್ಕೇನಿ ಹೋಗ ತಮ್ಮಾ ಅಕೀನ್ನ....ಬೆಲ್ಲಾ ಹೇರಿಕೊಂಡ ಬಂದ ಚಕ್ಕಡ್ಯಾಗ' ಎಂದು ನನಗರುಹಿ ರಾಜಮ್ಮನನ್ನು ಪೇಟೆಯತ್ತ ಕರೆದೊಯ್ದರು.

ನಾನು ನವಿಲೂರಿಗೆ ಹೋಗುವಾಗ ದಾರಿಯ ಇಕ್ಕೆಲದಲ್ಲೆಲ್ಲ ರಾಜಮ್ಮನ ಮೂರ್ತಿ ನನ್ನ ಕಣ್ಣಿಗೆ ಕಾಣುತ್ತಿತ್ತು....'ರಾಜಮ್ಮನ ಮೊಮ್ಮಗ ಬೆಳೆದು ದೊಡ್ಡವನಾಗಿದ್ದರೆ ಇದೇ ದಾರಿಯಲ್ಲಿ ಬಾಲಲೀಲೆಯನ್ನಾಡುತ್ತ ನಮ್ಮ ಮನೆಗೆ ಬರುತ್ತಿದ್ದ' ಎಂದು ನನ್ನ ತಲೆ ಬಡಬಡಿಸುತ್ತಿತ್ತು. ಸಾಯಿಕಲ್ಲು ನಡುನಡುವೆ ಮುರಿದು ಬಿದ್ದಂತಾಗುತ್ತಿತ್ತು.

ಅವ್ವನಿಗೆ ಎಲ್ಲವನ್ನೂ ಹೇಳಿದೆ, ಕೊರಗಿದಳು. ನಾನು ಉಣ್ಣುವಾಗ ನನಗೆ ಹಾಲು ನೀಡಲಿಲ್ಲ—ನಾನು ಅರ್ಥಮಾಡಿಕೊಂಡೆ.

ಹದಿನೈದು ದಿನಗಳುರುಳಿರಬಹುದು...ಒಂದು ಶನಿಪ್ರದೋಷ ಪೂಜೆ ಬಂದಿತಂತೆ. ಅವ್ವ ಅಪ್ಪನ ನೆನಪು ಮಾಡಿ ಅಂದಿನ ಪ್ರದೋಷ ಪೂಜೆಗೆ ಸೋಮೇಶ್ವರಕ್ಕೆ ಹೋಗೆಂದಳು ನಮ್ಮೋಣಿಯವರೊಡನೆ. ತಾಯಿಯ ಎದುರು ಹೂ ಎನ್ನಲೇ ಬೇಕಿತ್ತು. ಎದೆ ಮಾತ್ರ ಆ ಸಂಜೆಗೆ ಬೇರೊಂದು ಕಾರ್ಯಕ್ರಮವನ್ನು ಕೈಕೊಳ್ಳ ತೊಡಗಿತ್ತು.

ಆಫೀಸಿನ ಕೆಲಸ ಮುಗಿಸಿ ಸೋಮೇಶ್ವರಕ್ಕೆ ಹೋಗಲರಿಯದೆ, ರಾಜಮ್ಮನೆಡೆಗೆ ಹೋದೆ. ಹಿಂದಿರುಗಿ ಬಂದಿದ್ದಳು.

ನಾನು ಅವಳನ್ನು ಕಂಡೊಡನೆ,

'ನಿನ್ನ ವೈಯ್ಯಾಗಿನ ಅರಿವೀ ಕಳೀ' ಎಂದಳು ರಾಜಮ್ಮಾ. ಹಿಂದಿನ ದಿನ

ಹಳ್ಳಿಗನ ವೇಷದಲ್ಲಿ ನೀನು ನನ್ನೊಡನೆ ಬರಬೇಕು ಎಂದು ಸೂಚಿಸಿದ್ದಳಲ್ಲದೆ ಉಳಿದಾವ ಕತೆಯನ್ನೂ ಹೇಳಿದ್ದಿಲ್ಲ. ಧೋತರ ಕೊಟ್ಟಳು; ಉಟ್ಟೆ; ಅಂಗಿಯನ್ನೂ ಕೊಟ್ಟಳು, ತೊಟ್ಟೆ; ಪಾವಡವನ್ನೂ ಕೊಟ್ಟಳು, ಸುತ್ತಿಕೊಂಡೆ. ಹೆಗಲಿಗೆ ಒಂದು ನೆರೆ ಕಂಬಳಿಯನ್ನು ತನ್ನ ಹಸ್ತದಿಂದಲೇ ಇರಿಸುವಾಗ ಅವಳ ಸಹನೆ ಮೀರಿತ್ತು.

'ತುಮಾರಾ ಸರಕಾ ಬೇಟಾ ಬೀ ಮರ್‍ಯಾ....ಮೇರೀ ನನ್ಹೇ....'

ಎನ್ನುತ್ತ ಅಳತೊಡಗಿದಳು. ಹೊರಗೆ ನಡೆಯಲು ನನ್ನನ್ನು ಕೈಹಿಡಿದು ಮುನ್ನಡೆಸತೊಡಗಿದಳು; ಅವಳ ಬಾಯಿ ಹೇಳುತ್ತಿತ್ತು: 'ಮರೇಸೊ ಬೇಟೇಕಾ ಕಪಡಾ....ತುಮಾರೇ ಬದನ ಪರ....ಅಚ್ಛಾ ದಿಖತೇ....ಮೇರೀ ಬೇಟಾ......ನಹೀ.... ಜಿಂದಾ ಹೈ....'

ರಾಜಮಾ ಇಷ್ಟೆಲ್ಲ ಹೇಳುತ್ತಿದ್ದಾಗ ನಾನು ಬಗೆಯುತ್ತಿದ್ದೆ,

'ಸತ್ತ ಮಗನ ಉಡುಪನ್ನು ನನಗೊಮ್ಮೆ ತೊಡಿಸಿ, ಅವನ ರೂಪವನ್ನು ನನ್ನಲ್ಲಿ ಕಾಣಲಾಶಿಸಿರಬೇಕು ರಾಜಮಾ'. ಇಲ್ಲ, ನಾನು ಸುಳ್ಳು ಬಗೆದೆ. ಆ ಆಸೆ ರಾಜಮಾನಿ ಗಿದ್ದರೂ ಮತ್ತೊಂದು ಗುಟ್ಟೂ ಅದರಲ್ಲಿತ್ತು.

'ಬೇಟಾ, ಕಾಶೀಮ್! ಚಲೋ....ರಾತ ಹೋಗಾ.'

ಆಗ ರಾಜಮಾನ ಸತ್ತ ಮಗನ ಹೆಸರು ಕಾಶೀಮ ಎಂದಿತ್ತು ಎಂದರಿದೆ, ಅರೆ ಜೀವಗೊಂಡು ರಾಜಮಾನ ಮಾತುಗಳನ್ನಾಲಿಸುತ್ತ.

ಸ್ಟೇಶನ್ ದಾಟಿದೆವು. ರಾಜಮಾ ಹೇಳಿದ್ದನ್ನೆಲ್ಲ ಕನ್ನಡಿಸುವೆ: 'ಮೊಮ್ಮಗ ಹುಟ್ಟಿದ ಸುದ್ದಿಯನ್ನು ನನಗೆ ಕಳಿಸುವ ಮೊದಲೇ, ಹುಟ್ಟಿದ ದಿನವೇ ಧಾಂಡೋಲಿ ಯಲ್ಲಿದ್ದ ಮಗನಿಗೆ ಕಳಿಸಿದ್ದರಂತೆ. ಅಡವಿಯ ಕಾಡುಗಿಡ ಕಡಿಯುವಾಗ ಬಿಸಿಲಿನಲ್ಲೊಮ್ಮೆ ಎಚ್ಚರದಪ್ಪಿ ಗಿಡದಿಂದ ನಾಲ್ಕೈದು ವಾರದ ಹಿಂದೆ ಬಿದ್ದನಂತೆ. ಕೈಯ ಕೊಡಲಿ ಎದೆಯ ಮೇಲೆ ತಾಗಿ ಮತ್ತೆ ನೆಲ ಹಿಡಿದನಂತೆ. ನನಗೆ ಆ ಸುದ್ದಿ ತಿಳಿಯಲಿಲ್ಲ. ನೋವು ಘನವಾಗಿ, ನನ್ನನ್ನೂ ಹೆಂಡತಿಯನ್ನೂ ನೆನೆನೆನೆದು ಬಡಬಡಿಕೆಗಾರಂಭಿಸಿದನಂತೆ. ನೀನು ಹಿಂದೆ ಬಂದಾಗ ಮೊಮ್ಮಗ ಸತ್ತ ಸುದ್ದಿಯನ್ನು ಹೇಳಿದವರು ಕಾಶೀಮ ಸಾಯುವುದರಲ್ಲಿದ್ದಾನೆ ಎಂದು ಕಿತ್ತೂರು ಮುಟ್ಟುವವರೆಗೆ ನನಗೆ ಹೇಳಲಿಲ್ಲ. ಧಾಂಡೋಲಿಗೆ ಬಂದು ನನ್ನ ಮಗನಿಗೆ ಮಗ ಹುಟ್ಟಿದುದನ್ನು ಹೇಳಿದವರೇ ಹಳವಿನ ಮಾಲಿಕರ ಮೋಟಾರನ್ನು ಕಾಡಿ ಬೇಡಿ, ಅದರಲ್ಲಿ ಅವನನ್ನು ಕಿತ್ತೂರಿಗೆ ಕರೆದೊಯ್ದರು. ಕಾಶೀಮ ಮನೆ ಮುಟ್ಟಿದಾಗ ಮೊಮ್ಮಗ ಮಸಣದ ತುತ್ತಾಗಿ-ಮಣ್ಣಾಗಿ-ಅರ್ಧ ದಿನವಾಗಿತ್ತು. ಅವನಿಗೂ ಮಗನ ಮುಖ ನೋಡಲು ಸಿಗಲಿಲ್ಲ-ನನಗೂ....ದೂರ ದೂರವಾಯಿತು.

‘ನಾನು ಹೋದೆ ಕಿತ್ತೂರಿಗೆ—ಮಗ ಸತ್ತ ದುಃಖದಲ್ಲಿ ಕಾಶೀಮ ಚಿಂತೆ ಹೆಚ್ಚಿಸಿಕೊಂಡ–ನೋವನ್ನೂ ಹೆಚ್ಚಿಸಿಕೊಂಡ. ಎದೆಯ ಘಾಯ ಉಕ್ಕಲೇರಿತು. ಗುರುವಾರ.... ನಾನು ಹೋದ ಎರಡನೆ ದಿನ.... ಅವನೂ—ಸ–ತ್ತ.

‘ಅವನ ಔಷಧಕ್ಕೆ ಸಾಲ ಪಡೆದ ದುಡ್ಡು ತೀರಿಸಬೇಕು. ನಾನು ಕಸ ಮುಸುರೆ ಮಾಡುವ ಮನೆಯ ಪಠಾಣ ಆರು ತಿಂಗಳ ಸಂಬಳ ಇನ್ನೂ ಕೊಟ್ಟಿಲ್ಲ. ಅದನ್ನು ಅವನಿಂದ ಪಡೆಯಲೆಂದು ಬಂದೆ. ಮುಂಜಾನೆ ಅವನ ಮನೆಗೆ ಹೋದಾಗ ಸಾಲಕೊಟ್ಟ ಬೀಗರ ಆಳುಮಗ ಬಂದಿದ್ದಾನೆ ಎಂದೆ. “ಸುಳ್ಳು ಹೇಳುತ್ತೀ ನೀನು—ನನಗೆ ಬೇರೆಯವರಿಗೆ ಸಾಲ ಕೊಡಲು ದುಡ್ಡಿಲ್ಲ. ಆ ಆಳುಮಗನನ್ನು ಕರೆತಂದರೆ ನಿನ್ನ ನಾಲ್ವತ್ತು ರೂಪಾಯಿ ಕೊಡುವೆ”ನೆಂದ. ಅದಕ್ಕೇ ನಿನ್ನನ್ನು ಕರೆದದ್ದು, ಕಾಶೀಮನ ವಸ್ತ್ರ ಉಡಿಸಿದ್ದು. ಈಗ ಆ ನಮಾಜುಗಟ್ಟೆಗೆ ಅವನು ಬಂದಿರುತ್ತಾನೆ.

‘ಅವನಿಗೆ ನೀನು ಧೂಳೀಕೊಪ್ಪದ ಸಾಲಕೊಟ್ಟ ಬೀಗರ ಆಳುಮಗನೆಂದು— ಹೇಳುವೆ, ಇಲ್ಲದಿದ್ದರೆ ದುಡ್ಡು ಕೊಡುವದಿಲ್ಲ.’

ಲೈನ ಬರ್ಷಾರದ ಸಮೀಪದ ನಮಾಜು ಮಾಡುವ ಮಸೀದಿಗೆ ರಾಜಮಾ ನಾನೂ ಹೋದೆವು. ಪಠಾಣ ಇದ್ದ–ನನ್ನನ್ನೂ ಒಂದೆರಡು ಮಾತು ಮಾತಾಡಿಸಿದ. ‘ಜೀ ಸಾಬ, ಹಮ್ ಅಬೀಜ ಧೂಳೀಕೊಪ್ಪಕೋ ಜಾನೇವಾಲೇ—ಹಮಾರಾ ಸಾವಕಾರ....’ ಎಂದೆ.

ಪೂರ್ಣ ನಾಲ್ವತ್ತು ರೂಪಾಯಿಗಳೂ ರಾಜಮ್ಮನ ಪಾಲಿಗೆ ದಕ್ಕಲಿಲ್ಲ. ಪಠಾಣ ಮೂವತ್ತಕ್ಕೇ ಮುಗಿಸಿದ. ರಾಜಮಾ ಶರಣೆಂದಳು—ನಾನೂ ಬಿನ್ನವಿಸಿದೆ; ವ್ಯರ್ಥವಾಯಿತು.

ಮರಳಿದೆವು ನಮ್ಮ ಗುಡಿಸಲಿಗೆ. ಆ ಉಡುಪು ನನಗೆ ಬಹಳ ನೀತಿಯನ್ನು ಕಲಿಸಿತು. ಹಾಗೆಯೇ ಬೆಳಗಾಗುವವರೆಗೆ ರಾಜಮಾನ–ಆ ಮಹಾತಾಯಿಯ–ಮಡಿಲಲ್ಲಿ ಮಲಗಿದೆ. ಗುಡಿಸಲು ಮುಟ್ಟುವಾಗಲೇ ರಾತ್ರಿಯ ಒಂಭತ್ತು ಗಂಟೆಯಾಗಿತ್ತು. ತಾಯಿ ಕಟ್ಟಿದ ಬುತ್ತಿಯನ್ನು ಬಿಚ್ಚಿದೆ. ಉಣ್ಣಲೆಂದು ರಾಜಮಾನ ಮನ ಒಲಿಸಲು ಒಂದು ತಾಸಿನಷ್ಟು ಹೊತ್ತು ಜುಲುಮೆ ಮಾಡಿದೆ, ಧೈರ್ಯ ಹೇಳಿದೆ. ರಾಜಮಾ ಯಾವ ಸಂತಸದಿಂದ ಉಣ್ಣಬೇಕು? ಇಬ್ಬರೂ ಕೂಡಿ ನಾಲ್ಕರಲ್ಲಿ ಒಂದು ರೊಟ್ಟಿಯನ್ನು ಅರ್ಧರ್ಧ ತಿಂದೆವು. ನನಗೆ ನಿದ್ದೆ ಬರುವವರೆಗೂ ರಾಜಮಾನ ಮನ ಹಗುರಗೊಳಿಸುವ ಮಾತನ್ನೇ ನಾನು ಆಡಿದೆ. ಯಾವಾಗ ನಿದ್ದೆ ಹತ್ತಿತೋ ನನಗರಿಯದು.

ರಾಜಮಾ ನನ್ನನ್ನು ಎಬ್ಬಿಸಿದಾಗ ಇನ್ನೂ ಪೂರ್ಣ ಬೆಳಕಾಗಿರಲಿಲ್ಲ. ಆ ಬೆಳಕು ರಾಜಮಾನ ಕಣ್ಣೀರನ್ನೆಲ್ಲ ಕುಡಿದು ಭಾರವಾಗಿ, ಜಡವಾಗಿ, ಚೈತನ್ಯ

ಹೀನವಾಗಿ, ಮೂಡುತ್ತಿತ್ತು. ಹತ್ತಿಯ ಕೊಳ್ಳದ ಕಾಡುಮೃಗವೊಂದು ಅಳುವ ಧ್ವನಿ ತೆಗೆಯುತ್ತ ಚೀರುತ್ತಿತ್ತು. ಬೆಳಗಿನ ಗಾಡಿಯ ಕೂಗು ಕರ್ಕಶವಾಗಿತ್ತು.

'ನಾನಿಂದೇ ಬೀಗರ ಸಾಲ ತೀರಿಸಲು-ಇದ್ದಷ್ಟು ಕೊಟ್ಟು-ಧೂಳೀಕೊಪ್ಪಕ್ಕೆ ಹೋಗುವೆ'ನೆಂದಳು ರಾಜಮಾ. 'ಬರುವುದಕ್ಕೆ ಐದಾರು ತಿಂಗಳು—ಕನಿಷ್ಟ ಹೆಚ್ಚು ಕಡಿಮೆ ಒಂದುವರ್ಷ ಹಿಡಿಯಬಹುದು.'-ಮಾತು ಮುಂದುವರಿಸಿದಳು, ನನ್ನ ಕಂಬನಿಯನ್ನು ನೋಡಿ— 'ಇಲ್ಲವಾದರೆ ಸೊಸೆಯನ್ನೂ ಧಾರವಾಡಕ್ಕೆ ಕರೆತರುವೆ, ಇಲ್ಲಿಯೇ ಕೂಲಿಕುಂಬಳಿ ಮಾಡುತ್ತ....ಅಂತೂ ಬಂದರೆ....ಇಲ್ಲ ಬರಲು.'

ತಿಂದುಳಿದ ಮೂರು ರೊಟ್ಟಿಯನ್ನು ನಿರುಕಿಸಿ 'ಮನೆಗೆ ಒಯ್ಯೆ'ಂದಳು. ನಾನು 'ನಿನ್ನ ದಾರಿಯ ಬುತ್ತಿಯಾಗಲಾರದೇ ?' ಪ್ರಶ್ನಿಸಿದೆ. 'ತಂಗಳ ನನಗರಿಯದಂತಹದೇ ?' ಎಂದುತ್ತರಿಸಿ ರಾಜಮಾ ಬುತ್ತಿಯನ್ನು ಕೊಂಡು ಕಲಘಟಗಿಯ ಹಾದಿಯತ್ತ ನಡೆಯತೊಡಗಿದಳು. ನಾನು ಹಿಂಬಾಲಿಸಿದೆ. ಸೋಮೇಶ್ವರದ ಬಳಿ ನವಿಲೂರ ದಾರಿ ಕವಲೊಡೆಯುತ್ತಿತ್ತು........ರಾಜಮಾ ತನ್ನ ದುಡಿತದ ಮೂವತ್ತು ರೂಪಾಯಿಗಳಿಂದ ಐದು ರೂಪಾಯಿಯ ನೋಟು ತೆಗೆದು ನನಗೆ ಕೊಡಬಂದಳು.

ನನ್ನ ಬಾಯಿಗೆ ಮಾತು ಬರಲಿಲ್ಲ—ರಾಜಮಾನ ಅಡಿಗೆ ಬಾಗಿದೆ. ದುಃಖ ದುಂಬಿದ ಕಣ್ಣುಗಳಿಂದ ನನ್ನನ್ನು ರಾಜಮಾ ಹರಸಿ, 'ಬೇಡ'ವೆನ್ನುವ ನನ್ನ ಬಗೆ ತಿಳಿದು ಮತ್ತೆ ತನ್ನ ಕುಂಚಿಗೆಯ ಪದರಿನಲ್ಲಿ ಐದು ರೂಪಾಯಿಗಳನ್ನು ಕಟ್ಟಿಕೊಂಡಳು—ಅಡಿಯಿಡತೊಡಗಿದಳು. ಇಬ್ಬರೂ ಮೌನ ತಳೆದೆವು. ಅವಳ ದಾರಿಯನ್ನೇ ನೋಡುತ್ತ ದಿಙ್ಮೂಢನಾದೆ....ಇಷ್ಟೆಲ್ಲ ಹೇಗಾಯಿತೆಂದು.

ನನಗಾಗ Gorkyಯ 'Mother' ನೆನಪಿಗೆ ಬಂದಳು—ಪ್ರೇಮಚಂದ್ರ 'ಕರ್ಮಭೂಮಿ'ಯಲ್ಲಿ ಚಿತ್ರಿಸಿದ ಮುದಿಕೆಯ ಅರಿವಾಯಿತು. Wordsworth Miltonನನ್ನು ಕುರಿತು ಬರೆದ Sonnet ನಲ್ಲಿಯ Milton, England, English ಈ ಮೂರು ಶಬ್ದಗಳಿಗೆ ಬದಲಾಗಿ—ಅನುಕ್ರಮವಾಗಿ Rajama Karnataka ಮತ್ತು Kannada ಈ ಮೂರು ಶಬ್ದಗಳನ್ನು ಸೇರಿಸಿದರೆ ಆ ಕವನ ನನ್ನ ರಾಜಮಾನ ಸಂಪೂರ್ಣ ಜೀವನವನ್ನು, ಹಾಡುಗಾರಿಕೆಯನ್ನು, ಅವಳ ಪವಿತ್ರ ಮೂರ್ತಿಯನ್ನು ಚಿತ್ರಿಸುವಂತಾಗುತ್ತದೆ ಎಂದು ನನ್ನ ಎದೆ ಒಡನುಡಿಯಿತು-ಹಾರತೊಡಗಿತು-ನನ್ನ ಮೈ ನಡುಗಿ ಉಡುಗಿತು.

ರಾಜಮಾ, ನಾನು- ನಮ್ಮಿಬ್ಬರ ಈ ಸಂಬಂಧ-ಪೂರ್ಣವಾಗಿ ವಿವರಿಸಲು ನನಗೆ ಇನ್ನೂ ಅಷ್ಟು ಶಕ್ತಿ ಬಂದಿಲ್ಲವೆಂದು ಜೀವ ಮನೆಯತ್ತ ಹೆಜ್ಜೆ ಸಾಗಿಸಿತು.

ಕೇಳಿದಳು ಅವ್ವ, 'ನಿನ್ನೆ ಸೋಮೇಶ್ವರಕ ಯಾಕ ಹೋಗಿದ್ದಿಲ್ಲಾ?'

'ನನ್ನ ಸೋಮೇಶ್ವರ.......ರಾಜಮಾನ ಎದೆಯಲ್ಲಿದ್ದ'. ಬಿಕ್ಕುತ್ತ ಹೇಳಿದೆ ರಾಜಮಾನ ಬವಣೆಯ ಬೆಟ್ಟದ ಜೀವನ ವೃತ್ತಾಂತವನ್ನು.

* * * *

ಮುಂದೆರಡು ವರುಷ, August 46ವರೆಗೂ, ಧಾರವಾಡದ ಸ್ಟೇಶನ್ ಕಾಣುವದಾಗಲಿಲ್ಲ; ರಾಜಮಾನ ನೆನಪಾಗುತ್ತಿದ್ದರೂ, ನಿಶ್ಚಿತವಾಗಿ, ಖಚಿತವಾಗಿ, ರಾಜಮಾನ ಯಾವ ಸುದ್ದಿಯೂ ತಿಳಿಯಲಿಲ್ಲ. ಸರಕಾರದ ಸೇವಕನಾಗಿ ಜೀವ ಸನೆಸುವುದರಲ್ಲಿಯೇ ಎರಡು ವರ್ಷಗಳು ಮಾಯವಾದುವು.

ನನ್ನ ಸುಯೋಗ:

ಕಣ್ಣು ಮಬ್ಬಿಗಾಗಿ ಬೇಸತ್ತು ನಾನು ತೊಳಲಾಡುತ್ತಿದ್ದಾಗ ಸರಕಾರ ನನಗೆ– ನಾನಿದ್ದಂತೆ– 'ಅರೆಕುರುಡ'ನೆಂದು ಹೆಸರಿಟ್ಟು, ಕೆಲಸಕ್ಕೆ ಅಯೋಗ್ಯನೆಂದು ನನ್ನನ್ನು ಬಹಿಷ್ಕರಿಸಿತು.

ಕಣ್ಣಿನ ಉಪಚಾರಕ್ಕಾಗಿ ಒಂದು ದಿನ ಪುಣೆಗೆ ಪಯಣ ಬೆಳೆಸಲೆಂದು ಧಾರವಾಡಕ್ಕೆ ಬಂದೆ. ಸ್ಟೇಶನ್ ದಾರಿಯಲ್ಲಿ ರಾಜಮಾ ನನ್ನನ್ನು ಎತ್ತಿ ಆಡಿಸುವ ಚಿತ್ರ ಕಂಡೆ.

ಗಾಡಿಯಲ್ಲಿ ಕುಳಿತೆ, ರಾಜಮಾ ಮೊದಲಿದ್ದ ಗುಡಿಸಲಿನ ದಿಕ್ಕಿಗೆ ಮುಖಮಾಡಿ.

ಗಾಡಿ ಒಂದೆರಡು ಫರ್ಲಾಂಗಿನಷ್ಟು ಓಡಿತು.

'ಆ ಗುಡಿಸಲು....ಈಗ ಕಾಣುತ್ತದೆ. ನಮ್ಮ ಹೊಸ ನಾಡಿನ ಬಾಳಿಗೆ ಸಲಹೆ ನೀಡುವ ರಾಜಮಾ ಅಲ್ಲಿರಬಹುದು. ಪುಣೆಯಿಂದ ಮರಳಿ ಬಂದು....ಸಂಗ್ರಹಿಸಲು.... ಮತ್ತೆ.... ಅಲ್ಲಿಗೆ ನಾನು ಹೋಗಬೇಕು........' ಗಾಡಿಯ ವೇಗದಂತೆ ಮನೋ ವೇಗ ಹೆಚ್ಚುತ್ತಿತ್ತು.

ಆದರೆ....ದಿಟ್ಟಿಸಿ ನೋಡುತ್ತಿದ್ದಂತೆ....

ಅಲ್ಲಿ ಗುಡಿಸಲಿರಲಿಲ್ಲ........ರಾಜಮಾ, ನನ್ನ ನಾಡಿನ ಜನನುಡಿಯ ರಾಜ್ಯದ ರಾಜ್ಯಶ್ರೀ ಅಲ್ಲಿರಲಿಲ್ಲ. ಅವಳ ಬರವನ್ನು ನಿರೀಕ್ಷಿಸಿ, ಬಡವಾಗಿ ಹೋದ ಗುಡಿಸಲು ಬಿದ್ದಿತ್ತು. ಮೇಲು ಹೊದಿಕೆಯ ಹುಲ್ಲಿಗೂ ಅಲ್ಲಿ ಸ್ಥಾನವಿರಲಿಲ್ಲ.

ನಾನು ಕುಳಿತ ಗಾಡಿಯ ಗಾಲಿಗಳು ನನ್ನೆದೆಯ ಮೇಲೆ ಓಡುತ್ತಿವೆ ಎನ್ನುವಂತಾಯಿತು. 'ನಿನ್ನ ರಾಜಮಾ........ಇರುವಳೋ ಸತ್ತಳೋ........ನೀನೂ

ಅರಿಯೆ....ನಾನೂ ಅರಿಯೆ' ಎಂದು ಗಾಡಿ ಘೋಷಣೆಗೈಯುತ್ತಿತ್ತು. ನನ್ನನ್ನು ಸಮಾಧಾನಗೊಳಿಸಲು ಯಾರೂ ನನ್ನೊಡನಿರಲಿಲ್ಲ.

ಕತ್ತಲೆ ನನ್ನನ್ನು ಮುತ್ತಿತು....ನನ್ನ ಜೀವ ಅತ್ತಿತು....ಸತ್ತು ಬದುಕಿ. ನಂಬಲಾರದೆ ನೋಡಿ ಚಡಪಡಿಸಿತು....

ನಾನು ಡಾಂಬರು ಬಳಿದ ಕರಿಯ ಕಂಬವೊಂದು ಮಾತ್ರ ರಾಜಮಾನ ಪಾದ ಧೂಳಿಯನ್ನು ಪೂಜಿಸುತ್ತ ಅರೆಮುರಿದು ನಿಂತಿತ್ತು.

ಪುಣೆಯನ್ನು ಮುಟ್ಟಿದಾಗ ಕಣ್ಣಿನ ವೈದ್ಯ ಕೇಳಿದರು,

'ನಿನ್ನ ಕಣ್ಣಿಗೇನಾಗಿದೆ ? '

'ಒಂದು ಕರಿಯ ಕಂಬ ನಿಂತಿದೆ!—ಕಣ್ಣಲ್ಲಿ! ಅದನ್ನು ಅಲ್ಲಿಂದ ಕೀಳಲು ನಿಮಗಸಾಧ್ಯ!' ಎಂದೆ.

ಡಾಕ್ಟರರೂ ನನ್ನಂತೆ ಮೌನಮೂರ್ತಿಯಾದರು.

—ಶಿವೇಶ್ವರ ದೊಡ್ಡಮನಿ.

# ರಂಗಶಾಮಿ

ಬೆಳಕು ನಿಧಾನವಾಗಿ ಹರಿಯುತ್ತಿತ್ತು. ಮುಂಜಾವದ ಆ ಮಬ್ಬೆಳಕಿನಲ್ಲಿ ಯಾವುದೂ ಸ್ಪಷ್ಟವಾಗಿ ಗೋಚರಿಸುವಂತಿರಲಿಲ್ಲ. ರಸ್ತೆಗಳು ಸೊಟ್ಟುಸೊಟ್ಟಾಗಿ ಹರಿದಿದ್ದವು. ಹಾದಿಯ ಇಕ್ಕೆಡೆಗಳಲ್ಲಿ ಪ್ರತಿಯೊಂದು ಮನೆಯ ಮುಂದೂ ನಿಂತಿದ್ದ ಎತ್ತಿನ ಬಂಡಿಗಳು ಮುಸುಕು ಮುಸುಕಾಗಿ ಕಾಣುತ್ತಿದ್ದವು. ರಸ್ತೆಯ ಮೇಲೆಲ್ಲಾ ಹರಿದು ಹರಿದು ರಾಡಿ ಮಾಡಿದ್ದ ಬಚ್ಚಲು ನೀರು ಕಾಲು ಕಾಲಿಗೆ ಅಂಟಿಕೊಳ್ಳು ವಂತಿತ್ತು. ಮನೆಗಳೊಳಗಿಂದ ಉಸಿರಾಡುತ್ತಿದ್ದ ಕಾಲ್ನಡೆಗಳ ಶಬ್ದವೊಂದನ್ನು ಬಿಟ್ಟರೆ ಸುತ್ತಲ ವಾತಾವರಣ ನಿಶ್ಶಬ್ದವಾಗಿತ್ತು.

ಆಗ ಮುಂಜಾವದಲ್ಲಿ ಕೋಳಿಕೂಗುವ ಹೊತ್ತು. ಅದೇ ಹೊತ್ತಿಗೆ ನೊದ ಲಾಗುವ ಮೃದಂಗದ ಶಬ್ದ, ಹೊತ್ತೇರಿ ಹಳ್ಳಿಯ ಜನಗಳು ತಮ್ಮ ತಮ್ಮ ಕೆಲಸದ ಮೇಲೆ ತೆರಳಿದರೂ ನಿಲ್ಲುತ್ತಿರಲಿಲ್ಲ. ಕೋಳಿ ಕೂಗುವುದೇ ತಡ, ಮೃದಂಗದ ಶಬ್ದ ಗಾಳಿಯಲೆಗಳ ಮೇಲೆ ತಾನಾಗಿ ಹರಡಿಕೊಳ್ಳುತ್ತಿತ್ತು.

ನಮ್ಮ ಹೊನ್ನೂರಿನ ಜನಕ್ಕೆ ಈ ಮೃದಂಗದ ನಾದ ಹೊಸದೇನಲ್ಲ. ಅದು ಪ್ರತಿನಿತ್ಯದ ಪಾಠವಾಗಿ ಪರಿಣಮಿಸಿದೆ. ಎಷ್ಟೋ ಜನ ಹಳ್ಳಿಗರು ಕೋಳಿಯ ಕೂಗಿಗೆ ಬದಲಾಗಿ ಈ ಶಬ್ದವನ್ನು ಕೇಳಿ ಹೊತ್ತು ಎಷ್ಟಾಗಿದೆಯೆಂಬುದನ್ನು ತಿಳಿಯು ತ್ತಾರೆ. ಇನ್ನೆಷ್ಟೋ ಜನ ಮೃದಂಗದಿಂದ ಹೊರಬೀಳುವ ಮೃದು ಮಧುರ ನಾದ ದಲ್ಲಿ ಮನಮುಳುಗಿಸಿ ಉಲ್ಲಾಸದಿಂದ ಹಾಸಿಗೆಯಲ್ಲೇ ಹೊರಳಾಡುತ್ತಾರೆ. ನಮ್ಮ ರಂಗಶಾಮಿಯ ಮೃದಂಗ ಯಾರಿಗೂ ಯಾವ ರೀತಿಯಲ್ಲೂ ಬೇಸರ ತಂದಿಲ್ಲ. ನಮ್ಮ ಹೊನ್ನೂರಿನ ಜನಕ್ಕೆ ಮೃದಂಗ ಒಂದು ಸ್ಫೂರ್ತಿಯೆಂದೇ ಹೇಳಬೇಕು.

೨

ಹತ್ತು ವರ್ಷಗಳ ಹಿಂದಿನ ಮಾತನ್ನು ನಾನೀಗ ಹೇಳುತ್ತಿದ್ದೇನೆ. ಆಗ ನಮ್ಮೂರಿಗೆ ದೊಡ್ಡ ಮಾರಿಯ ಪ್ರವೇಶವಾಗಿತ್ತು. ಎಷ್ಟೋ ಮನೆಗಳು ಆ ಭೀಕರ ಉಪದ್ರವದಲ್ಲಿ ಹೇಳಲು ಹೆಸರಿಲ್ಲದಂತಾಗಿಹೋದುವು ಇನ್ನೆಷ್ಟೋ ಮನೆಗಳು ನುಚ್ಚು ನೂರಾಗಿಹೋದುವು.

ಅಂತಹ ಸಂಸಾರಗಳಲ್ಲಿ ನಾಯಕನ ಸಂಸಾರವೂ ಒಂದು.

ಕೇರಿ ಕೇರಿಗಳನ್ನು ಮಾರಿ ಆಹುತಿ ತೆಗೆದುಕೊಳ್ಳುತ್ತಿದ್ದಾಗ, ಊರ ಜನ ಊರು ಮುಂದಿನ ಮಾರಿಗೆ ತಂಪು ತೋರಿದರು, ಉಗ್ರ ದೇವತೆಗೆ ತೃಪ್ತಿಯಾಗಲೆಂದು ಕುರಿ ಕೋಣಗಳನ್ನು ಕಡಿದರು, ಕೋಳಿಗಳನ್ನು ಬಲಿ ಕೊಟ್ಟರು, ನೂರಾರು ಹರಕೆ ಗಳನ್ನು ಹೊತ್ತರು, ಪೂಜಾರಿಯ ಮೇಲೆ ಗ್ರಾಮದೇವತೆ ಬಂದು ಹೇಳಿದುದನ್ನೆಲ್ಲಾ ಒಪ್ಪಿಕೊಂಡರು. ಆದರೂ ಮಾರಿ ಶಾಂತಳಾಗಲಿಲ್ಲ. ಜನ ಬಹಳ ಹತಾಶರಾದರು.

ಒಂದು ದಿನ ಊರವರೆಲ್ಲರೂ ಊರು ಬಿಟ್ಟು ಊರಾಚೆ ಹೋಗಬೇಕೆಂದಾ ಯಿತು. ಅನೇಕರು ಆಗಲೇ ತಮತಮಗೆ ಬೇಕಾದ ಸ್ಥಳಗಳಲ್ಲಿ ಷೆಡ್ ಹೊಡೆದು ಕೊಂಡು ಸಂಸಾರಸಮೇತರಾಗಿ ಹೊರಟುಹೋದರು. ಮತ್ತೆ ಕೆಲವರು ಹೊರಡುವ ಸನ್ನಾಹ ಮಾಡಿಕೊಂಡರು.

ಎಲ್ಲರಂತೆ ತಿಮ್ಮಣ್ಣನಾಯಕನೂ ಊರು ಬಿಟ್ಟು ಹೊರಗೆಹೋಗಬೇಕೆಂದು ನಿಶ್ಚಯಿಸಿಕೊಂಡ. ತನ್ನ ಊರಾಚೆಯಿದ್ದ ತೋಟದಲ್ಲಿ ಷೆಡ್ ಹೊಡೆದದ್ದೂ ಆಯಿತು. ಇನ್ನೇನು ಸಂಸಾರಕ್ಕೆ ಅತ್ಯಗತ್ಯನಾಗಿ ಬೇಕಾಗಿದ್ದ ಸಾಮಾನು ಸರಂ ಜಾಮುಗಳನ್ನು ಕಟ್ಟಿಕೊಂಡು ಹೊರಡಬೇಕು ಎನ್ನುವುದರಲ್ಲಿ ಗರ್ಭಿಣಿಯಾಗಿದ್ದ ನಾಯಕನ ಹೆಂಡತಿಗೆ ಮಾರಿಯ ಬೇನೆ ತಗುಲಿತು. ಷೆಡ್ಡಿಗೆ ಹೋಗುವುದನ್ನು ಅಲ್ಲಿಗೇ ನಿಲ್ಲಿಸಿ ನಾಯಕ ಹೆಂಡತಿಯನ್ನು ನೋಡಿಕೊಂಡ. ಆದರೆ ಮಾರಿ ಅವಳನ್ನು ಉಳಿಸಲು ಬಂದಿರಲಿಲ್ಲ. ನಾಯಕನ ಹೆಂಡತಿ ತೀರಿಕೊಂಡಳು. ಆದಾದ ಮೇಲೆ ಅವಳೇ ಅಕ್ಕರೆಯಿಂದ ಸಾಕುತ್ತಿದ್ದ ಎರಡು ಕರಾವುಗಳೂ ತೀರಿಕೊಂಡವು. ಈ ಅನಿರೀಕ್ಷಿತ ಅಪಘಾತವನ್ನು ಸಹಿಸಿಕೊಂಡೇ ನಾಯಕ, ತೀರಿಹೋದ ಹೆಂಡತಿ ಯನ್ನು ಮಣ್ಣು ಮಾಡಿ ಬರುವುದರೊಳಗಾಗಿ, ಅವನೂ ಜ್ವರವೆಂದು ಹಾಸಿಗೆ ಹಿಡಿ ದವನು ಮತ್ತೆ ಮೇಲೇಳಲಿಲ್ಲ. ತಾಯಿ ತೀರಿಕೊಂಡ ದುಃಖವನ್ನೂ ಬದಿಗೊತ್ತಿ, ಹನ್ನೆರಡು ವರ್ಷದ ರಂಗಶಾಮಿ ಹಾಸಿಗೆ ಹಿಡಿದು ಮಲಗಿದ ತಂದೆಯನ್ನು ಶುಶ್ರೂಷೆ ಮಾಡಿದ, ವೈದ್ಯರಲ್ಲಿಗೆ ಓಡಿಹೋಗಿ ಮದ್ದು ತಂದ. ಆದರೆ ತಂದೆ ಉರಿಮಾರಿಯ ಕೈಯಿಂದ ಪಾರಾಗಲಿಲ್ಲ. ಕಂಡು ಕೇಳಿದ ಜನ ಹಾಯ್ ಹಾಯ್ ಎನ್ನುತ್ತಿರು ವಾಗಲೇ ರಂಗಶಾಮಿಗೂ ಉಪದ್ರವ ಬಡಿದು ಹಾಸಿಗೆ ಹಿಡಿದುಬಿಟ್ಟ.

ಆದರೆ ರಂಗಶಾಮಿ ತನ್ನ ಕಣ್ಣೆರಡನ್ನೂ ಮಾರಿಗೆ ಬಲಿಕೊಟ್ಟು ಜೀವವನ್ನು ಮಾತ್ರ ಉಳಿಸಿಕೊಂಡ.

ನಾಯಕನ ಸಂಸಾರ ಕ್ಷಣಕಾಲದಲ್ಲಿ ಹೀಗಾದುದಕ್ಕೆ ತಮ್ಮ ಸಂತಾಪ ಸೂಚಿ ಸದವರೇ ಇಲ್ಲವೆನ್ನಬಹುದು. ಆ ಬಾರಿಯ ಮಾರಿಯ ಉಪದ್ರವದಲ್ಲಿ ಇಷ್ಟು ಜೀವಿ ಗಳನ್ನು ಬಲಿಕೊಟ್ಟ ಸಂಸಾರ ನಮ್ಮೂರಿನಲ್ಲಿ ಬೇರೆ ಇನ್ನಾವುದೂ ಇರಲಿಲ್ಲ.

ಕೇವಲ ಎರಡು ತಿಂಗಳ ಕಾಲಾವಧಿಯಲ್ಲಿ ನಡೆದುಹೋದಂತಹ ದುರಂತವಿದು. ನಗುತ್ತಿದ್ದ ನಾಯಕನ ಸಂಸಾರ ಇದ್ದಕ್ಕಿದ್ದಂತೆಯೇ ಮಣ್ಣುಗೂಡಿಹೋಯಿತು. ಆ ಸಂಸಾರಕ್ಕಾದ ಈ ದುರ್ಗತಿಯನ್ನು ಕಂಡು ಊರ ಜನ ಮಮ್ಮಲ ಮರುಗಿದರು, ಎಷ್ಟೋ ಜನ ಕಣ್ಣೀರು ಸುರಿಸಿದರು. ಎಲ್ಲವನ್ನೂ ಕಳೆದುಕೊಂಡು ಅನಾಥನಾಗಿ ನಿಂತಿದ್ದ ರಂಗಶಾಮಿಯನ್ನು ಅಪ್ಪಿಕೊಂಡು ಗೋಳಾಡಿದರು.

ನಾಯಕ ಅತಂತ್ರದ ಕುಳವಲ್ಲ. ನೆಮ್ಮದಿಯಾಗಿ, ಗೌರವವಾಗಿ ಬಾಳಿದಂತಹ ಸಂಸಾರ ಅವನದು. ದೈವೇಚ್ಛೆಯಿಂದ ಅವನ ಸಂಸಾರ ಹೀಗೆ ಮಧ್ಯದಲ್ಲಿ ಕೊಚ್ಚಿ ಹೋದರೂ, ಮನೆಗೆ ಸಾಕಾಗುವಷ್ಟು ಕಾಳು ಕಡ್ಡಿಗಳನ್ನೊದಗಿಸುವ ಭೂಮಿಕಾಣಿ ಗಳಿದ್ದವು. ಹಳ್ಳಿಯ ಜನ ಹೆಮ್ಮೆಪಡಬಹುದಾದಂತಹ ಮನೆಯೂ ಇತ್ತು. ಕರಾವು ತೀರಿಕೊಂಡರೂ ದುಡಿಮೆಗೆ ಬರುವಂತಹ ಎತ್ತುಗಳಿದ್ದವು.

ಈಗ ಅವೆಲ್ಲದಕ್ಕೂ ರಂಗಶಾಮಿಯೇ ಹಕ್ಕುದಾರನಲ್ಲವೆ !

ಊರಿನ ಸ್ಥಿತಿ ಸ್ವಲ್ಪ ಸುಧಾರಿಸಿದಮೇಲೆ—ಅನಾಥನಾಗಿ ನಿಂತಿದ್ದ ರಂಗ ಶಾಮಿಯ ಭವಿಷ್ಯವನ್ನು ನಿರ್ಧರಿಸಲು—ಊರ ಹಿರಿಯರೆಲ್ಲಾ ಒಂದೆಡೆ ಸಭೆ ಸೇರಿದರು. ನಾಲ್ಕಾರು ದಿನಗಳು ಚರ್ಚೆಗಳಾದವು. ರಂಗಶಾಮಿ ಊರ ಪಟೇಲನ ಮನೆಯಲ್ಲೇ ಇರಬೇಕೆಂದೂ, ಅವನ ಸಮಸ್ತ ಭೂಮಿಕಾಣಿಗಳನ್ನು ಪಟೇಲನೇ ರೂಢಿಸಬೇಕೆಂದೂ ಇತ್ಯರ್ಥವಾಯಿತು. ಎಲ್ಲವೂ ಮಿಕ್ಕು, ಹೆಚ್ಚು ದುಡ್ಡೇನಾದರೂ ಉಳಿದುಬಂದರೆ ಪಟೇಲ, ರಂಗಶಾಮಿಯ ಹೆಸರಿನಲ್ಲಿ ಒಂದೆಡೆ ಭದ್ರವಾಗಿ ಕೂಡಿಡಬೇಕೆಂದೂ ಗೊತ್ತಾಯಿತು.

ರಂಗಶಾಮಿ ಊರ ಹಿರಿಯರ ಈ ನಿರ್ಧಾರಕ್ಕೆ ತಲೆಬಾಗಿದ; ಅಂದಿನಿಂದ ಪಟೇಲನ ಮನೆಯೇ ಅವನ ವಾಸಗೃಹವಾಯಿತು.

೩

ನಮ್ಮೂರಿನ ಬಯಲು ನಾಟಕಗಳೆಂದರೆ—ಸುತ್ತಮುತ್ತಲಿನ ಹಳ್ಳಿಗಳಲ್ಲೆಲ್ಲಾ ಬಹಳ ಪ್ರಸಿದ್ಧಿ. ಅದನ್ನು ನೋಡಲೆಂದೇ ಎಷ್ಟೋ ಜನ ಊರಿಂದ ಊರಿಗೆ ಬಂದಿ ರುವ ಪ್ರಸಂಗಗಳೂ ಉಂಟು.

ನಮ್ಮ ಹಳ್ಳಿಯ ಜನಕ್ಕೆ ನಾಟಕಗಳೆಂದರೆ ಬಹು ಪ್ರಾಣ. ಸಮಯ ಸಿಕ್ಕಿ ದಾಗಲೆಲ್ಲಾ ಅವನ್ನು ಚೆನ್ನಾಗಿ ಕಲಿತು, ಚೆನ್ನಾಗಿ ಆಡುವ ರೀತಿ ನಮ್ಮೂರಿನ ನಟರಿಗೆ ಪರಂಪರಾಗತವಾಗಿಬಿಟ್ಟಿದೆ. ಪ್ರತಿವರ್ಷವೂ ಯಾವುದಾದರೂ ಒಂದು ಕೇರಿಯಲ್ಲಿ ಬಯಲು ನಾಟಕ ನಡೆದೇ ನಡೆಯಬೇಕು. ಗಾಣಿಗರ ಕೇರಿಯಲ್ಲಿ, ಇಲ್ಲ ತೊರೆಯರ

ಕೇರಿಯಲ್ಲಿ, ಅದೂ ಇಲ್ಲ ಉಪ್ಪಾರರ ಕೇರಿಯಲ್ಲಿ, ಇಲ್ಲ ನಾಯಕರ ಕೇರಿಯಲ್ಲಿ–ಹೀಗೆ ಒಂದೊಂದು ನಡೆಯುವುದುಂಟು. ಒಂದೊಂದುಬಾರಿ ಒಂದೇ ಸಲಕ್ಕೆ ಎಲ್ಲ ಕೇರಿಯ ನಾಟಕಗಳೂ ನಡೆಯುವುದುಂಟು. ಸುಗ್ಗಿಯಕಾಲ ಬಂದರಂತೂ ತೀರಿತು. ನಾಟಕ ಗಳ ಮೇಲೆ ನಾಟಕಗಳು. ಯಕ್ಷಗಾನವನ್ನು ಅಭಿನಯಿಸುವುದರಲ್ಲೂ ನಮ್ಮೂರಿ ನವರು ಬಹಳ ಪ್ರಸಿದ್ಧಿ. ಕೃಷ್ಣಗಾರುಡಿ, ಲಂಕಾದಹನ, ಸಂಪೂರ್ಣರಾಮಾಯಣ, ನಳಚರಿತ್ರೆ, ಶನಿಮಹಾತ್ಮೆ–ಈ ನಾಟಕಗಳಲ್ಲಿ ಹೊನ್ನೂರಿನ ಬಯಲಾಟದವರು ತೋರುವ ನೈಪುಣ್ಯವನ್ನು ಮತ್ತಾವ ಊರಿನವರೂ ತೋರಲಾರರೆಂದರೆ ಅತಿಶಯೋಕ್ತಿ ಯಲ್ಲ. ಕೃಷ್ಣಗಾರುಡಿಯ ಮಕರಂದನ ಪಾತ್ರ, ಲಂಕಾದಹನದ ಆಂಜನೇಯನ ಪಾತ್ರ, ಸಂಪೂರ್ಣರಾಮಾಯಣದ ರಾವಣನ ಪಾತ್ರ–ಎಲ್ಲರ ಮನೆಮಾತಾಗಿ ಹೋಗಿತ್ತು. ಈ ವೇಷಗಳ ಅನುಕರಣೆ ಆ ಸುತ್ತಮುತ್ತಲಿನ ಪ್ರದೇಶದಲ್ಲೆಲ್ಲಾ ನಡೆದಿದೆ. ಆದರೆ ಈ ಕಳೆ ಎಲ್ಲಿಯೂ ಕಟ್ಟುವುದಿಲ್ಲವೆಂಬ ಸಿದ್ಧಾಂತವೂ ಆಗಿಹೋಗಿದೆ. 'ಆಡಿದರೆ, ಹೊನ್ನೂರಿನವರಹಾಗೆ ಆಡಬೇಕು'–ಎನ್ನುವ ಮಾತಂತೂ ಧೃಢವಾಗಿ ಬಿಟ್ಟಿದೆ. ಅನೇಕರು ನಮ್ಮೂರಿನ ನಟರನ್ನೇ ಎರವಲುಪಡೆದುಕೊಂಡು ಹೋಗಿ ಅವರಿಂದ ಆಯಾ ವೇಷಗಳನ್ನು ಕಟ್ಟಿಸಿ ತೃಪ್ತಿಪಟ್ಟುಕೊಳ್ಳುವುದೂ ಒಂದು ಮಾಮೂ ಲಾಗಿಹೋಗಿದೆ.

ರಂಗಶಾಮಿಗೆ ಚಿಕ್ಕಂದಿನಿಂದಲೂ ನಾಟಕಗಳೆಂದರೆ ಪ್ರಾಣ. ಮನೆಯಲ್ಲಿ ಬೇಡವೆಂದರೂ ಕದ್ದು ಸೇರಿ ನಾಟಕ ಕಲಿತು, ಊರವರ ಮುಂದೆ ವೇಷ ಕಟ್ಟಿ ಹುಡುಗ ಬಹು ಚಾಲೋಕು ಅನ್ನಿಸಿಕೊಂಡಿದ್ದವನು. ಸ್ತ್ರೀಪಾತ್ರವಂತೂ ಅವನಿಗೆ ಬಹಳ ಚೆನ್ನಾಗಿ ಒಪ್ಪುತ್ತಿತ್ತು. ನಾಟಕ ಕಲಿಸುವ ಭಾಗವತರು, ರಂಗಶಾಮಿಗೆ ಒಮ್ಮೆ 'ಸುಭದ್ರಾಪರಿಣಯ'ದಲ್ಲಿ ಸುಭದ್ರೆಯ ವೇಷ ಕೊಟ್ಟಾಗ ತುಂಬ ಚೆನ್ನಾಗಿ ನಿರ್ವಹಿಸಿದ್ದ. ಅಂದಿನಿಂದ ಆತನ ಗೆಳೆಯರು ರಂಗಶಾಮಿಯನ್ನು ಸುಭದ್ರೆ ಯೆಂತಲೇ ಪರಿಹಾಸ್ಯ ಮಾಡುತ್ತಿದ್ದರು. ರಂಗಶಾಮಿ ಇನ್ನೂ ಚಿಕ್ಕವನಾದುದ ರಿಂದ ಅಂತಹ ದೊಡ್ಡ ಪಾತ್ರಗಳೇನೂ ಸಿಕ್ಕುತ್ತಿರಲಿಲ್ಲ. ಮುಂದೆ ನಾಟಕಗಳಲ್ಲಿ ಹೊನ್ನೂರಿನ ಹೆಸರನ್ನು ಹೇಳಬಲ್ಲವನೆಂದು ಅವನ ಗುರುಗಳು ಹೇಳುತ್ತಿದ್ದು ದನ್ನು ರಂಗಶಾಮಿ ಕೇಳಿ ಆನಂದಪಟ್ಟಿದ್ದ.

ಮಾರಿಯ ಉಪಟಳಕ್ಕೆ ಸಿಕ್ಕಿ ಕಣ್ಣೆರಡನ್ನೂ ಕಳೆದುಕೊಂಡಮೇಲೆ ರಂಗ ಶಾಮಿಗೆ ಆ ವೇಷ ಕಟ್ಟುವ ಭಾಗ್ಯ ತಪ್ಪಿಹೋದಂತೆಯೇ ಆಯಿತು. ಅದಕ್ಕಾಗಿ ರಂಗಶಾಮಿ ಬಹಳ ದುಃಖಪಟ್ಟ. ಆದರೆ ಅವನ ಜೀವ ನಾಟಕ ಕಲಿಯುವ ಮನೆಗೆ ಹೋಗದೇ ನಿಲ್ಲುತ್ತಿರಲಿಲ್ಲ.

ಕಣ್ಣು ಕಾಣಿಸದೆ ಇದ್ದರೂ, ರಂಗಶಾಮಿ ಕಲಿಯುವ ಮನೆಯ ವಿದ್ಯಮಾನಗಳನ್ನು ಬಹು ಸೂಕ್ಷ್ಮವಾಗಿ ಗ್ರಹಿಸುತ್ತಿದ್ದ. ಹಿಂದೆ ತಾನು ಕಲಿತ ಪ್ರತಿಯೊಂದು ನಾಟಕದ ಮಟ್ಟುಗಳನ್ನೂ ಶ್ರಾವ್ಯವಾಗಿ ಅಂದು ತೋರಿಸುತ್ತಿದ್ದ ; ಇದಕ್ಕೆ ಯಾರೂ ಅಡ್ಡ ಹಾದಿರಲಿಲ್ಲ.

ಆ ವರ್ಷದ ಸುಗ್ಗಿಗಾಗಿ ಊರವರು 'ಕೃಷ್ಣಗಾರುಡಿ'ಯನ್ನು ಕಲಿಯುತ್ತಿದ್ದರು. ಆ ನಾಟಕವನ್ನು ಕಲಿಸುವುದಕ್ಕೆಂದೇ-ನಗರದಿಂದ ಭಾಗವತರು ಆಹ್ವಾನಿತರಾಗಿ ಬಂದಿದ್ದರು.

ನಮ್ಮೂರಿನಲ್ಲಿ ಯಾವುದೇ ಬಯಲುನಾಟಕಗಳಾಗಲೀ, ನಗರದ ಭಾಗವತರು ಕಲಿಸುವುದಕ್ಕೆ ಬರುತ್ತಿದ್ದರು. ಇದು ಈಗ ಇಪ್ಪತ್ತು ವರುಷಗಳ ಪರಿಪಾಠ.

ಭಾಗವತರೆಂದರೆ ನಮ್ಮೂರಿನವರಿಗೆ ಪ್ರಾಣ. ನಮ್ಮ ನಾಟಕಗಳು ಅಷ್ಟು ಪ್ರಸಿದ್ಧಿಯಾಗಿದ್ದರೆ, ಅದಕ್ಕೆ ಭಾಗವತರೇ ಮೂಲಕಾರಣರು. ಹಳ್ಳಿಯ ಜನಕ್ಕೆ ಭಾಷೆಯ ಪರಿಷ್ಕಾರ ಕೊಟ್ಟು, ಮಟ್ಟುಗಳನ್ನು ನಿಧಾನವಾಗಿ, ಚೆನ್ನಾಗಿ ತಪ್ಪದಂತೆ ಅನ್ನುವುದನ್ನು ಕಲಿಸಿಕೊಡುವುದರಲ್ಲಿ ಭಾಗವತರು ತೋರಿಸುವ ತಾಳ್ಮೆ, ಆಸಕ್ತಿ ಇನ್ನಾವ ಕಲಿಸುವ ಗುರುಗಳೂ ತೋರಿಸಲಾರರು. ಮಾತುಗಳೂ, ಅಭಿನಯವೂ ಸ್ಪಷ್ಟವಾಗಿರಬೇಕು ಎನ್ನುವುದನ್ನೇ ಅವರು ಸತತವಾಗಿ ಅಭ್ಯಾಸ ಮಾಡಿಸುತ್ತಿದ್ದರು. ಹತ್ತು ಸಲವೇ, ಹದಿನೈದು ಸಲ ತಪ್ಪಲಿ — ಅಷ್ಟನ್ನೂ ತಾಳಿಕೊಂಡು, ತಿದ್ದುವ ಸೌಮ್ಯ ಸ್ವಭಾವ ಅವರದು. ಒಂದು ಸಲ ಅವರ ಕೈಕೆಳಗೆ ಕಲಿತರೆಂದರೆ ಸಾಕು-ಜನ್ಮವಿರುವ ತನಕವೂ ಮರೆಯುವಹಾಗಿರುತ್ತಿರಲಿಲ್ಲ. ಭಾಗವತರಿಗಾದರೂ ನಮ್ಮೂರಿನ ನಟರಮೇಲೆ ಬಹಳ ವಿಶ್ವಾಸ. ಹೇಳಿಕೊಟ್ಟುದನ್ನು ಅಷ್ಟು ಬೇಗ ಕಲಿಯುವ ಚಾಕಚಕ್ಯತೆ ಇನ್ನಾವ ಊರಿನ ನಟರಲ್ಲೂ ಇದ್ದಿಲ್ಲವೆಂದು ಅವರೇ ಹಲವಾರು ಸಲ ಅಂದಿದ್ದಾರೆ.

ಭಾಗವತರಿಗೆ ಕಲಿಸುವುದೊಂದೇ ಹೆಚ್ಚುಗಾರಿಕೆಯಾಗಿರಲಿಲ್ಲ. ಹೊಸಹೊಸ ಮಟ್ಟುಗಳನ್ನು ಮಾಡಿ, ಅದಕ್ಕೆ ರಾಗಗಳನ್ನು ಜೋಡಿಸಿ ನಟರ ಕೈಯಲ್ಲಿ, ಹಾಡಿಸುವ ಕಲೆ ಅವರಿಗೆ ಕರತಲಾಮಲಕವಾಗಿತ್ತು. ಶನಿಮಹಾತ್ಮೆ, ನಳಚರಿತ್ರೆಯಂತಹ ಯಕ್ಷಗಾನಗಳನ್ನು ರಚಿಸಿದವರಾದರೂ ಅವರೇ. ಹಾರ್ಮೋನಿಯಂ ಬಾರಿಸುವುದರಲ್ಲಿ ಭಾಗವತರದು ಎತ್ತಿದ ಕೈ; ಹಾಗೆಯೇ ತಬಲವನ್ನೂ ಬಹು ಚೆನ್ನಾಗಿ ನುಡಿಸುತ್ತಿದ್ದರು.

ಆ ಸಲದ 'ಕೃಷ್ಣಗಾರುಡಿ'ಯ ನಾಟಕಕ್ಕಾಗಿ ತಾವೇ ತಬಲ ಬಾರಿಸಲು ಒಪ್ಪಿಕೊಂಡಿದ್ದರು.

ಕಲಿಯುವ ಮನೆಗೆ ಹೋಗುತ್ತಿದ್ದ ನಮ್ಮ ರಂಗಶಾಮಿ ಭಾಗವತರ ತಬಲಕ್ಕೆ ಬಹಳವಾಗಿ ಮನತೆತ್ತಿದ್ದ. 'ಯಾರಣ್ಣಾ, ತಬಲ ಬಾರಿಸುತ್ತಿರುವವರು' ಎಂದೊಬ್ಬನನ್ನು ಕೇಳಿ "ಭಾಗವತರು" ಎಂದುತ್ತರ ದೊರಕಿಸಿಕೊಂಡು, 'ಎಂತಹ ಕೈಯಣ್ಣಾ, ಅವರು ಬಾರಿಸಿದರೆಂದರೆ ನನಗಂತೂ ಮೈಯ ಪರಿವೆಯೇ ಇರಲಿಕ್ಕಿಲ್ಲ'— ಎಂದು ನುಡಿದಿದ್ದ. ಅವರು ತಬಲದ ಮೇಲೆ ಕೈಯಿಕ್ಕಿದರೆ ಸಾಕು, ರಂಗಶಾಮಿಗೆ ಮೈಯೆಲ್ಲಾ ಕಿವಿಯಾಗುತ್ತಿತ್ತು. ಧ್ವನಿ ಬಂದ ಕಡೆಗೇ ಮುಖ ತಿರುಗಿಸಿ ಕುಳಿತುಕೊಳ್ಳುವನು. ಯಾರಾದರೂ ಅವನನ್ನು ಎಡವಿ ಬಿದ್ದರೂ ಆತ ಮಿಸುಗುತ್ತಿರಲಿಲ್ಲ.

ಅದೆಂತಹ ವಿಶಿಷ್ಟ ಶಕ್ತಿ ಭಾಗವತರು ತಬಲದಲ್ಲಿ! ರಂಗಶಾಮಿಯನ್ನೇ ಕೇಳಿದರೆ–ಅವನಾದರೂ ಏನು ಹೇಳಬಲ್ಲ ! ತಬಲದ ಧ್ವನಿ ಕಿವಿಗೆ ಬಿದ್ದಾಗ ಮಾತ್ರ ಅವನ ಮನಸ್ಸು ಉದ್ವಿಗ್ನಗೊಳ್ಳುತ್ತದೆ, ಎದೆ ಕರಗಿಹೋದಂತಾಗುತ್ತದೆ. ಆಗ ಆತ ಸುಮ್ಮನೆ ಮಿಡುಕುವುದನ್ನು ಯಾರುಬೇಕಾದರೂ ಕಾಣಬಹುದು

ಭಾಗವತರು ತಬಲ ಬಾರಿಸಿದಾಗಲೆಲ್ಲಾ ಇದೇ ವಿಚಿತ್ರ ಅನುಭವ ನಮ್ಮ ರಂಗಶಾಮಿಗೆ. ಅವನ ಸುತ್ತೆಲ್ಲಾ ತಬಲದಿಂದೆದ್ದ ಇಂಪಾದ ಅಲೆಗಳು ತುಂಬಿ ಕೊಂಡಿರುತ್ತವೆ. ಒಂದೊಂದೂ ಅವನ ಕಿವಿಯಲ್ಲಿ ನುಡಿಯುತ್ತಿರುತ್ತವೆ.

ಅದೆಂತಹ ಶಕ್ತಿ ಭಾಗವತರದು !

ಅದೋ ನಾರದ ಗಗನದಿಂದ ಇಳಿದು ಬರುತ್ತಿದ್ದಾನೆ. ಒಂದು ಕೈಯಲ್ಲಿ ತಂಬೂರಿಯಿದೆ, ಇನ್ನೊಂದು ಕೈಯಲ್ಲಿ ಚುಟಕವಿದೆ. ಭಗವಂತನನ್ನು ಸ್ತೋತ್ರ ಮಾಡುತ್ತಾ ನಾರದ ಭೂಮಿಗಿಳಿಯುತ್ತಿದ್ದಾನೆ. ನಾರದನ ಹಾಡಿನ ಜೊತೆಗೂ ಭಾಗವತರು ತಬಲ ಹಾಕುತ್ತಿದ್ದಾರೆ. ಎಂತಹ ಸಮ್ಮಿಶ್ರಣವಿದು! ರಂಗಶಾಮಿಗೆ ಎದೆ ತುಳುಕಿದಂತಾಯಿತು. ಈಗ ಹತ್ತು ವರ್ಷಗಳ ಹಿಂದೆ ತನಗೆ ಕಣ್ಣು ಚೆನ್ನಾಗಿದ್ದಾಗ ನಾರದ ಗಗನದಿಂದಿಳಿದು ಬರುವುದನ್ನೂ, ಭೀಮಾರ್ಜುನರು ಅವನಿಗಾಗಿ ಕಾಯುತ್ತಿರುವುದನ್ನೂ, ನೋಡಿದ್ದ. ಅದೇ ಚಿತ್ರ ಅವನ ಮನಃಪಟಲದ ಮೇಲೆ ಅಚ್ಚಳಿಯದೆ ಬಂದಂತಾಯಿತು. ಭಾಗವತರ ತಬಲವಂತೂ ಕಿವಿಯಲ್ಲಿ ನಿನದಿಸುತ್ತಿತ್ತು. ಅವರ ಕೈಬೆರಳುಗಳು ಹರಿತವಾಗಿ ಓಡಾಡುತ್ತಿರುವುದನ್ನು ರಂಗಶಾಮಿ ಮೈಯೆಲ್ಲಾ ಕಿವಿಯಾಗಿ ಕೇಳುತ್ತಿದ್ದ.

ಕೇಳು ಕೇಳುತ್ತಿದ್ದಂತೆ, ರಂಗಶಾಮಿಯ ಮನಸ್ಸಿನಲ್ಲಿ ತಬಲದ ಹಂಬಲು ಬಲವಾಯಿತು. ನಾನೂ ಏತಕ್ಕೆ, ಭಾಗವತರನ್ನು ಬೇಡಿ ತಬಲ ಕಲಿಯಬಾರದು ಎಂದುಕೊಂಡ. 'ಆದರೆ ನಿನಗೆ ಕಣ್ಣಿಲ್ಲವಲ್ಲ', ಎಂದಿತು ಮನಸ್ಸು. ಅದಕ್ಕೆ ಕಣ್ಣೇಕೆ, ಅಭ್ಯಾಸದಿಂದ ಬೆಳಸಿಕೊಳ್ಳಬಹುದಲ್ಲವೆ—ಎಂದುಕೊಂಡ.

ರಂಗಶಾಮಿಯ ಆ ಕ್ಷಣದ ಹಂಬಲು ಇಡೀ ಬಾಳಿನ ಹಂಬಲಾಗಿ ಕೈಚಾಚಿ ನಿಂತಂತಾಯಿತು. ಹೌದು, ಕಲಿಯಬೇಕು, ಏನಾದರೂ ಮಾಡಿ ಕಲಿಯಬೇಕು, ಭಾಗವತರ ಕಾಲನ್ನು ಕಟ್ಟಿಕೊಂಡಾದರೂ ಸರಿ. ರಂಗಶಾಮಿಯ ಬಯಕೆಯನ್ನು ಕೇಳಿದ ಜೊತೆಯವರು ಭಾಗವತರಿಗೆ ಅದನ್ನು ತಿಳಿಸಿದರು, ಭಾಗವತರು ಅದಕ್ಕೆ ಹೂಂ, ಎಂದಾಗಲೀ ಇಲ್ಲವೆಂದಾಗಲೀ ನುಡಿಯಲಿಲ್ಲ. 'ನೋಡೋಣ'—ಎಂಬ ಮಾತಿನಲ್ಲಿ ಮುಗಿಸಿಬಿಟ್ಟಿದ್ದರು. ರಂಗಶಾಮಿಯ ಒತ್ತಾಯದ ಮೇಲೆ ಊರ ಪಟೇಲನೇ ಭಾಗವತರನ್ನು ಕಂಡು, 'ಏನೋ ಕುರುಡ ಹುಡುಗ. ನಿಮ್ಮ ದಯದಿಂದ ತಬಲ ಕಲಿಯಬೇಕೆಂದು ಇಚ್ಛಿಸುತ್ತಾನೆ. ದಯಮಾಡಿ ಕಲಿಸಬೇಕು'—ಎಂದು ಬೇಡಿಕೊಂಡಾಗ, ಭಾಗವತರು ನಗುತ್ತ ಆಗಲೆಂದು ಸಮ್ಮತಿಸಿದರು. ಕಲಿಯುವ ಮನೆಯಲ್ಲೇ ರಂಗಶಾಮಿಗೆ ತಬಲದ. ಪಾಠ ಆರಂಭವಾಯಿತು.

ಕುರುಡನಾದರೂ ರಂಗಶಾಮಿ ಚತುರ, ಸೂಕ್ಷ್ಮ ಬುದ್ಧಿಯುಳ್ಳವನು. ಮೇಲಾಗಿ ಅನಂತ ಸಹನೆಯುಳ್ಳ ಪಾಠದ ಗುರುಗಳು—ಭಾಗವತರು. ಅವರು ಹೇಳಿಕೊಟ್ಟುದುದನ್ನೆಲ್ಲಾ ಚಾಚೂ ಬಿಡದೆ ರಂಗಶಾಮಿ ಅಭ್ಯಾಸ ಮಾಡಿದ, ಕೈಯನು ಪಳಗಿಸಿಕೊಂಡ.

ಏನೋ ಅಷ್ಟು, ಇಷ್ಟು ಹೇಳಿಕೊಟ್ಟರಾಯಿತೆಂದು ಭಾಗವತರು ಭಾವಿಸಿದುದು ತಪ್ಪಾಯಿತು. ರಂಗಶಾಮಿಯ ತಬಲದ ಅಭ್ಯಾಸ ಕೇವಲ ನಾಟಕದ ಮಟ್ಟುಗಳಿಗೇ ನಿಲ್ಲುವಂತಹುದಾಗಿರಲಿಲ್ಲ. ಇನ್ನೂ ಮುಂದೆ ಮುಂದೆ ಹೋಗಬೇಕು—ಎನ್ನುವ ಬಯಕೆ ಅವನಲ್ಲಿ ಅತಿಯಾಗುತ್ತಾ ಬಂತು. ಅಷ್ಟರಲ್ಲಿಯೇ ಸುಗ್ಗಿ ಬಂದ್ದು ನಾಟಕವೂ ಮುಗಿದುದರಿಂದ ಭಾಗವತರು ಊರಿಗೆ ಹೊರಡಬೇಕಾಯಿತು. 'ನೀನು ಹೀಗೆಯೇ ಅಭ್ಯಾಸ ಮಾಡುತ್ತಿರು, ಬಿಡಬೇಡ'—ಎನ್ನುವ ಆಶ್ವಾಸನೆ ಮಾತ್ರ ಭಾಗವತರಿಂದ ರಂಗಶಾಮಿಗೆ ದೊರೆಯಿತು.

ರಂಗಶಾಮಿ ಭಾಗವತರಂದಂತೆ ತನ್ನ ಅಭ್ಯಾಸವನ್ನು ಮುಂದುವರೆಸಿದ. ಅವನ ಸಾಧನೆಯನ್ನು ಕಂಡು ಊರ ಜನ ಅಚ್ಚರಿಗೊಂಡರು. 'ನಮ್ಮ ರಂಗಶಾಮಿ ನೋಡಿದೆಯಾ, ಭಾಗವತರಂಗೇ ಬಾರಿಸತವ್ನೆ'—ಎನ್ನುವ ಮಾತನ್ನು ಊರ ಜನರಾಡಿಕೊಂಡರು.

ರಂಗಶಾಮಿಯ ತಬಲದ ಅಭ್ಯಾಸದಿಂದ ಊರ ಜನರಿಗೆ ಲಾಭವಾಗದೇ ಇರಲಿಲ್ಲ. ಒಂದು ಹರಿಕಥೆ ನಡೆಯಲಿ, ರಾಮಭಜನೆ ನಡೆಯಲಿ—ಇನ್ನೇನೇ ಒಂದು ಶುಭಕಾರ್ಯ ನಡೆಯಲಿ, ರಂಗಶಾಮಿಯ ತಬಲ ಆವಶ್ಯಕವಾಗಿ ಬೇಕಾ

ಗಿತ್ತು. ಊರಿನವರಿಗೆ ಇದೇ ಒಂದು ತೃಪ್ತಿ. ರಂಗಸ್ವಾಮಿಗೂ ಇದೇ ಬಗೆಯಲ್ಲಿ ತೃಪ್ತಿಯುಂಟಾಗಿತ್ತು. ವೇಷ ಕಟ್ಟುವ ಸೌಭಾಗ್ಯ ಇನ್ನು ತನ್ನ ಪಾಲಿಗಿಲ್ಲ ದಿದ್ದರೂ, ತಬಲವನ್ನಾದರೂ ಬಾರಿಸಿ ಊರ ಜನರಿಗೆ ಸಂತೋಷಪಡಿಸುತ್ತಿ ದ್ದೇನಲ್ಲಾ ಎಂದು ಅವನು ಸಂತೋಷಪಟ್ಟಿದ್ದ. ರಂಗಸ್ವಾಮಿಯನ್ನೂ ಊರ ಜನರನ್ನೂ ಆ ತಬಲ ಒಂದು ಬೆಸೆದಿತ್ತು; ಹತ್ತಿರ ಹತ್ತಿರ ತಂದಿತ್ತು.

೪

ನಮ್ಮೂರಿನಲ್ಲಿ ಅತಿ ದೊಡ್ಡ ಹಬ್ಬವೆಂದರೆ ಮಾರಿಯಬಲಿ. ಮಿಕ್ಕ ಹಳ್ಳಿ ಗಳಲ್ಲಿ ಇದು ಯಾವ ರೀತಿಯಲ್ಲಿ ಜರುಗತ್ತದೆಯೋ, ನಮ್ಮೂರಿನ ಜನ ಮಾತ್ರ ಈ ಜಾತ್ರೆಯನ್ನು ಬಹು ವಿಜೃಂಭಣೆಯಿಂದ ಜರುಗಿಸುತ್ತಿದ್ದರು. ಆ ದಿನ ಎಲ್ಲ ಕೇರಿಗಳವರೂ ಮಿಂದು ಮಡಿಯುಟ್ಟು, ಒದ್ದೆ ಬಟ್ಟೆಯ ಮೇಲೆ ಅಡುಗೆ ಮಾಡ ಬೇಕು. ಅದನ್ನು ಗ್ರಾಮದೇವತೆಗೆ ಒಪ್ಪಿಸಬೇಕು. ಕೊಂಬು ಕಹಳೆಗಳ ಗದ್ದಲವಂತೂ ಹೇಳತೀರದು. ಶಂಖ, ಜಾಗಟೆಗಳ ಸದ್ದು ಗಗನವನ್ನು ಭೇದಿಸು ತ್ತಿರುತ್ತದೆ. ಗ್ರಾಮದೇವತೆಯ ಉತ್ಸವ ರಥದಲ್ಲಿ ನಡೆಯುತ್ತದೆ. ಎಲ್ಲಿಲ್ಲಿ ನೋಡು, ಹೊಸ ಬಟ್ಟೆಗಳನ್ನುಟ್ಟು ಚಿಕ್ಕಮಕ್ಕಳು ಆನಂದದಿಂದ ಬತ್ತಾಸು, ಪುರಿಗಳನ್ನು ಕೊಂಡು ಕುಣಿದಾಡುತ್ತಿರುತ್ತಾರೆ. ಇಡೀ ಊರೇ ಈ ಮಾರಿಯ ಬಲಿಯನ್ನು ಅತಿ ವೈಭವದಿಂದ ನಡೆಸುತ್ತದೆ.

ಈ ಹಬ್ಬಕ್ಕಾಗಿಯೇ ಪ್ರತಿ ವರ್ಷವೂ ಪಕ್ಕದ ಬಿಳಿರಂಗನಬೆಟ್ಟದಿಂದ ಜೋಡಿ ಓಲಗದವರನ್ನು ಕರೆಸುತ್ತಿದ್ದುದು ನಮ್ಮೂರಿನವರ ವೈಶಿಷ್ಟ್ಯ. ಇದು ಬಹು ದಿನದ ಪದ್ಧತಿಯೂ ಆಗಿದೆ.

ಈ ಜೋಡಿ ಓಲಗದವರನ್ನು ನಾವು ಬೆಟ್ಟದ ಸೋದರರು ಎಂದು ಕರೆಯುತ್ತೇವೆ. ಈ ಬೆಟ್ಟದ ಸೋದರರು ಮಾರಿಯ ಬಲಿಯ ದಿನ ಬರಲು ಮೊದಲಾದ ಮೇಲೆ, ಶಾನುಭೋಗರ ಜಗುಲಿಯ ಮೇಲೆ ಒಂದು ಸಂಗೀತ ಕಛೇರಿಯೂ ಕೂಡುವುದುಂಟು. ಇದು ಒಂದು ಹೊಸಏರ್ಪಾಟು.

ಒಮ್ಮೆ, ಈಗಿನ ಶಾನುಭೋಗರ ಹಿರಿಯರು ಬಿಳಿಗಿರಿರಂಗನ ಬೆಟ್ಟಕ್ಕೆ ಹರಕೆ ತೀರಿಸಲು ಹೋಗಿದ್ದರಂತೆ. ಈ ಸೋದರರು ಆ ಸಂದರ್ಭದಲ್ಲಿ ಬಾರಿ ಸಿದ ಓಲಗವನ್ನು ಕೇಳಿ ಸಂತೋಷಪಟ್ಟು, ತಮ್ಮ ಮೈಮೇಲಿನ ರೇಷ್ಮೆಯ ವಸ್ತ್ರವನ್ನು ಅವರ ಕೊರಳಿಗೆ ಹಾಕಿ ನೀವು ನಮ್ಮೂರಿನ ಮಾರಿಯ ಜಾತ್ರೆಗೆ ಬರಬೇಕು ಎಂದು ಬೇಡಿಕೊಂಡರಂತೆ. ಆ ಸೋದರರೂ ಸಮ್ಮತಿಸಿದರಂತೆ. ಅಂದಿನಿಂದ ಅವರು ಪ್ರತಿ ಮಾರಿಯ ಬಲಿಯಲ್ಲೂ ಬಂದು ಉತ್ಸವದಲ್ಲಿ ಭಾಗ

ವಹಿಸಿ, ಜನಕ್ಕೆ ಸಂತೋಷವನ್ನುಂಟುಮಾಡಿ ಹೋಗುತ್ತಾರೆ. ಇದು ಈಗ ಹದಿನೈದು ವರ್ಷದಿಂದಲೂ ನಡೆದು ಬರುತ್ತಿದೆ.

ಈಗ ಆ ಹಿರಿಯರು ತೀರಿಕೊಂಡಮೇಲೆ ಅವರಷ್ಟೇ ಉದಾರರೂ, ವಿನೀತರೂ ಆದ ಅವರ ಮಕ್ಕಳು, ಶೀನಪ್ಪನವರು, ತಂದೆಯ ಮೇಲ್ಪಂಕ್ತಿಯನ್ನೇ ಅನುಸರಿಸುತ್ತಿದ್ದಾರೆ.

ಬೆಟ್ಟದ ಸೋದರರು ಆ ಪ್ರದೇಶದಲ್ಲೆಲ್ಲಾ ಬಹಳ ಹೆಸರುವಾಸಿಯಾದವರು. ನಮ್ಮೂರಿನವರು ಅವರನ್ನು ಕರೆಸಿಕೊಂಡು ಸನ್ಮಾನ ಮಾಡಿದ ಮೇಲೆ ಇನ್ನಿತರ ಅಕ್ಕಪಕ್ಕದವರೂ, ನಮ್ಮಂತೆಯೇ ಮಾಡಬೇಕೆಂದು ಅವರಿಗೆ ಆಹ್ವಾನ ಕೊಟ್ಟಿದ್ದರು. ಆದರೆ ಆ ಸೋದರರು ಅದಕ್ಕೆ ಇಚ್ಛೆಪಡಲಿಲ್ಲ.

ಇದರಿಂದ ನಮ್ಮೂರಿನ ಮಾರಿಯ ಜಾತ್ರೆಯ ವೈಶಿಷ್ಟ್ಯ ಎಲ್ಲೆಲ್ಲೂ ಹರಡಿ ಹೋಗಿತ್ತು.

ಮಾರಿಯ ಬಲಿ ಜಾತ್ರೆಯ ದಿನ ಸಂಜೆ ಗ್ರಾಮದೇವತೆಯ ಮೆರವಣಿಗೆ ಬಹಳ ಅದ್ದೂರಿಯಿಂದ ನಡೆಯಬೇಕು. ಈ ಮೆರವಣಿಗೆಯೂ ಒಂದು ವೈಶಿಷ್ಟ್ಯವೇ ಅನ್ನಿ. ಈಚೆಗೆ ಊರ ಪಟೇಲ 'ಡೈನಮೋ' ಒಂದನ್ನು ತರಿಸಿದ ಮೇಲೆ ವಿದ್ಯುಚ್ಛಕ್ತಿಯ ದೀಪವೂ ಉತ್ಸವವನ್ನು ಅಲಂಕರಿಸುತ್ತಿತ್ತು. ಇದನ್ನು ನೋಡಲೆಂದೇ ಅಕ್ಕಪಕ್ಕದ ಹಳ್ಳಿಯವರೆಲ್ಲಾ ಆ ದಿನ ಬರುತ್ತಿದ್ದರು. ಈ ಅದ್ದೂರಿಯ ಮೆರವಣಿಗೆ ಮುಗಿದ ಮೇಲೆ ರಾತ್ರಿ ಒಂಭತ್ತು ಘಂಟೆಯ ಸುಮಾರಿನಲ್ಲಿ ಶಾನುಭೋಗರ ಮನೆ ಜಗುಲಿಯ ಮೇಲೆ ಬೆಟ್ಟದ ಸೋದರರ ಸಂಗೀತ ಕಛೇರಿಯಿರುತ್ತಿತ್ತು. ಈ ಸೋದರರಲ್ಲಿ ಹಿರಿಯವನ ಹೆಸರು ಕನ್ನಾಸಾಮಿ, ಕಿರಿಯವನು ವೀರಾಸಾಮಿ. ಈ ಸೋದರರಿಗೆ ಬಾರದ ಸಂಗೀತ ವಿದ್ಯವಿಲ್ಲ. ಸಂಗೀತದ ನಾನಾ ಮುಖಗಳನ್ನು ಅವರು ಪರಿಚಯ ಮಾಡಕೊಂಡಿದ್ದರು. ಪಿಟೀಲು, ಮೃದಂಗ, ಕಂಜರಿ, ಕೊಳಲು, ಓಲಗ, ತಬಲ ಎಲ್ಲವೂ ಅವರಿಗೆ ಚೆನ್ನಾಗಿ ಬರುತ್ತಿತ್ತು. ಅವರಲ್ಲಿ ಹಿರಿಯವನಾದ ಕನ್ನಾಸಾಮಿಯ ಕಂಠ ತುಂಬ ಚೆನ್ನಾಗಿದ್ದುದರಿಂದ, ಬಾಯಿ ಹಾಡುಗಾರಿಕೆಯೂ ಸೊಗಸುತ್ತಿತ್ತು.

ಎಂದಿನಂತೆ ಆ ರಾತ್ರಿಯೂ ಉತ್ಸವ ಮುಗಿದಮೇಲೆ ಶಾನುಭೋಗರ ಮನೆಯ ಜಗುಲಿಯಮೇಲೆ ಕಛೇರಿ ಕೂಡಿತು. ಊರಜನಕ್ಕೆ ಇದೊಂದು ವಿಶಿಷ್ಟ ದಿನವೆಂದು ಬೇರೆ ಹೇಳಬೇಕಾಗಿಲ್ಲ. ಹಿರಿ ಕಿರಿಯರೆಲ್ಲರೂ ಶಾನುಭೋಗರ ಮನೆಯ ಮುಂದೆ ಬಂದು ಕುಳಿತಿದ್ದರು. ಕಛೇರಿಯೂ ಆರಂಭವಾಯಿತು.

ಸೋದರರಿಬ್ಬರೂ ಮೊದಲು ಓಲಗವನ್ನೂದಿದರು. ಅದೊಂದು ಒಂದು ಘಂಟೆಯಾದಮೇಲೆ, ಕನ್ನಾಸಾಮಿ ಬಾಯಿ ಹಾಡುಗಾರಿಕೆಯನ್ನು ತೆಗೆದುಕೊಂಡು

ಆದರದೂ ಒಂದು ಘಂಟೆಯ ಕಾರ್ಯಕ್ರಮವಾದಮೇಲೆ ಕೊಳಲವಾದನ ಮೊದಲಾಯಿತು.

ಕನ್ನಾಸಾಮಿ ಕೊಳಲನ್ನು ಬಾರಿಸುತ್ತಲೇ ಇದ್ದಾನೆ. ಹೊತ್ತೇನೋ ಸರಿ ರಾತ್ರಿಗೆ ಬಂದಿದೆ. ಆದರೆ ಆ ಜನಸಮುದಾಯ ಸ್ವಲ್ಪವೂ ಮಿಸುಗಾಡಲಿಲ್ಲ. ಕೂತವರು ಕೂತಹಾಗೆಯೇ ಕುಳಿತುಬಿಟ್ಟರು. ಕಛೇರಿ ನಡೆದೇ ನಡೆಯಿತು.

ರಂಗಶಾಮಿಗಂತೂ ಇದೊಂದು ವಿಚಿತ್ರ ಅನುಭವ. ಬೆಟ್ಟದ ಸೋದರರ ಇಂತಹ ಕಛೇರಿಗಳನ್ನು ಈ ಹಿಂದೆಯೂ ಅವನು ಕೇಳಿದ್ದ. ಆದರೆ ಇಂದಿನಷ್ಟು ಸೊಗಸಾಗಿ ಹಿಂದೆಂದೂ ಕಂಡುಬಂದಿರಲಿಲ್ಲ, ಆ ದಿನದಷ್ಟು ಆನಂದವನ್ನು ಈ ಹಿಂದೆಂದೂ ಅನುಭವಿಸಿರಲಿಲ್ಲ. ಅವನ ಮನಸ್ಸಿನ ಮೇಲೆ ಈ ಕಛೇರಿ ಬಲವಾಗಿ ಪರಿಣಾಮ ಮಾಡಿತ್ತು.

ಕನ್ನಾಸಾಮಿ ಕೊಳಲು ನುಡಿಸಿದಾಗ, ರಂಗಶಾಮಿಯ ಕಣ್ಣಿನಿಂದ ನೀರು ತೊಟ್ಟಿಕ್ಕುತ್ತಿತ್ತು. ಯಾವುದೋ ಭಾವನೆಯಲ್ಲಿ ಅವನು ಕರಗಿಹೋದಂತಾಯಿತು. ಏಕೆ ಹೀಗಾಯಿತು ಎನ್ನುವುದು ಅವನಿಗೆ ಗೊತ್ತಿಲ್ಲ. ಧ್ವನಿಯುಕ್ಕುತ್ತಿರುವ ಕಡೆಗೇ ತಾನೂ ಮುಖ ತಿರವಿ ನಿಶ್ಚಲನಾಗಿ ಕುಳಿತುಕೊಂಡ.

ಕನ್ನಾಸಾಮಿಯ ಕೊಳಲು ಮುಗಿದಮೇಲಂತೂ ವೀರಾಸಾಮಿ ಡೋಲು ಬಾರಿಸಿದ. ಅವನ ಪ್ರತಿಯೊಂದು ಹೊಡೆತಕ್ಕೂ ರಂಗಶಾಮಿಯ ಹೃದಯ ನರ್ತನ ಮಾಡಿದಂತಾಗುತ್ತಿತ್ತು. ಅಂತಹ ಸ್ವರ್ಗ ಸುಖವನ್ನು ರಂಗಶಾಮಿ ಎಂದೆಂದೂ ಅನುಭವಿಸಿಯೇ ಇರಲಿಲ್ಲ.

ರಂಗಶಾಮಿಯ ಈ ಸ್ಥಿತಿಯನ್ನು ಕಂಡವರು ಶಾನುಭೋಗರು. ರಂಗಶಾಮಿಯ ಹೃದಯುದಲ್ಲಾಗುತ್ತಿದ್ದ ಪ್ರತಿಯೊಂದು ರಸಭಾವವನ್ನೂ ಶಾನುಭೋಗರು ಮನಗಾಣುತ್ತಿದ್ದರು. ಸಂಜ್ಞೆಯಿಂದ, ಎಲ್ಲೋ ದೂರದಲ್ಲಿ ಕುಳಿತಿದ್ದ ಪಟೇಲನನ್ನು ಹತ್ತಿರಕ್ಕೆ ಕರೆದು ರಂಗಶಾಮಿಯನ್ನು ತೋರಿಸಿದರು.

'ಎಷ್ಟು ಸಂತೋಷಪಡುತ್ತಾನೆ, ನೋಡಿದೆಯಾ ರಂಗಶಾಮಿಯನ್ನು'! ಎಂದರು.

ಸಂಗೀತ ಕಛೇರಿ ಮುಕ್ತಾಯವಾಗುವ ಹೊತ್ತು ಬಂತು. ಶಾನುಭೋಗರು ರಂಗಶಾಮಿಯನ್ನು ತೋರಿಸಿ 'ನಮ್ಮ ರಂಗಶಾಮಿಯೂ ತಬಲ ಕಲಿತಿಲ್ಲವೇ? ಅವನೂ ಯಾಕೆ ಬಾರಿಸಬಾರದು'?—ಎಂದು ಹೇಳಿದರು.

ಊರ ಜನರೂ ಸರಿ ಸರಿಯೆಂದು ಕೂಗಿಕೊಂಡರು. ರಂಗಶಾಮಿಗೆ ಬಹಳ ಗಾಬರಿಯಾಯಿತು. ಯಾವುದೋ ಆನಂದ ಸಾಗರದಲ್ಲಿ ಎಣೆಯಿಲ್ಲದೆ ತೇಲಾಡುತ್ತಿದ

ವನನ್ನು ಬಲಾತ್ಕಾರವಾಗಿ ಎಳೆದುತಂದು ದಡದಮೇಲೆ ಬಿಟ್ಟಂತಾಯಿತು. ತನ್ನ ತಬಲವೆಲ್ಲಿ, ಈ ಸಂಗೀತವೆಲ್ಲಿ? ಬೆಟ್ಟದ ಸೋದರರ ಕಛೇರಿಯಲ್ಲೇ ತಾನು ಬಾರಿಸುವುದು! ಜನ ನಕ್ಕುಬಿಟ್ಟಾರು!—ಎಂದವನೇ ಸುಮ್ಮನೆ ಮುದುರಿ ಕುಳಿತುಕೊಂಡ.

ಇದನ್ನು ಕಂಡು ಪಟೇಲ ತಾನೇ ಎದ್ದು ರಂಗಶಾಮಿಯ ಹೆಗಲಿಗೆ ಕೈಹಾಕಿ ಮೇಲೆಬ್ಬಿಸಿ ಮಧ್ಯೆ ಕರೆತಂದು ಬಿಟ್ಟ. ರಂಗಶಾಮಿಗೆ ಹೆದರಿಕೆ. ಯಾಕೆ ಇವೆಲ್ಲಾ, ನಾನೇನು ದೊಡ್ಡ ವಿದ್ವಾಂಸನೇ!—ಎಂದು ಅಳುಕುತ್ತಾ ಅಂಜುತ್ತಾ ಹಿಂಜಾಡಿದ. ಆದರೆ, ಶಾನುಭೋಗರು ಕೇಳಬೇಕಲ್ಲ! 'ಎಲ್ಲಿ ರಂಗಶಾಮಿ ತಬಲ ತಗೋ, ಕನ್ನಾಸ್ವಾಮಿ ಕೇಳಬೇಕಂತೆ'—ಎಂದರು. 'ಬೇಡಿ ಸ್ವಾಮಿ'—ಎಂದು ರಂಗಶಾಮಿ ಬೇಡಿಕೊಂಡ. ಕನ್ನಾಸಾಮಿ ರಂಗಶಾಮಿಯ ಬೆನ್ನಿನಮೇಲೆ ಕೈಹಾಕಿ 'ಹೆದರಿಕೋಬಾರದು ಬಾರಿಸು'—ಎಂದು ಹೇಳಿದಮೇಲೆ ರಂಗಶಾಮಿ ತಬಲವನ್ನು ತನ್ನ ತೊಡೆಯಮೇಲೆಳೆದುಕೊಂಡ.

ತಬಲವನ್ನು ಬಾರಿಸುವಾಗ ರಂಗಶಾಮಿಗಂತೂ ವಿಪರೀತ ಹೆದರಿಕೆ. ತಾಳ ಲಯಬದ್ಧವಾದ, ಸೋದರರ ಕಲೆಗಾರಿಕೆಯೆಲ್ಲಿ! ಏನನ್ನೂ ಅರಿಯದ ನಾನೆಲ್ಲಿ!—ನನ್ನ ಹರಕು ತಬಲದಿಂದ ಅವರಿಗೇನು ಲಾಭ!—ತಬಲವೇನೋ ಸಾಗುತ್ತಿತ್ತು. ಮನದಲ್ಲಿ ನೂರಾರು ಅಳಕು-ಅಂಜಿಕೆಗಳು ನಡೆದೇ ಇದ್ದುವು.

ರಂಗಶಾಮಿ ಕಾಲುಗಂಟೆ ಬಾರಿಸಿರಬೇಕು. ಒಮ್ಮೆಗೇ ಎಲ್ಲಿಲ್ಲದ ಅಧೈರ್ಯ ಸುತ್ತಿಬಂದು, ಕೈಯನ್ನು ತಡೆಹಿಡಿದುಬಿಟ್ಟವು. ಮೈಯೆಲ್ಲಾ ಬೆವತು ತೊಪ್ಪೆಯಾಗಿ ಹೋಗಿತ್ತು. ಮುಖದಲ್ಲಿ ಏನೋ ಅಪರಾಧ ಮಾಡಿದವರ ಚಿಹ್ನೆ ಕಾಣುತ್ತಿತ್ತು. ತಬಲವನ್ನು ಪಕ್ಕಕ್ಕೆ ತಳ್ಳಿ ತಣ್ಣಗೆ ಕುಳಿತುಬಿಟ್ಟ.

ಊರ ಜನಕ್ಕೆ ಅಷ್ಟೇ ಸಾಕಾಗಿತ್ತು. ನಮ್ಮೂರಿನ ಹೈದನೂ ಕಛೇರಿಯಲ್ಲಿ ಬಾರಿಸಿದನಲ್ಲಾ ಎನ್ನುವ ತೃಪ್ತಿ ಅವರದು. ಶಾನುಭೋಗರೂ ಸಂತೋಷಪಟ್ಟರು.

ಅಂದಿನ ಸಮಾರಂಭವೇನೋ ಮುಗಿಯಿತು. ಶಾನುಭೋಗರು ಕುತೂಹಲಕ್ಕೆಂದು 'ಹೇಗೆ ಬಾರಿಸುತ್ತಾನೆ ಹುಡುಗ'?—ಎಂದು ಕೇಳಿದರು. ಕನ್ನಾಸಾಮಿ ನಗುತ್ತಾ 'ಹುಡುಗ ಚಾಲೋಕು. ಕಲಿತರೆ ಚೆನ್ನಾಗಿ ಕಲಿಯುತ್ತಾನೆ. ಪಾಠ ಚೆನ್ನಾಗಿ ನಡೆಯಬೇಕು'—ಎಂದ. ಶಾನುಭೋಗರು ರಂಗಶಾಮಿಯ ದುರಂತ ಕಥೆಯನ್ನು ಕನ್ನಾಸಾಮಿಗೆ ವಿವರಿಸಿದರು. ಅವನು ತಬಲ ಕಲಿತ ಬಗೆಯನ್ನೂ ಹೇಳಿದರು. ಅವನು ಅಷ್ಟು ಕಲಿತುದೇ ಹೆಚ್ಚೆಂದರು.

ಈ ಕಥೆಯನ್ನು ಕೇಳಿ ಕನ್ನಾಸಾಮಿಗೆ ಏನನ್ನಿಸಿತೋ. 'ನೀವು ಮನಸ್ಸು ಮಾಡಿ ರಂಗಶಾಮಿಯನ್ನು ಎರಡು ವರ್ಷ ನನ್ನ ಜೊತೆಯಲ್ಲಿ ಬಿಟ್ಟರಿ. ಅವನಿಗೆ

ಸಾನೇ ಮೃದಂಗದ ಪಾಠ ಹೇಳಿಕೊಡುತ್ತೇನೆ'—ಎಂದು ಕೇಳಿಬಿಟ್ಟ. ಶಾನು ಭೋಗರಿಗೆ ಎಲ್ಲಿಲ್ಲದ ಆಶ್ಚರ್ಯ. ಕನ್ನಾಶಾಮಿಯೆಲ್ಲಿ, ರಂಗಸಾಮಿಯೆಲ್ಲಿ ! ಜೊತೆಗೆ ರಂಗಶಾಮಿ ಕುರುಡು ಹುಡುಗ. ಅವನನ್ನು ಕಟ್ಟಿಕೊಂಡು ಕನ್ನಾಸಾಮಿ ಏನುಮಾಡಬೇಕು!

ಶಾನುಭೋಗರಿಗೆ ಆಶ್ಚರ್ಯವಾದಂತೆ, ಸಂತೋಷವೂ ಆಯಿತು. ಕನ್ನಸಾಮಿಯೇ ಮನಸ್ಸಿಟ್ಟು ಕರೆಯುತ್ತಿದ್ದಾನೆ. ರಂಗಶಾಮಿಯ ಅದೃಷ್ಟ ಹೇಗಿದೆಯೋ ! ಆದರೆ ರಂಗಶಾಮಿಯನ್ನು ಕಳುಹಿಸಿಕೊಡುವ ಹಕ್ಕು ಶಾನಭೋಗರಿಗೇನಿದೆ? ರಂಗಶಾಮಿಯ ವಿಶಿಷ್ಠ ಹಕ್ಕೂ ಪಟೇಲನದೇ ಅಲ್ಲವೇ? ಅವನು ಒಪ್ಪಿದರೆ ತಾನೆ, ಕನ್ನಾಸಾಮಿ ಜೊತೆಯಲ್ಲಿ ಕರೆದುಕೊಂಡು ಹೋಗುವುದು !

ಕನ್ನಾಸಾಮಿ ಅಂದ ಮಾತನ್ನು ಶಾನುಭೋಗರು ಪಟೇಲನಿಗೆ ಹೇಳಿದರು. ಪಟೇಲ ಮೊದಲು ಹಿಂದು—ಮುಂದು ನೋಡಿದರೂ, ಹುಡುಗನ ಸಮ್ಮತಿಯಿದ್ದರೆ ಆಯಿತೆಂದು ತಿಳಿಸಿಬಿಟ್ಟ.

ಇದೇ ಮಾತನ್ನು ರಂಗಶಾಮಿಗೆ ಹೇಳಿದಾಗ ಅವನ ಮನಸ್ಸಿನಲ್ಲಿ, ಆನಂದ, ಆಶ್ಚರ್ಯಗಳು ಒಮ್ಮೆಗೇ ಮೂಡಿಬಂದು ಚಣಕಾಲ ಸ್ತಬ್ಧನಾಗಿಬಿಟ್ಟ. ತನ್ನ ಬಾಳಿನಲ್ಲಿ ಇಂತಹದೊಂದು ಘಟನೆ ನಡೆಯುವುದೆಂದು ರಂಗಶಾಮಿ ಕನಸು ಮನಸ್ಸಿನಲ್ಲಿಯೂ ಎಣಿಸಿರಲಿಲ್ಲ 'ನಿನ್ನ ಅಭಿಪ್ರಾಯವೇನು ರಂಗಣ್ಣ'?—ಎಂದು ಪಟೇಲ ಮತ್ತೊಮ್ಮೆ ಕೇಳಿದಾಗ ಅದು ತನಗೆ ಬಹಳ ಸಂತೋಷವೆಂದು ತಿಳಿಸಿಬಿಟ್ಟ.

ರಂಗಶಾಮಿ ಎರಡು ವರ್ಷಗಳಕಾಲ ಬೆಟ್ಟದಲ್ಲಿಯೇ ಇರಬೇಕೆಂತಲೂ, ತನ್ನ ಅಭ್ಯಾಸ ಮುಗಿದ ತಕ್ಷಣ ಊರಿಗೆ ಬಂದುಬಿಡಬೇಕೆಂತಲೂ ಗೊತ್ತಾಯಿತು. ರಂಗಶಾಮಿಯದು ಎಷ್ಟೇ ಖರ್ಚಾಗಲಿ ಪಟೇಲ ತಾನು ಕಳುಹಿಸಿಕೊಡುವುದಾಗಿಯೂ ಹೇಳಿದ.

ಬೆಟ್ಟದ ಸೋದರರ ಜೊತೆಯಲ್ಲೇ ರಂಗಶಾಮಿಯೂ ಬಿಳಿಗಿರಿ ರಂಗನ ಬೆಟ್ಟಕ್ಕೆ ಹೊರಡಲು ಸಿದ್ಧತೆಗಳಾದವು. ಮಾರನೆಯ ದಿನ ಹೊರಟದ್ದೂ ಆಯಿತು. ಹೊರಡುವಾಗ ಕನ್ನಾಸಾಮಿ, ಶಾನುಭೋಗರನ್ನು ಕುರಿತು, 'ನಾನು ಹೇಳುತ್ತಿದ್ದೇನೆ ಸ್ವಾಮಿ. ರಂಗಶಾಮಿಯಲ್ಲಿ ನಿಜವಾಗಿಯೂ ಸರಸ್ವತಿಯಿದ್ದಾಳೆ. ಇನ್ನೆರಡು ವರ್ಷಗಳಲ್ಲಿ ನೀವೇ ನೋಡುವಿರಂತೆ ಹೇಗೆ-ಮೃದಂಗ ಕಲಿತಿರುತ್ತಾನೆ ಎಂಬುದನ್ನು'—ಎಂದು ನುಡಿದ.

೫

ರಂಗಶಾಮಿ ಬೆಟ್ಟಕ್ಕೆ ತೆರಳಿ ವರ್ಷವೊಂದಾಯಿತು. ರಂಗಶಾಮಿಯಿಲ್ಲದಿರುವುದು, ಊರಿಗೊಂದು ಬಗೆಯ ಮಂಕು ಬಡಿದಿದೆ—ಎಂದು ಊರವರು ಆಡಿಕೊಳ್ಳಹತ್ತಿದರು. ಆಗಾಗ ಬೆಟ್ಟದ ಮೇಲಕ್ಕೆ ಹೋಗಿಬಂದ ಜನ ತಾವು ರಂಗಶಾಮಿಯನ್ನು ಕಂಡುದಾಗಿಯೂ, ಮೃದಂಗವನ್ನು ಕಲಿಯುತ್ತಿರುವುದಾಗಿಯೂ ತಿಳಿಸುತ್ತಿದ್ದರು. ಆದರೆ ಅದರಿಂದ ರಂಗಶಾಮಿಯ ಅಭ್ಯಾಸದ ಪೂರ್ಣ ಚಿತ್ರ ಬಂದಂತಾಗುತ್ತಿರಲಿಲ್ಲ.

ಈ ಮಧ್ಯೆಯೇನೋ ಮಾರಿಯ ಜಾತ್ರೆ ನಡೆಯಿತು. ಎಂದಿನಂತೆ ಬೆಟ್ಟದ ಸೋದರರೂ ಬಂದಿದ್ದರು. ಅವರ ಸಂಗೀತ ಕಛೇರಿಯೂ ಇತ್ತು. ಊರಿನವರೆಲ್ಲರೂ ಆ ಸೋದರರನ್ನು ಪ್ರಶ್ನೆ ಮಾಡುವವರೇ : 'ನಮ್ಮ ರಂಗಶಾಮಿ ಹೇಗಿದ್ದಾನೆ ? ಹೇಗೆ ಕಲಿಯುತ್ತಿದ್ದಾನೆ ? ಏನು ಕಲಿಯುತ್ತಿದ್ದಾನೆ ?' ಅದೆಲ್ಲಕ್ಕೂ ಉತ್ತರ ಹೇಳಿ ಕನ್ನಾಸಾಮಿ ಪಾರಾಗುವುದು ಕಷ್ಟವೇ ಆಯಿತು. ರಂಗಶಾಮಿಯ ಬಗ್ಗೆ ಜನರಿಗಿರುವ ಪ್ರೇಮ, ವಾತ್ಸಲ್ಯ, ಅಂತಃಕರಣಗಳನ್ನು ಕಂಡು ಆ ಸೋದರರಿಗೂ ಹೃದಯ ಕಲಕಿರಬೇಕು, ಮುಂದಿನ ವರ್ಷ ಇದೇ ಜಾತ್ರೆಗೆ ರಂಗಶಾಮಿಯನ್ನು ಕರೆದುಕೊಂಡು ಬರುವುದಾಗಿ ಆಶ್ವಾಸನೆ ಕೊಟ್ಟರು.

ಆ ವರ್ಷವೂ ಉರುಳಿ ಮತ್ತೆ ಮಾರಿಯ ಹಬ್ಬ ಬಂತು. ಊರೊಳಗೆ ಹಬ್ಬದ ಉತ್ಸಾಹ ತಲೆ ಹಾಕಿತು. ಎಂದಿನಂತೆ ಬೆಟ್ಟದ ಸೋದರರೂ ಬಂದರು ; ಅವರ ಜೊತೆಯಲ್ಲಿ ರಂಗಶಾಮಿಯೂ ಬಂದಿದ್ದಾನೆ. ಊರವರ ಉತ್ಸಾಹ ಹೇಳತೀರದು. ರಂಗಶಾಮಿ ಏನೋ ಬದಲಾವಣೆಯಾಗಿದ್ದಾನೆ, ಮಹತ್ತರವಾಗಿ ವ್ಯತ್ಯಾಸ ಹೊಂದಿದ್ದಾನೆ—ಎಂದು ಹಳ್ಳಿಯವರೆಲ್ಲಾ ಅವನನ್ನು ನೋಡುವುದಕ್ಕೆ ಬರುತ್ತಿದ್ದರು. ಆದರೆ ರಂಗಶಾಮಿ, ರಂಗಶಾಮಿಯಾಗಿಯೇ ಇದ್ದಾನೆ. ಹಾಗೇ ನಡೆ, ಹಾಗೇ ನುಡಿ. ಇದು ಕೆಲವರಿಗೆ ನಿರಾಶೆಯಾಯಿತು. 'ರಂಗಣ್ಣ ಹೆಂಗವ್ನೋ, ಹಂಗೇ ಅವ್ನಲ್ಲಾ!' —ಎಂದು ಕೆಲವು ಜನ ಉದ್ಗಾರ ತೆಗೆದರು. ಆದರೂ ರಂಗಶಾಮಿಯ ಅಂತರಂಗದಲ್ಲಿ ಆಗಿರುವ ಬದಲಾವಣೆಯನ್ನು ಅವರೂ ಅಷ್ಟಷ್ಟು ಗುರುತಿಸಿದರು.

ಶಾನುಭೋಗರ ಮನೆಯ ಜಗುಲಿಯ ಮೇಲೆ ಎಂದಿನಂತೆ ಸಂಗೀತ ಕಛೇರಿ ಕೂಡಿತ್ತು. ನಮ್ಮ ರಂಗಶಾಮಿಯೂ ಈ ದಿನ ಅದೇನೋ ಬಾರಿಸುತ್ತಾನಂತೆ— ಎಂದು ಊರ ಜನವೆಲ್ಲವೂ ಅಲ್ಲಿಯೇ ಬಂದು ಸೇರಿದೆ.

ಈ ದಿನ ಕನ್ನಾಸಾಮಿಯ ಬಾಯಿ ಹಾಡುಗಾರಿಕೆ, ವೀರಾಸಾಮಿಯ ಪಿಟೀಲು,

ಜೊತೆಗೆ ರಂಗಶಾಮಿಯ ಮೃದುಂಗ. ಜನಕ್ಕೆ ಎಂದೂ ಇಲ್ಲದಷ್ಟು ಉತ್ಸಾಹ, ಕುತೂಹಲ.

ಎರಡು ವರ್ಷದಿಂದ ತಮಗೆ ದೂರವಾಗಿದ್ದ ರಂಗಶಾಮಿ, ಬೆಟ್ಟದಿಂದ ಏನೇನು ಕಲಿತು ಬಂದಿದ್ದಾನೆಯೋ, ಹೇಗೆ ಬಾರಿಸುತ್ತಾನೆಯೋ—ಎಂದು ಎಲ್ಲರೂ ನಿರೀಕ್ಷಿಸುತ್ತಿದ್ದಾರೆ.

ನಡುರಾತ್ರಿಯೂ ದಾಟಿಹೋಯಿತು. ಕಛೇರಿ ನಡೆಯುತ್ತಲೇ ಇತ್ತು. ಜನ ಸ್ವಲ್ಪವೂ ಅಲುಗಾಡಿರಲಿಲ್ಲ. ಕನ್ನಾಸಾಮಿ, ವೀರಾಸಾಮಿಗೆ ಪಿಟೀಲು ನಿಲ್ಲಿಸುವಂತೆ ಸಂಜ್ಞೆ ಮಾಡಿದ. ರಂಗಶಾಮಿಯ ಮೃದಂಗ ಹಾಗೆಯೇ ಮುಂದು ವರಿಯಿತು. ಅವನಿಗೆ ಪ್ರಜ್ಞೆಯೇ ಇಲ್ಲ. ಅಲ್ಲಿ ಕೇಳುವವರಿದ್ದಾರೆ, ನಾನು ಇಲ್ಲಿ ಬಾರಿಸುತ್ತಿದ್ದೇನೆ—ಎಂಬ ಅರಿವೂ ಇಲ್ಲ. ಕೈ ತಾನಾಗಿ ಓಡುತ್ತಿದೆ. ರಂಗಶಾಮಿ ತನ್ನ ನಾದದಲ್ಲಿ ತಾನೇ ಐಕ್ಯನಾಗಿ ಹೋಗಿದ್ದಾನೆ. ಏನೋ ಆವೇಶ ಬಂದಂತಾಗಿದೆ. ಕನ್ನಾಸಾಮಿಯ ಕೈ ಹಾಗೆಯೇ ತಾಳ ಹಾಕುತ್ತಿದೆ. ಅದನ್ನು ಅನುಸರಿಸಿ ಇನ್ನಿತರರೂ ತಾಳ ಹಾಕುತ್ತಿದ್ದಾರೆ. ಅಲ್ಲಲ್ಲಿ ಭೇಷ್, ಭೇಷ್ ಎನ್ನುವ ಉದ್ಗಾರ ಗಳು ಹೊರಬೀಳುತ್ತಿವೆ. ಊರಿನ ಜನವೆಲ್ಲಾ ದಿಗ್ಭ್ರಮೆಗೊಂಡಿದೆ. ನಮ್ಮ ರಂಗಶಾಮಿಯೇ ಇವನು—ಇವನಾರೋ ಏನೋ ಮಂತ್ರ ಮಾಡುತ್ತಿರುವನಲ್ಲಾ—ಎಂಬ ಭಾವನೆಯವರದು. ತಾಸುಗಳ ಮೇಲೆ ತಾಸು ಉರುಳಿರಬೇಕು. ಯಾರಿಗೂ ಅದರ ಪರಿಜ್ಞಾನವೇ ಇಲ್ಲ. ತಾಳ, ಲಯಗಳನ್ನು ಬದ್ಧವಾಗಿ ಹಿಡಿದು ರಂಗಶಾಮಿ ಬಾರಿಸುತ್ತಲೇ ಇದ್ದಾನೆ.

ಆ ಬಾರಿಸುವಿಕೆಯನ್ನು ನಮ್ಮೂರಿನ ಜನ ಎಂದೆಂದಿಗೂ ಮರೆಯಲಾರದು.

ಶಾನುಭೋಗರು ದಿಗ್ಗನೆದ್ದು, ತಮ್ಮ ಮೈಮೇಲಿನ ರೇಷ್ಮೆಯ ವಸ್ತ್ರವನ್ನು ರಂಗಶಾಮಿಯ ಕೊರಳ ಸುತ್ತ ಹಾಕಿದರು. ಇನ್ನು ನಾವು ಕಂಡ ರಂಗಶಾಮಿಯಲ್ಲ ರಂಗಶಾಮಿ, ಅವನು ಸರಸ್ವತಿಯ ನಿಜವಾದ ಭಕ್ತ—ಎಂದು ಹೊಗಳಿದರು. ಜನ 'ಹೋ'—ಎಂದಿತು. ಈ ಎಲ್ಲ ಗದ್ದಲಗಳ ಮಧ್ಯೆ, ಕನ್ನಾಸಾಮಿಯ ಕಣ್ಣಿನಿಂದ ಒಂದೆರಡು ತೊಟ್ಟು ನೀರು ಯಾರಿಗೂ ಅರಿವಾಗದಂತೆ ಉರುಳಿಹೋಯಿತು.

ಇದಾದಮೇಲೆ ರಂಗಶಾಮಿ ಬೆಟ್ಟಕ್ಕೆ ಹೋಗಲಿಲ್ಲ. ಊರ ಜನ ಮತ್ತೊಮ್ಮೆ ರಂಗಶಾಮಿಯನ್ನು ತಮ್ಮಿಂದ ದೂರವಾಗಿ ಕಳುಹಿಸಿಕೊಡಲು ಇಚ್ಛೆಪಡಲಿಲ್ಲ. ಹೀಗಾಗಿ ರಂಗಶಾಮಿ ಊರಲ್ಲಿಯೇ ಉಳಿದುಕೊಂಡ. ನಿನ್ನ ಅಭ್ಯಾಸ ಹೀಗೆಯೇ ಸಾಗಬೇಕೆಂದು—ಕನ್ನಾಸಾಮಿ, ರಂಗಶಾಮಿಯನ್ನು ಹರಸಿ ಹಿಂದಿರುಗಿದ.

೬

ಊರಲ್ಲಿಯೇ ಉಳಿದ ಮೇಲೆ ರಂಗಣ್ಣಾಮಿ ಮೃದಂಗದ ಅಭ್ಯಾಸವನ್ನೇ ಮುಂದುವರಿಸಿದ. ಅವನು ಏಳುತ್ತಿದ್ದುದು ಮುಂಜಾವದಲ್ಲಿ ಕೋಳಿ ಕೂಗುವ ಹೊತ್ತಿಗೆ. ಆ ಹೊತ್ತಿಗೆ ಮೃದಂಗ ಮೊದಲಾಯಿತೆಂದರೆ, ಹೊತ್ತೇರಿದರೂ ನಿಲ್ಲುತ್ತಿರಲಿಲ್ಲ. ನಮ್ಮೂರ ಜನಕ್ಕಂತೂ ಆ ಶಬ್ದ ಬಹಳ ಹಿತವಾಗಿಬಿಟ್ಟದೆ. ಅವರ ಎಷ್ಟೋ ದುಃಖಗಳನ್ನು ರಂಗಣ್ಣಾಮಿ ತನ್ನ ಮೃದಂಗ ಬಾಜನದಿಂದ ನಿವಾರಣೆ ಮಾಡಿದ್ದಾನೆ. ಮೃದಂಗದೊಂದಿಗಿರುವಾಗ ರಂಗಣ್ಣಾಮಿಯನ್ನು ನೋಡಬೇಕು. ಯಾವ ಬಾಹ್ಯ ಪರಿವೆಯೂ ಇಲ್ಲದೆ ಅಂತರ್ಮುಖನಾಗಿ, ಆವೇಶ ಬಂದವರಂತೆ ಅವನು ಬಾರಿಸುತ್ತಿರುತ್ತಾನೆ. ಅದರಿಂದುಂಟಾಗುವ ಆನಂದವನ್ನು ಬಣ್ಣಿಸುವುದೇ ಕಷ್ಟ—ಎಂಬುದು ರಂಗಣ್ಣಾಮಿಯ ಮಾತು.

ರಂಗಣ್ಣಾಮಿಗೆ ಮೃದಂಗ ಏನು ತೃಪ್ತಿ ಕೊಟ್ಟದೆಯೋ, ಅದೇ ತೃಪ್ತಿ ಊರ ಜನಕ್ಕೂ ಸಿಕ್ಕಿದೆ. ಅವನ ಮೃದಂಗವೆಂದರೆ ಹಿರಿಯರಿರಲಿ, ಮಕ್ಕಳಿಗೂ ಬಹಳ ಆದರ, ವಿಶ್ವಾಸ. ದಿನದ ದುಡಿತವಾದಮೇಲೆ ಪಟೇಲನ ಜಗುಲಿಗೆ ಎಲ್ಲರೂ ಬರಬೇಕು; ರಂಗಣ್ಣಾಮಿ ಅವರಿಗೆ ಮೃದಂಗ ಬಾರಿಸಿ ದಣಿವಾರಿಸಬೇಕು. ಮಕ್ಕಳಿಗಂತೂ ರಂಗಣ್ಣಾಮಿಯ ಮೃದಂಗ ಬಹು ಪ್ರೀತಿ. ಅವನು ಬಾರಿಸುವಾಗ ಅವನ ಸುತ್ತಲೂ ಮುತ್ತಿರುವವರೆಂದರೆ—ಈ ಮಕ್ಕಳು. ಸದ್ದು ಸಪ್ಪಳವಿಲ್ಲದೆ ದೂರ ಕುಳಿತು, ಅವನು ಬಾರಿಸುವುದನ್ನೇ ಕೇಳುತ್ತಾ ಕುಳಿತಿರುತ್ತವೆ.

ನಮ್ಮೂರಿನ ಸುತ್ತ ಮುತ್ತ ರಂಗಣ್ಣಾಮಿಯ ಹೆಸರು ಜನಪ್ರಿಯವಾಗಿಬಿಟ್ಟದೆ. ತಮಗೆ ಬೇಕಾದವರು ಬಂಡಿ ಕಟ್ಟಿಕೊಂಡು ಬಂದು ರಂಗಣ್ಣಾಮಿಯನ್ನು ಕರೆದು ಕೊಂಡು ಹೋಗುವುದೂ ಕೆಲವು ಕಾಲ ಬಳಕೆಗೆ ಬಂದಿತ್ತು. ಆದರೆ ಇದೇ ಒಮ್ಮೆ ಅಪಘಾತಕ್ಕೆ ಎಡೆಗೊಡುತ್ತಿದ್ದಾಗ ಪಟೇಲ ಇನ್ನೊಮ್ಮೆ ಯಾರೂ ರಂಗಣ್ಣಾಮಿಯನ್ನು ಹೊರಗೆ ಕರೆದುಕೊಂಡು ಹೋಗ ಕೂಡದೆಂದು ಆಜ್ಞೆ ಮಾಡಿದನಂತೆ; ಅಂದಿನಿಂದ ಹೊರಗೆ ಹೋಗಿಬರುವುದೂ ನಿಂತುಹೋಯಿತು.

ಈಗ ರಂಗಣ್ಣಾಮಿಗೆ ತಾನಾಯಿತು, ತನ್ನ ಮೃದಂಗವಾಯಿತು. ಮುಗಿಲು ಆವೇಶಗೊಂಡಂತೆ, ರಂಗಣ್ಣಾಮಿಯ ಮೃದಂಗ ಬಾಜನ. ತನ್ನ ಎಲ್ಲ ನೋವನ್ನೂ ಹಿಂಗಿಸಬಲ್ಲ ಆ ಕಲೆಯಲ್ಲಿ ರಂಗಣ್ಣಾಮಿ ಮೈಮರೆಯುತ್ತಾನೆ. ಬಂದವರು ಮಾತನಾಡಿಸಿದರೆ, ತಾನೂ ಒಂದು ನಾಲ್ಕು ಮಾತನಾಡುತ್ತಾನೆ. ಅವರು ಬೇಡಿದರೆ, ಅವರ ಚಿತ್ತ ಶಾಂತಿಗಾಗಿ, ತೃಪ್ತಿಗಾಗಿ ಮೃದಂಗ ಬಾರಿಸುತ್ತಾನೆ. ಊರ ಜನರ ತೃಪ್ತಿಯೇ ತಾನು ಕಲಿತುದರ ಸಾರ್ಥಕವೆಂದು ರಂಗಣ್ಣಾಮಿಯ ಭಾವನೆ.

ತನ್ನಿಂದ ನಾಲ್ಕು ಜನರಿಗೆ ಸಂತೋಷವಾಗುವುದಾದರೆ, ಅದೇ ಭಗವಂತನ ಪ್ರೀತಿ ಎನ್ನುವುದು ರಂಗಶಾಮಿಯ ಮಾತು. ತನ್ನಿಂದಲೂ ತನ್ನ ನೆರೆಹೊರೆಗೆ ಪ್ರಯೋಜನವುಂಟು ಎಂಬುದನ್ನು ನೆನೆಸಿಕೊಂಡು ಅವನ ಹೃದಯ ಹಿಗ್ಗುತ್ತದೆ, ತೃಪ್ತಿಪಟ್ಟುಕೊಳ್ಳುತ್ತದೆ. ಅವರು ಆನಂದಪಟ್ಟು ಹೋದರೆ, ಸಾಕು ನನಗಿನ್ನೇನು ಬೇಕು—ಎನ್ನುವುದುಂಟು ರಂಗಶಾಮಿ. ಅವನ ಮನಸ್ಸಿನಲ್ಲಿ ಯಾವ ಬಗೆಯ ಕಳವಳವಿಲ್ಲ, ಅಂಜಿಕೆಯಿಲ್ಲ; ಸದಾ ತೃಪ್ತಿ, ಶಾಂತಿಯಿಂದ ಕೂಡಿದ ಜೀವನ ಅವನದು.

ಅದಕ್ಕಿಂತ ಇನ್ನೇನು ಬೇಕು!

—ಹ. ವೆಂ. ನಾಗರಾಜರಾವ್.

# ನಾಲ್ಕು ಮೊಳ ಭೂಮಿ

ಅಂಚೆಯ ಪೇದೆ 'ಮನಿಯಾರ್ಡರ್' ಎಂದು ಕೂಗಿದುದು ಅವನಿಗೆ ಕೇಳಿಸಲಿಲ್ಲ. ಅವನ ಮನಸ್ಸು ಬಿಚ್ಚಿದ ಕಾಗದದ ಸುರುಳಿಯಂತಾಗಿತ್ತು. ನಲ್ಲೆಯಿಲ್ಲದ ಮನೆ; ನಲವಿಲ್ಲದ ಹೃದಯ. ವ್ಯಾಜ್ಯದ ಕಡತಗಳನ್ನು ಮೇಜಿನ ಮೇಲೆ ಹರಡಿಕೊಂಡೇ ಅವನು ಯೋಚನೆಯ ವ್ಯೂಹದೊಳಗೆ ಸಿಕ್ಕಿದ್ದ. 'ಹಾಳು ಕೆಲಸ. ಇದಕ್ಕೆಂದಿಗೆ ಕೊನೆ?' ಎಂದು ಬೇಸರದ ಒಳದನಿ ಕೂಗಿ ಕೇಳುತ್ತಿತ್ತು.' 'ವ್ಯಾಜ್ಯ, ವ್ಯಾಜ್ಯ, ವ್ಯಾಜ್ಯ....ಈ ವ್ಯಾಜ್ಯಗಳಿಗೆ ಮುಕ್ತಾಯವೇ ಇಲ್ಲವೇ? ಬೆಳಗಾದರೆ ಕೋರ್ಟು, ಕಛೇರಿ. ಈ ವ್ಯವಹಾರಗಳಲ್ಲೇ ಜೋಕಾಲಿಯಾಡುವುದೆಂದರೆ ಬದುಕಿಗೆ ಯಾವ ಸೊಗಸು?' ಎಂದು ಅಂತರ್ಯ ತರ್ಕದ ತುರಿಮಣೆಯಮೇಲೆ ಘಾಸಿಗೊಂಡಿತ್ತು.

'ಮನಿಯಾರ್ಡರ್ ಸಾರ್—'

ನಾಲ್ಕು ಮೊಳ ಭೂಮಿ....ನಾಲ್ಕೇ ನಾಲ್ಕು ಮೊಳ ಭೂಮಿ....ಇಷ್ಟಕ್ಕಾಗಿ ಅದೆಷ್ಟು ಕಲಹ, ಎಂತೆಂತಹ ಅಕೃತ್ಯದ ವಿಷಾದಾಂತ ನಾಟಕ! ಮಾನವನ ಸುಗುಣ ಕರಗಿ ಹೋಗಿ ಸ್ವಾರ್ಥದ ಹುಚ್ಚು ಕಳ್ಳಿಯ ಬೆಳೆ........ಸ್ವಾರ್ಥ!—ಭೂಮಿಯ ಹಂಬಲ!!....ನ್ಯಾಯಾಲಯಕ್ಕೆ ಬರುವ ವ್ಯಾಜ್ಯಗಳಲ್ಲಿ ಹೆಚ್ಚಿನ ಸಂಖ್ಯೆ ಭೂಮಿಗೇ ಸಂಬಂಧಪಟ್ಟವು....ಭೂಮಿ-ಭೂಮಿ-ಭೂಮಿ....ಎಂತಹ ಹುಚ್ಚು?....

'ಮನಿಯಾರ್ಡರ್ ಸಾರ್....'

ಈಗಲೀಗ ಪೇದೆಯ ಸ್ವರ ಸ್ಪಷ್ಟವಾಗಿ ಕೇಳಿಬಂದಿತು.

ಮನಿಯಾರ್ಡರ್!....ಎಲ್ಲಿಂದ ಬಂದಿದೆ ಈ ಮನಿಯಾರ್ಡರ್?

ಎದ್ದು ಬಾಗಲು ತೆರೆದ.

'ಅಮ್ಮಾವರಿಗೆ ಸಾರ್ ಇದು, ತಮಗಲ್ಲ.'

ತನ್ನ ಹೆಂಡತಿಗೆ ಮನಿಯಾರ್ಡರ್!—ಅವಳಿಗೆಲ್ಲಿಂದ ಬಂದಿದೆ?

'ಅವರನ್ನು ಸ್ವಲ್ಪ ಕರೀತೀರ ಸಾರ್. ಹೊತ್ತಾಗುತ್ತೆ.'

'ಓ, ಅವರಿಲ್ಲವಲ್ಲಪ್ಪಾ. ಅವರ ತೌರಿಗೆ ಹೋಗಿದ್ದಾರೆ.'

'ಯಾವಾಗ ಬರ್ತಾರೆ ಸಾರ್?'

'ನಾಳೆ ಬರ್ತೀನೆ ಅಂತ ಪತ್ರ ಬರೆದಿದ್ದಾರಪ್ಪ.'

'ಹಾಗಾದರೆ ನಾಡಿದ್ದು ಇದನ್ನ ಪುನಹ ತರ್‍ತೀನಿ ಸಾರ್.'

'ಆಗಲಿ' ಎಂದವನು, ಪೇದೆ ನಾಲ್ಕು ಗಜ ಹೋಗುವುದರೊಳಗೆ ಏನೋ ಯೋಚಿಸಿಕೊಂಡು, ಚಪ್ಪಾಳೆ ತಟ್ಟಿ 'ಪೋಸ್ಟಮನ್'—ಎಂದು ಕರೆದ. ಪೇದೆ ಮುಖವನ್ನು ಕಸಿವಿಸಿಮಾಡಿಕೊಂಡೇ ಬಂದ—

'ಎಲ್ಲಯ್ಯಾ ಆ ಮನಿಯಾರ್ಡರ್ ಫಾರಮ್ಮನ್ನ ಹೀಗೆ ಕೊಡು. ಅದು ಎಲ್ಲಿಂದ ಬಂದಿದೆ ಎಂತ ಓದಿನೋಡ್ತೀನೆ.'

ಬೇಸರದಿಂದಲೇ ಪೇದೆ ಫಾರಮ್ಮನ್ನು ತೆಗೆದುಕೊಟ್ಟ.

ಆ ಫಾರಮ್ಮಿನಲ್ಲಿ ಅವನ ಕಣ್ಣಿಗೆ ಮೊದಲು ಕಾಣಿಸಿದ್ದು — ಇನ್ನೂರು ರೂಪಾಯಿಗಳ ಅಂಕಿ !....ಫಾರಮ್ಮಿನ ಕೆಳಭಾಗದಲ್ಲಿ ಹೆಂಡತಿ ಬರೆದ ಕತೆಗಾಗಿ ಬಹುಮಾನ ಎಂದು ನಮೂದಿಸಲಾಗಿತ್ತು.

ಅವನು ಊದಿದ ಬೆಲೂನಿನಂತಾದ....ತನ್ನ ಹೆಂಡತಿಗೆ ಮನಿಯಾರ್ಡರ್!— ಇನ್ನೂರು! ಇನ್ನೂರು ರೂಪಾಯಿಗಳಷ್ಟು ಭಾರಿ ಮೊಬಲಗು. ಅದೂ ಅವಳು ಬರೆದ ಒಂದು ಸಣ್ಣ ಕತೆಗಾಗಿ ! !

ಪೇದೆ ಹೊರಟುಹೋಗಿ ಎಷ್ಟೋವೇಳೆ ಕಳೆದಮೇಲೂ ಆತ ಹಾಗೆಯೇ ಸ್ತಂಭೀಭೂತನಾಗಿ ನಿಂತಿದ್ದ — ಒಮ್ಮೆಗೇ ಮಿಠಾಯಿ ಅಂಗಡಿಯ ಒಡೆತನ ಸಿಕ್ಕ ಮಗುವಿನಂತೆ! ಒಂದು ಕತೆಗೆ ಇನ್ನೂರು ರೂಪಾಯಿ—ಅದೂ ಕನ್ನಡದ ಒಂದು ಕತೆಗೆ !........ದಿಟವಾಗಿಯೂ ಅತಿ ತೀವ್ರಗತಿಯಲ್ಲಿ ಪರಿವರ್ತನೆಗೊಳ್ಳುತ್ತಿದೆ ಕಾಲ........

ಯಾರೋ ಕಕ್ಷಿಗಾರರು ಬಂದರು. ಅವರೊಡನೆ ಆಡಬೇಕಾದ ಮಾತಾಡಿ, ಕಳಿಸಿಕೊಟ್ಟು ಬಾಕಿಯಾಗಿದ್ದ ಇನ್ನೂ ಕೆಲವು ರೆಕಾರ್ಡುಗಳನ್ನು ಪರಿಶೀಲಿಸಿ, ಊಟಕ್ಕೆದ್ದ. ಹೋಟೆಲಿನ ಊಟ ಏಕೋ ರುಚಿಸಲಿಲ್ಲ. ಮಾರನೆಯ ದಿನವೇ ಬರಲಿದ್ದ ಮಡದಿಯ ಆಗಮನ ಇದಕ್ಕೆ ಕಾರಣವಿರಬಹುದು, ಪ್ರಾಯಶಃ—ಅಂತೂ ಊಟದ ಶಾಸ್ತ್ರ ಮುಗಿಸಿ ಮಲಗುವ ಕೋಣೆಗೆ ನಡೆದ. ಆ ದಿನ ಕೋರ್ಟಿಗೆ ರಜವಿದ್ದುದರಿಂದ ವಿರಾಮ, ಮುಗಿಯದ ದಸ್ತೈಯಾಗಿತ್ತು. ಹೋಗಿ ಮಂಚದ ಮೇಲೆ ಉರುಳಿಕೊಂಡ. ಮತ್ತೊಮ್ಮೆ ಕೆಲಸವಿಲ್ಲದ ಮನಸ್ಸು ಆಲೋಚನೆಯ ಸರಸ್ಸಿನಲ್ಲಿ ಈಜು ಹಾಕತೊಡಗಿತು—ತನ್ನ ಹೆಂಡತಿಗೆ ಬಹುಮಾನ—! ಕಥಾಸ್ಪರ್ಧೆಯಲ್ಲಿ ಅವಳು ಬರೆದ ಒಂದು ಕತೆಗೆ ಪ್ರಥಮಸ್ಥಾನ ! !....ಹೃದಯ ಅರಳಿ ಸಂತಸದ ಹೂವಾಯಿತು. ನೆನಪಿನ ಕುದುರೆಯೇರಿ ಹೊರಟಿತು ಚಿತ್ತ....

—ಒಂದು ಮಧ್ಯಾಹ್ನ. ಕೋರ್ಟಿಗೆ ಹೀಗೆ ರಜವಿದ್ದ ಒಂದು ಮಧಾಹ್ನ.... ಊಟಮಾಡಿ ಮಂಚದ ಮೇಲೆ ಪವಡಿಸಿದ್ದರು ಇಬ್ಬರು.

ಅವನು ಎದ್ದಾಗ—

ಅವಳು ತನ್ನ ಕೋಣೆಯಲ್ಲಿ ಏನನ್ನೋ ಬರೆಯುತ್ತಿದ್ದಳು.

ಏನು ಬರೆಯುತ್ತಿರಬಹುದು ?

ತಂದೆಗೊ, ಅಣ್ಣನಿಗೋ ಪತ್ರವಿರಬಹುದೆ ?........

ಅವನು ನಿಶ್ಶಬ್ದನಾಗಿ ನಿಂತಿದ್ದ. ಆದರೂ ಹೆಣ್ಣಿನ ಅಂತರಾತ್ಮಕ್ಕೆ ಅವನ ಆಗಮನದ ತಾರು ಹೇಗೋ ತಲುಪಿತ್ತು.

' ಗೊತ್ತಾಯಿತು ಬನ್ನಿ.'

ಆ ಅಕ್ಷರಗಳ ಜಲತರಂಗಿನ ಮೇಲೆ ಅವಳ ನಗೆಯ ಸರಸಾಲಾಪ.

ಸಮೀಪಿಸಿ,

' ನೀನೆಲ್ಲಿ ಹೊರಟುಹೋದೆಯೊ ಎಂದು ದಿಗಿಲಾಗಿತ್ತು' ಎಂದು ನಕ್ಕ.

' ದಿಗಿಲೊ ? — ಅಥವಾ ಪೀಡೆ ತೊಲಗಿ ಹೋಯಿತು ಅಂತ ಸಂತೋಷವೋ ?....'

' ಛೆ, ಛೆ. ಎಂಥ ಮಾತಾಡ್ತೀಯೆ ? '

ಅವಳು ಮೌನಾಂಗಿ. ಆದರೂ ಮುಖದಲ್ಲಿ ಕೀಟಲೆಯ ಅನುಮಾನದ ಮುದ್ರೆ.

' ಹೋಗಲಿ. ಅದೇನು ಬರೀತಾ ಇದೀಯೋ, ಹೇಳು-ಪತ್ರವೇ ? '

' ಹೌದು. ಪ್ರೇಮಪತ್ರ,' ಎನ್ನುವಾಗ ಅವಳ ಕಣ್ಣಿನಿಂದ ಸರಸದ ನಗು ತುಳುಕಿತು.

' ಆ! ಪ್ರೇಮಪತ್ರ–ಯಾರಿಗೊ ? '

ತಾವರೆಯ ದಂಟಿನಂತೆ ಬಳುಕಿ ಅವಳು

' ಯಾ–ರಿ–ಗೊ....' ಎಂದು ಕುಲುಕಿದಳು.

ಅವಳ ಹುಡುಗಾಟದ ರಸಗೋಲ ಸದಾಕಾಲವೂ ಅವನಿಗೆ ಪ್ರಿಯವಾದುದು. ಅದಕ್ಕೆ ಉಚಿತವಾದ ಪ್ರತಿಫಲ ಕೊಟ್ಟು, ಏನು ಬರೆದಿರಬಹುದೆಂಬ ಕುತೂಹಲದಿಂದ ಮೇಜಿನ ಮೇಲೆ ಬಾಗಿ ನೋಡಿದ.

' ಏನಿದು ?....ಪ್ರೇಮಪತ್ರ—ಸಣ್ಣ ಕತೆ....ಓ, ಕತೆ ಬರೀತಾ ಇದೀಯೊ ? '

‘ ಯಾಕ್ರಿ, ಭಾವಿ ಹೆಗ್ಗದ ಹಾಗೆ ಉದ್ದಕ್ಕೆ ಎಳೀತೀರಿ ರಾಗಾನ.... ನಮ್ಮಂತಹ ಹೆಂಗಸರು ಕತೆ ಬರೀಬಾರದು ಎಂತ ನಿಮ್ಮ ಅಭಿಪ್ರಾಯವೇನು ? ’

‘ ಶಾಂತಂ ಪಾಪಂ, ಅಂಥದೇನಿಲ್ಲ, ಬರೀಬಹುದು. ಆದರೆ ಕೊಂಚ ಅನುಭವ ಪಡೆದು ಬರೆದರೆ ಕತೆಗೆ ಶಕ್ತಿ, ಹದ ಎಲ್ಲಾ ಬರುತ್ತೆ ಎಂತ ನನ್ನ ನಂಬಿಕೆ.’

‘ ಅನುಭವ, ಅನುಭವ.... ಬರುತ್ತೆ—ಹಾಗೇ ಬರೀತಾ ಇದ್ದರೆ.... ಹಾಡುತ್ತಾ, ಹಾಡುತ್ತಾ ರಾಗ ಎಂದು ಹೇಳೊಲ್ಲವೆ ?’ ಎಂದು ಅವನ ವಾದವನ್ನು ಹಾಲುಬಾಯಿ ನುಂಗುವಂತೆ ನುಂಗಿ ತೇಗಿದ್ದಳು—

–ಈ ಸಂಗತಿ ನಡೆದ ಬಳಿಕ ವಕೀಲವೃತ್ತಿ ಅವನ ಕಾಲವನ್ನೂ ಬುದ್ಧಿಯನ್ನೂ ಪೂರ್ಣವಾಗಿ ಉಪಯೋಗಿಸಿಕೊಂಡಿತ್ತು. ಹೆಂಡತಿ ಬರೆಯುತ್ತಿದ್ದಾಳೆಯೋ ? ಏನನ್ನು ಕುರಿತು ಬರೆಯುತ್ತಿದ್ದಾಳೆ ? ಅವಳು ಬರೆಯುವ ಕತೆಗಳಲ್ಲಿ ಏನಾದರೂ ನವೀನತೆ ಮತ್ತು ಸತ್ವಗಳು ಅಡಕವಾಗಿದೆಯೋ ?–ಎಂದು ವಿಚಾರಮಾಡಿ ಅರಿಯಲು ಅವನಿಗೆ ಬಿಡುವೇ ಸಿಗಲಿಲ್ಲ........

ಯೋಚನೆಯು ಲಿಟ್ಮ್ಯಾಸನ್ನು ಮೆಲ್ಲುತ್ತ ಮನಸ್ಸು ಸವತಿಯಂತೆ ನಿದ್ದೆಯಿಂದ ವಂಚಿತವಾಯಿತು. ಹಾಸಿಗೆ ಬಿಟ್ಟೆದ್ದು ಪುಸ್ತಕದ ಕಪಾಟಿನಿಂದ ಗ್ರಹಾಮ್ ಗ್ರೀನರ ಕಾದಂಬರಿಯೊಂದನ್ನು ಕೈಗೆತ್ತಿಗೊಂಡ.

ಆ ಪುಸ್ತಕ ತೆರೆದಾಗ—ಒಳಗೆ, ತನ್ನ ಹೆಂಡತಿ ಬರೆದ ಒಂದು ಕತೆಯ ಹಸ್ತಪ್ರತಿ ಗೋಚರವಾಯಿತು. ಕತೆಯ ಹೆಸರು : ನಾಲ್ಕು ಮೊಳ ಭೂಮಿ.

ಸಿಳ್ಳುಹಾಕಿ ಆ ಕತೆಯನ್ನು ಓದಲಾರಂಭಿಸಿದ : ವೈಶಾಖ ಸುಡು ಬಿಸಿಲಿನ ಕಥಕ್ಕಳಿಯಾಡುತ್ತಿತ್ತು. ಆ ಹಿಗಣಗುಣಿತದಲ್ಲಿ ಮರದ ಎಲೆಗಳ ಹಸಿರು ಹಣ್ಣಾಗುತ್ತಿದೆ. ಅಂಥ ವೇಳೆಯಲ್ಲಿ ಶಿರಬಾಗಿ ಉಳುತ್ತಿದ್ದಾನೆ ಕಾಳಿಂಗಯ್ಯ. ಪಕ್ಕದಲ್ಲೇ ಅವನನ್ನು ಅನುಸರಿಸಿ ಹೆಜ್ಜೆ ಹಾಕುವ ಅವನ ಮಾಮನ ನೆರಳು ಕಪ್ಪಾದ ಆತ್ಮದ ಪ್ರತಿಬಿಂಬದಂತಿದೆ. ಅವನು ಉಳುತ್ತಿರುವಂತೆ ದೇಹದಲ್ಲೆಲ್ಲಾ ಬೆವರಿನ ಕಾವೇರಿ ಬಸಿಯುತ್ತಿದೆ.

ನೇಗಿಲ ಭೂಮಿಗೆ ‘ತೆರೆ’ ಬೈತಲೆಗಳನ್ನು ತೆಗೆಯುತ್ತ ಸಾಗಿದೆ–ನಿಧಾನವಾಗಿ, ಆದರೆ ದೃಢವಾಗಿ, ನೇಗಿಲ ನೊಗಕ್ಕೆ ಕಟ್ಟಿದ ಬಿಳಿ ಬಣ್ಣದ ಎತ್ತುಗಳು, ಅವನ ಕಪ್ಪು ದೇಹ, ಆ ದೇಹಕ್ಕೆ ಸುತ್ತಿದ ಬಿಳಿಯ ತುಂಡು ಪಂಚೆ ಮತ್ತು ‘ಪೇಟ’. ಆ ನೋಟ, ಹಿಂಬದಿಗಿದ್ದ ಗುಡ್ಡದ ಸಾಲಿನ ಮಂಕು ನೀಲಿ—ಹಸುರಿನ ಹಿನ್ನೆಲೆಯಲ್ಲಿ

ಚಿತ್ರಪಟದಂತೆ ತೋರುವುದು, ಆದರೆ ಆ ದೃಶ್ಯದ ಒಂದು ಅಂಶವಾಗಿದ್ದ ಕಾಳಿಂಗಯ್ಯನಿಗೆ ಮಾತ್ರ ಅದರ ಸೌಂದರ್ಯವನ್ನು ಸವಿಯುವುದು ಸಾಧ್ಯವಿಗಲಿಲ್ಲ. ಅವನು ಕೇವಲ ಉಳುವ ಯಂತ್ರವಾಗಿದ್ದ. ಸೂರ್ಯನೇಳುವ ಮುನ್ನ ಎದ್ದು 'ಆರು' ಕಟ್ಟಿದನೆಂದರೆ ಹೊಲದಿಂದ ಅವನು ಮತ್ತೆ ಮರಳುವುದು ಸಾಯಂಕಾಲವೇ.

ಕಾಳಿಂಗಯ್ಯ ಉಳುತ್ತಲೇ ಇದ್ದ. ಸಾಧಾರಣವಾಗಿ ಅವನ ಮನಸ್ಸು ನೀರಿಲ್ಲದ ಮಡಕೆಯಂತೆ ಬರಿದು. ಆದರೆ ಇಂದು ಮಾತ್ರ ಆ ಮನದ ಮಡಕೆಯಲ್ಲಿ ಚಿಂತೆಯ ಸಣ್ಣ ಕಲ್ಲೊಂದು ಬಿದ್ದಿದೆ. ಚಿಂತೆಗೆ ಕಾರಣ — ನಾಲ್ಕು ಮೊಳ ಭೂಮಿ.

ನಾಲ್ಕು ಮೊಳ ಭೂಮಿ !

ಕೇವಲ ನಾಲ್ಕೇ ನಾಲ್ಕು ಮೊಳ ಭೂಮಿ ! !

ಕಾಳಿಂಗಯ್ಯನ ಮುದಿ ಕಣ್ಣುಗಳು ಭೀತಿಯ ಗುಹೆಯಲ್ಲಿ ದಾರಿ ತಪ್ಪಿದವ ನಂತಾಗಿದ್ದವು. ಹೊರಗಿನ ದೃಷ್ಟಿ ಮಂಕಾಗಿ, ಒಳಗಿನ ಕಣ್ಣು ತೆರೆದಿತ್ತು.

ಆಗ—

ತಾನು ಚಿಕ್ಕವನಾಗಿದ್ದಾಗ,

ಹರಿಕಥೆ ದಾಸನೊಬ್ಬ ನೆರೆಹಳ್ಳಿಯಲ್ಲಿ ಕಥೆ ಮಾಡುತ್ತಾ ನುಡಿದಿದ್ದ,

'ಭೂಮಿಗಾಗಿ, ಹಿಡಿ ಮಣ್ಣಿಗಾಗಿ, ವಿಪರೀತ ಆಸೆ ಪಡಬೇಡಿ. ಅದರ ದೆಸೆಯಿಂದಲೇ ಕುರುವಂಶ ನಿರ್ನಾಮವಾಯಿತು.'

ಹೌದಲ್ಲವೆ? ಪಾಂಡವರ ಪರವಾಗಿ ಶ್ರೀಕೃಷ್ಣ ಪರಮಾತ್ಮ ಕೊನೆಗೆ ಐದೇ ಐದು ಗ್ರಾಮಗಳನ್ನು ಪಾಂಡವರಿಗೆ ಬಿಟ್ಟು ಕೊಟ್ಟರೂ ರಾಜಿ ಮಾಡಿಸುವುದಾಗಿ ಆಶ್ವಾಸನೆ ಕೊಡಲಿಲ್ಲವೆ? ಆಗಲೂ ಅವಿವೇಕಿ ದುರ್ಯೋಧನ ಸೊಕ್ಕಿನಿಂದ 'ಐದು ಗ್ರಾಮಗಳ ಮಾತು ಹಾಗಿರಲಿ; ಐದು ಹೆಜ್ಜೆ ಭೂಮಿಯನ್ನೂ ಕೂಡ ಪಾಂಡವರಿಗೆ ಕೊಡಲಾರೆ' ಎಂದು ಹಟ ಹಿಡಿದು ಸರ್ವನಾಶ ಮಾಡಿಕೊಳ್ಳಲಿಲ್ಲವೆ?

ಹಾಗೇ ತನ್ನ ವರ್ತನೆಯೂ ಮುಂದಿನ ದಿನಗಳಲ್ಲಿ ಅವಿಚಾರದ ಜಾರು ಬಂಡೆಯ ಮೇಲೆ ಹೆಜ್ಜೆಯಿಟ್ಟಿತ್ತು. ಹೌದು ಕೇವಲ ನಾಲ್ಕು ಮೊಳ ಭೂಮಿಗಾಗಿ! ನಾಲ್ಕೇ ನಾಲ್ಕು ಮೊಳ ಭೂಮಿ !!

ಕುರುವಂಶದ ಕಥೆಯೇನೋ ಎಂದೋ ಮುಗಿಯಿತು. ಆದರೆ ತನ್ನ ಕಥೆ! ಇದರ ಮುಕ್ತಾಯ ಹೇಗೊ? ತಾನು ಮಾಡಿದ ಯಃಕಶ್ಚಿತ್ ಕೆಲಸ ಯಾವ ದಂಡ ವನ್ನು ತೆಗೆದುಕೊಳ್ಳಲಿರುವುದೊ !

ಕಾಳಿಂಗಯ್ಯ ಉಳುತ್ತಲೇ ಇದ್ದ. ನೇಗಿಲು ಮುಂದುವರಿದಂತೆ ಭೂಮಿ ಬಾಯಿ ತೆರೆದಂತಾಗಿ ಎರಡೂ ಪಕ್ಕದಲ್ಲಿ ಉದ್ದಕ್ಕೂ ಕೆಂಪು ಮಣ್ಣಿನ ರಾಶಿ ರಾಶಿ ಬೀಳುತ್ತದೆ. ಅದನ್ನವನು ನೋಡುತ್ತಲೇ ನಡೆದಿದ್ದ.

ನಾಲ್ಕು ಮೊಳ ಭೂಮಿ. ಇನ್ನೊಬ್ಬನಿಗೆ ಸೇರಿದ ನೆಲ. ಅದಕ್ಕೆ ಅವನು ಆಸೆಪಟ್ಟಿದ್ದ–ಇನ್ನೊಬ್ಬನ ಹೆಂಡತಿಗೆ ಆಸೆಪಟ್ಟ ಇಂದ್ರ....

ಪಕ್ಕದ ತೆಂಗಿನ ಮರದ ಹಟ್ಟಿ ದೇವಪ್ಪನದು. ಅದರಲ್ಲಿ ಅವನು ನಾಲ್ಕು ಮೊಳ ಭೂಮಿಯನ್ನು ಬಲಾತ್ಕಾರದಿಂದ ಅಕ್ರಮವಾಗಿ ಉತ್ತು 'ಒತ್ತುವರಿ' ಮಾಡಿ ಕೊಂಡಿದ್ದ. ದೇವಪ್ಪನಿಗಿದ್ದ ಆಸ್ತಿಯೆಲ್ಲಾ ಒಟ್ಟು ಮೂರು ಎಕರೆ ಚಿಲ್ಲರೆ ಜಮೀನು–ಹೆಚ್ಚು ಕಮ್ಮಿ ಅವನ ಜಮೀನಿನಷ್ಟೇ!

ಇದ್ದ ಸ್ವಲ್ಪ ಜಮೀನಿನಲ್ಲಿಯೂ ಆದ ಈ ದುರಾಕ್ರಮಣದಿಂದ ದೇವಪ್ಪ ದಿಕ್ಕು ಕೆಟ್ಟ ನಾವಿಕನಂತಾದ. ಬೈಗಳ ಸುರಿಮಳೆ ಬೀರಿದ. ಕೊನೆಗೆ ಹೊಡೆದಾಟಕ್ಕೂ ನಿಂತ. ಕೈಗೆ ಕೈ ಮಿಲಾಯಿಸಿತು.

ಆದರೆ ಭೀಮಕಾಯದ ಕಾಳಿಂಗನಿಗೇ ಜಯ ಲಭಿಸಿತ್ತು. ದೇವಪ್ಪ ಗ್ರಾಮ ಪಂಚಾಯಿತಿಗೆ ದೂರುಕೊಟ್ಟ.

ಗ್ರಾಮ ಪಂಚಾಯಿತಿ ನ್ಯಾಯ!—ಹುಂ....ಅಲ್ಲಿ ದೊರೆಯುವ ನ್ಯಾಯ ಬಲಾಢ್ಯನ ಬಾಯಿಗೇ ಬೀಳುವ ದೋಸೆ!!

ನ್ಯಾಯ ಕಾಳಿಂಗನಂತೆಯೇ ಆಯಿತು.

ಅದಕ್ಕೂ ಧೃತಿಗೆಡದೆ ದೇವಪ್ಪ ಮೇಲಧಿಕಾರಿಗಳ ಬಳಿಗೆ ದೂರಿನ ಹೊರೆ ಹೊತ್ತು ಹೋದ. ಅಧಿಕಾರಿ ಅಳತೆಗೆ ಬಂದರು.

ಆದರೆ—

ಅಳತೆಗೆ ಹೋಗುವ ಮುನ್ನ ಕಾಳಿಂಗ ಅಧಿಕಾರಿ ದೇವರಿಗೆ ಮನೆಯಲ್ಲಿ ಉಪ್ಪಿಟ್ಟು ಕಾಫಿ, ಪೂಜೆ ಮಾಡಿ ಐದು ರೂಪಾಯಿಯ ನೈವೇದ್ಯ ಮಾಡಿದ. ಈ ವಿಶೇಷ ಪೂಜೆ ಯಿಂದ ಸಂತೃಪ್ತರಾದ ಅಧಿಕಾರಿ ದೇವರು ಕಾಳಿಂಗಯ್ಯ 'ಒತ್ತುವರಿ' ಮಾಡಿದ್ದ ನಾಲ್ಕು ಮೊಳ ಭೂಮಿಯ ಪ್ರದೇಶವನ್ನು ಉದ್ದಕ್ಕೂ ಅಳತೆ ಮಾಡಿ, ಅವನ ಜಮೀನಿಗೇ ಸೇರಿಸಿ ಕಲ್ಲು ನೆಡಿಸಿಬಿಟ್ಟರು.

ಕಾಳಿಂಗಯ್ಯ ಉಳುತ್ತಲೇ ಇದ್ದ. ಮೇಲೆ ಉರಿಯುವ ರವಿ, ಕುದಿಯುವ ಲಾವಾರಸ—

....ಕಲ್ಲು ನೆಡೆಸಿಬಿಟ್ಟರು. ದೇವಪ್ಪನ ಎದೆಗೇ ಗುರಿಯಿಟ್ಟು ಹೊಡೆದ ಶಿಲೆ. ದೇವಪ್ಪ ದಿಗ್ಭ್ರಾಂತನಾದ.

ಸೂರ್ಯ ಚಂದ್ರರಷ್ಟೇ ಶಾಶ್ವತವೆಂದು ಅವನು ನಂಬಿದ ಭೂಪ್ರದೇಶ ಇನ್ನು ಅವನದಲ್ಲ !

ಇನ್ನು ಅವನದಲ್ಲವೇ ಅಲ್ಲ ! !

ದೇಶದ ಕಾನೂನೇ ಹಾಗೆ ಹೇಳಿಬಿಟ್ಟಿದೆ.

ಮುಂದೇನು ಮಾಡುವುದು ?

ಬುದ್ಧಿ ತನ್ನ ಚಲನೆಯನ್ನೇ ಕಳೆದುಕೊಂಡಿದೆ—ಬೆಲ್ಟು ಕತ್ತರಿಸಿ ಹೋದ ಮೋಟಾರ್ ಎಂಜಿನ್.

ಕಣ್ಣು ತೆರೆದರೆ ಏರಿ ಬರುವ ಶೂನ್ಯದ ಕಡಲಿನ ಮಹೋನ್ನತ ಅಲೆ.

ದೇವಪ್ಪ ಕೊರಗಿನಿಂದ ಹಾಸಿಗೆ ಹಿಡಿದ....

ಕಾಳಿಂಗಯ್ಯ ಉಳುತ್ತಲೇ ಇದ್ದ. ಅವನ ಕಾಲುಗಳೂ ಸಣ್ಣಗೆ ನಡುಗುತ್ತಿದ್ದವು—

....ಹಾಸಿಗೆ ಹಿಡಿದ ದೇವಪ್ಪ ಪುನಹ ಮೇಲೇಳಲೇ ಇಲ್ಲ.

ಕಾಳಿಂಗಯ್ಯನ ಕಾಲುಗಳೂ ಮುಂದೆ ಏಳಲೇ ಇಲ್ಲ—ನೆಲಕ್ಕೆ ಹೊಡೆದ ಗೂಟ ! ಅವನ ಕಣ್ಣಿನ ಟೆಲಿಸ್ಕೋಪಿನಲ್ಲಿ ಹಲ್ಲು ಕಿರಿದು ಬೆದರಿಸುವ ಭಾವ ದೃಶ್ಯದ ಆರ್ಭಟ : 'ನನ್ನ ನೆಲ ತಕ್ಕೊಂಬುಟ್ಟೆಯಾ?....ಆ ಮಣ್ಣಿಗೆ ನನ್ನ ರಕ್ತ ಸುರಿಸೋವ್ನಿ ಕಣೋ....ಪಾಪಿ—ದೇವರು ನಿಂಗೆ ಏಳಿಗೆ ಕೊಟ್ಟಾನಾ ?....ನನ್ನ ಒಡವೆಗೆ ಅಪೇಕ್ಸೆ ಮಾಡಿ ನನ್ನ ಜೀವ ಕೊಂದುಬಿಟ್ಟದ್ದೀಯೆ. ಇರಲಿ ನನ್ನ ಮಗ ಸತ್ತವಾಗೂ ಸೇಡು ತೀರಿಸ್ಕೊತಾನೆ, ಗ್ಯಾಪಕ ಮಡಕ್ಕೊ. ರಕ್ತಕ್ಕೆ ರಕ್ತ ಕೆಡವಿ ಆ ನೆಲಾನ ತಿರುಗ ಸಂಪಾದ್ನೆ ಮಾಡ್ತಾನೆ, ಕಂಡ್ತ....ಹುಸಾರು ಗೆದ್ದೆ ಅಂದುಕೋ ಬ್ಯಾಡ....ನಿನ್ನ ಕತೆ ಮುಗಿಸಿದರೇ ನನ್ನ ಪರಮಾತ್ಮಕ್ಕೆ ಸಮಾಧಾನ. ಗೊತ್ತಾಯಿತಾ ? '

ಸತ್ತ ದೇವಪ್ಪನ ದನಿಯೇ ನಿಸ್ಸಂದೇಹವಾಗಿಯೂ ! ಮುದುಕ ಕಾಳಿಂಗಯ್ಯ ಥರ ಥರನೆ ನಡುಗಲಾರಂಭಿಸಿದ–ಹೊಸದಾಗಿ ಈಜು ಕಲಿಯುತ್ತಿರುವ ಹಸುಳೆ ನೀರಿನೊಳಗೆ ಭೀಕರ ಮೊಸಳೆಯನ್ನು ಕಂಡಂತೆ.

ಅವನ ಕಣ್ಣು ಹೆದರಿ ಹೆದರಿ ಅನತಿ ದೂರದಲ್ಲಿ-ಪಕ್ಕದ ಹೊಲದಲ್ಲೇ ಉಳುತ್ತಿದ್ದ ದೇವಪ್ಪ ಮಗನ ವಜ್ರಕಾಯವನ್ನು ನೋಡಿತು.

ಯಕ್ಷಗಾನದ ಅಭಿಮನ್ಯುವಿನಂತೆ ಬೆಳೆದಿದ್ದಾನೆ ಹುಡುಗ. ಅವನು ಮನಸ್ಸು ಮಾಡಿದರೆ........

'ಅಯ್ಯೋ, ನಾನು ಮುದುಕನಾಗಿಬಿಟ್ಟೆ, ಹಿಂದಿನ ಶಕ್ತಿ ಈಗ ಕಿಂಚಿತ್ತೂ ಇಲ್ಲ. ದೇವಪ್ಪನ ಮಗನ ಮೈಯಲ್ಲಿ ದೈತ್ಯಬಲ ತುಂಬಿದೆ, ಖಂಡಿತವಾಗಿಯೂ ಅವನು ಸೇಡು ತೀರಿಸಿಕೊಳ್ಳುತ್ತಾನೆ. ಆ ಜಮೀನನ್ನು-ನಾನು ಮಾಡಿದ ಹಾಗೇ ಜುಲುಮೆಯಿಂದ ಉತ್ತು ವಶಪಡಿಸಿಕೊಳ್ಳುತ್ತಾನೆ. ವಶಪಡಿಸಿಕೊಂಡೇ ಬಿಡ್ತಾನೆ. ನನ್ನ ಮಕ್ಕಳು ಇನ್ನೂ ಚಿಕ್ಕವರು....ಶಕ್ತಿ ಇದ್ದವರ ಕಾರ್ಯ ಮುಗಿದುಹೋಯ್ತು. ಎಲ್ಲಾ ಮುಗಿದುಹೋಯ್ತು-ಆ ಅಧಿಕಾರಿಗೆ ಅನ್ಯಾಯವಾಗಿ ಐದು ರೂಪಾಯಿ ಕಳೆದೆನಲ್ಲಾ ಕೆಟ್ಟೆ ಅಯ್ಯೋ, ಕೆಟ್ಟೆ. ಕೆಟ್ಟೆ....'

ಒಳಗೆ ಭೀತಿಯು ಬಿರುಗಾಳಿ ಬೀಸಲಾರಂಭಿಸಿತು.

ಬಿರುಗಾಳಿ-ಅದರ ಗಾಳಿಗೆ ಸಿಕ್ಕಿ ಬಾಳೆ

ಧೊಪ್—!

ಕಾಳಿಂಗಯ್ಯ ತೂರಾಡಿ ತೂರಾಡಿ ಕೆಳಗೆ ಬಿದ್ದುದನ್ನು ಕಂಡು ದೇವಪ್ಪನ ಮಗ ಧಾವಿಸಿ ಬಂದ, 'ಆರು' ನಿಲ್ಲಿಸಿ. ಕಾಳಿಂಗಯ್ಯನಿಗೆ ಪ್ರಜ್ಞೆ ಹೋದಂತಿತ್ತು. ಒಡನೆಯೇ ಕೆರೆಗೆ ಓಡಿ, ನೀರು ತಂದು ಶುಶ್ರೂಷೆ ಮಾಡಿದ.

ಕೊಂಚ ಹೊತ್ತಿನಲ್ಲಿ ಕಾಳಿಂಗಯ್ಯ ಕಣ್ಣು ತೆರೆದ, ನಿಧಾನವಾಗಿ. ಅವನ ದೃಷ್ಟಿ ಮೊದಲು ತೆಗೆದ ಫೋಟೋ-ದೇವಪ್ಪನ ಮಗನ ಮುಖ. ಆ ಮುಖವನ್ನು, ಕಂಡು ಮೃತ್ಯು ದರ್ಶನ ಮಾಡಿದವನಂತಾದ-ಗರುಡನನ್ನು ಸಂದರ್ಶಿಸಿದ ಸರ್ಪ! ಕಣ್ಣು ತಟ್ಟನೆ ಮುಚ್ಚಿಹೋಯಿತು. ತುಟಿಗಳು ಸತ್ತ ಸ್ವರದಲ್ಲಿ ಮಾತಿನ ಜಪ ಮಾಡುತ್ತಿದ್ದವು.

'ನಾಕು ಮೊಳ ಭೂಮಿ-ನಾಕೇ ನಾಕು ಮೊಳ ಭೂಮಿ-ಕೋಪ ಮಾಡಿಕೊ ಬ್ಯಾಡ ಕಣಪ್ಪಾ....ನನ್ನ ಸಂಸಾರ ದೊಡ್ಡದು-ಅದ ಸಾಕಕ್ಕೆ ಆ ಕೆಲಸ ಮಾಡಬುಟ್ಟೆ ....ನನ್ನ ಮಾತು ನಂಬು ಮಗ....ಸಂಸಾರ ಸಾಕಕ್ಕೆ ಆ ಕೆಲ್ಸ ಮಾಡ್ದೆ. ನಾನು ದೇವರಾಣೆಗೂ—ಸಂಸಾರ ಸಾಕಕ್ಕೆ........ಸತ್ತವಾಗುವೆ—ಸಂಸಾರ ಸಾಕಕ್ಕೆ........ ಅಯ್ಯಯ್ಯೋ ನನ್ನ ಕೊಂದುಹಾಕ ಬ್ಯಾಡಕನೋ....ಹೋದೆ, ಹೋದೆ....ಸತ್ತೆ ಸತ್ತೆ....ಮುಗಿಸಿಬುಟ್ಟ—ನನ್ನ ಕತೆ ಮುಗಿಸೇ ಬುಟ್ಟ.'

ಬಾಯಿಯ ಬಾಗಿಲುಗಳು ಮುಚ್ಚಿದವು—ಯಾವ ಕಾಲಕ್ಕೂ. ದೇವಪ್ಪನ ಮಗ ಮಿಕಿ ಮಿಕಿ ನೋಡುತ್ತಿದ್ದ-ಇದೇ ಕಣ್ಣು ತೆರೆದ ಶಿಶುವಿನ ಎದುರಿಗೇ ನಾಲ್ಕು ಮೊಳ ಭೂಮಿಗಾಗಿ ನಡೆದ ನಾಟಕ!

* * * *

ಕತೆಯನ್ನು ಓದಿ ಲಾಯರು ತಲೆ ದೂಗಿದ. ಆದರೆ ಏಕೊ ಅವನಿಗೆ ಸಂಶಯವಾಯಿತು, ಹಸ್ತಪ್ರತಿ ಗಂಡಸಿನ ಕೈಬರೆಹದಂತಿತ್ತು. ಸೂಕ್ಷ್ಮವಾಗಿ ಪರೀಕ್ಷಿಸಿದಾಗ ಕೊನೆಯಲ್ಲಿ ಪುಟ್ಟದಾಗಿ 'ಸಂಜೀವಿ' ಎಂದು ಬರೆದಿತ್ತು. ಅದನ್ನು ಶಾಯಿಯಿಂದ ಚೆನ್ನಾಗಿ ಹೊಡೆದಿತ್ತು.

ಲಾಯರ ಸಂಶಯ ದೃಢವಾಯಿತು....ಸಂಜೀವಿ-ತನ್ನ ಹೆಂಡತಿಯ ಸೋದರ ಮಾವ....ಅವನು ಮೊನ್ನೆ ಮೊನ್ನೆ ಮೃತನಾದ. ಅವನು ಲಲಿತಳನ್ನು ಬಹುವಾಗಿ ಪ್ರೀತಿಸುತ್ತಿದ್ದನೆಂದು ಅವಳೇ ಆಗಾಗ ಹೇಳುತ್ತಿದ್ದಳು. ಲಲಿತ ಹಾಗಾದರೆ ಅವನ ಕತೆಗಳನ್ನೇ ತನ್ನ ಹೆಸರಿನಲ್ಲಿ ಪ್ರಕಟಿಸುತ್ತಿದ್ದಳೆ?....ನಾಲ್ಕು ಮೊಳ ಭೂಮಿ! ಇದು ಅವನು ಬರೆದ ಕತೆಯೇ?

—"ಚದುರಂಗ"

# ತುಂಬಿದ ಕೊಡ

ಎರಡು ಗಂಟೆಯಾಗಿತ್ತು. ಬೆಳಿಗ್ಗೆ ಎದ್ದೊಡನೆಯೇ ಹಳ್ಳಿಯ ಕಡೆಗೆ ಕಾಹಿಲೆಯವರನ್ನು ನೋಡಲು ಹೋಗಿದ್ದ ಗಿರಿಯು ಆಗತಾನೆ ಮನೆಗೆ ಹಿಂತಿರುಗಿದ್ದನು. ಆ ಉರಿಬಿಸಿಲಿನಲ್ಲಿ ಸೈಕಲ್ ಹೊಡೆದು ಸಾಕಾಗಿ ಹೋಗಿತ್ತು. ಹೋಗಲಪ್ಪ, ಹೋದ ಕೆಲಸದ ಪ್ರತಿಫಲವಾಗಿ ಸಾಕಷ್ಟು ಫೀಜು ಸಿಕ್ಕಿದೆಯೇ ? ಅದೂ ಇಲ್ಲ.

'ಅಲ್ಲಿ, ನಿಮ್ಮಲ್ಲಿಗೆ ಬಂದಾಗ ಕೊಡುತ್ತೇವೆ' ಎಂದು ಹೇಳಿದವರೇ ಎಲ್ಲರೂ ! ಅಲ್ಲದೆ, ಹೊಟ್ಟೆಯಲ್ಲೋ ದೊಂಬರಾಟ ನಡೆದಿತ್ತು ! ಮನೆಗೆ ಬಂದವನೇ,—'ಇದೇನು ಇವತ್ತು ತುಂಬಾ ಹೊತ್ತಾಯಿತಲ್ಲಾ' ಅಂತ ಹೆಂಡತಿ ಕೇಳಿದ ಪ್ರಶ್ನೆಗೆ ಉತ್ತರ ಹೇಳುವಷ್ಟು ಸಹನೆ ಸಹ ಇರಲಿಲ್ಲ—ಹ್ಯಾಟ್ ತೆಗೆದು ಮಂಚದಮೇಲೆ ಬಿರ್ರನೆ ಬಿಸಾಕಿದ; ಕೋಟ್ ಬಿಚ್ಚುವುದರಲ್ಲಿದ್ದ.

'ಸ್ವಾಮಿ, ಸ್ವಾಮಿ........' ಅಷ್ಟರಲ್ಲಿ ಹೊರಗೆ ಯಾರೋ ಕೂಗಿದರು.

'Damn that fellow ! ಇವರಿಗೆ ಹೊತ್ತು ಗೊತ್ತು ಏನೂ ಇಲ್ಲ ಅಂತ ತೋರುತ್ತೆ', ಎಂದು ಗೊಣಗುಟುತ್ತಾ ಹೊರಕ್ಕೆ ಬಂದನು.

'ಸ್ವಾಮಿ....'

'ಏನೋ ಅದು. ಆಮೇಲೆ ಬಾರೋ.'

'ಬೆಳಗಿನಿಂದ ನಾಲ್ಕು ಸಾರಿ ಬಂದು ಹೋಗಿದ್ದೇನೆ ಸ್ವಾಮಿ.'

'ಯಾರಿಗೆ ಏನಾಗಿದೆಯೋ, ಏನು ಬೇಕೋ'—ಸ್ವಲ್ಪ ಸಿಡುಕಿನಿಂದಲೇ ಈ ಪ್ರಶ್ನೆಯನ್ನು ಕೇಳಿದ.

'ಅಲ್ಲ ಸ್ವಾಮಿ, ಔಷಧಕ್ಕಲ್ಲಾ ನಾ ಬಂದಿದ್ದು. ಅಮ್ಮಾವ್ರು ಕೊಡ ಕೊಟ್ಟಿದ್ರು ಸರಿಮಾಡಲಿಕ್ಕೆ. ತುಂಬಾ ನೆಗ್ಗಿ ಹೋಗಿತ್ತು. ಸರಿಮಾಡಿ ತಂದು ಕೊಟ್ಟೆ. ಅದರ ಕೂಲಿ....'

'ಹಾಗೋ. ಆಮೇಲೆ ಸಾಸಿಗೆ ಬಾರೋ. ಚಿಲ್ಲರೆ ಇಲ್ಲ'—ಎನ್ನುತ್ತಾ ಒಳಗೆ ಹೋಗಲನುವಾದನು.

'ಮೂರು ನಾಲ್ಕು ಸಲ ಬಂದೆ ಸ್ವಾಮಿ, ಇವತ್ತು ಸಂಜೆಗೆ ನಾನೆಲ್ಲೊ ಹಳ್ಳಿಗೆ ಹೋಗಬೇಕಾಗಿದೆ. ಚಿಲ್ಲರೆ ತರುತ್ತೇನೆ, ಸ್ವಾಮಿ.'

ಎಂತಹ ಧನವಂತನೇ ಆಗಲಿ, ಅವನ ಜೀವಮಾನದಲ್ಲಿ ಇಂತಹ ಸಮಯ ಬಂದೇ ಬರುತ್ತೆ ಎಂದು ನನ್ನ ಅಭಿಪ್ರಾಯ. ಅಂದರೆ ಕೈಯ್ಯಲ್ಲಿ ಒಂದು ಬಿಡಿ ಗಾಸೂ ಇಲ್ಲದಿರುವಾಗಲೆ, ಕೇಳುವವರು ಬರುವುದು! ಈ ಅನುಭವ ಬೇರೆಬೇರೆ ಅಂತಸ್ತಿನವರಿಗೆ ಬೇರೆಬೇರೆ ತರಹೆ ಇರಬಹುದು. ಗಿರಿ ಇದಕ್ಕೆ ಹೊರತವನಾದವನೇನೂ ಅಲ್ಲ. ಆದಿನ ಅವನಲ್ಲಿ ಬಿಡಿಗಾಸೂ ಇರಲಿಲ್ಲ. ಹಾಗೆಂತ ಅವನನ್ನು ನಿಧಾನವಾಗಿ ಮಾತನಾಡಿಸಿ ಸಮಜಾಯಿಷಿ ಹೇಳಿ ಆಮೇಲೆ ಬರಲು ಹೇಳುವಷ್ಟು ತಾಳ್ಮೆ ಆ ಮೂಹೂರ್ತದಲ್ಲಿ ಇರಲೂ ಇಲ್ಲ. ಅಲ್ಲದೆ 'Dignity' ಒಂದಿದೆಯಲ್ಲ! ಹಾಳಾದ್ದು ಸ್ವಾಭಿಮಾನ.

'ಈಗಿಲ್ಲ ಚಿಲ್ಲರೆ. ಷಾಪಿಗೆ ಬಾ ಅಂತ ಹೇಳಿದನಲ್ಲೊ.'

'ಸ್ವಾಮಿ, ನಾನು ಹಳ್ಳಿಗೆ ಹೋಗಬೇಕು........'

'ಹಾಗಾದರೆ ನಾಳೆ ಬಾ. ಹೋಗು. ಈಗಿಲ್ಲ.'

'ಏನು ಸ್ವಾಮಿ, ನಿಮ್ಮಂತವರೇ ಹೀಗಂದರೆ, ನಮ್ಮಂತವರ ಗತಿ ಏನು? ಅದೂ ನೂರಾರು ರೂಪಾಯಿ ಅಲ್ಲ ಸ್ವಾಮಿ, ಹತ್ತಾಣೆ ಮಾತ್ರ.'

ಈ ಮಾತು ಈಟಿಯಂತೆ ಇರಿಯಿತು, ಗಿರಿಯ ಎದೆಯನ್ನು. ಇದ್ದದ್ದೂ ರೇಗಿಹೋಯಿತು; ಮನಸ್ಸು ಸಿಟ್ಟಿನ ಹಿಡಿತದಲ್ಲಿ ಸಿಕ್ಕಿತು. ವಿವೇಚನೆ ದೂರವಾಯಿತು.

'ಕೊಡ ಸರಿಮಾಡಿಕೊಂಡು ಬರಲಿಕ್ಕೆ ನಾನು ಹೇಳಿದ್ದೆನೇನೋ ನಿನಗೆ? ಮನೇಲಿ ಯಜಮಾನರಿಲ್ಲದಾಗ ಬರೋದು ಗಿಲೀಟ್ ಮಾಡಿ ಬದ್ಮಾಷ್ ಕೆಲಸ ಮಾಡೋದು. ಹೋಗೋ. ಹೋಗೋ.'

'ಏನ್ಸ್ವಾಮಿ, ದೊಡ್ಡೋರು, ಇಂತಹ ಮಾತನಾಡಬಹುದೆ? ಅಮ್ಮಾವ್ರು ಕೊಟ್ಟರೇನು, ನೀವು ಕೊಟ್ಟರೇನು, ಎಲ್ಲಾ ಒಂದೇ ಅಲ್ಲವೇ? ಬದ್ಮಾಷ್ ಕೆಲಸ ನಾನೇನು ಮಾಡಿದ್ದೇನೆ. ಕೊಡ ಸರಿಮಾಡಿ ವಾಪಸ್ಸು ತಂದು ಕೊಟ್ಟಿಲ್ವೇ?' ಅಂತ ಅವನು ಮತ್ತೆ ರಾಗ ಎಳೆದನು.

ಗಿರಿಯು ಒಳಕ್ಕೆ ಬಿರ್ರನೆ ಹೋಗಿ, ಕೋಟು ಹ್ಯಾಟು ಹಾಕಿಕೊಂಡು, ತಲೆ ಬಾಗಿಲ ಬಳಿ ಬೆದರಿದ ಹರಿಣಿಯಂತೆ ನಿಂತಿದ್ದ ಹೆಂಡತಿಯ ಕಡೆ ಒಂದು ಬಿರುಸಾದ ನೋಟವನ್ನು ಬೀರಿ, 'ಮನೇಲಿದ್ದ ಒಂದು ಕೊಡ ಸಾಲದಾಗಿತ್ತೇನೋ? ಇಲ್ಲದಿದ್ದ ಯಜಮಾನಿಕೆ ಮಾಡೋದು ಪ್ರಾಣ ತಿನ್ನೋದು!' ಎಂದವನೇ ಹೊರಗೆ ದಾಟಿ 'ಬಾರೋ' ಎಂದು ಅವನಿಗೆ ಹೇಳಿ ಹೊರಟನು. ಹೊರಡುವಾಗ ಇದನ್ನೆಲ್ಲ ಎದುರುಮನೆಯ ಹೆಂಗಸರು ಕಿಟಕಿಯಿಂದ ನೋಡುತ್ತಿದ್ದುದನ್ನು ಕಂಡು ಮಂಗವಾಯಿತು ಮನಸ್ಸು!

೨

ಸರಿ; ಹೋದ. ಪೇಟೆಯಲ್ಲಿ ಎಲ್ಲೋ ಯಾರ ಹತ್ತಿರವೋ ಕೇಳಿ ಅವನಿಗೆ ಹತ್ತಾಣೆ ಬಿಸಾಕಿ ಕಳುಹಿಸಿದ. ಬೆಳಗಿನಿಂದ ಷಾಪಿಗೆ ಹೋಗಿರಲಿಲ್ಲ. ಎಷ್ಟು ಜನ ಕಾದಿರುತ್ತಾರೋ ಎಂಬ ಯೋಚನೆ ಬೇರೆ. ಹಾಗೆಯೇ ದಾರಿಯಲ್ಲಿ ಹೋಟಲೊಂದರಲ್ಲಿ ಕಾಫಿ ಕುಡಿದು ಷಾಪಿಗೆ ಹೋದ. ತುಂಬ ಜನ ಕಾದಿದ್ದರು. ಅವರನ್ನೆಲ್ಲಾ ವಿಚಾರಿಸಿದ; ಔಷಧ ಕೊಟ್ಟ; ಅವರ ಅವಶ್ಯಕತೆಯನ್ನು ಪೂರೈಸಿದ. ಅಲ್ಲೇ ಅಕ್ಕಪಕ್ಕದಲ್ಲಿ ಎರಡುಮೂರು ರೋಗಿಗಳ ಮನೆಗೆ 'ವಿಸಿಟ್' ಕೊಟ್ಟ. ಆರುಗಂಟೆಯಾಯಿತು. ವಾಕಿಂಗ್ ಹೋಗುವ ಇವನ ಸ್ನೇಹಿತರ ಕಂಪೆನಿ ಸೇರತೊಡಗಿತು.

'Are you unwell ?' ಎಂತ ಒಬ್ಬ ಕೇಳಿದ.

'No, No, No' ಎಂದ.

'ಏನೋ ವಿಪರೀತ ಕೆಲಸ ಇತ್ತು ಅಂತ ಕಾಣುತ್ತೆ' ಎಂದರು ಇನ್ನೊಬ್ಬರು.

'ಜೇಬು ಭರ್ತಿಯಾಯಿತು ಅಂತ ಕಾಣುತ್ತೆ' ಎಂದರು ಇನ್ನೊಬ್ಬರು.

ಎಲ್ಲರೂ ಹೊರಟರು ಗಾಂಧೀ ಮೈದಾನದ ಕಡೆಗೆ. ಅಲ್ಲಿ ಕುಳಿತು ಹರಟೆ ಹೊಡೆದು ಏಳುವಾಗ ಏಳು ಗಂಟೆ ಆಯಿತು. ಗಿರಿಗೆ ಅವರೆಲ್ಲಾ ಆಡುವ ಮಾತುಗಳು ಕೇಳುತ್ತಿದ್ದುವು; ಮನಸ್ಸು ಮಾತ್ರ ಮಧ್ಯಾಹ್ನ ಆದ ಘಟನೆಯಿಂದ ಕುಂದಿ ಹೋಗಿತ್ತು; ಆವಾಗ ಈವಾಗ ತಾನೂ ಒಂದೊಂದು ಮಾತು ಸೇರಿಸುತ್ತಿದ್ದ, ಯೋಚನೆ ಇಲ್ಲದೆ.

ಸಿನಿಮಾ ಕಂಪೆನಿಯ ಪೈಕಿ ಒಬ್ಬರು ಇವರೆಲ್ಲರಿಗೂ ಬೇಕಾದವರೆ. ಅವರೂ ಬಂದರು. 'ಇವತ್ತು ಛೆಂಜು ಕಣ್ರಿ. ಎಲ್ರೂ ಬನ್ರಿ. ಇಂಟರ್‌ವಲ್ಲಿಗೆ ಬೇಕಾದರೆ ಹೊರಟರೆ ಸರಿ' ಎಂದು ಸೂಚನೆ ಕೊಟ್ಟರು. ಒತ್ತಾಯ ಮಾಡಿದರು, ಎಲ್ಲರೂ ಬರಲೇಬೇಕೆಂದು. ಸಿನಿಮಾಕ್ಕೆ ಹೋಗಿ, ಗಿರಿ ಮನೆಗೆ ಬಂದಾಗ ರಾತ್ರಿ ೧೦ ಘಂಟೆ.

ಹೆಂಡತಿ ಕಾಯುತ್ತಿದ್ದಳು. ಅವನ ಸ್ವಭಾವವನ್ನು ಚೆನ್ನಾಗಿ ಅರಿತ ಅವಳು ಏನೊಂದೂ ಮಾತನಾಡದೆ, ಮೌನವಾಗಿ, ಅವನು ಕೋಟು ಬಿಚ್ಚುವಾಗ ತಾನು ಅವನ ಬೂಟ್ಸಿನ ಲೇಸ್ ಬಿಚ್ಚಿದಳು. ಅವನು ಪಂಚೆ ಉಡುವುದರೊಳಗಾಗಿ ಕಾಲು ತೊಳೆಯಲು ನೀರು ತಂದುಕೊಟ್ಟಳು. ಅವನು ಕೈಕಾಲು ತೊಳೆಯುವುದರೊಳಗೆ, ಎಲೆ ಹಾಕಿ ಊಟಕ್ಕೆ ಅಣಿ ಮಾಡಿದಳು. ಅವನೂ ಪಿಟ್ಟೆನ್ನದೆ ಗಬಗಬ ತಿಂದು ಹೋದ! ಹೋದವನೇ ಮುಸುಗೆಳೆದು ಮಲಗಿಬಿಟ್ಟ! ದೈಹಿಕ ಮತ್ತು ಮಾನಸಿಕ ಆಯಾಸದಿಂದಲೋ ಏನೋ ನಿದ್ದೆ ಬರುತ್ತಿತ್ತು. ಎಷ್ಟು ಹೊತ್ತಾಗಿದೆಯೋ ಏನೋ

ಕಾಲಿಗೆ ಏನೋ ಭಾರವಾದಂತಾಗಿ ಎಚ್ಚರವಾಯಿತು. ನೋಡುತ್ತಾನೆ, ಹೆಂಡತಿ. ಇವನ ಕಾಲಮೇಲೆ ತಲೆ ಇಟ್ಟುಕೊಂಡು ಬಿಕ್ಕಿಬಿಕ್ಕಿ ಅಳುತ್ತಿದ್ದಾಳೆ.

‘ ಏನೇ ಅದು ?’

‘ ದಯವಿಟ್ಟು ಇದೊಂದು ಸಲ ಕ್ಷಮಿಸಿ.... ಇನ್ನುಮೇಲೆ.... ಇನ್ನುಮೇ.... .... ನಿಮ್ಮನ್ನು ಕೇಳದೆ.... ಏನೂ ಮಾಡೋಲ್ಲ ’ ಅಳುತ್ತ ಎಂದಳು.

‘ ಹಂ........’

‘ ಇನ್ನೊಂದು ಕೊಡ ಇದೆಯಲ್ಲಾ, ಅದು ತುಂಬಾ ದೊಡ್ಡ ಕೊಡ. ಬಾವಿಯಿಂದ ನೀರೆಳೆಯಲು ತುಂಬಾ ಕಷ್ಟವಾಗುತ್ತೆ. ಮೊದಲಾಗಿದ್ದರೆ ಹೇಗೋ ಎತ್ತುತ್ತಿದೆ. ಇದು ಸಣ್ಣ ಕೊಡ. ಸರಿಮಾಡಿಸಿಕೊಂಡರೆ ಅನುಕೂಲ ಅಂತ ಕೊಟ್ಟೆ ’ ಎಂದು ಬಿಕ್ಕುತ್ತ ಬಿಡಿಬಿಡಿಯಾಗಿ ಹೇಳಿದಳು.

ಗಿರಿಗೆ ಈಗ ಅರಿವಾಯಿತು; ಎಚ್ಚರವಾಯಿತು ! ಹೆಂಡತಿ ತುಂಬು ಬಸಿರಿ ಎಂದೂ, ಅದಕ್ಕೆ ಅವಳು ಹಾಗೆ ಮಾಡಿದುದು ಸರಿ ಎಂದೂ ಮನಸ್ಸಿಗೆ ಎನ್ನಿಸಿತು.

ವಿವೇಚನೆ ಬಂದೊಡನೆ ಎಲ್ಲವೂ ಸರಿಹೋಗುತ್ತೆ. ಸ್ವಲ್ಪ ಹೊತ್ತಿನ ನಂತರ, ಅವಳ ಕೆನ್ನೆಗಳನ್ನು ಮೃದುವಾಗಿ ನೇವರಿಸುತ್ತಾ, ‘ ಕ್ಷಮಿಸಬೇಕಾದವನು ನಾನಲ್ಲ ಕಣೇ. ನೀನು ಕ್ಷಮಿಸಬೇಕು. ತುಂಬಿದ ಕೊಡ ನೀನು. ಹೇಗೂ ಕ್ಷಮಿಸಿದೀಯ, ಅಲ್ಲವೇನೆ. ನಾನು ತಪ್ಪುಮಾಡಿದ್ದು ’ ಎನ್ನುತ್ತ ಅವಳ ಗಲ್ಲವನ್ನು ಹಿಡಿದು ತನ್ನೆಡೆಗೆ ತಿರುಗಿಸಿಕೊಂಡನು. ಅವಳು ಏನು ಹೇಳಬೇಕೆಂದಿದ್ದಳೋ, ಆದರೆ ಅವಳು ಹೇಳಲು ಆಗಲಿಲ್ಲ.

—ದೊಡ್ಡೇರಿ ವೆಂಕಟಗಿರಿರಾವ್

# ದೇವರೇ ಬರಲಿಲ್ಲ

ಯಾವುದೋ ಅಸ್ಪಷ್ಟವಾದ ನಿನಾದ ಕಿವಿಯಾನಿಸಿ ಕೇಳಿದರು ಶಾರದಮ್ಮ. ಶಬ್ದ ಯಾವುದೆಂದು ಗುರತು ಹಚ್ಚುವುದು ಪ್ರಯಾಸವಾಯಿತು.

ಜೋರಾಗಿ ಗಾಳಿ ಬೀಸಿತು. ಅದರ ಜೊತೆಗೇ ಅಸ್ಪಷ್ಟವಾದ ದನಿ ಮಧುರವಾಗಿ ಕೇಳಿಸಿತು.

‘ ವಾಲಗದ ಸದ್ದು ಕಣ್ರಿ ! ’

—ಎಂದರು ಶಾರದಮ್ಮ. ಸಂತಸದಿಂದ ಅವರ ಮುಖ ಕಮಲದಹಾಗೆ ಅರಳಿತು. ಪಕ್ಕದ ಜಗುಲಿಯಲ್ಲೇ ಕುಳಿತು ಶಾರದಮ್ಮನವರ ಜೊತೆ ಹರಟುತ್ತಿದ್ದಾಕೆಯ ಮನದಲ್ಲಿ ಸುಳಿದ ವಿಷಯವೇ ಬೇರೆ.

‘ ಈಗೆಂತಾ ಮದುವೇನಮ್ಮಾ...ಈ ಮಾಸದಲ್ಲಿ ? ’

—ಎಂದು ಆಕೆ ಮೂಗಿನಮೇಲೆ ಬೆರಳಿಟ್ಟುಕೊಂಡರು. ಬ್ಯಾಂಡಿನ ಹಾಗೂ ವಾಲಗದ ಸದ್ದು ಈಗ ಅತಿ ಸ್ಪಷ್ಟವಾಗಿ ಕೇಳಿಸತೊಡಗಿತು. ಹರಟೆಗೆ ಮುಕ್ತಾಯ ಹಾಡಿ ಶಾರದಮ್ಮ ಕುತೂಹಲದಿಂದ ಶಬ್ದ ಬರುತ್ತಿದ್ದ ಕಡೆಗೆ ಕತ್ತು ಹೊರಳಿಸಿ ನೋಡುತ್ತಾ ಕುಳಿತರು.

ನಸುಗತ್ತಲೆ ಕತ್ತಲೆಯ ಕಪ್ಪು ಛಾಯೆಯನ್ನು ಸೀಳುತ್ತಾ, ಬೆಳಕಿನ ಬಿಂಬವೊಂದು ಆಕಾಶಕ್ಕೆ ಏರುತ್ತಿತ್ತು. ಒಮ್ಮೆ ಮಿಂಚುತ್ತಾ, ಮಗದೊಮ್ಮೆ ಮಾಯವಾಗುತ್ತಾ, ನರ್ತಿಸುತ್ತಿದ್ದ ಆ ಬೆಳಕು ಅವರ ಹೃದಯಕ್ಕೆ ಮಂತ್ರ ಮುಗ್ಧತೆಯ ತೆರೆ ಎಳೆದಿತ್ತು.

ಅವರು ನೋಡುತ್ತಿರುವ ಹಾಗೆ ಎದುರಿನ ಸಂದಿಯಿಂದ, ಅವರ ಚಿಕ್ಕ ಮಗಳು ನಳಿನಾ ಓಡಿಬಂದು ಅವರ ತೊಡೆಯೇರಿದಳು.

‘ ಅಮ್ಮಾ....ಅಮ್ಮಾ....’

ನಳಿನಾ ಓಡಿಬಂದ ದಣಿವಿನಿಂದ ಏದುತ್ತಿದ್ದಳು. ಆದರೂ ತಾಯಿಯ ಮುಂದೆ ಹೇಳಬೇಕಾಗಿದ್ದ ಹಲವು ವಿಷಯ ಅವಳ ಉತ್ಸಾಹ ಏರಿಸಿದ್ದವು. ಶಾರದಮ್ಮನ ಕೈ ಹಿಡಿದು ಅಲ್ಲಾಡಿಸುತ್ತಾ ನಳಿನಿ ಅರ್ಥಂಬರ್ಥ ತೊದಲಿದಳು,

‘ ಅಮ್ಮ....ಎಷ್ಟೊಂದು....ಎಷ್ಟೊಂದು ಚೆನ್ನಾಗಿದೇಂತಿ ?’

'ಏನೇ ?'

'ಮೆರವಣಿಗೇ ಅಮ್ಮ ದೇವರ್ದು.'

ಶಾರದಮ್ಮ ಪಕ್ಕದಮನೆಯಾಕೆಯಕಡೆ ತಿರುಗಿ ಮುಗುಳ್ನಕ್ಕರು. ನಳಿನ ಒಂದು ಗಳಿಗೆ ಸುಮ್ಮನಿದ್ದವಳು ಮತ್ತೇನೋ ನೆನೆದು ಹೇಳಿದಳು.

'ಇನ್ನೂ ದೂರ್ದಲ್ಲಿ ಬರ್‍ತಾ ಇದೇಮ್ಮ ಅಂಗಡಿ ಬೀದೀನಲ್ಲಿ....ನಾನೋಡ್ಕೊಂಡ್ ಬಂದೆ ಅಮ್ಮಾ....ಎಷ್ಟೊಂದು ದೀಪ ಅಂದ್ರೆ....ಊಂ....ನಿಂಗೊತ್ತಿಲ್ಲ....ತುಂಬಾ.... ದೀಪ ಅಮ್ಮ!'

ದಿಙ್ಮೂಢರಾಗಿ ಕುಳಿತ ಶಾರದಮ್ಮ ಗಡಬಡಿಸಿ ಮೇಲೆದ್ದರು. ನಳಿನ ವರ್ಣಿಸಿದ ದೇವರ ಮೆರವಣಿಗೆ ಅವರಿಗೆ ಕಣ್ಣಿಗೆ ಕಟ್ಟಿದಂತಾಯಿತು.

'ಅಯ್ಯೋ ಇದೇನು ಹೀಗೆ ಕುಳಿತುಬಿಟ್ಟೆ....ದೇವರಿಗೆ ಒಂದಿಷ್ಟು ಹಣ್ಣೂ ಕಾಯಿ ಮಾಡ್ಬೇಕಾದ್ರೂ ಸಿದ್ಧಮಾಡ್ದೆ....ಏಳೇ ನಳಿನ ಏಳು....'

ಮನೆಯೊಳಗೆ ಕತ್ತಲೆ ತುಂಬಿತ್ತು. ಹೊರಗಿನಿಂದ ಬಂದೊಡನೆ ಆ ಮಬ್ಬು ಗತ್ತಲಲ್ಲಿ ಏನೂ ಕಾಣದೆ ಶಾರದಮ್ಮ ಮುಗ್ಗುರಿಸಿದರು. ಆದರೆ ಪರಿಚಿತವಾದ ಆ ಕೈಗಳಿಗೆ ಸ್ವಿಚ್ ಸಿಗುವುದು ಕಷ್ಟವಾಗಲಿಲ್ಲ.

ದೀಪ ಹತ್ತಿಕೊಂಡಿತು. ಅದರೆ ತಿಳಿಬೆಳಕು ದೀಪ ಹತ್ತಿಕೊಳ್ಳುವುದನ್ನೇ ಆಶೆಯಿಂದ ನಿರೀಕ್ಷಿಸುತ್ತಿದ್ದ ನಳಿನಳ ಕಣ್ಣು ಚುಚ್ಚಿತು. ಕಣ್ಣು ಕಿರಿದುಗೊಳಿಸುತ್ತಲೇ ನಳಿನ ಹೇಳಿದಳು.

'ಇಂತಾದೇ ದೀಪಾಮ್ಮ....ಬಣ್ಣ ಬಣ್ಣದ್ದು....ದೇವರ ಸುತ್ತಾ ದೀಪ ಗೊತ್ತಾ? ಎಲ್ಲಾ ಕಡೇನೂ! ಅಮ್ಮಾ....'

'ಹೂಂ.'

ಶಾರದಮ್ಮ ಬೆಳ್ಳಿಯ ತಟ್ಟೆ ತೆಗೆದಿಟ್ಟಾಗ, ನಳಿನ ಕುತೂಹಲದಿಂದ ಆಸೆ ತುಂಬಿದ ಕಣ್ಣುಗಳಿಂದ, ಬೇಡುವ ದನಿಯಲ್ಲಿ ಮೆಲ್ಲನೆ ಪಿಸುಗುಟ್ಟಿದಳು.

'ಅಮ್ಮ, ದೇವ್ರಿಗೆ ನಾನೇ ಹಣ್ಣುಕಾಯಿ ಕೊಡ್ತೀನೆ....'

'ನಿನ್‌ಕೈಲಿ ಎತ್ಕೋಕಾಗೋಲ್ಲ ನಳಿನ.'

'ಊಹೂಂ, ಎತ್ಕೊಳ್ತೀನಿ. ನಿಜವಾಗ್ಲೂ ಅಮ್ಮ....'

ಶಾರದಮ್ಮ ಮಾತಾಡಲಿಲ್ಲ. ತಾಯಿಗೆ ಕೋಪ ಬಂದಿರಬಹುದೇನೋ ಎಂದು ನಳಿನ ತಾಯಿಯ ಮುಖವನ್ನು ಓರೆಗಣ್ಣಿನಿಂದ ನೋಡಿದಳು. ಇಲ್ಲ, ಕೋಪದ ಯಾವ ಚಿಹ್ನೆಯೂ ಆ ಮುಖದಲ್ಲಿ ಕಾಣಲಿಲ್ಲ. ಶಾಂತವಾಗಿತ್ತು ಮುಖ.

ತುಟಿಯ ಒಂದು ಭಾಗ ಓರೆಯಾಗಿ ಹುಸಿನಗೆ ಮೂಡುತ್ತಿತ್ತು. ಆದರೂ ತಾಯಿಯನ್ನು ಪ್ರಸನ್ನಳಾಗಿ ಮಾಡುವ ಉದ್ದೇಶದಿಂದ ನಳಿನ ಮತ್ತೆ ಸುರುವು ಹಚ್ಚಿದಳು.

'ಅಮ್ಮ!'

'ಹೂಂ.'

'ದೇವ್ರಿಗೆ ಮಲ್ಲಿಗೆ ಹೂವಿನ ಅಲಂಕಾರ ಮಾಡಿದಾರೆ ಕಣೆ....ಎಷ್ಟೊಂದು ಗಮ್ ಅಂತ ವಾಸ್ನೆ ಬರುತ್ತೆ ಅಂತಾ ? ನಂಗೂ ಅಂಥಾ ಹೂವು ತರ್ಸಿ ಕೊಡ್ತೀಯಾ ನೀನು....? ಅಂಥಾದೇ ಹೂ ಬೇಕಮ್ಮ....ಆ....?'

ಪ್ರಸನ್ನಚಿತ್ತರಾಗಿ ಮಗಳ ಮಾತನ್ನೇ ಕೇಳುತ್ತಿದ್ದ ತಾಯಿ ನಸುನಕ್ಕರು. ನಳಿನ ಮುಡಿದಿದ್ದ ಕಾಡುಮಲ್ಲಿಗೆಯ ಹೂವಿನ ಕಡೆ ಅವರ ದೃಷ್ಟಿ ಹೊರಳಿತು. ಸುವಾಸನೆಯಿಲ್ಲದಿದ್ದರೂ ಅರಳಿ ನಿಂತಿದ್ದ ಹೂ ಬಲು ಮುದ್ದಾಗಿ ಕಾಣುತ್ತಿತ್ತು.

ತಟ್ಟೆಯಲ್ಲಿ ಹಣ್ಣು-ಕಾಯಿ, ಕುಂಕುಮ-ಅರಸಿನ ಹಾಗೂ ಕರ್ಪೂರ ಇಟ್ಟು ಕೊಂಡು ಶಾರದಮ್ಮ ಹೊರಗೆ ಬಂದರು.

ಇಲ್ಲ. ದೇವರ ಮೆರವಣಿಗೆ ಇನ್ನೂ ಅವರ ಬೀದಿಗೇ ಬಂದಿರಲಿಲ್ಲ. ವಾಲಗದ ದನಿ ಹತ್ತಿರ ಹತ್ತಿರ ಬರುತ್ತಿತ್ತು. ಬೆಳಕಿನ ಬಿಂಬ ಕಣ್ಣು ಕೋರೈಸುವ ಹಾಗೆ ಈಗ ತುಸು ದೂರದಲ್ಲೇ ದೃಷ್ಟಿಗೆ ಬೀಳುತ್ತಿತ್ತು. ಅದನ್ನೇ ಕಣ್ಣೆತ್ತಿ ಅಚ್ಚರಿಯಿಂದ ನೋಡುತ್ತ ನಿಂತಿದ್ದ ನಳಿನ, ತಾಯಿಯ ಸೀರೆ ನೆರಿಗೆ ಹಿಡಿದು ಜಗ್ಗಿದಳು.

'ಅಮ್ಮಾ....ಅಮ್ಮಾ....'

'ಏನೇ ?'

'ಆ ಪೂಜಾರಿ ಕೆಟ್ಟೋವ್ನು ಅಮ್ಮ....'

ತಾಯಿ ಸುಮ್ಮನಿದ್ದರು. ತುಂಟ ಹುಡುಗಿ ನಳಿನ.

'ಆ ಪೂಜಾರಿ ಮತ್ತೆ, ರಥದ ಮೇಲೆ ದೇವ್ರ ಹಿಂದೇನೇ ಕೂತ್ಕೊಂಡು ತೆಂಗಿನಕಾಯ್ನೆಲ್ಲಾ ಬುಟ್ಟಿ ಒಳಗೆ ಹಾಕ್ತಿದ್ದ ಅಮ್ಮ....'

ಈ ಮಾತಿಗೂ ತಾಯಿ ಉತ್ತರಿಸಲಿಲ್ಲ. ಅವರ ಮನಸ್ಸು, ಯೋಚನೆಗಳು ಎಲ್ಲವೂ ದೇವರ ಬಳಿಗೆ ಓಡಿದ್ದವು.

'ಅಮ್ಮ, ದೇವ್ರನ್ನ ಯಾಕೆ ಪೂಜೆ ಮಾಡೋದೆ ?'

ಮಗಳ ಅಜ್ಞಾನಕ್ಕೆ ಮರುಗುತ್ತಾ ಶಾರದಮ್ಮ, ತಲೆಬಾಗಿಸಿ ನಳಿನಳ ಹಣೆಯ ಮೇಲಿದ್ದ ಮುಂಗುರುಳು ಹಿಂದೆ ತೆಗೆಯುತ್ತಾ ಹೇಳಿದರು.

'ನಾವು ಕೇಳಿದ್ದನ್ನೆಲ್ಲಾ ದೇವರು ಕೊಡ್ತಾನೆ. ಅದಕ್ಕೆ.'

ಬೆರಗುಗಣ್ಣುಗಳಿಂದ ನಳಿನ ಅದನ್ನು ಕೇಳಿದಳು. ಮರುಕ್ಷಣದಲ್ಲಿಯೇ ಅವಳ ಮುಖದಮೇಲೆ ಮುಗುಳುನಗೆ ಮೂಡಿತು.

' ಹಾಗಾದ್ರೆ ಅಮ್ಮಾ....ನಾನು ಎರಡ್ನೇ ಕ್ಲಾಸಿಂದ ಪಾಸಾಗಬೇಕಾದ್ರೆ.... ದೇವ್ರು....'

' ಹೂಂ.'

' ಊಂ ಮತ್ತೆ....ನಂಗೆ ಹೊಸ ಲಂಗ ಬೇಕಾದ್ರೆ ದೇವ್ರು ಕೊಡ್ತಾನಾ ?'

' ಹೂಂ. '

ನಳಿನ ಯೋಚಿಸಿದಳು. ಇನ್ನು ಯಾವ ಪ್ರಶ್ನೆ ಕೇಳಬೇಕೆಂಬ ಯೋಚನೆ ಅವಳ ಪುಟ್ಟ ತಲೆಯಲ್ಲಿ ಸುತ್ತಾಡಿತು.ವಾಲಗದ ಸದ್ದು ಕಿವಿಯನ್ನು ಕೊರೆಯುತ್ತಿತ್ತು. ದೀಪಮಾಲೆ ಕಣ್ಣನ್ನು ಕುಕ್ಕತೊಡಗಿತು........ನಳಿನಳ ಕಣ್ಣಿನ ಮುಂದೆ ಮಬ್ಬು ಮಬ್ಬಾದ ಒಂದು ಚಿತ್ರ ಬಂದು ನಿಂತಿತು.....ಅದು ಅವಳ ಗೆಳತಿ ಶಾಂತಾದು.... ಶಾಂತ ಹರಕಲು ಲಂಗ ಹಾಕಿಕೊಂಡಿದ್ದಳು. ಅವರು ಬಡವರು, ದುಡ್ಡಿಲ್ಲ ಎಂದು ಬೇರೆ ಯಾರೋ ನಳಿನಾಗೆ ಹೇಳಿದ್ದರು. ಅದನ್ನು ಕೇಳಿ ನಳಿನಾಗೆ ದುಃಖವಾಗಿತ್ತು, ಅಳು ಸಹ ಬಂದಿತ್ತು.

' ಏನಮ್ಮಾ ದೇವ್ರು ದುಡ್ಡೂ ಕೊಡ್ತಾನಾ ? '

' ಕೊಡ್ತಾನೆ ಕಣೆ.'

' ಮತ್ತೆ....ಮತ್ತೆ....ಶಾಂತ ಇದಾಳಲ್ಲ ಅಮ್ಮ....ಅವರು ಯಾಕೆ ಬಡವ್ರು ಮತ್ತೆ ?....ಅವರ್ಮನೇಲಿ, ಅವರಮ್ಮ ನಿನ್ನ ಹಾಗೇನೇ ದೇವ್ರಪೂಜೆ ಮಾಡ್ತಾರಮ್ಮ.... ಆದ್ರೂ....ಆದ್ರೂ....'

ಬಲು ಸರಳವಾದ ಪ್ರಶ್ನೆ. ಆದರೆ ಶಾರದಮ್ಮ ಮಾತಿಗಾಗಿ ತಡವರಿಸಿದರು. ಆ ಪ್ರಶ್ನೆಗೆ ಅವರ ಬಳಿ ಉತ್ತರ ಸಿದ್ಧವಿರಲಿಲ್ಲ.

ನಿರಾಸೆಯಾಯಿತು ನಳಿನಳಿಗೆ. ಹಾಗಾದರೆ ದೇವರು ಒಳ್ಳೆಯವನಲ್ಲ ಎಂಬ ಯೋಚನೆಯೂ ಹಾದುಹೋಯಿತು. ಮಾತಿನ ರೂಪದಲ್ಲಿ ಯೋಚನೆ ಹೊರಗೆ ಬಂತು. ಶಾಂತಳಿಗೆ ಅನ್ಯಾಯ ಮಾಡಿದ ದೇವರ ಬಗ್ಗೆ ಅವಳ ಪ್ರೀತಿ ಉಳಿಯುವುದು ಸಾಧ್ಯವಿರಲಿಲ್ಲ.

' ದೇವ್ರು ಕೆಟ್ಟೋನು ಅಮ್ಮ !'

ಆದರೆ ದೇವರು ಬಗ್ಗೆ ಕೆಟ್ಟಮಾತು ಕೇಳಲು ಶಾರದಮ್ಮ ಸಿದ್ಧರಿರಲಿಲ್ಲ........ ನಳಿನ ಹುಡುಗು, ಅವಳಿಗೇನೂ ತಿಳಿಯುವುದಿಲ್ಲ....ಎಂದು ಅವರು ತೀರ್ಮಾನಿಸಿ,

' ಸಾಕೇ ನಿನ್ನ ಮಾತು ! ' ಎಂದು ಗದರಿಸಿದರು.

ಅವರ ಎದುರಿಗೇ ಬರುತ್ತಿದ್ದ ಮೆರವಣಿಗೆ ಬೇರೆ ಬೀದಿಗೆ ತಿರುಗಿತು. ಕಣ್ಣು ಕೋರೈಸುತ್ತಿದ್ದ ಬೆಳಕು ಮಾಯವಾಯಿತು. ವಾಲಗದ ಸದ್ದು ಬರಬರುತ್ತಾ ಕರಗಿ ಹೋಯಿತು.

ನಿಟ್ಟುಸಿರು ಬಿಟ್ಟರು ಶಾರದಮ್ಮ. ಅವರಿಗೆ ನಿರಾಸೆಯಾಯಿತು.

ಅವರ ಬೀದಿಗೆ ದೇವರೇ ಬರಲಿಲ್ಲ.

೨

ಕಣ್ಣುಜ್ಜುತ್ತಾ ಎದ್ದು ಕುಳಿತಾಗ, ಎದುರಿಗೆ ಬಾಡಿಬಿದ್ದಿದ್ದ ಸಂಪಿಗೆಯ ದಂಡೆಯನ್ನು ನೋಡಿ ಮುಗುಳು ನಕ್ಕಳು ನಾಗರತ್ನ. ಹಿಂದಿನ ಸವಿ ನೆನಪೊಂದು ತಲೆಯಲ್ಲಿ ಮಿಂಚಿತು. ಸಂಪಿಗೆಯ ದಂಡೆಯೊಂದಿಗೆ ಹೆಣೆದುಕೊಂಡಿದ್ದ ಸಿಹಿಯಾದ ನೆನಪು.

ಹೌದು. ಅವಳನ್ನು ನೋಡಲೆಂದು ' ಅವರು ' ಬಂದಿದ್ದ ದಿನ, ನಾಗರತ್ನ ಮುಡಿದಿದ್ದದ್ದು ಸಂಪಿಗೆಯ ದಂಡೆ.

ಅವಳ ಕೆನ್ನೆ ಕೆಂಪೇರಿ, ಬಿಸಿಯಾಯಿತು. ಯಾರಾದರೂ ತನ್ನ ಮುಖ ನೋಡಿದರೇನೋ ಎಂದು ಬೆದರಿ ನಾಗರತ್ನ ಕೋಣೆಯ ಸುತ್ತ ಕಣ್ಣೋಡಿಸಿದಳು.

ಕೋಣೆಯ ಬಾಗಿಲು ತೆರೆದಿತ್ತು. ಹೊರಗಡೆ ಹಲವಾರು ಹೆಂಗಸರು ಗುಜು ಗುಜು ಎಂದು ಹರಟುತ್ತಿದ್ದರು. ಕನ್ನಡಿಯ ಮುಂದೆ ನಿಂತು ತಲೆ ಬಾಚಿಕೊಳ್ಳು ತ್ತಿದ್ದ ಚಿಕ್ಕಮ್ಮ, ಅವಳು ಎದ್ದು ಕುಳಿತುದನ್ನು ನೋಡಿ ಹೇಳಿದರು.

'ತಲೆಗಿಲೆ ಬಾಚ್ಕೊಳ್ಳೋಲ್ವೇನು ನಾಗೂ ? ವರನ್ನ ಇದಿರ್ಗೊಳ್ಳೋಕೆ ಇವ ರೆಲ್ಲಾ ಹೊರಡ್ತಾ ಇದಾರೆ ಆಗ್ಲೇ.'

ನಾಳೆ ಮದುವೆಯ ಹೆಣ್ಣಾಗುವ ನಾಗರತ್ನ ನಾಚಿ ತಲೆ ಬಾಗಿಸಿದಳು.... ಥೂ. ಎಂತಹ ನಿದ್ದೆ ತನ್ನದು ! ಬೆಳಗಿನ ಶಾಸ್ತ್ರಗಳಿಂದ ಆಯಾಸವಾಗಿ ಒಂದು ಗಳಿಗೆ ನಿದ್ದೆ ಮಾಡಲೆಂದು ಬಂದವಳು ಚೆನ್ನಾಗಿಯೇ ನಿದ್ದೆ ಮಾಡಿದ್ದಳು.

ವಾಲಗದ ಪೀ....ಪೀ....ಸದ್ದು ಮೊದಲಾದಾಗ ಸುಂದರಿ ಒಳಗೆ ಬಂದಳು.

' ಇವತ್ತು ನಿಂಗೆ ಜಡೆ ಹಾಕೋವಳು ನಾನು ನಾಗೂ !'

ಎಂದು ಸುಂದರಿ ಪ್ರೇಮುಲ ಸ್ವರದಲ್ಲಿ ಹೇಳಿದಳು. ವಾಲಗದ ಸದ್ದು ಜೋರಾಯಿತು. ಮನೆಯ ಹೊರಗೆ ಹೊರಟ ಮೆರವಣಿಗೆ ನೋಡಿ, ಸುಂದರಿ ಅವಳ ಕೈ ಜಿಗುಟಿದಳು.

'ನಿನ್ನ ಗಂಡನ್ನ ಕರ್ಕೊಂಡ್ಬರೋಕೆ ಹೊರಟದಾರೆ ನೋಡೆ !'

ನಾಚಿಕೆಯ ಮುದ್ದೆಯಾಗಿ ನಾಗರತ್ನ ಕನ್ನಡಿಯ ಮುಂದೆ ಕುಳಿತಳು. ಸುಂದರಿ, ಓರಣವಾಗಿ ತಲೆ ಬಾಚತೊಡಗಿದಳು.

....ತಾಯಿಯೂ ಇದೇ ರೀತಿ ಅಂದು ತಲೆ ಬಾಚಿದ್ದರು.

'ನಾಚ್ಕೋಬಾರ್ದು ತಾಯೀ....ಗಂಡ ಎಂದ್ರೆ ದೇವ್ರಹಾಗೆ !'

ಎಂದು ಹೇಳಿದ್ದರು ತಾಯಿ. ತಲೆಬಾಚಿ ಸಂಪಿಗೆಯ ದಂಡೆ ಮುಡಿಸಿದ್ದರು ತಾಯಿ. ಕಲಾಬತ್ತಿನ ಸೀರೆ ಉಡಿಸಿ, ಮೈತುಂಬಾ ಒಡವೆ ಹಾಕಿದ್ದರು.

ಅವಳ ಹೃದಯ ನಡುಗುತ್ತಲೇ ಇತ್ತು. ಭಯದಿಂದಲ್ಲ, ಕಾತರದಿಂದ, ಕುತೂಹಲದಿಂದ, ಸಂತೋಷದಿಂದ....ಮೆಲ್ಲಮೆಲ್ಲನೆ ಹೆಜ್ಜೆಯಿಟ್ಟು 'ಅವರು', ಅವರ ತಂದೆ, ಮತ್ತಿತರು ಕುಳಿತ್ತಿದ್ದ ಕೋಣೆಯೊಳಗೆ ಕಾಲಿಟ್ಟಾಗ, ಯಾವುದೋ ಮಂತ್ರದ ಮೋಡಿ ಹಾಕಿದಂತೆ ಕಾಲು ಅಲ್ಲೇ ನಿಂತುವು.

'ಒಳಗೆ ಬಾ ತಾಯೀ !'

ಎಂದು ಮೃದುವಾದ ಒಂದು ಸ್ವರ ಅವಳನ್ನು ಕರೆಯಿತು.

ಅವಳು ಕಾಲಿಟ್ಟೊಡನೆ ಸಂಪಿಗೆಯ ಕಂಪು ಕೊಠಡಿಯನ್ನೆಲ್ಲಾ ತುಂಬಿದಂತೆ.... 'ಅವರು' ಕಣ್ಣುತುಂಬಾ ನಾಗರತ್ನನನ್ನು ನೋಡಿ, ನೋಡಿ ದಣಿದರಂತೆ—ಹಾಗೆ ಸುಂದರಿ ನಂತರ ಹೇಳಿದ್ದಳು. ಅವರನ್ನು ನೋಡುವ ಆಸೆ ಹೃದಯವನ್ನು ದಹಿಸುತ್ತಿತ್ತು. ಒಮ್ಮೆ ಅರ್ಧ ಎತ್ತಿದ ತಲೆ, ಕಣ್ಣು ಮತ್ತೆ ಕೆಳಗೆ ಬಂದಿದ್ದವು. ನೋಡುವ ಧೈರ್ಯಸಾಲದೆ....ಆದರೆ, ಆದರೆ....'ಅವರು' ಮಾತಾಡಿದ್ದರು.

'ಹಾಡು ಬರುತ್ತೆ, ಅಲ್ಲ.'

ಓ, ಎಷ್ಟು ಇಂಪಾಗಿತ್ತು ಆ ಧ್ವನಿ! ಅವರು ಮತ್ತೆ ಮಾತಾಡಬಾರದೆ ಎನ್ನಿಸಿತ್ತು ಅವಳಿಗೆ. 'ಅವರು' ಚೆನ್ನಾಗಿರಲೇ ಬೇಕು. ಅಂತಹ ಇಂಪಾದ ಕಂಠದ ಒಡೆಯ ಸುಂದರನಾಗಿರಲೇಬೇಕು.

ಹಾಡು ಮುಗಿಸಿದ ಮೇಲೆ, ಹಿರಿಯರಿಗೆಲ್ಲಾ, 'ಅವರಿಗೂ' ನಮಸ್ಕಾರ ಮಾಡಿ ಯಾಯಿತು. ಆಗಲೂ ಅವರನ್ನು ನೋಡುವ ಧೈರ್ಯವಾಗಲಿಲ್ಲ. ಆದರೆ, ಬಾಗಿಲು ದಾಟ ಹೋಗುವಾಗೊಮ್ಮೆ, ಒಂದೇ ಒಂದು ಸಾರಿ, ಒಂದೇ ಒಂದು ಸಾರಿ 'ಅವರನ್ನು' ಅವಳು ನೋಡಿದಳು.

ಕಪ್ಪಗಿದ್ದರೂ ಸುಂದರವಾಗಿದ್ದರು 'ಅವರು'. ಅವರ ಕಣ್ಣಲ್ಲಿ ಯಾವುದೋ

ತೇಜಸ್ಸು. ಒಳ್ಳೆಯವರು, ಒಳ್ಳೆಯವರು ಎಂದು ನಾಗರತ್ನನ ಅಂತರಾತ್ಮ ನುಡಿಯಿತು.

ಅವರ ನೆನಪಾದಾಗಲೆಲ್ಲಾ ಯಾವುದೋ ಮಧುರ ಅನುಭವ.

ಇಲ್ಲ....ಅವರ ಬಳಿ ಮಾತಾಡಲು ಆಗಲೇ ಇಲ್ಲ. ಅದು ಸಾಧ್ಯವೂ ಇರಲಿಲ್ಲ.

ದಿನ ಕಳೆದು....ತಾವಿಬ್ಬರೂ ಒಂದಾಗುವ ದಿನ ಹತ್ತಿರ ಬಂದಿತ್ತು. ಅವರು!.... 'ಅವರ' ಬಳಿಯೇ ಸದಾ ತಾನಿರಬಹುದು. ಅವರು........ಅವರು ಎಷ್ಟೊಂದು ಒಳ್ಳೆಯವರು....ತನಗಾಗಿ ಸೀರೆಗಳನ್ನೆಲ್ಲಾ ಅವರೇ ಆಯ್ದು ತರಿಸಿದರಂತೆ.

ಅಮ್ಮ ಸದಾ ಹೇಳುತ್ತಲೇ ಇದ್ದರು.

'ನಿನ್ನ ಗಂಡ ನಿನ್ನ ಪಾಲಿಗೆ ದೇವರ ಹಾಗೆ ಕಣೇ! ಒಂದು ದಿವಸ ಅವನು ಹಾಕಿದ ಗೆರೆ ಮೀರಬಾರದು ನೀನು.'

ಮೌನದ ಸಮ್ಮತಿಯಿತ್ತಿದ್ದಳು ನಾಗರತ್ನ....

'ಏನು ಯೋಚಿಸ್ತಿದೀಯೆ?' ಎಂದು ಸುಂದರಿ ಹಾಸ್ಯ ಮಾಡಿದಳು. ನಾಗರತ್ನನ ಯೋಚನಾಮಾಲೆ ಫಕ್ಕನೆ ಕಡಿದುಬಿತ್ತು. ಬೆದರಿ ತಲೆಯೆತ್ತಿದಳು ನಾಗರತ್ನ.

'ಓ....ನಂಗೊತ್ತು....ನಿನ್ನ 'ಅವರ' ವಿಚಾರ ಯೋಚಿಸ್ತಿದ್ದೆ ಅಲ್ವ?'

ಅವಳ ಮಾತು ಕೇಳಿ ತಲೆ ಬಾಚಿಕೊಳ್ಳುತ್ತಿದ್ದ ಹಲವಾರು ಜನ ಹೆಂಗಸರು ಗಟ್ಟಿಯಾಗಿ ನಕ್ಕುಬಿಟ್ಟರು. ಆ ನಗುವಿನ ಅಲೆ ನಿಲ್ಲದೆ, ಕೊಠಡಿಯ ಗೋಡೆಗಳ ಗಪ್ಪಳಿಸಿ ಮತ್ತೆ ಪ್ರತಿಧ್ವನಿಯಾಯಿತು.

ಅಲಂಕಾರ ಮುಗಿಸಿ ಮೇಲೆದ್ದು ಸುಂದರಿ ಕಣ್ಣವೆ ಹೊಡೆಯದೆ ನಾಗರತ್ನನನ್ನು ನೋಡಿದಳು....ಅವಳ ಮುಖದ ಮೇಲೆ ಮಂದಹಾಸ ಮೂಡಿತು.

'ಎಷ್ಟು ಮುದ್ದಾಗಿ ಕಾಣ್ತೀಯ ಗೊತ್ತೆ ನಾಗೂ? ಈಗ ನಿಮ್ಮ 'ಅವ್ರು' ಇರಬೇಕಾಗಿತ್ತು......'

'ಸಾಕು ನಿಲ್ಸೆ.'

ಮತ್ತೆ ನಗು.

ಅವರೆಲ್ಲಾ ಹೊರಗೆ ಹೋದಾಗ ನಾಗರತ್ನ ಕನ್ನಡಿಯಲ್ಲಿ ನೋಡಿಕೊಂಡಳು. ಕಿವಿಯಲ್ಲಿ ಓಲಾಡುತ್ತಿದ್ದ ಮುತ್ತು ಕೆಂಪಿನ ಜುಂಕಿ ಕೆನ್ನೆಯನ್ನು ಮುತ್ತಿಡುತ್ತಿತ್ತು. ಕತ್ತಿನಲ್ಲಿ ನಕ್ಷತ್ರಮಾಲೆಯಂತೆ ಮಿಂಚುತ್ತಿದ್ದ ಹರಳಿನ ನೆಕ್‌ಲೇಸು........ತಲೆಯಲ್ಲಿ

ಮುಡಿಸಿದ್ದ ದುಂಡು ಮಲ್ಲಿಗೆಯ ಹೂ ಹಿಂದಿನಿಂದ ಅವಳೊಡನೆ ಕಣ್ಣುಮುಚ್ಚಾಲೆ ಯಾಡುತ್ತಿತ್ತು.

....................

ವರನನ್ನು ಇದಿರ್ಗೊಳ್ಳಲೆಂದು ಹೋದ ಹೆಂಗಸರು ನಿರಾಶರಾಗಿ ಹಿಂದೆ ಬಂದಿದ್ದರು.

'ಇನ್ನೂ ಬರ್ಲೇ ಇಲ್ಲ ಬಸ್ಸು. ನಿಂತು ಸಾಕಾಯ್ತು' ಎಂದರವರು.

ರಾತ್ರಿ ಒಂಭತ್ತು ಘಂಟೆಯಾಯಿತು. ಕಾದು ಬೇಸರ ಬಂತು. ಅಮಂಗಳ ವಿಚಾರ ನಾಗರತ್ನನ ಮನದ ಮೇಲೆ ನರ್ತಿಸತೊಡಗಿದುವು.

ಒಂಭತ್ತೂವರೆ !

ಇಲ್ಲ. ವಾಲಗದ ಸದ್ದು ಹತ್ತಿರವಾಗಲೇ ಇಲ್ಲ. ಮೆರವಣಿಗೆ ಬರುವ ಸೂಚನೆ ಸಹ ಕಾಣಲಿಲ್ಲ.

ಹೆದರಿಕೆಯ ಮಾಯಾಮರೀಚಿಕೆ ಹಣಿಕಿಹಾಕಿತು.

'ಬಸ್ಸಿಗೆ ಏನಾದ್ರೂ ಆಗಿರಬಹುದೆ ?....ಅವರಿಗೆ ? ?'

ಅವಳ ಮುಖ ಬಾಡಿತು. ಕಣ್ಣಂಚಿನಲ್ಲಿ ನೀರು ಕಾಣಿಸಿಕೊಂಡುವು.

ನಿಮಿಷ ಕಳೆದ ಹಾಗೆ ಹಾಸಿಗೆಗೊರಗಿ ಕುಳಿತಳು ನಾಗರತ್ನ. ಹಾಗೆಯೇ ನಿದ್ದೆಯ ಜೊಂಪು ಹತ್ತಿತು....ಅದರಲ್ಲೇ ಸುಂದರವಾದ ಕನಸುಗಳು. 'ಅವರು' ಬಂದಹಾಗೆ....ಜೊತೆಜೊತೆಯಾಗಿ ಅಲೆದಾಡುತ್ತಿರುವ ಹಾಗೆ....

ಹೊರಗೆ ಗಡಿಬಿಡಿ ಕೇಳಬಂತು.

ವರನನ್ನು ಇದಿರ್ಗೊಳ್ಳಲು ಹೋದವರು ವಾಪ್ಸು ಬಂದಿದ್ದರು. ವಾಲಗ ಹಾಡುತ್ತಿರಲಿಲ್ಲ, ಬ್ಯಾಂಡ್ ನಿಶ್ಶಬ್ದವಾಗಿತ್ತು.

'ಬಸ್ಸು ಬರಲೇ ಇಲ್ಲ....ಏನಾಗಿದೆಯೋ ದೇವರಿಗೇ ಗೊತ್ತು' ಎಂದು ಯಾರೊ ಉದ್ಗಾರ ತೆಗೆದರು.

ಬೆಚ್ಚಿ ನಾಗರತ್ನ ಕಣ್ಣು ತೆರೆದಳು. ವಾಸ್ತವತೆ, ಸ್ವಪ್ನವನ್ನು ಸುಳ್ಳು ಮಾಡಿತ್ತು.

ಅವಳ ದೇವರು ಬರಲೇ ಇಲ್ಲ !

೩

ಕಾತರದ ಕಣ್ಣಿನಿಂದ ಬೀದಿಯುದ್ದಕ್ಕೂ ದೃಷ್ಟಿ ಹರಿಸಿದರು ಸುಮಂಗಲಮ್ಮ. ಇದೊಂದೇ ಸಾರಿಯಲ್ಲ. ಹಾಗೆ ಹತ್ತಾರುಬಾರಿ ಆ ಹಾದಿ ನೋಡಿಯಾಗಿತ್ತು.

ಉರಿ ಬಿಸಿಲು ಏರುತ್ತಲೇ ಹೋಗಿತ್ತು. ಆದರೆ ಅವರು ದಾರಿ ಕಾಯುತ್ತಿದ್ದ ವ್ಯಕ್ತಿ ಬರಲೇ ಇಲ್ಲ.

ಆಯಾಸದಿಂದ ಬಾಗಿಲಲ್ಲೇ ಕುಳಿತರು ಅವರು. ಶುಭ, ಅಶುಭ ಚಿಂತೆಗಳೆರಡೂ ಅವರ ಮುಖದಲ್ಲಿ ನರ್ತಿಸತೊಡಗಿದವು.

'ಏನಾಯಿತೋ....ಏನಾಯಿತೋ ?'

ಆ ಹೃದಯದ ಹಲುಬನ್ನು ದೂರಮಾಡಬೇಕೆಂದು ಪ್ರತಿಸಾರಿ ಅನಿಸಿದರೂ, ಅದನ್ನು ಗೆಲ್ಲಲಾಗದೆ....ಅದೇ ಸ್ಥಿತಿಗೆ ಮತ್ತೆ ಮತ್ತೆ ಬಂದು ಮುಟ್ಟುತ್ತಿದ್ದರು.

ದೂರದ ಮನೆಯುವರು ಹೊರಗೆ ಹಾಕಿದ ಎಂಜಲೆಲೆಗಾಗಿ ನಾಯಿಯೊಂದು ಓಡಿಬಂತು....ಇನ್ನೊಂದು ನಾಯಿ....ಬೌ ಬೌ ಸದ್ದು....ಜಗಳ....

'ಅಯ್ಯೋ ಪರಮಾತ್ಮಾ....ಏನು ಪ್ರಪಂಚನಪ್ಪಾ !'

ನಿಟ್ಟುಸಿರು ಬಿಟ್ಟರು ಅವರು.

ದೂರದಲ್ಲಿ ಅವಸರ ಅವಸರವಾಗಿ ಯಾರೋ ನಡೆದು ಬರುತ್ತಿದ್ದರು. ಕಣ್ಣು ದೂರಕ್ಕೆ ಹರಿಸಿ ನೋಡಿದಾಗ ಅವರ ಮುಖದ ಮೇಲೆ ತೃಪ್ತಿಯ ನಗೆ ತುಳುಕಿತು. ಆದರೆ ಆ ವ್ಯಕ್ತಿ ಹತ್ತಿರ ಹತ್ತಿರವಾದ ಹಾಗೆ ಆ ನಗೆ ಬತ್ತಿಹೋಯಿತು.

ಅವಳು ಪಕ್ಕದ ಮನೆಯ ಹುಡುಗಿ !

ಒಳಗೆ ನಡೆದರು ಸುಮಂಗಲಮ್ಮ. ಬರಲು ಇನ್ನೂ ತಡವಾಗಬಹುದು. ಅಷ್ಟರಲ್ಲಿ ದೇವರ ಪೂಜೆಯಾದರೂ ಮಾಡಬಾರದೆ ?

ತುಪ್ಪದ ದೀಪ ಹಚ್ಚಿಟ್ಟು ವಿನೀತರಾಗಿ ಬೇಡಿಕೊಂಡರು.

' ನನ್ನ ಕಂದನಿಗೆ ಒಳ್ಳೇದು ಮಾಡಪ್ಪಾ.'

ಅಲುಗಾಡುತ್ತಿದ್ದ ಆ ದೀಪವನ್ನು ನೋಡುತ್ತಿದ್ದ ಹಾಗೆ ಆ ದೀಪದ ಕುಡಿ ದೊಡ್ಡದಾಗಿ, ಚಿತೆಯ ಹಾಗೆ ಕಾಣಿಸಿತು. 'ಅವರ' ಚಿತೆ....ಓ....ಎಷ್ಟೊಂದು ಭಯಂಕರ....ಅದು ನೋಡಿದ ಮೇಲೆ, ಅವರ ಹೃದಯ ಬಿರಿದುಹೋಗಿತ್ತು.... ಆದರೂ, ಆದರೂ ಅವರು ಬದುಕಿದರು. ಬಾಳಿನ ದೀಪ ನೊಂದಿದಾಗಲೂ ಅವರು ಉಸಿರಾಡಿದುದು ವಿಮಲಳಿಗಾಗಿ !

ಆಗ ಆರು ವರ್ಷದ ಮಗು ವಿಮಲ.

ಅವಳನ್ನು ಓದಿಸಬೇಕೆಂದು ಅವರಿಗೆ ತುಂಬಾ ಆಸೆಯಿತ್ತು. ಆದರೆ ಇರುವ ಹಣದಲ್ಲಿ ಎಷ್ಟು ಓದು ಸಾಧ್ಯ ?

ವಿಮಲ ಬೆಳೆದಳು. ಎಲ್ಲ ಹೆಣ್ಣು ಮಕ್ಕಳಂತೆ-ಹೆದರಿ ನಡುಗಿ ಬಾಗುವ ರೀತಿ

ಅವಳದಲ್ಲ. ಏನೇನೋ ಕಲ್ಪನೆಗಳು, ಆದರ್ಶಗಳು ಅವಳಿಗೆ. ಹುಚ್ಚು ಹುಡುಗಿ ವಿಮಲ !

ವಿಮಲಾಗೆ ಮದುವೆ ಮಾಡಬೇಕಾಗಿತ್ತು. ಆದರೆ ಎಷ್ಟೊಂದೋ ಜನ ಬಂದು ಹಿಂದೆ ಹೋಗಿದ್ದರು. ಎಲ್ಲರಿಗೂ ಹಣ ಬೇಕಾಗಿತ್ತು. ಹೆಣ್ಣಲ್ಲ. ನಿರಾಶೆಗೊಂಡ ವಿಮಲ, ಕ್ರೋಧದಿಂದ ಹೇಳಿದ್ದಳು.

'ಮದುವೇನೇ ಬೇಡಮ್ಮ....ನಾನು ಕೆಲ್ಸಕ್ಕೆ ಸೇರಿ ನಿನ್ನ ನೋಡ್ಕೋತೀನಿ.' ಅಷ್ಟು ಯೋಚಿಸುವ ಹೊತ್ತಿಗೆ, ಅವರ ಕಣ್ಣು ತುಂಬಾ ನೀರು ತುಂಬಿತ್ತು. ಸೀರೆಯ ಸೆರಗು ತೆಗೆದು ಮೆಲ್ಲನೆ ಒರೆಸಿಕೊಂಡರು.

ತಂದೆಯಿದ್ದಿದ್ದರೆ ವಿಮಲ ಸುಖವಾಗಿರುತ್ತಿದ್ದಳು....ತಬ್ಬಲಿ ವಿಮಲೂ........ ಅವರಿದ್ದಿದ್ದರೆ....

ಅತ್ತರು ಸುಮಂಗಲಮ್ಮ. ಹೃದಯದ ಹೊರೆಯೆಲ್ಲಾ ಕಳೆಯುವ ಹಾಗೆ ಅತ್ತರು. ಬಲು ಹೊತ್ತಾದ ಮೇಲೆ ಸಮಾಧಾನ ಬಂತು........ಹಾಗೇ ನಿದ್ದೆಯ ಮಂಪರು.

ಬಾಗಿಲು ತಟ್ಟಿದ ಸದ್ದು.

'ಅಮ್ಮಾ....ಅಮ್ಮಾ....'

ಕಣ್ಣು ಹೊಸಗಿಕೊಂಡರು. ಬಾಗಿಲು ತೆಗೆದಾಗ ಒಳಬಂದಳು ವಿಮಲ.

ಆತುರದಿಂದ ಅವಳ ಮುಖದ ಕಡೆ ವೀಕ್ಷಿಸಿದರು. ಅವಳ ಮುಖ ಗಂಭೀರ ವಾಗಿತ್ತು, ಯಾವ ಭಾವ ವಿಕಾರವೂ ಇಲ್ಲದೆ ಇದ್ದ ಅವಳ ಮುಖ ನೋಡಿ, ಏನನ್ನೂ ನಿರ್ಧರಿಸುವುದು ಸಾಧ್ಯವಿರಲಿಲ್ಲ.

'ವಿಮಲೂ....' ಎಂದರು ಮೆಲ್ಲನೆ.

ನಿಧಾನವಾಗಿ ವಿಮಲ ಹಾಸಿಗೆಯ ಮೇಲೆ ಕುಳಿತುಕೊಳ್ಳುತ್ತಾ ಹೇಳಿದಳು.

'ಕೆಲ್ಸ ಸಿಕ್ಲಿಲ್ಲಮ್ಮ ಬೇರೆಯವರಿಗೆ ಕೆಲ್ಸಕೊಟ್ರು....'

ತಲೆ ತಿರುಗಿದ ಹಾಗಾಯಿತು, ಆ ಮಾತು ಕೇಳಿ. ಸಿಕ್ಕಲಿಲ್ಲವೆ? ಕೊನೆಗೂ ಸಿಕ್ಕಲಿಲ್ಲವೆ ? ಮುಂದೆ ಗತಿ ?....ಗೋಡೆಗೊರಗಿ ನಿಂತರು ಅವರು. ಮುಖ ಪೂರ್ಣವಾಗಿ ಬೆವರಿಹೋಗಿತ್ತು. ಬಿಳಿಚಿಕೊಂಡಿದ್ದ ತಾಯಿಯ ಮುಖ ನೋಡಿ ನಕ್ಕಳು ವಿಮಲ.

'ನಿಂಗೆ ದುಃಖವಾಗುತ್ತೆ ಅಂತ ನಂಗೊತ್ತಿತ್ತು ಅಮ್ಮ. ಆದ್ರೆ ಈ ಕೆಲ್ಸ ಹೋದ್ರೆ ಇನ್ನೊಂದು ಸಿಗುತ್ತೆ ಬಿಡು. ಈ ಗುಮಾಸ್ತೆ ಕೆಲ್ಸ ನಂಗೆ ಸ್ವಲ್ಪಾನೂ ಇಷ್ಟವಿರ್ಲಿಲ್ಲ ಅಮ್ಮ....ಎಲ್ಲಾದ್ರೂ ಮೇಡಂ ಆದ್ರೆ....'

ವಿಮಲ ಧೈರ್ಯವಾಗಿ ಆ ಮಾತಾಡುತ್ತಿದ್ದಳು. ಆ ಕಂಠ ನಡುಗುತ್ತಿರಲಿಲ್ಲ. ಭವಿಷ್ಯದ ಬಗ್ಗೆ ಯಾವ ಅನಿಶ್ಚಯತೆಯೂ ಇರಲಿಲ್ಲ. ಆದರೆ ತಾಯಿಯ ಹೃದಯ ಕಂಪಿಸುತ್ತಿತ್ತು. ತಮ್ಮ ಮುಂದಿನ ಬದುಕು ವಿಮಳಲ ಕೆಲಸದ ಮೇಲೆ ಆಧಾರ ವಾಗಿತ್ತಲ್ಲವೆ ?

ಕೆಟ್ಟ ಯೋಚನೆಗಳ ಕಪ್ಪು ನೆರಳು ಆ ತಾಯಿಯ ಮುಖವನ್ನು ಬಳಸಿದುವು. ಮುಂದಿನ ದಿನಗಳ ಕಲ್ಪನೆ ಭೀಕರವಾಗಿತ್ತು. ಅಂತಹ ಕಾಲವನ್ನು ತಾವಿಬ್ಬರೂ ಯಾರ ಆಸರೆಯೂ ಇಲ್ಲದೆ ಎದುರಿಸಬೇಕೆ ? ಸಾಧ್ಯವೆ ? — ಅವರಿದ್ದಿದ್ದರೆ ! ಕಂಪಿಸುತ್ತಲೇ ಮಾತಾಡಿದರು ಆಕೆ.

'ನಿಮ್ಮಣ್ಣ ಇದ್ದಿದ್ರೆ ಹೀಗೆಲ್ಲಾ ಆಗ್ತಿರಲಿಲ್ಲ ವಿಮ್ಲೂ....'

ಅವರ ಹೃದಯದ ದುಃಖವೆಲ್ಲಾ ಆ ಒಂದು ಮಾತಿನಲ್ಲಿ ಪ್ರತಿಬಿಂಬವಾಯಿತು. ವಿಮಲ ತಂದೆಯನ್ನು ನೆನೆಸಿಕೊಂಡಳು. ಅವಳ ಕಣ್ಣು ತೇವವಾಯಿತು.

ವಿಮಲಾಗೆ ದುಃಖವಾಗಲೆಂದು ತಾಯಿ ಆ ರೀತಿ ಮಾತಾಡಿರಲಿಲ್ಲ. ಆದರೆ ಬಾಯಿ ತಪ್ಪಿ ಆ ಮಾತು ಬಂದಿತ್ತು. ಅದನ್ನೀಗ ಮರೆಸಲೋ ಎಂಬಂತೆ, 'ಏಳಮ್ಮ ದಿನಾ ಗೋಳು ಇದ್ದೇ ಇದೆ....ಮಾಡಿಟ್ಟ ಅನ್ನ ಆರಿ ತಂಗುಳಾಗುತ್ತಿದೆ.'

ಯಾಂತ್ರಿಕವಾಗಿ ವಿಮಲ ಮೇಲೆದ್ದು ಒಳಗೆ ನಡೆದಳು. ಅಡಿಗೆ ಮನೆಯ ಒಂದು ಮೂಲೆಯ ಗೂಡಿನಲ್ಲಿ ದೇವರಿಗೆ ದೀಪ ಹಚ್ಚಿಟ್ಟಿದ್ದರು ತಾಯಿ....ದೇವರನ್ನು ನೋಡಿ ಅವಳಿಗೆ ಭಕ್ತಿಭಾವ ಬರಲಿಲ್ಲ.

ಊಣಬಡಿಸಿದ ತಾಯಿ ಮತ್ತೆ ಅಂತರ್ಮುಖಿಯಾದರು. ಪುನಃ ಭವಿಷ್ಯದ ಬಗ್ಗೆ ಅವರ ಯೋಚನೆ ಓಡಿದುವು. ಕೊನೆಯಿಲ್ಲದ ಹಾಗೆ ಒಸರಿ ಬರುತ್ತಿತ್ತು. ಆ ಕಲ್ಪನೆಗಳ ಹಿಂಡು, ಅವೆಲ್ಲವನ್ನೂ ತಮ್ಮಲ್ಲೇ ಹೊತ್ತಿಟ್ಟುಕೊಳ್ಳಲಾರದೆ ಮಾತಾಡಿದರು.

'ಏನಾಗುತ್ತೋ ವಿಮ್ಲೂ. ನಂಗಂತೂ ಭಯವಾಗುತ್ತೆ!'

ಬೆಕ್ಕಸ ಬೆರಗಾಗಿ ವಿಮಲ ತಾಯಿಯನ್ನು ನೋಡಿದಳು. ಜೀವನದ ಸಾವಿರ ಸಂಕಷ್ಟ ಎದುರಿಸಿದ ತಾಯಿಯ ಬಾಯಲ್ಲಿ ಅಂತಹ ಮಾತು !

'ಭಯ ಯಾಕಮ್ಮ ? ಇವತ್ತಲ್ಲ ನಾಳೆ ಕೆಲ್ಸ ಸಿಗುತ್ತೆ....ಆದ್ರೆ ಕಾಯಬೇಕು ಅಷ್ಟೆ....' ಒಂದು ನಿಮಿಷ ತಡೆದು ವಿಮಲ ಮುಂದುವರಿಸಿದಳು. 'ನಾನಿನ್ನೂ ಬದುಕಿದೀನಮ್ಮ....ಈ ವಿಮಲೂ ಇರೋವರೆವಿಗೆ ನೀನು ದುಃಖ ಪಡಬೇಕಾಗಿಲ್ಲ.'

ಸುಮಂಗಲಮ್ಮ ತಲೆಯೆತ್ತಿ ವಿಮಲಳನ್ನು ನೋಡಿದರು. ಅಭಿಮಾನ ತುಂಬಿ ಬಂತು. ಅಂತಹ ಮಾತಾಡಿದವಳು ತಮ್ಮ ಮಗಳೇ ಅಲ್ಲವೆ ? ಆದರೆ......ವಿಮಲಾಗೆ ಎಷ್ಟೊಂದು ಕಷ್ಟ......ಅವಳ ವಯಸ್ಸಿನ ಹುಡುಗಿಯರು ಗಂಡನ ಮನೆಯಲ್ಲಿ ಸಂತೋಷವಾಗಿರುವಾಗ !....ವಿಮಲೂಗೆ ಆ ಭಾಗ್ಯ ಎಂದು ಬರುತ್ತದೋ ! ದೇವರು ಯಾವಾಗ ಕಣ್ಣು ಬಿಟ್ಟು ನೋಡುತ್ತಾನೋ !

'ಏನು ಯೋಚಿಸ್ತಿದೀಯಮ್ಮ ?' ಎಂದು ವಿಮಲ ಕೇಳಿದಳು.

'ದೇವರ್ಗೆ ನಮ್ಮ ಮೇಲೆ ಎಂದು ದಯ ಬರುತ್ತೋ ಅಂತ ಅನ್ಕೊಳ್ತಿದ್ದೆ........ ಮುಖ್ಯ ನಮ್ಮ ಅದೃಷ್ಟ ಕೆಟ್ಟ ಅದೃಷ್ಟಾ ವಿಮ್ಲೂ......'

ವಿಮಲ ನಕ್ಕುಬಿಟ್ಟಳು.

'ಜೀವನ ಕಷ್ಟವಾದಾಗ, ಬೇರೆ ದಾರಿ ತೋರದೆ ದೇವರ ಮೊರೆ ಹೋಗೋದು ಹೇಡಿತನ ಅಮ್ಮ.'

ಆದರೆ ತಾಯಿಗೆ ಆ ಮಾತು ಸಹನೆಯಾಗಲಿಲ್ಲ. ದೇವರು ಒಳ್ಳೆಯದು ಮಾಡುವನೆಂಬ ಭರವಸೆಯಿಂದಲೇ ಕಾದರು.

ಆದರೆ ದೇವರು ಧರೆಗಿಳಿದು ಬರುವುದು ಸಾಧ್ಯವೇ ಇರಲಿಲ್ಲ.

—ಅನುಪಮಾ

# ಮಾನವ ಪ್ರೇಮ

ಸೃಷ್ಟಿಯ ಆರಂಭದ ಕತೆ. ಸುಂದರ ಜಗತ್ತಿನಲ್ಲಿ ಮಾನವನಿದ್ದ; ಮಾನವನಿಗೊಂದು ಹೃದಯವಿತ್ತು; ಹೃದಯದಲ್ಲಿ ಆರಾಧನೆಯ ಭಾವವಿತ್ತು. ಆದರೆ ಆರಾಧಿಸಲು ಮೂರ್ತಿಯೊಂದಿರಲಿಲ್ಲ. ಸುಂದರ ಪ್ರಭಾತದ ಶೀತಲ ಕಿರಣಗಳಲ್ಲಿ ಕೊಳದಲೆಗಳು ಕುಣಿಯುವುದನ್ನು ಕಂಡು ಎದೆ ಕಾತರಿಸುತ್ತಿತ್ತು. ಬಿರಿದ ಕಮಲಗಳೆದೆಯೊಳಗಿಂದ ಭೃಂಗಗಳೆದ್ದು ಮೈ ಕೊಡವಿ ಹಾಡಿ ಹಾರಲು ಮೊದಲಿಟ್ಟಾಗ ಎದೆ ಸುಯ್ಯುತ್ತಿತ್ತು. ಹಕ್ಕಿಗಳು ಹೃದಯಾಂತರಾಳದಿಂದ ಉದಯರಾಗ ಹಾಡಿ ಪೂರ್ವದ ಕಡೆಗೆ ಹಾರಿ ಸೂರ್ಯನನ್ನು ಸ್ವಾಗತಿಸುವಾಗ ಮನಸ್ಸು ಅವುಗಳೊಂದಿಗೇ ಹಾರಿ ಹೋಗುತ್ತಿತ್ತು. ಮೋಡಗಳಿಗೆ ರಂಗೆರಚಿ ಅರುಣೋದಯವಾದಾಗ ಯಾವುದೋ ಒಂದು ಅವ್ಯಕ್ತರಾಗ ಎದೆಯಲ್ಲಿ ಮಿಡಿಯುತ್ತಿತ್ತು. ಹಗಲೆಲ್ಲ ಜೀವರಾಶಿಗೆ ಬಲಕೊಟ್ಟು ಸೂರ್ಯ ಸಂಜೆ ತನ್ನ ಕಿರಣಗಳನ್ನು ಸಾಗರದ ನೀಲದಲ್ಲಿ ಬಚ್ಚಿಟ್ಟಾಗ ಮನಸ್ಸಿನ ಮೇಲೆ ದುಗುಡದ ತೆರೆ ಸರಿಯುತ್ತಿತ್ತು. ಯಾವುದೋ ಹೇಳಲಾರದ, ತಾಳಲಾರದ ದುಃಖ ಎದೆಯ ಬಾಗಿಲು ತೆರೆದು ಒಳಗೆ ನಿದ್ರಿಸುತ್ತಿತ್ತು. ಮತ್ತೆ–ಸಂಜೆರಾಗದ ಜೋಗುಳದ ಸವಿನುಡಿಯಲ್ಲಿ ಸೂರ್ಯ ನಿದ್ರಿಸಿದನಂತರ ನೀಲಿಯ ಮಂಚದಮೇಲೆ ಮಲ್ಲಿಗೆಯ ಹೂಗಳನ್ನೆರಚಿ ಇರುಳು ಚಂದ್ರನ ಆಗಮನಕ್ಕಾಗಿ ಬಳುಕಿ ಕಾದು ನಿಂತಾಗ ಕಾತರದಿಂದ ಹೃದಯ ಬೇಯುತ್ತಿತ್ತು. ಚಂದ್ರೋದಯವಾಗಿ ಎಲ್ಲೆಡೆಯೂ ಬೆಳ್ಳಿಯ ಬೆಳಕಿನ ಚಲುವೆಯಿಂದ ಹನಿ ಚಿಮ್ಮಿದಾಗ ಹೃದಯ ಅವ್ಯಕ್ತ ನೋವಿನಿಂದ 'ಅಯ್ಯೋ!' ಎನ್ನುತ್ತಿತ್ತು. ಆಗ ಮಾನವ ಹನಿಗೂಡಿದ ಕಣ್ಣಿನಿಂದ ಆಕಾಶದ ಕಡೆಗೇ ನೋಡುತ್ತಾ ಅಸ್ಪಷ್ಟ ಮೌನದಲ್ಲೇ ಬೇಡುತ್ತಿದ್ದ—ಯಾವುದಕ್ಕಾಗಿ—ಏತಕ್ಕಾಗಿ—ಯಾರಿಗಾಗಿ—ಅವನಿಗೇ ತಿಳಿಯದು—ಮಾನವ ದಿನವೂ ಸುತ್ತಲಿನ ಸೌಂದರ್ಯದ ಪ್ರಭಾವದಿಂದ ಹೆಚ್ಚು ಹೆಚ್ಚು ಕಾತರಕ್ಕೊಳಗಾದ. ಆರಾಧಿಸುವ ಮನಸ್ಸಿದೆ—ಆದರೆ ಮಂಟಪದಲ್ಲಿ ಮೂರ್ತಿಯೇ ಇಲ್ಲ.

ದೇವರಿಗೆ ಮಾನವನ ಹೃದಯದ ವೇದನೆ ಮುಟ್ಟಿತು. ಮೂಕ ವೇದನೆಯ ಮೌನದ ಮಹಾ ಸಾಗರದಲೆಗಳ ಬಡಿತಕ್ಕೆ ಹೃದಯವೆಲ್ಲಿ ನುಚ್ಚು ನೂರಾದೀತೋ ಎಂದು ಹೆದರಿದ ದೇವರು. ಮೆಲ್ಲನೆ ಯುಗಗಳುರುಳಿದಂತೆ ಮಾನವ ತನ್ನ ಅಸ್ಪಷ್ಟ ನೋವಿಗೆ ರೂಪುಗೊಟ್ಟ. ತನ್ನ ಹೃದಯವನ್ನೂ ಸುತ್ತಲಿನ ಸೌಂದರ್ಯವನ್ನೂ

ಸೃಷ್ಟಿಸಿದ ದೇವರು ಆರಾಧಿಸಲು ತನ್ನ ಮೂರ್ತಿಯೊಂದನ್ನು ಕೊಡಲಿಲ್ಲವಲ್ಲಾ ಎಂದು ಮಿಡುಕಾಡಿದ—

ಯುಗಯುಗಗಳು ಕಳೆದವು. ಮಾನವರೆಲ್ಲ ದಿನವೂ ಒಂದೆಡೆ ಸೇರಿ ಸಂಜೆಯ ಸೌಂದರ್ಯದ ಸಾಕ್ಷಾತ್ಕಾರದಲ್ಲಿ ದೇವರನ್ನು ಬೇಡಿಕೊಳ್ಳುತ್ತಿದ್ದರು. 'ನಮಗೆ ಹೃದಯ ಕೊಟ್ಟಿರುವೆ—ಹೃದಯದಲ್ಲಿ ಪ್ರೇಮ ತುಂಬಿದೆ. ನಾವು ಪೂಜಿಸಲು ನಮ್ಮ ಹೃದಯದ ಹೂವು ಸಾರ್ಥಕವಾಗಲು, ಒಂದು ಆರಾಧ್ಯ ಮೂರ್ತಿಯನ್ನು—ದೇವತೆಯನ್ನು ಕರುಣಿಸು.'

ಕೊನೆಗೊಮ್ಮೆ ದೇವರಿಗೂ ಹೃದಯ ಕರಗಿ ಬೇಡಿಕೆಯನ್ನೊಪ್ಪಿದ. ವೈಶಾಖ ಶುಕ್ಲ ಹುಣ್ಣಿಮೆಯಂದು ದೇವತೆಯೊಂದನ್ನು ಕಳುಹಿಸಿಕೊಡುತ್ತೇನೆ. ಅದನ್ನು ಸ್ವಾಗತಿಸಲು ಸಿದ್ಧವಾಗಿರೆಂದು ಮಾನವರಿಗೆ ತಿಳಿಸಿದ. ಹುಣ್ಣಿಮೆಯ ಚಂದ್ರನನ್ನು ಕಂಡ ಸಾಗರದಲೆಗಳಂತೆ ಮಾನವರ ಹೃದಯ ಹಿಗ್ಗಿತು. ತಮ್ಮ ಹೃದಯಕ್ಕೆ ಹೊನ್ನ ಮೂರ್ತಿ ಬಂದಿತು. ಇನ್ನು ಹೂವು ಬಾಡಬೇಕಿಲ್ಲವೆಂದು ಕುಣಿದಾಡಿದರು ವೈಶಾಖ ಶುಕ್ಲ ಹುಣ್ಣಿಮೆ—ಅಂದು ದೇವತೆ ಬರುವ ದಿನ—ಅಂದಿಗೆ ಎಲ್ಲ ಸಿದ್ಧತೆಯನ್ನೂ ನಡೆಸಿದರು. ಭಂಗಾರದ ಗುಡಿ ಕಟ್ಟಿದರು—ರತ್ನ ಶಿಲೆಯ ಪೀಠ ಸಿದ್ಧಗೊಳಿಸಿದರು—ದೇವತೆಗೆ ಬೆಳ್ಳಿಯ ಕರೆಯ ಕೊಳದಲ್ಲಿ ಪನ್ನೀರು ತುಂಬಿದರು. ಪೂಜೆಗೆ ತಮ್ಮ ಹೃದಯದ ಒಲವಿನ ಹೂಮಾಲೆ ಹಿಡಿದು ಸಿದ್ಧರಾದರು.

ವೈಶಾಖ ಶುಕ್ಲ ಹುಣ್ಣಿಮೆಯಂದು ರಾತ್ರಿ—ಇನಿತು ದಿನ ಕಾತರಿಸಿ ಕಾತರಿಸಿ ಎದುರು ನೋಡಿದ ರಾತ್ರಿ—ನಡುರಾತ್ರಿ—ಚಂದ್ರ ಆಕಾಶದಲ್ಲಿ ವೈಭವದಿಂದ ಬಿಳಿಯ ದುಕೂಲವುಟ್ಟು ಬಿಳಿಮೋಡದ ಬಿಲ್ಲಿನಿಂದ ಶೃಂಗಾರದ ಬಾಣ ಬಿಟ್ಟೊಡನೆಯೇ ನೀಲಾಕಾಶದ ನಾಲ್ಕು ಮೂಲೆಯಲ್ಲಿ ಕಿರುತಾರೆಗಳು ಸಿಡಿದವು. ಭೂಮಿಯಲ್ಲಿ ಹೃದಯವನ್ನು ಕೈಯಲ್ಲಿ ಹಿಡಿದುಕೊಂಡು ಮಾನವರೆಲ್ಲ ದೇವತೆಯ ಆಗಮನವನ್ನೇ ಎದುರುನೋಡುತ್ತಿದ್ದರು. ಚಂದ್ರನ ಎಡಪಾರ್ಶ್ವದಲ್ಲೊಂದು ಬಿಳಿಯ ಮೋಡದ ಮುಸುಕು ತೇಲುತ್ತ ಬಂದು ಚಂದ್ರಬಿಂಬವನ್ನು ತುಸು ಮುಚ್ಚಿತು. ಈ ನಸು ಬೆಳಕಿನಲ್ಲಿ ಯಾವುದೋ ನಕ್ಷತ್ರ ನೆಲಕ್ಕಿಳಿದಂತೆ ಕಾಣಿಸಿತು. ದೇವತೆಗೆಂದು ಕಟ್ಟಿದ ಗುಡಿಯ ಬಾಗಿಲಿನ ಗಂಟೆಗಳು ಘಲಿರು ಘ ಲಿ ರೆ ನು ತಿ ರ ಲು ಬಾಗಿಲು ಮುಚ್ಚಿಕೊಂಡಿತು.

ಮಾನವರೆಲ್ಲ ಗುಡಿಯ ಬಳಿಗೆ ಓಡಿದರು. ಬಾಗಿಲು ಹಾಕಿತ್ತು. ಬೆಳ್ಳಿಯ ಕರೆಯ ಕೊಳದ ಪನ್ನೀರಿನ ಮೇಲೆ ತಿಂಗಳು ಚಲ್ಲಾಟವಾಡುತ್ತಿತ್ತು. ಕೈಗಳಲ್ಲಿದ್ದ ಹೂಮಾಲೆಗಳು ಘಮಘಮಿಸಿದವು. ಬಾಗಿಲು ತೆರೆದು ಒಳಹೋಗಬೇಕು-ದೇವತೆಗೆ

ಒಲವಿನ ಪೂಜೆ ನೀಡಬೇಕು—ಮಾನವರೆಲ್ಲ ಕೂಡಿ ಬಾಗಿಲು ನೂಕಿದರು. ಬಾಗಿಲು ಸಿಡಿದು ಚೂರಾಗಿ ಬಿದ್ದಿತು—ಮಾನವರೆಲ್ಲ ಒಳಗೆ ನುಗ್ಗಿದರು.

ಏನು ಸುಂದರ ಮೂರ್ತಿ-ಕೋಮಲತೆಯ ಸಾಕ್ಷಾತ್ಕಾರ ಆ ಮುಖ-ಹೂವಿನ ದಳಗಳಲ್ಲಿ ತಲೆ ಮರೆಸಿಕೊಂಡ ಎಳೆ ಮಂಜಿನ ಮೃದುತೆ—ಸಣ್ಣ ಪುಟ್ಟ ಕಲ್ಲು ಹರಳಿನ ಮೇಲೆ ಪಳಪಳನೆ ಹರಿಯುವ ತೊರೆಯ ಮೃದು ಸಂಚಾರದ ಲಾಲಿತ್ಯ—ಇನಿಯನ ನ್ನೆದುರುಗೊಳ್ಳಲು ಇರುಳೆಲ್ಲ ಕಾದು ಬಂದೊಡನೆ ನಾಚಿ ನೀರಾಗಿ ನಸುನಗುವ ಉಷೆಯ ಕಾಂತಿಗಳೆಲ್ಲ ಆ ಮೂರ್ತಿಯಲ್ಲಿ ಕೂಡಿದ್ದುವು. ಮಾನವರ ಕಣ್ಣು ಕುಕ್ಕಿತು ಆ ಮೂರ್ತಿಯ ತೇಜ!—ನಾನು ಮುಂದು ತಾನು ಮುಂದು ಎಂದು ಹೂಮಾಲೆಗಳನ್ನು ದೇವತೆಯ ಮೇಲೆಸೆದರು.

ನೇಸರಿನ ಕಿರಣ ಆಕಾಶದಲ್ಲಿ ಹಾಸು ಹೊಕ್ಕಾಗಿ ಮೂಡಿ ಬಂದಾಗ ಮಾನವರು ಮತ್ತೆ ತಮ್ಮ ಆರಾಧ್ಯದೇವತೆಯನ್ನು ಕಾಣಲು ಬಂದರು. ಗುಡಿಯಲ್ಲಿ ಬರಿಯ ಹೂವಿನ ರಾಶಿ—ಪೇರಿಸಿದ ಹೂಮಾಲೆಗಳಾಗಲೇ ಒಣಗುತ್ತಿದ್ದವು. ಮೆಲ್ಲನೆ ಆ ರಾಶಿ ತೆಗೆದು ನೋಡಿದರೆ ಅಡಿಯಲ್ಲಿ ನಿರ್ಜೀವ ದೇವತೆಯ ಮೂರ್ತಿ ಬಿದ್ದಿದ್ದಿತು. ಒಲವಿನ ಹೂವಿನ ರಾಶಿಯ ಭಾರ-ಹೊರೆ ತಾಳಲಾರದೆ ದೇವತೆ ಪ್ರಾಣ ನೀಗಿತ್ತು—ಮಾನವರೆಲ್ಲ ಕಣ್ಣೀರು ಸುರಿಸಿದರು. ಮತ್ತೆ ದೇವರಲ್ಲಿ ಮೊರೆಯಿಟ್ಟರು—ಈ ಬಾರಿ ದೇವತೆಯನ್ನು ಸರಿಯಾಗಿ ನೋಡಿಕೊಳ್ಳುವೆವು—ಮತ್ತೊಮ್ಮೆ ದಯೆ ತೋರೆಂದು ಕೂಗಿ ಕರೆದು ಗೋಳಾಡಿದರು.

ಮತ್ತೆ ಹಲವು ಯುಗಗಳು ಕಳೆದವು. ದೇವರಿಗೆ ಮಾನವರ ಹೃದಯದ ಕೊರತೆಯರಿವಾಗಿ ಮತ್ತಾವ ದೇವತೆಯನ್ನಾದರೂ ಕಳುಹಿಸೋಣವೆಂದುಕೊಂಡು ದೇವತೆಗಳನ್ನೆಲ್ಲಾ ಕರೆಸಿ ಕೇಳಿದ. ಆದರೆ ಯಾರೂ ಒಪ್ಪಲಿಲ್ಲ. ಮಾನವ ಹೃದಯದ ಪ್ರೇಮದ ಹೊರೆ ತಡೆಯಲು ತಮ್ಮಿಂದಾಗದೆಂದರು ಎಲ್ಲಾ. ಎಷ್ಟೇ ಹೇಳಿದರೂ ಯಾರೂ ಭೂಮಿಗೆ ಹೋಗಿ ಮಾನವನ ಆರಾಧ್ಯ ದೇವತೆಯಾಗಲೊಪ್ಪಲಿಲ್ಲ. ಕೊನೆಗೆ ದೇವರು ಕೂಡ ನಿರಾಶನಾದ.

ಮಾನವರ ಹೃದಯದ ವಿರಹದ ಜ್ವಾಲಾಮುಖಿಯಲ್ಲಿ ದೇವರಿಗೆ ಶಾಂತಿ ಸಿಗದಾಯಿತು. ಎಂತಾದರೂ ಸರಿ ಮಾನವರ ಹೃದಯದಕ್ಕೆ ಸಮಾಧಾನ ನೀಡಬೇಕು. ರಾತ್ರಿ!—ಹೊಸ ವರ್ಷದ ಹಿಂದಿನ ರಾತ್ರಿಯ ನಟ್ಟಿರುಳು—ದೇವರೇ ನಾಳೆ ಹೊಸ ವರ್ಷ—ಹೊಸ ವರ್ಷಕ್ಕೆ ಆರತಿ ನೀಡಲು ಹೃದಯ ರಕ್ತ ತರುವುದೇ?—ಯುಗ ಯುಗಗಳ ಬೇಡಿಕೆಯನ್ನು ಈ ಯುಗಾದಿಯಲ್ಲಿಯೂ ತೀರಿಸಲಾರೆಯೋ? ಎಂದು

ಮಾನವ ಮೋಡದೊಂದಿಗೆ ಮರುಗಿದ. ದೇವರು ಮೋಡದ ಮರೆಯಲ್ಲಿ ಮಲಗಿದ್ದವ ನೆದ್ದು ಹಲವು ನೀಲಿ ಕಲ್ಲುಗಳನ್ನು ಉದುರಿಸಿದ. ಇದ್ದಕ್ಕಿದ್ದಂತೆ ಸಿಡಿದ ಮಿಂಚಿನ ಹೊಂಚು ಬೆಳಕಿನಲ್ಲಿ ಮಾನವ ಆ ಹಸದ ಕಂಡ. 'ನಿನ್ನ ಹೃದಯದ ಪ್ರೇಮದ ಹೊರೆ ಹೊರಲು, ಭಾರ ತಾಳಲು ಕಲ್ಲಿನ ಹೊರತು ಮತ್ತಾರಿಗೂ ಆಗದು. ಅದನ್ನೇ ಆರಾಧಿಸು' ಎಂದ ದೇವರು ಮೋಡದ ಮರೆಯಿಂದ. ನಿರಾಶೆಯಿಂದ ನಂದುತ್ತಿದ್ದ ಮಾನವನಿಗೆ ಯಾವುದಾದರೂ ಒಲವಿನ ಮೂರ್ತಿ ದೊರಕೀತೇ ಎನ್ನಿಸಿತು. ಅಪಾರ ಕರುಣೆ ತೋರಿದ ದೇವರಲ್ಲಿ ಕೃತಜ್ಞತೆಯ ಕಣ್ಣೀರು ಸಮರ್ಪಿಸಿ ಶಿಲಾ ಮೂರ್ತಿಗಳನ್ನೇ ಅಪ್ಪಿದ---ತನ್ನ ಹೃದಯದ ಒಲವಿನ ಹೂವನ್ನು ಅದಕ್ಕೆ ಮುಡಿಸಿದ—ಭಂಗಾರದ ಗುಡಿಯಲ್ಲಿ ಆ ಕಲ್ಲಿನ ಮೂರ್ತಿಯನ್ನಿಟ್ಟು ಪೂಜಿಸ ಲಾರಂಭಿಸಿದ !

—ಎಸ್. ಅನಂತನಾರಾಯಣ

# ೦ − ೦ = ೦

## ೧

ಎಷ್ಟೋ ವೇಳೆ ಹೀಗಾಗುತ್ತದೆ.

ಕಂಡದ್ದು ಕಾಣಿಸುವುದಿಲ್ಲ....ಕಣ್ಣು ನೋಡಿದ್ದು ಮನಸಿನ ಮೇಲೆ ಮೂಡದೆ.... ದೃಷ್ಟ ಅದೃಷ್ಟ....ವ್ಯಕ್ತ ಅವ್ಯಕ್ತ....ತರ್ಕಬದ್ಧತೆಯಲ್ಲಿಯ ತರ್ಕರಾಹಿತ್ಯ.

ಆ ಭಾವಿ ಹಾಗೇ.

....ರಸ್ತೆಯ ಬದಿಯ ಮೈದಾನದಲ್ಲಿ ...ದಿನದಿನವೂ ಅವನು ಓಡಾಡುವ ಹಾದಿ.... ಇತ್ತು; ಇದ್ದರೂ ನೋಡಿರಲಿಲ್ಲ. ಅದೃಷ್ಟದ ಹಾಗೆ....ಸುವ್ಯಕ್ತವಾಗಿದ್ದರೂ ಅವ್ಯಕ್ತ ಅದೃಷ್ಟದ ಭಾವಿ....

ಮೊದಲ ಬಾರಿಗೆ ಕಂಡಾಗ ಆ ಹೆಸರು ಕೊಟ್ಟದ್ದ

....'ಮೊದಲಿಗೆ ಕಂಡಾಗ ಏಸೊಂದು ನಗೆಯಿತ್ತ'........ಇದ್ದಕ್ಕಿದ್ದ ಹಾಗೇ ಒಂದು ದಿನ ಭಾವಿ ಅವನನ್ನು ತನ್ನ ಹತ್ತಿರ ಕರೆಯಿತು.

## ೨

ಸಂಜೆ, ಮಬ್ಬುಗತ್ತಲು....ನೆರೆ ಕವಿದ ಕಣ್ಣಿನಂಥ ಹಗಲು....ಹಿಂದಿರುಗಿ ಬರುತ್ತಿದ್ದ ಆ ದಾರಿಯಲ್ಲಿ........ಮೈದಾನದಲ್ಲಿ ಹತ್ತಾರು ಜನ ಕಲೆತಿದಾರೆ, ಕೂಗುತ್ತಿದಾರೆ, ಏನೋ....?....ದಿಟ್ಟಿಸಿ ನೋಡಿದ....? ? ? ? ?....ಕುತೂಹಲ ಕೆರಳಿ ಹೋದ....ಭಾವಿಯ ಭೇಟಿಯಾಯಿತು—ಅದೃಷ್ಟದ ಭಾವಿ.

ಎಂದೋ ಬಳಕೆ ತಪ್ಪಿ, ಬಳಸುವರಿಲ್ಲದೆ, ಬಳಸಲು ಬಾರದೆ, ಸುತ್ತಲ ಗೋಡೆ ಮುರಿದು, ಭಾವಿ....ಸಾವಿನ ಭಾವಿ....ಇತ್ತು, ಸುತ್ತ ಹಸಿರು ಮೇಯುವ ದನಕ್ಕೆ ನೀರು ಕೊಟ್ಟು....ನೆಲದ ಮಟ್ಟಕ್ಕೆ ನೀರು....ಪಾಚಿಕಟ್ಟಿ ಕಪ್ಪಗೆ, ತಣ್ಣಗೆ, ಮಂಕಾಗಿ ಹೊಳೆವ ನೀರು.

ಬಾಗಿ ನೀರು ಕುಡಿಯಲು ಬಾಗಿದ ಕರು, ಜಾರಿ ನೀರಿನ ಪಾಲಾಗಿತ್ತು....

ತಾಯಿ ಹಸು, ನೀರಿನ ಬಲೆಯಲ್ಲಿ ಸಿಲುಕಿದ ಮರಿ ಜೀವವನ್ನು ಕಂಡು, ಹುಚ್ಚು ಹಿಡಿದಂತೆ ಸುತ್ತುತ್ತಿದೆ, ಅರಚುತ್ತಾ ಬರಿಗಣ್ಣು ಅರಳಿಸುತ್ತಾ, ಬಾಲವನ್ನು ಮೇಲೆ

ಮಾಡಿ....ನೀರಿನ ಅಂಚಿಗೇ ಧಾವಿಸುತ್ತದೆ—ತನ್ನ ಮರಿಜೀವ, ಮೆತ್ತಗೆ ಹೆದರಿ ಹಿಂಜರಿಯುತ್ತದೆ—ತನ್ನ ಜೀವ....'ಜೀವನ್ ಭದ್ರಾಣಿ ಪಶ್ಯತಿ'....

ಕಪ್ಪಗೆ, ತಣ್ಣಗೆ ಹೊಳೆಯುವ ನೀರಿನ ಬಲೆಯಲ್ಲಿ ಜೀವ, ಕರಾಳ, ಶೀತಲ ಸಾವಿನೊಂದಿಗೆ ಹೋರಾಡುತ್ತಿದೆ.

ಹತ್ತು ಕೈ ಹೊರತೆಗೆಯಲೆತ್ನಿಸುತ್ತಿವೆ....ಅವನ ನರ ಬಿಗಿಯಾಗಿ....ಎಳೆದು ಕಟ್ಟಿದ ಶಿಂಜಿನಿ....ಕಣ್ಣು ನೋಡುತ್ತಿದೆ....ಕಾಲ ಸ್ತಬ್ಧವಾಗಿ, ಕಂಪಿಸುತ್ತಾ ನಿಂತಿದೆ ನೀರಿನಂಚಿನಲ್ಲಿ, ಕತ್ತಲು ಕವಿಯುತ್ತಿದೆ.

ಕಡೆಗೆ ಕರು ನೀರಿನಿಂದ ಹೊರಬಂತು. ತಾಯಿ ಹಸು, ನೆಲಕ್ಕುರುಳಿ ಉಬ್ಬೆಗ ಪಡುತ್ತಿರುವ, ನೀರು ಜಿನುಗುವ, ಕಂಪಿಸುತ್ತಿರುವ ಮೈಯ ಕರುವಿನ ಬಳಿ ಧಿಗ್ಗನೆ ಧಾವಿಸಿ ಮೂಸಿ ನೋಡಿ ನಾಲಗೆಯಿಂದ ನೇವರಿಸಿತು......

ಸಾವು ಬೇಟೆಯನ್ನು ಬಿಟ್ಟುಕೊಟ್ಟಿತ್ತು.

ಅವನ ಮೈ ಕಂಪಿಸಿ ಕ್ರೋಧ ಕಡೆದು ಬಂತು....ಸಿಟ್ಟು....ಎಲ್ಲರ ಮೇಲೆ.... ಮುತ್ತಾಳರು....ಹೀಗೇಕೆ ಬಿಟ್ಟರು ಈ ಭಾವಿಯನ್ನು, ಮುನ್ಸಿಪಾಲಿಟಿಯವರಿಗೆ ಹೇಳಿ ಮುಚ್ಚಿಸಲಿಲ್ಲವೇಕೆ....ಕೊಲೆಪಾತಕರು....ಏನು....ಯಾರಿಗೂ ಅಪಾಯವಾಗಿರಲಿಲ್ಲ.. ಎದೆಯಲ್ಲಿ ಸಾವಿಟ್ಟುಕೊಂಡು....ತಣ್ಣಗೆ, ಕಪ್ಪಗೆ, ಮಂಕಾಗಿಹೊಳೆವ ಸಾವು......ಸಾವೇ ಬರಬೇಕಾಗಿತ್ತು ಕಣ್ಣು ತೆರಸಲು........ತಣ್ಣನೆ ಕೈ ಕಣ್ಣು ತೆರೆಸಬೇಕಾಗಿತ್ತು........ ಯಾರಾದರೂ ಸಾಯಬೇಕಾಗಿತ್ತು.

ಯಾರಾದರೂ ಸಾಯಬೇಕು........ಮಾನವನ ಕಣ್ಣು ತೆರೆಸಲು ಮಾನವ ಸಾಯಬೇಕು....ಗುಂಡಿನೇಟಿನಿಂದ, ಶಿಲುಬೆಯ ಮೇಲೆ, ವಿಷ ಕುಡಿದು, ನೀರಿನಲ್ಲಿ.... ಮಾನವನ ಕಣ್ಣು ತೆರೆಸಲು ಮಾನವ ಸಾಯಬೇಕು....ಮಾನವನ ಕಣ್ಣು...ಅನುಕಂಪ ಸಹಾನುಭೂತಿ ಸತ್ತು ಸ್ವಾರ್ಥ ಹೊಳೆವ ಕ್ಷುದ್ರ ಕಣ್ಣು....ತೆರೆಸಲು ಸಾಯಬೇಕು.

ತಣ್ಣಗೆ ಹೊಳೆವ ನೀರಿನಂಚಿನಲ್ಲಿ ಕಂಪಿಸುತ್ತಾ ನಿಂತ ಕಾಲ....ಜೀವ....ಕಾಲ —ಜೀವ....ಪ್ರತಿಮೆ....ವ್ಯಕ್ತ ಅವ್ಯಕ್ತ....

೩

ಮೈದಾನದಲ್ಲಿ ಭಾವಿ....ಮನಸ್ಸಿನಲ್ಲಿ ಭಾವಿ....ಭೀಷಣ....ಆಕರ್ಷಕ....ಭೀಷಣ ಆಕರ್ಷಣೆ....ಬದುಕು....

ಭೀತನಾಗಿ....ಆಕರ್ಷಿತನಾಗಿ ಬದುಕಿದ....ತಣ್ಣನೆಯ ನೀರಿನಂಚಿನಲ್ಲಿ....

ಬದುಕುತ್ತಿದ್ದ, ದಿನವೂ ಹೋರಾಟಕ್ಕೆ ಹೋಗುತ್ತಿದ್ದ....ಬರುತ್ತಿದ್ದ ಹೂ ಬಯಸಿ, ಮುಳ್ಳಿರಿದು....ದಿನವೂ ಹೋಗಿ ಬರುತ್ತಿದ್ದ....ದಿನವೂ ಭಾವಿಯ ಭೇಟಿ....

ಕೆಲವು ವೇಳೆ ಕ್ರೂರ....ಮಲಿತ ನೀರು ತಣ್ಣಗೆ ಮಂಕು ಹಸಿರು ನೀಲಿಯಾಗಿ ಹೊಳೆಯುತ್ತಿತ್ತು....ನಿರಾಶಾವಾದಿಯ ನಗು....ಕೆಲವು ವೇಳೆ ಬಣ್ಣ ಬಣ್ಣದ ಮೋಡ ನೀರ ಮಡಲಿನಲ್ಲಿ....ಕುರೂಪತೆಯಲ್ಲಿ ಸೌಂದರ್ಯ....ಕುರೂಪವನ್ನು ಸುಂದರ ವಾಗಿಸುವ ಸೌಂದರ್ಯ....ತನ್ನ ಒಲವಿನಂತೆ....ಎಲ್ಲ ಒಲವಿನಂತೆ....

ಬದುಕುತ್ತಿದ್ದ, ದಿನವೂ ಹೋರಾಟಕ್ಕೆ ಹೋಗುತ್ತಿದ್ದ......ಕುರೂಪವನ್ನು ಸುಂದರವಾಗಿಸುವ ಸೌಂದರ್ಯ....ಅವನ ಒಲವು....

ದಿನವೂ ದಾರಿಯಲ್ಲಿ ಭಾವಿ....

೪

ಪ್ರಣಯ ದೇಗುಲ, ಪ್ರೇಮ ವಿಗ್ರಹ, ಮಾನವ ಪೂಜಾರಿ. ಹೆಣ್ಣು ಸಂಕೇತ ....ಪ್ರೇಮವೇ ಸೌಂದರ್ಯ.

ಬದುಕುತ್ತಿದ್ದ, ದಿನವೂ ತನ್ನ ಹೋರಾಟಕ್ಕೆ ಹೋಗುತ್ತಿದ್ದ....ಹೋರಾಟ...... ಬಾಳಿನ ಕವಿದ ಕತ್ತಲಲ್ಲಿ ಸೌಂದರ್ಯದ ದೀವಟಿಗೆಯನ್ನು ಆರಗೊಡದಿರಲು....ಭೀತ ನಾಗಿ....ಆಕರ್ಷಿತನಾಗಿ....'ಬಾ'....'ಹೋಗು'

ಹೋಗುತ್ತಿದ್ದ, ಬರುತ್ತಿದ್ದ

....ದಾರಿಯಲ್ಲಿ ಭಾವಿ, ಮನಸಿನೊಳಗೆ ಭಾವಿ

ಹೋಗುತ್ತಿದ್ದ, ಬರುತ್ತಿದ್ದ

ಜೋಡಿ ಉಕ್ಕಿನ ಹಳಿಯ ಮೇಲೆ ಧಾವಿಸುತ್ತಿದೆ ರೈಲು....ನಿರ್ದಯವಾಸ್ತ ವತೆ......ಶಾಂತಿ, ಪ್ರೇಮ, ತೃಪ್ತಿಯ ನಿಲುದಾಣದತ್ತ....ಭಗ್, ಭಕ್, ಭಕ್, ಭಗ್, ಭಕ್....ಆಸೆ....ನಿರಾಸೆ....ವಿಕರ್ಷಣೆ, ಆಕರ್ಷಣೆ....ನಿರ್ದಯ ವಾಸ್ತವತೆಯ ಜೋಡಿ ಹಳ್ಳಿ....

ಬದುಕಿದ, ಪ್ರೀತಿಸಿದ, ಪ್ರೀತಿಸಿದವರಿಂದ ಪ್ರೀತಿಸಲ್ಪಡಲು ಪ್ರೀತಿಸಿದ....ನಿಲು ದಾಣ....ಒಲವಿಗೆ ಒಲವೇ ಪ್ರತಿಫಲ....ತ್ಯಾಗ....ಪ್ರೇಮಕ್ಕೆ ಕಂಬನಿ ಆಹಾರ...... ಸುಖಕ್ಕೆ ದುಃಖವೇ ಬೆಲೆ....

ಬದುಕುತ್ತಿದ್ದ, ಪ್ರೀತಿಸುತ್ತಿದ್ದ. ಪ್ರೀತಿಸಿದವರಿಂದ ಪ್ರೀತಿಸಲ್ಪಡಲು ಬದುಕುತ್ತಿದ್ದ......

೫

ಎಲ್ಲರಂತೆ ಅವನು....ಗುಂಪಿನ ಗೋವಿಂದ....ಬಯಕೆ ಬಾಳಿನುಸಿರು.... ಸಮಾಜ, ಅರ್ಥವ್ಯವಸ್ಥೆ, ತನ್ನತನದ ಚಕ್ರಕ್ಕೆ ಸಿಲುಕಿ ಸುತ್ತುತಿದ್ದ......ಸುತ್ತುವ ಚಕ್ರ....ವೇಗವಾಗಿ, ಉಗ್ರವಾಗಿ, ಉನ್ಮತ್ತವಾಗಿ, ಸುತ್ತುವ ಚಕ್ರ....ಚಕ್ರದೊಳಗೆ ಚಕ್ರ....

'ಆಶಾಶಾ ಪರಮಂ ದುಃಖಂ'....'ನಂಬಿ ಕೆಟ್ಟವರಿಲ್ಲ'....'ಕೇಳು-ಇಲ್ಲವೆನ್ನುವುದಿಲ್ಲ' ಕೇಳು....ಏನು....ಇಲ್ಲವೆನ್ನುವುದಿಲ್ಲ....ಏನು....ಕೊಡುವೆಯಾ........ಏನು.... ಏನು....ದೃಷ್ಟಿಹೀನ, ಅರ್ಥಶೂನ್ಯ, ಏನು....ಜಟಿಲ ಜೀವನ....ಆಧುನಿಕ ಜೀವನ ಚೀರಾಟ....ತರ್ಕಶೂನ್ಯ, ಹಿಂಸಾದಾಯಕ ಚೀರಾಟ....

ಒಲಿದವರ ಒಲವೇ ಬದುಕು....ಬದುಕೆಂಬ ಬವರದ ಅರ್ಥ....

'ಹೇಳದಿರು ಹೋರಾಡಿ ಫಲವಿಲ್ಲವೆಂದು'........'ಈಸಬೇಕು ಇದ್ದು ಜೈಸಬೇಕು'....'ಪ್ರಯತ್ನಕ್ಕೆ ಫಲವುಂಟು'....ಗಾದೆಯ ಮಾತು ವೇದದ ಮಾತು.... !....!ಭೂತವನ್ನು ಉದಹರಿಸುತ್ತಿರುವ ವರ್ತಮಾನ....ಅನಂತ ಭೂತವನ್ನು ಉದಹರಿಸುತ್ತಿರುವ ಅನಂತ ವರ್ತಮಾನ....

ಬದುಕುತ್ತಿದ್ದ....ಬಯಕೆಯುಟ್ಟಿದ ಪಶು....ಆಹಾರ, ನಿದ್ರಾ, ಭಯ, ಮೈಥುನ ....ಬಯಕೆಯುಟ್ಟಿದ ಪಶು....ಹೆಸರು....ಕೀರ್ತಿ....ರಸ್ತೆಯ ಬದಿಯ ಬೇಲಿಯ ಹೂವು....ಕುರೂಪತೆಯನ್ನು ಸುಂದರವಾಗಿಸುತ್ತಿರುವ ಸೌಂದರ್ಯ....

ಕೆಲವೊಮ್ಮೆ, ಬಳಸದೆ, ಬಳಸಲು ಬಾರದ ಪಾಚಿಗಟ್ಟಿದ ನೀರಿನ ಮೇಲೆ ಬಣ್ಣ ಬಣ್ಣದ ಮುಗಿಲ ಮರಿಗಳು....

೬

ತಣ್ಣಗೆ ಹೊಳೆವ ಮಂಕು ನೀರು....'ಹಗಲನಟ್ಟಿ ಸಂಜೆ ಬರುತಿದೆ'....

ಹೊಳೆವ ನಗುಗಣ್ಣು....ಮಂಜು ಕವಿದಿದೆ....ಕತ್ತಲು ಕತ್ತಲಾದ ಕತ್ತಲನ್ನು ಹೆರುವ ಕತ್ತಲು....

ಕಠೋರ ವಾಸ್ತವತೆಯ ಜೋಡಿ ಹಳಿಯ ಮೇಲೆ ಧಾವಿಸುತ್ತಿರುವ ರೈಲು.... ನಿಲುದಾಣ....ವಿ ಫ ಲ ತೆ....

ಮೈದಾನದಲ್ಲಿ ಭಾವಿ....

....'ದೇವನಿಹನು ಸಗ್ಗದಲ್ಲಿ, ಎಲ್ಲ ಒಳಿತು ನೆಲದಲಿ'....'ಮಾಮೇಕಂ ಶರಣಂ ವ್ರಜ'.....? ?....!!!!....

ಮೈದಾನದಲ್ಲಿ ಭಾವಿ....ಬಳಸದೆ, ಬಳಸಲು ಬಾರದೆ....ವ್ಯಕ್ತಾವ್ಯಕ್ತ.... ಸಾವಿನ ಬಾಯಿ....

'ಹೀಗೇಕೆ ಬಿಟ್ಟರಿ ಈ ಭಾವಿಯನ್ನು.....ಮುಚ್ಚಿಸಲಿಲ್ಲವೇಕೆ....ಕೊಲೆಗಡುಕರು ....ಉಡಿಯಲ್ಲಿ ಸಾವಿಟ್ಟುಕೊಂಡು....

'ಸಾವು ಬರಬೇಕಾಗಿತ್ತು ಕಣ್ಣು ತೆರಸಲು....ಮಾನವನ ಕಣ್ಣು ತೆರೆಸಲು ಮಾನವ ಸಾಯಬೇಕು....

'ಮಾನವ ಸಾಯಬೇಕು'....ಯಾರು ?

'ಸಾವಾರ ಕರೆಯುತ್ತಿದೆಯೆಂದು ಕೇಳದಿರು; ನಿನ್ನನ್ನೇ ಕರೆಯುತ್ತಿದೆ'....

ಬೆಚ್ಚಗಿದೆ ತಣ್ಣೀರು....ಒಲವಿನ ಬೆಳಕಿದ ಕಣ್ಣನೋಟಕ್ಕಿಂತ ಬೆಚ್ಚಗಿದೆ ತಣ್ಣೀರು....'ಮನಸಿಜನ ಮಾಯೆ ವಿಧಿ ವಿಳಸನದ ನೆರಂಬಡೆಯೆ ಕೊಂದುಕೂಗದೆ ನರರಂ'....ತಣ್ಣೀರು

....ಸಾಯಬೇಕು ; ಕಣ್ಣು ತೆರೆಸಬೇಕು....

೭

ಬಯಲು ಬಯಲನೆ ಕೂಡಿ ಬಯಲಾಗಿತ್ತು.

—ತ. ರಾ. ಸು.

# ಗುಡಿ

ತಂಗಾಳಿ ನಿಧಾನವಾಗಿ ತೀಡುತ್ತಲಿತ್ತು. ಬಾದಾಮಿಯ ಪೂರ್ವದ ಗುಡ್ಡದಲ್ಲಿ ಸೂರ್ಯನಿನ್ನೂ ಮರೆಯಾಗಿದ್ದರೂ ಬೆಳಕು ನಿಧಾನವಾಗಿ ತೂರಿಬರುತ್ತಲಿತ್ತು. ಹಕ್ಕಿ ಪಕ್ಕಿಗಳ ಇಂಚರ ಕರ್ಣಾನಂದದಾಯಕವಾಗಿತ್ತು. ಒಂದು ಮುದುಕಿ ಅಂತಹ ನಸುಕಿನಲ್ಲೇ ಮಹಾಕೂಟದ ಆ ಕಾಡುದಾರಿಯನ್ನು ತುಳಿಯುತ್ತ ಮುನ್ನಡೆ ದಿದ್ದಳು. ಹರಿದು ಚಿಂದೆ ಚಿಂದೆಯಾದ ಒಂದು ಸೀರೆಯನ್ನು ಅವಳುಟ್ಟಿದ್ದಳು. ಗಾಜಿನ ಎರಡು ಬಳೆಗಳು ವಿನಾ ಕೈ ಬರಿಯದಾಗಿಯೇ ಇತ್ತು. ಬೆಳ್ಳಗಾದ ತಲೆಯ ಕೂದಲು ಒಂದೆರಡು, ತಲೆಯ ಮೇಲೆ ಎಳೆದ ಸೆರಗಿನಿಂದ ಹೊರಹಾಯ್ದು ಗಾಳಿಗೆ ಅಲುಗಾಡುತ್ತಲಿದ್ದುವು. ಪಟಪಟನೆ ಅವಳು ಹೆಜ್ಜೆಹಾಕುತ್ತಿದ್ದುದರಿಂದ ಅವಳ ಹೃದಯದ ಭಾವನೆಯನ್ನು ಗುರತಿಸಬಹುದಾಗಿತ್ತು. ಅವಳ ಮನದಲ್ಲಿ ತುಂಬಿದ ಸಂತೋಷದ ಪ್ರತಿರೂಪವಾಗಿ ಆ ಬಚ್ಚಬಾಯಿಂದ ರಕ್ತಹೀನ ತುಟಿಗಳಿಂದ ನಗೆ ಹೊರಹೊಮ್ಮುತ್ತಲಿತ್ತು.

'ತಾಯಿ!-'

'ಹೌದು–ಹೌದು....ನಾನೊಂದು ಮಗುವಿನ ತಾಯಿಯಾಗುತ್ತೇನೆ,.... ಖಂಡಿತವಾಗಿಯೂ......'

ಮುದುಕಿಯ ಹೃದಯ ಮಾರ್ನುಡಿಯಿತು. ನಿರಿಗೆಗಟ್ಟಿದ ಆ ಮೊಗ ಇನ್ನಿಷ್ಟು ಗೆಲುವಿನಿಂದ ಸಂತಸದಿಂದ ತುಂಬಿಕೊಂಡಿತು.

'ಮಹಾಕೂಟೇಶ್ವರ ನನಗೆ ಕರುಣಿಸದೆ ಇರುತ್ತಾನೆಯೆ ?....ಸಮಸ್ತ ಲೋಕಕ್ಕೆಯೆ ಮಕ್ಕಳನ್ನು ಕರುಣಿಸಿದ ತಂದೆ ಅವನು....ಬಂಜೆಯರಿಗೆಲ್ಲ ಮಕ್ಕಳ ನ್ನಿತ್ತವನಿಗೆ ಇದೊಂದು ಅಸಾಧ್ಯ ಕಾರ್ಯವೆ ?....ಬಂಜೆಯ ದುಃಖ, ನೋವು ಅವನಿಗೆ ಗೊತ್ತಿಲ್ಲವೆ ?......ಯಾವ ಬಂಜೆಯೂ ಕಟ್ಟದ ಹಿರಿಯ "ಗುಡಿ" ಅವನಿಗೆ ಕಟ್ಟಿ ತ್ತೇನೆ....ಆದರೂ ಅವನು ಕಣ್ತೆರೆಯಲಾರನೆ?....

'ಓ....ತೆರೆಯುತ್ತಾನೆ....ಖಂಡಿತವಾಗಿಯೂ ತೆರೆಯುತ್ತಾನೆ....ಭಕ್ತರ ಇಷ್ಟ ವನ್ನು ಸಲ್ಲಿಸುವುದೇ ಅವನ ಕೆಲಸವಲ್ಲವೆ?....ಅವನ ಕೃಪೆಯಾದರೆ ನನಗೊಂದು ಮಗು ಜನಿಸುವುದು ಮಹಾ ಕೆಲಸವೆ?....

'ಹೌದು-ಹೌದು....ನನಗೂ ಒಂದು ಮಗು!....ನನ್ನದೇ....ನನ್ನ ಒಡಲಿನಿಂದಲೇ ಹುಟ್ಟಿ ಬರುತ್ತದೆ ಮಗು!....ನನಗಾಗಿ ಒಂದು ಮಗು!! '

ಪಿಸಿಪಿಸಿ ನಕ್ಕಳು ಮುದುಕಿ—ತಾನಿನ್ನೂ ತಾರುಣ್ಯದಲ್ಲೇ ಇರುವಂತೆ.

'ನನಗೊಂದು ಮಗುವನ್ನಾದರೂ ಕರುಣಿಸಿ ನೋಡಲಿ—ನನ್ನಯ್ಯ ;....ನಾನೆಂತಹ ಪ್ರೀತಿ ವಿಶ್ವಾಸಗಳಿಂದ ಮಗುವನ್ನು ಬೆಳೆಯಿಸುತ್ತೇನೆಂದು....ಎಂತಹ ಆದರ, ಅಭಿಮಾನಗಳು ನನ್ನಲ್ಲಿವೆಯೆಂದು ಆಗ ಅವನಿಗೆತಿ ಳಿಯುತ್ತದೆ....'

ಮುದುಕಿಯು ಒಳಗಣ್ಣಿನೆದುರು ಸ್ಪಷ್ಟವಾಗಿ, ಕಿಲಕಿಲನೆ ನಗುವ ಮಗುವಿನ ಮೊಗ ಕಾಣಿಸಿಕೊಂಡಿತ್ತು.

ತನ್ನದೆ ಮಗು ಅದು !-ಎಂತಹ ಮುದ್ದಾಗಿದೆ. ಸುಂದರವಾಗಿದೆ ಅದು ! ತನ್ನೆದೆಗವಚಿಕೊಂಡು ಮೊಲೆಯೂಡುತ್ತಲಿದ್ದಾಳೆ. ನೂರು ರೀತಿಯಿಂದ ಆದರ ಲಾಲನೆ-ಪಾಲನೆಗೈಯುತ್ತಲಿದ್ದಾಳೆ. ಜೋಗುಳ ಹಾಡುತ್ತ ತೊಟ್ಟಿಲು ತೂಗುತ್ತಲಿದ್ದಾಳೆ.

'ಓ, ಎಂತಹ ಭವ್ಯ ಕನಸಿದು!'

ಮುದುಕಿಯು ಮನದಾಳದಿಂದೆದ್ದ ಉದ್ಗಾರ ಅದು. ಕೃತಿಯಿಂದಾಗದ ಕಾರ್ಯವನ್ನು ಮನಸ್ಸಿನ ಕಲ್ಪನಾಸೃಷ್ಟಿ ನಿರ್ಮಿಸಿತ್ತು. ಅಮಿತವಾದ ಆನಂದವನ್ನಿತ್ತು ಬಾಹ್ಯದೃಷ್ಟಿಯನ್ನು ಮರೆಯಿಸಿತ್ತು.

ಆದರೂ ಅಭ್ಯಾಸ ಬಲದಿಂದ ಮುದುಕಿ, ಮುಂದೆ ಮುಂದೆ ಸಾಗಿದ್ದಳು. ಅವಳ ಹೃದಯ ಸಮುದ್ರದಲ್ಲಿ ಒಂದೇ ಸಮನೆ ತೆರೆಗಳು ಏಳುತ್ತಲಿದ್ದವು. ಮನಸ್ಸು ಹರಿದ ಹಾಗೆ ಕಡಿವಾಣ ಸಡಿಲಿಸಿ ಮೌನವಾಗಿ ಸಾಗಿದ್ದಳು.

'....ಮಹಾಕೂಟೇಶ್ವರ!....ನಮ್ಮೆಲ್ಲರ ಸ್ವಾಮಿ ಅವನು ...ಅವನು ಕಣ್ತೆರೆದರೆ ಅಸಾಧ್ಯ ಕೆಲಸವಾವುದು?.... ಬಂಜೆಯರಿಗೆ ಅವನಲ್ಲದೆ ಬೇರಿನ್ನಾರು ಗತಿ ?....

'......ಎಷ್ಟು ಜನಕ್ಕಿಲ್ಲ....ಎಷ್ಟು ತಾಯಂದಿರಿಗೆಲ್ಲ....ಬಂಜೆಯರಿಗೆಲ್ಲ....ಅವನ ಹಸಾದ ದೊರೆತಿಲ್ಲ!....ಮಕ್ಕಳ ಕೃಪೆಯಾಗಿಲ್ಲ!!....ಆಚೆ ಬೀದಿ ರಿಂದಕ್ಕ—ಈಚೆ ಮನೆ ಬಸವ್ವ....ನೆರೆಮನೆ ನಾಗವ್ವ....

'ಒಬ್ಬರೆ? ....ಇಬ್ಬರೆ ??....ನೂರಾರು! .... ಸಾವಿರಾರು!! ....ಅವನ ಕೃಪೆಯಾಗದ ಜನವೂ ಉಂಟೆ ಈ ಲೋಕದಲ್ಲಿ ?....

'....ಇಂತಹ ಅನನ್ಯ ಭಕ್ತಿಯಿಂದ ನಡೆದುಕೊಳ್ಳುವ ನನಗೆ ಒಂದು ಮಗುವನ್ನು ಕರುಣಿಸದೆ ಇರುತ್ತಾನೆಯೆ?....,

'ಕರುಣಿಸಿಯೇ ಕರುಣಿಸುತ್ತಾನೆ .... ನನಗಿಂತಲೂ ಹಿರಿಯರಾದ ಬಂಜೆಯರು ಹಡೆಯಬಲ್ಲರಾದಾಗ, ನಾನೇಕೆ ಹಡೆಯುವುದಿಲ್ಲ?....

'ನಾನೂ ಹಡೆಯುತ್ತೇನೆ......ಗಂಡೊ......ಹೆಣ್ಣೊ......ಎಂತಹುದೆ ಆಗಲಿ, ಒಂದು ಮಗುವನ್ನು ಹೆತ್ತುಬಿಡುತ್ತೇನೆ....

'....ಹುಗ್ಗಿಯ ಊಟ ಅಪೇಕ್ಷಿಸಿದರೆ ಅದನ್ನೂ ನೀಡುತ್ತೇನೆ—ನನ್ನಯ್ಯನಿಗೆ-ಐಯ್ಯನವರಿಗೆ....ಆದರೆ ನ ನ ಗೊ ಂ ದು ಮಗುವಾಗಬೇಕು......ಮಗುವಾಗಲೇ ಬೇಕು....

'ಎಲ್ಲರಂತೆ ಅವನಿಗೆ ಸಣ್ಣ "ಗುಡಿ" ಕಟ್ಟುವುದು ಬೇಡ....ಸಣ್ಣ ಕಲ್ಲುಗಳನ್ನೆತ್ತಿ ಇಟ್ಟಲ್ಲೇ ಇದುವರೆಗೆ ಅವನ ಕೃಪೆಯಾಗಲಿಲ್ಲ......ಈ ಸಲ......ಈದಿನ ಹಿರಿಯ ಕಲ್ಲುಗಳನ್ನೇ ಎತ್ತಿ ತರುತ್ತೇನೆ....ಯಾರಿಗೂ ಯಾವ ತಾಯಂದಿರಿಗೂ ಸಾಧ್ಯವಾಗದ ಹಿರಿಯ "ಗುಡಿ"ಯನ್ನು ನನ್ನ ಸ್ವಾಮಿಗೆ ಕಟ್ಟುತ್ತೇನೆ....

'ಆಗಲಾದರೂ ಅವನು ನನಗೊಂದು....ಒಂದೇ ಒಂದು ಮಗುವನ್ನು ನೀಡಲಿ....ನನ್ನ ವಂಶ ಉಳಿಯಲಿ....ನನ್ನ ಮಗು ಚಿರಕಾಲ ಬಾಳಲಿ....ತಾಯ್ತನ ಸಾರ್ಥಕ್ಯವಾಗಿ ನನ್ನ ಬಂಜೆತನ ಅಳಿಯಲಿ....

'ಬಂಜೆ!....ಉಹ್ಞೂಂ— ನಾನಿನ್ನು ಬಂಜೆಯಾಗಿಯೇ ಉಳಿಯಲಾರೆ....

'ನಾನೂ ತಾಯಿಯಾಗುತ್ತೇನೆ—ತಾಯಿ....ಎಲ್ಲ ತಾಯಂದಿರಂತೆ ಮಗುವನ್ನೆತ್ತಿ ಆಡಿಸುತ್ತ ಕಕ್ಕುಲತೆಯಿಂದ ಪೋಷಿಸುತ್ತೇನೆ....ಯಾರೂ ಹಾಸ್ಯಮಾಡಿ ನಗದ ಹಾಗೆ....ಇದುವರೆಗೆ ಹಾಸ್ಯಮಾಡಿ ನಕ್ಕವರ ಮುಖಕ್ಕೆ ಹೊಡೆದ ಹಾಗೆ ನನಗೂ ಒಂದು ಮಗುವಾಗುತ್ತದೆ—ಮಗು!

'ಮ-ಗು!....।

'ಎಷ್ಟು ಸುಂದರವಾಗಿದೆ ಆ ಶಬ್ದ!....

ಮತ್ತೆ-ಮತ್ತೆ ತನ್ನಲ್ಲೇ ತಾನು ಗೊಣಗುಟ್ಟಿಕೊಂಡಳು—'ಮಗು!-ಮಗು!'-ಎಂದು. ಸಂತೋಷ, ಸುಖ, ಸಮಾಧಾನಗಳು ಬರಿಯ ಆ ಒಂದು ಶಬ್ದದಲ್ಲೇ ಅಡಗಿದ ಹಾಗೆ ತೋರುತ್ತಿತ್ತು. ಮಕ್ಕಳು ರುಚಿಕಟ್ಟಾದ ಪೆಪ್ಪರುಮೆಂಟನ್ನು ಬಾಯಲ್ಲೇ ಇಟ್ಟುಕೊಂಡು ಮತ್ತೆ ಮತ್ತೆ ಚೀಪಿ ಅದರ ಸವಿ ಸವಿಯುತ್ತಿರುವಂತೆ-ಮಗುವನ್ನು ಪಡೆಯದಿದ್ದರೂ ಆ ಹೆಸರನ್ನೇ ಸವಿಯುತ್ತ ಸಾಗಿದ್ದಳು ಮುಂದೆ ಮುಂದೆ ಮುದುಕಿ.

ಒಂದು ಕೂಗಳತೆಯ ದಾರಿಯನ್ನೂ ಆವಳು ಕ್ರಮಿಸಿರಲಿಲ್ಲ. ಮತ್ತೆ ಅವಳ ಮನಸ್ಸು ನಾಗಾಲೋಟದಿಂದ ಓಡಲಾರಂಭಿಸಿತು.

'ಹೌದು....ನಾನೂ ತಾಯಿಯಾಗುತ್ತೇನೆ....ನನಗೊಂದು ಮಗು ಜನಿಸುತ್ತದೆ....'

ಮುದುಕಿಯ ಮೊಗ ಮತ್ತೆ ಇನ್ನಿಷ್ಟು ಅಗಲವಾಯಿತು. ತನ್ನಲ್ಲೇ ತಾನು ಕೇಕೆ ಹಾಕಿ ಗಟ್ಟಿಯಾಗಿ ನಕ್ಕಳು. ಇನ್ನೂ ತುಂಬಿದ ಉತ್ಸಾಹದಿಂದ, ಸಂತೋಷದಿಂದ ಹೊಸ ಮೊದಲಗಿತ್ತಿಯಂತೆ ವೈಯಾರದಿಂದ ಪಾವಟಿಗೆಗಳನ್ನು ಜಿಗಿಯುತ್ತ ಸಾಗಿದಳು.

ದಾರಿಯ ಎರಡೂ ಪಕ್ಕಕ್ಕೆ ತಲೆ ಎತ್ತಿ ನಿಂತಿದ್ದವು ಗುಡ್ಡದ 'ಪಡೆ'ಗಳು. ಮುದುಕಿ ಅಲ್ಲಿಲ್ಲ ಆಗಾಗ| ದೃಷ್ಟಿ ಹಾಯಿಸುತ್ತ ನಡೆದಾಗ, ಬಲದ 'ಪಡೆ'ಯ ಮೇಲಿಂದ ಕಿಸಕ್ ಎಂದು ಹಲ್ಲುಕಿರಿಯಿತು ಮಂಗವೊಂದು.

ಅವಳು ತಲೆ ಎತ್ತಿ ನೋಡಿದಳು.

ತಾಯಿಮಂಗ ತನ್ನ ಮಗುವನ್ನೆತ್ತಿಕೊಂಡು ಮೊಲೆಯುಣಿಸುತ್ತ ಅದರ ಮೈ ಮೇಲೆ ಕೈಯೆಳೆಯುತ್ತ ಕುಳಿತುದು, ಈ ಅಪರಿಚಿತ ಮುದುಕಿಯೇಕೆ ಇಲ್ಲಿಗೆ ಬಂದಿತು ?—ಎಂದು, ಅಚ್ಚರಿಯಿಂದ ಅವಳನ್ನು ದೃಷ್ಟಿಸಿತ್ತು.

ಮುದುಕಿಯು ಆ ತಾಯಿ–ಮಗುವನ್ನು ಅದೇ ವೇಳೆಗೆ ದೃಷ್ಟಿಸಿದಳು. ಅವಳ ಹೃದಯ ಸಂತೋಷದಿಂದ ಉದ್ಗರಿಸಿತು.

'ತಾಯಿಯ ಹೊಟ್ಟೆ ತಣ್ಣಗಾಗಿದೆ ಮಂಗಮ್ಮ....ನಿನ್ನ ಬದುಕು ಬಾಳು ಪಾವನವಾಗಿದೆ....ತಾಯಿಯಾಗುವ ಭಾಗ್ಯಕ್ಕಿಂತ ಹಿರಿಯ ಭಾಗ್ಯ ಹೆಣ್ಣಿಗೆ ಇನ್ನೇನಿದೆ....?'

ಮುದುಕಿಯ ದೃಷ್ಟಿ ಮತ್ತೆ ಮುಂದುವರಿಯಿತು. ಆ ಮಂಗಮಗುವಿನ ಮೇಲೆ ನೆಟ್ಟು ನಿಂತಿತು.

ಎಷ್ಟು ಸುಂದರವಾಗಿತ್ತು ಆ ಮಗು!—ಮೃದುವಾದ ತುಪ್ಪಳುಗೂದಲು, ಕೆಂಪಗೆ ರಂಗುರಂಗಾಗಿರುವ ಮೊಗ ಯಾರಲ್ಲೂ ಮೋಹ ಹುಟ್ಟಿಸುವಂತಿತ್ತು.

ಮುದುಕಿಗೆ ಅದನ್ನೊಂದು ಸಲ ಅಪ್ಪಿ ಮುದ್ದಿಡುವ ಮನಸ್ಸಾಯಿತು. ಆದರೆ ಹಾಗೆ ಹಿಡಿಯಲು ಹೋದರೆ, ಅದೆಲ್ಲಾದರೂ ಓಡಿಹೋಗುತ್ತದಲ್ಲ–ಎಂದು ಬರಿಯ ಅದರ ಬಾಲಲೀಲೆಗಳನ್ನು ಗಮನಿಸುತ್ತ ನಿಂತಳು.

ಎಷ್ಟು ಹೊತ್ತಿನವರೆಗೆ ಅವಳು ಹಾಗೆ ಸಮರಸಳಾಗಿ ತನ್ನನ್ನೇ ತಾನು ಮರೆತು ನಿಂತಿದ್ದಳೊ ಅವಳರಿಯಳು. ಆದರೆ ಸ್ವಲ್ಪ ಹೊತ್ತಿನಲ್ಲೇ ಯಾವುದೇ ಒಂದು ಹಿರಿಯ ಕೊರತೆ ಅವಳಿಗೆ ಅಸ್ಪಷ್ಟವಾಗಿ ಗೋಚರಿಸಿತು. ಎಚ್ಚತ್ತ ಅವಳ ಮನಸ್ಸು ಅದಕ್ಕೆ ಮಾರ್ದನಿಯನ್ನಿತ್ತಿತು.

'ಇಂತಹ ಒಂದೇ ಒಂದು ಮಗುವಾದರೂ ನಿನಗೆ ಹುಟ್ಟಲಿಲ್ಲವಲ್ಲ?. ಒಂದೇ ಒಂದು ಮಗುವಿನ ತಾಯಿಯಾಗುವ ಭಾಗ್ಯವೂ ನಿನಗಿಲ್ಲವಾಯಿತಲ್ಲ ?'

ಮುದುಕಿಯ ಕಣ್ಣು ಹನಿಗೂಡಿತು. ಗಾಢವಾದ ನಿಟ್ಟುಸಿರು ಅವಳ ಹೃದಯವನ್ನೊಡೆದು ಬಂದಿತು. ಮತ್ತೆ ಅವಳು ದೀನಳಾಗಿ ಮಹಾಕೂಟೇಶ್ವರನನ್ನು ಮೊರೆಹೊಕ್ಕಳು.

'ನಿನ್ನ ಆಶ್ರಯದಲ್ಲಿರುವ ಈ ಪ್ರಾಣಿಗಳಿಗೂ ನಿನ್ನ ಕೃಪೆಯಾಗಿದೆ ಶಿವನೆ.... ನನಗೇಕೆ ನಿನ್ನ ಕೃಪೆಯಾಗಲಿಲ್ಲ ?....ನಾನೇನು ಅಂತಹ ಅಪರಾಧ ಮಾಡಿದ್ದೇನೆ ಸ್ವಾಮಿ ?....'

'ಈ ಸಲ ಹಾಗೆ ಮಾಡಬೇಡ ದೇವರೆ....ನನ್ನಮೇಲೆ ಕೋಪಿಸಿಕೊಳ್ಳದೆ ಕೃಪೆ ಮಾಡು....ಸೆರಗೊಡ್ಡಿ ನಿನಗೆ ಪ್ರಾರ್ಥಿಸುತ್ತೇನೆ....'

'....ಒಂದೇ ಒಂದು ಈ ಮಂಗನಂತಹ ಮಗುವನ್ನು ನನಗೆ ಕರುಣಿಸಿಬಿಡು.... ನಾನು ನಿನ್ನಲ್ಲಿ ಇನ್ನೇನನ್ನೂ ಕೇಳುವುದಿಲ್ಲ....'

ಮುದುಕಿ ಇನ್ನೂ ಆಶಾಪೂರಿತವಾದ ದೃಷ್ಟಿಯಿಂದ ಆ ಮಂಗಮಗುವನ್ನು ನೋಡುತ್ತಲೇ ಇದ್ದಳು. ಏನೋ ಜ್ಞಾಪಕವಾಗಿ ತನ್ನ ಉಡಿಯಲ್ಲಿ ಕೈಹಾಕಿದಳು. ಒಂದು ಬಗೆಯ ತೃಪ್ತಿಯಿಂದ ಅದರಲ್ಲಿಯ ಚುರಮುರಿಯ ಕಾಳುಗಳನ್ನು ಕೈಗೆತ್ತಿಕೊಂಡು, ಆ ಮಗುವಿನ ಮುಂದೆಸೆದಳು. ಅದು ತನ್ನೆದುರು ಬಿದ್ದ ಮಂಡಕ್ಕಿಯನ್ನೊಂದುಸಲ ದೃಷ್ಟಿಸಿತು; ಆದರೆ ಮುಂದೆ ಬರಲಿಲ್ಲ. ಅಪರಿಚಿತ ಮುದುಕಿ ಮುಂದೆ ನಿಂತಿರುವಾಗ, ಅದು ಹೇಗೆ ತಾನೆ ಮುಂದೆ ಬಂದು ಆ ಕಾಳುಗಳನ್ನು ಮುಕ್ಕೀತು ?

ಮಗುವಿನ ಮನಸ್ಸು ಮುದುಕಿಗೆ ಅರ್ಥವಾಯಿತೇನೊ ! ತಾನು ನಿಂತಲ್ಲಿಂದ ಎರಡು ಮೂರು ಮಾರು ಹಿಂದೆ ಸರಿದಳು. ಆಗ ಕೊಂಚ ಧೈರ್ಯಬಂತು ಅದಕ್ಕೆ. ತಾಯ ಒಪ್ಪಿಗೆಗಾಗಿ ಹಿಂದಿರುಗಿ ನೋಡಿತು. ತಾಯಿಮಂಗ ಕಣ್ಸನ್ನೆಯಿಂದ ಆ ಕಾಳುಗಳನ್ನು ತಿನ್ನಲು ಒಪ್ಪಿಗೆಯಿತ್ತಿತು. ತಾಯ ಒಪ್ಪಿಗೆ ದೊರೆತುದೇ ತಡ ; ಆ ಮರಿ ಕುಣಿಯುತ್ತ ಮುಂದೆ ಬಂದು ಒಂದೊಂದೇ ಕಾಳುಗಳನ್ನಾರಿಸಿ ಬಾಯಿಗಿಟ್ಟುಕೊಳ್ಳಲಾರಂಭಿಸಿತು. ಆದರೆ ತಾಯಿಮಂಗ ಮಾತ್ರ ಒಂದು ಕಾಳನ್ನೂ ಮುಟ್ಟಲಿಲ್ಲ.

ಆ ತಾಯಿ–ಮಗುವಿನ ಪ್ರೇಮವನ್ನು ಕಂಡು ಮುದುಕಿ ಇನ್ನಿಷ್ಟು ಹರುಷ ಭರಿತಳಾಗಿ, ತನ್ನ ಉಡಿಯಲ್ಲಿರುವ ಮಂಡಕ್ಕಿಗಳನ್ನು ಕೈಗೆ ಸಿಕ್ಕಿದ ಹಾಗೆ ಅದರ ಮುಂದೆ ತೂರಲಾರಂಭಿಸಿದಳು.

ಆ ಮರಿ, ಮುದುಕಿ ಒಗೆಯುತ್ತಿರುವ ಹಾಗೆ ಸರಸರನೆ ತನ್ನ ಗಂಟಲಿಗೆ ತುಂಬುತ್ತಿತ್ತು. ಬಲ ಕಪೋಲ ಗೋಲಿ ಗುಂಡು ಇಟ್ಟ ಹಾಗೆ ಉಬ್ಬಿಕೊಂಡಿತು. ಆದರೂ ಆ ತಾಯಿ ಮಂಗ ಒಂದು ಕಾಳಿಗಾಗಿಯೂ ಹಾರಯಿಸಲಿಲ್ಲ; ಮುಂದೆ ಅಡಿ ಇಡಲಿಲ್ಲ. ಆ ಮಗುವಿನ ತೃಪ್ತಿ ಸಂತೋಷಗಳೇ ತನ್ನವೆಂದು ಸಾರುತ್ತಿರುವಂತೆ— ಮೌನವಾಗಿ ಕುಳಿತು ತನ್ನ ಕಂದನನ್ನು ಅಭಿಮಾನದಿಂದ ನೋಡುತ್ತಲಿತ್ತು. ಮಂಗ ನಾದರೇನಾಯಿತು? ಅದರ ಮನದ ಸರೋವರದಲ್ಲಿ ತಾಯ್ತನದ ಹೂ ಅರಳಲಿಲ್ಲವೇನು?

ಆ ಮಗುವನ್ನು ನೋಡುತ್ತಿರುವಂತೆ ಮುದುಕಿಯ ಹೃದಯ ದ್ರವಿಸಲಾ ರಂಭಿಸಿತು. ತಾನೂ ಅಂತಹ ಮಗುವಿನ ತಾಯಿಯಾಗುತ್ತೇನೆ ಬೇಗ—ಎಂಬ ಹುಚ್ಚು ಕನಸು ಮತ್ತೆ ಅವಳ ಕಣ್ಣುಗಳೆದುರು ತಾಂಡವ ನೃತ್ಯಗೈದಿತು. ಆ ಮಗು ಅವಳದಾಗಿಯೇ ತೋರಿತು.

ಮುದುಕಿ ಮುಂದುವರಿದು ಆ ಮರಿಯನ್ನೆತ್ತಿಕೊಳ್ಳಲು ಕೈಚಾಚಿದಳು. ಮರಿ ಭಯದಿಂದ ತಾಯ ಬಳಿಗೋಡಿತು. ತಾಯಿಮಂಗ ಹೆದರಿಕೊಂಡು ತನ್ನ ಮಗುವನ್ನು ಎದೆಯಲ್ಲಿ ಗಟ್ಟಿಯಾಗಿ ಅಪ್ಪಿಕೊಂಡಿತು.

ಮುದುಕಿ ಇನ್ನೂ ಮುಂದುವರಿದಳು.

ಇಷ್ಟು ಹೊತ್ತಿನವರೆಗೆ ಕೃತಜ್ಞತೆಯಿಂದ ಅವಳನ್ನು ನೋಡುತ್ತಿದ್ದ ತಾಯಿ ಮಂಗ, ತನ್ನ ಕಂದನ ಅಪಹರಣವಾಗುತ್ತಿದೆ ಎಂದು ತಿಳಿದಾಗ ಕೋಪದಿಂದ ಕಿಡಿ ಕಾರುತ್ತ ಹಲ್ಲು ಕಿರಿಯಿತು.

ಮುದುಕಿ ಅದರ ಹಲ್ಲುಕಿರಿತಕ್ಕೆ ಎಚ್ಚತ್ತು ನೋಡಿದಳು ಆ ಮಂಗಗಳನ್ನು. ಉಗ್ರವಾಗಿತ್ತು ತಾಯಿ;—ತನ್ನ ಕಂದನ ಮೇಲಿನ ಅಮಿತವಾದ ಮೋಹದಿಂದ ಕುರುಡಾಗಿ ಹಲ್ಲು ಕಿರಿಯುತಿತ್ತು—ಅವಳನ್ನು ಹೆದರಿಸಲು ಯತ್ನಿಸಿತು.

ಆ ಉಗ್ರವಾದ ಮೊಗವನ್ನು ಕಂಡು ಮುದುಕಿಗೆ ತನ್ನ ನೆರೆಹೊರೆಯ ತಾಯಂದಿರ ಮೊಗಗಳೆಲ್ಲ ಒಂದು ಸಲ ಅವಳ ಒಳಗಣ್ಣಿನೆದುರು ಕುಣಿದುವು. ವಿಕಟ ವಾಗಿ ಅಟ್ಟಹಾಸಗೈಯುತ್ತ :

'ನೀನು ಬಂಜೆ....ನಮ್ಮ ಮಕ್ಕಳನ್ನು ಮುಟ್ಟಬೇಡ....' ಎಂದು ಅರಚಿದ ಹಾಗಾಯಿತು. ಮುದುಕಿ ಗಟ್ಟಿಯಾಗಿ ಕಿವಿ ಮುಚ್ಚಿಕೊಂಡಳು. ಎದುರಿಗೆ ತನ್ನ

ಕಂದನನ್ನು ಎತ್ತಿಕೊಂಡು ಕುಳಿತ ಮಂಗ ಇನ್ನೂ ಹಲ್ಲು ಕಿರಿಯುತ್ತಲಿತ್ತು. ಆದರ ಧ್ವನಿಯಲ್ಲಿ ತಾಯ್ತನದ ಬಿಂಕವಿತ್ತು.

'ಬಂಜೆ.... ನೀನು ಬಂಜೆ....'

ಎಂದು ಹಲ್ಲು ಕಿರಿಯುತ್ತಿರುವಂತೆ ಅವಳಿಗೆ ಭಾಸವಾಯಿತು–ಮತ್ತೆ.

'ತಾನು ಬಂಜೆಯೆ ? '

ಮುದುಕಿ ತಳಮಳಿಸಿದಳು. ಕಾಯ್ದು ತಪ್ತಳಾದಳು.

'ಊಹೂಂ—ನಾನು ಬಂಜೆಯಲ್ಲ;.... ಮಹಾಕೂಟೇಶ್ವರನ ಕೃಪೆಯಿಂದ ನಾನು ಹಡೆದೇ ಹಡೆಯುತ್ತಾನೆ.... ಅಲ್ಲ.... ನಾನು ಬಂಜೆಯಲ್ಲ....'

'ಹ–ಹ–ಹೌದು.... ಹೌದು.... ನೀನು ಬಂಜೆ....'

ಮತ್ತೆ ಆ ಮಂಗ ಇನ್ನೂ ಎತ್ತರದ ಧ್ವನಿಯಲ್ಲಿ ಗಟ್ಟಿಯಾಗಿ ಅರಚುತ್ತಲಿರುವಂತೆ ಭಾಸವಾಯಿತು. ಮುದುಕಿಯ ತಾಳ್ಮೆ ತಪ್ಪಿತು. ಚಿತ್ತ ಕದಲಿತು. ತಾನೆಲ್ಲಿರುವೆನೆನ್ನುವುದನ್ನೂ ಮರೆತು, ಕೆಳಗೆ ಬಾಗಿ, ಕೈಯಲ್ಲಿ ಒಂದು ಕಲ್ಲನ್ನೆತ್ತಿಕೊಂಡು ಎದುರು ಕುಳಿತ ಆ ತಾಯಿಮಂಗಕ್ಕೆಸೆದಳು.

ಅದು ಗಟ್ಟಿಯಾಗಿ ಚೀರುತ್ತ ಓಟಕಿತ್ತಿತು. ಅದರ ಧ್ವನಿ ಕೇಳಿಸುತ್ತಲಿರವವರೆಗೂ....

'ನೀನು ಬಂಜೆ.... ನೀನು ಬಂಜೆ....'

ಎಂದು ವಿಕಟವಾಗಿ ನಗುತ್ತಿರುವಂತೆ ಅವಳಿಗೆ ಕೇಳಿಸಿತು. ಮುದುಕಿ ಆ ಅಟ್ಟಹಾಸವನ್ನು ಕೇಳಲಾರದೆ ಮುಂದೆ.... ಮುಂದೆ ಓಡಲಾರಂಭಿಸಿದಳು.

ಅರ್ಧ ಫರ್ಲಾಂಗನ್ನೂ ಅವಳು ದಾಟಿರಲಿಲ್ಲ. ಓಡಿದುದರಿಂದ ದಮ್ಮು ಹತ್ತಿ ಅಲ್ಲೇ ಒಂದೆರಡು ನಿಮಿಷ ಕುಳಿತಳು. ಹೊಯ್ದಾಡುತ್ತಲಿರುವ ಅವಳ ಒಳಧ್ವನಿ ಮತ್ತೆ ಉಸಿರ್‌ಗರೆಯಿತು.

'.... ಮನುಷ್ಯರಲ್ಲೇ ನನ್ನನ್ನು ತಿರಸ್ಕರಿಸುವರೆಂದು ತಿಳಿದಿದ್ದೆ.... ಈ ಅಲ್ಪಪ್ರಾಣಿಯಾದ ಮಂಗಕ್ಕೂ ನನ್ನಮೇಲೆ ತಿರಸ್ಕಾರವೆ ?....'

'ಹುಟ್ಟಬಾರದು........ ಏಳೇಳು ಜನ್ಮಕ್ಕೂ ಬಂಜೆಯಾಗಿ ಹುಟ್ಟಬಾರದು ಶಿವನೆ.....'

ಮುದುಕಿಯ ಕಣ್ಣುಗಳಿಂದ ಕಣ್ಣೀರ ಕಾರಂಜಿ ಚಿಲ್ ಎಂದು ಚಿಮ್ಮಿತು. ಹಾಗೆ ದುಃಖಿಸುತ್ತ ಅವಳೆಷ್ಟು ಹೊತ್ತು ತಾನೆ ಕುಳಿತುಕೊಳ್ಳಲು ಸಾಧ್ಯ?—ತನ್ನನ್ನೇ ತಾನು ಸಂತಯಿಸಿಕೊಂಡಳು;—ಸಮಾಧಾನ ತಂದುಕೊಂಡಳು. ಆಗ ಅವಳಿಗೆ ಮತ್ತೆ ಮಹಾಕೂಟೇಶ್ವರನ ನೆನಪಾಯಿತು.

'......ಅವನು ಕಣ್ಣುಬಿಟ್ಟರೆ ಅಸಾಧ್ಯ ಕೆಲಸವಾವುದು ?.... ಖಂಡಿತವಾಗಿಯೂ ಅವನು ನನಗೊಂದು ಮಗುವನ್ನು ಕರುಣಿಸಿಯೇ ಕರುಣಿಸುತ್ತಾನೆ.'

ಸಮಾಧಾನದ ಉಸಿರೆಳೆದಳು. ಮುದುಕಿ ಹಾಗೆಯೆ ಅಲ್ಲಿಂದೆದ್ದು ಮುಂದೆ ಸಾಗಿದಳು. ಅವಳೀಗ ಗುಡ್ಡದ ಮೇಲೆ ಬಂದಿದ್ದಳು. ಬಿಸಿಲೂ ಪ್ರಖರವಾಗಿತ್ತು. ಆದರೂ ಅವಳು ಬೇಗ ಬೇಗ ಹೆಜ್ಜೆ ಹಾಕುತ್ತಲಿದ್ದಳು.

'ಮಹಾಕೂಟೇಶ್ವರ, ಕೃಪೆಮಾಡು !'

ಎಂದವಳೆದೆ ಮೊರೆಯುತ್ತಿತ್ತು. ಮುದ್ದು ಮುದ್ದಾದ ಮಗುವಿನ ಚಿತ್ರವೊಂದು ಅವಳ ಹೃದಯಪಟಲದ ಮೇಲೆ ಮೂಡಿ ಮನಸ್ಸನ್ನು ಪ್ರಸನ್ನಗೊಳಿಸಲಾರಂಭಿಸಿತ್ತು.

ಗುಡ್ಡ ಇಳಿದು, ಹೊಲದ—ಕಾದು ಕೆಂಡವಾದ—ಮಳಲಿನ ಮೇಲೆ ಸಾಗಿ ಮತ್ತೆ ಗುಡ್ಡವನ್ನೇರಲಾರಂಭಿಸಿದಳು. ಅವಳ ಮನಸ್ಸು, ಕಣ್ಣು ಕಲ್ಪನೆಯ ಮಗುವಿನ ಮೇಲೆ ಕೇಂದ್ರೀಕೃತವಾಗಿದ್ದುವು.

ಗುಡ್ಡದಮೇಲೆ ಬಂದಾಗ ಅವಳಿಗೆ ಮಾವಿನ ತೋಪಿನಲ್ಲಿ ತಲೆ ಎತ್ತಿ ನಿಂತ ಮಹಾಕೂಟೇಶ್ವರನ ಗುಡಿಯ ಕಲಶದ ದರ್ಶನವಾಯಿತು. ಮುದುಕಿ ಗಟ್ಟಿಯಾಗಿ ಕೈ ಎತ್ತಿ ಮುಗಿದು, ಮತ್ತೆ ಮತ್ತೆ ತನಗೊಂದು ಮಗುವನ್ನು ಕರುಣಿಸೆಂದು ಬೇಡಿಕೊಂಡಳು.

ಅವಳ ನಡಿಗೆ ಇನ್ನೂ ತೀವ್ರವಾಯಿತು. ಅವಳ ಹೃದಯ ಇನ್ನಿಷ್ಟು ಹೊಡೆದುಕೊಂಡಿತು. ನೋಡುನೋಡುವಷ್ಟರಲ್ಲೇ ಮುದುಕಿ ಆ ಕಿರುಬೆಟ್ಟದಿಂದ ಕೆಳಗಿಳಿದು ಗೆರಸಿನ ದಾರಿಯಲ್ಲಿ* ಸಾಗಲಾರಂಭಿಸಿದಳು. ಏನೋ ಜ್ಞಾಪಕವಾಗಿ ಮುದುಕಿ ತನ್ನ ಕೈಮೈಗಳನ್ನು ನೋಡಿಕೊಂಡಳು. ಅವಳ ದೇಹವೆಲ್ಲ ಹಳದಿಯಾಗಿತ್ತು—ಬಾಣಂತಿ ಬಣ್ಣದಂತೆ.

* ಮಹಾಕೂಟದ ದಾರಿಯ ಈ ಕೊನೆಯಲ್ಲಿ ದಟ್ಟವಾದ ಕಾಡಿರುವದರಿಂದ, ಸೂರ್ಯ ಕಿರಣಗಳ ಪ್ರತಿಚ್ಛಾಯೆಯಾಗಿಯೂ, ಇಲ್ಲವೆ ಸುತ್ತುಮುತ್ತಲಿನ ತುಂಬಿದ ಹಳದಿ ವರ್ಣದ ಕಣ್ಣು ಮೋಸಹೋಗಿಯೋ-ಇಲ್ಲಿ ಮೈಯೆಲ್ಲ ಹಳದಿ ವರ್ಣವಾಗಿ ಕಾಣುತ್ತದೆ. ಆದರೆ ನನ್ನ ಹಳ್ಳಿಗರು ಅದು ದೇವರ ಮಹಿಮೆಯೆಂದೇ ನಂಬುತ್ತಾರೆ. ಹಾಗು ಅದಕ್ಕಾಗಿ ಒಂದು ಕತೆಯನ್ನೂ ಹೇಳುತ್ತಾರೆ. ಕತೆ ಇಷ್ಟು. ಮಹಾಕೂಟೇಶ್ವರನ ಕೃಪೆಯಿಂದ ಮಕ್ಕಳಾದರೆ, ಅವನಿಗೆ ಮೊದಲು ಮಗುವನ್ನು ಬಲಿಕೊಡುತ್ತೇನೆಂದು ವಚನವಿತ್ತ ಬಂಜೆ ಮಗುವಾದ ತಕ್ಷಣ ತರಲಿಲ್ಲವಾಗಿ, ಅವಳನ್ನು ಅಲ್ಲೇ ಕಲ್ಲಾಗಿಸಿದನಂತೆ.

'ಹಳದಿ ಬಣ್ಣ!.... ಬಾಣಂತಿಯ ಬಣ್ಣ!!'

ಮುದುಕಿ ಚಪ್ಪಾಳೆ ಬಾರಿಸಿ ಕಿಸಿಕಿಸಿ ನಕ್ಕಳು.

'ಬಾಣಂತಿ!.... ಹೌದು.... ತಾಯಿ, ನಾನೂ ನಿನ್ನಂತೆಯೇ ಶಿವನ ಕೃಪೆಯಿಂದ ಬಾಣಂತಿಯಾಗುತ್ತೇನೆ.'

'ಆಗ....'

'ಆಗ ನನ್ನ ಮೈಬಣ್ಣ ನಿನ್ನಂತೆಯೇ—ನಿನ್ನಂತೆಯೇ !.... ಹಳದಿ.... ಹಳದಿ.... .... ಹಳದಿ !'

'ಕೃಪೆಮಾಡು ತಾಯಿ.... ನೀನು ಶಿವನ ಮೆಚ್ಚಿನ ತಾಯಿ.... ಅವನ ವರಪ್ರಸಾದ ದಿಂದಲೇ ಗರ್ಭಿಣಿಯಾಗಿ ಮಗುವನ್ನು ಹೆತ್ತವಳು.... ಬಂಜೆಯರಿಗೆಲ್ಲ ನೀನೆಯೇ ಅಕ್ಕ !......'

'ಬಂಜೆಯರ ದುಃಖ, ಕಷ್ಟಗಳನ್ನರಿತ ನಿನಗಿನ್ನೇನು ಹೆಚ್ಚಿಗೆ ಹೇಳುವದಿದೆ ತಾಯಿ.... ನೀನಾದರೂ ನಿನ್ನ ಕಷ್ಟ-ದುಃಖಗಳನ್ನುನನ್ನಯ್ಯನಿಗೆ ನಿವೇದಿಸು.... ನಾನೂ ಬೇಕಾದರೆ ನಿನ್ನಂತೆಯೇ ಬಲಿಯಾಗುತ್ತೇನೆ.... ಆದರೂ ಚಿಂತೆಯಿಲ್ಲ ನಾನು ಮಾತ್ರ ಬಾಣಂತಿಯಾಗಬೇಕು.... ಮಗುವನ್ನು ಬಿಟ್ಟು ಅವನು ನನ್ನನ್ನು ತನ್ನ ಪಾದಗಳ ಬಳಿ ಸೇರಿಸಿಕೊಂಡರೂ ಸಂತೋಷವೆ !'

'ಆದರೆ ನಾನು ತಾಯಿಯಾಗಬೇಕು.'

ಮುದುಕಿಯ ಅಂತರ್ಯದ ಧ್ವನಿಯೊಂದು ಕರುಣಾರ್ದ್ರಪೂರಿತವಾಗಿ ಪ್ರಾರ್ಥಿಸುತ್ತಲಿತ್ತು. ಅವಳ ದೃಷ್ಟಿಯೆಲ್ಲ ತನ್ನ ಕೈಮೈಗಳ ಮೇಲೆ ನೆಟ್ಟಿತ್ತು. ಬಾಣಂತಿಯ ಆ ಬಣ್ಣವನ್ನು ಗಮನಿಸುತ್ತಲಿತ್ತು.

ಗೆರಸಿನ ದಾರಿ ಕ್ರಮಿಸಿತು. ಗುಡಿಯನ್ನಾವರಿಸಿರುವ ದಟ್ಟವಾದ ಮಾವಿನ ತೋಪನ್ನು ಕಂಡು ಅವಳ ಹೃದಯ ಕುಲುಕುಲು ನಕ್ಕಿತು. ಆ ತಂಪಾದ ನೆಳಲಿನಲ್ಲಿ ಮನಸ್ಸನ್ನೆಲ್ಲ ತಂಪಾಗಿಯೇ ಮಾಡಿಕೊಂಡು ಮುನ್ನಡೆದಳು. ನಾಲ್ಕಾರು ಹೆಜ್ಜೆಗಳನ್ನೂ ಕಿತ್ತಿ ಇಟ್ಟಿರಲಿಲ್ಲ ಅವಳು. ಗುಡಿಯ ಹೆಬ್ಬಾಗಿಲಲ್ಲಿ ಶತಶತಮಾನಗಳಿಂದ ಕಾಯುತ್ತ ನಿಂತ ದ್ವಾರಪಾಲಕರನ್ನು ಕಂಡು ಹಿಗ್ಗಿನ ಗುಡಿ ಕಟ್ಟಿತು ಅವಳೆದೆಯಲ್ಲಿ. ದ್ವಾರ ಪಾಲಕರನ್ನೂ ದೇವರೆಂದು ಭಾವಿಸುವ ಅವಳ ಮುಗ್ಧ ಮನಸ್ಸು ಅವಳಿಂದ ಕೈ ಎತ್ತಿ ಮುಗಿಯಿಸಿತು.

ಸಿಂಹದ್ವಾರವನ್ನು ದಾಟಿ ಒಳಗೆ ನಡೆದಳು ಮುದುಕಿ. ಅಶುಚಿಯಾಗಿ ದೇವರಿಗೆ ಹೋದರೆ ಅವನ ಕೃಪೆಯಾದೀತೆ? ಮುದುಕಿಗೆ ಗೊತ್ತು. ಮಹಾಕೂಟೇಶ್ವರನ ಎರಡೂ ಹೊಂಡಗಳಲ್ಲಿ ಮುಳುಗಿ ಎದ್ದವರಿಗೆ ನೂರು ಜನ್ಮಗಳ ಪುಣ್ಯ ಬರುತ್ತದೆ—

ಎಂದು. ಆ ಪುಣ್ಯದ ಕೊಡ ತುಂಬಿಯಾದರೂ ತನಗೊಂದು ಮಗುವಾಗಲಿ—ಎಂದು ಹಾರಯಿಕೆ ಅವಳದು.

ಭಯ ಭಕ್ತಿಗಳಿಂದ ಮುದುಕಿ ಹೊರಗಿನ ಹೊಂಡದಲ್ಲಿ ಮುಳುಗು ಹಾಕಿದಳು. ಅವಳ ಬಾಯಿ ಒಂದೇ ಸಮನೆ 'ಶಿವನೆsಶಿವನೆss' ಎಂದು ಜಪಿಸಲಾರಂಭಿಸಿತು. ಅವಳು ಹಾಗೆಯೇ- ಒದ್ದೆಯಾದ ಸೀರೆ ಮೈಮೇಲಿದ್ದಂತೆಯೇ — ಗುಡಿಯೊಳಗೆ ನಡೆದಳು. ಒಳಗಿನ ಆ ಹಿರಿಯ ಹೊಂಡಕ್ಕೆ ಹೋಗಿ ಇನ್ನೊಂದು ಮುಳುಗು ಹಾಕಿ ಗರ್ಭಗುಡಿ ಪ್ರವೇಶಿಸಿದಳು. ಆ ಲಿಂಗವನ್ನು ನೋಡುತ್ತಿರುವಂತೆ ಅವಳ ಹೃದಯ ತುಂಬಿಬಂದಿತು. ಭಕ್ತಿ, ಹರುಷ, ಆಸೆಗಳ ತ್ರಿವೇಣೀ ಸಂಗಮದಲ್ಲಿ ಮಿಂದೇಳುತ್ತ ಮುದುಕಿ ಸಾಷ್ಟಾಂಗ ನಮಸ್ಕಾರ ಹಾಕಿದಳು. ಪೂಜಾರಿಯಿಂದ ಕರ್ಪೂರಾರತಿ ಬೆಳಗಿಸಿ ಕಾಯಿ ಒಡೆಯಿಸಿಕೊಂಡು, ಆ ಲಿಂಗವನ್ನೇ ದೃಷ್ಟಿಸುತ್ತ ಮತ್ತೆ ಮತ್ತೆ ಕೈ ಎತ್ತಿ ಮುಗಿದಳು.

'ನಿನಗೇ ಶರಣು ಬಂದಿದ್ದೇನೆ ಶಿವನೆ....ಇಷ್ಟು ವರುಷಗಳ ಬಯಕೆ ಯನ್ನೀಡೇರಿಸು. ನಾನು ನಿನ್ನನ್ನೇನೂ ಹೆಚ್ಚು ಕಾಡುವುದಿಲ್ಲ. ಒಂದೇ ಒಂದು ಮಗುವನ್ನು ಕರುಣಿಸಿಬಿಡು.—"ಬಾಣಂತಿ" ಅಕ್ಕನಂತೆ ನನ್ನನ್ನೂ ನಿನ್ನ ಬಳಿಗೆ ಕರೆದು ಕರೆದುಕೊಂಡರೂ ಚಿಂತೆಯಿಲ್ಲ. ಆದರೆ ನಾನು ಬಾಣಂತಿಯಾಗಿಯಾದರೂ ಸಾಯು ವಂತೆ ಪ್ರಸಾದವನ್ನು ನೀಡು ತಂದೆ......'

'ನಿನಗಾಗಿ ಬೇಕಾದರೆ ಯಾವ ಬಂಜೆಯೂ ಕಟ್ಟದ ಹಿರಿಯ "ಗುಡಿ" ಕಟ್ಟುತ್ತೇನೆ......ಹುಗ್ಗಿಯ ಊಟ ಹಾಕುತ್ತೇನೆ......ಆದರೆ ನನಗೊಂದು ಮಗುವನ್ನು ಮಾತ್ರ ದಯಪಾಲಿಸು ನನ್ನಯ್ಯ !'

ಭಕ್ತಿತುಂಬಿ, ಭಾವತುಂಬಿ, ಹೃದಯ ತುಂಬಿ ಅವಳು ಆ ಲಿಂಗಕ್ಕೆ ಅನನ್ಯ ಭಕ್ತಿಯಿಂದ ಮೊರೆಯಿಟ್ಟಳು. ಪೂಜಾರಿ ಅದೇ ವೇಳೆಗೆ ಪ್ರಸಾದ, ಚಂಡುಹೂ ಗಳನ್ನು ಅವಳುಡಿಯಲ್ಲಿ ಹಾಕಿದ. ಮುದುಕಿ ಪರಮಭಕ್ತಿಯಿಂದ ಆ ಪ್ರಸಾದನನ್ನು ಕಣ್ಣಿಗೊತ್ತಿಕೊಂಡಳು. ಹಾಗೆಯೆ ಆ ಲಿಂಗಕ್ಕೆ ಇನ್ನೊಂದು ಸಲ ಕೈ ಮುಗಿದು ಅಲ್ಲಿಂದ ಸಾಗಿದಳು.

ಅಲ್ಲೆಲ್ಲ ಇರುವ ವೀಣಾಪಾಣಿ, ಸರಸ್ವತಿ, ಬಸವಣ್ಣ, ಕೋಣೆ ಶಂಕರ-ಎಲ್ಲ ದೇವರ ದರ್ಶನವನ್ನೂ ಪಡೆದು, ಮತ್ತೆ ಹಿಂದಿರುಗಿದಳು.

ಅವಳ ಮನದಲ್ಲಿ, ನರನರದಲ್ಲಿ ಶಾಂತಿ ಸಮಾಧಾನಗಳು ತುಂಬಿಕೊಂಡಿದ್ದವು. ಕೈಯಲ್ಲಿ ಹಿಡಿದ ಮಹತ್ವದ ಕೆಲಸವೊಂದು ಪೂರಯಿಸಿದ ನೆಮ್ಮದಿ ಅವಳಿಗೆ ದೊರೆತಿತ್ತು.

ಬಿಸಿಲು ಒಂದೇ ಸಮನೆ ರಣಗುಡುತ್ತಲಿತ್ತು. ಗಾಳಿಯ ಸುಳಿವೂ ಇರಲಿಲ್ಲ ಮೇಲೆ ಒದ್ದೆ ಸೀರೆ ಬೇರೆ. ಹೊಟ್ಟೆ ತಕತಕನೆ ತಾಳ ಹಾಕುತ್ತಿತ್ತು. ಆದರೂ ಅವಳು ಒಂದು ಗುಟುಕು ನೀರನ್ನೂ ಬಾಯಲ್ಲಿ ಹಾಕಲಿಲ್ಲ. ಪ್ರಸಾದದ ಕೊಬ್ಬರಿಯ ಒಂದು ತುಣುಕಿನ ರುಚಿಯನ್ನೂ ನೋಡಲಿಲ್ಲ. 'ಗುಡಿ'ಯನ್ನು ನಿಲ್ಲಿಸಿದ ವಿನಾ ಅವಳ ಕಾರ್ಯ ಪೂರಯಿಸಿದಂತೆಲ್ಲಾಯಿತು ? 'ಗುಡಿ'ನಿಂತಾಗಲೇ ಪ್ರಸಾದವನ್ನು ಸವಿಯುವದು!—ಎಂಬ ಘೋರ ಪ್ರತಿಜ್ಞೆ ಅವಳದು. ದೇವರು ಅವಳ ಬಂಜೆತನ ಅಳಿಯಲು ಕೈಕಟ್ಟಿ ನಿಂತಾಗ ಅವಳು ಈ ಅಲ್ಪ ಕಷ್ಟವನ್ನಾದರೂ ತಾಳಿಕೊಳ್ಳ ಬೇಡವೆ ?

ಮಾವಿನ ತೋಪಿನ ತಂಪಾದ ನೆಳಲಿನಲ್ಲೂ ಅವಳು ಒಂದು ಕ್ಷಣ ನಿಲ್ಲಲಿಲ್ಲ, ಹಾಗೆಯೆ ಸಾಗಿದ್ದಳು. 'ಬಾಣಂತಿ'ಯ ಗೆರಸು ತುಳಿದು, 'ಪಡೆ' ಇಳಿದು, ಹೊಂದ ಆ ಸುಡುವ ಮಳಲು ದಾಟಿ, ಮತ್ತೆ ಗುಡ್ಡ ಏರಿದಳು. ಒಂದು ಬಗೆಯ ತೃಪ್ತಿ—ನೆಮ್ಮದಿಗಳಿಂದ ಅವಳ ಮನಸ್ಸು ತುಂಬಿತ್ತು. ಯಾವುದೋ ಒಂದು ಅದ್ಭುತಶಕ್ತಿ ಅವಳನ್ನು ಮುಮ್ಮುಂದಕ್ಕೆ ಕೊಂಡೊಯ್ಯುತ್ತಲಿತ್ತು.

ನೇರವಾಗಿ ಅವಳು 'ಗುಡಿ' ಕಟ್ಟುವ ತಾಣಕ್ಕೆ ಬಂದಳು. ಅಲ್ಲಿಲ್ಲ ನೂರಾರು ಸಾವಿರಾರು 'ಗುಡಿ'ಗಳು ಅವಳ ಕಣ್ಣಿಗೆ ಹಬ್ಬವನ್ನುಂಟುಮಾಡಿದುವು. ಅದೇ ಪ್ರಥಮ ಸಲ ಗರ್ಭಿಣಿಯಾದ ಹೆಣ್ಣಿನಂತೆ ವೈಯಾರದಿಂದ ಆ 'ಗುಡಿ'ಗಳ ಬಳಿ ಸಾರಿದಳು. ಅವುಗಳನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತ ಹರುಷ ಪುಲಕಿತಳಾಗಿ ಹೇಳಿಕೊಂಡಳು—ಮನದಲ್ಲೆ,

'ನೂರು—ಸಾವಿರ-ಕೋಟಿ, ಅಬ್ಬ! ಎಷ್ಟು"ಗುಡಿ"ಗಳಿವು! ಎಷ್ಟು ಮಗುಗಳಿಗೆ ಜನ್ಮವಿತ್ತ ಪ್ರಸಾದದ ಪ್ರತಿನಿಧಿಗಳಿವು !....'

ಮುದುಕಿ ಮುಂದೆ ಸಾಗಿ ಒಂದೊಂದೇ ಗುಡಿಯನ್ನು ಪರಿಶೀಲಿಸಿದಳು. ಮನಸ್ಸು ತಣಿವವರೆಗೂ ನೋಡಿದಳು.

' ಇಷ್ಟೆಲ್ಲ ಬಂಜೆಯರೂ ತಾಯಂದಿರಾಗಿದ್ದಾರೆ. ಲೋಕದ ಬಂಜೆಯರ ದುಃಖವನ್ನೇ ಪರಿಹರಿಸಿದ ನಿನಗೆ, ನನ್ನ ದುಃಖವನ್ನು ಪರಿಹರಿಸಲಾಗುವುದಿಲ್ಲವೆ ದೇವರೆ !

'ಈ ಸಲ ಖಂಡಿತವಾಗಿಯೂ ನಿನ್ನಿಂದ ಈ ಕಾರ್ಯವಾಗುತ್ತದೆ. ನೀನು ಕಣ್ದೆರೆದು ನೋಡಿದರೆ ಯಾವುದು ಅಸಾಧ್ಯ ? ಕಣ್ಣು ಮುಚ್ಚಿ ಕಣ್ಣು ತೆರೆಯುವುದರೊಳಗಾಗಿ ನೂರಾರು ಮಕ್ಕಳನ್ನಿತ್ತು ಸಲಹೀಯೆ—ತಂದೆ....

'ಈ ದಿನ ನಿನಗೆ ಯಾವ ಬಂಜೆಯರೂ ಕಟ್ಟದ ಹಿರಿಯ "ಗುಡಿ" ಕಟ್ಟಿಕೊಳ್ಳು ತ್ತೇನೆ. ನನಗೆ ಮಾತ್ರ ಎಂತಹದೇ ಆಗಲಿ ಮಗುವನ್ನು ದಯಪಾಲಿಸು ನನ್ನಪ್ಪ.....

'ಇದು ನನ್ನ ಕೊನೆಯ ಪ್ರಾರ್ಥನೆ.'

ಮುದುಕಿ ತುಂಬ ಗಂಭೀರಳಾಗಿ ಮನದಲ್ಲೇ ನೂರಾರುಸಲ ಮಹಾಕೂಟೇಶ್ವರ ನನ್ನು ಸ್ಮರಿಸಿದಳು. ಹಾಗೆಯೇ 'ಗುಡಿ' ಕಟ್ಟುವುದಕ್ಕಾಗಿ ಗಂಡುಗಚ್ಚೆ ಹಾಕಿ ಸನ್ನದ್ಧಳಾದಳು.

ಅಭೂತಪೂರ್ವವಾದ ಉತ್ಸಾಹ ಅವಳ ಹೃದಯದಲ್ಲಿ ತುಂಬಿ ತುಳುಕುತ್ತಲಿತ್ತು ಯಾವುದೋ ಒಂದು ಅದ್ಭುತ ಶಕ್ತಿ ಅವಳ ಮೈಯಲ್ಲಿ ಸಂಚರಿಸುತ್ತಲಿತ್ತು.

ಅವಳು ಒಂದೆರಡು ಫರ್ಲಾಂಗುಗಳವರೆಗೆ ಸುತ್ತಿ, ಸುತ್ತಿ ಒಂದು ಹಿರಿಯ ಕಲ್ಲನ್ನೆತ್ತಿ ತಂದಳು. ಅಲ್ಲೆಲ್ಲ ಇರುವ 'ಗುಡಿ'ಗಳ ಮಧ್ಯದಲ್ಲಿ ಅದನ್ನು ಪ್ರತಿಷ್ಠಾಪಿಸಿದಳು.

ತಿಣಿತಿಣಿಕಿ ಎರಡನೆಯ ಕಲ್ಲನ್ನೂ ಎತ್ತಿ ತಂದಳು.

ಮತ್ತೆ ಒಂದು ಫರ್ಲಾಂಗು ಓಡಿ ಮೂರನೆಯ ಕಲ್ಲನ್ನೂ ತಂದಳು. ತನ್ನ ಮಹತ್ತರವಾದ ಕೆಲಸ ಈ ರೀತಿ ಸುಲಭವಾಗಿ ಕೈಗೂಡುತ್ತಿರುವುದನ್ನು ಕಂಡು ಅವಳ ಮನಸ್ಸು ತುಂಬಿದ ಸಮಾಧಾನ ಶಾಂತಿಗಳಲ್ಲಿ ಮಿಂದೇಳುತ್ತಲಿತ್ತು.

ಆ ಕಲ್ಲುಗಳನ್ನೆಲ್ಲ ಒಲೆಯಂತೆ ಹೊಂದಿಸಿದಳು ಇನ್ನೂ ಉತ್ಸಾಹದಿಂದ. ಅದರ ಮೇಲೆ ಹಾಸಲು ಇನ್ನೊಂದು ತುಂಬ ಹಿರಿಯ ಕಲ್ಲು ಅವಳಿಗೆ ಬೇಕಾಗಿತ್ತು. ಅಂತಹದನ್ನು ಎತ್ತಿ ತರುವುದಕ್ಕೆ ಅವಳಲ್ಲಿ ಶಕ್ತಿಯಾದರೂ ಇತ್ತೆ—? ಅದೊಂದನ್ನೂ ಯೋಚಿಸಲಿಲ್ಲ ಅವಳು. 'ಗುಡಿ'ಯನ್ನು ಪೂರ್ತಿಗೊಳಿಸುವುದೊಂದೇ ತನ್ನ ಗುರಿ ಎನ್ನುವಂತೆ ತನಗಾದ ಆಯಾಸವನ್ನೆಲ್ಲ ಮರೆತು ಆವೇಶಗೊಂಡವಳಂತೆ ಮತ್ತೆ ಓಡಿದಳು. ಅವಳ ಮೈಯಿಂದ ಬೆವರು ಧಾರೆ ಧಾರೆಯಾಗಿ ಸುರಿಯುತ್ತಲಿತ್ತು.

ಒಂದು ಕೂಗಳತೆಯ ದಾರಿ ಸಂಚರಿಸಿ ತನಗೆ ಬೇಕಾದ ಹಿರಿಯ ಕಲ್ಲನ್ನು ಶೋಧಿಸಿದಳು. ಆ ಕಲ್ಲು ಕಂಡಾಗ ಅವಳಿಗೆಂತಹ ಆನಂದ! ತಿಣಿತಿಣಿಕಿ, ತುಟಿ ಕಚ್ಚಿ, ನಾಲಗೆ ಕಚ್ಚಿ, ಬಿಗಿಹಿಡಿದು ಅವಳು ಹೇಗೋ ಆ ಕಲ್ಲನ್ನು ಎತ್ತಿದಳು. ತುಂಬ ಭಾರವಾಗಿತ್ತು ಆ ಕಲ್ಲು. ಆದರೂ ಅದರೆಡೆಗೆ ಅವಳ ಗಮನವಿರಲಿಲ್ಲ.

ಶಕ್ತಿ ಸಾಲದಾಗಿತ್ತು. ಕೈ-ಕಾಲುಗಳ ಶಕ್ತಿ ಕುಂದುತ್ತಲಿತ್ತು. ತೇಕು ಹೆಚ್ಚಿತ್ತು. ಬೆವರಿನಲ್ಲಿ ಅವಳ ಇಡಿಯ ದೇಹವೆಲ್ಲ ಮಿಂದಿತ್ತು. ಆದರೂ ಅವಳು ತುಂಬ ಸಾಹಸಮಾಡಿ ಕಲ್ಲನ್ನು ಹೊತ್ತಳು. ನಿಧಾನವಾಗಿ ಒಂದೊಂದೇ ಹೆಜ್ಜೆ ಕಿತ್ತಿಡುತ್ತ ತಾನು ಕಟ್ಟಿದ ನೂತನ 'ಗುಡಿ'ಯ ಬಳಿ ಸಾರಿದಳು—ಹೇಗೋ.

ಅಬ್ಬ! ಇನೊಂದು ಕ್ಷಣದಲ್ಲಿ ಆ ಕಲ್ಲು 'ಗುಡಿ'ಯ ಮೇಲೆ ಕುಳಿತು ಅವಳ ಹಿರಿಯ ಆಸೆಯನ್ನು, ಜೀವನದ ಮಹೋನ್ನತ ಉದ್ದೇಶವನ್ನು ಪೂರ್ತಿಗೊಳಿಸಬೇಕು.

ಮುದುಕಿ ಮಹಾಕೂಟೇಶ್ವರನನ್ನು ಜಪಿಸುತ್ತ ಹೊತ್ತುತಂದ ಕಲ್ಲನ್ನು ಗುಡಿಯ ಮೇಲೆ ಹೊಂದಿಸಲು ಎತ್ತಿದಳು.

ದೇಹದ ಆಸರೆ ತಪ್ಪಿತು. ಶಕ್ತಿ ಉಡುಗಿತು. ಹೃದಯದ ಏರಿಳಿತ ಭಯಂಕರವಾಗಿತ್ತು.

ಮುದುಕಿ ಇನ್ನೊಂದು ಕ್ಷಣದಲ್ಲಿ ಅದನ್ನು 'ಗುಡಿ'ಯ ನೆತ್ತಿಯಮೇಲೊಯ್ಯಲಿದ್ದಳು.

ಆದರೆ ಕೈಗಳು ಗದಗುಟ್ಟಿ ನಡುಗಿದವು. ದೇಹ 'ಈ ಭಾರ ತಡೆಯಲಾರೆ' ಎಂದು ಉಸುರಿತು. ಕಾಲು ತತ್ತರಿಸಿತು.

ಕಣ್ಣು ಮುಚ್ಚಿ ಕಣ್ಣು ತೆರೆಯುವುದರೊಳಗಾಗಿ ಆ ಹಿರಿಯ ಕಲ್ಲು ಅವಳ ಮೇಲೆ ಧಡಾರನೆ ಬಿದ್ದಿತು.

ಮುದುಕಿಯ ದೇಹವೂ ಅದರೊಂದಿಗೆ ಕೆಳಗುರುಳಿತ್ತು. ತನ್ನ ಜೀವನದ ಹಿರಿಯ ಆಸೆ, ಕನಸು, ಹುಚ್ಚುಗಳನ್ನು ಕಟ್ಟಿಕೊಂಡೇ ಈ ಲೋಕ ತ್ಯಜಿಸಿದಳು.

ಕಟ್ಟಿಗೆ ಕಡಿದುಕೊಂಡು ಹೋಗಲು ಬಂದ ಹರಿಜನ ಹುಡುಗರು, ದನಗಾಹಿಗಳು—ಆಗಲೇ ಅಲ್ಲಿ ನೆರೆದಿದ್ದರು. ಅವರವರಲ್ಲೇ ಮಾತುಕತೆ ನಡೆಯಿತು.

'ಅಯ್ಯೆಪ್ಪರೆ,—ಹುಚ್ಚಿ ಸಾವಂತ್ರೆವ್ವ—ಸತ್ತು ಹೋತಳ್ರಲೇ.'

'ಪಾಪ! ಗಂಡಿಲ್ಲ, ಮಕ್ಕಿಲ್ಲ, ಹುಚ್ಚು ಹಿಡಿದು ಈ ಗುಡದಾಗ ಪಿರಿ-ಪಿರಿ ತಿರಗತಿತ್ತು ಮುದುಕಿ!'

'ಶಿವನಾಟ,-ಯಾರ ತಿಳದಾರಪಾ....ಇಲ್ಲೆ ಇತ್ತ್ಯಾ ಈ ಮುದುಕೀ ಸಾವು!......'

ಅವರೆಲ್ಲರ ಹೃದಯಗಳು ತುಂಬಿ ಉದ್ಗಾರ ಹೊರಹೊರಡುತ್ತಲಿದ್ದವು. ಆ ಅನಾಥ ಹುಚ್ಚಿ ಮುದುಕಿಗಾಗಿ ಅವರೆಲ್ಲರ ಕಣ್ಣೀರ ತರ್ಪಣ ನಡೆಯಿತು.

—ಕುಲಕರ್ಣಿ ಬಿಂದುಮಾಧವ

# ಫರ್ಲಾಂಗಮ್ಮ

ಫರ್ಲಾಂಗಮ್ಮ!!!

ಹ....ಹ್ಹ....ಹಲವು ಮಂದಿ ಮೂರ್ಖರಿಟ್ಟ ಹೆಸರಿದು, ಫರ್ಲಾಂಗಮ್ಮ ಎಂದು. ಹಲವು ವರ್ಷಗಳ ಹಿಂದಿನ ಮಾತು....ಆಗ, ಯಾರಿಗೂ ಬೇಡದ ಕಗ್ಗಲ್ಲಿನಂತೆ ಊರಾಚೆ ಬಿದ್ದಿದ್ದೆ. ಯಾರೋ ಒಬ್ಬರು ಪುಣ್ಯಾತ್ಮರು ಕಡೆದು, ನಂಬರು ಬರೆದು ನಾಲ್ಕಾರು ಮಂದಿಗೆ ಉಪಕಾರಿಯಾಗುವ ಅವಕಾಶ ಕಲ್ಪಿಸಿದುದಕ್ಕೆ ಆನಂದಪಟ್ಟೆ. ಹಲವಾರು ಮಂದಿಯ ಕಷ್ಟದಲ್ಲಿ ಬೆರೆತು ಸಮಾಧಾನವನ್ನೀಯುವ ಶಕ್ತಿ ಕೆಲವು ದಿನಗಳಲ್ಲೀ ನನಗುಂಟಾಯಿತಲ್ಲ ಎಂದು ಹೆಮ್ಮೆಯೂ ನನಗಾಯಿತು.

ನಾನಿದ್ದ ಜಾಗದಲ್ಲೇ ಹಲವಾರು ಬಸ್ ಗಾಡಿಗಳು ಕೆಡುತ್ತಿದ್ದವು. ಇದಕ್ಕೆ ಮೂಲ ಕಾರಣವೇನೋ....ನಾನರಿಯೆ. ಯಾವುದೋ ಕೆಟ್ಟ ಗ್ರಹದ ಕಾಟವೆಂದು ಜನ ನಂಬಿದ್ದರು.

'ಆ ಹಾಳು ಭಾವಿ ಐತಲ್ಲ....ತೋಪಿನ ಹತ್ತಿರ....ಆ ಭಾವೀಲಿ ಮಾದಿ ತೀರ್ಕೊಂಡ್ಲು ಕಾಣ್ಲಾ....ಆ ಜಿನದಿಂದಾ ಗಾಳಿ ಆಗಿ ಇಂಗೆ ಕಾಟ ಕೊಡ್ತವ್ಳೆ ನೋಡು.'

'ರಾತ್ರೀನಾಗೆ ಈ ದಾರೀಲಿ ಪ್ರಯಾಣ ಮಾಡೋದೂಂದ್ರೆ ಭೋ ಕಸ್ಟಾ ಕಾಣಪ್ಪೋ......ಅದ್ಕೆ ನಾನು ಹಿಂದ್ಲೇಟು ಹಾಕ್ತಿದ್ದೆ. ಆದ್ರೂ ನೀ ಬಲವಂತ ಮಾಡಿ ಎಳಕೊಂಬಂದೆ....ಇಂಗಾಗ್ತದೇಂತ ನಂಗೆ ಮೊದ್ಲೇ ತಿಳ್ದಿತ್ತು.'

'ಹುಣ್ಣಿಮೆ—ಅಮಾಸೆ ದಿನದಲ್ಲಿ ಈ ರೋಟಿನಾಗೆ ಬಂದ್ರೆ ಗ್ಯಾರಂಟಿ.... ಏನಾದ್ರೂ ಆಯ್ತದೆ......ಬಿಳಿ ಸ್ಯಾಲೆ ಉಟ್ಕೊಂಡು ಎಣ್ಣು ಬತ್ತಿರೋದು ಎಂಗೆ ಕಾಣಿಸ್ತದೇಂತ....ನಾನು ಆ ಜಿನ ಪ್ರತ್ಯಕ್ಸವಾಗಿ ನೋಡಿ ಹೆದರಿ ಓಟಕಿತ್ತೆ.'

ಪ್ರಯಾಣಿಕರು ತಮ್ಮ ತಮ್ಮ ಅನುಭವಗಳನ್ನು ನೆನಪಿಗೆ ತಂದುಕೊಂಡು ಸವಿಸ್ತಾರವಾಗಿ ವರ್ಣಿಸತೊಡಗುತ್ತಿದ್ದರು.

ಶುಕ್ರವಾರದ ಸಂತೆಗೆಂದು ಗಾಡಿ ಕಟ್ಟಿ ಹೊರಡುತ್ತಿದ್ದ ರೈತರ ಉದ್ಗಾರ ಇದು.

ರಾತ್ರಿಕಾಲದಲ್ಲಿ ಇದೇ ಮಾರ್ಗವಾಗಿ ಬರುತ್ತಿದ್ದ ಬಸ್‌ನಲ್ಲೂ ಇದೇ ಗಲಭೆ.... ಕೋಲಾಹಲ....೧೮ನೇ ಮೈಲಿ ೭ನೇ ಫರ್ಲಾಂಗು. ಈ ಕಲ್ಲು ಹತ್ತಿರವಾದಂತೆಲ್ಲ ಜನರ ಜಂಘಾಬಲವೇ ಉಡುಗಿದಂತಾಗುತ್ತಿದ್ದಿತು, ಅಂಗೈಯಲ್ಲಿ ಜೀವ ಹಿಡಿದು ಪ್ರಯಾಣಿಕರು ಇಷ್ಟದೇವರ ಜಪ ಮಾಡುತ್ತಿದ್ದರು.

ಅವರೆಣಿಕೆಗೆ ಸರಿಯಾಗಿ ಬಸ್ ಕೆಟ್ಟು ಮುಷ್ಕರ ಹೂಡುತ್ತಿದ್ದಿತು. ಡ್ರೈವರ್ ಮತ್ತು ಕಂಡಕ್ಟರ್ ಇಬ್ಬರೂ ಹೊತ್ತಿನ ಪರಿವೆಯೇ ಇಲ್ಲದವರಂತೆ ಬಾನೆಟ್ ತೆಗೆದು ರಿಪೇರಿಗೆ ಕೂಡುತ್ತಿದ್ದರು.

ಭಯಕಂಪಿತರಾದ ಪ್ರಯಾಣೀಕರೂ ಹೊತ್ತು ಕಳೆಯಲು ಪಿಸುಮಾತು ಪ್ರಾರಂಭಿಸುತ್ತಿದ್ದರು. ಉಕ್ಕಿ ಬರುತ್ತಿದ್ದ ನಗೆಯನ್ನು ಕಷ್ಟಪಟ್ಟು ತಡೆದು ನಾನು ಮಾತುಗಳನ್ನಾಲಿಸುತ್ತಿದ್ದೆ.

'ನೋಡಲ್ಲಿ....ದೂರ.....ಆ ಮರದ ಹತ್ತಿರ ಏನೋ ಬರ್ತಾಐತೆ.'

ಕಲ್ಪನೆಯ ದೂರಾಕೃತಿಯನ್ನು ಒಬ್ಬ ಪ್ರಯಾಣಿಕ ತೋರಿಸುತ್ತಿದ್ದ. ಅವನ ಊಹೆಗೆ ಎಲ್ಲರೂ ತಲೆದೂಗುತ್ತಿದ್ದರು.

'ಔದು. ಅದೇ ಇಂಗೆ ಕಾಟ ಕೊಡ್ತಿರೋದು. ಪೂರ್ವಿಕರು ಏಳೀವೆದು ರವಷ್ಟೂ ಸುಳ್ಳಲ್ಲ.'

ಮತ್ತೊಬ್ಬ ಮರುನುಡಿಯುತ್ತಿದ್ದ, ಅನುಮಾನ ಸ್ಥಿರವಾಗುತ್ತಿದ್ದಿತು.

'ಮೂರು ಮೂರು ದಿನಕ್ಕೆ ಹೀಗೆ ಬಸ್ ಕೆಡೋದೂಂದ್ರೆ ಏನಪ್ಪಾ ವಿಚಿತ್ರ? ಹಿಂದೆ ನಾನು ಇದೇ ಬಸ್‌ನಲ್ಲಿ ಹಾಸನಕ್ಕೆ ಹೋದೆ....ಆಗಲೂ ಹಿಂಗೇನೇ ಆಯ್ತು.'

'ಈ ಕಾಡಿನಾಗೆ ಇಂಗಾಯ್ತಲ್ಲ........ಏನಪ್ಪಾ ಮಾಡೋದು........ಸಿವನೇ ಕಾಪಾಡಬೇಕು.'

—ಒಬ್ಬ ರೈತ ಭಕ್ತಿಯಿಂದ ದೇವರಿಗೆ ಜವಾಬ್ದಾರಿಯನ್ನು ಒಪ್ಪಿಸುತ್ತಿದ್ದ.

'ಅಗೋ....ಈ ಕಡೇನೇ ಬರುತ್ತಾ ಇರೋ ಹಾಗಿದೆ.'

ಪ್ರಯಾಣಿಕರ ಅಧೈರ್ಯ ಕಂಡು ಪೂಜಾರಪ್ಪ ಗಹಗಹಿಸಿ ನಗುತ್ತಿದ್ದ.

'ಅಯ್ಯೋ, ಪೆಚ್ಚುಗಳ್ರಾ....ಸುಮ್ನೆ ಯಾಕೋ ಹೆದರ್ತೀರಿ? ನಾನಿಲ್ಲಿ ಗಾಯತ್ರಿ ಜಪಾ ಮಾಡುತ್ತಿರುವಾಗ ಯಾವ ದೆವ್ವ, ಪೀಡೆ, ಪಿಶಾಚಿ ಈ ಕಡೆ ಸುಳಿಯುತ್ತೋ?'

'ನೀವೀಗ ಇಲ್ದಿದ್ರೆ ನಮ್ಮ ಗತಿ ಏನಾ ಬುದ್ಧಿ?....ಆ ಅನುಮಂತಪ್ನೇ ನಿಮ್ಮನ್ನ ಕಳಿಸಿರಬೇಕು.'

ಕೃತಜ್ಞತೆ ಸೂಸಿ ಒಬ್ಬ ರೈತ ಕೈ ಮುಗಿಯುತ್ತಿದ್ದ.

ಊರ ಮುಂದಿನ ಹನುಮಂತನ ಗುಡಿಯ ಪೂಜಾರಪ್ಪ ತಾರಸ್ಥಾಯಿಯಲ್ಲಿ ಮಂತ್ರ ಘೋಷಿಸಲಾರಂಭಿಸಿದಾಗ ಪ್ರಯಾಣಿಕರಲ್ಲಿ ಧೈರ್ಯ ಮೂಡುತ್ತಿದ್ದಿತು.

ಅವನಧ್ವನಿ ಎತ್ತರವಾದಂತೆಲ್ಲ ಜನರ ನಂಬುಗೆಯೂ ಹೆಚ್ಚುತ್ತಿದ್ದಿತು. ಪ್ರಯಾಣಿಕರು ನಿಧಾನವಾಗಿ ಉಸಿರಾಡಲಾರಂಭಿಸುತ್ತಿದ್ದರು.

ಭ್ರಮಿತರಾದ ಅವರ ಹೆದರಿಕೆ ಕಂಡು ನಾನು ನಗುತ್ತಿದ್ದೆ.

ಆ ವೇಳೆಗೆ ಡ್ರೈವರ್ ಮತ್ತು ಕಂಡಕ್ಟರ್ ಇಬ್ಬರೂ ಹೆಣಗಾಡಿ ಬಸ್ ಸರಿಮಾಡಿ, 'ಈ ಫರ್ಲಾಂಗಮ್ಮನ ಕಾಟ' ಎಂದು ಬೈಯುತ್ತಾ, ಮುಂದಕ್ಕೆ ಹೊರಡಿಸುತ್ತಿದ್ದರು.

ಈ ಅನಾಹುತಗಳು ನಡೆದಂತೆಲ್ಲಾ 'ಅನಿಷ್ಟ ಸೂಚಕ'ವೆಂದು ಜನರು ನನ್ನನ್ನು ಹಳಿಯುತ್ತಿದ್ದರು. ನನ್ನ ದೃಷ್ಟಿ ಬಿದ್ದ ಯಾವ ವಾಹನವಾದರೂ ಅಬಾಧಿತವಾಗಿ ಮುಂದುವರೆಯಲಾರದೆಂಬ ಸುದ್ದಿ ಅಕ್ಕ ಪಕ್ಕದ ಊರುಗಳಲ್ಲೂ ಪ್ರಸಾರವಾಯಿತು. ನನ್ನ ಕ್ರೂರ ದೃಷ್ಟಿಯಿಂದ ಪಾರಾಗಲು ಜನ ಹರಕೆ ಹೊತ್ತು ಮರೆಹೊಗ ತೊಡಗಿದರು.

ಅದೊಂದು ಮಳೆಗಾಲದ ದಿನ....ನನಗಿನ್ನೂ ಚೆನ್ನಾಗಿ ನೆನಪಿದೆ....ಮಳೆ ಅಂದರೆ ಹಾಗೆ ಎಂದೂ ಸುರಿದಿದ್ದಿಲ್ಲವೆಂದೇ ಹೇಳಬಹುದು. ರಸ್ತೆಯಲ್ಲಂತೂ ಮೊಣಕಾಲುದ್ದ ನೀರು ಹರಿಯುತ್ತಲಿದ್ದಿತು.

ಗುಡುಗು ಮಿಂಚು, ಸಿಡಿಲುಗಳನ್ನು ದಿಗ್ಭ್ರಾಂತಳಾಗಿ ನೋಡುತ್ತಿದ್ದ ನನಗೂ ಭಯವೇ ಆಗಿದ್ದಿತು. ನಿಸರ್ಗ ರಮಣಿಯ ಆ ರುದ್ರ ಸೌಂದರ್ಯವನ್ನು ಎವೆ ಹಾಕದೆ ನೋಡುತ್ತ ನಾನು ಕುಳಿತಿದ್ದೆ.

ನರಪ್ರಾಣಿಯೂ ಸುಳಿಯಲು ಹೆದರುತ್ತಿದ್ದ ಆ ಹೊತ್ತಿನಲ್ಲಿ, ಒಂದು ಗಾಡಿ ನನ್ನತ್ತಲೇ ನಿಧಾನವಾಗಿ ಬರುತ್ತಿರುವಂತೆ ಭಾಸವಾಯಿತು.

ಹೌದು........ನನ್ನೂಹೆಯಂತೆ ಆ ಗಾಡಿ ತುಸು ದೂರದಲ್ಲಿ ನಿಂತಿತು. ಒಳಗಿನಿಂದ ಹೆಣ್ಣಿನ ಆರ್ತಾಲಾಪ ಕೇಳಿಬರುತ್ತಿದ್ದಿತು.

ಸಂಕಟ ತಾಳಲಾರದೆ ರೋದನ........ಗಂಡನ ಅವಿವೇಕವನ್ನು ಜರಿದು ಹೆಣ್ಣು ಹೀಯಾಳಿಸುತ್ತಿದ್ದಳು.

'ದ್ವೇಷ ಸಾಧಿಸುವುದಕ್ಕೂ ಹೊತ್ತು ಗೊತ್ತು ಒಂದೂ ಬೇಡವೇಂದ್ರೇ?........ ಏನಾದರೂ ಹೆಚ್ಚು ಕಮ್ಮಿಯಾದರೆ ಯಾರು ಗತಿ?....ಅಯ್ಯೋ....ಅಮ್ಮಾ....ನೋವು ....ಸಂಕಟ ತಡೆಯಲಾರೆ....'

ಗಾಡಿ ನಿಂತಿತು, ಕೆಳಗಿಳಿದ ಆ ಹೆಣ್ಣು ಪೂರ್ಣ ಗರ್ಭಿಣಿಯೆಂಬುದನ್ನು ನಾನರಿತೆ. ವಿವೇಚನೆ ಇಲ್ಲದ ಆ ಗಂಡನನ್ನು ನಿಂದಿಸಿದೆ. ಈ ಸಮಯದಲ್ಲಿ ನನ್ನಿಂದ

ಯಾವ ಬಗೆಯ ಸಹಾಯವೂ ಆಗದಲ್ಲ, ನಾನಿದ್ದೂ ಏನು ಪ್ರಯೋಜನ ? ಎಂದು ಕೈ ಕೈ ಹೊಸಕಿಕೊಂಡು ವ್ಯಥೆಪಟ್ಟೆ............

ಕಾರ್ಮೋಡಗಳು ನಿಧಾನವಾಗಿ ಚದುರುತ್ತಿದ್ದವು. ಆ ಹೆಂಗಸಿನ ಜೀವನದಲ್ಲೂ ನವೋದಯವಾಗಿದ್ದಿತು. ತಾಯಿ ತನ್ನ ಮಗುವಿನೊಡನೆ ಹೊರಟು ನಿಂತಿದ್ದಳು.

ಕಂದನ ಸುಹಾಸವದನವನ್ನು ಕಂಡೊಡನೆಯೇ, ಆ ಹಿಂದೆ ತಾನನುಭವಿಸಿದ್ದ ಸಮಸ್ತ ಸಂಕಷ್ಟಗಳನ್ನೂ ಆ ತಾಯಿ ಮರೆತಿದ್ದಳು. ಬೆಚ್ಚನೆಯ ಬಟ್ಟೆಯಲ್ಲಿ ಮಗುವನ್ನು ಭದ್ರಪಡಿಸಿ ಹೊರಟು ನಿಂತಾಗ ಆ ತಾಯಿ ನುಡಿದ ಮಾತುಗಳಿನ್ನೂ ನನ್ನ ಕಿವಿಯಲ್ಲಿ ಝೇಂಕರಿಸುತ್ತಿವೆ.

'ಈ ಕಲ್ಲು....ಉಹು....ಇದು ಕಲ್ಲಲ್ಲ. ಯಾವುದೋ ಸತ್ಯವಂತ ದೇವತೆ ಇರಬೇಕೂಂದ್ರೆ....ಉದ್ಭವ ಮೂರ್ತಿ ಇರಬಹುದು ನೋಡಿ....ನಾನೆಷ್ಟು ಹೆದರಿದ್ದೆ ಅಂತ. ಕಷ್ಟವೆಲ್ಲ ಮಂಜಿನಂತೆ ಕ್ಷಣಾರ್ಧದಲ್ಲಿ ಹೇಗೆ ಪರಿಹಾರವಾಯಿತು ? ಈ ದೇವಿಯ ದಯೆಯಿಂದ ಸದ್ಯ ಸುಖವಾಗಿ ಹೈ ಕಳೆದು ಮಗು ಉಳಿಯಿತು.'

ಎಂದು ಕೃತಜ್ಞತೆಯಿಂದ ಮಗುವಿನೊಡನೆ ನನ್ನ ನಮಸ್ಕರಿಸಿದಳು.

ಅವಳ ಭಕ್ತಿ ಪರವಶತೆಯನ್ನು ಕಂಡು ಅವಳ ಗಂಡ ಸಿಡಿದೆದ್ದ.

'ದೇವರಂತೆ ದೇವರು......ಇದೊಂದು ಫರ್ಲಾಂಗಕಲ್ಲು !'

'ಅಯ್ಯೋ....ಬಿಡ್ತು ಅನ್ನಿ....ಈ ದೇವರ ಹೆಸರೇ ಫರ್ಲಾಂಗಮ್ಮ ಅಂತ ಇಲ್ಲಿ ಬಂದು ಸೇರಿದ್ದು ನಮ್ಮ ಪುಣ್ಯ.'

ಎಂದು, ಆ ತಾಯಿ ಗಂಡನ ಬಾಯಿ ಮುಚ್ಚಿಸಿದಳು. ಆ ತಾಯಿ ಬಾಯಿ ಹರಕೆಯ ಪರಿಣಾಮವಾಗಿಯೇ ಇರಬೇಕು. ನನಗೆ ದೆವ್ವತ್ವದ ಪಟ್ಟ ಹೋಗಿ ದೈವತ್ವದ ಪಟ್ಟ ಬಂದುದು.

ನಾನಿದ್ದ ಜಾಗ ಬಹು ರಮ್ಯವಾಗಿತ್ತು. ಸುತ್ತಲಿನ ಮರ ಗಿಡಗಳು, ಬೆಟ್ಟ ಗುಡ್ಡಗಳು ಫಲ ಪುಷ್ಪ ಭರಿತವಾಗಿದ್ದ ತೋಪುಗಳಿಂದ ಆ ಸ್ಥಳ ರಮಣೀಯವಾಗಿ ಕಂಗೊಳಿಸುತ್ತಿದ್ದಿತು. ಆ ಭಾಗಕ್ಕೆ ಅತ್ಯಂತ ಹಳಬಳೆನಿಸಿದ್ದ ನನಗೂ ಸಹ ಅಲ್ಲಿಯ ಸೌಂದರ್ಯ ಆಗಾಗ ಹುಚ್ಚು ಹಿಡಿಸುತ್ತಿದ್ದಿತು.

ಅದೊಂದು ಮಧ್ಯಾಹ್ನ....ಕಾವೀ ವಸ್ತ್ರಧಾರಿಯೊಬ್ಬ ನನಗೆ ಸ್ವಲ್ಪ ದೂರದಲ್ಲಿದ್ದ ಅರಳೀ ಕಟ್ಟೆಯ ಮೇಲೆ ಕುಳಿತ. ಕುತೂಹಲದಿಂದ ನಾನು ಅವನನ್ನೇ ಗಮನಿಸತೊಡಗಿದೆ. ಸಂಜೆ ಕಳೆದರೂ ಅವನ ಜಪ ಮುಗಿದಂತೆ ಕಾಣಲಿಲ್ಲ. ಅಶ್ವತ್ಥ ಕಟ್ಟೆಯ ಮೇಲೆ ಬೀಡು ಬಿಟ್ಟು ಸದಾ ಧ್ಯಾನಾಸಕ್ತನಾಗಿ ಕುಳಿತ ಅವನಿಗೆ ಭಂಗ ತರುವ ಪ್ರಯತ್ನವನ್ನು ನಾನೂ ಮಾಡಲಿಲ್ಲ.

ಅವನ ಮಹಿಮೆಯನ್ನು ಅರಿಯಬೇಕೆಂಬ ನನ್ನ ಕುತೂಹಲವನ್ನು ಕಷ್ಟಪಟ್ಟು

ಡೆಯಲೆತ್ನಿಸುತ್ತಿದ್ದ ನಾನು, ಮನದಲ್ಲೇ. ಎಷ್ಟು ಸಮೀಪ, ಆದರೂ ಎಷ್ಟು ದೂರ ಎಂದಾಲೋಚಿಸಿ ಸುಮ್ಮನಾಗುತ್ತಿದ್ದೆ.

ದಾರಿಹೋಕರು ನೀಡುತ್ತಿದ್ದ ಅಲ್ಪಾಹಾರದಲ್ಲೇ ಅವನ ಜೀವನ ಪಥ ಸಾಗುತ್ತಿದ್ದಿತು. ಫರ್ಲಾಂಗಮ್ಮನ ಕೀರ್ತಿ ಕೇಳಿಯೇ ಆತ ಅಲ್ಲಿಗೆ ಬಂದಿರಬೇಕು ನನಗನ್ನಿಸಿತು.

ದಿನದಿನಕ್ಕೂ ಭಕ್ತಾದಿಗಳ ತಂಡ ಮಿತಿಮೀರುತ್ತಿದ್ದಿತು. ನನ್ನನ್ನು ಪೂಜಿಸಿದ ನಂತರ ಯೋಗಿಎಂದು ಭ್ರಮಿಸಿ ಜನ ಅವನಿಗೆ ಕಾಣಿಕೆ ಒಪ್ಪಿಸುತ್ತಿದ್ದರು. ಫರ್ಲಾಂಗಮ್ಮನ ಪೂಜಾರಿಯಾಗಿ, ಹಣ್ಣು, ಕಾಯಿ, ಹಣ, ಒಡವೆ, ವಸ್ತ್ರ ಗಳಿಸಬೇಕೆಂಬ ಪಿತೂರಿ ಹೂಡಿದ ಆ ಯೋಗಿ, ಸ್ವಾರ್ಥ ಸಾಧಿಸಿಕೊಳ್ಳಲು ನನ್ನನ್ನೇ ಬಲಿ ತೆಗೆದುಕೊಂಡ.

ಆ ಜಾಗದಲ್ಲೇ ಒಂದು ಗುಡಿ ಕಟ್ಟಿಸಬೇಕೆಂದು ನಿಧಿ ಸಂಗ್ರಹಿಸಿದ. ಒಡವೆ ವಸ್ತ್ರಾಭರಣಗಳಿಂದ ನನ್ನನ್ನು ಸಿಂಗರಿಸಿದ. ಬಂದಿಯಂತೆ ದೇಗುಲದಲ್ಲಿರಿಸಿ, ದೇವತೆಯೆಂದು ಆರಾಧಿಸಿದ....ಹುಚ್ಚು ಜನರು ಅವನ ಮಾತಿಗೆ ಮರುಳಾದರು.

ಭಕ್ತಾದಿಗಳ ಅಹವಾಲನ್ನು ಕೇಳಿ ಕೇಳಿ ನಾನು ಕಿವುಡಳಾದೆ. ಅವರ ಕಷ ಕಂಡು ಕಣ್ಣೀರುಗರೆಯುತ್ತಿದ್ದೆ. ಬಡವರು, ಸಾಲ ಮಾಡಿಯಾದರೂ, ಪೂಜೆ ಕಾಣಿಕೆಗಳನ್ನು ಒಪ್ಪಿಸಿ ನನ್ನ ಕಟಾಕ್ಷ ಪಡೆಯಲೆತ್ನಿಸುತ್ತಿದ್ದರು. ಇವರ ಕಷ್ಟ ಕಾರ್ಪಣ್ಯಕ್ಕೆ ಪರಿಹಾರ ನೀಡುವ ಚೈತನ್ಯ ನನಗೆಲ್ಲಿಂದ ಬರಬೇಕು ? ಎಂದು ನಾನು ಹಲಬುತ್ತಿದ್ದೆ

ಅತ್ಯಾಶ್ಚರ್ಯಕರವಾದ ಸಂಗತಿಯೆಂದರೆ....ಕಾವಿ ಬಟ್ಟೆಯ ಸನ್ಯಾಸಿ ಇಂದ ಸಂಸಾರಿಯಾಗಿದ್ದಾನೆ. ಕೈತುಂಬಾ ಹಣ ಮಾಡಿಕೊಂಡು, ಸುಖ ಸಂತೋಷದಲ್ಲಿ ನಲಿಯುತ್ತಿದ್ದಾನೆ. ಈ ಒಂದು ವ್ಯಕ್ತಿಗಾದರೂ ನನ್ನಿಂದ ಸಹಾಯವಾಯಿತಲ್ಲ ಎಂಬುದೇ ನನ್ನ ಪಾಲಿಗೆ ಉಳಿದಿರುವ ಏಕೈಕ ಸಮಾಧಾನ.

ಇದೆಲ್ಲ ವಿಧಿಯ ವೈಚಿತ್ರ್ಯ,ವೆನ್ನಬೇಕೇನೊ ತಿಳಿಯದಾಗಿದೆ. ಅಂತೂ ಕಲ್ಲಾಗಿ ಊರಾಚೆ ಬಿದ್ದಿದ್ದ ನಾನಿಂದು ದೈವತ್ವದ ಪಟ್ಟಕ್ಕೇರಿದ್ದೇನೆ ! ವರ್ಷಕ್ಕೊಮ್ಮೆ ಜನ ನೆರೆದು ಭಾರಿ ಜಾತ್ರೆ ಮಾಡುತ್ತಾರೆ. ಫರ್ಲಾಂಗಮ್ಮನ ಜಾತ್ರೆ ಅಂತ ಪಂಚಾಂಗದಲ್ಲೂ ನೀವು ನೋಡಿರಬಹುದು.

ಹ....ಹ್ಹ....ಹ್ಹ....ಈ ಜನರ ಮಂಕುತನವನ್ನು ಯಾರೆದುರು ಹೇಳಲೀಂತ ಇದುವರೆಗೂ ಕಾದಿದ್ದೆ. ಈಗ ಹೇಳಿದ್ದೀನಿ....ನಾಳೆ ಜಾತ್ರೆ....ನೀವೆಲ್ಲರೂ ದಯವಿಟ್ಟು ಬರಬೇಡಿ....ಬರುವುದಿಲ್ಲ ತಾನೇ ?....

— ಉಷಾದೇವಿ

# ಆಶೆಯ ಶಿಶು

ಹೆಸರು ತಾರಣ: ದೃಢದೇಹ. ಹುರಿಗಟ್ಟಿದ ಕೈಕಾಲುಗಳೇ ಅವನ ಅಂದವನ್ನು ಹೆಚ್ಚಿಸಿದೆಯೆನ್ನಬೇಕು. ಆ ಮೀಸೆಯಾಗಲೇ ಬೆಳೆದು ಬಾಗಿ ಮಿಂಚುತ್ತಿದೆ. ಇಷ್ಟಪಟ್ಟರೆ ಕಠಾರಿಯ ಚೂಪೂ ಬಂದೀತು. ಆದರೆ ಅದು ಅವನಿಗೆ ತಿಳಿಯದು. ಇನ್ನು ಅದನ್ನು ಕನ್ನಡಿಯಲ್ಲಿ ನೋಡಿಕೊಂಡು ತೀಡುವ ವಿಚಾರವೆಲ್ಲಿ ? ಎಣ್ಣೆ ಹಚ್ಚಿ ಬಾಚಿ, ತನ್ನ ಗೆಳತಿ–ಹೆಂಡತಿ-ಪಾರ್ಥಿವೆಗೆ ಮೊಗವೆತ್ತಿ ಮುಗುಳೆರೆಯುವ ಗೆಲುವೆಲ್ಲಿ ಬಂದೀತು !

ಆದರೂ ಪಾರ್ಥಿವೆಯೆಂದರೇ ಅವನ ಪ್ರಾಣ !–ಪಂಚಪ್ರಾಣ ! ಅವಳ ಕಂಗಳಲ್ಲಿ ದುಂಬಿಗಳು ಎರಡು ಸೆರೆ ಸಿಕ್ಕಿರುವುವೆಂದು–ಭ್ರಮೆಯುಂತೂ ಸಹಜವಾಗಿ ಅವನ ತುಟಿಯಲ್ಲಿ ಮುಗಳನ್ನರಳಿಸುತ್ತಿತ್ತೋ ಏನೆಂದು ಹೇಳಲಾರೆ ! ಹೇಗೋ ಆ ನಯನಗಳು ಕಾತರವನ್ನು ಬೆಳಗುತ್ತಿದ್ದುವು. ಹತ್ತಿರಹತ್ತಿರವಾಗಿ ಸೂಕ್ಷ್ಮವಾಗಿ ಪರೀಕ್ಷಿಸಿ ಮುಚ್ಚಿಕೊಂಡುವೆಂದರೆ ಆನಂದಾಶ್ರು ಬಿಂದುವಾಗಿ ಹೊರಳಿ ಮುತ್ತಿನಂತೆ ಮಿರುಗುವುದು.

ತಾರುಣ್ಯದ ಮುಗುಳು ವ್ಯರ್ಥವೆನ್ನುವಂತೆ, ಹೃದಯದ ಕರೆ ಹುಸಿಯೆನ್ನುವಂತೆ, ಜೀವ ಮಾತ್ರ ಬಯಸಿದುದನ್ನು ನುಡಿಯಲಾರದಂತೆ ಅವರ ಸಂಬಂಧವಾಗಿದ್ದಿತೆನ್ನಬೇಕು !

ಅವರಿಬ್ಬರ ಬಾಳ್ವೆಯಲ್ಲಿ ಮತ್ತೊಂದು ರೂಪು ಮೂಡದೇ ಇದ್ದುದನ್ನು ಆ ಊರಿನವರೆಲ್ಲಾ ತಿಳಿದಿದ್ದರು. ಆದರೆ ಅವರಿಗೆ ತಾತ್ಸಾರವಿರಲಿಲ್ಲ. 'ಅಯ್ಯೋ ಮಂಕರೇ' ಎನ್ನಲು ನಗೆಗೀಡು ಮಾಡಲು, ಸಾಧ್ಯವೇ ಇಲ್ಲವೆನ್ನುವಂತೆ ಪ್ರತಿಯೊಬ್ಬ ತಿಳಿದ ವ್ಯಕ್ತಿಯ ರೀತಿಯಾಗಿದ್ದಿತೆನ್ನಬೇಕು ! ತಾರಣನೆಂದರೆ ಎಲ್ಲರಿಗೂ, ಯ್ಯಾರಿಗೂ ಅಂತಹ ಆಸೆ. ಅವನ ನಡಿಗೆಯೇ ಅವರನ್ನು ಬದಲಿಸಿಬಿಡುತ್ತಿತ್ತೋ ಹೇಗೋ !

ತಾರಣನ ತಂದೆ ತೀರಿಕೊಂಡು ಹತ್ತುವರ್ಷಗಳುರುಳಿವೆ. ಪಾರ್ಥಿವೆಯುಂತೂ ಹುಟ್ಟಿದಾಗಲೇ ತಂದೆ ತಾಯಿ: ಕಳೆದುಕೊಂಡವಳು. ಸಾಕಿದಾತ ತಾರಣನಿಂದ ಗವಸ-ದಕ್ಷಿಣೆ-ಪಡೆದು ಕಳುಹಿಸಿಬಿಟ್ಟಿದ್ದ. ಇಬ್ಬರ ಬಾಳು ಸಂಗಮವಾಗಿದ್ದಿತು. ಇಬ್ಬರೂ ಹತ್ತಿರ ಹತ್ತಿರ ಸೇರಿದಾಗ, ಅವರ ನಯನಗಳಲ್ಲಿ ಒಬ್ಬರ ಮೂರ್ತಿ ಒಬ್ಬರಲ್ಲಿ ಮೂಡಿದಾಗ, ಆಸೆಯೊಂದು ಮೂಕವಾಗಿ ಕೊರೆಯುತ್ತಿತ್ತು. ಆದರೆ ಅದನ್ನು ಗುರುತಿಸಿ ಹೆಸರಿಡಲು ಬಹಳ ಕಾಲವೇ ಅವರಿಗೆ ಬೇಕಾಯಿತು. ಏಕೆಂದರೆ ಅವರ ಸ್ವಭಾವವೇ ಕಾರಣವೆನ್ನಬೇಕಷ್ಟೆ ?

ಹೇಗೂ ತಾರಣ ತನ್ನ ಹೊಲದ ಹಸುರಿನ ಮೇಲೆ ನಿಂತಾಗಲಂತೂ ಪಾರ್ಥಿವೆ ಬಂದಳೆಂದರೆ ತೀರಿತು. ಅವನ ಜೀವ ದೇಹವನ್ನು ನಡೆಸುವುದು. ಅವನ ನಯನಗಳು ಮಿಂಚಿ, ಅವಳ ನಯನಗಳಲ್ಲಿನ ಬೆಳಕನ್ನು ಹುಡುಕುವುದು. ತೋಳುಗಳು ಅವಳ ಸುಕುಮಾರ ದೇಹವನ್ನು ಮೃದುವಾಗಿ ಬಳಸಿ ಹಿಡಿದು ಬಿಡುವುವು.

ಒಂದುಬಾರಿ ಗಗನದಲ್ಲಿ ಮುಗಿಲು ಕವಿದಿತ್ತು; ಬಿರುಗಾಳಿ ಬೆನ್ನೇರಿದ್ದಿತು. ಮಿಂಚು 'ಫಳಾರ್' ಎಂದು ಹರಿಯುತ್ತಿತ್ತು. ಆಗಲೇ ಆ ಜೋಳದ ಹೊಲದ ಬದುವಿನಲ್ಲಿ ತಾರಣ—ಪಾರ್ಥಿವೆ ಮೈಮರೆತಿದ್ದರು.

ಬಳ್ಳಿಮಿಂಚು ಹೊರಳಿತು. ಎತ್ತರವಾಗಿ ಬೆಳೆದಿದ್ದ ಜೋಳದ ಗರಿಗಳು ಮೈತೀಡಿ ಬಂದಗಾಳಿಗೆ ಅಲುಗ ತೊಡಗಿದ್ದವು. ಒಮ್ಮೆ ನುಗ್ಗಿ ಬಂದ ಗಾಳಿಯಂತೂ ಇಡೀ ಹೊಲವನ್ನೇ ಬಾಗಿಸಿ ತೂಗಿಸಿಬಿಟ್ಟಿತು. ಮತ್ತೆ ಮಿಂಚು ಮುಗಿಲ ಮೈಯನ್ನೆಲ್ಲಾ ಬೆಳಗಿ ಮರೆಯಾಯಿತೋ ಇಲ್ಲವೋ, ಸಿಡಿಲು ಸಿಡಿಯಿತು—ಅಲ್ಲ; ಅವರಿಗೆ ಗಟ್ಟಿಯಾಗಿ ಹೇಳಿತು ! ಏನೆಂದು ತಾರಣನೂ ಒಮ್ಮೆಗೇ ಹೇಳಲಾರದಾಗಿದ್ದ. ಪಾರ್ಥಿವೆಯನ್ನು ದಿಟ್ಟಿಸಿ ನೋಡಿದ. ಹೂವು ಹನಿಗಳು ಪುತಪುತನೆ ಉದುರಿದವು. ಇಬ್ಬರ ಮೈ ನಿಮಿರೆದ್ದಿತು.

'ನಿನ್ನಂಥವಳು........ಬೇರೆಯಿಲ್ಲ....ಪಾರ್ಥಿ !'

'ಅಲ್ಲ....ನಿನ್ನಂಥವರು ಇಲ್ಲವೇ ಇಲ್ಲ......!....'

'......ನಮಗೆ ನಿನ್ನ ರೂಪಿನ ಬೇರೊಬ್ಬರು ಬೇಡವೇ ?'

'................'

'........ಬೇಕೇ ಬೇಕು !....'

ಪಾರ್ಥಿವೆ ಉತ್ತರಿಸಲಿಲ್ಲ. ತನ್ನ ಕೈಯನ್ನು ಮೆಲ್ಲನೆ ಅವನ ವಿಶಾಲವಾದ ಎದೆಯ ಮೇಲೆ ಸವರಿದಳು....

'....ದೇವರು ಆ ಭಾಗ್ಯ ಕೊಡಲಿಲ್ಲ....'

ತಾರಣನಿಗೆ ಈ ವರೆಗೂ ತಿಳಿಯದ ವಿಚಾರವಿದು. ತನ್ನಂತೆಯೇ ಪಾರ್ಥಿವೆಯದೂ ರೀತಿಯೆಂದು ಅವನಿಗನ್ನಿಸಿರಲಿಲ್ಲ. ಆದ್ದರಿಂದಲೇ ಅವನು ಕೊಂಚ ದಿಟ್ಟಿಸಿ ನೋಡಬೇಕಾಯಿತು. ಅವನ ಹೃದಯದಲ್ಲಿ ಚಿಮ್ಮಿದ ಬುಗ್ಗೆಯೊಂದರ ಕುರುಹಾಗಿ ಗೆಳತಿಯನ್ನು ತನ್ನ ಎದೆಗೆ ಅಬಚಿಕೊಂಡು ಗಗನವನ್ನು ನೋಡಿದ—

ಕಾರ್ಮುಗಿಲು ತಾವೇ ತಾವು ಹರಿಯುತ್ತಿದ್ದುವು. ಆದರೆ ಮಳೆಯು ಮಾತ್ರ ಸುರಿಯತೊಡಗಿರಲಿಲ್ಲ. ದಿಟ್ಟಿಯನ್ನು ಧರೆಗಿಳುಹಿಸಿದ. ಹಸುರಾದ ಜೋಳದ ಸೊಬಗು ಅವನ ಮನಸ್ಸಿಗೆ ಚೇತನವನ್ನು ತುಂಬಿತೆನ್ನಬೇಕು.

ಃ....ನಾಳೆ ಸೋಮವಾರ ಶಿವನನ್ನು ಪ್ರಾರ್ಥಿಸೋಣ....'

'......ನಾನು ಅದನ್ನೂ ಮಾಡಿಯಾಯ್ತಿತು.... !' ತಾರಣನಿಗೆ ಅಚ್ಚರಿಯಾಯಿತು. ಆದರೆ ಅವನ ಮನ ಮುಗುಚಿಬಿಟ್ಟಿತು.

'.... ಈಗ ಇಬ್ಬರೂ ಮಾಡೋಣಂತೆ....'

'.................'

ಉತ್ತರ ಬರಲಿಲ್ಲವಾಗಿ ಕೈಗಳಿಂದ ಅವಳ ಮೊಗವನ್ನು ಹಿಡಿದು ನೋಡಿದ. ಇದ್ದಕ್ಕಿದ್ದಂತೆಯೇ ಕಂಬನಿ ಧಾರೆಯಾಗಿ ಹೊರಳಿತು. ಅವನ ಎದೆಯು ಕೊರಗಿತು; ನಯನವೂ ತುಂಬಿತು. ಒಡೆದ ಕಂಠದಿಂದ—

'....ಮತ್ತೇನು....?....?

ಅವಳೇ ಕಂಬನಿಯನ್ನು ತೊಡೆದುಕೊಂಡಳು. ಮೆಲ್ಲಗೆ ಅವನ ನಯನವನ್ನೂ ಸವರಿದಳು

' ಇಬ್ಬರೂ ಮಾಡೋಣಂತೆ....ಆದರೆ....'

' ಹಾಗಾದರೆ ಬೇಡ ಬಿಡು......'

' ಇಲ್ಲ....ಮಾಡೋಣಂತೆ....'

' ಹೋಗಲಿ....ಇನ್ನೊಂದು....ನಮ್ಮ ವಂಶದ ಕಾವಲಿಗೆ ಇರೋ ದೆವ್ವನ.... ಕೇಳೋಣ....?....'

ಪಾರ್ಥಿವೆಯ ನಯನ ಒಮ್ಮೆಗೆ ಹೊಸ ವಿಚಾರದಿಂದ ಮಿಂಚಿತು. ಭಯದ ದನಿಯೊಂದು ಹೃದಯದ ಒಳಗೇ ಎದ್ದಿರಬಹುದು. ಆದರೂ ಚಿಂತೆಯ ಕಲೆ ಹರಿದಂತೆ ಮೊಗ ಬೆಳಗಿತು. ತಾರಣ ಅದನ್ನರಿತೇ ಹೇಳಿದ—

' ನಮ್ಮ ವಂಶದ ಕಾವಲಿಗೆ....ಆ ದೆವ್ವವಿದೆ......ಈ ವಾರ ಹಬ್ಬ ಮಾಡಿ ಕೇಳಿಕೊಳ್ಳೋಣಂತೆ....ತನಗೆ ಕಷ್ಟವಾದಾಗೆಲ್ಲಾ ಅಪ್ಪ ಮಾಡ್ತಿದ್ದರಂತೆ....ಮಳೆಯೇ ಬೀಳದೆ ಹೊಲ ಸೀಯುವಾಗ ಒಂದು ಸಲ ನೀರು ಸುರಿದು ಉಳಿಸಿತ್ತಂತೆ....ಈಗ ನಾವು ಕೇಳೋಣಂತೆ....'

'ಹೂ......ಆಗಲಿ......'

ತಾರಣನಿಗೆ ಸಂತೋಷವಾಯಿತು. ಅವನ ತೋಳುಗಳು ಸ್ವಲ್ಪ ಬಿಗಿಯಾದುವು. ಪಾರ್ಥಿವೆಯ ಗಮನಕ್ಕೆ ಮಳೆ ಬಂದಿತು. ಒಮ್ಮೆಗೆ ಗಗನದ ಮಿಂಚು ಕಣ್ಣು ಮುಚ್ಚಿಸಿತು.

' ಮನೆಗೆ ಹೋಗೋಣಂತೆ....'

ತಾರಣ ಮರು ನುಡಿಯಲಿಲ್ಲ. ಎದ್ದು ನಿಂತು ತನಗಾಗಿಯೇ ಕಾದು ನಿಂತಿದ್ದ ಎತ್ತುಗಳ ಕಡೆ ಹೆಜ್ಜೆ ಇರಿಸಿದ. ಅವನ ಹಿಂದೆಯೇ ಪಾರ್ಥಿವೆ....!

೨

ಹೊಲದ ಕಾವಲಿಗಾಗಿ ಬದುವಿನಲ್ಲಿದ್ದ ಆ ದೆವ್ವದ ಕಲ್ಲಿಗೆ ಹಬ್ಬ ಮಾಡಿದು ದಾಯಿತು. ಅಳಗಬಳಗದ ಹೋತ ಒಂದರ ಬಲಿಯಾಯಿತು. ಅಮಾವಾಸ್ಯೆಯ ಇರುಳಿನಲ್ಲಿ ಆ ದೆವ್ವನು ಪ್ರೀತವಾಯಿತು.

ಮರುದಿನ ನಸುಕಿನಲ್ಲಿ ತಾರಣನ ಬಾಗಿಲಿನಲ್ಲಿ ಕೂಸೊಂದರ ಕ್ರಂದನ ಕರೆಯಿತು. ಕೂಸಿನ ಚಿಂತೆಯಲ್ಲೇ ಕಣ್ಮುಚ್ಚಿ ಮಲಗಿದ್ದ ಪಾರ್ಥಿವೆ ಜಗ್ಗನೆದ್ದು ಓಡಿ ಬಂದಳು. ಅಳುವ ಕಂದನನ್ನು ಎತ್ತಿಕೊಂಡ ಆ ತಾಯಿಯ ಎದೆ ತುಂಬಿ ಭಾರವಾಯಿತು ಇನ್ನು ಅವಳ ಆನಂದಕ್ಕೆ ಬೇರೆಯ ಸಾಕ್ಷಿಯೇಕೆ !

ಹೇಳಿ ಹೆಣೆಸಿದ ತೊಟ್ಟಿಲು ಸಿದ್ಧವಾಯಿತು. ಕೇಳಿದವರಿಗೆ ತನ್ನದೆಂದೇ ಹೇಳಿದಳು. ಕತ್ತಲ ಕೊಠಡಿಯಲ್ಲೇ ಹಾಸಿಗೆಯಲ್ಲಿ ಕುಳಿತುಬಿಟ್ಟಳು. ಮನೆಯ ದಾಸಿ ಲಂಚವನ್ನು ಸಂತೋಷದಿಂದ ಪಡೆದು ಊರಿನ ಹೆಂಗೆಳೆಯರಿಗೆಲ್ಲಾ ಹೇಳಿ ಬಂದಳು—'ಅಂದು ರಾತ್ರಿಯೇ ತನ್ನ ಯಜಮಾನಿ ಗಂಡು ಹಡೆದಳು' ಎಂದು.

ಒಬ್ಬೊಬ್ಬರಾಗಿ ಬಂದು ಹಣತೆಯ ಕಿರುಬೆಳಕಿನಲ್ಲಿ ಕೂಸು ತಾಯಿಯ ಎದೆ ಹಾಲನ್ನು ಹೀರುವುದನ್ನು ಕಂಡು ಅನುಮಾನಪಡದೆ ಸಕ್ಕರೆ ತಿಂದು ಹೊರಟರು. ತಾರಣನ ಎದೆ ಮನೆಯಂತೆಯೇ ತುಂಬಿತು. ಅವನು ಮೂಕನಾಗಿಬಿಟ್ಟಿದ್ದ !

ಹತ್ತು ದಿನಗಳ ಹೊಲೆತನ ಕಳೆಯಿತು. ತಾರಣ ಸಂಪ್ರದಾಯವನ್ನು ತಿಳಿದವರಲ್ಲಿ ವಿಚಾರಿಸಿದ. ಶಾಸ್ತ್ರವಿಧಿಗಳು ಸಾಂಗವಾಗಿ ನೆರವೇರಿದುವು. ಜೋಯಿಸರು ಮಗುವಿಗೆ 'ವ್ಯಯ' ನೆಂದು ನಾಮಕರಣ ಮಾಡಬೇಕೆಂದರು. ಪಾರ್ಥಿವೆಯೂ ಒಪ್ಪಿದಳು. ಶಾಸ್ತ್ರಘೋಷವಾಗಿ ಹೋಯಿತು.

ಅಂದಿನವರೆಗೆ ಶೇಖರಿಸಿದ್ದ ಧನದಲ್ಲಿ ಎಷ್ಟು ವೆಚ್ಚವಾಯಿತೆಂದು ತಾರಣನೇ ಅರಿಯ. ಎಣಿಸಿ ನೋಡುವ ಇಚ್ಛೆಯೂ ಅವನನ್ನು ಕಾಡಲಿಲ್ಲವೆನ್ನಬೇಕು.

ಕೂಸಿನ ಮೈ ತುಂಬಿದ್ದಿತು : ಅಗಲವಾದ ಕಣ್ಣುಗಳು ; ದೊಡ್ಡ ಬಾಯಿ, ಮೂಗು ; ದಟ್ಟವಾದ ಹುಬ್ಬು ; ತಲೆಯ ತುಂಬ ಕೂದಲು ; ಉದ್ದವಾದ ಕೈಕಾಲುಗಳು ; ನೋಡಿದವರಿಗೆ ಅಚ್ಚರಿಯಾಗುತ್ತಿತ್ತು. ಎದೆಯ ಹಾಲು ಸಾಲದೆಂದು ಅವನ ಅಳುವೇ ಸೂಚಿಸಿತು. ಹುಯ್ಯುವ ಹಾಲು ಕ್ರಮಹಾಗಿ ಹೆಚ್ಚಾಗಬೇಕಾಯಿತು. ಅಂತೂ ತಿಂಗಳು ಕಳೆಯಿತು. ವರ್ಷವೂ ಆಯಿತೆನ್ನಲು ವ್ಯಯನಿಗೆ ತೊಟ್ಟಿಲು ಬೇರೆಯೇ ಬೇಕಾಯಿತು.

ಅವನ ಕಾಲಿನ ಒದೆತವಂತೂ ತಾಯಿಗೆ ನೋವು ಮಾಡುತ್ತಿತ್ತು. ಆದರೆ ಪಾರ್ಥಿವೆಗೆ ಅದು ಪ್ರೀತಿಯ ಪೆಟ್ಟು ! ಮತ್ತೊಂದು ವರ್ಷ ಕಳೆಯುವ ಮುಂಚೆಗೇ

ವ್ಯಯ ಹೆಜ್ಜೆ ಹಾಕುವಂತಾದ. ತಾಯಿಗೆ ಒಂದು ಕಷ್ಟವೇನೋ ತಪ್ಪಿತೆನ್ನ ಬಹುದು !

ಮೂರು ವರ್ಷ ತುಂಬಿದ ಮಗನ ಊಟವನ್ನು ನೋಡಿ ಪಾರ್ಥಿವೆಗೆ ಆಶ್ಚರ್ಯ ವಾಗದಿರಲಿಲ್ಲ. ಅವಳಿಗೇಕೆ ಭಯವಾಗಲಿಲ್ಲವೋ ಹೇಳಬರದು. ಐದು ವರ್ಷದ ಬಾಲಕ ತಂದೆಯಷ್ಟೇ ಊಟಮಾಡತೊಡಗಿದ. ಆದರೆ ತಂದೆಯೂ ಮಗನ ಹೊಟ್ಟೆ ಯನ್ನು ಅಳೆದರೂ ಅಳೆಯದಂತೆ ಇದ್ದುಬಿಟ್ಟ. ಅವನಿಗೆ ಏನು ಹೇಳಲೂ ತೋಚ ದಂತಾಗಿರಬೇಕು ; ಇಲ್ಲವೇ ಮಗನು ಪುಷ್ಟನಾಗಿ ತನ್ನಂತೆಯೇ ಬಲಶಾಲಿಯಾದಾ ನೆಂದು ಆ ತಂದೆಯ ಧೋರಣೆಯಿರಬೇಕು !

ವ್ಯಯನಿಗೆ ಜೊತೆಗಾರರು ಸಿಕ್ಕತೊಡಗಿದ್ದರು. ಆದರೆ ಅವನ ಪೆಟ್ಟು ಸಹಿಸು ವುದು ಮಾತ್ರ ಅವರಿಗೆ ಕಷ್ಟತರವಾಗಿತ್ತು. ಒಬ್ಬೊಬ್ಬರಾಗಿ ದೂರು ಹೊತ್ತರು. ಪಾರ್ಥಿವೆಗೆ ಹೇಳಿಕೊಂಡರೂ ಪ್ರಯೋಜನವಾಗಲಿಲ್ಲ. ತಾವೇ ಹಿಂಜರಿಯತೊಡ ಗಿದರು. ಕಡೆಗೆ ತಾರಣ ಹೊಲದ ಕಡೆ ಹೊರಟಾಗ ಮಗನನ್ನೂ ಕರೆದೊಯ್ಯ ತೊಡಗಿದ. ಒಂದು ಕ್ಷಣವಾದರೂ ಅವನನ್ನು ಬಿಡದೆ ನೋಡಿಕೊಳ್ಳತೊಡಗಿದ.

ವ್ಯಯ ಕುಮಾರನಾದ. ಆದರೆ ತಂದೆಯ ಕೆಲಸದಲ್ಲಿ ನೆರವಾಗಿದ್ದನು. ಉಳುವುದು, ಅಗೆಯುವುದು, ಸೌದೆ ಸಿದ್ಧಮಾಡುವುದು....ಯಾವ ಕೆಲಸದಲ್ಲೂ ಅವನು ತಂದೆಯಂತೆಯೇ ! ಅಂತೂ ಅವನ ಬೆಳವಣಿಗೆ ಯಾರಿಗೂ ಆಶ್ಚರ್ಯಕರ ವಾಗಿದ್ದಿತು. ಅವನ ಕೆಲಸವನ್ನು ಕಂಡವರೆಲ್ಲಾ ಮೂಗಿನಮೇಲೆ ಬೆರಳಿರಿಸಿ ಬೆರ ಗಾಗುವರೇ. ಈ ಕಾರಣದಿಂದಲೇ ತಂದೆತಾಯಿಗೆ ಎಲ್ಲಿಲ್ಲದ ಸಂತೋಷ !

ಆದರೆ ಕಾಲವು ಹೀಗೆ ಕಳೆಯಲಿಲ್ಲ. ವ್ಯಯನ ಎತ್ತರಕ್ಕೆ ಮನೆಯ ಬಾಗಿಲೂ ಕಿರಿದಾಯಿತು. ಅವನ ಬೆಳೆಯಂತೂ ಕಣಜತುಂಬಿ ಅಂಗಳದಲ್ಲಿ ರಾಶಿಯಾದರೂ ಸಾಕುಸಾಲದಂತಾಗುತ್ತಿತ್ತು, ತಿನ್ನುವುದಕ್ಕೆ. ಅದೇ ಚಿಂತೆ ತಾರಣನನ್ನ ಕೊರೆಯಿ ತೇನೋ ! ಹೆಚ್ಚು ಜಮೀನು ಕೊಳ್ಳಲು ಯತ್ನಿಸಿದ. ಇದ್ದಬದ್ದ ಹಣವೆಲ್ಲಾ ಖರ್ಚಾಯಿತು.

ಒಂದು ದಿನ ಹೊಲದಿಂದ ಬಂದಾಗ ಮನೆಯ ಬಾಗಿಲುವಾಡ ವ್ಯಯನ ತಲೆಗೆ ತಗುಲಿ ಅವನ ಕಣ್ಣುಗಳು ಕೆರಳಿದುವು. ಕೂಡಲೇ ಬಾಗಿಲು ಮುರಿದು ಹಾಕಿದ. ಹಾರೆಯಿಂದ ಬಾಗಿಲುವಾಡವನ್ನೇ ಮೀಟಿಬಿಟ್ಟ.

ಹೊರಗೆ ಹೋಗಿದ್ದ ತಂದೆ ಬಂದು ನೋಡಿ ಬೆದರಿದ. ಹೀಗೆ ಮಾಡಬಾರದಿ ತ್ತೆಂದು ಮಗನನ್ನು ನುಡಿಸಿದ. ‘ ಬೇರೆಯ ಮನೆಯನ್ನೇ ಕಟ್ಟಿದರಾಯಿತು ’ ಎಂದು ಉತ್ತರ ಬಂದಿತು.

ಅಂತೆಯೇ ಹಗಲು ರಾತ್ರಿಯ ದುಡಿಮೆಯಾಗಿ ಹೊಸ ಮನೆ ಬೆಳೆಯತೊಡ ಗಿತು. ತಾರಣನಂತೂ ಮಗನ ರೀತಿಗೆ ಬೆದರಿಕೊಂಡೇ ಸಹಾಯಕನಾದ. ಮನೆ ಯಲ್ಲಿದ್ದ ಒಡವೆ ವಸ್ತುಗಳನ್ನೂ ಮಾರಿ ಮರಮುಟ್ಟುಗಳನ್ನು ಒದಗಿಸಿದ

ಹೊಸ ಮನೆಯ ಗೋಡೆಯನ್ನು ನೋಡಿಯೇ ಊರಿನ ಮಂದಿಗೆ ಬೆರಗಾಯಿತು. ಒಂದಿಬ್ಬರು 'ಅಬ್ಬಾ' ಎಂದುದೂ ಉಂಟು. ಅಲ್ಲಿಯೇ ಮಣ್ಣು ಕಲಸುತ್ತಿದ್ದ ವ್ಯಯನ ದಿಟ್ಟಿ ಅವರತ್ತ ಹೊರಳಿದುದನ್ನು ಕಂಡು ಒಳಗೊಳಗೇ ಉಡುಗಿ ಹೋಗಿದ್ದರು.

ದಾಸಿಯು ಪಾರ್ಥಿವೆಯ ಬಳಿ ಕುಳಿತು 'ಅಯ್ಯೋ ದೆವ್ವದ ಮನೆಯಾಗಿದೆಯೋ' ಎಂದುಬಿಟ್ಟಳು. ಆ ತಾಯಿ ಪಾರ್ಥಿವೆಯ ಮೈ 'ಜುಂ' ಎಂದು ಬೆದರಿಕ್ಕಿತು.

'ಛೀ ಕೆಟ್ಟ ಮಾತಾಡೀಯ....!'

'.... ........ ....!'

ದಾಸಿ ಉತ್ತರಿಸಲು ಸಿದ್ಧವಿದ್ದಳು. ಆದರೆ ವ್ಯಯ ಬಹಳ ದೂರದಿಂದಲೇ ಯಾವ ಕಾರಣಕ್ಕೋ ತನ್ನ ಕಡೆಗೇ ದಿಟ್ಟಿಸಿ ನೋಡಿದುದರಿಂದ ಬಾಯಿ ಹಿಡಿದಳು. ಏನೋ ಅವಳನ್ನು ಅದಮಿ ಬಿಟ್ಟಂತಾಗಿರಬೇಕು !

ಗೋಡೆಗಳು ಕೋಟೆಯೊಂದರ ನೆನಪು ತರುವಂತೆ ನಿಂದುವು. ದೊಡ್ಡ ದೊಡ್ಡ ತೊಲೆಗಳು ಸಿದ್ಧವಾದುವು. ವ್ಯಯನ ಹೇಳಿಕೆಯಂತೆ ಬಾಗಿಲನ್ನು ನಿರ್ಮಿಸಲು ಇಬ್ಬರು ಮೂವರು ಬಡಗಿಗಳು ಒಂದಾಗಿ ಕಲೆತರೂ ಕಷ್ಟವಾಯಿತು. ಅದನ್ನೆಲ್ಲಾ ನೋಡುತ್ತಿದ್ದ ವ್ಯಯನು ತನ್ನ ಮನೆಗೆ ಬಾಗಿಲೇ ಬೇಡವೆಂದುಬಿಟ್ಟನು.

'ಹೇ....ಎಲ್ಲಾದರೂ ಉಂಟೆ....ಮಗು....!'

'ಇಲ್ಲದೇನು ಮತ್ತೆ....'

'ಬಾಗಿಲಿಲ್ಲದೇ ಮನೆಯುಂಟೆ....?'

'ನಮಗೆ ಬೇಕಿಲ್ಲಪ್ಪ....!....'

ಅವನ ಗಡುಸಾದ ಉತ್ತರಕ್ಕೆ ತಾರಣ ತೆಪ್ಪಗಾದ. ಮತ್ತೆ ಮಾತೆತ್ತುವ ಧೈರ್ಯವೂ ಆಗಲಿಲ್ಲವೆನ್ನಬೇಕು.

ಪಾರ್ಥಿವೆಯ ಕಡೆ ಹೊರಳಿ ನೋಡಿದ. ಆದರೆ ಅವಳು ಯಾವಾಗಲೂ ಮಗನ ಪಕ್ಷಪಾತಿ. ಅವಳ ವಿರೋಧವಿರಲಿ ಗಂಡನಿಗಾಗಿ ಒಂದು ಮಾತೂ ಇಲ್ಲವಾಯಿತು.

ಬಾಗಿಲಿಲ್ಲದ ಮನೆ ಭಯಂಕರವಾಗಿ ಊರಿನ ಎಲ್ಲಾ ಮನೆಗಳಿಗೂ ಎತ್ತರವಾಗಿ ನಿಂತಿತು. ಊರಿನ ಜನರು ಏನಾದರೂ ಅನ್ನುವವರೇ. ಆದರೆ ವ್ಯಯನ ರೂಪು ನೆನಪಾಗಿ ಯಾರೊಬ್ಬರ ನುಡಿಯೂ ಗಂಟಲಿನಿಂದ ಒಳಕ್ಕೆ ಜಾರಿಕೊಂಡು ಬಿಡುತಿದ್ದಿತೆನ್ನಬೇಕು. ವ್ಯಯನೊಬ್ಬನೆಂದರೆ ಮಾತೇ ಕೆಲಸ !....ಯಾವುದರಲ್ಲೂ

ಇಪ್ಪತ್ತು ಮಂದಿಗೆ ಸವಾಲಂತೆ! ಅವನ ಹೆಜ್ಜೆಗಳ ಸಪ್ಪಳ ಕೇಳಿಸುವುದೇ ತಡ ವಾದೀತು!.... ಅವರು ಯಾವ ಮಾತನ್ನೂ ಸಿಲ್ಲಿಸಿಬಿಡುವರು.

ವ್ಯಯನ ಕಾಯವಿರಲಿ; ಮನೆಯಿರಲಿ; ಹೊಲದಲ್ಲಿ ಬೆಳೆಯೂ ಅದ್ಭುತ ವಾದುದೇ! ತನಗೆ ಸಹಾಯಕ್ಕೆಂದು ಅವನು ಯಾರನ್ನೂ ಕರೆಯುತ್ತಿರಲಿಲ್ಲ. ತಂದೆ ಯನ್ನು ಏನಾದರೊಂದು ಸಂಶಯ ನಿವಾರಣೆಗಾಗಿ ಮಾತ್ರ ನುಡಿಸುವನು. ತನಗೆ ಸಮಾಧಾನ ತೋರದಿದ್ದರೆ ಹೇಗೋ ಕೆಲಸವನ್ನು ಸಾಧಿಸುವನು. ಬೇರೆಯ ರೈತರಲ್ಲಿ ಅವನು ವಿಚಾರ ನಡೆಸಿದುದೇ ಇಲ್ಲ.

ಹಿಂದೆ ತಾರಣ ಬೆಳೆಯುತ್ತಿದ್ದುದಕ್ಕೆ ಹತ್ತುಮಡಿ ಕಾಳುಕಡ್ಡಿ ಮನೆಗೆ ಬಂದು ರಾಶಿಯಾಗುವುದು. ಆದರೆ ಅಷ್ಟೂ ಮೂವರ ಸಂಸಾರಕ್ಕೆ ಸಾಕಾದಷ್ಟು. ಮಗನ ವಿಚಾರವನ್ನು ತಂದೆತಾಯಿಗಳು ಬೇರೆ ಯಾರಲ್ಲಿಯಾಗಲೀ ಹೇಳಿಕೊಳ್ಳುವುದಕ್ಕೆ ನಾಚಿಕೆಯಲ್ಲದೇ ಭಯವೂ ತುಂಬಿದ್ದಿತೆನ್ನಬೇಕು. ಪಾರ್ಥಿವೆಯಂತೂ ಗಂಡ ನಿಂದಲೂ ಮರೆಮಾಚುವಳು. ಮಗನನ್ನು ಪ್ರತ್ಯೇಕವಾಗಿಯೇ ಕುಳ್ಳಿರಿಸಿ ಮುದ್ದೆ ಗಳನ್ನು ಬಡಿಸುವಳು. ಒಂದು ದಿನಕ್ಕೆ ಎಷ್ಟು ಮುದ್ದೆಗಳನ್ನು ಮಗನೊಬ್ಬನೇ ಮುಗಿಸುವನೆಂದು ಎಣಿಸುವುದಕ್ಕೂ ಅವಳೇನೋ ಹೆದರಿರಬೇಕು. ಆದರೆ ಮಗನು ಮಲಗಿ ನಿದ್ರೆಹೋದನೆಂದು ತಿಳಿದು, ಒಂದೊಂದು ದಿನ ದೀಪದ ಬೆಳಕಿನಲ್ಲಿ ಅವನ ತುಂಬಿದ ಮೈಯನ್ನು ನೋಡಿ ಮೆಲ್ಲನೆ ತನ್ನ ಹಾಸಿಗೆಯತ್ತ ಜರುಗುವಳು. ಅವನ ಶಕ್ತಿಯ ಕುರುಹಾಗಿ ಮಿರಿಮಿರಿ ಮಿಂಚುವ ಹರೆಯದ ಮಿಾಸೆಯನ್ನು ನೋಡಲು ಅವಳಿಗಂತೂ ಆನಂದವಾಗಿ ಸಮಾಧಾನದಿಂದ ನಿದ್ದೆ ಬರುತ್ತಿದ್ದಿತೆಂದರೂ ಸರಿಯೇ!

ಒಮ್ಮೆ ತಾರಣ ಏಕಾಂತದಲ್ಲಿ ಮಗನ ವಿಚಾರವೆತ್ತಿದುದುಂಟು. ಆದರೆ ಅದು ತನ್ನ ಕಿವಿಗೆ ಬೀಳಲೇ ಇಲ್ಲವೆನ್ನುವಂತೆ ಪಾರ್ಥಿವೆಯಾಡಿದಳು.

'ನೋಡದ್ಯಾ ಮಗ....ಹಿಂಗಾದನೇ....'

'ಹೆಂಗಾದನೂ....?!'

ಹೆಂಡತಿಯ ದುರುಗುಟ್ಟ ಮೊಗವನ್ನು ಕಂಡು ತಾರಣ ತಲೆತಗ್ಗಿಸಿಬಿಟ್ಟ ಮತ್ತೆ ನೋಟವೆತ್ತಿ ಹೇಳಿದ....

'ಊರಿನ ಜನ....'

ಅಂಗಳದಲ್ಲಿ ಏನೋ ಸದ್ದಾಯಿತು. ಅವನ ಬಾಯಿ ಕಚ್ಚಿತು. ಉಗುಳು ನುಂಗಬೇಕಾಯಿತು. ಪಾರ್ಥಿವೆ ನಿಶ್ಶಬ್ದವನ್ನು ಮುರಿದಳು—

'....ಏನಿಲ್ಲ ಬಿಡಿ....ಯಾರೇನಂತೆ.....ಅವನೆಲ್ಲಾ ಸರಿಯಾಗಿದ್ದಾನೆ....'

ಅಷ್ಟು ಹೇಳಿ ಅವಳು ಹೊರಳಿಕೊಂಡು ಮಲಗಿಬಿಟ್ಟಳು. ಅವಳ ಬೆನ್ನು ಕಂಡ ತಾರಣ ತೆಪ್ಪಗಾದ. ಆದರೆ ನಿದ್ರೆ ಹತ್ತಲು ಮಗನ ಗೊರಕೆಯ ರಾಗ ಕ್ರಮೇಣ ಇಳಿಯುತ್ತಲೇ ಹೋಗಬೇಕಾಯಿತು !

ಹೇಗೂ ವ್ಯಯನ ಹರಯದ ದಿನಗಳು ಹೊರಳತೊಡಗಿದ್ದವು. ಆ ಊರಿನ ಯುವಕರಲ್ಲಿ ಯಾರಿಗೂ ಅಸಾಧ್ಯವಾದಂಥ ಹೊರೆಗಳನ್ನು ತಾನೇ ಹೊತ್ತು ತಂದು, ಅಂಗಳಕ್ಕೆ ಒಗೆದು. ಜಗುಲಿಯಮೇಲೆ ಕುಳಿತು, ಪಡುವಲಲ್ಲಿ ನೇಸರು ಬಾಗಿನೋಡಿ ಮರೆಯಾಗುವುದನ್ನು ಕಂಡರೂ ಒಂದುದಿನ ಉರುಳಿತೆಂಧು ಅವನ ಮನಸ್ಸಿಗೆ ಬರುತ್ತಿದ್ದಿತೋ ಇಲ್ಲವೋ ಹೇಳಬರದು. ಅಂತೂ ಅವನ ಯೌವನವನ್ನು ಎಣಿಸುವುದೂ ಆ ಊರಿಗೆ ಅಸಾಧ್ಯ ಸಾಧ್ಯವಾಯಿತೆನ್ನಬೇಕು !

೩

ಹೇಗೂ ಕಾಲಚಕ್ರ ಮೌನದ ಮಳಲಿನಲ್ಲಿ ಉರುಳಿತ್ತು ! ಜೀವಿಗಳ ಎದೆ ನಡಗುವಂತೆ ಪ್ರಕೃತಿಯು ಇದ್ದಕ್ಕಿದ್ದಂತೆಯೇ ಮುನಿಯಿತು. ಗಗನದಲ್ಲಿ ಬರಿಯ ಬೆಳ್ಮುಗಿಲಿನ ಅಲೆಗಳೇ ಸಾಗತೊಡಗಿದ್ದುವು. ಜನ ಬೆದರಿಹೋದರು. ಮಳೆರಾಯನಿಗೆ ಹರಕೆ ಹೊತ್ತರು : ಮುಡುಪು ಮಾಡಿದರು. ಏನಾದರೂ ಆಗಸ ಕಣ್ಣು ಬಿಟ್ಟು ನೋಡಲಿಲ್ಲ. ನೆಲದ ಬಾಯಾರಿಕೆ ಹಿಂಗುವಂತಾಗಲೇ ಇಲ್ಲ.

ಊರೆಲ್ಲ ಬೊಬ್ಬಿರಿದರೂ ವ್ಯಯ ತನ್ನ ಕಾರ್ಯದಲ್ಲಿ ನಿರತನಾಗಿಬಿಟ್ಟ. ಅವನು ಮಳೆರಾಯನಿಗೆ ಹರಕೆಯನ್ನೂ ಹೊರಲಿಲ್ಲ: ದೂಷಿಸಲೂ ಇಲ್ಲ.

ಹೊಲಕ್ಕೆ ನೀರು ಸಾಲದಾಯಿತು. ಬಾವಿಯೊಂದನ್ನು ಅಗೆದುಬಿಟ್ಟು ನೀರು ಹಾಯಿಸಿದ. ಊರಿಗೇ ಮಾರ್ಗದರ್ಶಕನಾದ. ಅನೇಕರು ಯತ್ನಿಸಿದರು. ವ್ಯಯನಂತೆ ಆಳವಾದ ಬಾವಿಯನ್ನು ತೋಡುವುದೇ ಅಸಾಧ್ಯವೆಂದು ಅರಿತರು. ಕರುಬಿದವರೂ ಉಂಟು. ಆದರೆ ಅವನನ್ನು ಅಲುಗಿಸುವ ಯೋಗ್ಯತೆಯೂ ತಮಗಿಲ್ಲವೆಂದು ಕೊಂಡಿರಬಹುದು !

ಮೊದಲು ಒಬ್ಬರು ಮರೆ ಹೊಕ್ಕರು. ವ್ಯಯ ನಿರಾಡಂಬರನಾಗಿಯೇ ನೆರವು ನೀಡಿದ. ಆದರೆ, ಆ ಬಾವಿಯ ನೀರನ್ನು ಹಾಯಿಸಲು ಅವನೇ ನಿಲ್ಲಬೇಕಾಗಿತ್ತು. ವ್ಯಯನ ನೆರವು ದೊರಕಿದ್ದರೂ ತಾನು ಹಿಂದೆಯೆಂದುಕೊಂಡು ಆ ಯಜಮಾನ ಕೊರಗಿದ. ಆದರೆ ಊರಿನ ಜನಕ್ಕೆ ಕುಡಿಯಲು ಒಳ್ಳೆಯ ನೀರು ದೊರಕಿತೆಂದು ಅನೇಕರು ಅರಿತು ವ್ಯಯನನ್ನು ಹೋಗಳಿದರು,

ಪಾರ್ಥಿವೆಯೂ ಅದೇ ಬಾವಿಗೆ ನೀರಿಗೆ ಹೋಗಬೇಕಾಯಿತು. ಒಂದು ಬೆಳಗಿನಲ್ಲಿ ಮನೆಯ ದಾಸಿ ನೀರು ತರಲು ಹೋದಾಗ ಅವಳ ಪರಿಚಯದಾಕಿ ಒಬ್ಬಳು ನುಡಿಸಿದಳು—

'ಮಹಾರಾಯ ಎಂಥ ಕೆಲಸ ಮಾಡಿದ ನೋಡು.... ಸದ್ಯ ಸಾಯುವಾಗ ಒಂದು ಹನಿ ನೀರಾದರೂ ಇಲ್ಲವೆನ್ನುವಂತಿಲ್ಲ ಬಿಡು !....'

'ಅವನೇನು ಮನುಷ್ಯನೆಂದೀಯಾ....?....'

ಆಕೆ ಅಚ್ಚರಿಯಿಂದ ನೋಡಿದಳು—ಯಾವ ದೇವರ ದಯದಿಂದ ಈತ ಹುಟ್ಟಿದ ನೆಂದು ಕೇಳುವಂತೆ ! ಆದರೆ ದಾಸಿಯು ನಗೆ ಹೊಗೆಯಾಡಿತು. ಗೃಹಸ್ಥೆಯ ಮನ ಮಿಡುಕಿದಂತೆ ಗಲ್ಲಕ್ಕೆ ಕೈಹತ್ತಿತು. ದಾಸಿ ಕೊಂಚ ಬಾಗಿ ಮೆಲುದನಿಯಲ್ಲಿ—

'ಅವ ಪಾರ್ಥಿವೆ ಮಗನಲ್ಲ....!'

'ಅ........'

'ಹೌದು....ಅವ ದೆವ್ವ....'

'ನಿನ್ನ ಬುದ್ಧಿಯೆಲ್ಲೋ ಕೆಟ್ಟಿರಬೇಕೆ.... ಬಿಡು..... ನಿನ್ನ ಒಡತೀನೇ ಕೇಳೇನು!'

'ಅಯ್ಯೋ ಬೇಡ ತಾಯಿ....ನಾನು ತಪ್ಪು ಅಂದೆ.... ನಮ್ಮ ನಿಮ್ಮ....ಮಕ್ಕಳಿಗೆ ಸಾಧ್ಯವಿಲ್ಲದ ಕೆಲಸ ಮಾಡ್ತಾನೇಂತ ಅಂದುಬಿಟ್ಟೆ....'

ಕೂಡಲೇ ಅವಳ ನಗೆ ಕೊಳದಲ್ಲಿನ ದುಂಡಾಗಿ ಹೊರಳುವ ಅಲೆಗಳಂತೆ ಮೋಹಕವಾಯಿತು. ಅವಳ ಜೊತೆಗಾತಿಯ ಕಣ್ಣುಗಳಲ್ಲಿ ಸಮಾಧಾನದ ಬೆಳಕು ಮಿರುಗಿತು.

ಇಬ್ಬರೂ ನೀರು ಹೊತ್ತು ಕವಲು ದಾರಿಗಳಲ್ಲಿ ಬೇರೆಯಾದರು. ಒಬ್ಬಾಕೆಗೆ ನೀರಿನ ಸಮಾಧಾನ. ಆದರೆ ಅನ್ನದ ಚಿಂತೆ ! ಇನ್ನೊಬ್ಬಳಿಗೆ ಬಾವಿಯಲ್ಲಿ ಜಾರಿಬಿದ್ದು ಹೇಗೋ ಬದುಕಿದಂತೆ ಅನ್ನಿಸಿತ್ತು ! ಆದರೂ ವ್ಯಯನ ಭಯ—ಬೆನ್ನು ಹಿಂದೆಯೇ ಸರಸರ ಬರುತ್ತಿರುವಂತೆಯೇ !

ವ್ಯಯನ ಬೆಳೆ ಹುಸಿಯುವಂತಿರಲಿಲ್ಲ. ಹುಸಿಯುವ ಬದಲು ಹಿರಿದಾಯಿತು. ಜೋಳವನ್ನು ತಂದು ಮನೆಯಲ್ಲಿ ಸುರಿದು ಹಿಗ್ಗಿದ. ಅಮ್ಮನ ಮುಂದೆ ಜಂಬದಿಂದ ತೋಳು ತಟ್ಟಿಕೊಂಡ. ಆದರಿಂದ ಆ ತಂದೆತಾಯಿಗಳಿಗಂತೂ ಸಂತೋಷ ವಾಯಿತು.

ಕ್ಷಾಮ ತಲೆದೋರಿತು—ವಿಪರೀತಕ್ಕೂ ಏರಿತು. ಅನ್ನಕ್ಕಾಗಿ ಹಾಹಾಕಾರ ವೆದ್ದಿತು. ನೆಲ ಬಿರಿದು ಹೊಗೆ ಏಳುತ್ತಿದ್ದಿತಾದರೆ ಗಗನಾಂಗಣ ಕಾದು ಕಣಕಣ

ವೆನ್ನುತ್ತಿದ್ದಿತು. ಇನ್ನು ಬೆಳೆಯೆಲ್ಲಿ ಬಂದೀತು ! ಜೀವಿಗಳು ಪರಿತಪಿಸತೊಡಗಿದುವು.

ಆ ಊರಿನಲ್ಲೇ ವ್ಯಯನನ್ನುಳಿದರೆ ಯಾರಿಗೂ ಬೆಳೆಯಾಗಲಿಲ್ಲ. ಅನೇಕ ಕಣ್ಣುಗಳು ತಾರಣನ ಕಡೆ ತಿರುಗಿ ನಿಂತುವು. ಆದರೆ ವ್ಯಯನನ್ನು ಕೇಳಬೇಕು ! ಊರಿನ ಪಟೇಲನೇ ಮುಂದುವರಿದ. ಮನೆಯ ಅಂಗಳದಲ್ಲೇ ಎತ್ತರವಾಗಿ ನಿಂತಿದ್ದ ವ್ಯಯನನ್ನು ನೋಡಿ ಅವನ ಗಂಟಲು ಒಣಗಿತು. ಒಂದು ಘಳಿಗೆ ನಿಂತು ಸಾವರಿಸಿಕೊಂಡು ಹೇಳಿದ—

'ವ್ಯಯಣ್ಣ.... ನೋಡು.... ನಮ್ಮ ಭಾವಿಯಲ್ಲಿ ನೀರಿಲ್ಲ.... ಮನೆಯಲ್ಲಿ !'

'ಅದಕ್ಕೇನು ನಿಮಗೆ......! ?'

ದನಿ ಮೃದುವಾದುದೇ ಎನ್ನಬೇಕು ! ಮೊಗದಲ್ಲಿಯೂ ಯಾವುದೋ ಚಿಂತೆಯ ತೆರೆ ಹಾಯ್ದು ಸೌಮ್ಯತೆಯಿತ್ತು.

'ನಿಮ್ಮ ಭಾವಿಯ ನೀರು ಕೊಡು.... ಊರಿಗೆ....'

'ಆಗಲಂತೆ......'

ಯಜಮಾನನಿಗೆ ಸಂತೋಷವಾಯಿತು. ಆದ್ದರಿಂದಲೇ ಇನ್ನೊಂದು ಮಾತು ಕೇಳಬೇಕೆನ್ನಿಸಿರಬೇಕು.

'.... ನಮಗೆ.... ತಿನ್ನಲೂ ಇಲ್ಲವಣ್ಣ....'

'ಹೂ.... ಆಗಲಿ....'

ಕೂಡಲೆ ಅವನು ಮನೆಯ ಒಳಗೆ ಹೋಗಿ ನಾಲ್ಕೈದು ಮೂಟೆ ಕಾಳು ತಂದು ಅಂಗಳದಲ್ಲಿ ರಾಶಿ ಹಾಕಿದ. ಜನ ಈವರೆಗೂ ದೂರ ಕಾಯ್ದಿದ್ದವರು ಒಬ್ಬೊಬ್ಬರಾಗಿ ಜೋಳಕ್ಕೆ ಬಾಗಿದರು. ಗೌಡನ ಅಪ್ಪಣೆಯಂತೆ ಅಳತೆಯ ಕಾಳು ತೆಗೆದುಕೊಳ್ಳತೊಡಗಿದರು.

ಇನ್ನೂ ಅರ್ಧ ರಾಶಿ ಉಳಿದಿತ್ತು. ಹಸಿದು ಕಂಗಾಲಾಗಿದ್ದ ನಾಲ್ವರಲ್ಲಿ ಕಿತ್ತಾಟವಾಗತೊಡಗಿತು. ಗೌಡನ ಆಸೆ ತೀರಿತು. ವ್ಯಯನ ಕೋಪ ಕೆರಳಿತು. ಒಬ್ಬನಿಗೆ ಬಿದ್ದ ಒಂದೇ ಪೆಟ್ಟು ಅವನ ಪ್ರಾಣಹರಣ ಮಾಡಿತು. ಉಳಿದವರೆಲ್ಲಾ ಬೆದರಿ ಓಡಿದರು. ಯಜಮಾನನೂ ಹೆದರಿ ಹೊರಟು ಹೋದ.

ಮನೆಯ ದಾಸಿ ಒಳಗಿನಿಂದ ಬಂದಿದ್ದಳು. ಆಗಲೇ ವ್ಯಯ ಹೆಣವನ್ನು ಎತ್ತಿ ದೂರ ಒಗೆದು ಬಿಟ್ಟ. ಮರುದಿನ ದಾಸಿ ಮನೆಯ ಕಡೆ ಬರಲಿಲ್ಲ. ಪಾರ್ಥಿವೆಯೇ ಹೋಗಿ ವಿಚಾರಿಸಿದಳು. ಮೌನವಾಗಿ ಹಿಂದಿರುಗಿದಳು. ದಾಸಿ ಎಲ್ಲಿ ಹೋದಳೆಂದು

ಹೇಳುವವರು ಒಬ್ಬರಾದರೂ ಇಲ್ಲ. ಎಲ್ಲಿಗಾದರೂ ಹೋಗಲಿ; ಏನಾದಳೋ ಏನೋ ! ?

ಪ್ರಕೃತಿಯ ಕೋಪ ಶಮನವಾಗಲೇ ಇಲ್ಲ. ಉಳಿದ ಜನಗಳು ವ್ಯಯನ ಬಳಿಗೆ ಬರುವದಕ್ಕೂ ಹೆದರಿದರು. ಅವನ ನೋಟವೇ ಯಮನ ಸಾದೃಶ್ಯವನ್ನು ತರುತ್ತಿದ್ದಿರಬೇಕು ! ಅವನೇ ಮೃತ್ಯುವೆಂದು ಅನೇಕರಿಗೆ ಅನ್ನಿಸಿರಬೇಕು !

ಊರಿನ ಪ್ರಾಣಿಗಳು ಸಾಯುತ್ತಲೇ ಇದ್ದುವು. ಜನರಂತೂ ಅವುಗಳನ್ನೂ ತಿಂದು ಸಾಯತೊಡಗಿದ್ದರು. ವ್ಯಯನ ಬಾವಿಯ ನೀರೂ ಇಳಿದು ಹೋಗುತ್ತಿದ್ದುದರಿಂದ ಉಳಿದುದನ್ನು ಕಾಯುತ್ತಲೇ ಅವನು ಕುಳಿತು ಬಿಟ್ಟನು. ಯಾರಿಗೂ ಅವನನ್ನು ನುಡಿಸುವ ಧೈರ್ಯವಾಗಲಿಲ್ಲವೆನ್ನಬೇಕು. ಅವನ ನೋಟಕ್ಕೆ ಜೀವ ತತ್ತರಿಸುವಂತಾಗಿಬಿಡುತ್ತಿದ್ದಿರಬೇಕು !

ತಾರಣ ಪಾರ್ಥಿವೆಯರಿಗೆ ಊರಿನ ಗತಿ ನೋಡಿ ಮರುಕವಾಗುತ್ತಿತ್ತು. ಆದರೆ ತಮ್ಮ ಸಂಸಾರದ ಉಳಿವಿನ ಚಿಂತೆಯೂ ಮೂಡಿ ತಡೆಯಾಗುತ್ತಿತ್ತು. ಅಭಿಮಾನವೂ ಸೇರಿ ವ್ಯಯನ ನಡತೆಯೇ ಸರಿಯಾದುದೆಂದು ಕಂಡಿತ್ತು. ಅಷ್ಟರಲ್ಲೇ ಅವರ ಚಿಂತೆ ಹರಿಯುವಂತಿರಲಿಲ್ಲ. ಮನೆಯ ಕಾಳು ಕಡ್ಡಿ ಮುಗಿಯುತ್ತ ಬಂದಿತ್ತು. ಅಲ್ಲದೆ ಒಂದೆರಡು ಬಾರಿ ಬಿತ್ತಿದ ಬೆಳೆಯೂ ಪುಸಿಯಿತು. ವ್ಯಯ ಏನೊಂದೂ ನುಡಿಯಲಿಲ್ಲ. ಅವನ ಊಟವಂತೂ ಕಡಿಮೆಯಾಗಲೇ ಇಲ್ಲ.

ಒಂದು ದಿನ ತಾರಣನೇ ನುಡಿಸಿದ—

'......ಮಗು......ಬೆಳೆ ಹುಸಿಯಾಯ್ತು. ಏನು ಮಾಡೋಣ......'

'ನೀರು ಇಂಗತಾ ಬಂತು......ಏನ್ಮಾಡ್ಲಿ......?......'

'ಬೇರೆ ಬಾವೀಗಿಂತ ಇದನ್ನೇ ಸೋಸಬೇಕಪ್ಪ......'

'ಹೂ......ನಾಳೆ ಮಾಡ್ತೇನೆ......'

ಬಾವಿಯನ್ನು ಸೋಸುವ ಕೆಲಸವಾಯಿತು. ಆದರೆ ಜಲವೇ ಕುದುರಲಿಲ್ಲ. ತಾರಣ, ಬೆಳೆಯ ಆಸೆಯೂ ತೀರಿತೆಂದು ಮನೆಯನ್ನು ಸೇರಿದ.

ಬರಿದಾದ ಕಣಜದಲ್ಲಿ ಬಾಗಿ ನೋಡಿದ. ಆ ಕತ್ತಲಿನಿಂದ ಹಿಂಜರಿದು ಹೆಂಡತಿಯ ಕಡೆ ತಿರುಗಿದ. ಅವಳ ನೋಟ ತಗ್ಗಿತು. ಇವನ ಮೈ ಹೊರಳಿತು. ಮೌನವಾಗಿ ಒಂದೆಡೆ ಮಲಗಿಬಿಟ್ಟ. ಅವಳು ಅರ್ಥ ಮಾಡಿಕೊಂಡಳು. ತಾನೂ ಅಡುಗೆಮನೆಯತ್ತ ಜರುಗಿದಳು.

ಆ ನೀರವತೆಯಲ್ಲಿ ನಾಲ್ಕು ಗೋಡೆಯ ಮೌನವನ್ನು ಮುರಿಯಲು ಒಂದೆರಡು ಗುಬ್ಬಿಗಳೂ ಸೂರಿನಲ್ಲಿರಲಿಲ್ಲ. ಅವು ಎಂದೋ ಸತ್ತು ಕೆಟ್ಟು ಕಾಣದಂತಾಗಿದ್ದುವು. ಅನೇಕ ಊರುಗಳ ಗತಿಯೇ ಮಸಣದ ಕಡೆಗಾಗಿರಲು ಆ ಒಂದು ಮನೆಯ ನೆಳಲಿನದೇನು !

೪

ಒಂದು ದಿನ ಹೊಲದ ಕಡೆಗೆ ಹೋದ ಎತ್ತುಗಳು ಮನೆಗೆ ಬರಲಿಲ್ಲ. ಕತ್ತಲಾದರೂ ವ್ಯಯನು ಮನೆಗೆ ಬರಲಿಲ್ಲ. ಪಾರ್ಥಿವೆ ಅಂಗಳಕ್ಕೆ ಬಂದು ಬಂದು ನೋಡಿದಳು. ಕಡೆಗೆ ಹೇಗೋ ಹಾಸಿಗೆಯಲ್ಲಿ ಬಿದ್ದುಕೊಂಡಳು. ಮರುದಿನ ಮನೆಯ ಬಾಗಿಲಲ್ಲೇ ಮಲಗಿ ಬಿಟ್ಟಿದ್ದ ಮಗನನ್ನು ನೋಡಿ ಅವಳು ಬೆಚ್ಚಿದಳು.

ತಾರಣ ಚಿಂತಿಸುತ್ತಲೇ ಹೊಲದ ಕಡೆ ನೋಡಿದನು. ಅವನ ಕಂಗಳು ತುಂಬಿ ಬಂದುವು. ಅವನ ಎತ್ತುಗಳನ್ನು ಹದ್ದುಗಳು ಕಿತ್ತಾಡುತ್ತಿದ್ದುವು. ಇನ್ನು ಅಲ್ಲಿ ನಿಲ್ಲಲಾರದೆ ಮನೆಗೆ ಬಂದುಬಿಟ್ಟನು.

ಒಂದು ವಾರ ಹೇಗೊ ಕಳೆಯಿತೆನ್ನಬೇಕು. ಈ ವೇಳೆಗೆ ಊರಿನ ಅರ್ಧಮಂದಿ ಕ್ಷಾಮದ ಮಾರಿಗೆ ತುತ್ತಾಗಿದ್ದರು. ತಾರಣನಂತೂ ನಡೆಯಲಾರದವನಾಗಿದ್ದನು. ತನ್ನಂತೆಯೇ ವ್ಯಯನೂ ಉಪವಾಸವಿರಬೇಕಾಯಿತೇ ಎಂದು ಕೊರಗಿದ. ಮನೆಯ ಮೂಲೆಯಲ್ಲಿ ಪಾರ್ಥಿವೆಯಂತೆಯೇ ಬಿದ್ದುಕೊಂಡನು.

ಮನೆಯಲ್ಲಿ ಯಾರಿಗೂ ಊಟವಿಲ್ಲ. ವ್ಯಯನಲ್ಲಿ ಮಾತ್ರ ಒಂದು ರೀತಿಯ ಬದಲಾವಣೆ ಕಂಡಿತೆನ್ನಬೇಕು. ಅಂದರೆ ಅವನು ಯಾವಾಗಲೋ ಮನೆಯ ಬಳಿ ಬಂದು ಮಲಗುವನು. ಯಾವಾಗಲೋ ಹೊರಟು ಹೋಗುವನು. ಎಲ್ಲಿಗೋ ಏನೋ ಯಾರಿಗೂ ತಿಳಿಯುವಂತಿಲ್ಲ.

ಒಂದು ಹಗಲಿನಲ್ಲೇ ಪಾರ್ಥಿವೆಯ ಕಣ್ಣಿಗೆ ಯಮದೂತರು ಗೋಚರಿಸಿದರು. ಅವಳು ಬೆದರಿ ಮೆಲ್ಲಗೆ ತೆವಳಿಕೊಂಡು ಹೋಗಿ ತಾರಣನ ಪಾದಕ್ಕೆ ಮಸ್ತಕವಿಟ್ಟಳು. ಅವನನ್ನು ತಬ್ಬಿಕೊಳ್ಳಲು ಸಾಹಸ ಮಾಡಿ ಕಂಬನಿಗರೆದಳು. ವ್ಯಯನಂತೂ ಮನೆಯಲ್ಲೇ ಇರಲಿಲ್ಲ. ಹಾಗೆಯೇ ಅವಳ ದೇಹ ಕೊರಡಾಯಿತು. ತಾರಣ ಚೀರಿಕೊಂಡು ಬಿದ್ದನು.

ಆ ವೇಳೆಗೆ ವ್ಯಯನು ಮನೆಗೆ ಬಂದನು. ತಂದೆಯ ಸ್ಥಿತಿಯನ್ನು ಕಂಡನು. ಮೌನವಾಗಿ ತಾಯಿಯ ಹೆಣವನ್ನು ಎತ್ತಿಕೊಂಡು ಎತ್ತಲೋ ಹೊರಟು ಹೋದನು.

ಈಗಲೂ ತಾರಣನಿಗೆ ಆ ಮೂಲೆಯಲ್ಲೇ ಬಿದ್ದಿರಲಾಗಲಿಲ್ಲವೆನ್ನಬೇಕು. ತನ್ನ ಪಾರ್ಥಿವೆಯ ಸಮಾಧಿಯನ್ನು ಅರಸಿಕೊಂಡೇ ಮೆಲ್ಲಗೆ ತೆರಳತೊಡಗಿದನು.

ಹೇಗೋ ಹೊಲದಬಳಿ ಸೇರಿದಾಗ ಹೊತ್ತು ಮೀರಿತ್ತು. ಎದುರಿಗೇ ಯಾರೋ ಏನನ್ನೋ ತಿನ್ನುತ್ತಿದ್ದರು. ಏನೋ ಬರಬಾರದ ಯೋಚನೆ ಬಂದಿತು. ನಂಬಿಕೆಯಾಗಲಿಲ್ಲ. ಮತ್ತೆ ಮುಂದೆ ತೆವಳಿದನು—

ಇನ್ನೂ ಹತ್ತಿರಕ್ಕೆ ತೆವಳಿದನು. ಕಣ್ಣು ನಂಬಿಸಿತು—ಒಂದು ಮೂಳೆಗಳ ರಾಶಿಯ ಆಚೆಗೆ ವ್ಯಯ ಕುಳಿತಿದ್ದಾನೆ!....ಏನನ್ನೋ ತಿನ್ನುತ್ತಿದ್ದಾನೆ....!

ತಾರಣನಿಗೆ ಮಾತು ಹೊರಡಲಿಲ್ಲ. ಉಸಿರೂ ಸಿಕ್ಕಿಕೊಂಡಂತಾಯಿತ್ತು. ಎದ್ದು ನಿಂತಿದ್ದವನು ಕುಸಿದು ಬಿದ್ದನು....ಜೀವ ಮಾತ್ರ 'ಚುಕ ಚುಕ' ಎನ್ನುತ್ತಿದ್ದಿರಬೇಕು!

ಈಚೆಗೆ ವ್ಯಯನ ಆಳ್ತನದ ಅರಿವು ತಾರಣನಿಗೆ ಆಗಿರಲಿಲ್ಲವೆನ್ನಬೇಕು. ಅಲ್ಲದೆ ಮಗನು ನರಭಕ್ಷಕನಾದಾನೆಂದು ಕನಸಿನಲ್ಲಿಯೂ ಎಣಿಕೆಯಾಗಿರಲಿಲ್ಲ.

ಮತ್ತೆ ತಾರಣ ಕಣ್ದೆರೆಯುವ ಹೊತ್ತಿಗೆ ತನ್ನ ಮನೆಯಲ್ಲೇ ಬಿದ್ದಿದ್ದನು. ವ್ಯಯನೇ ಅವನನ್ನು ಬಾಗಿ ನೋಡುತ್ತಿದ್ದನು.

ತಾರಣ ಕಣ್ಣು ಬಿಟ್ಟುದನ್ನು ಕಂಡು ಅವನ ಮೊಗದಲ್ಲಿ ಯಾವ ಬದಲಾವಣೆಯೂ ತೋರಲಿಲ್ಲವೆನ್ನಬೇಕು. ಎಲ್ಲಿಂದಲೋ ತಂದಿದ್ದ ಒಂದು ಕರಟ ನೀರನ್ನು ಮಾತ್ರ ಅವನ ಬಾಯಿಗೆ ಸುರಿದನು. ಹಾಗೆಯೇ ದಿಟ್ಟಿಸಿ ನೋಡಿದನು. ಮರುಮಾತ ನಾಡದೆ ಮತ್ತೆ ಹೊರಟುಹೋದನು.

ಅಂದು ಊರಿಗೆ ಊರೇ ಬರಿದಾಗಿದ್ದಿತೆನ್ನಬೇಕು. ಈವರೆಗೂ ವ್ಯಯನ ನಾಲಗೆಯ ರುಚಿಗೆ ಎಷ್ಟೋ ದೇಹಗಳು ಸಿಕ್ಕಿದ್ದುವು. ಅದೇ ಕೊನೆಯಬಾರಿ ಯೆನ್ನುವಂತೆ ಊರನ್ನೆಲ್ಲಾ ಬಳಸತೊಡಗಿದ್ದನು. ಮನೆ ಮನೆಯನ್ನೂ ಅರಸಿದನು. ಎಲ್ಲಿಯೂ ಆಹಾರವಿಲ್ಲ. ಒಂದು ಪ್ರಾಣಿಯಾದರೂ ಇರಬೇಡವೇ! ಇವನ ನಡಿಗೆ ಯನ್ನು ಕಂಡು ರಣಹದ್ದುಗಳೂ ಚೀರಿಕೊಂಡು ದೂರ ದೂರ ಹಾರತೊಡಗಿದ್ದುವು.

ಒಂದು ಕ್ಷಣ ಮಾತ್ರ ಊರಿನ ಯಜಮಾನನ ಮನೆಯಮುಂದೆ ನಿಂತು ನೋಡಿದನು!

ಮರುಕ್ಷಣಕ್ಕೆ ತನ್ನ ಕೈಗೆ ಸಿಕ್ಕಿದುದನ್ನೆಲ್ಲಾ ಸೆಳೆಯತೊಡಗಿದನು. ನಾಲ್ಕೆಂಟು ಮನೆಗಳು ಬೋಡುಬೋಡಾಗಿ ನಿಂತುವು; ಅಷ್ಟೆ.

ವ್ಯಯನು ಇನ್ನು ನೇರವಾಗಿ ತನ್ನ ಮನೆಯತ್ತ ನಡೆದು ಅಂಗಳದಲ್ಲಿ ನಿಂತು ನೋಡಿದನು.......ಒಳಹೊಕ್ಕು ಬಾಗಿ ನೋಡುತ್ತಾ ನಿಂತನು — ತಾರಣನಿನ್ನೂ

ಜೀವದಿಂದ ಉಳಿದಿದ್ದಾನೆ !....ಮೂಳೆಯ ಹಂದರವಾಗಿ ಅಲ್ಲಿಯೇ ಬಿದ್ದಿದ್ದಾನೆ !.... ....ಒಂದೇ ಸಮನೆ ಬೆದರಿದಂತೆ ದುರುದುರು ನೋಡುತ್ತಿದ್ದಾನೆ....!....

ವ್ಯಯನ ನೋಟ ಹೊರಳಲಿಲ್ಲ. ಅವನ ಕೈ ತಾನಾಗಿಯೇ ಮುಂದುವರಿಯಿತು !....ಬೆರಳುಗಳು ಆಡಿದುವು !......ಆ ಕೆಂಗಣ್ಣುಗಳನ್ನು ಕಂಡ ತಾರಣ ಚೀರಿಕೊಂಡನು ; ಕೈಗಳು ನಡುಗುತ್ತಿದ್ದಂತೆಯೇ ಎತ್ತಿ ಮುಗಿದನು.

'....ಹ ಹ್ಹ....ಹ್ಹ....ಹಾssss........!....'

ವ್ಯಯನ ನಗೆಗೆ ಮನೆಯ ಗೋಡೆಯೆಲ್ಲಾ ನಡುಗಿದವು. ಮರುಚಣದಲ್ಲಿಯೇ ವ್ಯಯನ ಕೈ ತಾರಣನನ್ನು ಎತ್ತಿ ಹಿಡಿಯಿತು. ಆ ದೊಡ್ಡ ಕಣ್ಣುಗಳು ದಿಟ್ಟಿಸಿ ನೋಡಿದುವು.

ಆ ಹಿಡಿತಕ್ಕೆ ಮೂಳೆಗಳೂ ಮುರಿದುವು. ಆ ಪುಟ್ಟ ಜೀವ ಬೆದರಿ ಹಾರಿಹೋಯಿತು !

* * * * *

ವ್ಯಯನು ಮತ್ತೆ ತನ್ನ ಮನೆಯ ಅಂಗಳದಲ್ಲೇ ನಿಂತಿದ್ದಾನೆ—ಒಮ್ಮೆ ಗಗನವನ್ನು ನೋಡಿದನು. ಬಿಳಿ ಮುಗಿಲೊಂದು ನೀಲಿಯಲ್ಲಿ ಕರಗಿಹೋಯಿತು, ಅಷ್ಟೆ. ಮರುಗಳಿಗೆಯಲ್ಲಿ ತನ್ನ ಮನೆಯ ಸೂರು ಹಿಡಿದು ಜಗ್ಗಿದ. ಅದು ಸರಾಗವಾಗಿ ಕಿತ್ತು ಬಂದು 'ಧಢಧಢ' ಎಂದು ಮಾಡು ಉರುಳಿತು. ಎತ್ತರವಾಗಿ ನಿಂತ ಗೋಡೆಗಳನ್ನೂ ವ್ಯಯನಿಗೆ ನೋಡಿ ಸಹಿಸಲಾಗಲಿಲ್ಲವೆನ್ನಬೇಕು. ಒಮ್ಮೆ ಕೈ ನೀಡಿ ನೂಕಿಬಿಟ್ಟನು. ಗೋಡೆಯ ಮೇಲೆ ಗೋಡೆ ಬಿದ್ದು ಬಯಲಾಯಿತು.

ಅಲ್ಲಿಂದ ವ್ಯಯನನ್ನು ದಾಸಿಯೇ ಹಿಂಬಾಲಿಸಿದ್ದರೂ ಕಾಣಬಹುದಿತ್ತು. ಆದರೆ ಆ ಹಾಳು ಊರಿನಲ್ಲಿ ದೆವ್ವಗಳೂ ಉಳಿದಿರಲಿಲ್ಲ ! ವ್ಯಯನು ತನ್ನ ಹೊಲದ ಮೈದಾನದಲ್ಲಿ ಮೈಚಾಚಿ ಮಲಗಿ ಬಿಟ್ಟನು.

ಆಗಲೇ ಆ ಮೂಳೆಯ ರಾಶಿಯನ್ನೂ ಹಾರಿಸುವಂತೆ ಬಿರುಗಾಳಿ ಬೀಸಿತು. ಆದರೆ ವ್ಯಯನ ನಿದ್ರೆಗೆ ಅದೂ ಸಹಾಯಕವಾಗಿದ್ದಿತೆನ್ನಬೇಕು. ನೀಲ ನಭದಂಚಿನಿಂದೀಚೆಗೆ ಕಪ್ಪು ಮುಗಿಲುಗಳು ಬರತೊಡಗಿದ್ದುವು. ಆದರೆ ವ್ಯಯನ ನಯನಗಳಲ್ಲಿ ಮತ್ತಿನ ಕತ್ತಲು ಕವಿದಿದ್ದಿತೆನ್ನಬೇಕು.

ಆ ಹೊಲದ ಕಾವಲಿಗಿದ್ದ ದೆವ್ವ ಎದ್ದು ಮುಗಿಲೆತ್ತರಕ್ಕೆ ನಿಂತು ಮೌನವಾಗಿ ಒಂದುಕ್ಷಣ ನೋಡಿ ಹೊರಳಿ ಎತ್ತಲೋ ಹೊರಟುಬಿಟ್ಟಿತು.

—ಕ. ವೆಂ. ರಾಜಗೋಪಾಲ.

# ಡಾ. ಕುಥಬರ್ಟರ ಅಕಾಲ ಮರಣ

'ಮಾನಸ ಶಾಸ್ತ್ರದಲ್ಲಿ ಒಂದು ಅದ್ಭುತ ವಿಜಯ :
ಡಾ. ಕುಥಬರ್ಟರಿಗೆ ರಾಕ್‌ಫೆಲ್ಲರ್ ಬಹುಮಾನ'

ಎಂದು ಅಂದೆಲ್ಲಾ ಪತ್ರಿಕೆಗಳು ಬರೆದಿದ್ದವು. ಪುಸ್ತಕ ಪ್ರಕಾಶನದಿಂದಾಗಿ, ಡಾ. ಕುಥಬರ್ಟರನ್ನು ಅಭಿನಂದಿಸುವವರ ಸಂಖ್ಯೆ ಮಿತಿಮೀರಿತು. ನಿನ್ನೆ ತಂತಿಯ ಆಳು ಬಂದು ರಾಕ್‌ಫೆಲ್ಲರ್ ಬಹುಮಾನ ದೊರೆತುದನ್ನು ತಿಳಿಸಿಹೋದ ಮೇಲಂತೂ ಊರಿಗೆ ಊರೇ ಅವರ ಮನೆಯೆಡೆಗೆ ಸಾಗಿದ್ದಿತು. ಇಂದು ಊರ ನಗರಸಭೆಯ ಅಟ್ಟದ ಮೇಲೆ ಬಹು ದೊಡ್ಡ ಸಭೆಯನ್ನು ಕರೆಯಲಾಗಿತ್ತು. ಸಭೆಗೆಂದು ದೊಡ ದೊಡ್ಡ ಪ್ರಮುಖರು ಬಂದಿದ್ದರು, ಡಾ. ಗಿಬ್ಬನ್, ಡಾ. ಹ್ಯಾಮಲಂಡ್ ಮುಂತಾದ ಸುಪ್ರಸಿದ್ಧ ವಿಜ್ಞಾನಿಗಳೂ ಕುಥಬರ್ಟರನ್ನು ಕೈಕುಲುಕಿದ್ದರು. ಕುಥಬರ್ಟರನ್ನು ಮೆರವಣಿಗೆಯಿಂದ ಸಭೆಗೆ ಕರೆದೊಯ್ಯಲಾಗಿತ್ತು. ಸಮಾರೋಪ ಭಾಷಣ ಮಾಡುತ್ತಾ ಎದ್ದು ನಿಂತ ಕುಥಬರ್ಟರಿಗೆ ಎದುರಿನ ಉಲ್ಲಾಸದಿಂದ ಕುಳಿತ ಜನ ಜಂಗುಳಿಯನ್ನು ಕುರಿತು ಎರಡು ಮಾತನಾಡಲೂ ಬಾಯಿಯೇ ಬರಲಿಲ್ಲ. ಸುಮ್ಮನೆ ಸಭೆಯನ್ನೆಲ್ಲ ಹಿಂದೆ ಮುಂದೆ ನೋಡಿದರು. ಕುತ್ತಿಗೆಯ ಶಿರಗಳು ಬಿಗಿದುಬಂದವು. ಸುತ್ತಲಿನ ಸನ್ನಿವೇಶವನ್ನು ಅರಿಯದ ಚಿಕ್ಕಮಗುವು ಗಾಬರಿಯಿಂದ ಅಳುವಂತೆ ರೋದಿಸಿಬಿಟ್ಟಿದ್ದರು ಜನರಿಗೆಲ್ಲ ವಿಸ್ಮಯ; ಸಭೆಯು ಅಲ್ಲೇ ಕೊನೆಗಂಡಿತ್ತು. ಭರಭರನೆ ವೇದಿಕೆಯನ್ನಿಳಿದು ಕುಥಬರ್ಟರು ಮನೆಗೆ ಧಾವಿಸಿದ್ದರು. ಸಭೆಯಲ್ಲಿ ನಿರಾಶೆಗೊಂಡ ಅವರ ಗೆಳೆಯರೂ ವಿಜ್ಞಾನಿಗಳೂ ಅವರ ಮನೆಗೇ ಬಂದಿದ್ದರು. ಇದೇ ಹನ್ನೊಂದು ಬಡಿಯುವ ತನಕವೂ ಇದ್ದರು.

ಕುಥಬರ್ಟರು ಹಾಸಿಗೆಯಲ್ಲಿ ಹೊರಳಾಡುತ್ತಿದ್ದರು. ಮನಸ್ಸೆಲಾ ಹುಚ್ಚೆದ್ದು ಕೇಳುತ್ತಿತ್ತು. 'ಏಕೆ ಇಂದು ಮಾತನಾಡಲಿಲ್ಲ?' ಜಗತ್ತೆ ಇಂದು ಡಾ. ಕುಥಬರ್ಟರ ವಿಜಯ ಕಹಳೆಯನ್ನು ಊದಿ ಗೌರವಿಸುತ್ತಿತ್ತು. ಕುಥಬರ್ಟರನ್ನು ಹೆತ್ತ ದೇಶಕ್ಕೆ ಎಲ್ಲಿಲ್ಲದ ಹೆಮ್ಮೆ ಬಂದಿತ್ತು ಅಂದು. ಇಪ್ಪತ್ತು ವರ್ಷಗಳ ಮೊದಲು ರೆವರೆಂಡ್ ಜೋಸೆಫರಿಗೆ ಅವರ ಕವನ ಸಂಗ್ರಹಕ್ಕೆಂದು ರಾಕ್‌ಫೆಲ್ಲರ್ ಬಹುಮಾನ ದೊರೆತಿತ್ತು.

ಕುಥಬರ್ಟರಿಗೂ ಅನ್ನಿಸುತ್ತಿತ್ತು : ತನ್ನ ಕೃತಿ—ತಾನು ಇಪ್ಪತ್ತೈದು ವರ್ಷಗಳ ಹಗಲು-ರಾತ್ರಿಯೆನ್ನದೆ ಬೆವರು-ರಕ್ತಗಳನ್ನು ಸುರಿಸಿದುದರ ಫಲ—ನಿಜವಾಗಿಯೂ

ಮಾನಸಶಾಸ್ತ್ರದಲ್ಲೇ ಒಂದು ಮೈಲಿಕಲ್ಲು; ಆದರೆ ಅವರ ಹೃದಯ-ಅಂತಃಕರಣಗಳು ಅಸಮಾಧಾನದ, ಅಸಂತೋಷದ ವಿಷದ ಹೊಗೆಯನ್ನು ಪೂತ್ಕರಿಸುತ್ತಿದ್ದವು. ಏಳ್ಗೆಯ ಮೂಲವಾದ ಅಸಂತೋಷನಲ್ಲವದು; ಗೆಲ್ಲುತ್ತ ಗೆಲ್ಲುತ್ತ ನಡೆದ ಅಲೆಕ್ಝಾಂಡರನಿಗೆ ಅನಿಸಿದ ಅಸಂತೋಷವಲ್ಲವದು.

ಕುಥಬರ್ಟರ ಜೀವನದಲ್ಲೇ ಇಂದಿನದು ಅಪೂರ್ವ ಸುದಿನ—ಇದು ಅವರಿಗೆ ತಿಳಿದಿತ್ತು: 'ಆದರೂ ಏಕೆ ಅಸಮಾಧಾನ?' ಅವರು ಪುನಃ ಪುನಃ ಯೋಚಿಸುತ್ತಿದ್ದರು. ಮನಸ್ಸೆಲ್ಲಾ ಹಿಂದೆಹಿಂದೆ ಓಡಿಹೋಗಿ, ಕುಥಬರ್ಟರನ್ನು ಮುಟ್ಟಿ ಮುಟ್ಟಿ ಅನ್ನುತ್ತಿತ್ತು: 'ನಿನ್ನ ಹಿಗ್ಗಿನ ಹಿನ್ನೆಲೆಯಲ್ಲಿ ಏನಿದೆ ನೋಡು; ನಿನ್ನ ಗುಲಾಬಿಯ ಹೂ ಮುಳ್ಳಿನ ಕಂಟಿಯಲ್ಲಿ ತಲೆದೋರಿದೆ.' ಅದು ಅವರ ಗತಜೀವನ; ಅವರ 'ರಾಕ್‌ಫೆಲ್ಲರ್' ಗಳಿಸಿದ ಪುಸ್ತಕದ ಇತಿಹಾಸ; ಮಲಗಿದ ಕೋಣೆಯ ಕಿಟಕಿಯ ಬಾಗಿಲು ತೆರೆದಿತ್ತು, ಪ್ರಶಾಂತವಾದ ಬೆಳದಿಂಗಳು ಹಬ್ಬಿತ್ತು. ಕುಥಬರ್ಟರೊಮ್ಮೆ ಎದ್ದು ಹೊರಗೆ ನೋಡಿದರು; ಸುಯ್ಯನೆ ತಂಗಾಳಿ ಬೀಸುತ್ತಿತ್ತು. ಬೆಳುದಿಂಗಳು ಅಣಕಿಸುತ್ತಿದ್ದಂತೆ ಅವರಿಗೆ ಅನ್ನಿಸಿತು. ಗತಿಸಿದ ಅವರ ಮಡದಿಯರು—ನೋವಾ, ಎಮಿಲಿ—ಎಲ್ಲ ಬಂದು ಅವರ ಸುತ್ತು ಕುಳಿತಂತೆ ಅನ್ನಿಸಿತು. ಗೋಡೆಯ ಸನಿಯದಲ್ಲಿ 'ಪಿಸು-ಪಿಸು' ಯಾರದೋ ಮಾತು; ಮೈಯೆಲ್ಲಾ ಬೆವರಿತು. 'ಯಾರಲ್ಲಿ?' ಅಂದರು. ಮೌನ; ತೀರ ಹತ್ತಿರ ಬಂದಂತೆ ಅನಿಸಿತು. ಇನ್ನು ತಡೆಯಲಾಗಲಿಲ್ಲ. ಕುಥಬರ್ಟರು ಹಾಸಿಗೆ ಬಿಟ್ಟು ದೀಪ ಹಚ್ಚಿದರು. ಅದೇ ಆಗ ಹನ್ನೆರಡು ಘಂಟೆಯನ್ನು ಗಡಿಯಾರ ತೋರಿಸುತ್ತಿತ್ತು. ಅಲ್ಲೊಂದು ನಾಯಿ ಇಲ್ಲೊಂದು ನಾಯಿ ಬೊಗಳುತ್ತಿದ್ದವು. ಬೆಳದಿಂಗಳು ಹುಚ್ಚು ಹಿಡಿಸುವಂತಿತ್ತು. ಭಾವನೆಯ ಮೇಲೆ ಭಾವನೆ. ವಿಚಾರದ ಮೇಲೆ ವಿಚಾರ. ನಿದ್ದೆ ಎಂತು ಬರಬೇಕು? ಮುಟ್ಟಿ ನೋಡಿದರು. ತಲೆಯೆಲ್ಲಾ ಕಾದಿತ್ತು. ಹಿಂದೆ ಎಷ್ಟೋಸಲ ಹೀಗೆಯೇ ಅನ್ನಿಸಿದಾಗ ತಮ್ಮ ಪ್ರಯೋಗಶಾಲೆಗೆ ಹೋಗಿ ಅಲ್ಲಿ ಮಗ್ನರಾಗಿ ಇರುತ್ತಿದ್ದರು. ಇಂದೂ 'ಪ್ರಯೋಗಶಾಲೆಗೆ ಹೋಗಿ ಬಿಡೋಣ' ಎನ್ನಿಸಿತು. ಯಾಕೋ, ಒಳದನಿಯೊಂದು, 'ಬೇಡ ಇಲ್ಲೇ ಮಲಗಿಬಿಡು' ಎನ್ನುತ್ತಿತ್ತು; ಕಾಲುಗಳು ಮುಂದುವರಿದಿದ್ದವು; ಎದೆ ಡಬ್-ಡಬ್ ಹಾರುತ್ತಿತ್ತು. ಮನಸ್ಸು 'ಎಲ್ಲಿಗೆ? ಎಲ್ಲಿಗೆ?' ಎನ್ನುತ್ತಿತ್ತು.

ಅಟ್ಟದ ತುದಿಯಲ್ಲಿ ಪ್ರಯೋಗಶಾಲೆ. ದೀಪ ಹಚ್ಚಿದರು. ಎಲ್ಲೆಲ್ಲೂ ಮೌನ ನೆಲೆಸಿತ್ತು. ರಾತ್ರಿಯ ಗಭೀರ ವಾತಾವರಣದ ಶಾಂತತೆ ಒಂದು ಬಗೆಯ ಗೂಢತೆಯನ್ನು ತಂದಿತ್ತು. ಇದೇ ಅವರ ಪ್ರೀತಿಯ ಪ್ರಯೋಗಶಾಲೆ. ಅವರ ಆಯುಷ್ಯದ ಇಪ್ಪತ್ತೈದು ವರ್ಷಗಳ ಹನಿ ಹನಿ ರಕ್ತವನ್ನು ಇಲ್ಲಿಯೇ ಸುಟ್ಟಿದ್ದರು. ಅವರ 'ರಾಕ್‌ಫೆಲ್ಲರ್' ಪುಸ್ತಕದ ತೊಟ್ಟಿಲೇ ಈ ಪ್ರಯೋಗಶಾಲೆ. ಎದುರಿಗೇ ನಿಲ್ಲಿಸಲಾದ ಮನುಷ್ಯನ ತಲೆಬುರುಡೆಯೊಂದು ನೋಡಿದೊಡನೆಯೇ ರೌದ್ರವನ್ನು ಹುಟ್ಟಿಸು

ವಂತಿತ್ತು. ಮೇಜಿನ ಬಲಭಾಗದ ಎರಡೂ ಕಪಾಟುಗಳಲ್ಲಿ ಮಾನಸಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಇಡಲಾಗಿತ್ತು. ಮೇಜಿನ ಮೇಲೆ 'ರಾಕ್‌ಫೆಲ್ಲರ್' ಗಳಿಸಿದ ಪುಸ್ತಕ ಕಂಗೊಳಿಸುತ್ತಿತ್ತು. ಕಾಗದಗಳು ಅಸ್ತವ್ಯಸ್ತ ಬಿದ್ದಿದ್ದವು. ತುಸು ದೂರದಲ್ಲಿರುವದೇ ಅವರ ಪ್ರಯೋಗದ ಮೇಜು. ಪ್ರಯೋಗದ ಸಲಕರಣೆಗಳನ್ನು ಶಿಸ್ತಾಗಿ ಒಂದು ಕಪಾಟಿನಲ್ಲಿ ಇಡಲಾಗಿತ್ತು. ಗೋಡೆಯ ಮೇಲೆ ವಿರಾಜಿಸುತ್ತಿದ್ದ ಫ್ರಾಯಿಡ್, ವೇಟಸನ್, ಬಿಂಡೆಟ್ಟ ಮೊದಲಾದವರ ಭಾವಚಿತ್ರಗಳು ಆ ಕೋಣೆಗೊಂದು ಶೋಭೆಯನ್ನು ತಂದಿದ್ದವು. ಅವರ ಮೇಜಿನ ಎದುರು ಅವರ ಮಡದಿಯರ ಭಾವಚಿತ್ರಗಳು ತೂಗುತ್ತಿದ್ದುವು. ರೂಪವಂತೆ ನೋವಾ; ಎಮಿಲಿಗೆ ಅಷ್ಟು ರೂಪವಿಲ್ಲ; ಆದರೆ ಮುಖದಲ್ಲಿ ಒಂದು ವಿಶೇಷ ಕಳೆಯಿತ್ತು. ನೋವಾ ಕಾಡು ಕುಸುಮ; ಎಮಿಲಿ ಮಂದಾರ ಪುಷ್ಪ. ಆ ಭಾವಚಿತ್ರಗಳನ್ನು ನೋಡುತ್ತಿದ್ದಂತೆಯೇ ಕುಥಬರ್ಟರ ಮನಸ್ಸು ತೀರ ಹಿಂದೆ ಹಿಂದೆ ಓಡುತ್ತಿತ್ತು. ಮನಸ್ಸು ಗತಜೀವನದ ಪುಟಗಳನ್ನು ತಿರುವಿ ಮುಖದೆದುರು ಹಿಡಿಯುತ್ತಿತ್ತು. ಹೃದಯ ಮಾತ್ರ, 'ಬೇಡ, ಬೇಡ' ಎಂದು ಸಾರಿ ಹೇಳುತ್ತಿತ್ತು. ಈ ದ್ವಂದ್ವ ಇತ್ತೀಚೆಗೆ ಪುಸ್ತಕ ಪ್ರಕಾಶನಗೊಳಿಸಿದಂದಿನಿಂದ ನಡೆಯುತ್ತಲೇ ಇತ್ತು. ಕುಥಬರ್ಟರು ಮಾತ್ರ ಅದಕ್ಕೆ ಅವಕಾಶ ಕೊಡುತ್ತಿರಲಿಲ್ಲ, ಒಳಮನದಲ್ಲೇ ಈ ತಾಕಲಾಟ ನಡೆಯುತ್ತಿತ್ತು. ಈಗ ಮಾತ್ರ ಆ ಭಾವಚಿತ್ರಗಳನ್ನು ನೋಡುತ್ತಿದ್ದಂತೆಯೇ ಅವರ ಸಂಯಮ ತಪ್ಪಿಹೋಯಿತು. ಅವರಿಗೆ ತಮ್ಮ ಗತಿಸಿದ ದಿನಗಳ ಚಿತ್ರವೆಲ್ಲಾ ಕಣ್ಣಿಗೆ ಕಟ್ಟಿತು.

* * * *

ಅವರಿನ್ನೂ ತೊಟ್ಟಿಲ ಶಿಶುವಾಗಿದ್ದಾಗಲೇ ಅವರ ತಾಯಿಗೆ ಹುಚ್ಚು ಹಿಡಿದಿತ್ತು; ಗತಿಸಿದ ತಂದೆಯೂ ಹುಚ್ಚನೆನಿಸಿಕೊಂಡೇ ಗತಿಸಿದ್ದನಂತೆ. ಹೀಗಾಗಿ ಹುಟ್ಟಿನ ಹೊಸ್ತಿಲಲ್ಲೇ 'ಹುಚ್ಚು' ಅವರನ್ನು ಮುಂಕುಗೊಳಿಸಿತ್ತು. ಸತ್ಯಸೃಷ್ಟಿಯ ಹೊಸ್ತಿಲಲ್ಲಿ ನಿಂತು, ಅವರು ಹುಚ್ಚೆಂಬ ರಹಸ್ಯಮಯ, ಅಭೇದ್ಯ ಜಗತ್ತಿನೆಡೆಗೆ ಮಿಕಿ ಮಿಕಿ ನೋಡುತ್ತಿದ್ದರು. ಅವರು ಹುಚ್ಚಿನ ಹಿನ್ನೆಲೆಯನ್ನು ಅರಿಯಲು ತವಕಿಸುತ್ತಿದ್ದರು. ಆದರೆ ಅವರಿಗೆ ಹೇಳುವವರು ಇದ್ದಿಲ್ಲ. ಮನೆಯಲ್ಲಿ ಹುಚ್ಚು ತಾಯಿಯನ್ನು ಬಿಟ್ಟು ಇನ್ನೊಬ್ಬ ಅವರ 'ಕಕ್ಕಿ' ಇರದಿದ್ದರೆ, ಅವರು ಏನಾಗುತ್ತಿದ್ದರೋ! ತಾಯಿ ಹುಚ್ಚಿಯಾದ್ದರಿಂದ ಅವರು ತಾಯಿಯ ಸುಖವನ್ನೇನೂ ಅನುಭವಿಸಲಿಲ್ಲ. ಇದರಿಂದಾಗಿ ಅವರ ಹೃದಯದಲ್ಲಿ ಮಾರ್ದವ, ದಯೆ, ಕರುಣೆ, ಭಾವನೆ, ಮುಂತಾದ ಗುಣಗಳು ಅಲ್ಲೇ ಹಿಂಗಿಹೋದುವು. ಬದಲಾಗಿ, ದುಡುಕು—ಸ್ಥೈರ್ಯ ಸಂಯಮ—ಇವೆಲ್ಲ ಅವರಲ್ಲಿ ಮನೆಮಾಡಿಕೊಂಡವು. ಇದೆಲ್ಲ ಆವರ ಬಾಲ್ಯದ ಮಾತು.

ಮುಂದೆ ಅವರ ವಿದ್ಯಾಭ್ಯಾಸ ಅತಿ ಕಷ್ಟದಿಂದ ಮುಂದುವರಿಯಿತು. ಕಲಿಯುವದರಲ್ಲಿ ಕುಶಾಗ್ರರಿದ್ದುದರಿಂದಲೂ, ದೈವಸಹಾಯವಿದ್ದುದರಿಂದಲೂ, ವಿಶ್ವವಿದ್ಯಾ

ಲಯುದ ಶಿಕ್ಷಣವನ್ನೂ ಗಳಿಸಿ, ಮಾನಸ ಶಾಸ್ತ್ರದಲ್ಲಿ ಮುಂದುವರಿದು ಅವರು ಅದರಲ್ಲೇ 'ಪಾಂಡಿತ್ಯ' ಗಳಿಸಿದ್ದರು. ಅದೇ ಆಗಿನ್ನೂ ಅವರಿಗೆ ಇಪ್ಪತ್ತಾರು ಇಪ್ಪತ್ತೇಳರ ಪ್ರಾಯ. ಡಾಕ್ಟರೇಟ್ ಸಿಕ್ಕ ವರ್ಷ. 'ಮುಂದೇನು ?' ಎಂಬ ಪ್ರಶ್ನೆ ಅವರನ್ನು ಅಣಕಿಸುತ್ತಿತ್ತು. ಆಗಲೇ ಅವರು ಸಂಕಲ್ಪ ಮಾಡಿದ್ದು : 'ನನ್ನ ಜೀವನವನ್ನು ಹುಚ್ಚು ಪ್ರಪಂಚದ ಗೂಢವನ್ನು ಒಡೆಯಲು ಮೀಸಲಿಡಬೇಕು.' ಎಂದು. ಬಾಲ್ಯದಿಂದಲೂ ಅವರಿಗೆ ಆಗಾಗ ಈ ಭಾವ ಬರುತ್ತಿತ್ತು. ಅದಕ್ಕೆ ಕಾರಣವಿಷ್ಟೇ : ಹುಚ್ಚು ಅವರ ಕುಟುಂಬ ಜೀವನವನ್ನು ಹಾಳುಗೆಡಿಸಿತ್ತು. ಅವರ ಎದೆಯೊರತೆಯ ಆಸೆಯನ್ನು ಮೊಳಕೆಯಲ್ಲೇ ಕಮರಿಸಿತ್ತು. ತನ್ನ ತಂದೆ ಹುಚ್ಚನೆನಿಸಿಕೊಂಡು ಗ್ರೀನ್‌ವಿಚ್ ಪಟ್ಟಣದ ರಸ್ತೆಗಳಲ್ಲೆಲ್ಲಾ ಅಪಹಾಸ್ಯಕ್ಕೆ ಗುರಿಯಾಗಿ ಕುತ್ತಿಗೆಗೆ ಹಗ್ಗವನ್ನು ಹಾಕಿಕೊಂಡು ದುರ್ಮೃತ್ಯುವನ್ನು ಹೊಂದಿದ್ದನೆಂದು ಅವರು ಕೇಳಿದ್ದರು. ಇದು ಅವರ ಮನಸ್ಸನ್ನು ಆಗಾಗ ಹಿಂಡುತ್ತಿತ್ತು. ಹುಚ್ಚಿಯೆನಿಸಿದ ತಾಯಿಯೂ ಇವರಿಗೆ ೨೦ ವರ್ಷವಾಗುವ ತನಕವೂ ಇದ್ದಳು. ಅವಳ ಯಾತನಾಮಯವಾದ ಜೀವನ, ಅಸಹ್ಯವಾದ ಕೃತಿಗಳು ಮತ್ತು ಮಾತುಗಳು ಇವರನ್ನು 'ಹುಚ್ಚು' ಪ್ರಪಂಚದ ಸನಿಯ ಸನಿಯ ಒಯ್ದಿದ್ದವು. ಸುತ್ತಲಿನ ಜಗತ್ತನ್ನು ಕಣ್ಬಿಟ್ಟು ಕಂಡಾಗ ಅವರು ಅನೇಕ ಹುಚ್ಚರನ್ನು—ಅವರಲ್ಲಿಯ ವೈವಿಧ್ಯದ ಸೊಬಗನ್ನು , ಹುಚ್ಚಿನಲ್ಲಿಯ ವೈಭವವನ್ನು-ಕಂಡು ಅವರಿಗೆ ಎನ್ನಿಸುತ್ತಿತ್ತು : 'ಈ ಹುಚ್ಚು ಪ್ರಪಂಚವನ್ನು ಮಾನವನಿನ್ನೂ ಗೆಲ್ಲಬೇಕಾಗಿದೆ. ಸಾವಿನಂತೆಯೇ 'ಹುಚ್ಚು' ಮಾನವನ ಕೈಗೆ ನಿಲುಕದಿದೆ. ದೇವರು ನನಗೆ ಯೋಗ್ಯತೆಯನ್ನು ಕೊಡುವುದಾದಲ್ಲಿ......!' ಎಂದು.

ಆ ಒಂದು ಮನಸ್ಸಿನ ಹಿನ್ನೆಲೆಯಲ್ಲೇ ತಾರುಣ್ಯದ ಭರದಲ್ಲೇ ಡಾಕ್ಟರೇಟ್ ಸಿಕ್ಕ ಹುರುಪು—ಹಿಗ್ಗಿನ ನೆಲ್ಲೆಯಲ್ಲೇ, ಅವರು ಹುಚ್ಚಿಗಾಗಿ ತಮ್ಮ ಜೀವನವನ್ನೇ ಧಾರೆಯೆರೆಯಲು ಸಂಕಲ್ಪ ಮಾಡಿದರು. ಈ ಒಂದು ಉದ್ದೇಶವನ್ನಿಟ್ಟೇ . ಅವರು 'ಸಂಶೋಧನೆ' ಶಾಖೆಯಲ್ಲಿ ಕೆಲಸ ಮಾಡಲೆಂದೇ ಗ್ರೀನ್‌ವಿಚ್ ಬಿಟ್ಟು ಲಂಡನ್‌ಗೆ ಬಂದಿದ್ದರು. ಕಳೆದ ಇಪ್ಪತ್ತೈದು ವರ್ಷಗಳಿಂದಲೂ ಲಂಡನ್ ವಿಶ್ವವಿದ್ಯಾಲಯದ ಆಶ್ರಯದಲ್ಲೇ ಮಾನಸಶಾಸ್ತ್ರದ ಸಂಶೋಧನ ಶಾಖೆಯಲ್ಲಿ ಕೆಲಸ ಮಾಡಿದ್ದರು. ಆಗ ಇನ್ನೂ ಲಂಡನ್ ವಿಶ್ವವಿದ್ಯಾಲಯದಲ್ಲಿ 'ಮಾನಸಶಾಸ್ತ್ರ'ಕ್ಕೆ ಒಂದು ಮಹತ್ತು ಇದ್ದಿಲ್ಲ. ಮಾನಸಶಾಸ್ತ್ರಕ್ಕೂ ಒಂದು ಪ್ರಾಯೋಗಿಕ ಮುಖವಿದೆಯೆಂಬುದು ವಾದದ ವಿಷಯವಾಗಿತ್ತು. 'ಹುಚ್ಚು ದೇವರ ಮುನಿಸು' ಎಂದು ಕೆಲವರು ತಿಳಿದಿದ್ದರು. ಆದರೂ ಮಾನಸಶಾಸ್ತ್ರದ ಒಂದು ಪ್ರಯೋಗಶಾಲೆ ಲಂಡನ್ನಿನಲ್ಲಿ ಕುಂಟುತ್ತ ಕುಂಟುತ್ತ ಸಾಗಿತ್ತು.

ಹೊಟ್ಟೆಗೂ ಸರಿಯಾಗಿ ಸಾಲದ, ವೇತನ ಪಡೆದ ಅಲ್ಲಿಯ ಸಂಶೋಧಕರು ತಮ್ಮ ಬಾಳನ್ನೇ ಮಾನಸಶಾಸ್ತ್ರಕ್ಕೆ ನೀರೆರೆದಿದ್ದರು. ಕುಥಬರ್ಟರೂ ಅವರಲ್ಲಿ ಒಬ್ಬ

ರಾದರು. ಪ್ರಯೋಗಕ್ಕೆಂದು ಅವರಿಗೆ ಈ ಸಣ್ಣ ಮಹಡಿಯ ಮನೆಯನ್ನು ಬಿಟ್ಟು ಕೊಟ್ಟಿದ್ದರು. ಅಂದಿನ ದಿನಗಳಲ್ಲಿ ಕುಥಬರ್ಟರು ಹಗಲು ರಾತ್ರಿಯೆನ್ನದೆ ತಮ್ಮ ವೇಳೆಯನ್ನು ಇದೇ ಪ್ರಯೋಗಶಾಲೆಯಲ್ಲಿ ಕಳೆಯುತ್ತಿದ್ದರು. ಎಷ್ಟೋ ಸಲ ರಾತ್ರಿ ಊಟಕ್ಕೂ ಇರಲಿಲ್ಲ. ತಿಂಗಳ ವೇತನವನ್ನು ಎಷ್ಟೋ ಸಾರೆ ಪುಸ್ತಕಗಳನ್ನು ಕೊಳ್ಳು ವುದರಲ್ಲಿಯೂ ದೂರದೂರದ ಹುಚ್ಚರ ಆಸ್ಪತ್ರೆಗಳನ್ನು ಸಂದರ್ಶಿಸುವುದರಲ್ಲಿಯೂ ಕಳೆದುಬಿಡುತ್ತಿದ್ದರು. ಆಗ ಎಷ್ಟೋ ದಿನ ನಿರಾಹಾರ. ಆದರೂ ಕುಥಬರ್ಟರಿಗೆ ಆ ಬಾಳಿನಲ್ಲಿ ತೃಪ್ತಿಯಿತ್ತು. ಎಷ್ಟೋ ಸಲ ರಾತ್ರಿಯಲ್ಲಿ ಎರಡು-ಮೂರು ಘಂಟೆಯ ತನಕವೂ ಹಾಗೆಯೇ ಓದುತ್ತ, ಟಿಪ್ಪಣಿ ಮಾಡಿಕೊಳ್ಳುತ್ತ, ಬರೆಯುತ್ತ ಕೂತು ಬಿಡುತಿದ್ದರು. ಮಾನಸಶಾಸ್ತ್ರವೊಂದನ್ನು ಬಿಟ್ಟರೆ, ಜೀವನದಲ್ಲಿ ಬೇರಾವ ಹಿರಿಯಾ ಸೆಯೂ ಅವರಿಗೆ ಇದ್ದಿದ್ದಿಲ್ಲ.

ದಿನಗಳುರುಳುತ್ತಿದ್ದಂತೆ ಅವರಿಗೆ ಏನೋ ಒಂದು ಕೊರತೆಯ ಭಾಸವಾಗ ಹತ್ತಿತು. 'ಹುಚ್ಚಿನ ಗೂಢವರಿಯಲು ಪ್ರಯೋಗ ಮಾಡಬೇಕೇನೋ ನಿಜ; ಆದರೆ ಯಾರ ಮೇಲೆ ?' ಎಂದು. ಹೀಗಿರುವಾಗಲೇ ಅವರಿಗೆ ಮದುವೆಯ ಹಂಬಲ ತಲೆದೋರಿದುದು. ಒಂದೆಡೆ ಯೌವನದ ಕರೆ; ಒಂದೆಡೆ ಪ್ರಯೋಗಕ್ಕೆ ಆಸೆ—ಹೀಗೆ ಕುಥಬರ್ಟರಲ್ಲಿದ್ದ ವಿಜ್ಞಾನಿ ಮಾನವನಾಗಲು ಹಂಬಲಿಸಿದ. ಅವರ ಪಾಲಿಗೆ ಮದುವೆ ಪ್ರೇಮದ ಪ್ರತೀಕವಲ್ಲ; ಕಾಮದ ಹುಚ್ಚಿನದ್ದಲ್ಲ. ಪ್ರಯೋಗ ಸಾಧನೆಗೆ ಮದುವೆಯ ನೆರವು ಬೇಕಿತ್ತು. ಅವರಲ್ಲಿದ್ದ ವಿಜ್ಞಾನಿಯೇ ಇದಕ್ಕೆ ಕಾರಣ.

ಇಂತಹ ಒಂದು ಹಂಬಲಿನಲ್ಲೇ ಅವರು ಐದಾರು ವರ್ಷಗಳನ್ನು ಕಳೆದಿದ್ದರು. ಒಂದು ರವಿವಾರ ಸಂಜೆ; ಅವರು ಥೇಮ್ಸ ನದಿಯ ಹತ್ತಿರ ತಿರುಗಾಡಲೆಂದು ಹೋಗಿ ದ್ದರು. ಅಲ್ಲೇ ನೋವಾಳನ್ನು ಅವರು ಮೊಟ್ಟಮೊದಲು ಕಂಡದ್ದು. ನೋವಾಳೂ ತನ್ನ ಓರಗೆಯ ಗೆಳತಿಯರೊಡನೆ ವಿಹಾರಕ್ಕೆಂದು ಅಲ್ಲಿಗಾಗಿ ಬಂದಿದ್ದಳು. ಆ ಸಂಜೆಯ ಇಳಿಹೊತ್ತು. ಸೂರ್ಯರಶ್ಮಿ ಥೇಮ್ಸ ನದಿಯ ಮೇಲೆ ಬಿದ್ದು ಒಂದು ಬಗೆಯ ಅವರ್ಣ ನೀಯ ಸೌಂದರ್ಯವನ್ನಿತ್ತಿತ್ತು. ಮಂದಗಾಳಿ ಬೀಸುತ್ತಿತ್ತು. ನೋವಾ ಮೊದಲೇ ಸುಂದರಿ. ಮೇಲೆ ಅಲಂಕಾರ ಪ್ರಿಯೆ. ಬಡವಳಾದರೂ ಶಿಸ್ತಿನಿಂದ ಕಾಲ ಕಳೆದಿದ್ದಳು. ಇನ್ನೂ ಇಪ್ಪತ್ತು-ಇಪತ್ತೊಂದರ ಯೌವನದಲ್ಲಿ ಕಾಲಿಡುತ್ತಿದ್ದಳು. ಸಂಜೆಯ ಬಿಸಿಲು ಅವಳ ಮೊರೆಗೊಂದು ಚೆಲವನ್ನಿತ್ತಿತ್ತು. ನೋವಾಳ ಸಂದರ್ಶನ ಕುಥಬರ್ಟರ ಹೃದಯದಲ್ಲಿ ಪ್ರೇಮಾಂಕುರ ಮೊಳೆಸಿತು. ನೋವಾಳ ತಂದೆ—ತಾಯಿಯರು ಬಾಲ್ಯ ದಿಂದಲೇ ಗತಿಸಿದ್ದರಂತೆ. ಹೀಗಾಗಿ ಯಾರೂ ಇಲ್ಲದ ಅನಾಥೆಯಾದ ನೋವಾ ಹನ್ನೆ ರಡನೇ ವರ್ಷದಲ್ಲೇ ಮದ್ಯದಂಗಡಿಯಲ್ಲಿ ಸೇವಕಳಾದಳು. ವರ್ಷಗಳು ಕಳೆದಂತೆ ನವಯುವ್ವನ ಅವಳ ಅಂಗಾಂಗಗಳಲ್ಲಿ ಅರಳಿ ಹೂವಾಗುತ್ತಿತ್ತು. ಆ ಮದ್ಯದಂಗಡಿ ಯಲ್ಲಿಯೂ ತನ್ನ ಕೌಮಾರ್ಯವನ್ನು ಎಷ್ಟೋ ಸಾರೆ ಕಾಪಾಡಿಕೊಳ್ಳುವುದು ಕಷ್ಟ

ಸಾಧ್ಯವಾಗಿತ್ತು. ಆ ಬಾಳಿಗೆ ನೋವಾ ಹೇಸಿದ್ದಳು. ಹೀಗಾಗಿ, ಬಂಧನದಿಂದ ಪಾರಾಗಲು ಹವಣಿಸುತ್ತಿದ್ದಳು. ಆಗಲೇ ಆವಳು ಕುಥಬರ್ಟರನ್ನು ಕಂಡದ್ದು. ಕುಥಬರ್ಟರಿಗೂ ಪ್ರೇಮಕ್ಕಿಂತ ಹೆಚ್ಚಾಗಿ, ಒಂದು 'ಹೆಣ್ಣು' ಬೇಕಾಗಿತ್ತು. ವಿಜ್ಞಾನ ದೇವತೆಯನ್ನು ಆರಾಧಿಸಲು ಅವರು ಇದಕ್ಕಾಗಿ ಹಂಬಲಿಸುತ್ತಿದ್ದರು. ಕುಥಬರ್ಟ ರಿಗೆ ಏನೋ ತಮಗೆ ಸಲ್ಲದ ಕಾರ್ಯದಲ್ಲಿ ಕೈಹಾಕುತ್ತಿರುವೆನೆಂದು ಮನಸ್ಸು ಹೇಳು ತ್ತಿತ್ತು. ಆದರೂ, ತಿಳಿದೂ ತಿಳಿಯದಂತೆ, ಅವರು ಪ್ರವಾಹದಲ್ಲಿ ಧುಮುಕುತ್ತಿದ್ದರು. ಸಂದರ್ಶನದ ಫಲವಾಗಿ ರೂಪುಗೊಂಡ ಪ್ರೇಮ ಇಬ್ಬರ ಮದುವೆಯಲ್ಲಿ ಪರ್ಯಾ ವಸಾನವಾಯಿತು.

ನೋವಾ ಕುಥಬರ್ಟರನ್ನು ಮನಃಪೂರ್ವಕ ಪ್ರೀತಿಸುತ್ತಿದ್ದಳು. ಬಡತನ ದಲ್ಲಿಯೇ ಬಾಲ್ಯ ಕಳೆದುದರಿಂದ ಅವಳಿಗೆ ಕುಥಬರ್ಟರ ಬಡತನ ಹೊಸದೆನಿಸಲಿಲ್ಲ. ಅವರ ಸಂಶೋಧನೆಗೆಂದು ಅವಳು ಯಾವ ತ್ಯಾಗಕ್ಕೂ ಸಿದ್ಧಳಿದ್ದಳು.

ಆದರೆ ನೋವಾ ಪ್ರೇಮ-ಕಾಮಗಳ ದಾಸಿಯಾಗಿದ್ದಳು. ಪ್ರೀತಿಸಿದಷ್ಟೂ, ಸಾಲದು; ಕಾಮಿಸಿದಷ್ಟೂ ತೃಪ್ತಿಯಿಲ್ಲ. ಒಂದು ರಾತ್ರಿಗಿಂತಲೂ ಹೆಚ್ಚು ಕುಥ ಬರ್ಟರು ಎಲ್ಲಿಯೂ ಹೊರಗೆ ಹೋಗುವಂತಿರಲಿಲ್ಲ. ನೋವಾಳು ಅಷ್ಟು ಆಗ್ರ ಹಿಸುತ್ತಿದ್ದಳು. ಮೊದಲಿನಂತೆ ಹಗಲು ರಾತ್ರಿಯೆನ್ನದೆ ಪ್ರಯೋಗಶಾಲೆಯಲ್ಲಿರಲು ನೋವಾ ಆತಂಕಗೊಳಿಸುತ್ತಿದ್ದಳು.

ಕುಥಬರ್ಟರಿಗೆ ಇದು ಸಹ್ಯವಾಗಲಿಲ್ಲ. ಸಂಶೋಧನೆಯಲ್ಲಿ ತೊಡಗಿದವರ ಚಿತ್ತಕ್ಕೆ ಸ್ಥಿರತೆ, ಸಂಯಮ ಬೇಕೆಂಬುದನ್ನು ಅವರಿಗೆ ಹೇಳಬೇಕಾದದಿದ್ದಿಲ್ಲ ಮೇಲಾಗಿ ಅವರಲ್ಲಿದ್ದ ವಿಜ್ಞಾನಿ ಕುಥಬರ್ಟರನ್ನು ಆಗಾಗ ಎಚ್ಚರಿಸುತ್ತಿದ್ದ. ಹೀಗಾಗಿ ಕುಥಬರ್ಟರು ಸಂಯಮದಲ್ಲಿಯೇ ಇದ್ದರು.

ವರುಷ ಮೂಡಿ ವರುಷ ಮಾಯವಾಗುತ್ತಿತ್ತು. ಕುಥಬರ್ಟರು ಅಂದು ಪ್ಯಾರಿಸ್ಸಿನ ಒಂದು ಹುಚ್ಚಾಸ್ಪತ್ರೆಯನ್ನು ಸಂದರ್ಶಿಸಲು ಹೋಗಿದ್ದರು. ಅಂದೆ ಆ ಆಸ್ಪತ್ರೆಗೆ ಓರ್ವ ಹುಚ್ಚಳನ್ನು ಸೇರಿಸಲಾಯಿತು. ಇನ್ನೂ ತಾರುಣ್ಯದ ತೋಟ್ಟ ದಲ್ಲಿ ವಿಹರಿಸುತ್ತಿದ್ದಳು. ಗುಂಗುರು-ಗುಂಗುರಾದ ಕೂದಲುಗಳು, ನೀಲಿ ಕಣ್ಣು ಗಳು, ಒಳ್ಳೆ ದಂತದ ಬಣ್ಣ- 'ಸೌಂದರ್ಯಕ್ಕೊಂದು ಮಾದರಿ' ಎನ್ನಿಸುವಂತಿತ್ತು ಅವಳ ರೂಪರಾಶಿ; ಅವಳನ್ನು ಕುರಿತು ಕುಥಬರ್ಟರಿಗೆ ವಿವರಿಸುತ್ತ ಅಲ್ಲಿಯ ಡಾಕ್ಟರರು ಎಂದಿದ್ದರು :

'ಪ್ಯಾರಿಸ್ಸಿನಲ್ಲಿಯೇ ಅತಿ ಕಾಮಿಯೆನಿಸಿದ ಸೂಳೆ ಇವಳು; ಕಾಮತೃಪ್ತಿ ಯಾಗದುದಕ್ಕೆ ಹುಚ್ಚು ಹಿಡಿಯಿತು.' ಎಂದು.

ಕುಥಬರ್ಟರಿಗೆ ಇದು ಪುನಃ ಪುನಃ ಮನಸ್ಸಿನಲ್ಲಿ ಮೂಡುತ್ತಿತ್ತು. ಅವರು ಕಂಡ ಅನೇಕ ಹುಚ್ಚಿಯರಲ್ಲಿ ಪ್ರೀತಿ-ಪ್ರಣಯಗಳೇ ಹುಚ್ಚಿಗೆ ಪ್ರಧಾನ ಕಾರಣವಾಗಿತ್ತು.

'ಅತೃಪ್ತ—ಅತಿ ಕಾಮ ಹುಚ್ಚಿಗೆ ಕಾರಣವಾಗಬಹುದೇ ?' ಅವರ ಮನಸ್ಸಿನಲ್ಲಿ ವಿಚಾರದ ಹುಳು ಗೂಡು ಕಟ್ಟುತ್ತಿತ್ತು. ದಿನಗಳೆದಂತೆ ವಿಷಯ ಸಂಗ್ರಹವಾದಂತೆ, ಅವರ ಸಂದೇಹ ಹೋಗಿ ಸಿದ್ಧಾಂತವಾಗುತ್ತಾ ಬಂತು. ಹಾಗೆಂದು ನಿಶ್ಚಿತವಾದ ಆಧಾರವಿಲ್ಲದೆಯೇ ಸಿದ್ಧಾಂತವನ್ನುಒಪ್ಪಿಕೊಳ್ಳುವದೆಂತು ?

ಅಂದಿನ ಆ ದಿನಗಳಲ್ಲಿ, ತನ್ನ ರನ್ನದೊಡತಿ ನೋವಾ ತನ್ನ ಮನೆಯನ್ನಲಂಕರಿಸಿದಾಗ ತಾನು ಕಳೆದ ಚಿಂತನೆಯ ದಿನಗಳೆಲ್ಲಾ ಕುಥಬರ್ಟರ ಕಣ್ಣೆದುರು ನಿಚ್ಚಳವಾಗಿ ನಿಂತವು.

ಸೃಷ್ಟಿಯಾಗುವಾಗ ಸಂವೇದನೆ ಅತಿಯಂತೆ; ಕುಥಬರ್ಟರ ಅಂದಿನ ಆ ಅಶಾಂತತೆಯ, ಸುದೀರ್ಘ ಚಿಂತನೆಯ, ನಿದ್ರಾ ರಹಿತವಾದ ಆ ದಿನಗಳು ಇದಕ್ಕೆ ನಿದರ್ಶನಗಳೆನ್ನಬಹುದಿತ್ತು.

ಅದೇ ಖುರ್ಚಿಯಲ್ಲಿ, ಅದೇ ಪ್ರಯೋಗಶಾಲೆಯಲ್ಲಿ ಅಂದು ಇಪ್ಪತ್ತು ವರ್ಷಗಳ ಹಿಂದೆ ಅವರು ಸಿದ್ಧಾಂತಕ್ಕೆಂದು ಆಧಾರಕ್ಕಾಗಿ ಚಡಪಡಿಸುತ್ತಿದ್ದರು. ಅವರಿಗಿನ್ನೂ ನೆನಪಿದೆ, ಅಂತಹ ಒಂದು ಇರುಳು, ಇದೇ ಪ್ರಯೋಗಶಾಲೆಯಲ್ಲಿ ಕುಳಿತು ತಲೆ ತುರಿಸುತ್ತಿದ್ದಾಗಲೇ ...ಆಗಲೇ.... ಅಹುದು, ಆಗಲೇ.... ಅವರ.... ಅವರ.... ತಲೆಯಲ್ಲಿ ಆ ವಿಚಾರ—ಆ ರಕ್ಕಸೀ ವಿಚಾರ.... ತಲೆಯಲ್ಲಿ ಸೇರಿದುದು ; 'ಅತಿ ಕಾಮಿಯಾದ ನೋವಾಳನ್ನು (ಈಗ ಅವರಿಗನ್ನಿಸುತ್ತಿದೆ : ಮುದ್ದು ನೋವಾಳನ್ನು) ಈ ಪ್ರಯೋಗಕ್ಕೆ ಬಲಿ ನೀಡಬೇಕು....!'

ಮನಸ್ಸು ವಿಚಾರದ ಕೊನೆಯನ್ನು ಮುಟ್ಟಿತು. 'ನೋವಾ ಅತಿ ಕಾಮಿ' ಅವರ ಮನಸ್ಸೇ ಒಪ್ಪಿತ್ತು. ತನ್ನ ಸಿದ್ಧಾಂತವಾದರೋ ಅತಿ ಕಾಮಿಗಳನ್ನೇ ಕುರಿತದ್ದು. 'ಯಾಕಾಗಬಾರದು ? ಯಾಕಾಗಬಾರದು ?' ಮನಸ್ಸು ಹೊಯ್ದಾಡುತ್ತಿತ್ತು.

ವಿಜ್ಞಾನವಾಣಿ ಎಚ್ಚರಿಸುತ್ತಿತ್ತು : 'ನೀನು ಮದುವೆಯಾದದ್ದಾದರೂ ಏತಕ್ಕೆ? ಪ್ರೇಮಕ್ಕಾಗಿದ್ದರೆ ನೋವಾಳಿಗಿಂತ ಒಲುಮೆಯ ವಸ್ತುಗಳಿದ್ದಿಲ್ಲವೆ ? ನೆನಹು ಮಾಡಿ ನೋಡು.... ನಿನ್ನ ಕಾಲೇಜಿನ ಸವಿಗಳಿಗೆಯಲ್ಲಿ.... ಅಂದು.... ಅಂದು ಬೆಣಚಿಯ ಮರದಡಿಯಲ್ಲಿ.... ಬೆಳುದಿಂಗಳು ಹರಡಿದಾಗ....'

ಕುಥಬರ್ಟರು ಎಷ್ಟೇ ಸಂಯಮಿಯಾಗಿದ್ದರೂ, ಎಷ್ಟೇ ವಿಜ್ಞಾನಕ್ಕಾಗಿ ಧಾರೆಯೆರೆದ ವಿಜ್ಞಾನಿಯಾಗಿದ್ದರೂ, ನೋವಾಳ ಬಗ್ಗೆ ಅಂತರ್ಯದ ಒಂದು ಬಗೆಯ ಒಲು

ಮೆಯ ಬುಗ್ಗೆಯಿತ್ತು. ಅವರು ಹೃದಯದಿಂದಲೂ ಆಕೆಯನ್ನು ಪ್ರೀತಿಸಿದ್ದರು. ಅವಳೂ ಅವರನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದಳೆಂಬುದಕ್ಕೆ ಅವರಿಗೆ ಆಧಾರ ಗಳೇ ಬೇಕಿದ್ದಿಲ್ಲ. ಒಮ್ಮೆ ಅವರು ಜ್ವರದಿಂದ ಹಾಸಿಗೆ ಹಿಡಿದಿದ್ದರು. 'ವಿಶ್ರಾಂತಿ ಅವಶ್ಯ' ಎಂದು ಡಾಕ್ಟರರು ಬೋಧಿಸಿದ್ದರು. ಹೀಗಾಗಿ ಅವರು ಹಾಸಿಗೆಯನ್ನು ಬಿಟ್ಟೇಳುವಂತಿರಲಿಲ್ಲ. ನೋವಾಳ ದೈನ್ಯ ತುಂಬಿದ ಮೋರೆಯನ್ನು ಅಂದು ನೋಡ ಬೇಕಿತ್ತು ; ಜ್ವರ ಇನ್ನೂ ಬಿಟ್ಟಿರಲಿಲ್ಲ. ಅಂದು ರಾತ್ರಿ ಸುಮಾರು ೧ ಘಂಟೆಯಾಗಿರ ಬಹುದು, ಎಲ್ಲೆಲ್ಲೂ ನಿಃಶಬ್ದ ; ಲಂಡನ್ನಿನ ಬೀದಿಯಲ್ಲಿ ಅಲ್ಲೊಂದು ಇಲ್ಲೊಂದು ಗಾಡಿ ನಿಧಾನವಾಗಿ ಉರುಳುತ್ತಿದ್ದವು. ಕುಥಬರ್ಟರಿಗೆ ವೈಯಲ್ಲಿಯ ಜ್ವರದಿಂದಾಗಿ ನಿದ್ದೆಯೇ ಬಂದಿರಲಿಲ್ಲ. ಬಳಿಯಲ್ಲೇ ಅವರ ಉಪಚಾರಕ್ಕೆಂದು ಕುಳಿತಿದ್ದ ನೋವಾ ಳಿಗೆ ಅವಳಿಗೆ ತಿಳಿಯದಂತೆಯೇ ನಿದ್ದೆ ಬಂದುಬಿಟ್ಟಿತ್ತು. ಕುಥಬರ್ಟರಿಗೆ ಜೀವ ನಾಡಿಯಲ್ಲಿ ಮಿಂಚು ಸುಳಿದಂತಾಗಿ ಮೆಲ್ಲನೆ ಇದೇ ಪ್ರಯೋಗಶಾಲೆಗೆ ಬಂದು ಬಿಟ್ಟಿ ದ್ದರು. ದೂರದಲ್ಲಿಯ ಕೂಟ ರಸ್ತೆಯಲ್ಲಿ 'ನೆಲಸನ್'ನ ಮೂರ್ತಿಯ ಮೇಲೆ ವಿದ್ಯುದ್ದೀಪ ಮನಮೋಹಕವಾಗಿ ಕಂಗೊಳಿಸುತ್ತಿತ್ತು. ಅದನ್ನೇ ನೋಡುತ್ತ ಕುಥಬರ್ಟರು ಕುಳಿತಿದ್ದರು. ಸ್ವಲ್ಪ ಹೊತ್ತಾಗಿರಬೇಕು ; ಬಾಗಿಲಲ್ಲಿ ಸಪ್ಪಳ ವಾದಂತಾಯಿತು ; ಕುಥಬರ್ಟರು ಮೋರೆ ತಿರುವಿ ನೋಡಿದರು. ಗಾಬರಿಯಾದ ಕಣ್ಣುಗಳನ್ನು ಪಿಳಿಪಿಳಿ ಬಿಡುತ್ತ ದೈನ್ಯವಾದ ಮೋರೆಯನ್ನು ಹಾಕಿ ಕಲ್ಲಿನಂತೆ ನೋವಾ ಬಾಗಿಲಲ್ಲಿ ನಿಂತಿದ್ದಳು. ಕುಥಬರ್ಟರು ನೋಡುತ್ತಿದ್ದಂತೆಯೇ ಮೆಲ್ಲ ಮೆಲ್ಲನೆ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಬಂದು ಅವರ ಬುಡದಲ್ಲಿ ಕುಳಿತು ಬಿಕ್ಕುತ್ತ ಬಿಕ್ಕುತ್ತ, 'ನೀವು ಹೀಗೆಲ್ಲಾ ಮಾಡಬಾರದು' ಎಂದು ರೋದಿಸಿದ್ದಳು. ಕುಥ ಬರ್ಟರೂ ಅಂದು ತುಂಬಾ ಅತ್ತಿದ್ದರು.

ನೋವಾ ಬರಿ ಅತಿ ಕಾಮಿಯೇ ಆಗಿದ್ದಿಲ್ಲ; ಅತಿ ಪ್ರೇಮಿಯೂ ಆಗಿದ್ದಳು. 'ಇಂತಹಳನ್ನು ತನ್ನ ಪ್ರಯೋಗಕ್ಕೆ ಬಳಸಲೇ ?' ಮನಸ್ಸು ಹಿಂಡಿಹೋಗಿತ್ತು. ವಿಜ್ಞಾ ನಿಯ ಜೀವನದ ಸೆಳಕು ಕುಥಬರ್ಟರನ್ನು ಮುಟ್ಟಿತು; ಮತ್ತೆ ಮತ್ತೆ ಅವರಲ್ಲಿದ್ದ ವಿಜ್ಞಾನಿ, 'ಮುಂದಾಗು, ಅಳುಕದಿರು' ಎಂದು ಎಚ್ಚರಿಸುತಿದ್ದ. ಕುಥಬರ್ಟರೂ ಒಂದು ತೀರ್ಮಾನಕ್ಕೆ ಬಂದಿದ್ದರು; ನೋವಾಳ ಮೇಲೆ ತಮ್ಮ ಪ್ರಯೋಗ ಮಾಡಿಯೆ ಬಿಡುವದು ಎಂದುಕೊಂಡರು. ಮೊದ ಮೊದಲು ತಮ್ಮ ಪ್ರಯೋಗವನ್ನು ಎಂತು ಸಾಗಿಸಬೇಕೆಂಬುದು ಅವರಿಗೆ ಬಗೆಹರಿಯದಾಗಿತ್ತು. 'ಪ್ರಯೋಗ ನಡೆದಿರುವುದು ಪತ್ನಿಗೆ ತಿಳಿದಿರಕೂಡದು. ತನ್ನ ವರ್ತನೆಯಲ್ಲಿ ಹೆಚ್ಚು ಬದಲಾಗಕೂಡದು; ಕಾರ್ಯ ಸಾಧನೆಯಾಗಬೇಕು.' ಕೊನೆಗೆ ಅವರು ಒಂದು ಉಪಾಯವನ್ನು ಯೋಚಿಸಿದರು.

'ನೋವಾಳಲ್ಲಿಯ ಅತಿ ಕಾಮುಕ್ಕೆ ತಾವು ಉತ್ತರ ಕೊಡುವುದನ್ನು ನಿಲ್ಲಿಸ ಬೇಕು; ಕಾರ್ಯ ಸಂಶೋಧನೆ ತುಂಬಾ ಅಗತ್ಯವಿರುವದರಿಂದ ಅಡ್ಡಿ ಮಾಡಕೂಡ

ದೆಂದು ಅವಳೊಡನೆ ಸುಳ್ಳು ಹೇಳಬೇಕು. ಮತ್ತು.... ನೋವಾಳಲ್ಲಿಯ ಈ ಕಾಮಲತೆ ನೀರಿಲ್ಲದೆ ಬಾಡುವಾಗ, ತಾವು ಅವಳ ಮನೋವಿಕಾರಗಳ ಸೂಕ್ಷ್ಮ ಟಿಪ್ಪಣಿಯನ್ನು ಮಾಡುತ್ತಿರಬೇಕು.' ಎಂದು.

ಅಂದು ರಾತ್ರಿ ನೋವಾಳಿಗೆ ತಮ್ಮ ಮನಸ್ಸಿನ ಉಪಾಯಗಳನ್ನು ಅವಳಿಗೆ ಶಂಕೆ ಬಾರದಂತೆ ನಿಧಾನವಾಗಿ ಹೇಳಿದರು. ನೋವಾ ಎಲ್ಲವನ್ನೂ ಕೇಳಿದಳು.

'ದಿನಾ ಎರಡು ತಾಸನ್ನೂ ನನ್ನೊಡನೆ ಕಳೆಯಲಾರದಷ್ಟು ಕೆಲಸವೇ ? ನನಗಾದರೂ ನೀವಲ್ಲದಿದ್ದರೆ ಯಾರಿದ್ದಾರು ? ಮಕ್ಕಳಂತೂ ನನ್ನ ಹಣೆಯಲ್ಲಿ ಬರೆದಿಲ್ಲ. ಸಂಬಂಧಿಗಳೂ ಯಾರೂ ಇಲ್ಲ....' ನೋವಾಳ ಕಂಠ ಬಿಗಿದು ಬಂದಿತ್ತು.

ಕುಥಬರ್ಟರು ಧಡಧಡನೆ ಅಂದುಬಿಟ್ಟಿದ್ದರು. 'ಇಲ್ಲಿ ನೋಡು; ಇನ್ನೊಂದು ವರ್ಷ; ನನ್ನ ಸಂಶೋಧನೆಗಳನ್ನೆಲ್ಲ ಕೂಡಿಸಿ ಒಂದು ಪುಸ್ತಕ ಬರೆಯಬೇಕು; ಬರೆದರೆ ಮಾನಸ ಶಾಸ್ತ್ರದಲ್ಲೇ ಒಂದು ಅಗಾಧವಾದ ವಿಜಯ....'

ನೋವಾಳು ಮತ್ತೆ ಪಿಟ್ಟೆನ್ನಲಿಲ್ಲ. ಜೀವನದಲ್ಲಿ ನಿರಾಶೆಗೊಂಡ ಅಪರಾಧಿ 'ಗಲ್ಲಿನ ತೀರ್ಪ'ನ್ನು ಓದಿ ಹೇಳಿದಾಗ, ನ್ಯಾಯಾಧೀಶನಿಗೆ 'ನಿಮ್ಮ ಇಷ್ಟ' ಎನ್ನುವಂತೆ ಮೌನದಿಂದ ಒಪ್ಪಿಗೆಯನ್ನಿತ್ತಿದ್ದಳು.

ಕುಥಬರ್ಟರಲ್ಲಿಯ ವಿಜ್ಞಾನಿ ಕೆಲಸಕ್ಕೆ ಶುರು ಮಾಡಿದ್ದ. ಅವರ ಉಪಾಯ ನೋವಾಳಲ್ಲಿ ಕೆಲಸಕ್ಕೆ ಶುರು ಮಾಡಿತ್ತು. ಮೊದಲಿನಂತೆ ಉಲ್ಲಾಸ ಅವಳಲ್ಲಿದ್ದಿಲ್ಲ. ಯಾವುದೋ ಒಂದು ಶೋಕ ಅವಳನ್ನು ಹೆಚ್ಚಾಗಿ ಆವರಿಸಿತ್ತು. ಕುಥಬರ್ಟರು ಹೆಚ್ಚಾಗಿ ಕೆಳಗೆ ಬರುತ್ತಿದ್ದೇ ಇಲ್ಲ. ಊಟದ ಕಾಲಕ್ಕೆ ಸಂಜೆಯಲ್ಲಿ ಒಂದು ತಾಸು ಕೆಳಗೆ ಬರುತ್ತಿದ್ದರು. ದಿನಗಳೆದಂತೆ ಪ್ರಯೋಗಶಾಲೆಯಲ್ಲೇ ಮಲಗತೊಡಗಿದರು. ನೋವಾಳಲ್ಲಿಯ ಮನೋವಿಕಾರದ ಸೂಕ್ಷ್ಮ ಆಗು–ಹೋಗುಗಳನ್ನು ಬರೆದಿಟ್ಟುಕೊಳ್ಳುತ್ತಿದ್ದರು. ಎಂದಾದರೂ ಒಮ್ಮೆ ಅವಳು ಕೇಳುತ್ತಿದ್ದಳು. 'ನಿಮ್ಮ ಲೇಖನ ಕಾರ್ಯ ಸರಿಯಾಗಿ ಸಾಗುತ್ತಿದೆಯೇ ?' 'ಹೂಂ' ಎಂದು ಕುಥಬರ್ಟರು ತಿರುಗಿ ಪ್ರಯೋಗ ಶಾಲೆಗೆ ಬಂದುಬಿಡುತ್ತಿದ್ದರು ಕುಥಬರ್ಟರಿಗೆ ಊಟವೂ ಸಹ ಮೇಲೆಯೇ ಬರುತ್ತಿತ್ತು. ಯಂತ್ರದಂತೆ ಅವರ ಬಾಳು ಸಾಗುತ್ತಿತ್ತು. ಅವರಿಗೂ ಆಗಾಗ್ಗೆ ಈ ಕಟ್ಟಳೆ ತೀರ ಕೆಡುಕೆನಿಸಿತ್ತಿತ್ತು. ಮನಸ್ಸೂ ದುಃಗುಡಗೊಳ್ಳುತ್ತಿತ್ತು. 'ತನ್ನ ನಿಶ್ಚಯ ಬದಲಿಸಲೇ ?' ಮನಸ್ಸು ಕೇಳುತ್ತಿತ್ತು. ವಿಜ್ಞಾನದ ಕರೆ ಅವರನ್ನು ಮಬ್ಬಿನಿಂದ ಎಚ್ಚರಿಸುತ್ತಿತ್ತು. ಫ್ರಾಯಿ, ಕಾರ್ಲ್‌ಯೂಂಗ್ ಮುಂತಾದ ವಿಜ್ಞಾನಿಗಳು ತುಳಿದ ದಾರಿ ಕಣ್ಣ ಮುಂದೆ ನಿಲ್ಲುತ್ತಿತ್ತು.

ದಿನ ಸಾಗುತ್ತಿತ್ತು; ನೋವಾ ಮನದಲ್ಲಿಯೇ ಕೊರಗುತ್ತಿದ್ದಳು. ಕಾಮ ಅವಳ ದೇಹವನ್ನು ಕರಗಿಸಿತ್ತು. ಆದರೆ ಅವಳಿಗೆ ಕುಥಬರ್ಟರು ಎಣಿಸಿದಂತೆ ಹುಚ್ಚು ಹಿಡಿಯಲಿಲ್ಲ. ಮುಗಿಲಿನಿಂದ ಮಳೆ ಸುಯ್ಯುರಿವಾಗ ಗದ್ದೆಯ ಬದಿಯಲ್ಲಿ ನಿಂತು ಅದೇ ಅಂಕುರಿಸುತ್ತಿದ್ದ ಮೊಳಕೆಯ ಸುತ್ತ ಕನಸಿನ ಕಾವ್ಯವನ್ನು ಕಟ್ಟುತ್ತಿದ್ದ ಒಕ್ಕಲಿಗನಂತೆ, ದಿನವೂ ಕುಥಬರ್ಟರು ನೋವಾಳನ್ನು ನೋಡಿ ಭವಿಷ್ಯತ್ತಿನ ಚಿತ್ರವನ್ನು ಚಿತ್ರಿಸಿಕೊಳ್ಳುತ್ತಿದ್ದರು. ಆದರೂ ನೋವಾ ಹುಚ್ಚಿಯಾಗಲಿಲ್ಲ.

ಅಂದು ತುಂಬಾ ಮಳೆ ಸುರಿದಿತ್ತು; ಗಾಳಿ ಕುರ್ರೆಂದು ಬೀಸುತ್ತಿತ್ತು. ರಾತ್ರಿ ಪ್ರಶಾಂತವಿತ್ತು. ನಡುರಾತ್ರಿ ಮೀರಿದೆ. ಕುಥಬರ್ಟರು ಯಾವುದೋ ಒಂದು ಪುಸ್ತಕದ ಪುಟಗಳನ್ನು ತಿರುವುತ್ತ ಕುಳಿತಿದ್ದರು. ಬಳಿಯಲ್ಲಿ ಯಾರೋ ಇದ್ದಂತೆ ಎನಿಸಿತು ಅವರಿಗೆ. ತಿರುಗಿ ನೋಡುತ್ತಾರೆ, ನೋವಾ! ಯಾವದೋ ಅಪರಾಧಿ ನ್ಯಾಯಾಧೀಶನ ಮುಂದೆ ನಿಂತತೆ ತೋರುತ್ತಿತ್ತು. ಕುಥಬರ್ಟರು ಅವಳ ಮೋರೆಯನ್ನೊಮ್ಮೆ ಕಂಡರು. ಕುಥಬರ್ಟರಿಗೆ ಅವಳು ಬಂದ ಉದ್ದೇಶವನ್ನು ಬೇರೆ ಹೇಳಬೇಕಿದ್ದಿಲ್ಲ. ಎದೆ ಡಬ್-ಡಬ್ ಎಂದು ಹಾರುತ್ತಿದ್ದರೂ ಎದೆ ಗಟ್ಟಿಮಾಡಿ ಅವಳಿಗೆ ಮೃದುವಾಗಿ ಸಮಾಧಾನದಿಂದ ನಾಲ್ಕು ಮಾತನ್ನಾಡಿ ಕೆಳಗೆ ಹೋಗುವಂತೆ ಬಿನ್ನವಿಸಿಕೊಂಡರು. ನೋವಾ ಮರುಮಾತನಾಡಲಿಲ್ಲ. ಒಮ್ಮೆ ತನ್ನ ದಿಟ್ಟಿಯನ್ನು ಕುಥಬರ್ಟರೆಡೆಗೆ ಬೀರಿದಳು. 'ತಪ್ಪಾಯಿತು, ತಪ್ಪಾಯಿತು' ಎನ್ನುತ್ತ ಕೆಳಗೆ ಓಡಿದಳು. ಕುಥಬರ್ಟರ ಮನಸ್ಸೆಲ್ಲ ಹಿಂಡಿದಂತಾಯಿತು. ಅವರ ಓದು ಮುಂದೇ ಸಾಗಿತು.

ದಿನಗಳು ಉರುಳುತ್ತಿದ್ದವು ನೋವಾ ಈಗ ಹಗಲಲ್ಲಿ ಕ್ಲಬ್ಬಿಗೋ, ಗೆಳತಿಯರ ಮನೆಗೋ ಹೋಗಿ ಬರುತ್ತಿದ್ದಳು ಆದರೆ ಯಾವುದೋ ಅವ್ಯಕ್ತ ಚಿಂತೆ ಅವಳನ್ನು ಹಿಚುಕುತ್ತಿತ್ತು. ಕುಥಬರ್ಟರು ಮಿಡುಕಾಡುತ್ತಿದ್ದರು.

ಅಂದು ಕುಥಬರ್ಟರ ಮನೆಯಲ್ಲಿ ಬರೇ ಒಂದು ಹೊತ್ತು ಊಟ. ತಿಂಗಳ ವೇತನದಲ್ಲಿ ಕೆಲವು ಪುಸ್ತಕಗಳನ್ನು ಕೊಂಡಿದ್ದರು ಕುಥಬರ್ಟರು. ನೋವಾ ಕೆಲವು ದುಡ್ಡಿನಿಂದ ತನ್ನ ಗೆಳತಿಯ ಹುಟ್ಟುಹಬ್ಬದ ಕಾಣಿಕೆಯನ್ನು ಕೊಂಡಿದ್ದಳು. ಹೀಗಾಗಿ ತಿಂಗಳ ಕೊನೆಯ ವಾರದಲ್ಲಿ ಸ್ವಲ್ಪ ಕೈ ಕಟ್ಟಿತು. ಆದರೆ ಇದೇನೂ ಅವರಿಗೆ ಹೊಸದಲ್ಲ. ಆ ದಿನ ರಾತ್ರಿ ಬರೇ ಚಹಾವನ್ನು ಕುಡಿದಿದ್ದರು.

ನಡುರಾತ್ರಿಯತ್ತ ಗಡಿಯಾರ ಧಾವಿಸುತ್ತಿತ್ತು. ಕುಥಬರ್ಟರಿಗೂ ದೇಹದಲ್ಲಿ ಆಯಾಸವೆನಿಸಿತು. ಹಾಗೆಯೇ ಅಲ್ಲೇ ಹಾಸಿಗೆಯಲ್ಲೇ ಒರಗಿದ್ದರು. ಫಕ್ಕನೆ ಮೈಯನ್ನು ಯಾರೋ ಮುಟ್ಟಿದಂತಾಯಿತು. ಎಚ್ಚತ್ತು ನೋಡಿದರು

ನೋವಾ ! ಇಂದು ನೋವಾಳ ಮುಖದಲ್ಲಿ ಎಂದಿಲ್ಲದ ಸೊಬಗು ನಲಿಯುತ್ತಿತ್ತು. ಅವಳ ದೇಹವೆಲ್ಲವೂ ಪರಿಮಳಿಸುತ್ತಿತ್ತು. ಕಣ್ಣಿನಲ್ಲಿ ಎಂದೂ ಕಾಣದ ಒಂದು ಬಗೆಯ ಆಹ್ವಾನವಿದ್ದಿತು. ಪ್ರಯೋಗ ಶಾಲೆಯ ಬಾಗಿಲನ್ನು ಭದ್ರವಾಗಿ ಹಾಕಿ ನೋವಾ ಮೇಲೆ ಬಂದಿದ್ದಳು. ಕುಥಬರ್ಟರಿಗೆ ಪರಿಸ್ಥಿತಿಯು ಅರಿವಾಯಿತು, ಇನ್ನೊಂದು ನಿಮಿಷ ಕಳೆದಿದ್ದರೆ ಕಾರ್ಯ ಹದಗೆಡುತ್ತಿತ್ತು. ನೋವಾಳ ಮನೋವಿಕಾರ ಅಷ್ಟು ತೀವ್ರವಾಗಿತ್ತು. ಕುಥಬರ್ಟರು ಇದನ್ನರಿತರು.' ಅವರ ಮೈಯಲ್ಲಿ ಭೂತ ಸಂಚಾರ ವಾದಂತಾಯಿತು. 'ನೋವಾ' ಎನ್ನುತ್ತ ಅವರು ಎದ್ದು ಕುಳಿತರು. ನೋವಾ ಅಂದು ಬಿಕ್ಕಿ ಬಿಕ್ಕಿ ಅತ್ತು ಬೇಡಿದಳು. 'ತಡೆಯಲು ಸಾಧ್ಯವಿಲ್ಲ' ಎಂದು ಸಾರಿ ಸಾರಿ ಕೇಳಿದ್ದಳು. ವಿಜ್ಞಾನದ ಪಾಶವೀ ಶಕ್ತಿಯ ಮುಂದೆ ಅವಳ ಆಟ ನಡೆಯಲಿಲ್ಲ. ಕುಥಬರ್ಟರ ಎದೆ ಅಂದು ಕಲ್ಲಾಗಿತ್ತು. ನೋವಾಳನ್ನು ಪ್ರಯೋಗ ಶಾಲೆಯಿಂದ ಹೊರಕಳುಹಿಸಿ ಬಾಗಿಲು ಹಾಕಿದಾಗ ಅವರು ತಮ್ಮನ್ನು ತಾನೇ ಮರೆತಿದ್ದರು. ಯಾವುದೋ ಶಕ್ತಿ ಅವರನ್ನು ಕಾರ್ಯೋನ್ಮತ್ತರನ್ನಾಗಿ ಮಾಡಿತ್ತು. ಆ (ಇಡೀ) ರಾತ್ರಿ ನೋವಾಳು ಬಿಕ್ಕಿ ಬಿಕ್ಕಿ ಅಳುವುದು ಕುಥಬರ್ಟರಿಗೆ ಕೇಳುತ್ತಿತ್ತು. ಅಳು—ಮಧ್ಯೆ ಮಾತು—ಮತ್ತೆ ಅಳು ಎಲ್ಲಾ ಅವರ ಕದಡಿದ ಮನಸ್ಸಿಗೆ ಕೇಳುತ್ತಿತ್ತು. ಅಂದು ರಾತ್ರಿ ಅವರಿಗೆ ನಿದ್ದೆಯೇ ಬರಲಿಲ್ಲ. ಗೆಲಿಲಿಯೊ 'ಪೀಸಾ'ದ ಒಲೆದ ಗೋಪುರದಲ್ಲಿ ನಿಂತು ಪ್ರಯೋಗ ಮಾಡುತ್ತಿದ್ದ ಚಿತ್ರ ಅವರ ಮನದ ಮುಂದೆ ಹಾದು ಹೋಗುತ್ತಿತ್ತು.

ಕುಥಬರ್ಟರ ಕನಸೇನೋ ನನಸಾಯಿತು. ನೋವಾಳಿಗೆ ಹುಚ್ಚು ಹಿಡಿಯಿತು. ಅವರ ಸಿದ್ಧಾಂತ ಸತ್ಯವಾಯಿತು. ಆದರೆ....ಆದರೆ....? ಅವರ ಪ್ರೇಮದ ಕೊಲೆಯಾಯಿತು. ಕುಥಬರ್ಟರು ಅದಾಗಿ ಕೆಲವು ದಿನಗಳಲ್ಲೇ ತಮ್ಮ ಸಿದ್ಧಾಂತವನ್ನು- 'ಅತೃಪ್ತ ಅತಿ ಕಾಮ ಹುಚ್ಚಿಗೆ ಕಾರಣ' ಎಂಬುದನ್ನು ಬರೆದು ಪತ್ರಿಕೆಯಲ್ಲಿ ಪ್ರಕಟಿಸಿದರು. ಅವರ ಜೀವಮಾತ್ರ ಬಲು ನೊಂದಿತ್ತು. ಕೈಕೃತಿ ಮಾಡುವಾಗ ಮನಸ್ಸಿಗೆ ಏನೂ ಅನ್ನಿಸದು. ಘಟನೆಯಾದ ಮೇಲೆ, ಕೈಮೇಲೆ ಮರದ ತುಂಡು ಕುಸಿದು ಬಿದ್ದಾಗ 'ಅಯ್ಯೋ' ಎನ್ನುವದು ಮಾನವ ಸಹಜವಲ್ಲವೇ ? ನೋವಾಳ ಹುಚ್ಚು ಬಿಡಿಸಲು ಕುಥಬರ್ಟರು ಬಹುಪರಿಯಿಂದ ಯತ್ನಿಸಿದರು. ಪ್ರತಿ ರವಿವಾರವೂ ಚರ್ಚಿಗೆ ಹೋದಾಗ ಮೊಣಕಾಲೂರಿ, 'ದೇವರೆ, ನೋವಾಳನ್ನು ಸರಿಯಾಗಿ ಮಾಡು' ಎಂದು ದೈನ್ಯದಿಂದ ಕೇಳಿಕೊಂಡರು. ಸಮಯವಿದ್ದಾಗೆಲ್ಲ ನೋವಾಳೊಡನೆ ಗೇಲಿ ಮಾಡುವದು, ಮಾತಾಡುವದು, ಅವಳ ಬಳಿಯಲ್ಲೇ ಕುಳಿತುಕೊಳ್ಳುವದು—ಇವನ್ನೆಲ್ಲ ಮಾಡಿದರು. ನೋವಾಳಲ್ಲಿ ಮೊದಲಿದ್ದ ಅತಿ ಕಾಮನೆ ಈಗ ಇಲ್ಲವಾಗಿತ್ತು. ನೋವಾಳಿಗೆ ಈಗ ಹೆಚ್ಚು ಮಾತಿಲ್ಲ, ನಗೆಯಿಲ್ಲ; ಕೆಲಸದ ಮಧ್ಯೆ ಎಲ್ಲಾದರೂ ಕ್ಷೀಣವಾಗಿ ಅತ್ತುಬಿಡುತ್ತಿದ್ದಳು. ಮನುಷ್ಯರ ಗುರುತೂ ಹತ್ತುತ್ತಿದ್ದಿಲ್ಲ. ಹೆಚ್ಚಾಗಿ ರಸ್ತೆಯಲ್ಲಿ

ಸುಮ್ಮನೆ ತಿರುಗುವುದನ್ನು ಬಯಸುತ್ತಿದ್ದಳು. ಕುಥಬರ್ಟರು ಏನಾದರೂ ಪ್ರತಿ ಹೇಳಿದರೆ, ಮನಸ್ಸಿಗೆ ಬಂದಂತೆ ಬೈದುಬಿಡುತ್ತಿದ್ದಳು. ಕುಥಬರ್ಟರು ಕೈಲಾದ ಮಟ್ಟಿಗೆ ಅವಳು ಒಬ್ಬಳೇ ತಿರುಗಾಡಲು ಹೋಗದಂತೆ ಜಾಗ್ರತೆ ವಹಿಸುತ್ತಿದ್ದರು. ಅವಳ ಜೊತೆಗಿರಲೆಂದು ಒಬ್ಬ ಕೆಲಸದಾಕೆಯನ್ನು ನೇಮಿಸಿಕೊಂಡರು.

ಅದೊಂದು ದಿನ ಬಂತು. ಆಕಾಶದಲ್ಲಿ ಮೋಡ ಕವಿದಿತ್ತು. ಮಳೆ ಒಂದೇ ಸಮನೆ ಸುರಿಯುತ್ತಿತ್ತು. ಸೃಷ್ಟಿಯೇ ಮಹಾ ಶೋಕದಿಂದ ರೋದಿಸುತ್ತಿದೆಯೋ ಎಂಬಂತೆ ಭೋರೆಂದು ಮಳೆ. ಬೀದಿಯಲ್ಲಿ ಜನಸುಳಿವಿಲ್ಲ. ಕುಥಬರ್ಟರು ತಮ್ಮ ಪ್ರಯೋಗದ ಮನೆಯಿಂದ ನೋವಾಳನ್ನು ಕುರಿತು ಕೆಲಸದಾಕೆಯೊಡನೆ ವಿಚಾರಿಸಿದರು. ಇಬ್ಬರೂ ಕೂಡಿ ನೋವಾಳನ್ನು ಕುರಿತು ಮನೆಯಲ್ಲೆಲ್ಲ ಹುಡುಕಾಡಿದರು. ನೋವಾಳು ಇದ್ದಿಲ್ಲ. 'ಈ ಮಳೆಯಲ್ಲಿ ಎಲ್ಲಿ ಹೊರಗೆ ಹೋಗಿರಬಹುದೇ?' ಎನ್ನಿಸಿತು. ಹಾಗೆಯೇ ಮಧ್ಯಾಹ್ನವಾಗುತ್ತ ಬಂದಿತು. ನೋವಾಳು ಊಟದ ಹೊತ್ತಿನಲ್ಲಿ ಬಂದಳು. ಮೈಯೆಲ್ಲ ತೊಯ್ದಿತ್ತು. ತಲೆಯ ಕೂದಲಿನಿಂದ ನೀರು ಹನಿಹನಿಯಾಗಿ ಸೋರುತ್ತಿತ್ತು. ನೋಡುವವರಿಗೆ ವಿಕಾರವಾಗಿ ಕಾಣುತ್ತಿದ್ದಳು ನೋವಾ. ನೋವಾಳು ಮಾತ್ರ ಹಸನ್ಮುಖಿಯಾಗಿದ್ದಳು. ಅಂದು ತುಂಬಾ ನಕ್ಕಳು. ಎಲ್ಲಿಲ್ಲದ ಉಲ್ಲಾಸ ಅವಳಲ್ಲಿ ತೋರುತ್ತಿತ್ತು. ಇಡೀ ದಿನ ಕುಥಬರ್ಟರೊಡನೆ ಸರಸ ಸಲ್ಲಾಪಗೈದಳು. 'ಇವಳಿಗೆ ಹುಚ್ಚೇ?' ಎಂಬ ಶಂಕೆ ಅವಳನ್ನು ನೋಡಿದವರಿಗೆ ಬರುತ್ತಿತ್ತು. ಅಂದು ರಾತ್ರಿ ನೋವಾಳಿಗೆ ಕೆಮ್ಮು ಜ್ವರ ಸುರುವಾಯಿತು. ಡಾಕ್ಟರರು 'ನ್ಯುಮೋನಿಯಾ' ಎಂದು ಹೆಸರಿಟ್ಟರು. ಕುಥಬರ್ಟರ ಯತ್ನ ವಿಫಲವಾಯಿತು. ನೋವಾ ಬದುಕಲಿಲ್ಲ........

ಕುಥಬರ್ಟರು ಕಾಲನೊಡನೆ ಒಂದಾಗಿದ್ದರು. ಇಪ್ಪತ್ತು ವರ್ಷಗಳ ಹಿಂದಿನ ಮಾತಿದು ಎಂಬುದನ್ನು ಮರೆತರು. 'ನೋವಾ' ಎಂದರು, ಒಂದು ತೊಟ್ಟು ಕಣ್ಣೀರು ಉದುರಿತು. ಮತ್ತೆ ವಿಚಾರಗಳು ಸ್ಮೃತಿಪಟಲದಲ್ಲಿ ಮೂಡಿದವು.

* * * * * *

..........ಅವರ ಬಾಳಿನಲ್ಲಿ ಒಂದು ಅಂಕ ಮುಗಿಯಿತು. ದಿನಗಳು ಉರುಳಿದವು. ಕುಥಬರ್ಟರ ಗಾಯ ಮಾಸದಿದ್ದರೂ ನೋವು ಮೊದಲಿನಷ್ಟು ಇದ್ದಿಲ್ಲ. ದಿನ ಹೋದಂತೆ ಅವರಲ್ಲಿದ್ದ 'ವಿಜ್ಞಾನ ದಾಹ' ಹೆಚ್ಚುತ್ತ ಬಂದಿತ್ತು. ನೋವಾಳ ದುರಂತ ಮರಣ ಇದಕ್ಕೊಂದು ಪುಟ ಕೊಟ್ಟಿತ್ತು; 'ಹುಚ್ಚು' ಪ್ರಪಂಚದ ಒಂದು ಮೈಲಿ ಕಲ್ಲನ್ನು ಅವರು ಎಡವಿದ್ದರು. ಅದೇ ದಾರಿಯಲ್ಲಿ ಮುಂದೆ ತುಳಿಯಬೇಕೆಂಬ ಅವರ ಚಪಲ ದಿನಗಳೆದಂತೆ ಹೆಚ್ಚುತ್ತ ಬಂದಿತ್ತು. ಮನುಷ್ಯನಿಗೆ ಮೊದಲು ಒಂದು ದಾರಿ ತುಳಿಯುವುದು ಬಿಗಿ. ಒಮ್ಮೆ ಅದನ್ನು ತುಳಿದ ಮೇಲೆ ತುಳಿಯಬೇಕೆಂಬ ಚಪಲ ಹೆಚ್ಚುತ್ತದೆ. ಅವರ ಮನಸ್ಸು ಈ ಚಪಲತೆಯ ಬೆನ್ನು ಹತ್ತಿದಾಗಲೇ ಅವರ

ಮತ್ತು ಎಮಿಲಿಯ ಪ್ರಣಯ ಆರಂಭವಾಗಿ, ಮದುವೆಯಲ್ಲಿ ಕೊನೆಗೊಂಡದ್ದು; ಇಲ್ಲಿಂದ ಅವರ ಬಾಳಿನ ಎರಡನೇ ಅಂಕ ಸುರು....

ಎಮಿಲಿ ನೋವಾಳಂತೆ ರೂಪವತಿಯಲ್ಲ; ಹಳ್ಳಿಯವಳು ತಾರುಣ್ಯವನ್ನು ದಾಟಿ ಮೂವತ್ತರ ಹತ್ತಿರ ಬಂದಿದ್ದಳು. 'ಮದುವೆಯಾಗುವದಕ್ಕೆ ನಸೀಬು ಬೇಕು' ಎಂದು ತಿಳಿದ ಅನೇಕ ದುರ್ಭಾಗ್ಯ ಹುಡುಗಿಯರಲ್ಲಿ ಅವಳೂ ಒಬ್ಬಳಾಗಿದ್ದಳು. ಕುಥಬರ್ಟರನ್ನು, ಮೊದಲ ಸಲ, ಗ್ರೀನ್‌ವಿಚ್ಚಿನಲ್ಲಿ ಕಂಡಾಗಲೇ ಅವಳು ಮಣಿದಿದ್ದಳು. 'ಗಂಡ'ನೆಂಬವನಿಂದ ಹೆಚ್ಚೇನೂ ಅವಳು ಬಯಸಲಿಲ್ಲ. ಹಳ್ಳಿಯ ಅವಳ ಓರಗೆಯವರಿಗೆ 'ಇವನೇ ನನ್ನ ಗಂಡ' ಎಂದು ತೋರಿಸಲು ಒಬ್ಬನಾದರೆ ಆಯಿತು ಅವಳಿಗೆ. ಕುಥಬರ್ಟರಿಗೆ ಒಂಟಿ ಜೀವನ ಬೇಸರ ತಂದಿತ್ತು. ಸುಪ್ತವಾದ ವಿಜ್ಞಾನ ಹೆಣ್ಣಿನೊಡನೆ ಆಟವಾಡಲು ತವಕಿಸುತ್ತಿತ್ತು. ನೋವಾಳ ವಿಯೋಗದಿಂದ ಮಂಕುಗೆಟ್ಟ ಅವರ ಹೃದಯಕ್ಕೆ ಸೌಂದರ್ಯ ಬೇಕಾಗಿರಲಿಲ್ಲ; ಹೆಣ್ಣಾದರೆ ಆಗಿತ್ತು. ಮದುವೆಯಂತೂ ಜರುಗಿತು.......

ಕುಥಬರ್ಟರ ಸಂಶೋಧನೆಯ ಕಾರ್ಯ ಮೊದಲಿನಂತೇ ಸಾಗಿತ್ತು. ಅಲ್ಲಲ್ಲಿ 'ಹುಚ್ಚ'ರ ಕೇಂದ್ರಗಳಿಗೆ ಹೋಗಿ ಟಿಪ್ಪಣಿ ಬರೆದುಕೊಂಡು ಬರುತ್ತಿದ್ದರು. ಎಮಿಲಿಯ ಗೃಹಜೀವನ ಶಾಂತವಾಗಿ ಸಾಗಿತ್ತು. ಮನೆಯನ್ನು ಶಿಸ್ತುಗೊಳಿಸುವುದು, ಗಂಡನ ಮನಸ್ಸಿಗೆ ಹಿಡಿಸುವಂತೆ ಊಟ ಕಾಫಿಯನ್ನು ತಯಾರಿಸುವುದು—ಇದರಲ್ಲೇ ಅವಳ ದಿನ ಮುಗಿಯುತ್ತಿತ್ತು. ಹೆಚ್ಚು ತಿರುಗಾಡಲು ಹೊರಗೆ ಹೋಗಬೇಕೆಂಬ ಲವಲವಿಕೆಯೂ ಅವಳಲ್ಲಿದ್ದಿಲ್ಲ. ಬಾಲ್ಯದಿಂದಲೇ ಬಡತನದಲ್ಲಿ ಹಳ್ಳಿಯಲ್ಲಿ ಕಾಲ ಕಳೆದುದರಿಂದ ಕಷ್ಟ ಸಹಿಷ್ಣುತೆ ಸಹನ ಗುಣಗಳು ಅವಳಲ್ಲಿ ಮನೆಮಾಡಿದ್ದವು.

ಕುಥಬರ್ಟರ ಜೀವನ ಯಂತ್ರದಂತೆ ಸಾಗಿತ್ತು. ಎಮಿಲಿಯಲ್ಲಿ ಕ್ರಮೇಣ ಚಿಂತೆಗಾರಂಭವಾಯಿತು. ತಾಯ್ತನದ ಹಂಬಲ ಅವಳಲ್ಲಿ ತಲೆದೋರಿತು–ದಿನವೂ ಎದ್ದು ಅವಳು ತಾಯಿಕೋಳಿ ತನ್ನ ಮರಿಗಳನ್ನು ಕಟ್ಟಿಕೊಂಡು ತಿರುಗುವದನ್ನು ನೋಡುವಳು; ನೋಡಿದೊಡನೆ ಒಂದು ಆಸೆ ಮನದಲ್ಲಿ ಮೂಡುತ್ತಿತ್ತು. ತನ್ನ ಓರಗೆಯವರಿಗೆ ಮಕ್ಕಳು ಆದಾಗ ತನಗೆ ಇಲ್ಲದಿರುವುದು ಅವಳಿಗೆ ಚಿಂತೆಗೆ ಕಾರಣವಾಗಿತ್ತು. ಕುಥಬರ್ಟರಿಗೆ ಇದನ್ನರಿಯುವದು ತಡವಾಗಲಿಲ್ಲ. ಆದರೆ, ಅವರಿಗೆ ಮಾತ್ರ ಸಂಸಾರದ ಪಾಶ ಯಾಂತ್ರಿಕವಾಗಿತ್ತು; ನೋವಾಳ ನೆನಪು ಅವರ ಮನಸ್ಸನ್ನು ವ್ಯಥೆಗೊಳಿಸಿತ್ತು. ಅದನ್ನು ಅವರು ಮರೆಯಲಾರರು........

ಹೀಗಿರುವಾಗಲೇ ಅವರು 'ಯಾರ್ಕಶಾಯರ'ನಲ್ಲಿಯ ಅವಗ ಆಪ್ತರ ಮನೆಗೆ ಸಹಜ ಹೋಗಿದ್ದರು. ಮಾತು ಮಾತಿನಲ್ಲಿ, ನೆರೆಯಲ್ಲಿಯ ಒಬ್ಬ ಹುಚ್ಚಿಯ ಕತೆಯನ್ನು ಕೇಳಿದರು. ಮೀನುಗಾರನಿದ್ದ ಗಂಡ, ಮೀನು ಹಿಡಿಯಲು ಸಮುದ್ರಕ್ಕೆ

ಹೋದವನು ತಿರುಗಿ ಬರಲಿಲ್ಲದುದನ್ನು ಕಂಡ ಚೊಚ್ಚಲ ಬಸಿರ ಹೆಂಡತಿ, ಹೆತ್ತ ಮಗುವೂ ಬದುಕದಾದಾಗ, ಹುಚ್ಚಿಯಾಗಿದ್ದಳು. ಅದೆಲ್ಲೋ ಒಂದು ಪುಸ್ತಕದಲ್ಲಿ ಕುಥಬರ್ಟರು ಓದಿದ್ದರು.

'ಬಾಳಿನ ಗಿಡಕ್ಕೆ ಪ್ರೇಮ ಹೂ; ಹೂ ಹೋಗಿ ಮಿಡಿಯಾಗಿ ಹಣ್ಣು ದೊರೆತಾಗ ಮರಕ್ಕೆ ಮಲರು ಬಂದುದು ಸಾರ್ಥಕ; ಜನಜೀವನದಲ್ಲಿ ಒಲುಮೆ ಸಾಫಲ್ಯ ಹೊಂದುವದು ಸಂತಾನವಾದಾಗಲೇ. ಸ್ತ್ರೀಯ ಜೀವನದಲ್ಲಿ ಮಾತೃತ್ವದಷ್ಟು ಮಹತ್ವವಾದ ಘಟನೆ ಇನ್ನೊಂದಿಲ್ಲ....'

ತಟ್ಟನೆ ಡಾಕ್ಟರ ಕುಥಬರ್ಟರಿಗೆ ತಮ್ಮ ಎಮಿಲಿಯ ನೆನಪಾಯಿತು. ಕೆಲವು ದಿನಗಳ ಹಿಂದೆ, ಎಮಿಲಿಯು ತನ್ನ ಬಯಕೆಯನ್ನು ಗಂಡನಿಗೆ ಹೇಳಿದ್ದಳು, ಕಳೆದ ವರ್ಷ ಎಮಿಲಿಗೆ ಬಸಿರು ಬಂದಿದ್ದರೂ ಮಗು ಬದುಕಿರಲಿಲ್ಲ. ಯಾವುದೋ ಭೂತ ಅವರನ್ನು ಹಿಡಿದಂತಾಯಿತು; ಅವರ ಮನಸ್ಸಿನಲ್ಲಿ ಒಂದು ಸಿದ್ಧಾಂತವು ಹೊಳೆದಂತಾಯಿತು.

'ಅತೃಪ್ತವಾದ ಉತ್ಕಟ ಮಾತೃತ್ವ ಹೆಂಗಸಿನ ಹುಚ್ಚಿಗೆ ಕಾರಣವಾಗಬಹುದೇ?'

ಮನಸ್ಸು ಹುಚ್ಚೆದ್ದು ಕುಣಿಯುತ್ತಿತ್ತು. ಈ ಬಾರಿ, ಎಮಿಲಿಯನ್ನು ಬಲಿ ತೆಗೆದುಕೊಳ್ಳುವ ನಿರ್ಧಾರ ಮಾಡಿದರು. 'ಎಮಿಲಿ ಗರ್ಭಿಣಿಯಾಗಬೇಕು, ಮಗು ಬದುಕಕೂಡದು......' ವಿಜ್ಞಾನದ ಹುಳ ಅವರಲ್ಲಿಯ ಮಾನವತೆಯನ್ನು ಮರೆಸಿತ್ತು.

ಎಮಿಲಿ ಬಸಿರಿಯಾದಳು. ಆದರೆ ಗರ್ಭ ಉಳಿಯಲಿಲ್ಲ.

ಆರು ತಿಂಗಳಾಗಿತ್ತೋ ಇಲ್ಲವೋ ಅವಳು ಬಸಿರಿಯಾಗಿ, ಕುಥಬರ್ಟರು ಅವಳಿಗೆ ತಿಳಿಯದಂತೆ ಅವಳು ಕುಡಿಯುವ ಹಾಲಿನಲ್ಲಿ ಡಾಕ್ಟರರು ಕೊಟ್ಟ ಪುಡಿಯನ್ನು ಕದಡಿ ಇಡುತ್ತಿದ್ದರು. ಪಾಪ! ಎಮಿಲಿ ಕುಡಿಯುತ್ತಿದ್ದಳು. ಗರ್ಭ ಹಾಳಾದಂತೆ ಅವಳಲ್ಲಿ ತಾಯ್ತನದ ಹಂಬಲು ಹೆಚ್ಚುತ್ತಿತ್ತು. ಕುಥಬರ್ಟರು ಸೂಕ್ಷ್ಮವಾಗಿ ಅವಳ ಮನೋವಿಕಾರವನ್ನು ಬರೆದು ಇಟ್ಟುಕೊಳ್ಳುತ್ತಿದ್ದರು.

ಆ ಸಾರೆ—ಅಹುದು ಅದೇ ಕೊನೆಯ ಸಾರೆ—ಎಮಿಲಿ ತನ್ನ ಗರ್ಭದ ಬಗ್ಗೆ ತುಂಬಾ ಆಶೆ ಹಿಡಿದಿದ್ದಳು. ಆದರೆ ವಿಜ್ಞಾನಿಯ ಮುಂದೆ ಗರ್ಭ ಬದುಕಲಿಲ್ಲ. ಗರ್ಭಪಾತದೊಡನೆ ಅವಳಿಗೂ ತುಂಬಾ ಜ್ವರ ಬಂದಿತ್ತು; ಹಾಸಿಗೆ ಹಿಡಿದಿದ್ದಳು, ವೈಯಲ್ಲಿಯೂ ತುಂಬಾ ಆಸಕ್ತಿ; ಡಾಕ್ಟರರು ಗರ್ಭಕೋಶವನ್ನು ತೆಗೆಸುವುದು ಒಳ್ಳೆಯದೆಂದರು. ಕುಥಬರ್ಟರು 'ಹೂಂ' ಎಂದುಬಿಟ್ಟರು. ಎಮಿಲಿಗೆ ತಿಳಿಯದಂತೆಯೇ ಗರ್ಭಕೋಶವನ್ನು ಹೊರಗೆ ತೆಗೆಯಿಸಲಾಯಿತು.

ಎಮಿಲಿಯು ಎದ್ದು ಓಡಾಡುತ್ತಿದ್ದಳು. ಮತ್ತೆ ಗರ್ಭದ ಆಶೆ ಅವಳಲ್ಲಿ ಚಿಗುರುತ್ತಿದ್ದಿರಬೇಕು. ಪಾಪ! ಅವಳಿಗೇನು ಗೊತ್ತು! ಒಂದು ರವಿವಾರ ಅವಳೊಬ್ಬಳೇ

ಇಗರ್ಜಿಗೆ ಹೋಗಿದ್ದಳು. ಅಲ್ಲಿ ಅವಳಿಗೆ ಶಸ್ತ್ರಕ್ರಿಯೆ ನಡೆಸಿದ ವೈದ್ಯರ ದರ್ಶನ ವಾಯಿತು.

'ಹೇಗಿದೆಯಮ್ಮಾ ಗರ್ಭಕೋಶ ತೆಗೆದ ಮೇಲೆ?' ಎಂದು ಡಾಕ್ಟರರು ಸಹಜ ಪ್ರಶ್ನಿಸಿಬಿಟ್ಟರಂತೆ. ಎಮಿಲಿಗೆ ಆಕಾಶವೇ ತಲೆಯ ಮೇಲೆ ಕಡಿದುಬಿದ್ದಂತಾಯಿತು. ಅವಳಿಗೆ ಗೂಢ ತಿಳಿಯಿತು. ಪ್ರಾರ್ಥನೆ ಮುಗಿಯಬೇಕಾದರೇ ಮನೆಗೆ ಓಡುತ್ತ ಬಂದಿದ್ದಳು. ಕುಥಬರ್ಟರ ಪ್ರಯೋಗ ಶಾಲೆಗೆ ನೇರವಾಗಿ ಬಂದು ಬಿಕ್ಕುತ್ತ ಬಿಕ್ಕುತ್ತ ಎಲ್ಲವನ್ನೂ ಹೇಳಿದಳು. ಮಹಾಪೂರ ಬಂದಾಗ ನದಿಯು ಒಡ್ಡು ಕಡಿದು ಹರಿಯು ವಂತೆ, ಎಮಿಲಿಯ ಮನಃಸ್ಥಿತಿಯಾಗಿತ್ತು. ಬಹುದಿನದ ತಾಯ್ತನದ ಹಂಬಲ ಇಂದು ದಿಕ್ಕುಗೆಟ್ಟಿತ್ತು. ಅವಳ ಹೃದಯವೇ ಉಕ್ಕುತ್ತಿತ್ತು. ಅಂದಿನಿಂದ ಎಮಿಲಿಯ ವರ್ತನೆ ವಿಚಿತ್ರವಾಯಿತು........

ಕೇಳಿದ್ದಕ್ಕೆ ಸರಿಯಾಗಿ ಉತ್ತರವನ್ನೇ ಕೊಡುತ್ತಿರಲಿಲ್ಲ. ಕೆಲಸ ಸರಿಯಾಗಿ ಮಾಡಿದರೆ ಮಾಡಿದಳು, ಇಲ್ಲದಿದ್ದರೆ ಇಲ್ಲ. ಗೋಡೆಗಳೊಡನೆ ಮಾತು, ಶೂನ್ಯದೊಡನೆ ಸಂಭಾಷಣೆ-ಎಲ್ಲವನ್ನೂ ನಡೆಸಿದ್ದಳು. ತಿಂಗಳು ಕಳೆಯುವದರೊಳಗಾಗಿ ಎಮಿಲಿ 'ಹುಚ್ಚಿ' ಎನಿಸಿಕೊಂಡಳು.

ಕುಥಬರ್ಟರು ಮಾನಸಶಾಸ್ತ್ರದಲ್ಲಿ ಇನ್ನೊಂದು ಅಡಿ ಮುಂದೆ ಹೋಗಿದ್ದರು. ಅವರ ಸಿದ್ಧಾಂತಕ್ಕೆ ಬಲ ದೊರೆತಿತ್ತು. ಆದರೆ ಪತ್ನಿಯನ್ನು ಬಲಿತೆತ್ತಿದ್ದರು.

ಕಾರ್ಯ ಸಾಧನೆಯಾದ ಮೇಲೆ, ಕುಥಬರ್ಟರು ಎಮಿಲಿಯ ಮನಸ್ಸನ್ನು ತಿರುಗಿಸಲು ತುಂಬಾ ಯತ್ನಿಸಿದರು. ಆದರೆ ನಿಷ್ಫಲವಾಯಿತು.

ಬೀದಿಯ ಮಕ್ಕಳನ್ನು ಎತ್ತಿತಂದು ಕೋಣೆಯಲ್ಲಿ ಕೂರಿಸಿಕೊಳ್ಳುತ್ತಿದ್ದಳು. ಆ ಮಕ್ಕಳನ್ನು ಮುದ್ದಿಡುತ್ತಿದ್ದಳು. ಆ ಮಕ್ಕಳು ಭಯದಿಂದ ಕೂಗುತ್ತಿದ್ದವು. ಎಮಿಲಿ ಬಹುದಿನ ಬಾಳಲಿಲ್ಲ. ಒಂದು ದಿನ ಥೇಮ್ಸನದಿಗೆ ವಿಹಾರಕ್ಕೆಂದು ಹೋದವಳು ಕಾಲುಜಾರಿ ಅಲ್ಲಿಯೇ ಮುಳುಗಿದಳು........

ಕುಥಬರ್ಟರ ಜೀವನದಲ್ಲಿ ಎರಡು ಅಂಕಗಳು ಮುಗಿದಿದ್ದವು. ಅವರು ಇಪ್ಪತ್ತೊಂದು ವರ್ಷಗಳ ಪರಿಶ್ರಮದಿಂದ ಹುಚ್ಚಿನ ಬಗ್ಗೆ ಒಂದು ನೆಲೆಯನ್ನು ಮುಟ್ಟಿದ್ದರು.

ಕಳೆದ ಐದು ವರ್ಷಗಳ ಬಾಳು ಕುಥಬರ್ಟರ ಕಣ್ಣುಮುಂದೆ ನಿಂತಿತು. ಒಂಟಿ ಜೀವನದಿಂದ ಕಾಲ ಕಳೆದಿದ್ದರು. ಮೈಯಲ್ಲಿ ಮೊದಲಿನ ಚೇತನವಿದ್ದಿಲ್ಲ. ಮುಖವೂ ನೆರಿಗೊಳಿಸಿತ್ತು. ತಮಗೂ ಮುಪ್ಪು ಓಡಿಬರುತ್ತಿದ್ದುದರ ಅರಿವೂ

ಅವರಿಗಾಗುತ್ತಿತ್ತು. ಆದಷ್ಟು ಬೇಗ ತಮ್ಮ ಸಿದ್ಧಾಂತಗಳನ್ನು ಪೂರೈಸಬೇಕೆಂದು ಅವರು ಕಾರ್ಯತತ್ಪರರಾಗಿದ್ದರು. ಇಂಗ್ಲೆಂಡಿನ ಅನೇಕ ಹುಚ್ಚರ ಆಲಯಗಳನ್ನು ಅವರು ಸಂದರ್ಶಿಸಿದ್ದರು. ಹುಚ್ಚರ ಆಪ್ತರಿಂದ ಹುಚ್ಚಿನ ಕಾರಣವನ್ನು ಕೇಳಿ ತಿಳಿಯುತ್ತಿದ್ದರು. ಇತ್ತೀಚೆಗೆ ಅವರ ಎದೆ ಕಲ್ಲಿಗೂ ಕಠಿಣವಾಗಿತ್ತು. ಹುಚ್ಚೆಂಬುದು ತೀರ ಸಾಮಾನ್ಯವಾಗಿತ್ತು ಅವರಿಗೆ; ಹುಚ್ಚು ನಾಯಿ, ಹುಚ್ಚು ಮನುಷ್ಯರನ್ನು ಕಾಣುವದರಲ್ಲಿಯೇ ಅವರಿಗೆ ತುಂಬಾ ಇಷ್ಟವಾಗುತ್ತ ಬಂದಿತ್ತು. ಎರಡು ವರ್ಷಗಳ ಹಿಂದಿನ ಮಾತು:

ಅವರ ಮನೆಗೆ 'ಎಡಿನ್‌ಬರೋ'ದ ಒಬ್ಬ ಡಾಕ್ಟರರು ಬಂದಿದ್ದರು. ಹುಚ್ಚಿನ ಬಗ್ಗೆ ಆಡುತ್ತಾ ಆಡುತ್ತಾ, ಅವರು ಒಬ್ಬ ಹುಚ್ಚನ ಸುದ್ದಿಯನ್ನು ಪ್ರಸ್ತಾಪಿಸಿದ್ದರು. 'ಅವನು ತೀರ ದರಿದ್ರನಿದ್ದನಂತೆ; ಎಡಿನ್‌ಬರೋದ ಸುಪ್ರಸಿದ್ಧ ಧನಿಕರಾದ ಮ್ಯಾಕ್ಸವೆಲ್ಲರ ಮನೆಯಲ್ಲಿ ಒಂದು ಮದುವೆಯ ಸಮಾರಂಭದಲ್ಲಿ ಬಂದ ಅತಿಥಿಗಳೆಲ್ಲ ಸಂತಸದಿಂದ ಮೃಷ್ಟಾನ್ನವನ್ನು ಉಣ್ಣುವದನ್ನು ಕಂಡು ಹೊಟ್ಟೆ ತಳಮಳಿಸಿತಂತೆ. ಅಲ್ಲಿಯೇ ಅವನಿಗೆ ಹುಚ್ಚು ಹಿಡಿಯಿತು....'

ಅದೇ ವಿಚಾರ ಕುಥಬರ್ಟರ ಮನದಲ್ಲಿ ಹೊಳೆಯುತ್ತಿತ್ತು. 'ಪ್ರಯೋಗ ಮಾಡಿ ನೋಡೋಣ' ಎನ್ನಿಸಿತು ಅವರಿಗೆ. ಆದಾಗಿ ೪-೫ ದಿನಗಳಲ್ಲಿಯೇ ಕುಥಬರ್ಟರ ಮನೆಯಲ್ಲಿ ಮಹಾ ಔತಣ. ಪ್ರಯೋಗಕ್ಕೆಂದು ಒಬ್ಬ ತೀರ ದರಿದ್ರ ನೆನಿಸಿದ ಬಡವನನ್ನು ಆರಿಸಲಾಗಿತ್ತು. ಕಣ್ಣು ಗುಳಿ ಬಿದ್ದಿದ್ದವು. ಗಡ್ಡ ಮುಖದಲ್ಲಿ ನೆರೆದಿತ್ತು. ಬೆನ್ನು ಬಾಗಿತ್ತು; ಸರಿಯಾಗಿ ಊಟ ಕಾಣದೆ, ಲಂಡನ್ನಿನ ಬೀದಿಯಲ್ಲಿ ತಿರುಪೆ ಬೇಡುತ್ತಿದ್ದ.

ಕುಥಬರ್ಟರ ಮನೆಯಲ್ಲಿ ಊಟ ನಡೆದಿತ್ತು. ಆ ತಿರುಕನನ್ನು ಒಳಗೆ ಬಿಡಲಾಯಿತು. ಎಲ್ಲರೂ ತಿನ್ನುವದನ್ನು ಅವನು ಕಂಡ; ತನ್ನ ಕಣ್ಣನ್ನೇ ತಾನು ನಂಬ ದಾದ ಅವನು ಓಡುತ್ತ ಮೇಜಿನ ಹತ್ತಿರ ಬಂದ. ಕುಥಬರ್ಟರು ಒಳ್ಳೇ ನಗುತ್ತ ಅವನಿಗೆ ಕೈತುತ್ತನ್ನು ತೋರಿಸುತ್ತ ಬಾಯಿಗೆ ಹಾಕಿಕೊಳ್ಳುತ್ತಿದ್ದರು. ಕುಥಬರ್ಟರ ಆಳು ತಿರುಕನ ಕೈಗಳನ್ನು ಕಟ್ಟಿ ಹಿಡಿದಿದ್ದನು. ಅತಿಥಿಗಳೆಲ್ಲರೂ ಮೊದಲೇ ಮಾತ ನಾಡಿಕೊಂಡಂತೆ — ಬೌಳಿಸುತ್ತ ಬೌಳಿಸುತ್ತ ತಮ್ಮ ಪಾಲಿನ ಬುತ್ತಿಯನ್ನು ತಿಂದರು.

ಊಟ ಮುಗಿದಾಗ ತಿರುಕನಿಗೆ ತಲೆ ಕೆಟ್ಟಿತ್ತು. ಬಿಕ್ಕಿ ಬಿಕ್ಕಿ ರೋದಿಸುತ್ತಿದ್ದ. ಇಡೀ ದೇಹವೇ ಕಂಪಿಸುತ್ತಿತ್ತು. ಪಾಶವೀವೃತ್ತಿಯಿಂದ ಅವನನ್ನು ಹೊರತಳ್ಳ ಲಾಯಿತು. ಬಂದ ಅತಿಥಿಗಳೆಲ್ಲರಿಗೂ ದುಡ್ಡು ಕೊಟ್ಟು ಕುಥಬರ್ಟರು ಪ್ರಯೋಗ

ವನ್ನು ತುಂಬಾ ಯಶಸ್ಸಿನಿಂದ ಮುಗಿಸಿದರು—ಇದೇ ಮಾನಸಶಾಸ್ತ್ರದಲ್ಲಿ ಅವರು ಮುಟ್ಟಿದ ಮೂರನೆಯ ಸಿದ್ಧಾಂತ.

ಈ ಮೂರು ಸಿದ್ಧಾಂತಗಳನ್ನೂ, ಅವುಗಳ ವಿವರಣೆಯನ್ನೂ, ತಾವು ಇಪ್ಪತ್ತು ಇಪ್ಪತ್ತೈದು ವರ್ಷಗಳಿಂದ ಕಂಡು, ಕೇಳಿದ ಹುಚ್ಚಿನಕ್ರಮ, ವೈವಿಧ್ಯಗಳನ್ನೆಲ್ಲಾ ಒಟ್ಟುಗೂಡಿಸಿ ಪುಸ್ತಕ ಪ್ರಕಟಿಸಿದ್ದರು. ಅದಕ್ಕೆ ರಾಕ್‌ಫೆಲ್ಲರ್ ಬಹುಮಾನ ದೊರೆತಿತ್ತು....

*　　*　　*　　*

ಕುಥಬರ್ಟರಿಗೆ ಎದೆ ಡಬ್-ಡಬ್ ಹಾರುತ್ತಿತ್ತು. ರಕ್ತದ ಒತ್ತಡ ಹೆಚ್ಚಿದಂತಿತ್ತು. ಗಡಿಯಾರ ಆಗಲೇ ಎರಡು ಗಂಟೆಯನ್ನು ತೋರಿಸಿ ಮುಂದೆ ಮುಂದೆ ಓಡುತ್ತಿತ್ತು. ಕುಥಬರ್ಟರಿಗೆ ತಮ್ಮ ಗತಜೀವನದ ಹೇಸಿಗೆಯ ಜೀವನದಿಂದ ಮನಸ್ಸೆಲ್ಲಾ ವ್ಯಗ್ರವಾಗಿತ್ತು.

ತಮಗಿಂದು ಅಪೂರ್ವ ವಿಜಯ........ಆನಂದ........ಆದರೆ........ಆದರೆ....? ಅವರ ಹೃದಯದಲ್ಲಿ ಮುಳ್ಳೊಂದು ಚುಚ್ಚುತ್ತಿತ್ತು. ಕೈಗಳು ಮೆಲ್ಲನೆ ಮುಂದಿದ್ದ 'ರಾಕ್‌ಫೆಲ್ಲರ' ಪುಸ್ತಕದ ಮೊದಲ ಪಾನನ್ನು ತೆರೆದವು :

'ನನ್ನ ಗತಿಸಿದ ಮುದ್ದು—ನೋವಾ, ಎಮಿಲಿಯರಿಗೆ—' ಎಂದು ದಪ್ಪಕ್ಷರಗಳಲ್ಲಿ ಪ್ರಕಟವಾಗಿತ್ತು. ಅವರಿಗೆ ಒಂದು ಬಗೆಯ ನಿರಾಶೆ, ನೀರವತೆ ಮೈಯನ್ನು ಮುತ್ತಿದವು. ಪ್ರಕೃತಿಯೊಡನೆ, ಬಾಹ್ಯ ಜಗತ್ತಿನೊಡನೆ ಅನೇಕ ವರುಷಗಳ ಹೋರಾಟದ ನಂತರ, ಬಾಹ್ಯ ಪ್ರಪಂಚ ಬದಲಾಗದಿರಲು, ವೃಕ್ಷಗಳೆಲ್ಲ ಎಂದಿನಂತೆ ಪೂತು ಪರಿಮಳಿಸುತ್ತಿರಲು, ನಿರಭ್ರವಾದ ಆಕಾಶದಲ್ಲಿ ಎಂದಿನಂತೆ ಚಂದ್ರಮ ಥಳಥಳಿಸುತ್ತಿರಲು, " ಅಯ್ಯೋ, ನಾನೊಬ್ಬನೇ ಸುಮ್ಮನೆ ಶ್ರಮಿಸುತ್ತಿರುವೆನಲ್ಲಾ ; ಜಗತ್ತಿಗೆ ಸುಖ, ನನಗೆಲ್ಲಿಯ ಸುಖ ?........' ಎಂದು ಮಾನವನನ್ನು ಮುತ್ತುವ ನಿರಾಶಾವಾದವದು. ತನ್ನ ಕೃತಿಯೆಲ್ಲ ಆಗ ಕಣ್ಣಿಗೆ ಕಾಣದೆ, ಮಾನವ ಸೋತೆನೆಂದು ಹಳಹಳಿಸುತ್ತಾನೆ. ಕುಥಬರ್ಟರಿಗೆ ಜಗತ್ತು ತಮ್ಮಿಂದ ಬಹು ದೂರ ಹೋದಂತೆ ಅನ್ನಿಸಿತು. ತಮ್ಮ ತಲೆಯ ಮೇಲ್ಗಡೆ, ಎಮಿಲಿ, ನೋವಾ ಸಕ್ಕಂತಾಯಿತು. ಅವರು ತಮ್ಮ ಬಾಳಿನ ಹೀನತೆಯನ್ನು ಎಣಿಸಿದರು.

ಸುಖವೆಂಬುದನ್ನು ಅವರು ಅರಿಯಲಿಲ್ಲ. ನಿಸರ್ಗದಲ್ಲಿಯ ವಸಂತಮಾಸ, ಚೈತ್ರಮಾಸ, ಶಿಶಿರ ಋತು—ಒಂದರ ಹಿಂದೊಂದು ಬರುತ್ತಿದ್ದವು. ಹಕ್ಕಿ ಹಾರಾಡುತ್ತಿದ್ದವು ; ಆಹಾ ! ಆ ಬೆಳುದಿಂಗಳಲ್ಲಿ ಬೆಳ್ಳಿಯ ಸಮುದ್ರ ಎಂತು ನರ್ತಿಸುತ್ತಿತ್ತು! ಸೂರ್ಯಾಸ್ತ—ಸೂರ್ಯೋದಯದ ನಿಸರ್ಗದ ರಮ್ಯ ಚಿನ್ನಾಟ ನಿತ್ಯ ನೂತನತೆಯಿಂದ

ಸಾಗುತ್ತಿತ್ತು. ಆದರೆ ಕುಥಬರ್ಟರ ಪಾಲಿಗೆ ಯಾವುದೂ ಇಲ್ಲ. ಕಣ್ಣಿದ್ದೂ ಅವರು ಕುರುಡರು. ಕಿವಿಯಿದ್ದೂ ಕಿವುಡರು. ಇಪ್ಪತ್ತೈದು ವರ್ಷಗಳ ಜೀವನವನ್ನು ಈ ನಾಲ್ಕು ಗೋಡೆಗಳೊಳಗೆ ಕಳೆದಿದ್ದರು! ಬಾಳೆಲ್ಲಾ ಎಲ್ಲೆಲ್ಲೂ ಭಣಭಣ; ಎರಡು ಪ್ರೇಮ ಪುತ್ಥಳಿಗಳನ್ನು ಚೆಲ್ಲಿಕೊಟ್ಟಿದ್ದರು. ಇಂದು ಮನೆಯನ್ನೂ ಮನವನ್ನೂ ಹಿಡಿಸಬಹುದಾದ ತಮ್ಮ ಮಕ್ಕಳನ್ನು ಹುಟ್ಟಿನಲ್ಲಿಯೇ ಕೊಂದಿದ್ದರು. ಯಾಕೆ? ಯಾಕೆ? ವಿಜ್ಞಾನದ ದಾಹ. ವಿಜ್ಞಾನದ ಸೇಡು! ಅವರಿಗೆ ಕಣ್ಣಿಗೆ ಕತ್ತಲು ಬಂದಂತಾಯಿತು. ದೇಹವನ್ನೇ ಮಾನಸಶಾಸ್ತ್ರಕ್ಕೆ ನೀರೆರೆದಿದ್ದರು. ಇಂದು ತಮ್ಮ ಗುರಿಯನ್ನೂ ಮುಟ್ಟಿದ್ದರು. ಇನ್ನು ಅವರಿಗೆ ಬದುಕಿನಲ್ಲಿ ರಸ ತೋರಲಿಲ್ಲ. ತನ್ನ ಬಾಳು ವ್ಯರ್ಥ ಎನ್ನಿಸಿತು. ತನ್ನ ಸಂತಸದ ಮಂಟಪ, ಕೀರ್ತಿಯ ಮಂದಿರ ತನ್ನ ಪತ್ನಿಯರ ಮೂಕ ಅಳಲಿನ ಬೆನ್ನಮೇಲೆ ಎದ್ದಿದೆ. ಬಾಳೆಂದರೆ ಹೀಗೆಯೇ; ಹಿಗ್ಗಿನ ಹಿನ್ನೆಲೆಯಲ್ಲಿ ನೋವಿದೆ; ಬೆಳಕಿದ್ದೆಡೆ ಕತ್ತಲೆ ಇದೆ........ ಅವರೆಲ್ಲೋ ಓದಿದ್ದರು :

' ಹೊನ್ನ ಹೊಗರಿನ ಹಿಂದೆ ಅಡಗಿದೆ ಬನ್ನ ಬವರದ ಬಂಧನ
ಜೀವ ಜಾಜಿಯ ಹಿಂದೆ ಹೂತಿದೆ ಸೂಜಿ ಮುಳ್ಳಿನ ಕುಂದಣ.'

ಕುಥಬರ್ಟರಿಗೆ ತನ್ನ ಸುತ್ತು ಕತ್ತಲೆ ಕವಿದಂತಾಯಿತು. ಸುತ್ತೆಲ್ಲಾ ನೋವಾ, ಎಮಿಲಿ ಮೊಳಕೆಯಲ್ಲೇ ಕಮರಿದ ತನ್ನ ಕುವರರು....ಆ—ಆ....ಅಹುದು ಅದೇ ಆ ಗುಳಿಬಿದ್ದ ಕಣ್ಣಿನ ತಿರುಕ....ಎಲ್ಲರೂ ಕುಳಿತಂತಾಯಿತು........

'ಅಹುದು, ನಾನಪರಾಧಿ, ನೀವು ಅಳುವಾಗ ನಾನು ನಗುತ್ತಿದ್ದೇನೆ! ಇಲ್ಲ.... ಬಂದೆ........ಬಂದೆ. ತಡೆಯಿರಿ, ಬಂದೆ........' ಕುಥಬರ್ಟರು ಧಡಲ್ಲನೆ ಕಪಾಟಿನ ಬಾಗಿಲನ್ನು ತೆರೆದರು. ಎದುರಿನಲ್ಲೇ ಆ ಹರಿತವಾದ ಚೂರಿ, ವಿದ್ಯುತ್ ಪ್ರಕಾಶಕ್ಕೆ ಮಿನುಗುತ್ತಿತ್ತು. ಏನು ಮಾಡುತ್ತಿದ್ದೇನೆಂಬ ಪರಿವೆಯಿಲ್ಲದೆಯೇ ಅದಕ್ಕೆ ಕೈ ಹಾಕಿದರು. ನೋವಾ ಎದುರು ಬಂದಂತಾಯಿತು—ಅವಳು ಅಣಕಿಸಿದಳು—ಎಮಿಲಿ ಬಂದು....'ಹಿಂದು ಮುಂದೆ ಯಾಕೆ ನೋಡುವಿರಿ....? ಧೈರ್ಯವಿದ್ದರೆ....ಬನ್ನಿ....' ಎಂದಳು. ಕಾಲಲ್ಲಿ ಗೆಜ್ಜೆ ಕಟ್ಟಿದ ಸಣ್ಣ ಸಣ್ಣ ಮಕ್ಕಳು ಪುಟ್ಟ ಪುಟ್ಟ ಹೆಜ್ಜೆಯಿಟ್ಟು ತೊದಲಲ್ಲಿ "ಪ್ಪಾ ಪ್ಪಾ" ಎಂದವು.

ಅಹುದು ಅದೇ....ಅದೇ....ಆ ಮನುಷ್ಯ....ಗುಳಿಬಿದ್ದ ಕಣ್ಣಿನ ತಿರುಕ........ ಅಲ್ಲ ಅಲ್ಲ....ಕಾಲ ಕರಾಳ ಮೃತ್ಯು....ಕುತ್ತಿಗೆಗೆ ಕೈಹಾಕಿದಂತಾಯಿತು.

ಕುಥಬರ್ಟರಿಗೆ ತಲೆ ತಿರುಗಿದಂತಾಯಿತು. ರಕ್ತ ಜೋರಿನಿಂದ ಹಾರುತ್ತಿತ್ತು. ಆವೇಶದಿಂದ ಚೂರಿಯನ್ನು ಎದೆಗೆ ಹಾಕಿಕೊಂಡರು........'ನೋವಾ' ಎನ್ನುತ್ತ ದೊಪ್ಪನೆ ಬಿದ್ದುಬಿಟ್ಟರು. ರಕ್ತ ಚಿಮ್ಮನೆ ಮಾರೆತ್ತರ ಹಾರಿ, ಗೋಡೆಯುಲ್ಲಿದ್ದ ನೋವಾ—ಎಮಿಲಿಯರ ಫೋಟೋಗಳನ್ನು ತೊಯ್ಸಿತ್ತು. ಎಲ್ಲವೂ ಮಿಂಚಿನಂತೆ ಮೂಡಿ ಮಾಯವಾಗಿತ್ತು............

*　　*　　*　　*

ಮಾನಸ ಶಾಸ್ತ್ರದಲ್ಲಿ 'ಹುಚ್ಚು' ಪ್ರಕರಣದಲ್ಲಿ ಡಾ॥ ಕುಥಬರ್ಟರ ಹೆಸರು ಚಿರಸ್ಥಾಯಿಯಾಗಿದೆ. ಅವರ ಹೆಸರೊಂದು ಧ್ರುವತಾರೆ ! ಆದರೆ ಅವರ ದುರಂತ ಮೃತ್ಯು—ಅದೂ ಅವರ ಅತಿ ಸಂತಸದ ದಿನ—ಮಾತ್ರ ಮಾನಸಶಾಸ್ತ್ರಕ್ಕೆ ನಿಲುಕದ, ಬಗೆ ಹರಿಯದ ಗೂಢವಾಗಿ ನಿಂತಿದೆ.

'To be great, one must be dumb and deaf......'

—Un Grand Patron.

—ನಾರಂಗಿ ಭಟ್ಟ.

# ರೇವು

'ಆಚೇ ಬೀದಿಯ ಮದುವೆ ಮನೆಯ ಬ್ಯಾಂಡನ್ನು ಕೇಳುವುದಕ್ಕೆ ಎರಡುಕಿವಿ ಸಾಲದು' ಎಂಬುದು ಮುತ್ತಳ್ಳಿಯವರೆಲ್ಲರ ಅಭಿಪ್ರಾಯವಾಗಿದ್ದರೂ ದೇವಣ್ಣನಿಗೆ ಅದು ಕರ್ಣಕಠೋರವಾಗಿತ್ತು. ಅವನ ಮನಸ್ಸಿಗೆ ಈ ಎರಡು ಮೂರು ದಿನಗಳಿಂದ ಬಹಳ ಕಷ್ಟ ಬಂದೊದಗಿತ್ತು. ಈ ದಿನವೂ ಬರುವುದೆಂದು ಅವನು ಭಾವಿಸಿಯೇ ಇರಲಿಲ್ಲ. ಆದರೆ ಬಂದಿತು. ದೇವಣ್ಣನ ಹೆಂಡತಿ, ತಾಯಿ, ಎಲ್ಲರೂ ಮದುವೆ ಮನೆಗೆ ಹೋಗಿದ್ದರು. ಆದರೆ ದೇವಣ್ಣ ಪಟಾರಿಯ ಮೇಲೆ ಕಂಬಳಿ ಹಾಸಿ ಏನೋ ಯೋಚನೆ ಮಾಡುತ್ತಾ ಮಲಗಿಬಿಟ್ಟಿದ್ದನು. ಪದ್ಧತಿಯಂತೆ ಮದುವೆ ಮನೆಯವರು ಪದೇಪದೇ ಬಂದು 'ಇದ್ಯಾಕಣ್ಣ ! ನೆಂಟ್ನಾ ನೀನು ? ನೀರಿಸ್ಕೋ ಬಾ !' ಎಂದು ಕರೆದು ಹೋಗುತ್ತಿದ್ದರು.

ನೀಲಿ ಮದುವೆ ಮನೆಯ 'ನೀರಿಸ್ಕೋಳಕ್ಕೆ' ದೇವಣ್ಣನಿಗೆ ಒಗ್ಗಲಿಲ್ಲ. ಇನ್ನು ಇದ್ದರೆ ಬಂದು ಬಲವಂತ ಮಾಡುವರೆಂದು ಮನೆಯಿಂದೆದ್ದು ರಾಯರ ತೋಟಕ್ಕೆ ಹೋಗಿ ನೇರಲೇ ಮರದ ಕೆಳಗೆ ಮಲಗಿಬಿಟ್ಟನು. ಮಲಗಿದ್ದೇನೋ ಆಯಿತು. ಆದರೆ ತಕ್ಷಣ ಅವನಿಗೆ ಆ ಮರದ ಕೆಳಗೆ ಮಲಗಿದ್ದೂ ತಪ್ಪೆನಿಸಿತು. ಆ ಹಾಳು ನೇರಲೇ ಮರ ಹಿಂದಿನ ನೆನಪುಗಳನ್ನೆಲ್ಲಾ ಕೆರಳಿಸುತ್ತಿತ್ತು. ಏಳಲಾರದ ಸೋಮಾರಿ ತನಕ್ಕೆ ದೇವಣ್ಣ ಅಲ್ಲೇ ಬಿದ್ದಿದ್ದನು.

ತನ್ನ ತಪ್ಪೇನೂ ಇಲ್ಲವೆನ್ನುವಂತೆ ಮರವು ತನ್ನ ಅಗಾಧ ಶರೀರವನ್ನು ತೂಗಿಸು ತ್ತಿತ್ತು. ದೇವಣ್ಣನಿಗೆ ನಿದ್ರೆ ಬಂದಂತಾಯಿತು. ನೇರಲೆ ಹೂವುಗಳು, ಒತ್ತರಿಸಿ ಬರು ತ್ತಿರುವ ಕಾಯಿಗಳ ಕಾಟವನ್ನು ತಡೆಯಲಾರದೆ ಬಳಬಳನೆ ಉದುರುತ್ತಿದ್ದುವು. ಹಾಗೆಯೇ ಒಂದು ಜೊಂಪೆ ದೇವಣ್ಣನಮೇಲೂ ಚೆಲ್ಲಿಕೊಂಡುವು. ದೇವಣ್ಣ ಎಚ್ಚೆತ್ತವ ನಂತೆ ಕಣ್ಣುಗಳನ್ನು ಅರೆತೆರೆದು ಅಂಚಿನಿಂದ ಕೆಲವು ಕಿರಣಗಳನ್ನೋಡಿಸಿದನು. ಅದೇ ಮರದ ರೆಂಬೆಯೊಂದನ್ನು ಜಗ್ಗಿಸುತ್ತಾ ನೀಲಿ ಕಿಲಕಿಲನೆ ನಗುತ್ತ ನಿಂತಿದ್ದಳು. ದೇವಣ್ಣನಿಗೆ ಅತ್ಯಾಶ್ಚರ್ಯವಾಯಿತು.

'ಇದೇನಾ ನೀಲಿ ಇಲ್ಲಿದ್ದಯಿ ?' ಎಂದನು.

'ಬ್ಯಾಡ್ದಾ?' ಎಂದು ನೀಲಿ ಪುನಃ ನಕ್ಕಳು.

ದೇವಣ್ಣನಿಗೆ ಅವಳನ್ನು ನೋಡಿ ಹುಚ್ಚು ಹಿಡಿದಂತಾಯಿತು.

'ಹಂಗಲ್ಲ ನೀಲಿ. ಏನೇನೋ ಕೆಟ್ಟ ಸೊಪ್ನ ಕಾಣ್ತಿದ್ದೆ. ಅದಕ್ಕೆ ಅಂಗಂದೆ ಬಾ ನೀಲಿ' ಎಂದು ಪ್ರೀತಿಯಿಂದ ಅವಳನ್ನು ಬಳಿಗೆ ಕರೆದ.

ನೀಲಿ ಬೆಳದಿಂಗಳಿನಂತೆ ಅವನ ಬಳಿಗೆ ಬಂದಳು. ದೇವಣ್ಣ ಎದ್ದು ಕುಳಿತನು. ನೀಲಿ ಬಂದು ಹತ್ತಿರ ಕುಳಿತಳು. ಅವಳು ಅಷ್ಟು ಹತ್ತಿರಕ್ಕೆ ಎಂದೂ ಬಂದದ್ದಿಲ್ಲ. ಕೊಂಚ ಹೊತ್ತು ಇಬ್ಬರೂ ಮೌನದಿಂದಿದ್ದರು. ದೇವಣ್ಣನು ಏನನ್ನೋ ಅನುಮಾನಿಸುತ್ತಿದ್ದನು. ನೀಲಿಯೇ ಮಾತನಾಡಿದಳು.

'ಏನು ಸೊಪ್ನ ಅದು?' ಎಂದು ನೀಲಿ ಓರೆನೋಟದಿಂದ ಪ್ರಶ್ನಿಸಿದಳು. ದೇವಣ್ಣ ಅವಳ ಎರಡು ಕೈಗಳನ್ನೂ ಕೈಗೆ ತೆಗೆದುಕೊಂಡು 'ನಿನಗೆ ಲಗ್ನ ಆಯ್ತಾ ಇತ್ತು. ನನ್ನ ಊಟಕ್ಕರದ್ರು. ನಾನು ಬರಕ್ಕಿಲ್ಲ ಅಂದೆ, ನೀನು ಅಳ್ತಾ ಇದ್ದೆ.... ಹ್ಞೂ....ಇನ್ನೂ ಏನೇನೊ!'

'ಅದೆಲ್ಲಾ ಸಟೆ. ಹೋಗ್ಲಿ ಏಳಿ, ಒಸಿ ನೇರ್ಲೇಹಣ್ಣು ಕಿತ್ಕೊಡಿ ಬಾಯಾರ್‍ತದೆ' ಎಂದಳು.

'ಯಾಕೋ ಏಳಕ್ಕೇ ಆಯಿಕ್ಕಿಲ್ಲ ನೋಡು ನೀಲಿ' ಎಂದು ದೇವಣ್ಣ ಮೈ ಮುರಿದನು.

'ನಾನೇ ಹತ್ತೀನಿ' ಎಂದು ನೀಲಿ ಎದ್ದಳು. ಸರಸರನೆ ಮರವನ್ನೇರಿದಳು.

'ತುದೀಗೋಬ್ಯಾಡ, ನೇರಲೇ ಕೊಮೆ ಸತಾ ಇಲ್ಲ' ಎಂದು ದೇವಣ್ಣ ಆತುರದಿಂದ ಹೇಳಿದನು. ನೀಲಿಯ ಕೈ ಜಾರೇ ಜಾರಿತು. ಥಟ್ಟನೆ ಅವಳ ಕಾಲಿನ ರೆಂಬೆಯೂ 'ನೊಟ್' ಎಂದು ಮುರಿಯಿತು. ಅವಳು ಮರದಿಂದ ಬಿದ್ದಳು; ದೇವಣ್ಣ "ಹಾ! ಹಾ!!" ಎಂದನು; ಎಚ್ಚರವಾಯಿತು.

ಬಿಸಿಲು ರವರವ ಎನ್ನುತ್ತಿತ್ತು. ದೇವಣ್ಣ ಪುನಃ ಈ ಲೋಕಕ್ಕೆ ಹಿಂತಿರುಗಿದನು. ಇನ್ನೂ ನೇರಲೇ ಹೂವುಗಳು ಉದುರುತ್ತಲೇ ಇದ್ದುವು. ದೂರದ ದನಕಾಯುವ ಹುಡುಗನೊಬ್ಬನು ಒಂದು ನಾಟಕದ ಪದವನ್ನು ಗಟ್ಟಿಯಾಗಿ ಅನ್ನುತ್ತಿದ್ದನು. ಮದುವೆ ಮನೆಯ "ಬ್ಯಾಂಡೂ" ಕೂಡ ಗುಡಿಯ ಹತ್ತಿರಕ್ಕೆ ಬಂದಿದ್ದುದರಿಂದ ಅಸ್ಪಷ್ಟವಾಗಿ ಕೇಳಿಸುತ್ತಿತ್ತು. ದೇವಣ್ಣನಿಗೆ ಒಂದು ನಿಮಿಷ ಯಾವುದು ಕನಸು ಯಾವುದು ನನಸು ಎಂಬುದು ತಿಳಿಯಲಿಲ್ಲ. ನನಸಿನಲ್ಲಿ ಬೇಸರ ಬಂದು ಪುನಃ ಹಾಗೆಯೇ ಮಲಗಲು ಪ್ರಯತ್ನಪಟ್ಟನು. ನೀಲಿಗೆ ಮದುವೆಯಾಗುತ್ತಿರುವುದು ನಿಜವಾಗಿರುವಾಗ ನಿದ್ದೆ ಎಲ್ಲಿ? ಎದ್ದು ಕರಡೀಬಸವನ ಎಲೆ ತೋಟದೊಳಕ್ಕೆ ಹೊರಟುಹೋದನು.

ದೇವಣ್ಣ, ಮುತ್ತಳ್ಳಿಯ ಗೌಡ ಮನೆತನದ ಎಳೆವಯಸ್ಸಿನ ಯುವಕ. ಅವನ ತಂದೆಯು ಸಂಸಾರವನ್ನು ಅನುಕೂಲಸ್ಥಿತಿಯಲ್ಲಿರುವಾಗಲೇ ಮಗನ ಕೈಲಿ ಕೊಟ್ಟು ತಾನು ವಿಶ್ರಾಂತಿ ಪಡೆಯುತ್ತಿದ್ದನು. ಎಲ್ಲರಂತೆ ದೇವಣ್ಣ ಮುದುಕ ತಂದೆಯನ್ನು ದನ ಕಾಯುವುದಕ್ಕೆ ಬಿಟ್ಟಿರಲಿಲ್ಲ. ಅವನಿಗೆ ಹುಣಸೂರು ಕಂಬಳಿಯೊಂದನ್ನು ತರಿಸಿಕೊಟ್ಟು ಜಗಲಿಯ ಕೋಣೆಯನ್ನು ಅವನ ಪಾಲಿಗೆ ಬಿಟ್ಟು ಅವನ ಊಟ ಉಪಚಾರಗಳಿಗೆ ನಿಯಮಬದ್ಧವಾದ ವ್ಯವಸ್ಥೆ ಮಾಡಿದ್ದನು. ಮನೆಯಲ್ಲಿ ತಾಯಿಯದೇ ಯಜಮಾನಿತನ. ಆಕೆಯೇ ತನ್ನ ತಮ್ಮನ ಮಗಳು, ರೇವಮ್ಮನನ್ನು ಮಗನಿಗೆ ತಂದು ಮದುವೆಮಾಡಿಕೊಂಡಿದ್ದಳು. ರೇವಮ್ಮ ಮನೆಗೆ ಬಂದದ್ದು ಜೋಳದ ಪೈರಿನ ಬಿದೆ ಕೀಳುತ್ತಿದ್ದಾಗ. ಈಗ ಜೋಳ ಹಾಲಕ್ಕಿಗಳಾಗಿವೆ.

ದೇವಣ್ಣ ತನ್ನ ಮನೆಯಲ್ಲಿ ನೀಲಿ ಓಡಾಡುವುದನ್ನು ಬಯಸಿದ್ದನು. ಹೊಲದಲ್ಲಿ ಅವಳ ಕೈಯಿನ ಊಟವನ್ನು ನಿರೀಕ್ಷಿಸಿದ್ದನು. ಒಬ್ಬನೇ ನೀಲಿಯನ್ನು ನಗರಗಳಿಗೆ ಕರೆದುಕೊಂಡು ಹೋಗಿ ತೋರಿಸಿಕೊಂಡು ಬರಬೇಕೆಂದಿದ್ದನು. ಅವಳ ಆಸೆಯನ್ನು ಕೇಳದೆ ತಿಳಿದುಕೊಂಡು ತೀರಿಸಬೇಕೆಂದಿದ್ದನು. ಇಂತಹ ಎಷ್ಟೋ ಆಸೆಗಳೂ ಭ್ರಾಂತಿಗಳಾದುವು. ಊರಿನಲ್ಲಿಯ ಪಾರ್ಟಿಯ ಕಾರಣವಾಗಿ ನೀಲಿಗೇ ಬೇರೆ ಮದುವೆ, ದೇವಣ್ಣನಿಗೇ ಬೇರೆ ಮದುವೆಯಾದ ಹಾಗಾಯಿತು. ನೀಲಿಯು ನೆರೆಯ ಊರು 'ಹೊಗುಂಡಿ'ಯ ಸೊಸೆಯಾಗಿ ಎರಡು ತಿಂಗಳುಗಳು ಆಗಿಯೇ ಹೋದುವು. ಆದರೂ ಅವಳು ತೌರಿನಲ್ಲಿಯೇ ಇದ್ದಳು.

ದೇವಣ್ಣನ ಜೋಳದ ಹೊಲ ಊರಿಗೆ ಒಂದೂವರೆ ಮೈಲಿ ಆಚೆಯಿತ್ತು. ಈಚೆಗೆ ಅವನು ಸದಾ ಅಲ್ಲಿಯೇ ಇರುತ್ತಿದ್ದನು. ಅವನಿಗೆ ಮುತ್ತಳ್ಳಿಯನ್ನು ಕಂಡರೇ ಸಿಟ್ಟೇಳುತ್ತಿತ್ತು. ತನ್ನ ಹೊಲದ ಅಟ್ಟಣೆಗೆ ತನ್ನ ಊರು ಕಾಣಬಾರದೆಂದು ಅಟ್ಟಣೆಯ ಬಾಗಿಲನ್ನು ಬೇರೆ ದಿಕ್ಕಿಗೆ ಬದಲಾಯಿಸಿದ್ದನು. ಈ ವರ್ಷ ಜೋಳವು ನಿರೀಕ್ಷಣೆಗೆಮೀರಿ ಬೆಳೆದು ಅಟ್ಟಣೆಯ ಅರ್ಧವೆಲ್ಲ ಜೋಳದ ಬೆಳೆಯಲ್ಲಿ ಮರೆಯಾಗಿತ್ತು. ಆ ಸಂತೋಷವು ದೇವಣ್ಣನ ಮುಖದಲ್ಲಿ ಸ್ವಲ್ಪವೂ ಕಾಣುತ್ತಿರಲಿಲ್ಲ. ಬದಲಾಗಿ ಅವನಿಗೆ ಆ ಹೊಲದ ಮೇಲೂ ಸಿಟ್ಟು. ಆ ಹೊಲವು ಮುತ್ತಳ್ಳಿಯಿಂದ ಹೊಗುಂಡಿಗೆ ಹೋಗುವ ದಾರಿಯಲ್ಲಿದ್ದುದೇ ಕಾರಣ. ಎಂದರೆ ದೇವಣ್ಣನನ್ನು ಕೊಂಚ ಕೆದಕಿ ನೋಡುವವರು ಅವನನ್ನು ಹುಚ್ಚನೆಂದು ಧಾರಾಳವಾಗಿ ತಿಳಿದುಕೊಳ್ಳಬಹುದಾಗಿತ್ತು.

ಅಂದು ಸೂರ್ಯ ನೆತ್ತಿಯ ಮೇಲಿಂದ ಎರಡು ಮಾರು ಕೆಳಗಿಳಿದಿದ್ದನು. ತುಂಬೆಯ ಹೂವುಗಳಂತಹ ಅತಿ ಚಿಕ್ಕ ಚಿಕ್ಕ ಮೋಡಗಳಿದ್ದುದರಿಂದ ಬಿಸಿಲು

ಒಂದೇ ಸಮನೆ ಉರಿಯುತ್ತಿತ್ತು. ಜೀರುಂಡೆಯು ಬಿಸಿಲಿನ ಶಬ್ದವೆನ್ನುವಂತೆ 'ಜಿರ್ರ್'ನ್ನುತ್ತಾ ಸನ್ನಿವೇಶದ ಕಾವನ್ನು ಹೆಚ್ಚಿಸಿತ್ತು. ದೇವಣ್ಣ ಕಾಲುವೆಯ ಕಡೆಯ ಬೇಲಿಯನ್ನು ಸರಿಮಾಡಿ ಕೈಕಾಲು ತೊಳೆದುಕೊಂಡು ರಸ್ತೆಯ ಕಡೆಯ ಬೇಲಿಗೆ ಬಂದನು. ದೂರದಲ್ಲಿ ಎರಡು ಗಾಡಿಗಳು ಬರುತ್ತಿರುವುದು ಎತ್ತುಗಳ ಗೆಜ್ಜೆ ಶಬ್ದದಿಂದ ತಿಳಿಯಿತು.

ಆ ತಿರುಗಣೆ ತಿರುಗುತ್ತಲೇ ದೇವಣ್ಣನು ಆ ಎತ್ತುಗಳ ಗುರುತು ಹಿಡಿದನು. ಹೂಗುಂಡಿಯ ಪಟೇಲ್ ಹುಚ್ಚಪ್ಪನವರು ತೆರಕಣಾಂಬಿಯ ಸಂತೆಯಲ್ಲಿ "ಖಾಯಿಷ್" ಪಟ್ಟು ಒಂಭೈನೂರರುವತ್ತು ರೂಪಾಯಿ ಸುರಿದು ತಂದಿದ್ದ ಜೊತೆ, ಅವು ಬೆನ್ನು ಮುಟ್ಟಿದ ತಕ್ಷಣ ತಮ್ಮ ಮುದ್ದಾದ ತಲೆಗಳನ್ನು ಅಲ್ಲಿಂದಿಲ್ಲಿಗೆ ವಲುಕಾಡಿಸಿ ಕುದುರೆಯಂತೆ ಓಡುತ್ತಿದ್ದುವು. ಯಾವ ಹಳ್ಳಿಯ ಯುವಕನಿಗಾದರೂ ತನ್ನ ಗಾಡಿಗೆ ಅವುಗಳನ್ನು ಕಟ್ಟಿ ಎರಡು ಕೈಗಳನ್ನೂ ಅವುಗಳ ಮೇಲೆ ಚಪ್ಪರಿಸಿ ಲೊಟ್ಟೆ ಹಾಕುವ ಮನಸ್ಸಾಗದೆ ಇರುತ್ತಿರಲಿಲ್ಲ. ದೇವಣ್ಣನ ಕಡೆಗೆ ಎತ್ತುಗಳು ಬರುತ್ತ ಬರುತ್ತ, ಹುಚ್ಚಪ್ಪನವರ ಪುಟ್ಟ ಸೊಸೆಯನ್ನು ಅವರೂರಿಗೆ ಎತ್ತಿಕೊಂಡು ಹೋಗುತ್ತಿರುವು ವೆಂಬುದು ತಿಳಿಯಿತು. ಅವನ ಎದೆ ದುಡಿಯಹತ್ತಿತ್ತು. ನೀಲಿ ಕುಳಿತಿದ್ದ ಗಾಡಿ ಕ್ರಮೇಣ ದೇವಣ್ಣನ ಹತ್ತಿರಕ್ಕೆ ಬಂದಿತು. ಅವನು ಎಷ್ಟೇ ಪ್ರಯತ್ನ ಪಟ್ಟರೂ ಅವನ ಕಣ್ಣುಗಳು ಗಾಡಿಯನ್ನು ಪ್ರವೇಶಿಸದೆ ಬಿಡಲಿಲ್ಲ. ಒಳಗೆ ನೀಲಿ ಒಳ್ಳೆಯ ರಾಣಿಯಂತೆ ಕುಳಿತಿದ್ದಳು. ಮುಂಗುರುಳು ಚಂದ್ರನನ್ನು ಹಿಂದಿಟ್ಟುಕೊಂಡು ತೊನೆದಾಡುವ ಬಳ್ಳಿಗಳಂತೆ ಬಳುಕುತ್ತಿದ್ದುವು. ಬಿಸಿಲಿನ ಝಳಕ್ಕೆ ಮೂಗುಬಟ್ಟಿನ ಬಳಿ ಬೆವರಿನ ಸಣ್ಣ ಹನಿಗಳು ಸೇರಿ ನತ್ತಿನ ಹರಳಿನಷ್ಟೇ ಪ್ರಕಾಶವಾಗಿದ್ದುವು. ತುಟಿಯ ಕೆಂಪು ಹಲ್ಲಿನ ಧವಳ ಛಾಯೆಯನ್ನು ಹೆಚ್ಚಿಸಿತ್ತು. ಆದರೆ ದೇವಣ್ಣನು ಕಣ್ಣಿಗೆ ಬಿದ್ದಮೇಲೆ? ನೀಲಿ ತನ್ನ ದೇವಣ್ಣನನ್ನು ನೋಡಿ ಎರಡು ತಿಂಗಳುಗಳಾಗಿತ್ತು. ಅವನನ್ನು ಕಂಡಕೂಡಲೇ ಅವಳ ಕೆನ್ನೆ ಕಿವಿಗಳು ಬೆಚ್ಚಗಾದುವು. ಕೊರಳು ಸುಪ್ತ ದುಃಖದಿಂದ ಉಬ್ಬಿದುವು. ತಟ್ಟನೆ ಮುಖ ಬೇರೆಡೆಗೆ ತಿರುಗಿಸಿದಳು. ಅವನನ್ನು ದುಃಖವು ಹಿಂಸಿಸಿತು. ಹುಚ್ಚಪ್ಪನವರ ಮಗನು—ನೀಲಿಯ ಗಂಡನೆಂದು ಅವನಿ ಗನಿಸಲಿಲ್ಲ—ಅತ್ಯಾದರದಿಂದ ನೀಲಿ ಕುಳಿತ ಗಾಡಿಯನ್ನು ನಡೆಸುತ್ತಿದ್ದುದು ತನ್ನೆದೆಯ ಮೇಲೆ ಎಂದು ದೇವಣ್ಣನಿಗೆ ಭಾಸವಾಯಿತು.

ಮುಂದಿನ ಗಾಡಿ ವಾಹಕನ ಉತ್ಸಾಹದಿಂದ ಬಹಳ ಮುಂದೆ ಮುಂದೆ ಹೊರಟು ಹೋಯಿತು. ಹಿಂದಿನ ಗಾಡಿ ದೇವಣ್ಣನ ನಿರಾಶೆಯೊ ಎಂಬಂತೆ ಸೋಮಾರಿ ತನದಿಂದ ಇನ್ನೂ ಕುಂಟುತ್ತ ಬರುತ್ತಿತ್ತು. ಅಲ್ಲಿ ಕೆಲವರು ನೀಲಿಯ ಮಾವನ ಕಡೆಯವರು, ನೀಲಿಯ ಅಪ್ಪ ಇವರೆಲ್ಲರೂ ಕುಳಿತಿದ್ದರು. ನೀಲಿಯ ಅಪ್ಪ

ದೇವಣ್ಣನನ್ನು ನೋಡಿದನು. ಊರಿನಲ್ಲಿ "ಪಾರ್ಟಿ"ಯ ಕಿಚ್ಚು ಈಗಾಗಲೇ ಆರಿ ಹೋಗಿದ್ದರೂ ನೀಲಿಯ ತಂದೆಗೆ ಅದರ ಕಾವು ಇಳಿದಿರಲಿಲ್ಲ. ಅವರು ಮಾತ ನಾಡಲಿಲ್ಲ. ಕೆಲವೇ ನಿಮಿಷಗಳಲ್ಲಿ ಆ ರಸ್ತೆ, ಆ ಹೊಲ, ದೇವಣ್ಣ, ಎಲ್ಲರೂ ಹಿಂದಿದ್ದಂತಾದರು. ಬಿಸಿಲು ಜೀರುಂಡೆಗಳು ಒಂದರೊಡನೊಂದು ಸಹಕರಿಸಿ ಕೆಲಸ ಮಾಡುತ್ತಿದ್ದುವು. ದೇವಣ್ಣನ ತಲೆಯು ಕಾಯ್ದುಹೋಗಿತ್ತು. ಊರಕಡೆ ಮುಖ ಮಾಡಿದನು. ಚೀಪಿ ಎಸೆದ ಮಾವಿನ ಓಟೆಯಂತೆ ಸಪ್ಪೆಯಾಗಿ ಊರು, ತೆಂಗಿನ ಮರಗಳ ಸಂದಿಯಲ್ಲಿ ಬಿದ್ದಿತು.

ಮನೆಗೆ ತಲುಪಿದವನೇ ದೇವಣ್ಣ ಸುಸ್ತಾಗಿ ಜಗಲಿಯ ಮೇಲೆ ಕುಳಿತು ಬಿಟ್ಟನು. ರೇವಮ್ಮ ಹೊರಗೆ ಬಂದು 'ನೀರು ಕೊನ್ನಿ' ಎಂದಳು. ದೇವಣ್ಣ 'ಬ್ಯಾಡ ಮಡ್ಗು' ಎಂದನು. ಪಕ್ಕದ ಕೋಣೆಯ ಮುದುಕ 'ಓಗು ಕೂಸು, ಅದ್ಯಾಕ ?' ಎಂದನು. ದೇವಣ್ಣ 'ಈಗೇನ—ಊರಿಂದೂರ್‍ಗೆ ನಡಕಂಡು ಬಂದಿದ್ನ ಇಷ್ಟು ಬೇಗ ಹಸಿಯಕ್ಕೆ ?' ಎಂದನು. ರೇವಮ್ಮ ತಟ್ಟನೆ ಏನನ್ನೋ ಜ್ಞಾಪಿಸಿ ಕೊಂಡು 'ಊರಿಂದೂರ್‍ಗೆ ಅಂತ್ಲೇ ನೆಪ್ಪಾಯ್ತು. ಒಂದ್ಮಾತು ಹೇಳ್ತೀನಿ ಬನ್ನಿ' ಎಂದು ಗುಟ್ಟಿನ ಸ್ವರದಲ್ಲಿ ಹೇಳಿದಳು. ಹೆಂಡತಿಯನ್ನು ಕಂಡರೆ ಅವನಿಗಾಗದು. ಮುಖ ಸಿಂಡರಿಸಿಕೊಂಡು 'ಇಲ್ಲೇ ಹೇಳ್ಬಾರ್ದಾ ?' ಎಂದು ಘುಡುಘುಡಿಸಿದನು. ರೇವಮ್ಮ, ಹೃದಯವನ್ನು ಹಿಂಡಿಕೊಂಡು ಮುಖ ಸಪ್ಪಗೆ ಮಾಡಿಕೊಂಡು 'ನಿಮಗೆ ಕ್ವಾಪ. ಓಗ್ಲೀ ಬುಡಿ' ಎಂದು ಒಳಕ್ಕೆ ಹೋದಳು.

ಅವಳು ಹೋದ ಮೇಲೆ ದೇವಣ್ಣನಿಗೆ 'ಆ ಒಂದು ಮಾತನ್ನು' ಕೇಳುವ ಕುತೂಹಲವುಂಟಾಯಿತು. ಏತಕ್ಕೋ ಹೋಗುವವನಂತೆ ಒಳಕ್ಕೆ ಹೋದನು. ರೇವಮ್ಮ ಎತ್ತುಗಳಿಗೆ ಹುಲ್ಲು ಹಾಕುತ್ತಿದ್ದವಳು, ಗಂಡನ ಬರುವಿಕೆಯನ್ನು ಕಂಡು ಅವನ ಬಳಿಗೆ ಬಂದು, ನಿಷ್ಕಪಟವಾದ ತನ್ನ ದನಿಯಲ್ಲಿ ಹೇಳಿದಳು. 'ಆಚೆಬೀದಿ ಮಾದಯ್ಯನವರ ಮಗಳಿಲ್ಲವಾ—ನೀಲಮ್ಮ—ಮದುವೆ ಹೆಣ್ಣು—ಅವಳು ಈವೊತ್ತು ಗಂಡನ ಮನೆಗೆ ಒಂಟೋದ್ಲು. ಇಂದು ಬೆಳಗಿನ ಝಾವ ಅಷ್ಟೊತ್ತಿಗೇ ಭಾವೀಕಟ್ಟೆ ಹತ್ರ ನನ್ನೋಡಿ ಬಂದ್ಲು, ನನ್ನ ಕದ್ದು ಮಾತಾಡ್ಸೋಳಂಗೆ "ಹೊಬುಟ್ಟೆತ್ತೀನಿ ಅತ್ಗಮ್ಮ, ನಾನು ಮುತ್ತಳ್ಳಿ ಬುಟ್ಟು ಹೊಂಟೋದೇ ಅಂತ ದ್ಯಾವಣ್ಣಾವರಿಗೆ ಮರೀದೇ ಏಳಿಬುಡು" ಅಂತ ಹೇಳಿ ಕಣ್ಣೀರು ಕಚ್ಕಂಡ್ಲು' ಎಂದು ಹೇಳಿ ರೇವಮ್ಮ ತಾನೂ ನಿಟ್ಟುಸಿರುಬಿಟ್ಟಳು. ನೀಲಿ ಬಾಯಿಂದ ಬಂದಿತೆಂದು ಹೇಳಲಾದ "ದೇವಣ್ಣ" ಎನ್ನುವ ಪದ ದೇವಣ್ಣನಿಗೆ ಕಣ್ಣು ಕತ್ತಲೆ ತಂದಿತು. ಮನಸ್ಸು ತುಂಬಾ ನೊಂದುಕೊಂಡಿತು. ಆದರೂ ಹೆಂಡತಿಯ ಮಾತಿಗೆ ಸಿಟ್ಟನಿಂದಲೇ "ಇದೀಯಾ ಮಾತು ?" ಎಂದು ಮನೆಯಿಂದ ಹೊರಕ್ಕೆ ಬಂದನು.

ಬೆಳಗ್ಗೆ ಹೊತ್ತೆರಡು ಮೂರು ಎದ್ದಮೇಲೆ ಹೊಲದಿಂದ ದೇವಣ್ಣ ಮನೆಗೆ ಬಂದರೆ, ತಂಗಳುಂಡು, ರಾಯರ ಕಬ್ಬಿನ ಗದ್ದೆಕೆಲಸಕ್ಕೆ ಹೊರಟು ಹೋಗುತ್ತಿದ್ದನು. ಮಧ್ಯಾಹ್ನ ಏರುಕಟ್ಟುವ ಹೊತ್ತಿಗೆ ಮನೆಗೆ ಬಂದರೆ ಬಿಸಿಯೂಟ ಮಾಡಿಕೊಂಡು ಬಸವನಗುಡಿಗೆ ಹೋಗಿ ಹುಲಿಕಲ್ಲಿನವರೊಡನೆ ಕುಳಿತು ಕಾಲ ಕಳೆಯುತ್ತಿದ್ದನು. ಸಂಜೆ, ಊಟ ಆಯಿತೆಂದರೆ ಜೋಳದ ಕಾವಲಿಗೆ, ಕಂಬಳಿ ಎಳೆದುಕೊಂಡು ಝುರ್ಕಿ ಚಡಾವು ಮೆಟ್ಟಿಕೊಂಡು ಹೊರಟುಹೋಗುತ್ತಿದ್ದನು.

ಇವನ ಈ ದಿನಚರಿಯನ್ನೆಲ್ಲಾ ರೇವಮ್ಮ ದಿನವಹಿ ನೀರುಗಣ್ಣಿನಿಂದ ಅವಲೋಕಿಸುತ್ತಿದ್ದಳು. ಅವಳಿಗೆ ತನ್ನ ಗಂಡನೊಡನೆ ಮಾತನಾಡುವುದಕ್ಕೇ ಅಂಜಿಕೆ. ದೇವಣ್ಣ ನಗುತ್ತಾ ಇದ್ದಾಗ ಹೂವಿನ ಹಾಗೆ ಕಂಡರೂ ಗಂಭೀರವಾದಾಗ ಘಟಸರ್ಪವೆನ್ನುವುದು ಅವಳಿಗೆ ಮನದಟ್ಟಾಗಿತ್ತು. ಆಗ ಅವಳಿಗೆ ಯಾರೋ ತನ್ನ ಮದುವೆಯಲ್ಲಿ "ಹುಡುಗಿ ಪುಣ್ವಂತೆ" ಅಂದ ಮಾತೊಂದು ಜ್ಞಾಪಕ ಬರುತ್ತಿತ್ತು. ಆಗ್ಗೆ ಅವಳಿಗೂ ಅದು ನಿಜವೆನ್ನಿಸಿತ್ತು. ಆದರೆ ದೇವಣ್ಣನ ಈಚಿನ ನಡೆವಳಿಕೆಗಳನ್ನು ನೋಡಿ ಅವಳಿಗೆ ಖಂಡಿತ ತಾನು "ಪುಣ್ವಂತೆ" ಅಲ್ಲ ಎನ್ನಿಸಿತ್ತು.

ರೇವಮ್ಮ ತನ್ನನ್ನು ಕಂಡರೆ ಪ್ರಾಣಬಿಡಿಸಿಕೊಳ್ಳುತ್ತಾಳೆ, ಆಸೆಯಾಗಿದ್ದಾಳೆ ಎನ್ನುವುದು ದೇವಣ್ಣನಿಗೂ ತಿಳಿದಿತ್ತು. ಅವಳು ರೂಪವತಿ ಎನ್ನುವ ವಿಷಯವೂ ಗೊತ್ತು. ದೇವಣ್ಣ ತಮ್ಮ ವಂಶದ ಹಳೆಯ ಸಾಲದ ಪತ್ರವೊಂದನ್ನು ಹರಿದುಹಾಕಿಸುವುದಕ್ಕಾಗಿ ತನ್ನ ಸೋದರಮಾವ ಸುಜ್ಜಲೂರಿನ ಪುಟ್ಟಸುಬ್ಬಯ್ಯನ ಸಾಲಗಾರನಾಗಿದ್ದವನು ಹೆಣ್ಣುತಂದ ಅಳಿಯನಾಗಬೇಕಾಯಿತು. ಬಲವಂತದ ಮದುವೆಯಾದರೂ ಕೂಡ ರೇವಮ್ಮ ದೇವಣ್ಣನ ಕಣ್ಣಿಗೆ "ನೆರಳು ಕಂಡರೆ ಆಗದು" ಎನ್ನಿಸುವ ಹೆಂಗಸಿನಂತೆ ಕಾಣಬರಲಿಲ್ಲ. ಅವನಿಗೆ ತಕ್ಕ ಮಡದಿಯೇ ಆಗಿದ್ದಳು. ಇದನ್ನೆಲ್ಲಾ ಪರಿಗಣಿಸಲು ಈಗ ದೇವಣ್ಣ ಮನುಷ್ಯನಾಗಿರಲಿಲ್ಲ. ಅಷ್ಟೆ.

ತಾನೇನಾದರೂ ತಪ್ಪು ಮಾಡಿದ್ದೇನೆಯೆ ಎಂಬ ಯೋಚನೆ ರೇವಮ್ಮನಲ್ಲಿ ಸಾಧಾರಣವಾಗಿ ಸದಾ ಕೊರೆಯುತ್ತಿತ್ತು. ಹಾಗೇನಾದರೂ ಇದ್ದರೆ, ಎದುರಿಗೆ ಕೇಳಿಬಿಡೋಣವೆಂದರೆ ಅದಕ್ಕೆ ದೇವಣ್ಣ ಅವಕಾಶವನ್ನೇ ಕೊಡುತ್ತಿರಲಿಲ್ಲ. ಅವನ ಮೌನ ಪ್ರಕೃತಿಯಲ್ಲಿ ಅವನ ಮನಸ್ಸನ್ನು ಕೆಣಕಲು ಯಾರಿಗೂ ಬೇಕಾಗುತ್ತಿರಲಿಲ್ಲ.

ನೀಲಿ, ಗಂಡನ ಮನೆಗೆ ಹೋದಮೇಲೆ ತೌರುಮನೆಗೆ ಎರಡು ಬಾರಿ ಬಂದು ಹೋಗಿದ್ದಳು. ದೇವಣ್ಣ ಅವಳನ್ನು ನೋಡುವ ಸಂದರ್ಭವೇ ಒದಗಿರಲಿಲ್ಲ. ಜೋಳ ಬಲಿತು ತೆನೆ ಬಿಗಿದುಹೋಗಿದ್ದರೂ ದೇವಣ್ಣ, ಸೋಮಾರಿತನದಿಂದ

ಜೋಳವನ್ನು ಕೀಳುವ ಏರ್ಪಾಡೇ ಮಾಡಿರಲಿಲ್ಲ. 'ತೆನೆ ಮಳೆಗೆ ಬಂದು ನೆಂದರೆ ಮುಗ್ಗೋಯ್ತದೆ' ಅಂತ ದೇವಣ್ಣನ ತಂದೆ "ಸಾರಿ ಸಾರಿ" ಹೇಳಿದರೂ ದೇವಣ್ಣ ಅದನ್ನು ಕಿವಿಗೆ ಹಾಕಿಕೊಂಡಿರಲಿಲ್ಲ. ಎಲ್ಲರ ಹೊಲಗಳಲ್ಲಿಯೂ ಮೆದೆಗಳು ಸಾಲಾಗಿ ನಿಂತಿದ್ದುವು. ಅವುಗಳ ಹಾಗೆ ಇವನ ಮನಸ್ಸೂ ಸುಮ್ಮನೆ ನಿಂತಿತ್ತು.

ರೇವಮ್ಮ ಇವತ್ತು ಮನಸ್ಸು ಮಾಡಿದಳು. ಏನೇ ಆಗಲಿ 'ನನ್ನ ಕಂಡರೆ ನಿಮಗ್ಯಾಕೆ ಸಿಡಿಸಿಡಿ' ಎಂಬುದನ್ನು ಈಹೊತ್ತು ಕೇಳಲೇಬೇಕೆಂದು ಗಟ್ಟಿ ಮಾಡಿದಳು. ಅವನು ಮನೆಯಲ್ಲಿದ್ದಾಗ ಸನ್ನಿವೇಶವೇ ಒದಗಲಿಲ್ಲ. ಹೇಗಾದರೂ ಮಾಡಿ ಇದರ ಇತ್ಯರ್ಥಕ್ಕೆ ಬರಬೇಕೆಂಬ ಪ್ರಚಂಡ ನಿರ್ಧಾರ ಅವಳನ್ನು ಬಿಟ್ಟು ಹೋಗಲಿಲ್ಲ.

ದೇವಣ್ಣ ರಾತ್ರಿ ಯಥಾಪ್ರಕಾರ ಕಾವಲಿಗೆ ಹೊರಟನು. ಅಂದು "ಪೌರ್ಣಿಮಿ"ಯ ಮಾರನೆಯ ದಿನ. ಎಲ್ಲೆಲ್ಲೂ ಬೆಳದಿಂಗಳು ಬಿದ್ದಿತ್ತು. ಆಕಾಶದಲ್ಲಿದ್ದ ಗರಣೆಯ ಬೆಟ್ಟಗಳಂತಹ ನಾಲ್ಕಾರು ಮೋಡಗಳು ತಿಂಗಳಿನ ಕಳೆಯನ್ನು ಹೆಚ್ಚಿಸಿತ್ತು. ಜೋಳದ ಮೆದೆ, ಕಾಲುವೆಯ ನೀರು, ಗೊಬ್ಬಳೀ ಮರಗಳ ಮೇಲಿದ್ದ ಬೆಳ್ಳಕ್ಕಿ ಎಲ್ಲವೂ ಆ ಬೆಳುದಿಂಗಳಲ್ಲಿ ಸ್ಫುಟವಾಗಿ ಕಾಣುತಿತ್ತು. ಇದನ್ನೆಲ್ಲಾ ಕಂಡು ಸಂತೋಷಗೊಳ್ಳಲು ಅಸುಖಿಯಾದ ದೇವಣ್ಣನಿಗೆ ಯೋಗ ವಿರಲಿಲ್ಲ. 'ಝುರ್ಕಿ'ಯ ಚಡಾವಿನ ಶಬ್ದವು ಅವನು ಹೋಗುತ್ತಿದ್ದ ಓಣಿಯ ಗಂಭೀರತೆಯನ್ನು ಮತ್ತಷ್ಟು ಹೆಚ್ಚಿಸಿತ್ತು. ಹೊಲದ ಮಧ್ಯದ ಕಾಲುದಾರಿಯಲ್ಲಿ ಹೋಗುವಾಗ ಹಿಪ್ಪನೇರಳೇ ಗಿಡಗಳು ಅವನನ್ನು ತಡೆದು ತಡೆದು ಬಿಡುತ್ತಿದ್ದುವು. ದೂರದಲ್ಲಿ ಎದುರಿಗೆ ಹೂಗುಂಡಿಯ ಗುಡ್ಡವು ಎದ್ದು ನಿಂತಿತ್ತು. ಅವನ ಬಾಯಿನ ಅಡಿಕೆ ಅಷ್ಟು ಹೊತ್ತಿಗೆ ತೀರ ನೆನೆದು ಹೋಗಲು ಬಾಯಿ ಅದನ್ನು ಅಗಿದು ನುಂಗಿತು. ಕೈಯಲ್ಲಿ ವಿಳ್ಯೇದೆಲೆ ಹಾಗೇ ಇತ್ತು. ಏನೋ ಯೋಚನೆಮಾಡುತ್ತ ತನ್ನ ಹೊಲಕ್ಕೆ ಸಾಗಿದನು.

ಅಟ್ಟಣೆಯನ್ನೇರಿದ ಮೇಲೆ ಸುಮ್ಮನೆ ಕಾಲಿಳಿಬಿಟ್ಟುಕೊಂಡು ಅವನು ಕುಳಿತನು. ಸ್ವಲ್ಪ ಹೊತ್ತಾದ ಮೇಲೆ ಕೈಯಲ್ಲಿನ ಎಲೆ ನೋಡಿ, ಬಾಯಲ್ಲಿ ಅಡಿಕೆ ಇಲ್ಲದ್ದನ್ನು ಕಂಡು ಪುನಃ ಕೆಳಕ್ಕಿಳಿದು ಬಂದು ಹತ್ತಿರದ ಆವರಿಕೆ ಗಿಡದ ತೊಗಟೆಯ ನ್ನಷ್ಟು ಎಡೆದುಕೊಂಡು ಬಂದು ತನ್ನ ಕುಳಿತಿದ್ದ ಜಾಗವನ್ನೇ ತಲುಪಿ ಕುಳಿತು ತನ್ನ ವೀಳ್ಯವನ್ನು ಮುಗಿಸಿದನು. ಅವನ ಮನಸ್ಸು ಆಗ ಬಾಯಿ ಬಿಟ್ಟಿತು.

'ನೋಡು, ನೀಲಿ ಅಡಿಕೆ ಹಂಗೆ. ರೇವು ಆವರಿಕೆ ತೊಗಟೆ ಹಂಗೆ ಅಡಿಕೆ ಇಲ್ದೇ ಹೋದರೆ ಆವರಿಕೆ ತೊಗಟೆ ಹಾಕ್ಸತರೆ. ಆದ್ರೆ ಅಡಕೇಗೂ ಆವರಿಕೆ

ತೊಗಟೇಗೂ ಸಮನಾ’ ಎಂದಿತು. ರೇವು, ನೀಲಿಯರಿಬ್ಬರ ಭಾವ ವಿಗ್ರಹಗಳೂ ಅವನ ಮನಸ್ಸಿನ ಮುಂದೆ ಬಂದು ಅಕ್ಕಪಕ್ಕದಲ್ಲಿ ನಿಂತುಕೊಂಡುವು. ಇಬ್ಬರೂ ಒಂದೇ ದರ್ಜೆಯ ರೂಪವತಿಯರು. ಆದರೆ ದೇವಣ್ಣನ ಪ್ರೀತಿಯು ಒಂದು ಬೆಳಕಿನಂತೆ ನೀಲಿಯನ್ನು ಮುತ್ತಿಕೊಂಡಿತ್ತು. ಆದರೆ ರೇವು ನಿರ್ದೋಷಿ ಎಂಬುದು ಮಾತ್ರ ಅವಳ ಮುಖದಲ್ಲಿ ಓದುವಷ್ಟು ಸ್ಪಷ್ಟವಾಗಿತ್ತು.

ತಲೆ ಕೊಡವಿಕೊಂಡು ಅಟ್ಟಣೆಯ ಮೇಲೆದ್ದು ನಿಂತುಕೊಂಡನು. ನೀರಿನಲ್ಲಿ ಕಾಲಿಳಿಬಿಟ್ಟುಕೊಂಡಿದ್ದಾಗ ಮೀನುಗಳು ಕೊಳೆಗೋಸ್ಕರ ಕಾಲಿಗೆ ಮುತ್ತಿ ಕೊಳ್ಳುತ್ತವೆ. ಕಾಲನ್ನು ಒಂದು ಬಾರಿ ಕೊಡವಿಕೊಂಡರೆ ಕೊಂಚ ಹೊತ್ತು ಬಿಟ್ಟು ಪುನಃ ಬಂದು ಮುತ್ತಿಕೊಳ್ಳುವುದಿಲ್ಲವೆ? ಹಾಗೆ ದೇವಣ್ಣನ ತಲೆಯನ್ನು ಪುನಃ ಆ ಆಲೋಚನೆಗಳು ಬಂದು ಮುತ್ತಿಕೊಂಡುವು. ಕಣ್ಣು ನೋಟಗಳ ಮೇಲೆ ಅಲೆ ದಾಡಹೋಯಿತು.

ಅವನ ಹೊಲದ ಆಚೆ ಪಕ್ಕದಲ್ಲಿ ಕಾಲುವೆ ಶಾಂತವಾಗಿ ಹರಿಯುತ್ತಿತ್ತು. ಅದರ ಕೆಳಗೆ ಗದ್ದೆಯ ಬಯಲು, ರಾತ್ರಿಯಲ್ಲಿ ಸರದಿ ಪ್ರಕಾರ ನೀರು ಬಿಟ್ಟು ಕೆಂಪಣ್ಣ ಭೋಗ ನಂಜಪ್ಪ ಮುಂತಾದವರು ಗದ್ದೆ ಬಯಲಿನ ಮಧ್ಯದ ದಿಣ್ಣೆಯ ಮೇಲೆ ಸೇರಿದ್ದರು. ಅವರ ಮುಂದೆ ಸಣ್ಣದಾಗಿ ನರ್ತಿಸುತ್ತಿದ್ದ ಬೆಂಕಿಯ ಉರಿಯೊಂದು ದೇವಣ್ಣನವರೆಗೂ ಕಾಣಬರುತ್ತಿತ್ತು. ದೂರದಲ್ಲಿ ಚಾಮುಂಡಿ ಬೆಟ್ಟವು ತನ್ನ ದೀಪದ ಬೈತಲೆ ಸರವನ್ನಿಟ್ಟುಕೊಂಡು ಸುತ್ತಲೂ ನೋಡುತ್ತಿತ್ತು.

ದೇವಣ್ಣನಿಗನ್ನಿಸಿತು. ‘ನನ್ನ ಹೊಲದ ಮಣ್ಣು ಎಷ್ಟೇ ಚೆಂದಾಗಿರ್ಲಿ ನಾನ್ಯಾಕೆ ಬತ್ತ ಬೆಳೆಯಕ್ಕಾಗಲಿಕ್ಕಿಲ್ಲ? ಕಾಲುವೆಯಿಂದಾಚ್ಗೆ ಅವರು ಜಮೀನಿರೋಹೊತ್ಗೆ ಅವರು ಭತ್ತ ಬೆಳೀತಾರೆ. ಬೆಳೆದು ಅನ್ನ ಉಣ್ತಾರೆ. ನನ್ನ ಜಮೀನು ಕಾಲುವೆ ಯಿಂದ ಮೇಲ್ಗೋರಿ ಇರೋಹೊತ್ಗೆ ನಾನು ಜೋಳಾನೇ ಬೆಳ್ದು ಜೋಳಾನೇ ತಿನ್ನಬೇಕು. ಹ್ಞಾ!! ಎಂತಾ ಯೋಚ್ನೆ ಇದಕ್ಕೆ ಯಾಕೆ ಯೋಚ್ನೆ? ನನ್ನ ಹೊಲ ಕಾಲುವೆಯಿಂದ ಈಚೆ’. ಅವನ ಇದೇ ಯೋಚನೆ ತನಗೆ ಅವನ ಸಂಸಾರ ಹೋಲಿಸಿ ಕೊಳ್ಳಲು ತೊಡಗಿತು. ‘ನನ್ನ ಅದೃಷ್ಟ ಏನೇನು ನನ್ನ ಪಾಲಿಗೆ ನೇಮಿಸ್ತದೆಯೋ ಕಡೇವರೆಗೂ ನನಗದೇ ಸಾಸ್ವತ. ನನ್ನ ಹೊಲದ ಜೋಳದ ಹುಲುಸು ಆ ಕರಿ ಮಾದನ ಹೊಲಕ್ಕಿಲ್ಲವಲ್ಲ, ಆ ಸಂತೋಸ ನನಗೆ ಬ್ಯಾಡ್ವಾ? ಹಂಗೇ—ರೇವು ನನ್ನ ಪಾಲಿಗೆ ಬಂದೋಳು. ನೀಲಿ—ಭತ್ತದಗದ್ದೆ—ನನ್ನ ಪಾಲಿಗೆ ಸಿಗದೇ ಇದ್ದೋಳು. ಅದಕ್ಕೆ ರೇವು ತಿಪ್ಪೇನ? ನಾನು ಅವಳಿಗೆ ಯಾವ ಸುಖ ಕೊಟ್ಟದ್ನಿ!’ ಹೀಗೆ ಅವನು ಆಲೋಚಿಸಿಕೊಂಡನು. ದೇವಣ್ಣನಿಗೆ ಇದರಿಂದ ಏನೋ ಒಂದು ದೊಡ್ಡ ತತ್ತ್ವ ಸಿಕ್ಕಿದ ಹಾಗಾಯಿತು. ಪ್ರಕೃತಿಯು ಅವನಿಗೆ ಒಂದು ರಾತ್ರಿಯಲ್ಲಿ, ಎರಡು

ನಿಮಿಷದಲ್ಲಿ, ಒಂದು ಸಂದೇಶವನ್ನು ಹೃದ್ಗತ ಮಾಡಿಕೊಟ್ಟಂತಾಗಿತ್ತು. ಹೊಲದಲ್ಲಿ 'ಮರಮರ' ಶಬ್ದವಾಯಿತು. ದೇವಣ್ಣ ಸಮಾಧಿಯಿಂದ ಎಚ್ಚೆತ್ತನು.

'ಯಾರು?' ಎಂದು ಗಟ್ಟಿಯಾಗಿ ಕೂಗಿದನು. ಉತ್ತರ ಬರಲಿಲ್ಲ. ಜೋಳದ ಗಿಡಗಳನ್ನು ಬಗೆದುಕೊಂಡು ಯಾರೋ ಬರುತ್ತಿರುವಂತೆ ತೋರಿತು. ದನವೇನಾದರೂ ಇರಬಹುದೆಂದು ಎರಡು ಬಾರಿ ಅಬ್ಬರಿಸಿ ನೋಡಿದನು. ಇನ್ನೇನು ದೊಣ್ಣೆ ತೆಗೆದು ಕೊಂಡು ಇಳಿಯಬೇಕೆನ್ನುವಷ್ಟರಲ್ಲಿ ಬರುತ್ತಿರುವವರು ಮನುಷ್ಯರೆಂದು ತಿಳಿಯಿತು. ಅವರು ಅಟ್ಟಣೆಯ ಕಡೆಗೇ ಬರುತ್ತಿದ್ದುದರಿಂದ ದೇವಣ್ಣ ಅಲ್ಲಿಯೇ ನಿಂತನು. ವ್ಯಕ್ತಿ ಇನ್ನೂ ಹತ್ತಿರ ಬಂದಾಗ ಕಡಗದ ಶಬ್ದವಾದುದರಿಂದ ಅದು ಹೆಂಗಸೆಂಬುದೂ ತಿಳಿಯಿತು. ಎದುರಿಗೆ ಬಂದು ನಿಂತ ಮೇಲೆ ಅವನಿಗೆ ಗುರುತೂ ಸಿಕ್ಕಿತು.

ಅವನು ಆಶ್ಚರ್ಯದಿಂದ 'ರೇವು!!' ಎಂದನು. ಅವಳು ಮಾತನಾಡಲಿಲ್ಲವಾಗಿ ಮುಂದುವರಿಸಿದನು. 'ಇದೇನಾ ರೇವು ಇಷ್ಟೊತ್ತಿಲ್ಲಿ–ಹೊಲಕ್ಕೆ ಬಂದೆ? ಈ ಕಾವಳದಲ್ಲಿ —ಒಬ್ಬೇ!' ಆ ಒಡಕು ವಾಕ್ಯಗಳಲ್ಲಿ ಮೃದುತ್ವ ನೆಲಸಿತ್ತು. ಯುದ್ಧ ಮಾಡ ಬೇಕೆಂದು ಬಂದ ಸಿಪಾಯಿಯು ಬಿಳಿ ಬಾವುಟವನ್ನು ಕಂಡು ಹತಾಶನಾದನು. ಜಗಳ ಕಾಯ್ದುಬಿಡಬೇಕೆಂದು ಬಂದ ರೇವಮ್ಮ ಆ 'ರೇ–ವು' ಎಂಬ ಎರಡಕ್ಷರದ ಮಾತಿ ನಿಂದ ಕರಗಿ ತಣ್ಣಗಾದಳು. ದೇವಣ್ಣ ತನ್ನ ಹೆಂಡತಿಯನ್ನು ಆದರದಿಂದ ಹೆಸರು ಹಿಡಿದು ಕೂಗಿದುದು ಇದೇ ಮೊದಲು. ರೇವಮ್ಮನ ತುಟಿಗಳು ಆಡಬೇಕೆಂದಿದ್ದ ಮಾತುಗಳ ಗುಂಪನ್ನು ತಡೆಯುತ್ತಾ ಅದುರುತ್ತಿದ್ದುವು. ದೇವಣ್ಣ ತನ್ನ 'ರೇವು'ವಿ ನಲ್ಲಿ ತನ್ನ ಸೌಖ್ಯದ 'ರೇವ'ನ್ನು ಕಂಡನು. ಅವನ ಬಾಳಿನದೋಣಿ ಬಿರುಗಾಳಿಯಿಂದ ತಲ್ಲಣಿಸಿದ ಮೇಲೆ ರೇವನ್ನು ಕಂಡ ಹಾಗಾಗಿತ್ತು. ಸಮಯ ಸನ್ನಿವೇಶಗಳಿಂದ ಅವಳು ಬಂದಿದ್ದ ನಿಮಿತ್ತವನ್ನು ಗ್ರಹಿಸಿದನು.

ಮೊದಲಿಗಿಂತಲೂ ಮೃದುವಾಗಿ 'ಮೇಲಕ್ಬಾ ರೇವು?' ಎಂದನು. ಅವನ ಆ ಆಶಯ ರೇವಮ್ಮನ ಎಲ್ಲಾ ಶಸ್ತ್ರಾಸ್ತ್ರಗಳನ್ನೂ ವಿಫಲ ಮಾಡಿತು. ಮಂತ್ರವಾದಿಯ ಕಡೆಗೆ ಹೋಗುವ ಮಂತ್ರಮುಗ್ಧೆಯಂತೆ ಏಣಿಯ ಮೊದಲ ಮೆಟ್ಟಲಿನ ಮೇಲೆ ಬಲ ಗಾಲಿಟ್ಟಳು. ದೇವಣ್ಣನ ನೀಡಿದ ಬಲಗೈ ಅವಳ ನೆರವಿಗೆ ಬಂದಿತು.

ಚಂದ್ರನು ನೆತ್ತಿಯಮೇಲಿದ್ದುದರಿಂದ ಅಟ್ಟಣೆಯೊಳಗಿದ್ದ ಬೆಳಕನ್ನೆಲ್ಲಾ ಕತ್ತಲೆಯು ಹೊರಗಟ್ಟಿತ್ತು.

—ನರೇಂದ್ರಬಾಬು.

# ತೇಲಿಹೋದ ಮೋಡ

ಗೋಡೆಯಲ್ಲಿದ್ದ ಗಡಿಯಾರದಲ್ಲಿ ಗಂಟೆ ಹನ್ನೊಂದಾಗಿದ್ದರೂ ಹಾಸಿಗೆಯಲ್ಲಿ ಹೊರಳಾಡುತ್ತಿದ್ದ ಆನಂದನಿಗೆ ನಿದ್ದೆ ಬಂದಿರಲಿಲ್ಲ !

ರಾತ್ರಿಯ ಆ ಸ್ತಬ್ಧತೆ, ನೀರವತೆ ಅವನನ್ನು ಕೆಣಕುವಂತೆ ಕಾಣುತ್ತಿತ್ತು. ನಾಲ್ಕೈದು ದಿನಗಳ ಜ್ವರದ ತಾಪದಿಂದ ಜರ್ಜರಿತನಾದ ಆನಂದ ತನ್ನೆಲ್ಲ ತಾಳ್ಮೆಯನ್ನು ಕಳೆದುಕೊಂಡಿದ್ದ. ಮೂರು ತಾಸಿನ ಹಿಂದೆ ತಾನಾಗಿಯೇ ಮಡದಿಯನ್ನು ನಾಟಕಕ್ಕೆ ಕಳುಹಿದ್ದ. ಆದರೀಗ ಅವನ ಮನಸ್ಸು ಇದಕ್ಕೆ ತೀರ ವಿರುದ್ಧವಾಗಿ ಯೋಚಿಸತೊಡಗಿತು. ಅವನು ಆಲೋಚಿಸಿದಂತೆಲ್ಲ ಶೈಲೆಯ ಅಂದಿನ ನಡವಳಿಕೆಯೇ ಅವನಿಗೆ ವಿಚಿತ್ರವೆನಿಸತೊಡಗಿತು.

ಅವನಾಗಿಯೇ 'ಹೋಗಿ ಬಾ' ಎಂದದ್ದು ನಿಜ. ಆದರವಳು 'ಕಾಯಿಲೆಯ ಪತಿ, ಇಂದು ಬೇಡ' ಎನ್ನಬಾರದಾಗಿತ್ತೇ ? ಅದರ ಬದಲು ನಗುನಗುತ್ತ ಅವರೊಡನೆ ಹೊರಟುಹೋದಳು !

ಹೀಗೆ ಆನಂದ ವಿಚಾರದ ಮಡುವಿನಲ್ಲಿ ಸಿಲುಕಿಕೊಂಡಂತೆ ಅವನ ಮೈಯ ಕಾವೂ ಏರತೊಡಗಿತು. ಅವನೆದುರಿನ ಗೋಡೆಯಲ್ಲಿ ತೂಗಹಾಕಿದ್ದ ಶೈಲೆಯ ಭಾವಚಿತ್ರ ಅವನನ್ನೇ ಅಣಕಿಸುವಂತೆ ಕಂಡಿತು. ಸದಾಕಾಲವೂ ಅವನಿಗದು ಸ್ಫೂರ್ತಿ ಕೊಡುವ ಚಿತ್ರ. ಆದರೆ ಇಂದು ಆನಂದನಿಗೆ ಅದು ಒಂದು ಕ್ಷಣಕ್ಕೂ ಬೇಡವಾಯಿತು. ಮುಖ ಹೊರಳಿಸಿ ಇನ್ನೊಂದು ಮಗ್ಗುಲಾದ. ಚಿತ್ರವೇನೋ ಕಣ್ಮರೆಯಾಯಿತು. ಆದರೆ ಅವನ ಮನದಲ್ಲಿ ಬಿಂಬಿಸಿದ ಅವಳ ಚಿತ್ರವನ್ನು ಮರೆಸಲಾದೀತೇ ? ಅಂತೇ ಹಿಂದಿನ ನೆನಪುಗಳೆಲ್ಲ ಒಂದೊಂದಾಗಿ ಕಣ್ಣೆದುರಿಗೆ ಕಟ್ಟಿದಂತಾಯಿತು.

ಆನಂದ ಶೈಲೆಯರ ವಿವಾಹ ! ಓ ! ಅದೆಂಥ ಉಲ್ಲಾಸ—ಉತ್ಸಾಹದ ನೆನಪು ! ಮದುವೆಯೇ ಬೇಡ ಎನ್ನುತ್ತಿದ್ದ ಅವನು ಶೈಲೆಯನ್ನು ಕಂಡ ಮೊದಲ ಬಾರಿಗೇ ತನ್ನ 'ಬೇಡ' ಎನ್ನುವ ನಿರ್ಧಾರಕ್ಕೆ ಶರಣು ಹೊಡೆದಿದ್ದ. ಹಾಗೇ ಅವಳಿಗೆ ಮಾರು ಹೋಗಿದ್ದ. ಅವನಷ್ಟು ಆಕರ್ಷಿತನಾಗಿದ್ದ !

ಶೈಲಾ ! ಆ ಹೆಸರಿನಲ್ಲಿ ಎಷ್ಟು ಮಾದಕವಿತ್ತೋ ಅಷ್ಟೆ ಮೋಹವಿತ್ತು ಅವಳಲ್ಲಿ ಆನಂದನಿಗೆ. ಜನ 'ಹೆಂಡತಿ ಹೇಳಿದಂತೆ ಕುಣಿಯುತ್ತಾನೆ' ಎಂದರೂ ಅದನ್ನವನು ಲೆಕ್ಕಿಸಿದವನಲ್ಲ. ಆದರೆ ಶೈಲೆಯ ಮನನೊಂದರೆ ಮಾತ್ರ ಅವನೆದೆಯಲ್ಲಿ ಆಗುವ ನೋವಿಗೆ ಮಿತಿ ಇರಲಿಲ್ಲ.

ಒಂದು ಪಾರ್ಟಿಯೋ ಇರಲಿ, ಸಿನೇಮಾ, ಒಂದು ಮೀಟಿಂಗು, ಏನೇ ಇರಲಿ ಶೈಲೆಯನ್ನು ಜೊತೆಗೊಂಡು ಹೋಗುವದು ಅವನಿಗಭ್ಯಾಸ.

'ಹೆಣ್ಣು ಮನೆಯ ಒಳಗೆ; ಹೊರಗಿನ ಕಾರ್ಯ ಅವಳದಲ್ಲ.' ಎನ್ನುವ ಜನರನ್ನು ಆನಂದ ಮನದಿಂದಲೂ ಮನೆಯಿಂದಲೂ ದೂರ–ಬಹುದೂರವಿಡುತ್ತಿದ್ದ. ಇವನ ಅತಿಯಾದ ಸಮಾನತೆಯ ಹುಚ್ಚು ಶೈಲೆಗೆ ಕೆಲವೊಮ್ಮೆ ಹಿಂಸೆಯಾಗುತ್ತಿತ್ತು. ಆದ ರವಳಿಗೆ ಪತಿಯಲ್ಲಿರುವ ಅಪಾರ ಪ್ರೀತಿ ಅದನ್ನೆಲ್ಲ ಸಹಿಸುವ ಶಕ್ತಿ ಕೊಟ್ಟಿತ್ತು !

ಮನುಷ್ಯನ ಭವಿತವ್ಯವನ್ನು ಯಾರು ತಾನೇ ಬಲ್ಲರು ? ಸುಖ, ದುಃಖ ಹಿಂದುಮುಂದಾಗಿ ಬಂದಾಗಲೂ ಅದನ್ನು ಎದುರಿಸಲೇಬೇಕಲ್ಲವೇ ? ಜೀವನದಲ್ಲಿ ಈ ಏರು–ಇಳಿತ ಇದ್ದೇತೀರಬೇಕು. ಅದೇ ಮನುಷ್ಯನನ್ನು ಪಳಗಿಸುವ ಸಾಧನೆ. ಅದರಲ್ಲಿ ಬಿದ್ದು ಎದ್ದರೇನೇ ಬಾಳನ್ನು ಗೆದ್ದಂತೆ.

ಆನಂದನ ಈಗಿನ ಸ್ಥಿತಿ ನೆನೆದರೆ ಅದೇ ಮಾತು ನೆನಪಿಗೆ ಬರುತ್ತದೆ. ಅವನ 'ನ್ಯಾಶನಲ್ ಫಾರ್ಮಸಿ' ಎಂಥ ಊರ್ಜಿತ ಸ್ಥಿತಿಯಲ್ಲಿ ಇದ್ದುದು, ಈಗೆರಡು ವರುಷ ಗಳಿಂದ ತುಸು ಇಳಿಮುಖವಾಗಿದೆ. ಅವನಲ್ಲಿದ್ದ ಹಿಂದಿನ ಉತ್ಸಾಹ ಮರೆಯಾಗಿ, ಅಲ್ಲಿ ಬೇಸರ ತಲೆದೋರಿದೆ. ಮನೆಯಲ್ಲಿ ಮಡದಿ ಮಕ್ಕಳಲ್ಲಿ ಒಂದು ಬಗೆಯ ತಾತ್ಸಾರ. ಇದನ್ನರಿತ ಶೈಲಾ ಹದ ಮೀರದಂತೆ ಎಲ್ಲವನ್ನೂ ಅಣಿಯಾಗಿ, ಚೊಕ್ಕ ವಾಗಿ ಮಾಡಿ ತನ್ನ ಸಂಸಾರವನ್ನು ನಡೆಯಿಸುತ್ತಿದ್ದಾಳೆ.

* * * * * *

ಸಂಜೆಯ ಸಮಯವನ್ನೇ ಇದಿರು ನೋಡುತ್ತಿದ್ದ ಆನಂದ ಇತ್ತೀಚೆಗೆ ಬರಿಗೈ ಯಿಂದ ಮನೆಗೆ ಹೋಗಲಾರದೆ ಬಾರಿಬಾರಿಗೂ ನೊಂದುಕೊಳ್ಳುತ್ತಾನೆ. ಮುದ್ದು ಹೇಮಂತನ ಚಿನ್ನಾಟವೇ ಅವನ ಬಾಳಿನಲ್ಲಿ ಜೀವ ತುಂಬುವ ಬುಗ್ಗೆ. ಆದರೆ ಅವನೀಗ ಹಿಂದಿನಂತಿಲ್ಲ. ದಿನದಿನಕ್ಕೆ ಮೌನಿಯಾಗತೊಡಗಿದ್ದಾನೆ.

ಶೈಲೆಯೇನು ಇದನ್ನೆಲ್ಲ ತಿಳಿಯದ ಹೆಣ್ಣೆ ? ಅವಳೂ ಹಗಲಿರಳು ಇದೇವಿಚಾರ ದಲ್ಲಿ ತನ್ನನ್ನು ಮುಳುಗಿಸಿಕೊಂಡಿದ್ದಾಳೆ. ಯಾವ ಪರಿಯಿಂದ ಅವನ ಮನಸ್ಸಿನ ನೋವನ್ನು ಕಡಮೆ ಮಾಡಲಿ ? ಹೇಗೆ ಹಿಂದಿನ ನಗು ಮೊಗವನ್ನು ಪುನಃ ಪಡೆ ಯಲಿ—ಎಂದು ಸದಾ ಯೋಚಿಸುವುದೇ ಅವಳ ದಿನಚರಿಯಾಗಿದೆ.

ಹಬ್ಬ ಹುಣ್ಣಿಮೆಗೆಂದು ತವರೂರಿನಿಂದ ಅಣ್ಣ ತಮ್ಮ ಕರೆಯಲು ಬಂದರೆ, ಆದಕ್ಕೆ ಏನಾದರೊಂದು ನೆವ ಒಡ್ಡಿ ತಾನು ಹೋಗದೆ ಮನೆಯಲ್ಲೇ ಇದ್ದು ಆನಂದ ನಿಗೆ ಜೊತೆಕೊಡುತ್ತಿದ್ದಳು.

ಆನಂದ ಎಷ್ಟೇ ದಣಿದಿರಲಿ, ರಾತ್ರಿ ಮಲಗುವ ಮುನ್ನ ಕಂದ ಹೇಮಂತನಿಗೆ ಚಿತ್ರ-ವಿಚಿತ್ರ ಕಥೆ ಹೇಳಿ, ನಕ್ಕು ನಗಿಸಿ ಮಲಗಿಸುವುದು ಅವನ ಅಚ್ಚುಮೆಚ್ಚಿನ ಕಾರ್ಯಕ್ರಮ.

ಆದರೆ ಈಗೀಗ ಆನಂದನಿಗೆ ಕಥೆ ಹೇಳುವಷ್ಟು ಮನಸ್ಸು ಪ್ರಸನ್ನವಿರುವುದಿಲ್ಲ. ಅದಕ್ಕೆಂದೇ ಮೈ ಚೆನ್ನಾಗಿಲ್ಲವೆಂದು ಹೇಳಿ ಬೇಗ ಮಲಗಿಬಿಡುವನು. ತನ್ನ ಬಗೆಗಾದ ತಂದೆಯ ಹೊಸ ರೀತಿ ಹೇಮಂತನನ್ನು ಹಟಮಾರಿಯನ್ನಾಗಿ ಮಾಡುತ್ತದೆ. ಅದಕ್ಕೆ ಹೊಣೆ ಆನಂದ-ಶೈಲೆಯರೇ. ಈವರೆಗೂ ಅವನನ್ನು ಅವರು ನೋಡಿಕೊಂಡ ರೀತಿಯೇ ಹಾಗಿತ್ತು. ಆನಂದನ ತಂಗಿ ಸುವರ್ಣೆ 'ಬಾ ಅಣ್ಣ, ನಾನು ನಿನಗೆ ತುಂಬ ಚಂದದ ಕತೆ ಹೇಳುವೆ' ಎಂದು ರಮಿಸಲು ಬಂದಾಗ ಅವಳಿಗೆ ತನ್ನ ಪುಟ್ಟ ಪುಟ್ಟ ಕೈಗಳಿಂದ ಹೊಡೆದು ಪ್ರತಿಭಟಿಸುತ್ತಿದ್ದ. ಕೊನೆಗೆ ನಿರುಪಾಯಳಾದ ಶೈಲೆ ಉಳಿದ ಮನೆಗೆಲಸ ವನ್ನು ಬದಿಗಿಟ್ಟು ಹೇಮಂತನಿಗೆ ತಾನೇ ಕತೆ ಹೇಳುವಳು.

ಹೀಗೆಲ್ಲ ಕಥೆ ಹೇಳುತ್ತ ಹರಿಶ್ಚಂದ್ರ, ನಳದಮಯಂತಿಯರ ಕತೆಯನ್ನೂ ಹೇಳು ವಳು. ಕೇಳುತ್ತ ಕುಳಿತಿದ್ದ ಸುವರ್ಣೆ-ಹೇಮಂತರು, ನಗುವ ಸಂದರ್ಭದಲ್ಲಿ ನಕ್ಕು ನಕ್ಕು ಕುಣಿದಾಡಿ, ದುಃಖದ ಸನ್ನಿವೇಶ ಬಂದಾಗ, ಅಳು ತಡೆಯಲಾರದೆ ಕಂಬನಿ ಸುರಿಸುವರು. ತನ್ನ ಕೋಣೆಯಲ್ಲಿ ಮಲಗಿದ್ದ ಆನಂದನ ಕಿವಿಗೂ ಇವೆಲ್ಲ ಕತೆಗಳು ಬೀಳುತ್ತವೆ. ಅದರಲ್ಲೂ ಕೆಲಕೆಲವು ಮಾತುಗಳು ತನಗೇ ಅನ್ವಯಿಸುವುದಕ್ಕೆ ಎಂದು ತಿಳಿದು ಮಡದಿಯ ಜಾಣ್ಮೆಗೆ ತಲೆದೂಗುವನು. ಅವಳ ಇಂತಹ ಸಹಕಾರ ಇರದಿದ್ದರೆ ಆನಂದನ ಮನಸ್ಸಿನ ತೂಕ ಎಂದೊ ತಪ್ಪಿಹೋಗುತ್ತಿತ್ತು.

ರಾತ್ರಿ ಎಲ್ಲರೂ ಮಲಗಿದ ಮೇಲೆ ಅಂದು ಹೇಮಂತನಿಗೆ ಹೇಳಿದ ನಳ-ದಮ ಯಂತಿಯ ಕತೆಯನ್ನು ನೆನಪಿಗೆ ತಂದು ಆನಂದ ಶೈಲೆಯನ್ನು ಪ್ರಶ್ನಿಸಿದ :

'ನಳನಂತೆ ಒಂದಿರುಳು ನಿನ್ನ ಬಿಟ್ಟು ಹೋದೇನೆನ್ನುವ ಭಯವೇ ಶೈಲೂ ನಿನಗೆ ?'

'ಹೇಗೆ ಹೇಳಲಿ ? ಗಂಡು ಸಂಕಟ ಕಾಲದಲ್ಲಿ ಏನು ಮಾಡಿಯಾನು ಎನ್ನು ವುದು ಕಷ್ಟ. ಇಲ್ಲವಾದರೆ ಪತಿಯನ್ನೇ ನಂಬಿದ ಸತಿಯನ್ನು ಹಾಗೆ ಬಿಟ್ಟು ಹೋಗು ವುದು ಸರಿಯೇ ? ನಾನು ಕತೆ ಹೇಳಿದ್ದು ಅದಕ್ಕಲ್ಲ, ಸುಮ್ಮನೆ ಮಗುವನ್ನು ಸಮಾ ಧಾನಪಡಿಸಲು' ಎಂದು ವಿಷಯ ಮರೆಸಲು ಯತ್ನಿಸುವಳು. ಆದರೆ ಆನಂದನಿಗೆ ಆ ಮಾತನ್ನು ಅಲ್ಲಿಗೆ ಮುಗಿಸಲು ಇಚ್ಛೆಯಿಲ್ಲ. ಮಡದಿಯ ಬಾಯಿಂದ ಇನ್ನೂ ಕೇಳಬೇಕೆಂಬ ತವಕ. 'ಕತೆ ಹೆಸರಿಗಷ್ಟೇ ಮಗುವಿಗೆ. ಅದು ಹೇಳಿದ್ದು ನನಗೇ. ಅಷ್ಟೂ ತಿಳಿಯದೆಂದು ಭಾವಿಸಿದೆಯಾ ?'

'ಇರಬಹುದು ಬಿಡಿ. ಇನ್ನು ಆ ಮಾತಿಗೇಕೆ ಸುಮ್ಮನೆ ಎಳೆದಾಟ ? ಕಷ್ಟ ನಮಗಷ್ಟೇ ಅಲ್ಲ. ಹಿಂದಿನ ರಾಜ-ಮಹಾರಾಜರನ್ನೂ ಬಿಟ್ಟಿಲ್ಲವಲ್ಲಾ ಎಂದು ನಿಮಗೆ ನೆನಪಿಗಿರಲಿ–ಎಂದು ಮನಸ್ಸಿಗೆ ಧೈರ್ಯ ತಂದುಕೊಳ್ಳಲು ಹೇಳಿದೆ' ಎನ್ನುವ ಮಡದಿಯನ್ನು ಮಮತೆಯಿಂದ ತನ್ನೆಡೆಗೆ ಎಳೆದುಕೊಳ್ಳುತ್ತಾನೆ.

ಈ ಪ್ರೀತಿ, ಮಮತೆ, ಸ್ನೇಹ ಶೈಲೆಯನ್ನು ತೀರ ಹಸುಳೆಯನ್ನಾಗಿ ಮಾಡುತ್ತದೆ. ಇನಿಯನ ಅಪ್ಪುಗೆಯಲ್ಲಿ ಇನ್ನೂ ಮುದುಡಿಕೊಳ್ಳುತ್ತ 'ಸಮಾಜ, ಜನ, ಯಾರ ಪರವೆಯೂ ನನಗಿಲ್ಲ. ಎಲ್ಲ ನೋವು ಸಂಕಟಗಳನ್ನು ನಗುನಗುತ್ತ ಸಹಿಸಿಕೊಂಡೇನು. ಆದರೆ ನಿಮ್ಮ ನೋವು ತುಂಬಿದ ಮುಖವನ್ನು ಎದುರಿಸಲಾರೆ. ನಿಮ್ಮ ನೊಂದ ಮೊಗವನ್ನು ಕಂಡಾಗ ನನ್ನೆದೆ ಗಾಬರಿಗೊಳ್ಳುತ್ತದೆ. ನೀವು ಯೋಚಿಸುವಷ್ಟು ನಮ್ಮ ಜೀವಕ್ಕೆ ಕಷ್ಟ ಬಂದಿಲ್ಲ. ಜೀವನದಲ್ಲಿ ಇಂಥ ಪ್ರಸಂಗ ಬಂದರೇನೇ ಮನಸ್ಸು ಪಕ್ವಗೊಳ್ಳುತ್ತದೆ. ಈಗೀಗ ಮತ್ತೆ ಮೊದಲಿನಂತೆ ನಿಮ್ಮ ಫಾರ್ಮಸಿ ಬಲಗೊಳ್ಳತೊಡಗಿದೆ. ಸುಮ್ಮನೆ ಮನಸ್ಸನ್ನು ಗಾಸಿಗೊಳಿಸಬೇಡಿ' ಎಂದು ಹೇಳುತ್ತ ತನ್ನ ಮನದಳಲನ್ನು ಪತಿಯ ಮುಂದೆ ತೋಡಿಕೊಳ್ಳುವಳು.

ಒಮ್ಮೊಮ್ಮೆ ಹಟ ಬಂದರೆ ಮಾತ್ರ ಶೈಲೆಯನ್ನು ಸರಿಪಡಿಸುವುದು ಕಷ್ಟ. ಆದರೆ ಅದು ಆ ಕ್ಷಣಕ್ಕೆ ಮಾತ್ರ. ಮರುಗಳಿಗೆಯಲ್ಲಿ ಅವಳ ಮುಖ ಅರಳಲೇಬೇಕು. ಇವೆಲ್ಲವೂ ನೆನಪಿಗೆ ಬಂದು ಮನಸ್ಸು ತುಸು ಸ್ತಿಮಿತಕ್ಕೆ ಬಂದಿತು ಆನಂದನದು.

* * * * * *

ಹೀಗೆ ಅವನ ವಿಚಾರ ಒಂದು ಘಟ್ಟಕ್ಕೆ ಬಂದು ಮುಟ್ಟುತ್ತಲೇ ದೃಷ್ಟಿ ಮತ್ತೊಮ್ಮೆ ಗಡಿಯಾರದತ್ತ ಹೊರಳಿತು. ಮತ್ತೂ ಅರ್ಧ ಗಂಟೆ ಸರಿದಿದೆ. ಶೈಲೆ ಇನ್ನೂ ಬರಲಿಲ್ಲ ! ಈವರೆಗೂ ನಂದಿದ್ದ ಬೆಂಕಿ ಮತ್ತೊಮ್ಮೆ ಪ್ರಜ್ವಲಿಸಿತು.

ಆದರೂ ಇಂದವನ ದುಗುಡಕ್ಕೆ ಕಾರಣ ? ಅನ್ಯರ ಜೊತೆಯಲ್ಲಿ ತನ್ನ ಮಡದಿ ಹೋದದ್ದು. ಈವರೆಗೂ ಇದಕ್ಕೊಂದು ಅರ್ಥ ಕೊಟ್ಟು ಯೋಚಿಸಿದವನಲ್ಲ. ಎಷ್ಟೋ ಬಾರಿ ತಾನೇ ಸ್ನೇಹಿತರ ಮಡದಿಯರಲ್ಲಿ ಎಷ್ಟೊಂದು ಸಲಿಗೆ, ಆತ್ಮೀಯತೆ ತೋರಿರಲಿಲ್ಲ. ?

ಇದಕ್ಕೆಲ್ಲ ಶೈಲೆಯೂ ನೊಂದುಕೊಂಡರೆ ಹೇಗೆ ?........ಛೇ, ಏನೇ ಇರಲಿ, ಇಂದವಳು ತನ್ನೊಬ್ಬನನ್ನು ಬಿಟ್ಟು ರಮಾನಂದ-ಜಾನಕಿಯರ ಜೊತೆಯಲ್ಲಿ ನಾಟಕಕ್ಕೆ ಹೋದದ್ದು ಅವನ ಮನಸ್ಸಿಗೆ ಪೆಟ್ಟುಬಿದ್ದಂತಾಗಿದೆ. ಯಾವ ವಿಧದಿಂದಲೂ ಈಗಿನ ಸನ್ನಿವೇಶದಲ್ಲಿ ಶೈಲೆಯನ್ನು ಸರಿಯಾಗಿ ತಿಳಿಯಲಾರದೆ ಆನಂದನ ಮೂಕ ವೇದನೆ ಅವನ ಕರುಳನ್ನೇ ಹಿಂಡುತ್ತಿದೆ.

ಪಕ್ಕದಲ್ಲಿ ಮಲಗಿದ್ದ ಮಗು ಎದ್ದು ಕುಳಿತು 'ಅಮ್ಮಾ, ನೀರು' ಎಂದಿತು ನಿದ್ದೆಗಣ್ಣಿನಲ್ಲಿ. ನೀರು ಕುಡಿಸಿ, ಮಗುವಿನ ಬೆನ್ನು ತಟ್ಟುತ್ತಿದ್ದಂತೆ ಅವನ ಮನಸ್ಸು ಮತ್ತೂ ವ್ಯಗ್ರವಾಯಿತು.

ಇವಳಿಗೆ ಗಂಡ, ಮಗು, ಯಾವುದೂ ಬೇಡವಾಯಿತು...........ಇದಕ್ಕೆಲ್ಲ ಕಾರಣ ? ತನ್ನ ಮೊದಲಿನ ವೈಭವ ಇಳಿಮುಖವಾದದ್ದು........ಅವಳ ಮನದಲ್ಲಿ ಆಶೆ ಮೂಡಿಬರುವ ಮುನ್ನವೇ ಅದು ಅವಳೆದುರು ಇರುತ್ತಿತ್ತು. ಅವಳ ಯಾವ ಬಯಕೆಯನ್ನೂ ಹುಸಿಯಾಗಿರಿಸಲಿಲ್ಲ ನಾನು ! ಆದರೆ ಈಗ ? ಅವಳ ಚೆಲ್ಲಾಟವಿಲ್ಲ! ನಗುವಿಲ್ಲ! ಆದರೆ ಅದೇ ರಮಾನಂದ ಬಂದಾಗ ಎಲ್ಲಿಂದ ಬರುತದೋ ಆ ನಗೆ, ಆ ಚೆಲ್ಲಾಟ ? ತುಂಬ ಆಶ್ಚರ್ಯ ! ಅವನಲ್ಲಿರುವ ಐಶ್ವರ್ಯದ ಆಡಂಬರಕ್ಕೇ ಇರಬೇಕು; ಅಲ್ಲವೇನು ?

ಇಂದು ಅವಳುಟ್ಟ ಸೀರೆ, ನನ್ನ ಪ್ರೀತಿಯದು........ನಾನು ಹೀಗೆ ಕಾಯಿಲೆಯಿಂದ ಮಲಗಿರಲು, ಅದನ್ನೇಕೆ ಉಡಬೇಕು ? ನನ್ನ ಪರಿವೆ ಇದ್ದರಲ್ಲವೇ ?

ಮೊನ್ನೆ ಅವಳಣ್ಣ ರಮೇಶ, ಊರಿಗೆ ಕರೆಯಲು ಬಂದಾಗ ಹೋಗಲು ನಿರಾಕರಿಸಿದಳು. 'ಹೋಗಬಹುದಿತ್ತಲ್ಲ ?' ಎಂದು ನಾನೆಂದಾಗ 'ಯಾವ ವೈಭವ ತೋರಲು ಹೋಗಲಿ?' ಎಂದಳು. ಹೌದು, ಅವಳೆನ್ನುವದು ನಿಜ. ಅವಳಿಗೆ ಬೇಕಾಗಿರುವುದು ಬರಿಯ ಹಣ ! ಅಲ್ಲಿಯ ವರೆಗೆ ನನಗೆಲ್ಲಿಯ ಮಾನ ? ಅಸಹನೀಯ ವೇದನೆಯನ್ನು ತಡೆಯಲಾರದಾದ ಆನಂದ.

ಸುತ್ತಲೂ ಪಸರಿಸಿದ್ದ ದೀಪದ ಬೆಳಕು ಅವನಿಗೆ ಬೇಡವಾಗಿ ಕಣ್ಣುಗಳನ್ನು ಮುಚ್ಚಿಕೊಂಡ. ಮನದಲ್ಲೇ ಯೋಚಿಸುತ್ತ ಹೊರಟ ಅವನ ದೃಷ್ಟಿಗೆ ಯುವತಿಯೋರ್ವಳು ನಗುತ್ತ ನಿಂತ ಚಿತ್ರ ಕಂಡಂತಾಯಿತು, 'ಯಾರವಳು ? ಅವಳೇ ಆನಂದನ ಅಕ್ಕನ ಮಗಳು ಶಕುಂತಲಾ. ಓ ! ಅದೆಷ್ಟು ಬೆಳೆದು ಬಿಟ್ಟಿದ್ದಾಳೆ ! ಅವನಕ್ಕ ರಮಾ, ಶಕುಂತಲೆ ತೀರ ಚಿಕ್ಕವಳಿರುವಾಗ, ಆನಂದ ತಮ್ಮಲ್ಲಿಗೆ ಬಂದಾಗಲೆಲ್ಲ ಶಕೂಗೆ 'ನಿನ್ನ ಗಂಡ ಬಂದ' ಎಂದು ಹಾಸ್ಯ ಮಾಡುತ್ತಿದ್ದಳು.

ಸುಧಾರಣೆಯ ಮೋಹಕ್ಕೆ ಬಿದ್ದ ಆನಂದ ಹಳ್ಳಿಯ ಹುಡುಗಿ ಶಕುಂತಲೆಯನ್ನು ಹೇಗೆ ಕೈ ಹಿಡಿದಾನು ?

ಈಗಿನ ಶಕುಂತಲೆಯ ಮೊಗ ದೀನ ಭಾವನೆಯಿಂದ ಏನನ್ನೋ ಯಾಚಿಸುವಂತಿತ್ತು.

........ಕೆದರಿದ ಕುರುಳು !

........ಕುಂಕುಮ ಕಾಣದ ಹಣೆ !

........ಕಣ್ಣಿನಲ್ಲಿರುವ ಕಾತರತೆ !

........ಪುರುಷ ಸಂಪರ್ಕವಿಲ್ಲದ ಅಂಗಾಂಗ !—ಇವೆಲ್ಲ ಅವಳಲ್ಲಿರುವ ಅತೃಪ್ತಿಯನ್ನು ಸಾರಿ ಹೇಳುತ್ತಿತ್ತು. ತಾನೇ ಅವಳನ್ನು ಮದುವೆಯಾಗಿದ್ದರೆ ಅವಳ ಬಾಳು ಹೀಗೆ ಹಾಳುಗೂಡುತ್ತಿರಲಿಲ್ಲ. ಆದರೆ ಮಾತ್ರ ಒಮ್ಮೆಯೂ ಶಕೂ ಈ ಭಾವನೆಯನ್ನೇ ತೋರಗೊಡಲಿಲ್ಲ............ಅವನಿಗೆ ಅವಳ ವಿಷಯವಾಗಿ ಎಷ್ಟು ಯೋಚಿಸಿದರೂ ಸಾಲದಾಯಿತು. ಮತ್ತೆ ಮತ್ತೆ ಅವಳ ವಿಷಯವಾಗಿ ಅವನ ಜೀವ ಎಳೆಯತೊಡಗಿತು.

ಆನಂದನ ಮನಸ್ಸಿಗೆ, ಕಣ್ಣಿಗೆ ಶಕುಂತಲೆ ಬಹು ಪ್ರೀತಿಯ ಮೋಹಕ ವಸ್ತುವಾಗಿ ಕಂಡಳು.

ಅಷ್ಟೇ ಶೈಲೆಗಾಗಿ ತಿರಸ್ಕಾರ, ಕೋಪ ಹೆಚ್ಚಾಯಿತು ಅವನಲ್ಲಿ. ಅವನಲ್ಲಿಯೇ ಹುದುಗಿದ್ದ ಆದರ್ಶ ಕಣ್ಮುಚ್ಚಿ ಕುಳಿತಿರಬೇಕು !

* * * * * *

ಹೊರಗಿನ ಗೇಟು ತೆರೆದ ಶಬ್ದದೊಂದಿಗೆ ಶೈಲೆ-ಜಾನಕಿಯರ ನಗುವೂ ರಮಾನಂದನ 'Good-night' ಎನ್ನುವ ಬೀಳ್ಕೊಡುವ ಕೊನೆಯ ಮಾತೂ ಒಳಗೆ ಮಲಗಿದ್ದ ಆನಂದನ ಕಿವಿಗೆ ಕಾದ ಸೀಸದಂತೆ ಸುರಿದವು. ಹೊರಗಡೆ ಮಲಗಿದ್ದ ಕೆಲಸದ ರಾಮೂ ಬಾಗಿಲು ತೆರೆಯುತ್ತಲೇ ಒಳಗೆ ಆನಂದ ನಿದ್ದೆ ಬಂದವರಂತೆ ರಗ್ಗು ಎಳೆದುಕೊಂಡು ಮಲಗಿಬಿಟ್ಟ.

ಶೈಲೆ ತುಂಬ ಗೆಲುವಿನಲ್ಲಿ ತನ್ನಿನಿಯನ ಮುಂದೆ ಅಂದಿನ ನಾಟಕದ ವಿಷಯವಾಗಿ ಹೇಳಿ ತೃಪ್ತಿಪಡಬೇಕೆಂದು ಆನಂದನ ಕೊಠಡಿಗೆ ಬಂದಿದ್ದಳು. ಆದರೆ ಮಲಗಿದ್ದ ಪತಿಯನ್ನು ಕಂಡಾಗ 'ಇಂದಿನ ನಾಟಕದ ಸುಖದಲ್ಲಿ ತಾನೊಬ್ಬಳೇ ಪಾಲುಗಾರಳಾದೆನಲ್ಲ' ಎಂದು ತನ್ನ ಬಗ್ಗೆ ಬೇಸರವೆನಿಸಿತು. ಮೆಲ್ಲನೆ ಬಂದು ಪತಿಯ ಹಣೆಯನ್ನು ಮುಟ್ಟಿ ನೋಡಿದಳು. ಜ್ವರವಿರಲಿಲ್ಲ! ಅಷ್ಟೇ ನೆಮ್ಮದಿಯೆನಿಸಿತು. ಮತ್ತೊಮ್ಮೆ ಆನಂದ ಹೊದೆದುಕೊಂಡಿದ್ದ ರಗ್ಗು ಸರಿಪಡಿಸಿ, ತನ್ನ ಉಡುಪು ಬದಲಿಸಿದಳು. ತನ್ನ ಹಾಸಿಗೆಯಲ್ಲಿ ಮಗು ಹೇಮಂತ ಸುಖವಾಗಿ ನಿದ್ರಿಸಿತ್ತು. ಮಲಗಿದ್ದಲ್ಲಿಯೇ ಅದಕ್ಕೊಂದು ಮುತ್ತನಿಟ್ಟು ಈಚೆಗೆ ಬಂದಳು. ಸುವರ್ಣೆ ತನ್ನ ಓದುವ ಪುಸ್ತಕವನ್ನು ಎದೆಯಮೇಲಿರಿಸಿ ಹಾಗೇ ನಿದ್ದೆಹೋಗಿದ್ದಳು. 'ಪಾಪ, ಪರೀಕ್ಷೆಯ ಭಯ !' ಎನ್ನುತ್ತ ಶೈಲೆ ಮನದಲ್ಲೆ ನಕ್ಕು ಸುವರ್ಣೆಯ ಕೈಗಳಿಂದ ಪುಸ್ತಕವನ್ನು ಮೆಲ್ಲನೆ ತೆಗೆದು ಬೇರೆಡೆ ಇಟ್ಟು ದೀಪವಾರಿಸಿ ತನ್ನ ಹಾಸಿಗೆಯಲ್ಲಿ ಬಂದು ಉರುಳಿಕೊಂಡಳು. ಅಂದು ನೋಡಿದ ನಾಟಕದ ಪಾತ್ರಗಳು, ದೃಶ್ಯಗಳು ಕಣ್ಮುಂದೆ ಸುಳಿದು ಹೋಗುತ್ತಿರುವಂತೆ ನಿದ್ದೆಯಾವರಿಸಿತ್ತು ಅವಳನ್ನು.

ಇತ್ತ ಗಡಿಯಾರದಲ್ಲಿ ಆಗುವ ಪ್ರತಿ ಸೆಕೆಂಡಿನ ಶಬ್ದವೂ ಆನಂದನ ಕಿವಿಗೆ ನಿಚ್ಚಳವಾಗಿ ಕೇಳುತ್ತಿತ್ತು. ಸುತ್ತು ಮುತ್ತೂ ಅಷ್ಟು ನಿಶ್ಶಬ್ದವಾಗಿತ್ತು. ಶೈಲೆಗೆ ನಿದ್ದೆ ಬಂದದ್ದು ಅರಿವಾದೊಡನೆ ಅವನಿಗೆ ಎಲ್ಲಿಲ್ಲದ ಕೋಪ, ಅಸೂಯೆ ತಲೆ ಎತ್ತಿ ನಿಂತುಬಿಟ್ಟವು. ಕೆಲ ಸಮಯದ ಹಿಂದೆ ಶೈಲೆ ಪ್ರೀತಿಯಿಂದ ಹೊದಿಸಿದ್ದ ರಗ್ಗನ್ನು ಎಳೆದು ನೆಲಕ್ಕೆ ಅಪ್ಪಳಿಸಿದ. ಹತ್ತಿರದಲ್ಲಿದ್ದ ಸ್ವಿಚ್ ಒತ್ತಿದ. ಮತ್ತೆ ಕೊಠಡಿಯಲ್ಲಿ ಬೆಳಕು ಬಿತ್ತು. ಮಡದಿಯ ಪಕ್ಕದಲ್ಲಿ ಬಂದು ನಿಂತು 'ಶೈಲಾ' ಎಂದು ಗಟ್ಟಿಯಾಗಿ ಅರಚಿಕೊಂಡ ಆನಂದ.

ದುಃಸ್ವಪ್ನವನ್ನು ಕಂಡು ಬೆಚ್ಚಿಬಿದ್ದಂತೆ ಹೆದರಿ ಶೈಲೆ ಎದ್ದು ಕುಳಿತಳು. ಸಮೀಪ ದಲ್ಲಿ ನಿಂತಿದ್ದ ಪತಿಯನ್ನು ಕಂಡು ಮನಸ್ಸು ತಿಳಿಯಾಯಿತು. ಅವಳ ಕಣ್ಣುಗಳಲ್ಲಿ ಮಾತ್ರ ನಿದ್ದೆ ಇನ್ನೂ ಬಿಟ್ಟಿರಲಿಲ್ಲ—ಎಂದೇ ಅವನ ಭಾವ ತಿಳಿಯದೆ,

'ಏನು ಕರೆದಿರಾ ? ನಾಟಕದ ವಿಷಯ ಬೆಳಿಗ್ಗೆ ಹೇಳಿದರಾಗದೆ ? ನಾ ಮಲ ಗಲೇ ?' ಎನ್ನುತ್ತ ಅವನ ಉತ್ತರದ ದಾರಿ ನೋಡದೆ ಹೊದಿಕೆಯನ್ನೆಳೆದು ಮಲ ಗಿಬಿಟ್ಟಳು.

ಆನಂದನಿಗೆ ಮನಸ್ಸನ್ನು ಹಿಡಿತದಲ್ಲಿರಿಸುವುದು ಪ್ರಯಾಸದ ಕೆಲಸವಾಯಿತು. ಮಡದಿಯು ತೋರಿದ ಭಾವ ಅಸಡ್ಡೆ ಎಂದುಕೊಂಡ. ನಾಲ್ಕೈದು ದಿನಗಳ ಜ್ವರ ದಿಂದ ಶಕ್ತಿಗುಂದಿದವನಾದ ಅವನನ್ನು ಸಿಟ್ಟು ಕೆರಳಿಸಿತು. ಕೂಡಲೆ ಮಲಗಿದ್ದ ಶೈಲೆಯ ರಟ್ಟೆ ಹಿಡಿದೆಳೆದ.

ಪತಿಯ ಬಲವಾದ ಕೈಯ ಹಿಡಿತ, ಶೈಲೆಯನ್ನು ಪೂರ್ಣ ಎಚ್ಚರಗೊಳ್ಳುವಂತೆ ಮಾಡಿತು. ಅವನ ಮುಖ ನೋಡುತ್ತಲೇ ಗಾಬರಿಗೊಂಡಳು. ತನ್ನಿನಿಯ ತನ್ನ ಮೇಲೇಕೋ ಮುನಿಸುಗೊಂಡಿದ್ದಾನೆ. ಯಾವುದೋ ಒಂದು ದುಃಶಕ್ತಿ ಅವನಲ್ಲಿ ಆಟ ವಾಡುತ್ತಿದೆ ಎಂದುಕೊಂಡಳು.

ಈವರೆಗೂ ತನ್ನಲ್ಲಿಯೇ ಮಥಿಸಿಕೊಂಡ ಮಾತುಗಳನ್ನು ಆ ಕ್ಷಣಕ್ಕೆ ಶೈಲೆಯ ಮೇಲೆ ಎರಚಿಬಿಟ್ಟ ಆನಂದ. ಅವನ ಜೀವಮಾನದಲ್ಲಿಯೇ ಎಂದೂ ಇಷ್ಟು ಕಟ್ಟು ವಾಗಿ ವರ್ತಿಸಿದವನಲ್ಲ. ಆದರೆ ಸಿಟ್ಟು ಅವನ ಬುದ್ಧಿಯನ್ನು ಮಂಕುಮಾಡಿತ್ತು.

ಶೈಲೆ ತಗ್ಗಿಸಿದ ತಲೆಯನ್ನು ಮೇಲಕ್ಕೆ ಎತ್ತದಾದಳು. ಅವಳ ಮನಸ್ಸು ಒಡೆದು ನುಚ್ಚುನೂರಾಗಿತ್ತು. ಇದೇ ಮೊದಲ ಆಘಾತ ಅವಳ ಬಾಳಿಗಾಗಿದೆ.

ಯಾರನ್ನು ಅವಳು ದೇವರು, ಜಗತ್ತು, ಪ್ರಾಣ, ಎಂದಿದ್ದಳೋ ಅಂಥ ಆನಂದ ನಿಂದ ಈ ಕೊಳಕು ಮಾತುಗಳು ! 'ಅಯ್ಯೋ' ಎನ್ನುತ್ತ ಈ ಎಲ್ಲ ಮಾತುಗಳನ್ನು

ಕೇಳಿದ್ದ ಕಿವಿಗಳನ್ನು ಮುಚ್ಚಿಕೊಂಡಳು. ಇದರಲ್ಲಿ ತನ್ನ ತಪ್ಪೇನಿದೆ? ಅವರನ್ನು ಯಾವ ಮಾತಿನಿಂದ ಸಾಂತ್ವನಗೊಳಿಸಲಿ ?

ಇಂಥ ನೂರಾರು ಯೋಚನೆಯಲ್ಲಿ ಸಿಕ್ಕು ಗಾಯಗೊಂಡ ಹರಿಣಿಯಂತೆ ನೆಲದಲ್ಲಿ ಬಿದ್ದು ಹೊರಳಾಡಿದಳು.

* * * * *

ಹಿಂದಿನ ಒಂದೆರಡು ಘಟನೆಗಳು ನಡೆದದ್ದು ಶೈಲೆಯ ಸ್ಮೃತಿಪಟಲದ ಮೇಲೆ ಮತ್ತೊಮ್ಮೆ ಮೂಡಿ ಬಂತು.

ಕೆಲವೊಮ್ಮೆ ರಮಾನಂದನ ನಡೆನುಡಿಗಳಲ್ಲಿ ಏನೋ ಒಂದು ಬಗೆಯ ಕೃತ್ರಿಮತೆಯನ್ನು ಕಂಡಾಗ ಶೈಲೆ ತನ್ನಿನಿಯನಲ್ಲಿ ಒಂದೆರಡು ಬಾರಿ ಸುತ್ತು ಬಳಸಿ ಮಾತು ತಿಳಿಸಿದ್ದಳು. ಆನಂದ ಅದನ್ನು ನಗೆಯಲ್ಲಿ ತೇಲಿಸಿ ರಮಾನಂದನ ವಿಶಾಲ ಹೃದಯ, ನಿಸರ್ಗಪ್ರಿಯತೆಯನ್ನು ತನ್ನ ಮಾತಿನಿಂದ ವ್ಯಕ್ತಪಡಿಸಿದ್ದ.

ಒಮ್ಮೊಮ್ಮೆ ಅವಳಿಗೆ ಆನಂದನ ಮೇಲೆ ಎಲ್ಲಿಲ್ಲದ ಕೋಪ, ಬೇಸರವೆನಿಸುತ್ತಿತ್ತು. ತನ್ನ ರಕ್ಷಣೆಯ ಭಾರ, ತನ್ನಾತನಲ್ಲದೆ ಬೇರಾರು ಹೊರಬೇಕು ? ಹೀಗಿದ್ದೂ ತಿಳಿದೋ ತಿಳಿಯದೆಯೋ ಈ ಬಗೆಯ ಆವನ ನಿರ್ಲಿಪ್ತತನ ಅವಳಿಗೆ ಸಮಸ್ಯೆಯಾಗಿತ್ತು. ಆದರೆ ದಿನಗಳೆದಂತೆ ಶೈಲೆಯ ಮನಸ್ಸು ಅಂಥ ಯಾವ ಸಮಸ್ಯೆಗೂ ಒಳಪಟ್ಟಿರಲಿಲ್ಲ. ತನ್ನನ್ನು ರಕ್ಷಿಸಿಕೊಳ್ಳಬಲ್ಲ ಶಕ್ತಿ ತನಗಿದೆ ಎನ್ನುವ ಅರಿವುಂಟಾಗಿದೆ ಅವಳಿಗೆ.

ಹಾಗೇ ರಮಾನಂದನ ವಿಲಾಸಮಯ ಜೀವನ ಕಣ್ಣೆದುರು ಬಂದು ನಿಂತಿತು. ಶೈಲೆ ಮೊದಲು ಭಾವಿಸಿದ್ದೇನು ? ರಮಾನಂದನಿಗೆ ಪತ್ನಿಯ ಮೇಲೆಷ್ಟು ಮೋಹ ! ಅವಳ ಬಗೆಗೆ ಅವನಿಗೆಷ್ಟು ಆಸ್ಥೆ ! ಜಾನಕಿಗಾಗಿ ಅವನು ಏನು ಮಾಡಲೂ ಸಿದ್ಧ ! ಅವರಿಬ್ಬರಿಗೂ ಯಾವುದಕ್ಕಿದೆ ಕೊರತೆ ?

ಶೈಲೆ ಕೆಲವೊಮ್ಮೆ 'ಹೆಣ್ಣಿಗೆ ಅಂಥ ಸುಖವಿರಬೇಕು' ಎಂದೂ ಬಯಸಿದ್ದೂ ಉಂಟು. ಆದರೆ ಅದು ಕ್ಷಣಕಾಲ ಮಾತ್ರ ! ನಿಜಸ್ಥಿತಿ ಅರಿವಾಗಲು ಬಹಳ ಕಾಲ ಹಿಡಿಯಲಿಲ್ಲ. ಹೊರಗೆಷ್ಟು ಪ್ರಕಾಶಮಾನವಾಗಿ ಬೆಳಕು ಬಿದ್ದಿದೆಯೋ ಅಷ್ಟೇ ಕತ್ತಲು ಕವಿದಿತ್ತು ಅವರಿಬ್ಬರ ಬಾಳಿನಲ್ಲಿ. ಇದನ್ನರಿತ ಶೈಲೆ ಜಾನಕಿಗಾಗಿ ಮನದಲ್ಲೆ ಮರುಗುತ್ತಿದ್ದಳು.

* * * * * *

ತೆರೆದಿಟ್ಟ ಕಿಟಕಿಯಿಂದ ತಂಗಾಳಿ ಬಂದು ಆನಂದನ ಮೈ ಕೈಗಳನ್ನು ಹಗುರಾಗಿಸಿತು. ಅಲ್ಲೊಂದು ಇಲ್ಲೊಂದು ಹಕ್ಕಿಗಳ ಚಿಲಿಪಿಲಿ ಕೂಗು ಅವನ ಕಿವಿಗೆ ಕಿಚುಕುಳಿಯಾಡಿಸಿದಂತಾಯಿತು. ಕಿಟಕಿಗೆ ಹಬ್ಬಿರುವ ಜಾಜಿಮಲ್ಲಿಗೆಯ ಬಳ್ಳಿಯಿಂದ

ಬರುತ್ತಿರುವ ಮೃದು ಸುಹಾಸ ಅವನನ್ನು ಸಂತೈಸುವಂತಿತ್ತು. ರಾತ್ರಿಯ ದುಗುಡ ಮರೆಯಾದಂತಾಗಿ ಅವನ ದೃಷ್ಟಿ ಪಕ್ಕದ ಮಂಚಕ್ಕೆ ತಿರುಗಿತು.

ತನ್ನ ಕಣ್ಣುಗಳನ್ನು ತಾನೇ ನಂಬದಾದ. ಶೈಲೆಯ ಆ ಮುದುಡಿದ ದೇಹ, ಕಪ್ಪಿಟ್ಟ ಮುಖ ಪುನಃ ರಾತ್ರಿಯ ನೆನಪನ್ನು ತಂದುಕೊಟ್ಟಿತು. ಇದೇ ಶೈಲೆಯನ್ನು ನಿನ್ನಿನ ಇರುಳಿನಲ್ಲಿ ಹೇಗೆಲ್ಲ ಚಿತ್ರಿಸಿಕೊಂಡೆ! ಅವಳೊಡನೆ ನಡೆದುಕೊಂಡ ರೀತಿ ನೆನಪಿಗೆ ಬರುತ್ತಲೇ ಕಣ್ಣುಗಳು ತುಂಬಿಬಂದವು. ಹೋಗಿ ರಮಿಸಲೇ ಎಂದು ಮೆಲ್ಲನೆ ಎದ್ದು ಶೈಲೆಯ ಹತ್ತಿರಕ್ಕೆ ಹೋದ. ಒಂದು ಕ್ಷಣ ಏನೋ ಯೋಚನೆ ಬಂದು ಅವನನ್ನು ಹಿಂದಕ್ಕೆ ಎಳೆಯಿತು.

ಸರಿ; ಬೆಳಗಾಯಿತು. ಇಷ್ಟು ಸಮಯವಾದರೂ ಇನ್ನೂ ಏಳದಿದ್ದ ಅತ್ತಿಗೆಯನ್ನು ಸುವರ್ಣೆ ಎಚ್ಚರಗೊಳಿಸಲು ಹೋದಳು. ಹಿಂದಿನ ರಾತ್ರೆ ನಾಟಕಕ್ಕೆ ಹೋದದ್ದು ನೆನಪಿಗೆ ಬರಲು, ಸುವರ್ಣೆಗೆ ಅತ್ತಿಗೆ ಏಳದಿರುವ ಕಾರಣ ಹೊಳೆಯಿತು. ಅದೇ ಸಮಾಧಾನದಿಂದಲೇ ಶೈಲೆ ಮಲಗಿದ್ದಲ್ಲಿಗೆ ಬಂದು-'ಅತ್ತಿಗೆ, ಅತ್ತಿಗೆ. ಏಳಿನ್ನು. ಅಣ್ಣ ಆಗಲೇ ಹೊರಗೆ ಹೋಗಿಬಿಟ್ಟ' ಎಂದಳು.

ಯಾರಿಗೂ ಎಂದೂ ತನ್ನ ಮ್ಲಾನವದನ ತೋರಿದವಳಲ್ಲ ಶೈಲೆ. ಏನಿದ್ದರೂ ನುಂಗಿಕೊಂಡು ನಗುನಗುತ್ತ ಮಾತಾಡುವ ರೀತಿ ಅವಳದು. ಇಂದು-ಈಗ ಮಾತ್ರ-ಏಳುವ ಮನಸ್ಸಿಲ್ಲದೆ, ಮುಖ ತೋರಿಸುವ ಇಚ್ಛೆ ಇಲ್ಲದೆ, ಶೈಲೆ ಏಳದಿರಲಾರದೆ ಹಗುರಾಗಿ ಎದ್ದು ಕುಳಿತಳು.

ಮುಖವೆಲ್ಲ ಬಾತುಕೊಂಡಿತ್ತು. ಕಣ್ಣುಗಳು ಊದಿಕೊಂಡಿದ್ದವು. ಸುವರ್ಣೆಗೆ ಆಶ್ಚರ್ಯ! ಅತ್ತಿಗೆ ನಾಟಕ ನೋಡಿ ಬಂದಿದ್ದಾಳೆ; ನಿದ್ದೆಗೆಟ್ಟಿದ್ದಾಳೆ; ನಿಜ. ಆದರೆ ಹೀಗೇಕೆ ಬಲಗುಂದಿದವಳಂತೆ ಕಾಣುತ್ತಾಳೊ ಎಂದು ತಿಳಿಯದೆ ಬೆರಗಾಗಿ ನಿಂತುಬಿಟ್ಟಳು.

ಆನಂದನ ಅಚ್ಚುಮೆಚ್ಚಿನ ತಂಗಿ ಸುವರ್ಣೆ. ತಂದೆ-ತಾಯಿಗಳ ಜೊತೆಯಲ್ಲಿ ಅವಳನ್ನು ಬಿಡದೆ ತಾನೇ ನೋಡಿಕೊಳ್ಳುವ ಭಾರ ಹೊತ್ತಿದ್ದಾನೆ. ಅವಳು ತಂದೆ-ತಾಯಿಯರನ್ನು ಒಮ್ಮೊಮ್ಮೆ ಬಿಟ್ಟು ಇದ್ದಾಳು. ಆದರೆ ಅಣ್ಣ-ಅತ್ತಿಗೆಯರನ್ನು ಬಿಟ್ಟಿರಲಾರಳು. ಅಣ್ಣ-ತಂಗಿಯರ ಸ್ವಭಾವವೂ ಒಂದೇ ಬಗೆಯದು. ಶೈಲೆಯನ್ನು ಆ ಎರಡು ಜೀವ ತುಂಬ ಮೆಚ್ಚಿಕೊಂಡಿದ್ದವು. ಯಾವ ಮಾತೇ ಇರಲಿ, ಶೈಲೆ-ಸುವರ್ಣೆಯರಲ್ಲಿ ಮುಚ್ಚು-ಮರೆ ಇರಲಿಲ್ಲ. ಹಾಗೆ ಬೆಳೆದು ಬಂದಿತು ಅವರಿಬ್ಬರ ಮೈತ್ರಿ. ಎಂದೇ ಸುವರ್ಣೆಯನ್ನು ಕಂಡೊಡನೆ ಶೈಲೆ ತನ್ನೆಲ್ಲ ಮನದ ನೋವನ್ನು ಕಡಿಮೆ ಮಾಡಿಕೊಳ್ಳುವ ಸಾಧನವೆಂದುಕೊಂಡು ಅವಳ ಹೆಗಲ ಮೇಲೆ ಮುಖವಿರಿಸಿ ಮನದಣಿಯೆ ಅತ್ತುಬಿಟ್ಟಳು.

ಸುವರ್ಣೆ ತನ್ನತ್ತಿಗೆಯ ನೋವಿನ ಮೂಲ ತಿಳಿಯದೆ ಪೇಚಾಡಿದಳು. ಅವಳಿ ಗರಿಯದಂತೇ ಹೃದಯ ರೋದಿಸತೊಡಗಿತು. ಸಂತೈಸಲು ಬಂದ ಸುವರ್ಣೆ— ಅವಳ ಕಣ್ಣುಗಳೂ ಕಂಬನಿಗಳಿಂದ ತುಂಬಿಕೊಂಡವು.

ತನ್ನ ದುಃಖದಲ್ಲಿ ಪಾಲುಗಾರಳಾದ ನಾದಿನಿಯನ್ನು ಕಂಡು ಶೈಲೆಗೆ ತುಸು ಸಮಾಧಾನವಾಗಿರಬೇಕು; ಎಂದೇ ಸುವರ್ಣೆಯ ನೀರು ತುಂಬಿದ ಕಣ್ಣುಗಳನ್ನು ತನ್ನ ಸೆರಗಿನ ತುದಿಯಿಂದ ಒರಸುತ್ತ,

'ನೀನ್ಯಾಕಮ್ಮಾ ಅಳುತ್ತಿ ? ಇದು ನನ್ನ ಕರ್ಮ. ಸುಮ್ಮನೆ ನೀನೇಕೆ ನೊಂದು ಕೊಳ್ಳುತ್ತಿ ?' ಎಂದುಸುರಿದಳು.

ಅತ್ತಿಗೆಯ ಮುಖವನ್ನು ಸುವರ್ಣೆ ಮೇಲಕ್ಕೆತ್ತಿ,

'ನಿನಗಾದದ್ದಾದರೂ ಏನು? ಅಣ್ಣ ಏನಾದರೂ ಬಿರುಸು ಮಾತನ್ನಾಡಿದನೇ? ನನ್ನೊಡನೆ ಹೇಳಬಾರದೇ ?'

'ಏನಮ್ಮ, ನಿನ್ನಿನ ನಾಟಕ ಇದಕ್ಕೆ ಮೂಲ. ನೀನೂ ಬಂದಿದ್ದರೆ ಇಂದಿನ ಪ್ರಸಂಗವೇ ಬರುತ್ತಿರಲಿಲ್ಲ. ಪರೀಕ್ಷೆಯೆಂದು ನೀನು ಬಾರದೆ ಹೋದಿ. ಉಳಿದ ಮಾತುಗಳೇಕಮ್ಮಾ ? ಒಟ್ಟು ನನ್ನ ಅದೃಷ್ಟ ಚೆನ್ನಾಗಿಲ್ಲ........' ಶೈಲೆಯ ಮಾತು ಅರ್ಧಕ್ಕೆ ನಿಂತು, ಅಳು ಮುಂದುವರಿಯಿತು.

ಅವರಿಬ್ಬರೂ ಹೀಗೆ ಎಷ್ಟು ಸಮಯ ಕಳೆಯುತ್ತಿದ್ದರೋ ಏನೋ ? ಹೇಮಂತ 'ಅಮ್ಮಾ, ನಂಗೆ ಹಾಲು—ತಿಂಡಿ' ಎಂದಾಗಲೇ ಎಚ್ಚರ. ತಾನು ಬಂದರೂ ಅಮ್ಮ ಇನ್ನೂ ಏಳದಿದ್ದುದನ್ನು ಕಂಡು ಹೇಮಂತನಿಗೆ ಅಚ್ಚರಿಯಾಯಿತು. ಕೂಡಲೇ ಅಮ್ಮನ ತೊಡೆ ಏರಿದವನೇ ತಾಯಿಯ ಮುಖವನ್ನು ತನ್ನೆಡೆಗೆ ಎಳೆದುಕೊಂಡ. ತಾಯಿಯ ಕಂಬನಿ ತುಂಬಿದ ಕಣ್ಣುಗಳನ್ನು ನೋಡುತ್ತಲೇ ಅವನ ಪುಟ್ಟ ಹೃದಯ ಗಾಬರಿಗೊಂಡಿತು. ಒಂದು ಕ್ಷಣದಲ್ಲಿ ಎಷ್ಟೋ ಯೋಚನೆ ತುಂಬಿತು ಹೇಮಂತನ ಮನದಲ್ಲಿ. ತನ್ನಮ್ಮ ಏಕಳುತ್ತಿರಬಹುದು ? ಯಾರು ಹೊಡೆದಿರಬಹುದು ? ಅಮ್ಮ ನಿಗೆ ಹೊಡೆಯಬೇಕಾದರೆ ಬೇರೆ ಯಾರು ? ಉತ್ತರ ಅವನಿಗೆ ಕ್ಷಣಮಾತ್ರದಲ್ಲಿ ಹೊಳೆಯಿತು. ತೊಡೆ ಬಿಟ್ಟು ಇಳಿದವನೇ ಸುವರ್ಣೆಯ ಕೈಯನ್ನು ಹಿಡಿದೆಳೆದು 'ಸುನ್ನಕ್ಕಾ, ಅಮ್ಮನಿಗೆ ಅಪ್ಪ ಹೊಡೆದರೇನು ? ಬರಲಿ ಮನೆಗೆ. ನಾನೂ ಸಮಾ ಅವರಿಗೇ ಹೊಡೆಯುತ್ತೇನೆ' ಎಂದಿತು ಪುಟ್ಟ ಮಗು.

ಇಂಥ ಸಮಯದಲ್ಲೂ ಅತ್ತಿಗೆ–ನಾದಿನಿಯರಿಗೆ ಮಗುವಿನ ಮಾತು ನಗು ತರಿಸಿತು. ಹೆಚ್ಚು ಮಾತಿಗೆ ಅವಕಾಶ ಕೊಡದೆ ಸುವರ್ಣೆ ಹೇಮಂತನನ್ನೆತ್ತಿಕೊಂಡು ಮೋರೆ ತೊಳೆಯಲು ಬಚ್ಚಲಿಗೆ ಕರೆದೊಯ್ದಳು.

'ಪಾಪ, ಮಗುವಿಗೇನು ಗೊತ್ತು, ಕೈಯ ಪೆಟ್ಟಗಿಂತಲೂ ಮಾತಿನ ಪೆಟ್ಟು ಬಲವಾದದ್ದೆಂದು!' ಮನದಲ್ಲೇ ಅಂದುಕೊಂಡಳು ಶೈಲೆ.

ತೊಳೆದ ಪಾತ್ರೆಗಳನ್ನು ಒಳಗೆ ತಂದಿಟ್ಟ ಕೆಲಸದವಳು ಒಡತಿಯನ್ನು ಕಾಣದೆ, ಒಳಕ್ಕೆ ಬಂದಳು. ಈ ಮನೆಗೂ ಆವಳಿಗೂ ಎಂಟು-ಹತ್ತು ವರುಷಗಳ ಸಂಬಂಧ. ಮನೆಯ ಜನಕ್ಕೂ ತುಂಬ ಬೇಕಾದವಳಾಗಿದ್ದಳು ಲಚುಮಿ.

ಹೆಜ್ಜೆಯ ಸಪ್ಪಳಕ್ಕೆ ಶೈಲೆ ಸಾವರಿಸಿಕೊಂಡು ಮತ್ತೆ ಎದ್ದು ಕುಳಿತಳು. ಲಚುಮಿಯನ್ನು ಕಾಣುತ್ತಲೇ ಮುಖದಲ್ಲಿ ನಗು ತಂದುಕೊಂಡು, 'ನಿನ್ನೆ ರಾತ್ರಿ ನಾಟಕಕ್ಕೆ ಹೋಗಿದ್ದೆ. ನಿದ್ದೆ ಸರಿಯಾಗಿ ಆಗಿಲ್ಲ ನೋಡು, ಲಚುಮಿ' ಎಂದು ತನ್ನ ಏಳದಿದ್ದ ಕಾರಣವನ್ನು ತಿಳಿಸಿದಳು ಶೈಲೆ.

ಲಚುಮಿ ಒಳಗೆ ಬರಲು ಇನ್ನೊಂದು ಕಾರಣವಿತ್ತು; ತನ್ನ ದುಃಖವನ್ನು ಒಡತಿಯ ಮುಂದೆ ತೋಡಿಕೊಳ್ಳಬೇಕೆಂದಿದ್ದಳು. ಆದರೆ ಇಲ್ಲಿಯೂ ದಿನದಂತೆ ಇಲ್ಲ. ಏನೋ ಅವ್ಯವಸ್ಥೆ. ಏನಿರಬಹುದು ಎಂದು ತನ್ನಲ್ಲಿಯೇ ಗೊಣಗಿಕೊಂಡಳು.

ಇದಕ್ಕೆಲ್ಲ ಬರಿಯ ನಿದ್ದೆ ಕಾರಣವಾಗಿರದೆ, ಬೇರೆ ಏನೋ ಇರಬೇಕು ಎಂದು,

'ಏನಮ್ಮಾ, ಕಣ್ಣು ಬಾತುಕೊಂಡಿದೆ. ಮುಖವೆಲ್ಲ ಕೆಂಪಗಾಗಿದೆ. ಮತ್ತೇನಾದರೂ ವಿಶೇಷ ? ನಮ್ಮ ಪುಟ್ಟಣ್ಣನಿಗೆ ತಂಗಿ ಬೇಡವಾ ?' ಎಂದಳು ತುಂಬ ಗೆಲುವಿನಿಂದ ಲಚುಮಿ.

'ಎಂಥ ಹುಚ್ಚಿಯೇ ನೀನು ? ಹಗಲಿರಳೂ ನಿನಗೆ ಒಂದೇ ಯೋಚನೆ— ಮೊನ್ನೆಯಲ್ಲವೇ ನಾನು ಮಿಂದದ್ದು.' ಎಂದು ನೆನಪು ಮಾಡಿಕೊಟ್ಟಳು ಶೈಲೆ. ತನ್ನ ಮೂಢತನಕ್ಕೆ ಮನದಲ್ಲಿ ನಾಚಿಕೊಂಡ ಲಚುಮಿ ಸುಮ್ಮನೆ ಕುಳಿತಿರಲಾರದೆ ತನ್ನ ಎಲೆಯಡಿಕೆಯ ಚೀಲ ಹೊರತೆಗೆದಳು.

ಮೌನವಾಗಿ ಕುಳಿತ ಒಡತಿಯನ್ನು ಕಂಡು ಲಚುಮಿಗೆ ಇನ್ನೂ ಆಶ್ಚರ್ಯ. ಎಂದೂ ಹೀಗಿದ್ದವರಲ್ಲ— ಏನಾಗಿರಬಹುದು ಎನ್ನುವ ಕುತೂಹಲ ಅವಳನ್ನು ಮಾತನಾಡುವಂತೆ ಮಾಡಿತು.

'ಮುಖ ಚಿಕ್ಕದಾಗಿದೆ. ಏನು, ರಾಯರು ನೀವು........'

'ಸಾಕು ಸುಮ್ಮನಿರೆ' ಎನ್ನುತ್ತ ಲಚುಮಿಯ ಮಾತು ಅಲ್ಲಿಗೇ ನಿಲ್ಲಿಸಿದಳು ಶೈಲೆ. ಲಚುಮಿ ಕೇಳಬಾರದಾಗಿತ್ತೊ ಏನೋ ಎನ್ನುವಂತೆ ನಾಲಿಗೆ ಕಚ್ಚಿಕೊಂಡಳು.

ಶೈಲೆಯೂ ಅವಳ ಮಾತಿನಿಂದ ಒಂದು ಕ್ಷಣ ಕಕ್ಕಾವಿಕ್ಕಿಯಾದಳು. ಆದರೆ ಮರುಕ್ಷಣಕ್ಕೆ 'ನೀನಂದದ್ದು ನಿಜ, ಲಚುಮಿ. ಮುಖ ಚಿಕ್ಕದಾಗಿರಬಹುದು. ನಿನ್ನೆ

ಸಂಜೆಯಿಂದಲೂ ಮನಸ್ಸಿಗೆ ಸೊಗಸಿಲ್ಲ. ಊರಿನಿಂದ ಓಲೆ ಬಂದಿದೆ. ನನ್ನಜ್ಜಿಗೆ ಕಾಯಿಲೆಯಂತೆ.'

ಇಷ್ಟು ಮಾತು ಆಡಲು ಶೈಲೆಗೆ ಸಾಕುಸಾಕಾಯಿತು.

'ಅಯ್ಯೋ ಪಾಪ, ಅಜ್ಜಿಗೆ ಕಾಯಿಲೆ ಎಂದಮೇಲೆ ನೀವು ಊರಿಗೆ ಹೋಗಲೇ ಬೇಕು. ಹಿರಿಯ ಜೀವ ಒಮ್ಮೆ ಹೋಯಿತೆಂದರೆ ಪುನಃ ದೊರೆತೀತೇ ? ಕೊನೆಯ ಬಾರಿಯೆಂದು ಕಣ್ಣುತುಂಬ ನೋಡಿಕೊಂಡು ಬನ್ನಿ' ಎಂದು ತನ್ನ ಸಹಾನುಭೂತಿ ವ್ಯಕ್ತಪಡಿಸಿದಳು ಲಚುಮಿ.

ಇಷ್ಟಾದರೂ ಅವಳು ಅಲ್ಲಿಂದ ಏಳುವ ಸೂಚನೆ ಕಂಡುಬರಲಿಲ್ಲ! ಶೈಲೆಗೆ ಹೇಗಾದರೂ ಅವಳಿಂದ ಉಪಾಯವಾಗಿ ಪಾರಾಗಬೇಕಾಗಿದೆ. ಎಂದೇ 'ಏನು ಲಚುಮಿ, ನಿನ್ನ ಗಂಡನಿಗೆ ಈವೊತ್ತು ಅಡಿಗೆ-ಊಟ ಇಲ್ಲವೇನು ? ಇಲ್ಲಿಯೇ ಕುಳಿತುಬಿಟ್ಟೆ ?' ಎಂದಳು.

ಈ ಮಾತುಗಳಿಂದ ಲಚುಮಿಯ ಮುಖಚರ್ಯೆ ಬದಲಾಗಿ ಹುಬ್ಬು ಗಂಟಿಕ್ಕಿತು.

'ನಿನ್ನೆ ರಾತ್ರಿಯೆಲ್ಲ ಮೈನುಗ್ಗಾಗುವಂತೆ ಹೊಡೆದಿದ್ದಾನೆ. ಅದಕ್ಕೆಂದೇ ಇಂದು ಮನೆಗೆ ಹೋಗೋದಿಲ್ಲ. ತಾನೇ ದಾರಿಗೆ ಬರುತ್ತಾನೆ. ಉಪವಾಸ ಇದ್ರೆ ಬುದ್ಧಿ ಬರುತ್ತದೆ. ನೀವು ಏನೂ ಹೇಳಿ— ನಿಮ್ಮ ಗಂಡಸರ ಹಾಗಲ್ಲ ನಮ್ಮ ಜನ. ಅವರಿಗೆ ಸಿಟ್ಟು ಬಂದರೆ ತೀರಿತು. ದನ ಹೊಡೆದಂತೆ ಹೊಡೆಯುತ್ತಾರೆ. ದಯೆ-ಮಾಯೆ ಇಲ್ಲವೇ ಇಲ್ಲ. ಅದಕ್ಕೂ ಪಡೆದು ಬಂದಿರಬೇಕು, ನಿಮ್ಮ ಯಜಮಾನರ ಹಾಗೆ ಇರಲು' ಎಂದುಕೊಳ್ಳುತ್ತ ಹೋಗಲು ಎದ್ದಳು.

ಶೈಲೆ ಕೆಲಸದವಳು ಹೋದ ನಿಟ್ಟನ್ನೇ ನೋಡುತ್ತ 'ಗಂಡ-ಹೆಂಡಿರ ಜಗಳಕ್ಕೆ ಶ್ರೀಮಂತಿಕೆಯೇನು, ಬಡತನವೇನು ? ಆದರೆ ಜಗಳದ ರೀತಿ ಬೇರೆ ಬೇರೆ. ಬಡತನದಲ್ಲಿ ಹೆಣ್ಣು-ಗಂಡು ಕೂಡಿ ದುಡಿಮೆ ಮಾಡಿ ಸಂಸಾರ ನಡೆಸುವುದರಿಂದ ಇಂಥ ಜಗಳ ಸ್ವಾಭಾವಿಕ. ಆದರೆ ಲಚುಮಿಯನ್ನು ಮೋಸಗೊಳಿಸಲು ತಾನಿಂದು ಅಜ್ಜಿಗೆ ಕಾಯಿಲೆಯೆಂದು ಸುಳ್ಳು ಹೇಳಬೇಕಾಯಿತಲ್ಲವೇ' ಎಂದು ಮರುಗಿದಳು.

ಯಾರಿಲ್ಲದಾಗಲು ಪುನಃ ಅವಳ ಮನಸ್ಸು ಹಿಂದಿನ ರಾತ್ರಿಯನ್ನು ಜ್ಞಾಪಿಸಿಕೊಂಡಿತು. ಪತಿಗೆ ಬೇಡಾದ ಈ ಜೀವ ಇದ್ದೇನು ಫಲ ? ಹೇಗೆ ಕೊನೆಗಾಣಿಸಲಿ ? ಅತ್ತೆ-ಮಾವಂದಿರಿಗೆ ಇದು ತಿಳಿದರೆ? ಇಂಥ ಸಮಯವನ್ನೇ ಇದಿರು ನೋಡುತ್ತಿರುವ ಜನ ಆಡಿಕೊಳ್ಳದೆ ಬಿಟ್ಟೀತೇ ?

ತನ್ನ ಹಸುಳೆಯ ನೆನಪು ಬರುತ್ತಲೇ ಶೈಲೆ ಹುಚ್ಚಿಯಂತಾದಳು. ಮಗ-ಪತಿ ಇವರಿಬ್ಬರನ್ನಗಲಿ ನಾನು ಎಲ್ಲಿ ಹೋಗಬಲ್ಲೆ ? ಸಾವನ್ನಪ್ಪುವುದಾದರೂ ಹೇಗೆ ?

ಯಾವ ಬಗೆಯಿಂದ ಧೈರ್ಯ ತಂದುಕೊಳ್ಳಲಿ ? ನನ್ನ ಮನದ ನೋವನ್ನು ಯಾರ ಮುಂದೆ ತೋಡಿಕೊಳ್ಳಲಿ ? ಒಂದು ಚಿಕ್ಕ ಮಾತಿಗೂ ರವಿಸಲು ಬರುವ ಆನಂದ, ಇಂದು ತೀರ ನಸುಕಿನಲ್ಲಿ ಅನಾರೋಗ್ಯದಲ್ಲಿಯೂ ಹೊರಟು ಹೋದದ್ದು ಅವಳನ್ನು ಭಯವಿಹ್ವಲಳನ್ನಾಗಿ ಮಾಡಿದೆ. ದಾರಿಕಾಣದ ಪಥಿಕನಂತೆ ದಿಕ್ಕೆಟ್ಟು ಕುಳಿತು ಬಿಟ್ಟಿದ್ದಾಳೆ.

ಹೇಮಂತನ ಬೆಳಗಿನ ಹಾಲು—ತಿಂಡಿಯ ಕಾರ್ಯಕ್ರಮ ಮುಗಿಸಿ ಸುವರ್ಣೆ ಅತ್ತಿಗೆಯ ಹತ್ತಿರ ಬಂದಾಗಲೂ ಶೈಲೆ ಕುಳಿತಿರದೆ ಹಾಸಿಗೆಯಲ್ಲಿ ಬೋರಲಾಗಿ ಬಿದ್ದುಕೊಂಡಿದ್ದಳು.

ಸುವರ್ಣೆ ಅತ್ತಿಗೆಗಾದ ನೋವು ಎಷ್ಟಿರಬಹುದೆಂದು ತನ್ನಲ್ಲಿಯೇ ಊಹಿಸಿಕೊಂಡಳು. ಶೈಲೆ ಇದುವರೆಗೂ ಹೀಗೆ ಮನೆಯಲ್ಲಿ ನಡೆದುಕೊಂಡಿರಲಿಲ್ಲ. ಅಣ್ಣನಾದರೂ ಮನೆಯಲ್ಲಿರುತ್ತಿದ್ದರೆ ! ಏನೂ ತಿಳಿಯದಾಗಲು ಹೇಮಂತನನ್ನು ಪುನಃ ಎತ್ತಿಕೊಂಡು ಎದುರಿನ ತೋಟಕ್ಕೆ ಹೋದಳು.

ಶೈಲೆಯ ಕಣ್ಣೀರಿನಿಂದ ದಿಂಬೆಲ್ಲ ಒದ್ದೆಯಾಗಿತ್ತು. ದಿಂಬಿಗೆ ಕೈ ಸವರುವಾಗ ಒಂದು ಕಾಗದ ಅವಳ ಕೈಗೆ ತಾಕಿತು. ನೋಡುತ್ತಾಳೆ—ಆನಂದನ ಕೈ ಬರಹ; ಬರೆದದ್ದು ತನ್ನನ್ನೇ ಕುರಿತು ! ಓದಲು ಒಮ್ಮೆಗೇ ಧೈರ್ಯವಾಗಲೊಲ್ಲದು. ಓದದಿರಲಿಕ್ಕೂ ಮನಸ್ಸು ಕೇಳದು. ಮತ್ತೇನು ಕಾದಿದೆಯೋ ಎನ್ನುವ ಭೀತಿ. ಕಂಬನಿಯ ಮಂಜಿನಲ್ಲಿಯೇ ಓದತೊಡಗಿದಂತೆ ದೃಷ್ಟಿ ಮತ್ತೂ ಮಂಜಾಯಿತು........

ಎದೆ ಭಾರವೆಲ್ಲ ಇಳಿದಂತಾಗಿ, ಅವಳಿಗರಿಯದಂತೆ ಮನಸ್ಸು ಹಗುರಾಯಿತು.

ಇರುಳಿನ ದುಃಖದ ಬೇಗೆ ಇಷ್ಟು ಲಘುವಾಗಿ, ಬಿಳಿಯ ಮೋಡವಾಗಿ ತೇಲಿ ಹೋದೀತೆಂದು ಶೈಲೆ ಭಾವಿಸಿರಲಿಲ್ಲ. ಪಶ್ಚಾತ್ತಾಪದ ಬೆಂಕಿಯಲ್ಲಿ ಬೆಂದ ಪತಿಯನ್ನು ಸಂತೈಸುವ ಹೊಣೆ ತನ್ನದೆಂದರಿತ ಅವಳು, ಲಗು-ಬಗೆಯಿಂದ ಅಲ್ಲಿಂದೆದ್ದು ನಿಲುವುಗನ್ನಡಿಯ ಎದುರಿಗೆ ಹೋಗಿ ನಿಂತಳು. ತನ್ನ ಕೆದರಿದ ಕೂದಲು, ನಿದ್ದೆಗೆಟ್ಟ ಕಣ್ಣುಗಳು, ಬಾಡಿದ್ದ ಮೊಗವನ್ನು ಕಂಡು ಅವಳಿಗೇ ದಿಗಿಲು !

ತನ್ನ ನೀಳವಾದ ಜಡೆಯನ್ನು ಬಿಚ್ಚಿ ಹಣಿಗೆಯಿಂದ ಬಾಚಿಕೊಂಡು ಚೆಲುವಾಗಿ ಮುಡಿ ಕಟ್ಟಿಕೊಂಡಳು. ಎದುರಿನ ಕುರಳನ್ನು ತುಸು ಕೆದರಿಕೊಂಡಳು. ಆನಂದನಿಗೆ ಹಾಗಿದ್ದರೆ ಬಹು ಪ್ರೀತಿ. ಇಷ್ಟೆಲ್ಲ ಅಲಂಕಾರ ಮುಗಿಸಿ ಪುನಃ ಕನ್ನಡಿಯಲ್ಲಿ ನೋಡಿಕೊಂಡಳು. ಅದೆಷ್ಟು ತ್ವರೆಯಾಗಿ ತನ್ನ ಮುಖದಲ್ಲಿ ಬದಲಾವಣೆ ! ಅದಕ್ಕೆ ಕಾರಣವಾದ ಓಲೆಯನ್ನು ಮುದ್ದಿಟ್ಟು ಮತ್ತೆ ದಿಂಬಿನ ಕೆಳಗಿರಿಸಿ ಹೊರಬಂದಳು ಶೈಲೆ. ಅಲ್ಲಿಯೇ ನಾಯಿಯೊಂದಿಗೆ ಆಡುತ್ತ ಕುಳಿತಿದ್ದ ಮಗು ಹೇಮಂತನನ್ನು

ಹಿಡಿದೆತ್ತಿ ಮುದ್ದಾಡಿದಳು. ತನಗೆದುರಾಗಿ ಬರುತ್ತಿದ್ದ ನಾದಿನಿಯ ಭುಜ ಅಲುಗಿಸಿ ನಗುತ್ತ ಹೊರಡುವ ಶೈಲೆಯನ್ನು ಸುವರ್ಣೆಯೇ ಬಿಡದೆ,

'ಏನತ್ತಿಗೆ? ಈವರೆಗೂ ಬಾಡಿ-ಬತ್ತಿದಂತಿದ್ದ ನೀನು ಅದಾವ ಮೋಡಿಯಿಂದ ಅರಳು ಮಲ್ಲಿಗೆಯಾದಿ ?'

—ಎಂದು ಬೆರಗಾಗಿ ಕೇಳಿದಳು. ಮನದ ನೋವನ್ನು ಕಳೆದುಕೊಂಡ ಶೈಲೆ ಹೂವಿಗಿಂತಲೂ ಹಗುರಾಗಿದ್ದಳು. ಜಾಣೆ ಸುವರ್ಣೆಯ ಮಾತಿಗೆ ಅವಳು ಯಾವ ಉತ್ತರವನ್ನೂ ಕೊಡದೆ ಮಮತೆಯಿಂದ ಕೆನ್ನೆಗೆ ಮೆಲ್ಲನೆ ಚಿವುಟಿ, ಅಲ್ಲಿಂದ ಪಾರಾಗಿ ಸ್ನಾನಕ್ಕಾಗಿ ಹೊರಟು ಹೋದಳು

—ಗೀತಾ ಕುಲಕರ್ಣಿ

# ಮರುಮದುವೆ

ಕೃಷ್ಣಪ್ಪನಿಗೆ ತಿಳಿವಳಿಕೆಯಿಲ್ಲವೆಂದಲ್ಲ. ಮರುಮದುವೆಯಿಂದಾಗುವ ಅನಾಹುತಗಳನ್ನೆಷ್ಟೋ ಕಡೆ ಗಮನಿಸಿದ್ದರು. ಆದ್ದರಿಂದಲೇ ಭಾಗೀರಥಮ್ಮ ಸತ್ತಮೇಲೆ ಎರಡು ವರ್ಷಗಳಕಾಲ ಒಳ್ಳೆಯ ಹೆಣ್ಣುಗಳು ಬಂದರೂ ಒಪ್ಪಲಿಲ್ಲ. ಆದರೆ ಬರಬರುತ್ತ ಆ ಒಂಟಿ ಜೀವನ ಬೇಸರವನ್ನುಂಟುಮಾಡಿತು. ಮನೆಯಲ್ಲಿ ಮಕ್ಕಳೂ ಇಲ್ಲ. ಯಾರಿಗಾಗಿ ದುಡಿಯಬೇಕು ? ಏತಕ್ಕಾಗಿ ಜೀವಿಸಬೇಕು. ಎಂಬ ಜುಗುಪ್ಸೆ ಮನಸ್ಸಿನಲ್ಲಿ ಮೂಡಿತು. ವಯಸ್ಸೂ ಸಾಲ್ವತ್ತೈದು ಅಷ್ಟೆ ! ಈಗಿನ ಕಾಲದಲ್ಲಿ ಮೊದಲನೆಯ ಮದುವೆಯ ವರಗಳೇ ಮೂವತ್ತು ದಾಟಿರುತ್ತಾರೆ. ಹೀಗೆಲ್ಲಾ ಮನಸ್ಸಿನಲ್ಲೇ ಗುಣಿಸಿ, ಹದಿನಾರು ವರ್ಷದ ಭಾರತಿಯನ್ನು ಮದುವೆಯಾಗಿದ್ದರು. ಭಾರತಿ ಸುಂದರಿ. ಅದೇ ಇಂಟರ ತರಗತಿಯನ್ನು ದಾಟಿದ್ದಳು. ಮರುಮದುವೆಗೆ ಅಂತಹ ಹೆಣ್ಣು ಸಿಕ್ಕಿದ್ದು ತಮ್ಮ ಅದೃಷ್ಟವೆಂದೇ ಕೃಷ್ಣಪ್ಪ ಭಾವಿಸಿದ್ದರು. ಆದರೆ ಮದುವೆಯಾದ ಎರಡೇ ವರ್ಷಗಳಲ್ಲಿ ಆ ಸುಂದರವಾದ ಕನಸು ಒಡೆದು ಚೂರಾಯಿತು. ಭಾರತಿ ಸುಂದರಿಯೂ ಹೌದು, ವಿದ್ಯಾವತಿಯೂ ಹೌದು. ಆದರೆ.........ಆ ಮಾತನ್ನು ನೆನೆಸಿಕೊಂಡು ಕೃಷ್ಣಪ್ಪ ನಡುಗಿದರು. ತಮ್ಮ ಹುಚ್ಚನ್ನು ತಾವೇ ನಿಂದಿಸಿದರು. ಹದಿನಾರು ವರ್ಷದ ಹುಡುಗಿಗೆ ಐವತ್ತು ವರ್ಷದ ಗಂಡನೆ ? ನಿಜ ! ಅಷ್ಟು ವಯಸ್ಸಾದವರಂತೆ ಕೃಷ್ಣಪ್ಪ ಕಾಣುತ್ತಿರಲಿಲ್ಲ. ತಲೆಯಲ್ಲಿನ್ನೂ ಈಗೀಗ ಒಂದೊಂದು ನರೆಕೂದಲು ಕಾಣುತ್ತಿತ್ತು. ಜೀವನದಲ್ಲಿ ಉತ್ಸಾಹ ಕಡಿಮೆಯಾಗಿರಲಿಲ್ಲ. ತಮ್ಮ ಅಧಿಕಾರ, ಸಂಪತ್ತು ಬಡಹುಡುಗಿ ಭಾರತಿಯನ್ನು ಬೆರಗುಗೊಳಿಸಿ ಒಲಿಸಬಹುದೆಂದುಕೊಂಡಿದ್ದರು. ಆದರೆ ಅದೆಲ್ಲಾ ಕನಸಾಯಿತು. ಭಾರತಿಗೆ ಸದಾ ಬೇಸರ. ಮನೆ ಒಂದು ಕಾರಾಗೃಹದಂತೆ ಅವಳಿಗೆ ತೋರಿತು. ಕೃಷ್ಣಪ್ಪನೂ ಬಹಳವಾಗಿ ಪ್ರಯತ್ನಿಸಿ ನೋಡಿದರು. ಅವಳಿಗೆ ಬೇಕಾದ ಪುಸ್ತಕಗಳನ್ನು ಕೊಂಡು ತಂದರು. ಅನೇಕ ವಿಧವಾದ ಸೀರೆಗಳನ್ನು ತಂದರು. ಭಾರತಿ ಬೇಸರದಿಂದ, 'ಇವುಗಳಿಗೇಕೆ ವ್ಯರ್ಥವಾಗಿ ದುಡ್ಡು ಹಾಳು ಮಾಡುತ್ತೀರಿ.' ಎಂದಾಗ ಅವರ ಮುಖ ಮುದುಡಿತು. ಭಾರತಿಯೂ ಪ್ರಯತ್ನಿಸದೆ ಇರಲಿಲ್ಲ. ತನ್ನನ್ನು ಮದುವೆಯಾದುದು ಕೃಷ್ಣಪ್ಪನ ತಪ್ಪೇ ಎಂದು ಅವಳು ನಿರ್ಧರಿಸಿರಲಿಲ್ಲ. ತಂದೆ ತನಗೆ ಮಾಡಿದ ಅನ್ಯಾಯದ ಅರಿವು ಅವಳಿಗಿತ್ತು. ಆದರೆ ತಾಯಿಯಿಲ್ಲದ ಮೇಲೆ ಎಂತಹ ತಂದೆ ! ಚಿಕ್ಕಮ್ಮನ ಅವಸರದಿಂದ ಈ ಮದುವೆ ನಡೆಯಿತೆಂದು ಅವಳು ತಿಳಿದಿದ್ದಳು. ಹದಿನಾರು ವರ್ಷ ಸಾಕಿದ ತಂದೆ

ಇನ್ನೆರಡು ವರ್ಷ ಸಾಕಿದ್ದರೆ ತನ್ನ ಜೀವನವನ್ನು ತಾನು ಸಂಪಾದಿಸಿಕೊಳ್ಳುತ್ತಿರಲಿಲ್ಲವೆ ? ಅಷ್ಟು ತಾಳ್ಮೆ ತಂದೆಗಿಲ್ಲವಾಯಿತು.

ಆ ದಿನ ಕೃಷ್ಣಪ್ಪ ಬೇಗ ಮನೆಗೆ ಬಂದು ಭಾರತಿಯನ್ನು ಹೊರಗೆ ಓಡಾಡಿಕೊಂಡು ಬರಲು ಕರೆದರು. ಭಾರತಿಗೂ ವಿಪರೀತ ತಲೆನೋಯುತ್ತಿತ್ತು. ಮರು ಮಾತನಾಡದೆ ಗಂಡನೊಡನೆ ಹೊರಟಳು. ಮಧ್ಯಾಹ್ನ ಸ್ವಲ್ಪ ಮಳೆ ಬಿದ್ದಿದ್ದುದರಿಂದ ಪ್ರಕೃತಿಯೆಲ್ಲಾ ಹೊಸದಾಗಿ ಮನೋಹರವಾಗಿತ್ತು. ಉದ್ಯಾನದ ಬಳಿ ಮಲ್ಲಿಗೆಯ ವಾಸನೆ ಗಾಳಿಯೊಡನೆ ಬೆರೆತು ಮೂಗನ್ನು ತಾಗಿದಾಗ ಭಾರತಿಯ ಹೃದಯ ಉಕ್ಕಿಬಂತು. ಸ್ವಲ್ಪ ದೂರದಲ್ಲಿ ಕಾಂತಂ ಅವನ ಹೆಂಡತಿ ಹೋಗುತ್ತಿದ್ದರು. ಅವರ ನಗು ಗಾಳಿಯಲ್ಲಿ ಅಲೆ ಅಲೆಯಾಗಿ ತೇಲಿ ಬರುತ್ತಿತ್ತು. ಭಾರತಿ ಅರ್ಧ ಮನಸ್ಸಿನಿಂದ ಕೃಷ್ಣಪ್ಪನ ಮಾತುಗಳನ್ನು ಕೇಳುತ್ತಿದ್ದಳು. ಮುಂದಿನ ಗ್ರೇಡು ಸಿಕ್ಕುವುದೆಂಬ ಸಂಭ್ರಮದ ಸುದ್ದಿಯೂ ಭಾರತಿಯ ಮನಸ್ಸನ್ನು ಕಲಕಲಿಲ್ಲ. ಅಲ್ಲೇ ಚರ್ಚಿನ ಬಾಗಿಲಲ್ಲಿ ನಿಂತಿದ್ದ ಪಾದ್ರಿಯನ್ನು ನೋಡಿ ಕೃಷ್ಣಪ್ಪ ಕೈ ಮುಗಿದರು. ಆತನು ಮುಂದೆ ಬಂದು ಕೃಷ್ಣಪ್ಪನ ಕೈ ಕುಲುಕಿ, 'ಏನು ಕೃಷ್ಣಪ್ಪಾ ಚನ್ನಾಗಿದ್ದೀರಾ ? ಈಕೆ ನಿಮ್ಮ ಮಗಳೇ ?' ಎಂದು ಪ್ರಶ್ನಿಸಿದರು. 'ಇಲ್ಲ ನನ್ನ ಹೆಂಡತಿ' ಎಂದಾಗ ಕೃಷ್ಣಪ್ಪನಿಗೆ ತಾನೊಬ್ಬ ಅಪರಾಧಿಯೆಂದೇ ತೋರಿತು. 'ತಪ್ಪು ನನ್ನದು; ಕ್ಷಮಿಸಿ,' ಎಂದು ಪಾದ್ರಿ ಕೈಮುಗಿದನು. ಭಾರತಿಯ ತಲೆಯಲ್ಲಿ 'ಮಗಳೇ, ಮಗಳೇ' ಎಂಬ ಪ್ರಶ್ನೆ ಅವಳ ಹೆಜ್ಜೆಯ ಗತಿಯನ್ನನುಸರಿಸಿ ಬಸುತ್ತಿರುವಂತೆ ತೋರಿತು. ನಿಜ ! ಕೃಷ್ಣಪ್ಪ ತನ್ನ ತಂದೆಗಿಂತ ಒಂದೆರಡು ವರ್ಷ ಚಿಕ್ಕವರಿರಬಹುದು, ಅಷ್ಟೆ ! ಅವರೊಡನೆ ತನ್ನ ಸಂಸಾರ ! ಕೃಷ್ಣಪ್ಪನ ಮನಸ್ಸೂ ಪಾದ್ರಿಯ ಪ್ರಶ್ನೆಯಿಂದ ಕಲಕಿ ಹೋಯಿತು. ಭಾರತಿ ನೀರಿನ ಕಾಲುವೆಯ ಬಳಿ ಕುಳಿತಳು.

'ಏಕೆ, ಇಷ್ಟೇ ಸಾಕಾಯಿತೆ ?' ಕೃಷ್ಣಪ್ಪನೂ ಕುಳಿತರು.

'ಏನೋ ತಲೆ ನೋಯುತ್ತಿದೆ.'

'ಅದೇಕೆ ? ಡಾಕ್ಟರನ್ನು ನೋಡಿ ಬರೋಣವೆ ?'

ಭಾರತಿ ತಲೆಯಾಡಿಸಿದಳು. ಕೃಷ್ಣಪ್ಪ ತಲೆಯಲ್ಲಿ ಸುಳಿಯುತ್ತಿದ್ದ ಪ್ರಶ್ನೆಯನ್ನು ಅಮುಕಿಡಲಾರದೆ, 'ಭಾರತಿ, ನಾನೆಂದರೆ ನಿನಗೇಕೆ ಇಷ್ಟು ಬೇಸರ' ಎಂದರು. ಭಾರತಿ ಅರೆಮನಸ್ಸಿನಿಂದ 'ಬೇಸರವೂ ಇಲ್ಲ. ಎಂಥಾದ್ದೂ ಇಲ್ಲ' ಎಂದಳು.

'ಆ ಮಾತನ್ನು ನಂಬಬೇಕೆಂದು ನನ್ನ ಪ್ರಾಣ ತುಡಿಯುತ್ತಿದೆ. ಆದರೆ ಅಷ್ಟು ಅವಿವೇಕ, ಅಹಂಭಾವ ನನ್ನಲ್ಲಿಲ್ಲ. ತಪ್ಪು ಮಾಡಿದೆ ನಿಜ. ಪುನಃ ಮದುವೆಯಾಗಬಾರದಿತ್ತು. ಆದರೆ ನನ್ನ ಪ್ರೀತಿ, ಈ ಸುಖ ಜೀವನ, ಇವು ನಿನಗೆ ತೃಪ್ತಿಯನ್ನು

ತರಬಹುದೆಂಬ ಆಸೆಯೊಂದಿತ್ತು.'–ಕೃಷ್ಣಪ್ಪನ ದೃಷ್ಟಿ ದೂರದ ಬೆಟ್ಟದಲ್ಲಿ ನೆಲಸಿತ್ತು. ಒಂದು ಅಗಾಧವಾದ ನೋವು ಮುಖವನ್ನು ಮುಸುಕಿತ್ತು. ಭಾರತಿಗೆ ತುಂಬಾ ಮರುಕವುಂಟಾಯಿತು.

'ನನಗೇನೂ ನೀವು ಅನ್ಯಾಯ ಮಾಡಿಲ್ಲ. ಏನೋ ಒಂದೊಂದು ಸಲ ಬೇಸರ ವಾಗುತ್ತೆ. ಅಷ್ಟೆ' ಎಂದಳು.

ಕೃಷ್ಣಪ್ಪ, 'ನಿಮ್ಮ ತಂದೆಯ ಮನೆಗೆ ಕೆಲವು ದಿನ ಹೋಗಿ ಬರುತ್ತೀಯಾ ' ಎಂದರು.

'ನನಗೆ ಅಲ್ಲೇನಿದೆ? ಆದರೆ ಒಂದು ಆಸೆಯಿದೆ, ನೀವು ನಡೆಸಿಕೊಡುವುದಾದರೆ.'

ಕೃಷ್ಣಪ್ಪನ ಮುಖವರಳಿತು. 'ಅದಕ್ಕೆ ಸಂದೇಹವಿದೆಯೆ ಭಾರತಿ ?'

ಭಾರತಿ ಅಂಜುತ್ತಲೇ ಕೇಳಿದಳು. 'ಇನ್ನೆರಡು ವರ್ಷ ಓದಬೇಕೆಂಬ ಆಸೆ ಯಿದೆ. ಹಾಸ್ಟೆಲಿನಲ್ಲಿದ್ದು ಓದಬಹುದಾದರೆ........'

ಕೃಷ್ಣಪ್ಪನ ಮುಖ ಪೆಚ್ಚಾಯಿತು. ಭಾರತಿ ತಲೆಯೆತ್ತಿ ನೋಡಿ ಸುಮ್ಮನಾ ದಳು. ಸ್ವಲ್ಪ ಹೊತ್ತಾದ ಮೇಲೆ ಭಾರತಿಯೇ ಎದ್ದು 'ಮನೆಗೆ ಹೋಗೋಣ' ಎಂದಳು. ಯಂತ್ರದಂತೆ ಕೃಷ್ಣಪ್ಪ ಹಿಂಬಾಲಿಸಿದರು.

* * * * * *

ಭಾರತಿ ಓದಲು ಹೋಗಿ ಎರಡು ವರ್ಷಗಳಾಗಿದ್ದವು. ನಡುವೆ ರಜದಲ್ಲಿ ಬಂದಿ ದ್ದರೂ ಅವಳಿಗೆ ಕೃಷ್ಣಪ್ಪನೊಡನೆ ಮಾತನಾಡಲು ನಿಧಾನವೇ ಇರಲಿಲ್ಲ ಕೃಷ್ಣ ಪ್ಪನದಂತೂ ಯಾಂತ್ರಿಕಜೀವನ. ಎಂಟು ಗಂಟೆ ಯಂತ್ರಗಳ ಮುಂದೆ ಕುಳಿತಿದ್ದು ಮನೆಗೆ ಬರುವ ವೇಳೆಗೆ ಉತ್ಸಾಹ ಎಳ್ಳಷ್ಟೂ ಇರುತ್ತಿರಲಿಲ್ಲ. ಭಾರತಿ ಬರುವಾಗ ಒಬ್ಬರಿಬ್ಬರು ಸ್ನೇಹಿತರು ಅವಳ ಸಂಗಡ ಶಿವನ ಸಮುದ್ರವನ್ನು ನೋಡಲು ಬರುತ್ತಿ ದ್ದರು. ಅವರೊಡನೆ ಸುತ್ತುಮುತ್ತಲ ಷಿಂಷ, ತಲಕಾಡು ದ್ವೀಪಗಳನ್ನು ನೋಡಿ ಬರುವುದರಲ್ಲೂ, ಕ್ಲಬ್ಬಿನಲ್ಲಿ ಟೆನಿಸ್, ಕಾರ್ಡುಗಳನ್ನು ಆಡುವುದರಲ್ಲೂ ಭಾರತಿಗೆ ರಜದ ದಿನಗಳು ಬಹು ಬೇಗ ಕಳೆದುಹೋಗುತ್ತಿದ್ದವು. ಆದರೆ ಈ ಸಲ ಭಾರತಿ ಬಂದೇಬಿಡುವಳು. ಪುನಃ ಹೊರಟು ಹೋಗುವಳೆಂದು ದಿನಗಳನ್ನು ಲೆಕ್ಕ ಮಾಡ ಬೇಕಾಗಿಲ್ಲ. ಕೃಷ್ಣಪ್ಪನಿಗೆ ಒಂದು ದೊಡ್ಡ ಹೊರೆ ಇಳಿದಂತಾಯಿತು.

ಭಾರತಿ ಬಸ್ಸಿನಲ್ಲಿ ಕಿಟಕಿಯಿಂದ ಹೊರಗೆ ನೋಡುತ್ತಾ ಕುಳಿತಿದ್ದಳು. ಊರು ಹತ್ತಿರವಾಗುತ್ತಾ ಜೀವಮಾನದ ಒಂದು ಅಧ್ಯಾಯ ಮುಗಿಯುತ್ತಾ ಬಂದಂತೆ ತೋರಿತು. ಪುನಃ ಆ ಯಾಂತ್ರಿಕ ಜೀವನ, ಕಾರಾಗೃಹವಾಸ. ಎಲ್ಲರಿಗೂ ಹೀಗೆಯೇ

ತೋರುವುದೇ! ಎಲ್ಲರ ಸಂಸಾರವೂ ಇಷ್ಟು ನೀರಸವೇ! ಕೃಷ್ಣಪ್ಪ ಒಳ್ಳೆಯ ಮನುಷ್ಯ; ಬಹು ನಿಧಾನಿ; ಬೇರೆಯವರ ಮನೋಭಾವವನ್ನು ಅರಿಯುವ ಶಕ್ತಿ ಇದೆ. ಅಷ್ಟು ನಿಧಾನಿಯಲ್ಲದಿದ್ದರೆ ಮರುಮದುವೆಯಾಗಿ ಇಳಿವಯಸ್ಸಿನಲ್ಲಿ ಹೆಂಡತಿಯನ್ನು ಓದಲು ಕಳುಹಿಸುವರೆ? ಭಾರತಿಗೂ ಇದೆಲ್ಲಾ ತಿಳಿದಿತ್ತು. ಅವರನ್ನು ಪ್ರೀತಿಸದಿದ್ದರೆ ತಪ್ಪು ತನ್ನದೇ ಎಂಬ ಭಾವನೆ ಇತ್ತು. ಆದರೆ ನಿಜವಾಗಿ ತಪ್ಪು ತನ್ನದೇ? ಬಸ್ಸು ನಿಲ್ಲುವ ವೇಳೆಗೆ ಕೃಷ್ಣಪ್ಪ ರಸ್ತೆಯಲ್ಲಿ ಕಾದು ನಿಂತಿದ್ದರು. ಬಿಸಿಲು ವಿಪರೀತವಾಗಿದ್ದುದರಿಂದ ತಲೆಯ ಮೇಲೊಂದು ವಸ್ತ್ರವನ್ನು ಹಾಕಿಕೊಂಡಿದ್ದರೂ ಬೆವರು ಧಾರಾಕಾರವಾಗಿ ಇಳಿಯುತ್ತಿತ್ತು. ಆಳು ಸಾಮಾನುಗಳನ್ನು ತೆಗೆದುಕೊಂಡು ಹೊರಟನು. ಭಾರತಿ ಕೃಷ್ಣಪ್ಪ ಮನೆ ಸೇರಿದರು.

'ಓದು ಮುಗಿಯಿತಲ್ಲಾ.' ತಿಳಿಯದೆಯೇ ಕೃಷ್ಣಪ್ಪ ದೀರ್ಘವಾದ ನಿಟ್ಟುಸಿರೊಂದನ್ನು ಬಿಟ್ಟರು.

'ಫಲಿತಾಂಶ ಬರಲಿ.'

'ತುಂಬ ಸಣ್ಣಗಾಗಿದ್ದಿ, ಭಾರತಿ. ಇಲ್ಲದ ತಾಪತ್ರಯ ಕಟ್ಟಿಕೊಂಡು ಒದ್ದಾಡುತ್ತಿ. ನಾನಿರುವಾಗ ನೀನು ಓದಿ ಮಾಡಬೇಕಾದುದೇನು? ಹಾಯಾಗಿರಬಾರದೆ?' 'ನಾನಿರುವಾಗ,' ಎಂದಾಗ ಕೃಷ್ಣಪ್ಪನ ಹೃದಯವೇ ನಡುಗಿತು. ಭಾರತಿಯ ಬಾಳ ನೌಕೆಯನ್ನು ಕಡೆತನಕ ಸಾಗಿಸುವ ಭಾಗ್ಯವನ್ನು ಭಗವಂತ ಕರುಣಿಸುವನೆ! ಸ್ವಲ್ಪ ಹೆಚ್ಚಾಗಿ ಇನ್‌ಷೂರೆನ್ಸ್ ಮಾಡಬೇಕೆಂದು ನಿರ್ಧರಿಸಿದರು.

ಭಾರತಿ, 'ಏನೋ ಆಶೆಯಾಯಿತು, ಓದಿದೆ. ಓದಿದವರೆಲ್ಲಾ ಜೀವನಕ್ಕಾಗಿ ದುಡಿಯಬೇಕೇ?' ಎಂದಳು.

'ಏನೋ ಸಧ್ಯ ಬಂದುಬಿಟ್ಟೆಯಲ್ಲಾ. ನನಗೂ ಬಹಳ ಬೇಸರವಾಗಿ ಹೋಗಿತ್ತು, ಭಾರತಿ.'

ಭಾರತಿ ಊಟಕ್ಕೆ ಸಿದ್ಧಪಡಿಸಲು ಎದ್ದುಹೋದಳು.

* * * * *

ವಿಶ್ವನಾಥ ಕೃಷ್ಣಪ್ಪನಿಗೇನೋ ದೂರದ ಸಂಬಂಧ. ಶಿವನಸಮುದ್ರದಲ್ಲಿ ಕೆಲಸ ಮಾಡಿಸಿ ಕೊಟ್ಟದ್ದೂ ಕೃಷ್ಣಪ್ಪನೇ. ಭಾರತಿ ಓದಲು ಹೋಗಿದ್ದಾಗ ಅವನು ಹೆಚ್ಚು ಹೊತ್ತನ್ನು ಕೃಷ್ಣಪ್ಪನ ಮನೆಯಲ್ಲೇ ಕಳೆಯುತ್ತಿದ್ದನು.

ಆ ದಿನ ಭಾರತಿಯ ಹುಟ್ಟಿದ ಹಬ್ಬ. ಕೃಷ್ಣಪ್ಪ ಹಿಂದಿನ ದಿನ ರಜ ತೆಗೆದುಕೊಂಡು ಕೊಳ್ಳೆಗಾಲಕ್ಕೆ ಹೋಗಿ ಅವಳಿಗೊಂದು ಸೀರೆ ತಂದಿದ್ದರು. ಕರಿಯ ರೇಷ್ಮೆ

ಸೀರೆ ಬಿಳಿಯ ರೇಷ್ಮೆ ಕುಪ್ಪಸ. ದರ್ಜಿಯವನ ಹತ್ತಿರವೇ ಮಧ್ಯಾಹ್ನವೆಲ್ಲಾ ಕುಳಿತಿದ್ದು ನಾಲ್ಕಾಣೆ ಹೆಚ್ಚುಕೊಟ್ಟು ಹೊಲಿಸಿಕೊಂಡು ಬಂದಿದ್ದರು. ಭಾರತಿ ಬೆಳಿಗ್ಗೆ ಎಣ್ಣೆ ನೀರು ಹಾಕಿಕೊಂಡು, ಆ ಸೀರೆಯನ್ನುಟ್ಟಿದ್ದಳು. ಅವಳ ಸೌಂದರ್ಯವನ್ನು ನೋಡಿ ಕೃಷ್ಣಪ್ಪ ಬೆಚ್ಚಿ ಬಿದ್ದರು. ಭಾರತಿ ಆ ದಿನ ತುಂಬ ಸಂತೋಷವಾಗಿಯೂ ಇದ್ದಳು. ಅದೇ ಅವಳಿಗೆ ಇಪ್ಪತ್ತು ವರ್ಷ. ತನ್ನ ವಯಸ್ಸಿನ ಅರ್ಧಕ್ಕಿಂತ ಕಡಮೆ! ತಾನು ಮದುವೆಯಾದುದು ಕ್ಷಣಿಕ ಮನೋವಿಕಾರದ ದೆಸೆಯಿಂದಲೇ ಎಂದು ತೋರಿತು.

'ವಿಶ್ವನಾಥನ್ನ ಊಟಕ್ಕೆ ಕರೆಯಲೇ ?'

'ಯಾರೂ ಬೇಡ, ನಾವಿಬ್ಬರೇ ಇರೋಣ.'

ಕೃಷ್ಣಪ್ಪನ ಹೃದಯ ಹಿಗ್ಗಿ ಬಿರಿಯಿತು. 'ನಾವಿಬ್ಬರೇ' ಪದದ ಆತ್ಮೀಯತೆಯಿಂದ ಮನಸ್ಸಿಗೆ ಬಹು ಸುಖವೆನಿಸಿತು. ಆದರೂ ಅರೆ ಮನಸ್ಸಿನಿಂದ, 'ಪಾಪ, ಒಬ್ಬನೇ ಅಡಿಗೆ ಮಾಡಿಕೊಂಡು ಊಟಮಾಡುತ್ತಾನೆ' ಎಂದರು.

'ಬೇಕಾದರೆ ಕರೆದುಬಿಡಿ.'

ಕೃಷ್ಣಪ್ಪ ವಿಶ್ವನಾಥನನ್ನು ಕರೆಯದಿದ್ದರೂ ಊಟ ಮುಗಿದೇಳುವ ಹೊತ್ತಿಗೆ ಅವನೇ ಬಂದನು. ಭಾರತಿ ಮಡಿಸಿಕೊಡುತ್ತಿದ್ದ ವೀಳ್ಯವನ್ನು ಸವಿಯುತ್ತಾ ಕೃಷ್ಣಪ್ಪ ಕಾಲ ಹೀಗೆಯೇ ನಿಲ್ಲಬಾರದೇ-ಎಂದುಕೊಳ್ಳುತ್ತಿದ್ದರು. ಭಾರತಿ ತನ್ನ ಕಾಲೇಜಿನ ಗೆಳತಿಯರನ್ನು ಸ್ಮರಿಸಿಕೊಳ್ಳುತ್ತಿದ್ದಳು.

'ವಿಜಯಳಿಗೆ ಕಾಗದ ಬರಿಯಬೇಕು. ಇಲ್ಲಿಗೆ ಬರುತ್ತೇನೆಂದು ಹೇಳಿದ್ದಳು.'

'ಬರಿ, ಅದಕ್ಕೇನು.'

ಬಾಗಿಲು ತಟ್ಟಿದ ಸದ್ದು ಕೇಳಿ ಭಾರತಿ ಎದ್ದುಹೋದಳು. ವಿಶ್ವನಾಥ ಒಳಕ್ಕೆ ಬಂದು ಕುಳಿತುಕೊಂಡನು.

'ಬಾ ವಿಶ್ವನಾಥ! ನಾನೇ ಹೇಳಿ ಕಳುಹಿಸಬೇಕೆಂದಿದ್ದೆ. ಈವತ್ತು ಭಾರತಿಯ ಹುಟ್ಟಿದ ದಿನ.' ಭಾರತಿ ತಟ್ಟೆಯಲ್ಲಿ ಎರಡು ಜಿಲೇಬಿಗಳನ್ನೂ, ಬಟ್ಟಲಲ್ಲಿ ಹಾಲು ಕೀರನ್ನೂ ತಂದಿಟ್ಟು ಅಲ್ಲಿಯೇ ಕುಳಿತಳು.

ವಿಶ್ವನಾಥ, 'ಕರೆದಹಾಗೆ ಬಂದಿದ್ದೇನಲ್ಲ. ಅದೂ ಅಲ್ಲದೆ ಇನ್ನೆರಡು ದಿನಕ್ಕೆ ಇನ್ನೊಂದು ಟ್ರೀಟ್ ನೀವು ಕೊಡಬೇಕಲ್ಲಾ' ಎಂದನು.

ಕೃಷ್ಣಪ್ಪ, 'ಅದೇನು ?' ಎಂದರು.

'ಪರೀಕ್ಷೆ ಫಲಿತಾಂಶ ನಾಡಿದ್ದು ಬರುತ್ತಂತೆ.'

ಭಾರತಿ 'ಬಂದಮೇಲೆ ಮಾತು' ಎಂದಳು.

ವಿಶ್ವನಾಥ 'ಆಮೇಲೆ ಏನು ಮಾಡುತ್ತೀರಿ' ಎಂದು ಕೇಳಿದನು.

ಕೃಷ್ಣಪ್ಪ ಸ್ವಲ್ಪ ಗಡುಸಾಗಿಯೇ 'ಇನ್ನು ಮಾಡುವುದೇನು ? ಏನೋ ಓದ ಬೇಕು ಅಂತ ಆಸೆಪಟ್ಟು ಓದಿದಳು. ಅವಳ ಆರೋಗ್ಯವೇ ಕೆಟ್ಟುಹೋಯಿತು.'

ವಿಶ್ವನಾಥನ ಮನಸ್ಸಿಗೆ ಅದೇನೂ ಸತ್ಯವೆಂದು ತೋರದಿದ್ದರೂ, ಪರಿಸ್ಥಿತಿ ಯನ್ನರಿತು ಸುಮ್ಮನಾದನು. ಭಾರತಿಯೂ ಮಾತನಾಡಲಿಲ್ಲ.

* * * *

ವಿಜಯ ಬಂದುದು ಭಾರತಿಗೆ ತುಂಬಾ ಹಿತವಾಗಿತ್ತು. ಬಂದ ಎರಡು ದಿನ ಗಳಿಂದಲೂ ಸ್ನೇಹಿತರ ವಿಚಾರ ಎಷ್ಟು ಮಾತನಾಡಿದರೂ ಮುಗಿಯಲಿಲ್ಲ. ಕೃಷ್ಣಪ್ಪ ನಿಗಂತೂ ಭಾರತಿ ಎಲ್ಲಿರುವಳೆಂದೇ ತಿಳಿಯುತ್ತಿರಲಿಲ್ಲ. ಊಟಕ್ಕೆ, ನಿದ್ದೆಗೆ ಅವರಿಗೆ ಗೊತ್ತಾದ ಹೊತ್ತೇ ಇರಲಿಲ್ಲ.

'ನಾನೀಗ ಏತಕ್ಕೆ ಬಂದುದು ಗೊತ್ತೇ ಭಾರತಿ ?'

ಭಾರತಿ ತಲೆಯಾಡಿಸಿದಳು.

'ಇನ್ನೆರಡು ತಿಂಗಳಿಗೆ ನನ್ನ ಮದುವೆ. ಆಮೇಲೆ ಹೇಗೋ ಏನೋ !'

'ಇಷ್ಟು ದಿನ ನನಗೆ ಹೇಳದೆ ಇದ್ದೆಯಲ್ಲ ವಿಜಯ ! ಆತ ಯಾರು ?'

'ಯಾರೋ ಒಬ್ಬ ಹುಚ್ಚು ಗೋಸಾಯಿ ! ಡಾಕ್ಟರಂತೆ ! ಆದರೆ ಏನು ಸಂಪಾ ದನೆ ಇದೆಯೋಮ್ಮ. ಮೂರುದಿನಕ್ಕೊಂದು ಸಲ ಮೈಸೂರಿಗೆ ಓಡಿ ಬರುತ್ತಾರೆ. ದಿನಕ್ಕೆ ಎರಡು ಕಾಗದ ಬರೆಯುತ್ತಾರೆ. ಈ ಎರಡು ದಿನದಿಂದ ಅವರ ಕಾಗದ ಇಲ್ಲ.'

ಭಾರತಿಯ ಮೈ ಜುಮ್ಮೆಂದಿತು. ತನ್ನ ಜೀವನದಲ್ಲಿ ಅಂತಹ ಹುಡುಗಾಟ ಗಳಿಗೆ ಆಸ್ಪದವೇ ಇಲ್ಲ.

'ಮದುವೆ ಆದರೇನಂತೆ. ಅವರನ್ನೂ ಕರೆದುಕೊಂಡು honeymoonಗೆ ಇಲ್ಲಿಗೇ ಬಂದುಬಿಡು.'

'ಸಧ್ಯ ! ನಿನಗೆ ನನ್ನಲ್ಲಿರುವ ಅಲ್ಪಸ್ವಲ್ಪ ಮರ್ಯಾದೆಯೂ ಹೋಗುತ್ತೆ. ಅದೂ ಅಲ್ಲದೆ ನಿಮ್ಮ ಯಜಮಾನರೇನೆಂದುಕೊಂಡಾರು.'

ಭಾರತಿಗೂ ನಿಜವೆನ್ನಿಸಿತು. ಕೃಷ್ಣಪ್ಪನಿಗೆ ಅಂತಹ ಹುಚ್ಚು ಅರ್ಥವೂ ಆಗ ಲಾರದು. ಅಥವಾ! ಆತನೂ ಯೌವನದ ಹುಚ್ಚಿನಲ್ಲಿ ತನಗಿಂತ ಮೊದಲು ಕೈ ಹಿಡಿ ದಿದ್ದ ಪುಣ್ಯಶಾಲಿನಿಯೊಡನೆ ಹೀಗೆಯೇ ಆಡಿದ್ದಿರಬಹುದೆ ? ಆಕೆ ವಿಜಯಳಂತೆ ಹಿಗ್ಗಿ ರಬಹುದೆ ?

ರಾತ್ರಿ ಭಾರತಿಗೆ ತುಂಬ ಹೊತ್ತು ನಿದ್ದೆ ಬರಲಿಲ್ಲ. ಕೃಷ್ಣಪ್ಪ ಮೃದುವಾಗಿ 'ಭಾರತಿ, ನಿದ್ದೆ ಬರಲಿಲ್ಲವೆ ?' ಎಂದರು.

ಭಾರತಿ 'ಇಲ್ಲ,' ಎಂದಳು.

ಕೃಷ್ಣಪ್ಪ ಎದ್ದು ಬಂದು ಹತ್ತಿರ ಕುಳಿತು ಕೂದಲನ್ನು ನೇವರಿಸಿದರು. ಭಾರತಿ ಅವರ ಕೈ ಹಿಡಿದುಕೊಂಡು, 'ಭಾಗೀರಥಮ್ಮ ತುಂಬಾ ಚೆನ್ನಾಗಿದ್ದರಲ್ಲವೆ ?' ಎಂದಳು.

ಕೃಷ್ಣಪ್ಪ ಗಾಬರಿಯಿಂದ, 'ಏಕೆ ?' ಎಂದರು.

ಭಾರತಿ, 'ಸುಮ್ಮನೆ ಕೇಳಿದೆ' ಎಂದಳು.

ಕೃಷ್ಣಪ್ಪನ ಮನಸ್ಸು ಹಳೆಯ ನೆನಪುಗಲ್ಲಿ ತೊಳಲಾಡುತ್ತಿತ್ತು.

'ಇದ್ದಳು. ಚೆನ್ನಾಗಿಯೇ ಇದ್ದಳು.'

'ಅವರು ಹೋದಾಗ ನಿಮಗೆ ತುಂಬಾ ಬೇಸರವಾಯಿತಲ್ಲವೆ ?'

'ಆಗದೆ ಹೇಗಿದ್ದೀತು, ಭಾರತಿ. ಒಂದು ಜೀವನದ ಪ್ರತಿ ನಿಮಿಷವನ್ನೂ ತನ್ನದಾಗಿ ಮಾಡಿಕೊಂಡಿದ್ದು ತಟಕ್ಕನೆ ಬರಿದಾಗಿ ಮಾಡಿ ಹೋದರೆ ಬೇಸರವಲ್ಲವೆ ? ನೀನು ಬಂದು ಬೆಳಕನ್ನ ತುಂಬುವವರೆಗೂ ಬಹಳ ಬೇಸರವೇ ಆಗಿತ್ತು.'

ಭಾರತಿಯ ಮನಸ್ಸಿನಲ್ಲಿ ಅನುಮಾನ ಉಳಿದೇ ಇತ್ತು. ತಾನು ಅವರ ಜೀವನಕ್ಕೆ ಬೆಳಕು ತುಂಬಿದೆನೆ ! ಅಥವಾ ಮುಪ್ಪಿನ ವೇಗವನ್ನು ಹೆಚ್ಚಿಸಿದೆನೇ ! ಭಾರತಿ ತನ್ನ ಮನಸ್ಸನ್ನೇ ಅರಿಯದಾದಳು. ತನ್ನಿಂದ ಕೃಷ್ಣಪ್ಪನಿಗೆ ಅನ್ಯಾಯವಾಯಿತೋ, ಅವರಿಂದ ತನಗಾಯಿತೋ ! ಅಂತೂ ಇಬ್ಬರಿಗೂ ತೃಪ್ತಿ ಇಲ್ಲದಾಯಿತು.

ವಿಶ್ವನಾಥ ಕ್ಲಬ್ಬಿನಲ್ಲಿ ಟೆನಿಸ್ ಆಡಿ ಮನೆಗೆ ಹಿಂದಿರುಗುತ್ತಿದ್ದಾಗ ಕಾಲುವೆಯ ದಡದ ಮೇಲೆ ಭಾರತಿ, ವಿಜಯ ಸಿಕ್ಕಿದರು. ಆಗಲೇ ಚಳಿಗಾಲ ಪ್ರಾರಂಭವಾಗಿದ್ದುದರಿಂದ ವಿಶ್ವನಾಥ ಬಿಳಿಯ ಸ್ವೆಟರ್ ಒಂದನ್ನು ಧರಿಸಿದ್ದನು. ಬಿಳಿಯ ಷರಾಯಿ, ಸ್ವೆಟರ್‌ಗಳನ್ನು ಧರಿಸಿದ್ದ ಅವನು ಎಂದಿಗಿಂತ ಎತ್ತರವಾಗಿ ಕಾಣುತ್ತಿದ್ದನು; ಆಟವಾಡಿ ಬಂದುದರಿಂದ ಅಲ್ಲಲ್ಲಿ ಕೆದರಿತ್ತು ಕೂದಲು, ಹೊಳೆಯುತ್ತಿತ್ತು ಕಣ್ಣು. ಭಾರತಿಗೆ ಕೈ ಮುಗಿದು ಅವರೊಡನೆ ಹೊರಟನು. ಭಾರತಿ, 'ಇವಳು ವಿಜಯ, ನನ್ನ ಜತೆಯಲ್ಲಿ ಓದುತ್ತಿದಳು' ಎಂದು ಪರಿಚಯ ಮಾಡಿಕೊಟ್ಟಳು. ವಿಶ್ವನಾಥ ನಸುನಗುತ್ತಾ, 'ಈ ಊರಿಗೆ ಯಾರು ಬಂದರೂ ಪರಿಚಯ ಮಾಡಿಕೊಡಲೇಬೇಕಾಗಿಲ್ಲ. ಎಲ್ಲರ ಹುಟ್ಟು ಪೂರ್ವೋತ್ತರಗಳೂ ಎಲ್ಲರಿಗೂ ತಿಳಿದು ಹೋಗುತ್ತೆ' ಎಂದನು.

ವಿಜಯ ನಕ್ಕು, 'ನನ್ನ ಸಮಾಚಾರ ಏನೇನು ತಿಳಿಯಿತು ? ಒಳ್ಳೆಯದೋ ಕೆಟ್ಟದ್ದೋ ?'

'ನಿಮ್ಮ ವಿಚಾರ ತಿಳಿಯಲು ನನಗೊಂದು ಹೆಚ್ಚು ಅವಕಾಶವಾಯಿತು.'

ವಿಜಯ ಕುತೂಹಲದಿಂದ, 'ಅದೇನು ?' ಎಂದಳು.

'ಸುರೇಶ್ ಕಾಗದ ಬರೆದಿದ್ದ.'

'ಅವರೂ ನಿಮಗೆ ಗೊತ್ತೋ ? ಏನೆಂದು ಬರೆದಿದ್ದರು ?'

'ನೀವು ಇಲ್ಲಿಗೆ ಬಂದಿದ್ದೀರೆಂದು ಬರೆದಿದ್ದ.'

'ತಿಳಿದಿದ್ದರೆ ನನಗೇಕೆ ಕಾಗದ ಬರೆಯಲಿಲ್ಲ ?'

'ನೀವು ಅವನಿಗೆ ತಿಳಿಸಲೇ ಇಲ್ಲವಂತೆ.'

'ಓಹೋ ! ಅಭಿಮಾನ ಭಂಗವಾಯಿತೇನೋ. ಹೋಗಲಿ ಬಿಡಿ. ಯಾರಾದರೂ ಸೋಲಬೇಕು. ತಪ್ಪುನನ್ನದೇ ಆಗಿರುವುದರಿಂದ ನಾನೇ ಬರೆದುಬಿಡುತ್ತೇನೆ.' ಹೀಗೆ ಇಬ್ಬರೂ ಹುಡುಗಾಟವಾಗಿ ಮಾತನಾಡುತ್ತಿದ್ದರೆ, ಭಾರತಿಗೆ ಅವರ ಪ್ರಪಂಚದಲ್ಲಿ ತನಗೆ ಸ್ಥಾನವೇ ಇಲ್ಲವೆಂಬಂತೆ ತೋರಿತು. ಸುರೇಶ, ವಿಶ್ವನಾಥ ಸಹಪಾಠಿಗಳು. ವಿಜಯ ತಾನು ಸಹಪಾಠಿಗಳಾದರೂ ತನ್ನ ಲೋಕ ಕೃಷ್ಣಪ್ಪನದು; ವಿಶ್ವನಾಥನದಲ್ಲ. ತನ್ನ ಆಲೋಚನೆಗಳಿಗೆ ಭಾರತಿಗೆ ನಾಚಿಕೆಯಾಯಿತು.

ಕಡೆಗೂ ವಿಜಯ ಸೋಲಬೇಕಾಗಲಿಲ್ಲ. ಮನೆಯ ಬಾಗಿಲ ಬಳಿ ಕೃಷ್ಣಪ್ಪ ಸುರೇಶ ಕುಳಿತಿದ್ದರು. ಕೃಷ್ಣಪ್ಪ ಭಾರತಿಯೊಡನೆ, 'ಇವರು ವಿಶ್ವನಾಥನ ಸ್ನೇಹಿತರಂತೆ' ಎಂದರು.

ವಿಜಯ ನಗುತ್ತ, 'ನನ್ನ ಸ್ನೇಹಿತರೂ ಹೌದು' ಎಂದಳು.

ಕೃಷ್ಣಪ್ಪ ತಬ್ಬಿಬ್ಬಾಗಲು ಸುರೇಶ, 'ಕ್ಷಮಿಸಿ, ನಿಮಗೆ ಮೊದಲೇ ತಿಳಿಸಲಿಲ್ಲ. ನಾನು ವಿಜಯ ಮದುವೆಯಾಗಬೇಕೆಂದಿದ್ದೇವೆ' ಎಂದನು.

ಕೃಷ್ಣಪ್ಪ, 'ಹಾಗೋ, ಹಾಗಾದರೆ ದಂಪತಿಗಳ ಸತ್ಕಾರ ನಮಗೆ ಸಿಕ್ಕಿತು. ಏನು ಭಾರತಿ ?' ಎಂದನು.

ವಿಜಯ, 'ಹೋ, ಹೋ, ಇನ್ನೂ ಎರಡು ತಿಂಗಳು ಬಾಕಿ ಇದೆ. ಅಷ್ಟರಲ್ಲಿ ನಾವಿಬ್ಬರೂ ಜಗಳವಾಡದಿದ್ದರೆ........' ಎಂದಳು.

ಭಾರತಿ ಕೃಷ್ಣಪ್ಪನ ಪಕ್ಕದಲ್ಲಿ ನಿಂತಿದ್ದಳು. 'ವಿಶ್ವನಾಥ ಸಿಕ್ಕಿದ್ದರು. ನಿಮ್ಮ ಕಾಗದ ಬಂತೆಂದು ಹೇಳಿದರು. ವಿಜಯ ಕಾಗದ ಬರಲಿಲ್ಲವೆಂದು ಪೇಚಾಡುತ್ತಿದ್ದಳು. ನೀವೇ ಬಂದಿರಲ್ಲ,' ಎಂದಳು.

ಸುರೇಶ ವಿಜಯಳನ್ನು ನೋಡಿ ನಕ್ಕನು. ಆ ನೋಟದ ಆತ್ಮೀಯತೆ ಎಷ್ಟು ಹಣಕ್ಕೆ ದೊರಕೀತು; ಯಾವ ಅನುಭವದಿಂದ ಲಭಿಸೀತು. ಎರಡು ಪ್ರಾಣಗಳು ಜೀವಮಾನವೆಲ್ಲಾ ಒಟ್ಟಿಗೆ ಕಳೆಯಬಹುದು; ಸುಖದುಃಖಗಳಲ್ಲಿ ಭಾಗ ಪಡೆಯ ಬಹುದು. ಆದರೆ ಹೃದಯದ ಬೆಸುಗೆಯಿಲ್ಲದೆ ಆತ್ಮೀಯತೆಯುಂಟಾದೀತೆ !

ಭಾರತಿ ಅಡಿಗೆ ಮನೆಯೊಳಗೆ ಹೋದಳು. ಕೃಷ್ಣಪ್ಪ ವೃತ್ತಪತ್ರಿಕೆಯಲ್ಲಿ ಲೀನರಾದರು. ವಿಜಯ ಸುರೇಶರ ಮಾತುಗಳು ಪಕ್ಕದ ಕೊಠಡಿಯಿಂದ ಭಾರತಿಗೆ ಕೇಳಿಸುತ್ತಿತ್ತು.

'ನಿನ್ನ ಸ್ನೇಹಿತರು ಏನೆಂದುಕೊಂಡರೋ ಏನೋ ! ಹೇಳದೆ ಕೇಳದೆ ನಾನು ಹೀಗೆ ಇಳಿದುಬಿಟ್ಟೆ.'

'ಅಂದುಕೊಳ್ಳುವುದೇನು, ಹುಚ್ಚ ಎಂದುಕೊಂಡಿರುತ್ತಾರೆ.'

'ನಿಜವಾಗಿ ಹುಚ್ಚೇ ಹಿಡಿದಿತ್ತು ವಿಜಯ. ನಾಲ್ಕು ದಿನದಿಂದ ನಿನ್ನ ಕಾಗದ ವಿಲ್ಲ. ಮೈಸೂರಿಗೆ ಹೋದರೆ ಅಲ್ಲೂ ನೀನಿರಲಿಲ್ಲ, ಹಾಗೇ ಬಸ್ಸಿನಲ್ಲಿ ಕೂತುಕೊಂಡು ಬಂದುಬಿಟ್ಟೆ.'

'ಒಳ್ಳೆ ಕೆಲಸ. ಹೇಗೂ ನಾನು ನಾಳೆ ಹಿಂದಕ್ಕೆ ಹೊರಡುತ್ತೇನೆ. ಇಬ್ಬರೂ ಹೋದರಾಯಿತು.'

'ನಿಮ್ಮ ತಂದೆಯನ್ನೊಂದು ಸಲ ಕೇಳಬಾರದೆ ವಿಜಯ ? ಮದುವೆಗೆ ಇನ್ನೂ ಎರಡು ತಿಂಗಳು ಕಾಯಬೇಕೆ ? ಬೆಂಗಳೂರಿನಲ್ಲಿ ನನ್ನ ಸಂಪಾದನೆಯೆಲ್ಲಾ ಹಾಳಾ ಗುತ್ತಿದೆ. ನೀನು ಬಂದುಬಿಡಬಾರದೆ ?'

'ನಿಮ್ಮ ಹುಚ್ಚಾಟಗಳನ್ನು ಇನ್ನೂ ನೋಡಬೇಕೆಂದು ಆಸೆ.'

ಊಟಕ್ಕೆ ಕುಳಿತಾಗ ವಿಜಯ ತನ್ನ ಪ್ರಯಾಣದ ಸುದ್ದಿಯನ್ನು ಹೇಳಿದಳು. 'ಈಗತಾನೆ ಅವರು ಬಂದಿದ್ದಾರೆ. ಇಷ್ಟು ಬೇಗ ಪ್ರಯಾಣವೆ ? ಇಲ್ಲಿ ಏನೂ ನೋಡ ಲಿಲ್ಲ. ಸ್ನೇಹಿತರು ಬೇರೆ ಇದ್ದಾರೆ.' ಎಂದು ಭಾರತಿ ಹೇಳಿದಳು.

ಸುರೇಶ, 'ಯಾರು ಸ್ನೇಹಿತರು ? ವಿಶ್ವನಾಥನ್ನ ಬೆಳಗ್ಗೆ ನೋಡಿದರೆ ಮಧ್ಯಾ ಹ್ನದ ಬಸ್ಸಿಗೆ ಹೊರಡಬಹುದು.'

ಕೃಷ್ಣಪ್ಪ, 'ಏನಷ್ಟವಸರ ? ನಾಲ್ಕುದಿನ ಇರಬಹುದಲ್ಲ' ಎಂದರು.

ಸುರೇಶ, 'ಇಲ್ಲ, ಎಷ್ಟುದಿನವಾದರೂ ತಪ್ಪಿಸಿಕೊಳ್ಳಲು ನಾವೇನು ಸರ್ಕಾರಿ ನೌಕರರೆ ? ದುಡಿದರಲ್ಲವೇ ಊಟ ?'

ಕೃಷ್ಣಪ್ಪ ನಗುತ್ತ, 'ಸರ್ಕಾರಿ ನೌಕರಿಯ ರುಚಿ ನಿಮಗೇನು ಗೊತ್ತು ? ' ಎಂದರು. ಊಟವಾದ ಮೇಲೆ ನಾಲ್ಕು ಜನರೂ ಬೆಳದಿಂಗಳಿನಲ್ಲಿ ಹೊರಗಡೆ ಕುರ್ಚಿಯಮೇಲೆ ಕುಳಿತರು. ಕೃಷ್ಣಪ್ಪ ಮಾತಿನಲ್ಲಿ ಎಷ್ಟು ಸರಸಿ ಎಂಬ ಅರಿವೇ ಭಾರತಿಗಿರಲಿಲ್ಲ. ಸುರೇಶ ಹಳೆಯ ಪರಿಚಿತನಂತೆ ಮಾತನಾಡುತ್ತಿದ್ದನು. ವಿಜಯ ತನ್ನ ಆಸೆ ಆಕ್ಷಾಂಕ್ಷೆಗಳನ್ನೆಲ್ಲಾ ಬಾಂಧವ್ಯದ ಬಿಚ್ಚು ಮಾತಿನಲ್ಲಿ ಹೇಳುತ್ತಿದ್ದಳು. ಕೃಷ್ಣಪ್ಪ ಹಿರಿಯನಂತೆ, ಬಂಧುವಿನಂತೆ, ಸಹಾನುಭೂತಿಯಿಂದ ಇಬ್ಬರೊಡನೆಯೂ ಮಾತನಾಡಿ ಸಂಕೋಚವನ್ನು ಮರೆಸಿದ್ದರು. ಭಾರತಿ ಕೇಳುತ್ತಾ ಕುಳಿತಿದ್ದಳು. ಹೊತ್ತು ಹೋದುದೇ ತಿಳಿಯಲಿಲ್ಲ. ಗಡಿಯಾರ ಒಂಭತ್ತು ಹೊಡೆಯುವ ವೇಳೆಗೆ 'ಏನು ಸುರೇಶ್ ! ವರ್ತಮಾನ ಕೊಡವೇ ಬಂದಿದ್ದೀಯಲ್ಲಾ' ಎನ್ನುತ್ತಾ ವಿಶ್ವನಾಥ ಬಂದನು. ಭಾರತಿ ಆಳನ್ನು ಕರೆದು ಇನ್ನೊಂದು ಕುರ್ಚಿ ತರಹೇಳಿ 'ಬರದೆ ಏನು ಮಾಡುತ್ತಾರೆ, ಸೂಜಿಗಲ್ಲು ಇಲ್ಲಿರುವಾಗ' ಎಂದಳು.

ಕೃಷ್ಣಪ್ಪ, 'ಏನು ಊಟವಾಯಿತೆ ವಿಶ್ವನಾಥ?' ಎಂದರು.

'ಈಗತಾನೆ ಮುಗಿಸಿಕೊಂಡು ಬಂದೆ ಮಾವ' ಎಂದು ವಿಶ್ವನಾಥ ಆಳು ತಂದ ಕುರ್ಚಿಯನ್ನೆಳೆದುಕೊಂಡು ಕುಳಿತನು.

ವಿಜಯ, 'ಇವರು ಬಂದದ್ದು ನಿಮಗೆ ಹೇಗೆ ತಿಳಿಯಿತು ' ಎಂದಳು.

'ನಾನು ಆಗಲೇ ಹೇಳಲಿಲ್ಲವೆ ? ಈ ಊರಿನಲ್ಲಿ ಅದೃಶ್ಯ ವೃತ್ತಪತ್ರಿಕೆಯಿದೆ ಎಂದು !'

ರಾತ್ರಿ ಹರಟೆ ಮುಗಿಸಿ ಎಲ್ಲರೂ ಮಲಗುವ ವೇಳೆಗೆ ಗಡಿಯಾರ ಹನ್ನೆರಡು ಹೊಡೆಯಿತು.

* * * * * *

ವಿಜಯ ಸುರೇಶರು ಹೊರಟು ಹೋದ ಮೇಲೆ ಭಾರತಿಗೆ ಹೊತ್ತು ಕಳೆಯುವುದೇ ಕಷ್ಟವಾಗಿ ತೋರತೊಡಗಿತು. ಮನೆಯಲ್ಲಿ ಅಡಿಗೆಯವನು ಕೆಲಸವನ್ನೆಲ್ಲಾ ನೋಡಿಕೊಂಡು ಹೋಗುತ್ತಿದ್ದುದರಿಂದ ಭಾರತಿ ಮಾಡಬೇಕಾದುದೇನೂ ಇರಲಿಲ್ಲ. ಕೃಷ್ಣಪ್ಪನ ಇಷ್ಟ ಇಂಗಿತಗಳು ಅವನಿಗೆ ತಿಳಿದಿದ್ದ ಹಾಗೆ ತನಗೆ ತಿಳಿದಿಲ್ಲವೆಂದು ಭಾರತಿ ನಿಶ್ಚಯಿಸಿಬಿಟ್ಟಿದ್ದಳು. ಸಂಜೆ ಸುತ್ತಾಡುವುದಕ್ಕೋ ಕ್ಲಬ್ಬಿಗೋ ಹೋಗಿ ಬಂದರೆ ದಿನದ ಓಡಾಟ ಮುಗಿಯುತ್ತಿತ್ತು. ವಿಜಯ ಬಂದು ಹೋದ ಮೇಲೆ ಕೃಷ್ಣಪ್ಪನ ಸ್ವಭಾವದಲ್ಲಿ ಮಾರ್ಪಾಟಾದಂತಿತ್ತು. ಅವಳ ಮನಸ್ಸನ್ನು ಒಲಿಸಿ ಕೊಳ್ಳುವುದು ಸಾಧ್ಯವಿಲ್ಲವೆಂಬ ಅರಿವುಂಟಾದಂತಿತ್ತು. ಎಂದಿಗಿಂತಲೂ ಅವಳ ಯೋಗಕ್ಷೇಮದಲ್ಲಿ ಹೆಚ್ಚು ಆಸಕ್ತಿ ತೋರಿಸುತ್ತಿದ್ದರೂ ಅದಕ್ಕೆ ಬದಲಾಗಿ ಯಾವ

ಅಪೇಕ್ಷೆಯನ್ನೂ ಪ್ರದರ್ಶಿಸುತ್ತಿರಲಿಲ್ಲ. ಹೇಗೋ ದಿನದಂತೆ ದಿನ ಕಳೆದು ಹೋಗುತ್ತಿತ್ತು. ಸಂಜೆ ಕೃಷ್ಣಪ್ಪನೊಡನೆ ವಿಶ್ವನಾಥನೂ ಬಂದನು. 'ಭಾರತಿ ವಿಶು ಇಲ್ಲೇ ಊಟಕ್ಕೇಳಬಹುದೆ ?' ಎಂದು ಕೃಷ್ಣಪ್ಪ ಕೂಗಿದರು.

ಭಾರತಿ ಎದ್ದು ಬಂದು 'ಅದಕ್ಕೇನು, ಕೇಳಬೇಕೆ?' ಎಂದಳು.

ವಿಶ್ವನಾಥ 'ಬೇಡ ಮಾವ, ಅಡಿಗೆ ಮಾಡಿಟ್ಟು ಬಂದಿದ್ದೇನೆ' ಎಂದನು. 'ಯಾರಾದರೂ ತಿನ್ನುತ್ತಾರೆ. ನಿತ್ಯಾ ಒಬ್ಬನೇ ಊಟ ಮಾಡುವುದು ಬೇಸರವಲ್ಲವೆ? ಭಾರತಿಗೂ ಬೇಸರ. ಸದಾ ಮುದುಕನೊಬ್ಬನೇ ಜತೆ. ನೀನು ಹಾಯಾಗಿ ಇಲ್ಲೇ ಬಂದು ಇದ್ದು ಬಿಡಬಹುದು, ಮದುವೆಯಾಗಿ ನಿನಗೊಬ್ಬ ಹೆಂಡತಿ ಬರುವವರೆಗೂ,' ಎಂದರು.

ಭಾರತಿ ವಿಶ್ವನಾಥನ ಮುಖ ನೋಡಿದಳು. ವಿಶ್ವನಾಥ ಒಪ್ಪಲಿಲ್ಲ. 'ನಿಮ ಗೆಲ್ಲಾ ತೊಂದರೆ. ಈಗ ಬೇರೆ ಇದ್ದರೇನಂತೆ, ಮೂರು ದಿನಕ್ಕೊಮ್ಮೆ ನಿಮ್ಮ ಮನೆಯ ಊಟ.'

ಭಾರತಿ, 'ತೊಂದರೆಯೇನಂತೆ, ಅಡಿಗೆಯವನಿದ್ದಾನೆ. ಮಾಡುತ್ತಾನೆ' ಎಂದಳು. ವಿಶ್ವನಾಥ ಒಪ್ಪಲಿಲ್ಲ.

'ನಾನೂ ಒಂದು ತಿಂಗಳು ರಜಾ ತೆಗೆದುಕೊಂಡು ಮೈಸೂರಿಗೆ ಹೋಗಬೇ ಕೆಂದಿದ್ದೇನೆ' ಕೃಷ್ಣಪ್ಪ ಹೇಳಿದರು.

ಭಾರತಿ ಕುತೂಹಲದಿಂದ, 'ಏಕೆ ?' ಎಂದಳು.

'ಏಕೋ ನನಗೂ ಬೇಜಾರು, ನಿನಗೂ ಬೇಜಾರು.' ನಾಲ್ಕು ದಿನ ಸುತ್ತಾಡಿ ಕೊಂಡು ಬರೋಣ.'

ವಿಶ್ವನಾಥ, 'ಒಳ್ಳೆ ಯೋಚನೆಯೇ. ಆದರೆ ನೀವೂ ಹೊರಟು ಹೋದರೆ ನಮ್ಮ ಗತಿಯೇನು?' ಎಂದು ನಕ್ಕನು.

ಭಾರತಿ ಅವನ ಮುಖ ನೋಡಿದಳು. ಅವನ ಮಾತಿನಲ್ಲಿ ಗೂಢಾರ್ಥವಿರ ಬಹುದೇ! ನಾನು ಹೊರಟು ಹೋದರೆ ಅವನಿಗೆ ಬೇಸರವಾಗಬಹುದೆ ? ಅವನ ಮುಖಭಾವದಲ್ಲಿ ಭಾರತಿಗೆ ಉತ್ತರ ದೊರಕಲಿಲ್ಲ.

ಕೃಷ್ಣಪ್ಪ ಆಗ ರಜ ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲ. ಯಾವುದೋ ಯಂತ್ರ ಕೆಟ್ಟುಹೋದುದರಿಂದ ಅಲ್ಲಿಯೇ ಉಳಿಯಬೇಕಾಯಿತು. ಮೈಸೂರಿಗೆ ಹೋಗಲು ದಿನ ಎಣಿಸುತ್ತಿದ್ದ ಭಾರತಿಗೆ ಆಶಾಭಂಗವನ್ನು ತಡೆದುಕೊಳ್ಳುವುದು ಕಷ್ಟವಾಯಿತ್ತು

ಬಾಯಿಬಿಟ್ಟು ಮಾತನಾಡದಿದ್ದರೂ ಕೃಷ್ಣಪ್ಪನಿಗೆ ಅವಳ ಮನಸ್ಸಿನ ಉದ್ವೇಗ ಅರ್ಥವಾಯಿತು. 'ನೀನೇ ಮೈಸೂರಿಗೆ ನಾಲ್ಕು ದಿನ ಹೋಗಿ ಬಾ ಭಾರತಿ.'

'ಎಲ್ಲಿ ಇರುವುದು ?'

'ಇದೇನು ಹೀಗೆನ್ನುತ್ತೀ, ನಿಮ್ಮ ತಂದೆಯಿಲ್ಲವೆ ?'

'ನಾನು ಅಲ್ಲಿ ಹೋಗುವುದಿಲ್ಲ.'

ಕೃಷ್ಣಪ್ಪ ಸುಮ್ಮನಾದರು.

ಎಂಟು ದಿನಗಳಾದಮೇಲೆ ಭಾರತಿ, 'ನಾನು ನಾಳೆ ಮೈಸೂರಿಗೆ ಹೋಗುತ್ತೇನೆ' ಎಂದಳು. ಕೃಷ್ಣಪ್ಪ ಆಶ್ಚರ್ಯದಿಂದ 'ಹೋಗುವುದಿಲ್ಲವೆಂದೆ ? ' ಎಂದರು.

'ಇಲ್ಲ, ಹೋಗುತ್ತೇನೆ.'

'ಎಷ್ಟು ದಿನ ?'

'ನೋಡೋಣ.'

ಕೃಷ್ಣಪ್ಪ ಒಪ್ಪಿ ಬಸ್ಸಿಗೆ ಹೇಳಿ ಕಳುಹಿಸಿದರು. ಮರುದಿನ ಪ್ರಾತಃಕಾಲದ ಬಸ್ಸಿನಲ್ಲೇ ಭಾರತಿ ಹೊರಟಳು. ಕೃಷ್ಣಪ್ಪ ಅವಳ ಕೈಯಲ್ಲಿ ನೂರು ರೂಪಾಯಿಯನ್ನಿಟ್ಟು 'ಇನ್ನೂ ಬೇಕಾದರೆ ಬರಿ, ಕಳುಹಿಸುತ್ತೇನೆ' ಎಂದರು. ಬಸ್ಸು ಹೊರಟ ಹೋದ ಎಷ್ಟೋ ಹೊತ್ತಿನಮೇಲೆ ನಿಟ್ಟುಸಿರುಬಿಟ್ಟು ಒಳಕ್ಕೆ ಹೋದರು. ಮನೆಯೆಲ್ಲಾ ಶೂನ್ಯ! ಆದರೆ ಆ ಶೂನ್ಯವನ್ನು ತುಂಬುವ ಭಾರವನ್ನು ಆ ಹಸು ಮಗುವಿನ ಮೇಲೆ ನೂಕಬಾರದಾಗಿತ್ತು. ಕೃಷ್ಣಪ್ಪನಿಗೆ ತನ್ನ ಹುಚ್ಚನ್ನು ನೆನೆದು ನಗು ಬಂತು. ಭಾಗೀರಥಿಯಿದ್ದಿದ್ದರೆ! ತನ್ನೊಡನೆ ಅವಳೂ ಮುದಿಯಾಗುತ್ತಿದ್ದಳು. ಯೌವನದ ಸವಿನೆನಪುಗಳಲ್ಲಿ ಭಾಗವಿರುತ್ತಿತ್ತು. ಭಾರತಿಯ ಜೀವನದಲ್ಲಿ ಸ್ಥಾನವನ್ನಪೇಕ್ಷಿಸಿದುದು ಹುಚ್ಚಲ್ಲದೆ ಮತ್ತೇನು ?

ಭಾರತಿ ಹೊರಟು ಹೋಗಿ ಎರಡು ದಿನಗಳಾದರೂ ಕಾಗದ ಬರೆದಿರಲಿಲ್ಲ. ಸ್ವಲ್ಪ ಗಾಬರಿಯಾದರೂ ಕೃಷ್ಣಪ್ಪ ಇನ್ನೆರಡು ದಿನ ತಡೆದು ನೋಡಬೇಕೆಂದು ನಿರ್ಧರಿಸಿದರು. ಎಲ್ಲಿಯಾದರೂ ಓಡಾಡುತ್ತಿರಬಹುದು; ಬಿಡುವಿಲ್ಲದಿರಬಹುದು. ಬರೆಯದೆ ಏನು ಮಾಡುತ್ತಾಳೆ, ಎಂದು ಸುಮ್ಮನಾದರು. ರಾತ್ರಿ ಕೆಲಸ ಮಾಡಿ ಬಂದಿದ್ದುದರಿಂದ ಹಾಗೆಯೇ ಹಾಸಿಗೆಯ ಮೇಲೆ ಬಿದ್ದುಕೊಂಡರು. ಆಯಾಸವಾಗಿದ್ದರೂ ನಿದ್ದೆ ಬರಲಿಲ್ಲ. ಮನಸ್ಸಿನಲ್ಲಿ ಏನೋ ಕಳವಳ. ಭಾಗೀರಥಿಯ ನೆನಪು. ಎಂದೋ ಕಳೆದುಹೋದ ದಿನಗಳ ಸ್ಮರಣೆ. ಅವಳು ಬರಿದುಮಾಡಿ ಹೋದ ಸ್ಥಳದಲ್ಲಿ ಭಾರತಿಯನ್ನು ಪ್ರತಿಷ್ಠಿಸಲು ಸರ್ವ ಪ್ರಯತ್ನವನ್ನೂ ಮಾಡಿದ್ದರು. ಸಾಧ್ಯವಾಗಲಿಲ್ಲ.

ಈಗ ಅದೊಂದು ಬಿಡಿಸಲಾಗದ ಸಮಸ್ಯೆ. ಭಾರತಿಯ ಬಿಡುಗಡೆ ತನ್ನ ಸಾವಿನಿಂದಲೇ ಸಾಧ್ಯ. ಆಗಲಾದರೂ ಎಂತಹ ಬಿಡುಗಡೆ. ಹಿಂದೂ ಸಮಾಜದಲ್ಲಿ ವಿಧವೆಗೆ ಸ್ಥಾನಮಾನಗಳೆಲ್ಲಿಯವು ? ಎಲ್ಲಿಯಾದರೂ ನಾಲ್ಕು ಕಾಸು ಸಂಪಾದಿಸಿ ಹೊಟ್ಟೆ ಹೊರೆದುಕೊಳ್ಳಬಹುದು. ಹೃದಯದ ಶೂನ್ಯವನ್ನು ಮರ್ಯಾದೆಯಿಂದ ತುಂಬಿಸಿಕೊಳ್ಳಲು ಸಾಧ್ಯವಿಲ್ಲ. ತಾನು ಅವಳಿಗೆ ಮಾಡಿದ ಅನ್ಯಾಯ ಅಕ್ಷಮ್ಯವಾದುದೇ ? ಆದರೆ ! ಎಷ್ಟು ಜನ ಮರುಮದುವೆ ಮಾಡಿಕೊಂಡು ಸುಖವಾಗಿರುವುದಿಲ್ಲ ? ತಾನು ಭಾರತಿಗೆ ಕಡಿಮೆ ಮಾಡಿದುದೇನು ? ಸುಖವಾಗಿರುವುದು ಅವಳ ಹಣೆಯಲ್ಲೂ ಬರೆದಿಲ್ಲ, ತನ್ನ ಹಣೆಯಲ್ಲೂ ಬರೆದಿಲ್ಲ.

ಕೃಷ್ಣಪ್ಪ ಎದ್ದು ಕಾಗದಗಳಿದ್ದ ಒಂದು ಪೆಟ್ಟಿಗೆಯನ್ನು ತೆರೆದರು. ಅದರಲ್ಲಿ ಕಾಗದದಿಂದ ಸುತ್ತಲ್ಪಟ್ಟಿದ್ದ ಭಾಗೀರಥಿಯ ಚಿತ್ರವನ್ನು ತೆಗೆದು ಮೇಜಿನಮೇಲಿಟ್ಟರು. ಅವಳ ಮನ ನೋಯದಿರಲೆಂದು ಭಾರತಿ ಬಂದ ದಿನ ಅದನ್ನು ಒಳಗಿಟ್ಟಿದ್ದರು. 'ಭಾಗೀರಥಮ್ಮ ತುಂಬಾ ಚೆನ್ನಾಗಿದ್ದರಲ್ಲವೆ ? ' ಎಂದು ಭಾರತಿ ಒಂದು ದಿನ ಕೇಳಿದ್ದಳು. ನಿಜವಾಗಿ ಭಾಗೀರಥಿ ಸುಂದರಿ. ಚಿತ್ರ ತುಂಬಾ ಚೆನ್ನಾಗಿತ್ತು. ಹಾಲು ಕೆನ್ನೆಗಳ ಮೇಲಿನ ಗುಳಿಗಳು ಮನಮೋಹಕವಾಗಿದ್ದುವು. ನೆನಪುಗಳು ಒಂದರ ಮೇಲೊಂದು ಪೀಡಿಸತೊಡಗಿದುವು. ನಗುತ್ತಿದ್ದ ಭಾಗೀರಥಿ, ಜಡೆ ಹೆಣೆದುಕೊಳ್ಳುತ್ತಿದ್ದ ಭಾಗೀರಥಿ, ಮನೆಗೆ ಬರುವ ವೇಳೆಗೆ ನೀರಿಗಳನ್ನು ಚಿಮ್ಮುತ್ತಾ ಎದುರಿಗೆ ಬಂದು ನಿಲ್ಲುತ್ತಿದ್ದ ಭಾಗೀರಥಿ ! ಕೋಣೆಯ ತುಂಬಾ ಭಾಗೀರಥಿ ನಲಿದಾಡತೊಡಗಿದಳು. ಅವಳಲ್ಲಿ ತನಗಿದ್ದ ಪ್ರೇಮಕ್ಕೆ ಮರುಕ ಬೆರೆತಿರಲಿಲ್ಲ. ಕೊಟ್ಟಷ್ಟು ಪ್ರೇಮವನ್ನು ಬದಲು ಕೇಳುವ ಎದೆಗಾರಿಕೆಯಿತ್ತು. ಕೃಷ್ಣಪ್ಪ ಚಿತ್ರವನ್ನು ಎವೆಯಿಕ್ಕದೆ ನೋಡಿದರು. ಮದುವೆಯಾದ ಹೊಸದರಲ್ಲಿ ಭಾರತಿಯೂ ಫೋಟೋ ತೆಗೆಸಿಕೊಂಡಿದ್ದಳು. ಎರಡು ಚಿತ್ರಗಳನ್ನೂ ಒಂದರ ಪಕ್ಕದಲ್ಲೊಂದನ್ನು ಇಟ್ಟು ನೋಡುವ ಆಸೆಯಾಯಿತು. ಆ ಚಿತ್ರ ಭಾರತಿಯ ಪೆಟ್ಟಿಗೆಯಲ್ಲಿತ್ತು. ಕೃಷ್ಣಪ್ಪ ಪೆಟ್ಟಿಗೆ ತೆಗೆದರು. ಸೀರೆಗಳಿಂದ ಬಂದ ಸುವಾಸನೆ ಕೋಣೆಯಲ್ಲಿ ಹರಡಿತು. ಕೃಷ್ಣಪ್ಪ ಮೇಲಿದ್ದ ಸೀರೆಯನ್ನು ಕೆನ್ನೆಗೊತ್ತಿಕೊಂಡರು. ಅದರಿಂದ ಒಂದು ಲಕ್ಕೋಟೆ ಕೆಳಗೆ ಬಿತ್ತು. ಕುತೂಹಲದಿಂದ ಅದನ್ನು ಬಿಚ್ಚಿ ಓದಿದರು. ಓದುತ್ತ ಓದುತ್ತ ಕೃಷ್ಣಪ್ಪನ ಮುಖ ಗಂಭೀರವಾಯಿತು. ಮಿಷನ್ ಸ್ಕೂಲಿನ ಮುಖ್ಯೋಪಾಧ್ಯಾಯಿನಿಯ ಪತ್ರ. ಭಾರತಿಯನ್ನು ಕೆಲಸಕ್ಕೆ ಸೇರಿಸಿಕೊಂಡಿರುವುದಾಗಿಯೂ ಮೊದಲನೆಯ ತಾರೀಖಿನಿಂದ ಕೆಲಸಕ್ಕೆ ಹಾಜರಾಗಬೇಕೆಂದೂ ಬರೆದಿದ್ದಳು. ಆ ದಿನ ಮೂರನೆಯ ತಾರೀಖು. ಪೆಟ್ಟಿಗೆಯನ್ನು ಮುಚ್ಚಿ ಕೃಷ್ಣಪ್ಪ ಮೇಲಕ್ಕೆದ್ದರು. ಭಾಗೀರಥಿಯ ಮುಖ ಅವರನ್ನು ಹಾಸ್ಯ ಮಾಡಿ ನಗುತ್ತಿರುವಂತಿತ್ತು.

ಭಾರತಿ ಹೊರಟುಹೋಗಿ ಒಂದು ತಿಂಗಳಾಗಿತ್ತು. ಅವಳಿಂದ ಕಾಗದವೇ ಇರಲಿಲ್ಲ. ಕೃಷ್ಣಪ್ಪನೂ ಅವಳ ತಂದೆಯ ಮನೆಗೆ ಕಾಗದ ಬರೆಯಲಿಲ್ಲ. ದಿನದಂತೆ ದಿನ ಉರುಳಿ ಹೋಗುತ್ತಿತ್ತು. ಸಂಜೆ ಪತ್ರಿಕೆಯನ್ನು ಹಿಡಿದು ಕೃಷ್ಣಪ್ಪ ಕುಳಿತಿದ್ದರು. ವಿಶ್ವನಾಥ ಬಂದು, 'ಕ್ಲಬ್ಬಿಗೆ ಹೋಗಲಿಲ್ಲವೆ ಮಾವ ?' ಎಂದನು.

'ಏನೋ ಬೇಜಾರು. ಹೀಗೆ ಕೂತುಕೊಂಡೆ. ನೀನು ಹೋಗು.'

ಅಲ್ಲಿದ್ದ ಕುರ್ಚಿಯನ್ನೆಳೆದುಕೊಂಡು ವಿಶ್ವನಾಥ ಕುಳಿತನು. 'ಆಗ ರಜ ತೆಗೆದುಕೊಳ್ಳುತ್ತೇನೆಂದಿರಿ. ಏನೋ ಗಲಾಟೆ ಬಂತು. ಈಗ ತೆಗೆದುಕೊಂಡು ನಾಲ್ಕು ದಿನ ಹೋಗಿ ಬರಬಹುದಲ್ಲ'.

'ಏನೋ ಬೇಕಾಗಲಿಲ್ಲ.'

'ಭಾರತಿ ಹೊರಟುಹೋಗಿ ತಿಂಗಳಾಯಿತಲ್ಲವೆ ? ಯಾವತ್ತು ಬರುತ್ತಾರೆ?'

ಕೃಷ್ಣಪ್ಪ ಎದ್ದು ಹೋಗಿ ಸ್ಕೂಲಿನ ಕಾಗದ ತಂದು ವಿಶ್ವನಾಥನ ಕೈಯಲ್ಲಿಟ್ಟರು. ವಿಶ್ವನಾಥ ಓದಿ ಸುಮ್ಮನಿದ್ದನು.

ಕೃಷ್ಣಪ್ಪನೇ, 'ಇನ್ನು ಅವಳು ಬರುವಹಾಗೆ ಕಾಣೆ. ಕಾಗದವೇ ಇಲ್ಲ' ಎಂದರು.

'ನಾಲ್ಕು ದಿನ ಚಾಕರಿ ಮಾಡಿದರೆ ಬೇಸರವಾಗುತ್ತೆ. ಬರುತ್ತಾರೆ.'

'ಹೋಗಲೇಬೇಕೆಂದು ಹೇಳಿದ್ದರೆ ಬೇಡವೆನ್ನುತ್ತಿರಲಿಲ್ಲ. ಒಂದು ಮಾತು ಕೂಡ ತಿಳಿಸದೆ ಹೊರಟುಹೋದಳು. ಕಾಗದವನ್ನೂ ಬರೆಯಲಿಲ್ಲ.'

ವಿಶ್ವನಾಥನಿಗೆ ಆ ಮೂಕ ವೇದನೆಯನ್ನು ನೋಡಿ ಗಂಟಲು ಕಟ್ಟಿಬಂತು. ಯಾರದು ತಪ್ಪೆನ್ನುವುದು ? ಇಳಿಯ ವಯಸ್ಸಿನಲ್ಲಿ ಹುಡುಗಿಯ ಜೀವನ ರಥದ ಸಾರಥ್ಯದ ಹೊಣೆಯನ್ನೊಪ್ಪಿಕೊಂಡ ಕೃಷ್ಣಪ್ಪನದೆ ? ಹೃದಯದ ಆಸೆ ಅಭಿಲಾಷೆಗಳನ್ನು ಅಡಗಿಸಿಕೊಳ್ಳಲಾರದ ಭಾರತಿಯ ದುರ್ಬಲತೆಯದೆ ? ವಿಶ್ವನಾಥ ಆ ಮಾತನ್ನು ಮುಂದುವರಿಸಲು ಅಸಮರ್ಥನಾದನು. ಆ ಮಾತು ಈ ಮಾತು ಆಡಿ ಏಳುತ್ತಾ 'ನಾನು ನಾಳೆ ಮೈಸೂರಿಗೆ ಹೋಗುತ್ತೇನೆ. ಒಂದು ಮಾತು ಹೇಳಲಿ ?' ಎಂದನು.

ಕೃಷ್ಣಪ್ಪ ತಲೆಯಾಡಿಸಿ, 'ಈ ಕೆಲಸ ಮೂರನೆಯವರಿಂದ ಅಸಾಧ್ಯ. ಹೇಗೆ ಹೇಗಾಗಬೇಕೋ ಹಾಗಾಗುತ್ತೆ' ಎಂದರು.

ವಿಶ್ವನಾಥ ಸ್ಕೂಲಿನ ಆಳಿನಿಂದ ಭಾರತಿಯ ಮನೆಯಿದ್ದ ಸ್ಥಳವನ್ನು ಗೊತ್ತು ಪಡಿಸಿಕೊಂಡನು. ಮರುದಿನ ಭಾನುವಾರವಾದುದರಿಂದ ಅವಳು ಮನೆಯಲ್ಲಿ ಸಿಕ್ಕ

ಬಹುದೆಂದುಕೊಂಡು ಅಲ್ಲಿಗೆ ಹೋದನು. ಭಾರತಿಯ ಮನೆ ಪರಕಾಲಮಠದ ಹಿಂದಿನ ಒಂದು ಸಣ್ಣ ಓಣಿಯಲ್ಲಿ. ವಿಶಾಲವಾದ ಮನೆಯಲ್ಲಿ ಮಹಾರಾಣಿಯಂತಿ ರದೆ ಇದೇನು ಗ್ರಹಚಾರ ಎಂದು ವಿಶ್ವನಾಥನಿಗೆನಿಸಿತು. ಬಾಗಿಲನ್ನು ಭಾರತಿಯೇ ತೆಗೆದು ವಿಶ್ವನಾಥನನ್ನು ಆಶ್ಚರ್ಯದಿಂದ ನೋಡಿದಳು.

'ನೀವೇ ! ಬನ್ನಿ.'

ವಿಶ್ವನಾಥ ಒಂದು ಕುರ್ಚಿಯ ಮೇಲೆ ಕುಳಿತನು. ಭಾರತಿ ಎದ್ದು ಹೋಗಿ ಒಂದು ಬಟ್ಟಲು ಕಾಫಿ ತಂದು ಅವನ ಮುಂದೆ ಇಟ್ಟಳು.

'ನಾನು ಇಲ್ಲಿರುವ ವಿಚಾರ ಯಾರು ಹೇಳಿದರು ?'

'ಮಾವನೇ ಹೇಳಿದರು. ಮುಖ್ಯೋಪಾಧ್ಯಾಯಿನಿಯ ಕಾಗದ ಸಿಕ್ಕಿ ಅವರಿಗೆ ತಿಳಿಯಿತು. ನೀವು ಕಾಗದವನ್ನೇ ಬರೆಯಲಿಲ್ಲವಂತೆ ?'

'ಏನೆಂದು ಬರೆಯುವುದು ?'

'ನೀವು ಹೋಗಲೇಬೇಕೆಂದಿದ್ದರೆ ಮಾವನೇ ಕಳುಹಿಸುತ್ತಿದ್ದರು. ಅವರೇ ಹೇಳಿದರು.'

ಭಾರತಿ ಸುಮ್ಮನಿದ್ದಳು. ವಿಶ್ವನಾಥನಿಗೂ ಮಾತನಾಡಲು ತೋಚಲಿಲ್ಲ. ಕಡೆಗೆ ಭಾರತಿ, 'ನಾನು ಹೀಗಾಯಿತೆಂದು ವಿವರಿಸಿದರೆ ನಿಮಗೆ ಅರ್ಥವಾಗಲಾರದು. ಅಲ್ಲಿ ನಿಲ್ಲುವುದು ನನಗೆ ಅಸಾಧ್ಯವಾಯಿತು. ಹಾಗೆಂದು ಹೇಳುವುದಕ್ಕಾಗುತ್ತದೆಯೆ?'

ವಿಶ್ವನಾಥನ ಮುಖ ನೋವಿನಿಂದ ಸಪ್ಪಗಾಯಿತು. 'ಈ ವಿಚಾರದಲ್ಲಿ ಮೂರ ನೆಯವರು ಕೈಹಾಕುವುದು ಅಸಾಧ್ಯವೆಂದು ಮಾವನೇ ಹೇಳಿದರು. ಅದು ನಿಜವಾದ ಮಾತು. ಆತನ ಮನಸ್ಸು ಬಹಳ ಮೃದು. ನಿಮಗೆ ನೋವುಂಟು ಮಾಡಲಾರರು. ಇನ್ನೊಂದು ಸಲ ಪ್ರಯತ್ನಿಸಿ ನೋಡಬಾರದೆ ? ಕೆಲಸ ಮಾಡಬೇಕೆಂದರೆ ಅಲ್ಲಿಯೇ ಮಾಡಬಹುದಲ್ಲ' ಎಂದನು.

ಭಾರತಿಯ ದೃಷ್ಟಿ ದಿಗಂತದಲ್ಲಿ ನೆಲೆಸಿತ್ತು. ಕಡೆಗೆ ಕಠಿನವಾಗಿ ನಕ್ಕು 'ಇದೂ ಒಂದು ಪ್ರಯೋಗವಷ್ಟೇ. ಕೆಲಸದಲ್ಲಿ ಮನಶ್ಶಾಂತಿ ಸಿಕ್ಕುವುದೇನೋ ಎಂದು ನೋಡು ತ್ತಿದ್ದೇನೆ.'

ವಿಶ್ವನಾಥ ಏಳುತ್ತಾ 'ಹಾಗಾದರೆ ನಾನು ಬಂದುದು ವ್ಯರ್ಥವಾಯಿತು' ಎಂದನು. ಭಾರತಿ 'ಹಾಗೆನ್ನುವ ಧೈರ್ಯ ಇಲ್ಲ. ನೀವು ಪುನಃ ಊರಿಗೆ ಹೊರಡು ವುದು ಯಾವಾಗ ?'

'ಮೂರು ದಿನ ರಜ ತೆಗೆದುಕೊಂಡು ಬಂದೆ.'

'ರಾತ್ರಿ ಇಲ್ಲಿಗೇ ಊಟಕ್ಕೆ ಬರುತ್ತೀರಾ ?'

'ನಿಮಗೆ ಇಲ್ಲದ ತೊಂದರೆ. ಅದಕ್ಕೆ ಬದಲಾಗಿ ಒಂದು ಕೆಲಸ ಮಾಡೋಣ. ನಾನು ಮಾಡರ್ನ್ ಹೊಟೇಲಿನಲ್ಲಿ ಇಳಿದಿದ್ದೇನೆ. ಸಂಜೆ ಏಳು ಘಂಟೆಗೆ ನೀವು ಬರುವುದಾದರೆ ಅಲ್ಲೇ ಊಟ ಮಾಡೋಣ.' ಭಾರತಿ ಒಪ್ಪಿದಳು.

ವಿಶ್ವನಾಥ ಕರೆಯಲು ಬರುವ ವೇಳೆಗೆ ಭಾರತಿ ಸಿದ್ಧವಾಗಿ ಇದ್ದಳು. ಅವಳ ಹುಟ್ಟಿದ ಹಬ್ಬದ ದಿನ ಕೃಷ್ಣಪ್ಪ ತಂದುಕೊಟ್ಟಿದ್ದ ಸೀರೆಯನ್ನೇ ಉಟ್ಟಿದ್ದಳು. ದೀಪದ ಬೆಳಕಿನಲ್ಲಿ ಕರಿಯ ಸೀರೆಯನ್ನುಟ್ಟು ನಿಂತಿದ್ದ ಭಾರತಿ ಬಹು ಸುಂದರಿಯಾಗಿ ಕಂಡಳು. ವಿಶ್ವನಾಥ ಬೆಚ್ಚಿದನು. ತಾನು ಬೆಂಕಿಯೊಡನೆ ಆಡುತ್ತಿಲ್ಲವಷ್ಟೆ! ಒಂದು ಕಡೆ ಪತಿಯಲ್ಲಿ ಬೇಸತ್ತ ಸುಂದರಿಯಾದ ತರುಣಿ. ಇನ್ನೊಂದುಕಡೆ ವೃದ್ಧಾಪ್ಯವನ್ನು ಸಮೀಪಿಸುತ್ತಿದ್ದ ಕೃಷ್ಣಪ್ಪ. ಅವರ ನಡುವೆ ಮಧ್ಯಸ್ಥಿಕೆ ಮಾಡಲು ತನಗೆ ಯಾವ ಯೋಗ್ಯತೆಯಿದೆ? ವಯಸ್ಸು, ಅನುಭವ, ಯಾವುದರಲ್ಲೂ ತಾನು ಅದಕ್ಕೆ ತಕ್ಕವನಲ್ಲ. ಮರುಕ್ಷಣದಲ್ಲಿ ನೋವಿನಿಂದ ಕೂಡಿದ ಕೃಷ್ಣಪ್ಪನ ಮುಖ ನೆನಪಿಗೆ ಬಂತು. 'ಬರುತ್ತೀರಾ ?' ಎಂದು ಭಾರತಿಯನ್ನು ಕರೆದುಕೊಂಡು ನಡೆದನು. ಹೊಟೇಲಿನ ಮುಂದಿನ ವರಾಂಡದಲ್ಲಿ ಮೇಜಿನ ಬಳಿ ಕುಳಿತು ಇಬ್ಬರೂ ಊಟಮಾಡುತ್ತಿದ್ದರು.

ವಿಶ್ವನಾಥ, 'ಪುನಃ ಪುನಃ ಅದೇ ಮಾತನ್ನಾಡುತ್ತೇನೆಂದು ಬೇಸರಪಡಬೇಡಿ. ಮಾವನಿಗೆ ನೀವು ಬರುವಿರೆಂದು ಹೇಳಲೆ ?'

'ನೀವೇನೂ ಹೇಳಬೇಡಿ. ಪ್ರಯೋಗ ಮುಗಿಯಲಿ. ಇನ್ನು ನನ್ನ ಹದಗೆಟ್ಟ ಕಥೆ ಸಾಕು. ನಿಮ್ಮ ವಿಚಾರ ತಿಳಿಯಬೇಕೆಂದು ಬಹಳ ದಿನದಿಂದ ಆಸೆಯಿದೆ. ಹೇಳಿ.'

ವಿಶ್ವನಾಥ ನಕ್ಕು, 'ನನ್ನ ವಿಚಾರವೇನಿದೆ ? ತಂದೆತಾಯಿಯನ್ನು ಕಳೆದುಕೊಂಡ ತಬ್ಬಲಿ. ಮಾವನೇ ಓದಿಗೂ ಸಹಾಯ ಮಾಡಿದರು. ಈಗಲೂ ಅವರೇ ನನಗಿರುವ ಆಸರೆ.'

'ಅವರು ನಿಮಗೇನಾಗಬೇಕು. ?'

'ವಿಚಾರಿಸಿದರೆ ಏನೂ ಆಗಬೇಕಾಗಿಲ್ಲ. ಭಾಗೀರಥಮ್ಮನಿಗೂ ನಾನು ದೂರ ಸಂಬಂಧವಾಗಬೇಕು.'

'ಭಾಗಿರಥಮ್ಮನ ವಿಚಾರ ಹೇಳಿ. '

'ಅವರು ಸಾಯುವಾಗ ನಾನಿನ್ನೂ ಓದುತ್ತಿದ್ದೆ. ರಜದಲ್ಲಿ ಆಗಾಗ ಬರುತ್ತಿದ್ದೆ. ಆಕೆ ತುಂಬಾ ವಿಶ್ವಾಸಿ.'

'ತುಂಬಾ ಚೆನ್ನಾಗಿದ್ದರಲ್ಲವೆ?'

'ಅದು ಹೇಗೆ ಹೇಳುವುದು? ತಾಯಿಯ ಸೌಂದರ್ಯದ ಕಡೆ ಮಗನ ಗಮನ ವಿರುವುದೆ. ಎಲ್ಲರೂ ಹಾಗೆ ಹೇಳುತ್ತಿದ್ದರು. ಮಾವನಂತೂ ಆಕೆ ಹಾಕಿದ ಗೆರೆ ದಾಟು ತ್ತಿರಲಿಲ್ಲ. ಆಫೀಸು ಬಿಟ್ಟರೆ ಮನೆ. ಕ್ಲಬ್ಬಿಗೆ ಕೂಡ ಹೋಗುತ್ತಿರಲಿಲ್ಲ.'

ಭಾರತಿಯ ಮೈ ಜುಮ್ಮೆಂದಿತು. ತಾಯಿ, ಮಗ! ಅದು ತನಗೂ ಅವನು ಕೊಡುತ್ತಿದ್ದ ಎಚ್ಚರಿಕೆಯೋ! ಅವನೊಡನೆ ಹಿಂದಿನ ವೃತ್ತಾಂತ ಮಾತಾಡುತ್ತಾ ಒಂದರೆಕ್ಷಣ ಭಾರತಿ ತನ್ನ ಕಥೆಯನ್ನೇ ಮರೆತಿದ್ದಳು. ಆದರೆ ಭಾಗೀರಥಿ ವಿಶ್ವನಾಥ ನಿಗಿಂತ ತುಂಬ ದೊಡ್ಡವಳು. ಆಕೆ ಅವನಲ್ಲಿಟ್ಟ ವಾತ್ಸಲ್ಯವನ್ನು ತಾನಿಡಲಾದೀತೆ. ನಾಳೆ ವಿಶ್ವನಾಥ ಮದುವೆಯಾಗುವ ಹೆಣ್ಣು ತನ್ನ ವಯಸ್ಸಿನವಳೇ ಇರಬಹುದು.

'ಅದು ಸರಿ. ನೀವು ಮದುವೆಯ ಆಲೋಚನೆ ಮಾಡಿಲ್ಲವೆ? ಕೆಲಸವಾದ ಮೇಲೂ ಒಂಟಿಯಾಗಿರಬೇಕೆ?'

ವಿಶ್ವನಾಥನ ಮುಖ ಕೆಂಪಗಾಯಿತು. 'ಆಗುತ್ತೆ. ಏನವಸರ' ಎಂದನು. ಊಟ ಮುಗಿಸಿ ಭಾರತಿಯನ್ನು ಮನೆ ತಲುಪಿಸುವ ವೇಳೆಗೆ ರಾತ್ರಿ ಒಂಭತ್ತು ಘಂಟೆ ಯಾಗಿತ್ತು.

* * * * * *

ವಿಶ್ವನಾಥ ತಾನು ಭಾರತಿಯನ್ನು ಕಂಡ ವಿಚಾರವನ್ನು ಕೃಷ್ಣಪ್ಪನಿಗೆ ಹೇಳ ಲಿಲ್ಲ. ಬಿಡುವಾಗಿದ್ದ ಹೊತ್ತನ್ನೆಲ್ಲಾ ಅವರ ಮನೆಯಲ್ಲೇ ಕಳೆಯುತ್ತಿದ್ದನು. ಕೃಷ್ಣ ಪ್ಪನೂ ಪುನಃ ಆ ವಿಚಾರವಾಗಿ ಮಾತನಾಡಲಿಲ್ಲ.

ಸಾಯಂಕಾಲ ವಿಶ್ವನಾಥ ಬಂದಾಗ ಕೃಷ್ಣಪ್ಪ ಎಂದಿನಂತೆ ವಿಶ್ವಾಸದಿಂದ ಸ್ವಾಗತಿಸಲಿಲ್ಲ. ಸ್ವಲ್ಪ ಗಡುಸಾಗಿಯೇ 'ಬಾ ವಿಶೂ, ಕೂತುಕೋ' ಎಂದರು. ವಿಶ್ವ ನಾಥನಿಗೆ ಪರಿಸ್ಥಿತಿ ಅರ್ಥವಾಗಲಿಲ್ಲ. ಕೃಷ್ಣಪ್ಪ ಆ ಮಾತು ಈ ಮಾತು ಆಡಿದರೂ ಅವರ ಮನಸ್ಸು ಸಮಾಧಾನ ಸ್ಥಿತಿಯಲ್ಲಿಲ್ಲವೆಂದು ತಿಳಿದನು. ಸ್ವಲ್ಪ ಹೊತ್ತಾಗು ತ್ತಲೇ ಎದ್ದು, 'ಬರುತ್ತೇನೆ, ಮಾವಾ,' ಎಂದನು. ಕೃಷ್ಣಪ್ಪನು ಏನೋ ಹೇಳಲು ಹೋಗಿ ತಡವರಿಸುತ್ತಿದ್ದಂತಿತ್ತು. ವಿಶ್ವನಾಥ ಹೊರಬಾಗಿಲನ್ನು ತಲುಪುವ ವೇಳೆಗೆ 'ನೀನು ಮೈಸೂರಿನಲ್ಲಿ ಭಾರತಿಯನ್ನು ಕಂಡಿದ್ದೆಯಂತೆ' ಎಂದರು.

ವಿಶ್ವನಾಥನಿಗೆ ತಟ್ಟನೆ ನಿಜಸ್ಥಿತಿಯ ಅರಿವಾಯಿತು. ನಿಧಾನವಾಗಿ ಹಿಂದಕ್ಕೆ ಬಂದು, 'ಹೌದು, ಯಾರು ಹೇಳಿದರು?' ಎಂದನು.

'ಶ್ರೀನಿವಾಸರಾಯ ನೋಡಿದನಂತೆ.'

'ಎಲ್ಲಿ ?'

'ರಾತ್ರಿ ಮಾಡರನ್ ಹೊಟೇಲಿನಲ್ಲಿ ಊಟ ಮಾಡುತ್ತಿದ್ದಿರಂತೆ.' ವಿಶ್ವನಾಥ ಗಂಭೀರವಾಗಿ, 'ಮಾವಾ, ನನ್ನ ನಡತೆಯ ವಿಚಾರದಲ್ಲಿ ಎಂದಾದರೂ ಸಂದೇಹಕ್ಕೆ ಆಸ್ಪದ ಕೊಟ್ಟದ್ದೇನೆಯೆ? ನೀವು ಇಲ್ಲದ ವಿಚಾರ ತಲೆಯಲ್ಲಿ ತುಂಬಿಕೊಂಡು ಪೇಚಾಡುತ್ತಿದ್ದೀರಿ. ನಾನು ಭಾರತಿಯನ್ನು ನೋಡಿ ಮಾತನಾಡಿದುದುಂಟು. ಆಕೆ ಇಲ್ಲಿಗೆ ಬರುವುದೇ ಶ್ರೇಯಸ್ಕರವೆಂದು ಹೇಳಿದೆ; ಒಪ್ಪದಿದ್ದುದರಿಂದ ಆ ಮಾತನ್ನೆತ್ತಿ ನಿಮ್ಮ ಮನ ನೋಯಿಸಬಾರದೆಂದು ಸುಮ್ಮನಾದೆ. ಯಾರೋ ಹೇಳಿದ ಮಾತನ್ನು ಕೇಳಿ ಮನಸ್ಸು ನೋಯಿಸಿಕೊಳ್ಳಬೇಡಿ. ನಾನೆಂದೂ ಅರಿಯದ ಪಿತೃವಾತ್ಸಲ್ಯವನ್ನು ನೀವು ತೋರಿದ್ದೀರಿ. ಭಾಗೀರಥಮ್ಮನಂತೆ ಭಾರತಿ ನನ್ನ ತಾಯಿಯಲ್ಲವೆ?' ಎಂದನು.

ಕೃಷ್ಣಪ್ಪ ತಲೆ ತಗ್ಗಿಸಿಕೊಂಡೇ, 'ಕ್ಷಮಿಸು' ಎಂದರು.

ರಾತ್ರಿ ಕೆಲಸ ಮುಗಿಸಿಕೊಂಡು ಕೃಷ್ಣಪ್ಪ ಮನೆಯ ಕಡೆ ಬರುತ್ತಿದ್ದರು. ಏನೇನೋ ಆಲೋಚನೆಗಳು ಸುಳಿದುಹೋಗುತ್ತಿದ್ದುವು. ಭಾರತಿ ಹಿಂದಿರುಗಿ ಬರಲು ಒಪ್ಪಲಿಲ್ಲ. ತನ್ನೊಡನೆ ಸುಖ ಜೀವನ ಸಾಗಿಸುವುದಕ್ಕಿಂತ ಅವಳಿಗೆ ತನ್ನ ಹೊಟ್ಟೆ ಪಾಡಿಗಾಗಿ ದುಡಿಯುವುದೇ ಹಿತವಾಗಿತ್ತು. ಮನುಷ್ಯನ ಸಂಸ್ಕೃತಿ ಹೆಚ್ಚಿದಷ್ಟಕ್ಕೂ ಸಮಸ್ಯೆಗಳೂ ಹೆಚ್ಚುವುವು. ಭಾರತಿ ಹಳ್ಳಿಗಾಡಿನ ಹುಡುಗಿಯಾಗಿದ್ದರೆ ಅವಳ ತಲೆಯಲ್ಲಿ ಈ ಕಲ್ಪನೆಗಳು ಸುಳಿಯುತ್ತಿರಲಿಲ್ಲ. ತನ್ನನ್ನೇ ದೇವರೆಂದು ಪೂಜಿಸಿಕೊಂಡು ಕಾಲ ಕಳೆಯುತ್ತಿದ್ದಳು. ಮದುವೆ ಮಾಡಿಕೊಂಡು ಈಗ ಸುಖವಿಲ್ಲವಾಯಿತು. ಮನೆಗೆ ಬಂದರೂ ನೆಮ್ಮದಿಯಿಲ್ಲ. ಕೆಲಸದಲ್ಲೂ ಉತ್ಸಾಹವಿಲ್ಲ. ದೀರ್ಘವಾದ ನಿಟ್ಟುಸಿರು ಬಿಟ್ಟು ಬಾಗಿಲು ತಳ್ಳಿದರು.

ತನ್ನ ಕಣ್ಣನ್ನು ತಾನೇ ನಂಬಲಾರದೆ ಉಜ್ಜಿಕೊಂಡು ಪುನಃ ನೋಡಿದರು. ಕುರ್ಚಿಯ ಮೇಲೆ ಭಾರತಿ ಕುಳಿತು ಮೇಜಿನಮೇಲೆ ತಲೆಯನ್ನಿಟ್ಟುಕೊಂಡಿದ್ದಳು. ಅವಳ ದೃಷ್ಟಿ ಭಾಗೀರಥಮ್ಮನ ನಗುಮುಖದ ಮೇಲೆ ನೆಲೆಸಿತ್ತು. ಕಣ್ಣಿನ ಅಂಚಿನಲ್ಲಿ ನೀರಿನ ತೊಟ್ಟು ಮಿನುಗುತ್ತಿತ್ತು. ಕೃಷ್ಣಪ್ಪನ ಎದೆ ಬಡಿದುಕೊಳ್ಳಲಾರಂಭಿಸಿತು. 'ಬಂದೆಯಾ ಭಾರತಿ' ಎಂದು ಮೃದುವಾಗಿ ಅವಳ ತಲೆಯನ್ನು ನೇವರಿಸಿ ಒಳಕ್ಕೆ ಹೋದರು.

—ಹೆಚ್. ವಿ. ಸಾವಿತ್ರಮ್ಮ

# ಬೆಡ್ ನಂಬರ್ ಏಳು

'ಓಹೋ, ನೀನು ಯಾವಾಗ ಇಲ್ಲಿಗೆ ಬಂದೆ?'

'ನೀನು ಯಾರು ? ಓ........ಇದು ನಾನು ಮೊದಲಿದ್ದ ವಾರ್ಡಲ್ಲವೆಂದು ತೋರುತ್ತದೆ.'

ನಾನು ಸುತ್ತಲೂ ತಿರುಗಿ ನೋಡಿದೆ. ಸುತ್ತಲಿನ ವಾತಾವರಣ ನನಗೆ ಹೊಸದಾಗಿ ಕಂಡಿತು. ನರ್ಸುಗಳು, ಸುತ್ತಲೂ ಇದ್ದ ರೋಗಿಗಳು ಎಲ್ಲರೂ ನನಗೆ ಹೊಸಬರು ಎಂದೆನಿಸಿತು. ಗೋಡೆಯ ಮೇಲಿದ್ದ ದೊಡ್ಡ ಗಡಿಯಾರ ಅರ್ಧ ಗಂಟೆ ಹೊಡೆಯಿತು. ನಾನು ಗಡಿಯಾರದ ಕಡೆ ನೋಡಿದೆ. ಗಂಟೆ ಎಂಟೂವರೆಯಾಗಿತ್ತು. ನಾನು ಮೊದಲಿದ್ದ ವಾರ್ಡಿನಲ್ಲಿ ನಾಲ್ಕು ಹಾಸಿಗೆಗಳಿದ್ದವು. ಇಲ್ಲಿ ಆರು ಹಾಸಿಗೆಗಳಿದ್ದವು.

'ಇದೇನು ಹೀಗೆ ಕಣ್ಣು ಬಿಟ್ಟುಕೊಂಡು ಬೆಪ್ಪುತಕ್ಕಡಿಹಾಗೆ ಸುತ್ತಲೂ ನೋಡ್ತಿದಿಯಾ ?'

ಆರನೆಯ ಬೆಡ್ ಗಹಗಹಿಸಿ ನಗುತ್ತಾ ಕೇಳಿತು.

'ಊಂ........ಹೊಸ ಜಾಗ. ಆದುದರಿಂದ ಸುತ್ತಲೂ ನೋಡಿದೆ.'

ನನ್ನ ಬಳಿ ಹೆಜ್ಜೆಯ ಸದ್ದನ್ನು ಕೇಳಿ ಸುಮ್ಮನಾದೆ. ಮೇಲ್ ನರ್ಸೊಬ್ಬ ನನ್ನ ಬಳಿ ಬಂದು ಮಂಚಕ್ಕೆ ಚೀಟಿಯೊಂದನ್ನು ತಗುಲಿ ಹಾಕಿ ಹೋದ. ನಾನು ಅವನು ತಗುಲಿ ಹಾಕಿದ ಚೀಟಿಯನ್ನು ನಿಧಾನವಾಗಿ ಓದಿದೆ.

'ಬೆಡ್ ನಂಬರ್ ಏಳು. ಓಹೋ ಇಂದಿನಿಂದ ನನಗೆ ಬೇರೆ ಹೆಸರು.'

'ಇದುವರೆವಿಗೂ ಯಾವ ಹೆಸರಿತ್ತು ?'

'ಬೆಡ್ ನಂಬರ್ ಮೂರು.'

'ನಮ್ಮ ಬಾಳು ಈ ರೋಗಿಗಳ ಸೇವೆಯಲ್ಲೇ ಆಯಿತು. ನನಗಂತೂ ಈ ಬಾಳು ಬೇಸರವಾಗಿದೆ. ಥೂ, ನೀನೇನು ಬೇಕಾದರೂ ಹೇಳು, ಇದಕ್ಕಿಂತ ಸಾವು ಉತ್ತಮ.'

ಆರನೆಯ ಬೆಡ್ ಅತ್ಯಂತ ಬೇಸರದಿಂದ ನುಡಿಯಿತು. ನಾನು ಪ್ರತ್ಯುತ್ತರ ಕೊಡಲಿಲ್ಲ. ನನ್ನ ಮೌನವನ್ನು ಕಂಡು ಅದು ಪುನಃ ಹೇಳಿತು.

'ನಿನಗೆ ಹಾಗೆನಿಸುವುದಿಲ್ಲವೇ ? ನಿನಗೆ ರೋಗಿಗಳ ಸಹವಾಸ ಬೇಸರವಾಗಿಲ್ಲವೇ ?'

'ಊಹೂಂ. ಇದರಲ್ಲಿಯೂ ಆನಂದವಿದೆ.'

ಆರನೆಯ ಬೆಡ್ಡು ಸಂತಾಪದಿಂದ ನುಡಿಯಿತು.

'ಆನಂದ ! ನೀನು ಮೂರ್ಖ. ಕಡು ಮೂರ್ಖ. ಸದಾ ಈ ರೋಗಿಗಳ ನರಳಾಟ, ಕೆಮ್ಮು, ವಾಂತಿ ಇವು ಯಾರಿಗೆ ಬೇಕಾಗಿದೆ ?. ಇವರ ಗೋಳು ಕೇಳಿ ನನ್ನ ತಲೆ ಚಿಟ್ಟು ಹಿಡಿದುಹೋಗಿದೆ. ಸತ್ವ ಹೀನ ಮುಖ, ಒಣಗಿದ ಕಂಠ, ಬಿಳುಪೇರಿದ ತುಟಿ, ಕಾಂತಿಹೀನವಾದ ಕಣ್ಣು........ಸಾವು ಬದುಕಿನ ಮಧ್ಯೆ ತೂರಾಡುವ ಈ ದೇಹಗಳನ್ನು ನೋಡಿ ನೋಡಿ ನನ್ನ ಕಣ್ಣುಗಳು ಸಿಡಿಯುತ್ತಿವೆ. ಜೀವನದಲ್ಲಿ ನಮಗೂ ಶಾಂತಿ, ಸೌಂದರ್ಯ ಬೇಡವೆ ? ಸುಖ, ಸೌಂದರ್ಯ ಕಾಣಲು ನೀನು ಹಾತೊರೆಯುವುದಿಲ್ಲವೇ ?'

'ಇಲ್ಲ ಗೆಳೆಯಾ. ಸುಖ, ಸೌಂದರ್ಯ ಕ್ಷಣಿಕ. ಕ್ಷಣಿಕವಾದುದಕ್ಕೆ ನಾನು ಬೆಲೆ ಕೊಡುವುದಿಲ್ಲ.'

'ನೀನೊಬ್ಬ ಹುಚ್ಚ. ಸುಖ, ಸೌಂದರ್ಯಕ್ಕಾಗಿ ನಾನೆಷ್ಟು ಹಂಬಲಿಸುತ್ತಿದ್ದೇನೆ ಗೊತ್ತೆ ? ಈ ರೋಗಿಗಳ ಸಹವಾಸದ ಬದಲು ಮುಗ್ಧೆಯೊಬ್ಬಳ ಸಾನ್ನಿಧ್ಯ ಸಿಕ್ಕಿದ್ದರೆ........'ಆರನೆಯ ಬೆಡ್ಡು ಕನಸು ಕಾಣುತ್ತಿರುವಂತೆ ನುಡಿಯಿತು.

'ಚೆಲುವೆಯೊಬ್ಬಳ ಮೃದು ಸ್ಪರ್ಶವನ್ನು ದಿನವೂ ಅನುಭವಿಸಬಹುದಾಗಿತ್ತು. ಅವಳು ಮುಡಿದ ಮಲ್ಲಿಗೆ ಹೂವಿನಿಂದ ನನ್ನ ದೇಹವೆಲ್ಲಾ ಪರಿಮಳಮಯವಾಗುತ್ತಿತ್ತು. ಅವಳ ಬಳೆಗಳ ನಾದ ನನಗೆ ಜೋಗುಳ ಹಾಡುತ್ತಿತ್ತು. ಅವಳು ತನ್ನ ಹಾಲುಗೆನ್ನೆಯನ್ನು ನನಗೊತ್ತಿ ನಿದ್ರಿಸಿದಾಗ ನನ್ನನ್ನು ನಾನೇ ಮರೆಯಬಹುದಿತ್ತು. ಅವಳ ಪ್ರಥಮ ರಾತ್ರಿ........ಮಧುರ ಮಿಲನದ ರಾತ್ರಿ........ನಾನು ಆ ನೂತನ ದಂಪತಿಗಳ ಪ್ರೇಮ ಸಂವಾದವನ್ನು ಕೇಳಿ ಹಿಗ್ಗಬಹುದಾಗಿತ್ತು. ಅವರ ಪ್ರೇಮ ಚೇಷ್ಟೆಯಲ್ಲಿ........'

'ಗೆಳೆಯಾ, ಎಚ್ಚರ ಮಾಡಿಕೋ. ಹೀಗೆ ಹಗಲುಗನಸು ಕಾಣಬೇಡ.'

ಆರನೆಯ ಬೆಡ್ಡಿನ ಅನ್ಯ ಮನಸ್ಕತೆ ಕಂಡು ನಾನು ಕೂಗಿದೆ.

'ನೀನು ಪಾಪಿ. ನನ್ನನ್ನೇಕೆ ಆ ಕನಸಿನಿಂದ ಕೂಗಿ ಎಬ್ಬಿಸಿ ಈ ನರಕಕ್ಕೆ ಎಳೆದು ತಂದೆ ? ಈ ರೋಗಿಗಳ ಮೂಳೆಯ ದೇಹದಿಂದ ನನ್ನ ದೇಹ ಬಡಕಲಾಯಿತು. ಇವರ ಬೆಳೆದ ಗಡ್ಡ ನನ್ನನ್ನು ಹಿಂಸಿಸುತ್ತಿದೆ. ನೀನು ಆ ಸುಂದರ ದೃಶ್ಯವನ್ನು ಕಾಣಲು ಬಯಸುವುದಿಲ್ಲವೇ?'

'ಖಂಡಿತ ಇಲ್ಲ, ನನ್ನ ಜೀವನದಲ್ಲಿ ಭೋಗಕ್ಕಿಂತಲೂ ನಾನು ತ್ಯಾಗಕ್ಕೆ ಶ್ರೇಷ್ಠ ಸ್ಥಾನ ಕೊಡುತ್ತೇನೆ.'

'ಸರಿ, ನೀನೊಬ್ಬ ಹುಚ್ಚ.'

'ಅಲ್ಲಿ ನೋಡು, ಹೊಸ ರೋಗಿಯೊಬ್ಬನನ್ನು ಇತ್ತ ಕಡೆಗೇ ಕೊಂಡು ಬರುತ್ತಿದ್ದಾರೆ.'

ಇಬ್ಬರೂ ಅತ್ತಕಡೆ ನೋಡಿದವು.

ಹೊಸ ರೋಗಿಗೆ ಸುಮಾರು ಮೂವತ್ತು ವರ್ಷಗಳಿರಬಹುದು. ರೋಗ ಅವನ ದೇಹದ ಮೇಲೆ ತನ್ನ ಧಾಳಿಯನ್ನು ನಡೆಸಿತ್ತು. ಆತನ ತಲೆಗೂದಲು ಕೆದರಿ ಕಣ್ಣುಗಳಲ್ಲಿ ಭಯ, ಕಳವಳ ತುಂಬಿದ್ದವು. ಮುಖ ಒಣಗಿ ಮುದುಡಿಹೋಗಿತ್ತು.

'ಅಯ್ಯೋ ಪಾಪ, ಈ ರೋಗ ಇನ್ನೂ ಹೊಸದಾಗಿ ಅಂಟಿರಬೇಕು. ಆದುದರಿಂದಲೇ ಮುಖದಲ್ಲಿ ಇನ್ನೂ ಜೀವಕಳೆಯಿದೆ. ಪಾಪ! ಹೆದರಿ ನಡುಗುತ್ತಿದ್ದಾನೆ. ಅವನ...........'

ಆರನೆಯ ಬೆಡ್ಡು ಉತ್ಸಾಹದಿಂದ ಕೂಗಿತು.

'ಅವನ ಪಕ್ಕದಲ್ಲಿ ಬರುತ್ತಿರುವ ಚೆಲುವೆಯನ್ನು ನೋಡು. ಬಹುಶಃ ಅವನ ಹೆಂಡತಿಯಿರಬೇಕು. ಅಬ್ಬ! ಏನು ಸೌಂದರ್ಯ! ಸೃಷ್ಟಿಕರ್ತ ತನ್ನ ಜಾಣ್ಮೆಯನ್ನೆಲ್ಲಾ ಇವಳನ್ನು ಸೃಷ್ಟಿಸಲು ಖರ್ಚು ಮಾಡಿರಬೇಕು. ಅವಳ ಕಣ್ಣುಗಳು ಆರೋಗ್ಯ, ಯೌವನವನ್ನು ಸೂಸುತ್ತಿವೆ. ಅವಳ ದುಂಡು ದೇಹದ ಸೊಬಗು ಕಣ್ಣು ಸೆಳೆಯುವಂತಿದೆ. ಇಂತಹ ಸೌಂದರ್ಯ ನೋಡಿ ಬಹಳ ದಿನಗಳಾಗಿದ್ದವು.'

ಆದರೆ ನನ್ನ ಗಮನ ರೋಗಿಯಲ್ಲಿ ನೆಟ್ಟಿತ್ತು. ಅವನು ಜೀವನದಲ್ಲಿ ತನಗೆ ದೊರೆತ ಪೆಟ್ಟನಿಂದ ಚಳಿ ಬಂದವನಂತೆ ನಡುಗುತ್ತಿದ್ದ.

'ಅವಳ ಮುಖದ ಬಣ್ಣ, ತುಟಿಯ ರಂಗು....'

ನಾನು ನಿದ್ದೆಯಿಂದ ಎಚ್ಚತ್ತವನಂತೆ ಆರನೆಯ ಬೆಡ್ಡಿನ ಕಡೆ ತಿರುಗಿದೆ. ಅದು ಮುಕ್ತ ಕಂಠದಿಂದ ಅವಳ ಚೆಲುವನ್ನು ಬಣ್ಣಿಸುತ್ತಿತ್ತು.

'ನೀನು ಯಾರು ವಿಚಾರ ಹೇಳ್ತಿದಿಯಾ ?'

'ಕುರುಡಾ, ನಿನಗೆ ಕಣ್ಣಿದ್ದೂ ವ್ಯರ್ಥ. ಎದುರಿಗೆ ನಿಂತಿರುವ ಸೌಂದರ್ಯವನ್ನೂ ನೀನು ಕಾಣಲಾರೆ. ಅವಳೇ ನೋಡು, ರೋಗಿಯ ಹಿಂದೆ ಬರುತ್ತಿದ್ದಾಳೆ........'

ಆವಳನ್ನು ನಾನು ಇದುವರೆಗೂ ಗಮನಿಸಿಯೇ ಇರಲಿಲ್ಲ. ಆರನೆಯ ಬೆಡ್ಡು ನನ್ನ ಗಮನವನ್ನು ಅವಳ ಕಡೆ ಸೆಳೆಯಲು ನಾನೂ ನೋಡಿದೆ.

ನಿಜವಾಗಿಯೂ ಅವಳು ಸುಂದರಿಯಾಗಿದ್ದಳು.

'ಅವಳ ಕಣ್ಣು ನೋಡು. ಯಾವ ವಜ್ರಕ್ಕಿಂತ ಕಡಿಮೆಯಾಗಿದೆ........'

ಅವಳ ಕಣ್ಣುಗಳು ಹೊಳೆಯುತ್ತಿದ್ದವು. ಅವಳು ಮತ್ತೊಂದೆರಡು ಹೆಜ್ಜೆ ಮುಂದೆ ಬರುತ್ತಲೂ ನಾನು ಅವಳನ್ನು ಸೂಕ್ಷ್ಮವಾಗಿ ಗಮನಿಸಿದೆ.

ಹೃದಯದಲ್ಲಿ ಹೆಪ್ಪುಗಟ್ಟಿದ್ದ ಶೋಕದಿಂದ, ತುಂಬಿಯೂ ತುಳುಕದ ದುಃಖದ ಕಾವಿನಿಂದ ಅವಳ ಕಣ್ಣುಗಳು ಪ್ರಜ್ವಲಿಸುತ್ತಿದ್ದವು. ಉಕ್ಕಿ ಬರುತ್ತಿದ್ದ ಅಳುವನ್ನು ತಡೆಯಲು ಅವಳು ತನ್ನ ಕೆಂದುಟಿಯನ್ನು ಆಗಾಗ್ಗೆ ಕಚ್ಚಿ ಮನಸ್ಸನ್ನು ಕಲ್ಲುಮಾಡುತ್ತಿದ್ದಳು. ಹೊಸ ರೋಗಿಯನ್ನು ನನ್ನ ಬಳಿಯೇ ನಿಲ್ಲಿಸಿದರು.

'ಇದೇ ನಿಮ್ಮ ಹಾಸಿಗೆ. ಮಲಗಿಕೊಳ್ಳಿ' ಎಂದು ವಾರ್ಡ್ ಬಾಯ್ ಹೇಳಿದ.

ಅವನು ಮಂಚದ ಮೇಲೆ ಕುಳಿತು ಹೆಂಡತಿಯ ಕಡೆ ನೋಡಿದ. ಅವಳು ಮಂಚದ ಪಕ್ಕದಲ್ಲಿದ್ದ ಕುರ್ಚಿಯನ್ನು ಎಳೆದುಕೊಂಡು ಆರನೆಯ ಬೆಡ್ಡಿಗೆ ಬೆನ್ನು ಮಾಡಿ ಗಂಡನ ಮುಖ ನೋಡುತ್ತಾ ಕುಳಿತಳು. ಆರನೆಯ ಬೆಡ್ಡು ಮತ್ಸರದಿಂದ ನುಡಿಯಿತು.

'ನೀನು ಪುಣ್ಯಶಾಲಿ. ಅವಳ ಮುಖವನ್ನು ಕಣ್ಣುತುಂಬ ನೋಡಬಹುದು. ಆದರೆ ನಿನ್ನಂತಹ ಅರಸಿಕನೆದುರಿಗೆ ಅವಳ ರೂಪವೆಲ್ಲ ವ್ಯರ್ಥ.'

ನನಗೆ ಅವಳ ಮುಖದಲ್ಲಿದ್ದ ಸೌಂದರ್ಯಕ್ಕಿಂತಲೂ, ನೋವಿನ ಕಡೆ ಹೆಚ್ಚು ಲಕ್ಷ್ಯವಿತ್ತು.

ಅವಳು ಅಳುವನ್ನು ನುಂಗಿ, ಮಧುರವಾಗಿ ನಕ್ಕಳು. ಅವನು ಕ್ಷೀಣವಾದ ದನಿಯಲ್ಲಿ ಹೇಳಿದ.

'ಉಮಾ, ಇನ್ನು ಸಂಸಾರದ ಗತಿಯೇನು ?'

'ನೀವು ಧೈರ್ಯವಾಗಿರಿ. ದೇವರು ಹೇಗೋ ನಡೆಯಿಸುತ್ತಾನೆ.'

'ಹಾಗಲ್ಲ ಉಮಾ, ನಾನು ಈ ನರಕದಿಂದ ಹೊರಬೀಳಬೇಕಾದರೆ ಎಷ್ಟು ವರ್ಷವಾಗುತ್ತದೋ ? ಅದುವರೆಗೂ ಅಪ್ಪನಿಗೆ ಬರುವ ಐವತ್ತು ರೂಪಾಯಿ ಪೆನ್ಷನ್ನಿನಲ್ಲಿ ಜೀವನ ಸಾಗಿಸಲು ಸಾಧ್ಯವೇ ?'

'ನಾನು ಎಲ್ಲಾದರೂ ಕೆಲಸಕ್ಕೆ ಸೇರಿಕೊಳ್ಳುತ್ತೇನೆ.'

'ಹುಡುಕಿದ ತಕ್ಷಣ ಸಿಗಬೇಕಲ್ಲ ? ಅಮ್ಮ, ಅಪ್ಪ ನನಗೆ ಕ್ಷಯವೆಂದು ತಿಳಿದರೆ ಎಷ್ಟು ಗೋಳಾಡುವರೋ........!'

'ನೀವು ಸಂಸಾರದ ವಿಷಯವಾಗಿ ಕೊರಗು ಹಚ್ಚಿಕೊಂಡು ನಿಮ್ಮ ದೇಹ ಸ್ಥಿತಿಯನ್ನು ಕೆಡಿಸಿಕೊಂಡರೆ ನನ್ನಾಣೆ.'

'ಯೋಚನೆ ಮಾಡದಿರಲು ಹೇಗೆ ಸಾಧ್ಯ ? ನಾನು ಇಲ್ಲಿಂದ ಹೊರಬೀಳುವುದು ಯಾವಾಗಲೋ !'

'ಡಾಕ್ಟರು ಹೇಳಿದ್ದು ಆಗಲೇ ಮರೆತುಹೋಯಿತೇ ? ಖಾಯಿಲೆ ಈಗತಾನೆ ಶುರುವಾಗಿದೆ. ಇನ್ನಾರು ತಿಂಗಳಿಗೆ ಪೂರ್ತಿ ವಾಸಿಯಾಗುತ್ತದೆ. ಆದರೆ ನೀವು ಧೈರ್ಯ ಬಿಡಬಾರದು ಅಂತ ಡಾಕ್ಟರು ಹೇಳಿದಾರೆ.'

'ಸರಿ. ಅವರು ಹೇಳಿದರೂ ನನಗೆ ನಂಬಿಕೆ ಬರುವುದಿಲ್ಲ.'

ತಾತ್ಸಾರವಡಗಿತ್ತು ಅವನ ದನಿಯಲ್ಲಿ.

'ಹೀಗೆ ನೀವು ಧೈರ್ಯಗೆಡಬಾರದು. ನನಗೇನೋ ಸಂಪೂರ್ಣ ಧೈರ್ಯವಿದೆ. ಒಂದಲ್ಲ ಒಂದುದಿನ ನಿಮಗೆ ಖಂಡಿತ ಗುಣವಾಗುತ್ತದೆ.'

ಆತ ಉತ್ಸಾಹದಿಂದ ಕೇಳಿದ 'ನನಗೆ ನಿಜವಾಗಿಯೂ ವಾಸಿಯಾಗುತ್ತದೆಯೇ ?'

'ಅದರಲ್ಲಿ ಸಂದೇಹವೇ ಇಲ್ಲ. ಆದರೆ ನೀವು ಭರವಸೆ ಬಿಡಬಾರದು. ನಿಮ್ಮ ಮನಸ್ಸಿನ ಧೈರ್ಯದಿಂದಲೇ ರೋಗ ದೂರವಾಗಬೇಕು.'

ಆತನ ಮುಖದಲ್ಲಿ ನಸುನಗೆ ತಲೆದೋರಿತು.

'ನಿಮ್ಮನ್ನು ನೋಡಿದರೆ ನನಗೇ ಈ ರೋಗ ಬರಬಾರದಾಗಿತ್ತೆ ಎನಿಸುತ್ತದೆ.'

ಉಮಾ ಚೇಷ್ಟೆಯಿಂದ ನುಡಿದಳು.

'ಛೀ ! ಕೆಟ್ಟ ಮಾತನ್ನಾಡಬೇಡ.'

'ಊಹೂಂ. ಸುಖವಾಗಿ ಮಲಗಿದ ಕಡೆ ರಾಜೋಪಚಾರವಾಗುತ್ತದೆ. ನಾಳೆ ಬರುವಾಗ ಮೊಟ್ಟೆ, ಹಣ್ಣುಗಳನ್ನು ತರುತ್ತೇನೆ. ನಾನಿನ್ನು ಬರಲೇ ?'

'ಬಸ್ಸಿನಲ್ಲಿ ಹೋಗು.'

'ಬಸ್ಸಾದರೆ ಪುನಃ ನಾಲ್ಕಾಣೆ ಖರ್ಚು.'

'ಈ ಬಿಸಿಲಿನಲ್ಲಿ ನಡೆಯಬೇಡ' ಗಂಡ ಹೇಳಿದ.

ಉಮಾ ಅನುಮಾನಿಸುತ್ತಾ ಒಪ್ಪಿಕೊಂಡಳು.

'ನಡಿ ನಾನೂ. ಬಾಗಿಲಿನವರೆಗೆ ಬರುತ್ತೇನೆ.'

'ಬೇಡಿ, ನೀವು ಮಲಗಿಕೊಳ್ಳಿ. ನಾನು ನಾಳೆ ಸಂಜೆ ಬರುತ್ತೇನೆ.'

ಉಮಾ ಎದ್ದು ನಗುತ್ತಾ 'ಬರ್‍ತೀನಿ' ಎಂದಳು. ಅವಳು ಕಣ್ಮರೆಯಾದೊಡನೆ ಆತ ಮಲಗಿದ. ಆರನೆಯ ಬೆಡ್ಡಿನಲ್ಲಿ ಮಲಗಿದ್ದವನು ಕುತೂಹಲದಿಂದ ಪ್ರಶ್ನಿಸ ತೊಡಗಿದ.

'ನಿಮ್ಮ ಹೆಸರೇನು ?'

'ವಿಶ್ವನಾಥರಾವ್.'

'ಖಾಯಿಲೆ ಶುರುವಾಗಿ ಎಷ್ಟುದಿನವಾಯಿತು. ?'

'ಈಗತಾನೆ ಶುರುವಾಗಿದೆ. ವಾಸಿ ಮಾಡುತ್ತೇನೆ ಎಂದು ಡಾಕ್ಟರು ಹೇಳಿ ದಾರೆ. ನೀವು ಇಲ್ಲಿಗೆ ಬಂದು ಎಷ್ಟು ದಿನವಾಯಿತು ?'

ಆತ ಕರ್ಕಶವಾಗಿ ನಕ್ಕ.

'ನಾನೇ ? ನಾನು ಇಲ್ಲಿಗೆ ಬಂದು ಮೂರು ವರ್ಷಗಳಾದವು. ನನಗೀಗ ಆಸ್ಪತ್ರೆಯೇ ಮನೆಯಾಗಿ ಹೋಗಿದೆ. ನನ್ನ ಎದೆಯಲ್ಲಿನ ನಾಲ್ಕು ಮೂಳೆಗಳನ್ನು ಕತ್ತರಿಸಿದ್ದಾರೆ. ಇನ್ನೂ ಎರಡು ಮೂಳೆಗಳನ್ನು ಕತ್ತರಿಸಬೇಕಂತೆ........'

ವಿಶ್ವನಾಥ ಕಂಪಿಸಿದ. ಅವನ ಕಂಪನವನ್ನು ಗಮನಿಸಿ ಆತ,

'ಕ್ಷಮಿಸಿ. ನಿಮ್ಮನ್ನು ಹೆದರಿಸಿಬಿಟ್ಟೆ. ಎಲ್ಲರೂ ನನ್ನಂತೆ ದುರದೃಷ್ಟಶಾಲಿ ಗಳಲ್ಲ. ನೀವು ಪುಣ್ಯ ಮಾಡಿದ್ದರೆ ಒಂದಲ್ಲ ಒಂದುದಿನ ಇಲ್ಲಿಂದ ಹೊರಬೀಳಬಹುದು. ಆಕೆ—ನಿಮ್ಮ ಹೆಂಡತಿಯೇನು ?'

'ಹೌದು.'

'ಪಾಪ ! ತಾಯಿ, ತಂದೆ ಇದಾರೆಯೇ ?'

'ಇದ್ದಾರೆ'

'ಮಕ್ಕಳು ?'

'ನಾಲ್ಕು ವರ್ಷದ ಒಬ್ಬ ಮಗನಿದ್ದಾನೆ' ಎನ್ನುತ್ತಾ ವಿಶ್ವನಾಥ ಮಲಗಿದ.

'ಗೆಳೆಯಾ, ಯಾಕೆ ಮಾತನಾಡುವುದಿಲ್ಲ' ಆರನೆಯ ಬೆಡ್ಡು ಕೂಗಿತು.

'ಏನು ಮಾತನಾಡಲಿ ?'

'ಅವಳು ಹೋದಮೇಲೆ ವಾರ್ಡು ಮಂಕಾಯಿತಲ್ಲವೇ ?'

'ನೀನು ಬರೀ ಅವಳ ಸೌಂದರ್ಯ ಕಾಣುವೆ. ಆ ಸೌಂದರ್ಯದಲ್ಲಿನ ನೋವನ್ನೂ ಕಾಣಲೊಲ್ಲೆಯೇಕೆ ?'

'ನೋವು ನನಗೆ ಬೇಡ. ದಿನಾ ನಾವು ನೋಡುವುದು ನೋವು ನರಳಾಟ ವಲ್ಲವೆ ? ನಾನು ಅಂತಹ ಚೆಲುವೆಯ ಸಾನ್ನಿಧ್ಯ ಬಯಸುತ್ತೇನೆ. ನೀನು ?'

'ರೋಗಿಗಳಿಗೇ ನಮ್ಮ ಅಗತ್ಯ ಹೆಚ್ಚಲ್ಲವೇ ?'

'ನಿನ್ನ ಕೈಲಿ ಮಾತನಾಡಿ ಪ್ರಯೋಜನವೇನು !' ಎನ್ನುತ್ತಾ ಆರನೆಯ ಬೆಡ್ಡು ಸುಮ್ಮನಾಯಿತು.

ಮೂರನೆಯ ದಿನ ಸಂಜೆ ಉಮಾ ಸಂತಸದ ನಗೆ ಬೀರುತ್ತಾ ಒಳಗೆ ಬಂದಳು.

ಆರನೆಯ ಬೆಡ್ಡು ಹರ್ಷದಿಂದ ಕೂಗಿತು.

'ಅಗೋ ಚೆಲುವಿನ ರಾಣಿ ಬಂದಳು.'

ವಿಶ್ವನಾಥ ಉತ್ಸಾಹದಿಂದ ಎದ್ದುನಿಂತು ಹೆಂಡತಿಯನ್ನೂ, ಮಗನನ್ನೂ ಸ್ವಾಗತಿಸಿದ.

'ರಾಜನ್ನೂ ಕರ್ಕೊಂಡು ಬಂದಿದೀಯಾ ?'

'ನಾನೂ ಅಣ್ಣನ್ನ ನೋಡ್ಬೇಕು ಬರ್ತೀನಿ ಎಂದು ಹಟಮಾಡಿದ.'

ತಂದೆಯ ಮುಖ ಕಂಡಕೂಡಲೇ ರಾಜ ತಾಯಿಯ ಕೈ ಬಿಟ್ಟು ಓಡಿಬಂದು ತಂದೆಯನ್ನಪ್ಪಿದ. ವಿಶ್ವನಾಥ ಮಗನನ್ನು ಎದೆಗೊತ್ತಿಕೊಂಡ.

'ಇವತ್ತು ನಿಮ್ಮ ಮುಖ ಎಷ್ಟೋ ಗೆಲುವಾಗಿದೆ.'

'ಮನೆಯ ಗತಿಯೇನು, ಉಮಾ ?'

'ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ.'

'ಹೀಗೆ ಸ್ವಲ್ಪ ಸ್ವಲ್ಪವಾಗಿ ಸಾಯುವುದಕ್ಕಿಂತ ಒಂದೇಬಾರಿಗೆ ಸಾಯುವುದು ಮೇಲು.'

'ಸಾವು' ಎಂಬ ಪದ ಕೇಳಿ ಉಮಾ ಬೆಚ್ಚಿದಳು.

'ಎಂತಹ ಮಾತನ್ನಾಡುವಿರಿ ? ನಮ್ಮ ಸಂಸಾರದ ಬೆಳಕು ನೀವು. ಹೀಗೆ ಮಾತನಾಡುವುದು ಸರಿಯೇ ?'

ವಿಶ್ವನಾಥನ ಮುಖದಲ್ಲಿ ಪಶ್ಚಾತ್ತಾಪ ಕಾಣಿಸಿತು. 'ತಪ್ಪಾಯಿತು, ಉಮಾ. ನಾನು...............'

ಮಾತಿನ ನಡುವೆಯೇ ಅವನು ಕೆಮ್ಮತೊಡಗಿದ. ಕೆಮ್ಮಿನಿಂದ ಅವನ ದೇಹ ಮಂಚದೊಡನೆ ಕುಲುಕಾಡಿತು. ವಿಶ್ವನಾಥ ತನ್ನೆದೆಗೆ ತಲೆಯಾನಿಸಿ ಕುಳಿತಿದ್ದ ಮಗ

ನನ್ನು ದೂರ ತಳ್ಳಿ ಟವಲಿನಿಂದ ಬಾಯಿ ಮುಚ್ಚಿಕೊಂಡ. ಕೆಮ್ಮಿನ ಪರಿಣಾಮವಾಗಿ ಕಣ್ಣಿನಲ್ಲಿ ನೀರು ಹರಿಯತೊಡಗಿತು. ಉಸಿರು ತಡೆದು ತಡೆದು ಬರತೊಡಗಿತು. ಉಮಾ ಗಂಡನ ಸಂಕಟವನ್ನು ತಾನೇ ಅನುಭವಿಸುತ್ತಿರುವಂತೆ ತೋರಿತು.

'ಇನ್ನು ಮೇಲೆ ರಾಜೂನ ಇಲ್ಲಿಗೆ ಕರೆದುಕೊಂಡು ಬರಬೇಡ. ಈ ರೋಗ ಬಹಳ ಅಪಾಯವಾದುದು. ಮಗುವಿಗೆ ನರಕದ ದರ್ಶನವೇಕೆ ?'

'ಊಂ ........ನಾನೂ ಬರ್‍ತೀನಿ' ರಾಜು ರಾಗ ತೆಗೆದ.

'ಹಾಗೇ ಆಗಲಿ' ಎಂದು ಮಗನ ಸಮಾಧಾನಕ್ಕಾಗಿ ನುಡಿದ ವಿಶ್ವನಾಥ.

* * * * * *

'ಇದೇಕೆ ಅವಳಿನ್ನೂ ಬರಲಿಲ್ಲ ?'

ಆರನೆಯ ಬೆಡ್ಡು ತವಕದಿಂದ ಕೇಳಿತು.

'ಬಸ್ಸು ಇನ್ನೂ ಬಂದಿಲ್ಲವೇನೊ ?' ವಿಶ್ವನಾಥ ಎದ್ದು ಕುಳಿತು ಪಕ್ಕದವನಿಗೆ ಹೇಳಿದ.

'ಅವಳು ಬಂದರೆ ಇರಲು ಹೇಳಿ. ನಾನು ಈಗಲೇ ಬಂದುಬಿಡುತ್ತೇನೆ' ಎನ್ನುತ್ತಾ ಬಾತ್‌ರೂಮಿನ ಕಡೆ ಹೊರಟ.

ಅವನು ಹೋದ ಎರಡು ನಿಮಿಷಗಳಲ್ಲಿ ಉಮಾ ಬಂದಳು. ಆಕೆ ಬಂದು ಗಂಡನನ್ನು ಮಂಚದಮೇಲೆ ಕಾಣದೆ ಸುತ್ತಲೂ ನೋಡಿದಳು.

'ಇನ್ನೇನು ಬರುತ್ತಾರೆ' ಪಕ್ಕದ ರೋಗಿ ಹೇಳಿದ. ಉಮಾ ಕುರ್ಚಿಯಮೇಲೆ ಕುಳಿತು ಅಂಗೈಗೆ ಕೆನ್ನೆಯಾನಿಸಿ ತಲೆ ತಗ್ಗಿಸಿದಳು. ಅವಳ ಮುಖದಲ್ಲಿ ಚಿಂತೆ ಮನೆ ಮಾಡಿತ್ತು. ಎರಡು ಹನಿ ನೀರು ಅವಳ ಸೀರೆಯಮೇಲೆ ಬಿತ್ತು.

'ಉಮಾ ಅಳುತ್ತಿದ್ದಾಳೆ' ನಾನು ಆರನೆಯ ಬೆಡ್ಡಿಗೆ ಕೂಗಿ ಹೇಳಿದೆ.

'ಅವಳ ಮುಖ ನನಗೆ ಕಾಣುವುದಿಲ್ಲ. ಹೆಂಗಸರು ಅಳುವಾಗ ಸುಂದರವಾಗಿ ಕಾಣುವರು ಎಂದು ಕೇಳಿದ್ದೇನೆ. ಉಮಾ ಹೇಗೆ ಕಾಣಿಸುತ್ತಾಳೆ ?'

'ನನಗೆ ದುಃಖ, ನೋವಿನ ಹೊರತು ಬೇರೇನೂ ಕಾಣುವುದಿಲ್ಲ. ದುಃಖವಿದ್ದೆಡೆ ಸೌಂದರ್ಯ ಕಾಣಲು ಸಾಧ್ಯವೇ, ಗೆಳೆಯ ?'

ನಾನು ಅನುಕಂಪದಿಂದ ನುಡಿದೆ.

'ನೀನೊಬ್ಬ ಕುರುಡ' ಅದು ಕಟುವಾಗಿ ಉತ್ತರಿಸಿತು.

ನಾನು ಅವಳ ಮುಖವನ್ನೇ ನೋಡುತ್ತಿದ್ದೆ. ಇದೇನು ? ಇದ್ದಕ್ಕಿದ್ದಂತೆಯೇ ಉಮೆಯ ಮುಖದ ಮೇಲೆ ಸಿಹಿ ನಗೆ ಪಸರಿಸಲು ಕಾರಣವೇನು ? ಅವಳ ಕಣ್ಣು

ಗಳು ಅಗಲವಾಗಿ ಮಿಂಚಿದವು. ನಾನು ಅವಳ ನೋಟವನ್ನು ಅನುಸರಿಸಿ ನೋಡಿದೆ. ವಿಶ್ವನಾಥ ಬರುತ್ತಿದ್ದ.

ಅಬ್ಬ ! ಒಂದು ಕ್ಷಣದಲ್ಲಿ ಎಂತಹ ಬದಲಾವಣೆ !

ವಿಶ್ವನಾಥ ಹಾಸಿಗೆಯಮೇಲೆ ಕುಳಿತ.

'ಇದೇನು ಉಮಾ, ಈ ದಿನ ನೀನು ಬಹಳ ಸಂತೋಷವಾಗಿರುವ ಹಾಗಿದೆ?'

ಅವನ ಅಜ್ಞಾನಕ್ಕೆ ನಾನು ವ್ಯಥೆ ಪಟ್ಟೆ. ಒಂದು ಕ್ಷಣ ಹಿಂದೆ ಅವಳ ಮೂಕ ರೋದನಕ್ಕೆ ನಾನು ಸಾಕ್ಷಿಯಾಗಿದ್ದೆ. ಗಂಡನಿಗಾಗಿ ಒಂದು ಗಳಿಗೆಯಲ್ಲಿ ನಗುವಿನ ಮುಖವಾಡ ಧರಿಸಬಲ್ಲ ಈ ಹೆಂಗಸಿನ ಚಾತುರ್ಯಕ್ಕೆ ನಾನು ಬೆರಗಾದೆ.

'ನಿಮಗೆ ಮೊದಲಿಗಿಂತಲೂ ವಾಸಿ ಎಂದು ಡಾಕ್ಟರು ಹೇಳಿದರು. ತೂಕ ಈಗ ಹೆಚ್ಚಾಗಿದೆಯಂತೆ. ಮುಖವೂ ಮೊದಲಿನಷ್ಟು ಬಿಳಿಚಿಕೊಂಡಿಲ್ಲ.'

'ನಿಜವಾಗಿಯೂ ?'

'ಹೌದು' ಎಂದಳು ಉಮಾ.

ಸ್ವಲ್ಪ ಹೊತ್ತಿನಲ್ಲಿ ಏನನ್ನೋ ಜ್ಞಾಪಿಸಿಕೊಂಡವಳಂತೆ ನುಡಿದಳು.

'ನನಗೆ ಕೆಲಸ ಸಿಕ್ಕಿದೆ.'

'ನೀನು ದುಡಿದು ನನ್ನನ್ನು ಸಾಕುವ ಹಾಗಾಯಿತು.'

'ನೀವು ಹಾಗೆ ಮಾತನಾಡಬೇಡಿ. ಇದುವರೆವಿಗೂ ನಾನು ಹಾಯಾಗಿ ಮನೆ ಯಲ್ಲಿರಲಿಲ್ಲವೇ ? ನಿಮಗೆ ಕೈಲಾಗದ ಒಂದೆರಡು ದಿನ ನಾನು ದುಡಿದರೆ ತಪ್ಪೇನು?'

'ಅಮ್ಮ, ಅಣ್ಣ ಏನೆಂದರು ?'

'ಏನೂ ಅನ್ನಲಿಲ್ಲ. ಸದ್ಯಕ್ಕೆ ಅವರ ಪೆನ್ಷನ್ನಿನಲ್ಲಿ ಸಂಸಾರ ಸಾಗುತ್ತಿದೆ. ನನ್ನ ಮೂವತ್ತು ರೂಪಾಯಿ ಸಂಬಳವನ್ನು ನಿಮ್ಮ ಹಣ್ಣು, ಮೊಟ್ಟೆ, ಟಾನಿಕ್ಕಿಗಾಗಿ ಉಪ ಯೋಗಿಸುತ್ತೇನೆ. ನೀವು ಇಲ್ಲಿಂದ ಬಂದನಂತರ ಬೇಕಾದರೆ ನನ್ನ ರಾಣಿಯಂತೆ ಒಂದೆಡೆ ಕೂರಿಸಿಬಿಡಿ.'

ಉಮಾ ಕಿಲಕಿಲನೆ ನಕ್ಕಳು. ವಿಶ್ವನಾಥನೂ ಪ್ರಸನ್ನನಾದ.

* * * * * *

'ನರ್ಸುಗಳಿಗೆ ಹೇಳಾಯಿತೇ ?' ಉಮಾ ಕೇಳಿದಳು.

'ಹೂಂ ಹೇಳಾಯಿತು. ಡಾಕ್ಟರು ಬಂದರು. ಅವರು........' ನಾವಿಬ್ಬರೂ ಡಾಕ್ಟರ ಮಾತನ್ನು ಆಲಿಸಿದೆವು. ಡಾಕ್ಟರು ಉಮೆಯ ಕಡೆ ತಿರುಗಿ ಹೇಳಿದರು.

'ತಾಯಿ, ಇದರಲ್ಲಿ ನನ್ನ ಕೈವಾಡವೇನೂ ಇಲ್ಲ. ನಿನ್ನ ಧೈರ್ಯ, ಭರವಸೆಯೇ ನಿನ್ನ ಗಂಡನನ್ನು ಕಾಪಾಡಿದವು.' ಎನ್ನುತ್ತಾ ವಿಶ್ವನಾಥನ ಕಡೆ ತಿರುಗಿ,

'ವಾರಕ್ಕೊಂದು ಸಲ ಬಂದು "ಸ್ಕ್ರೀನ್" ಮಾಡಿಸಿಕೊಂಡು ಹೋಗಿ' ಎಂದರು.

ವಿಶ್ವನಾಥ ಉಮಾ ಡಾಕ್ಟರಿಗೆ ಕೈ ಮುಗಿದು ಹೊರಟುಹೋದರು.

'ಉಮೆಯ ಮುಖದಲ್ಲಿದ್ದ ಆನಂದಕ್ಕೆ ನೀನು ಬೆಲೆ ಕಟ್ಟಬಲ್ಲೆಯಾ ?'

ನಾನು ಕೇಳಿದೆ.

'ಸಾಧ್ಯವಿಲ್ಲ. ಈಗ ಅವಳಲ್ಲಿ ಮೊದಲಿನ ಸೌಂದರ್ಯವೂ ಇಲ್ಲ. ಕಾರಣ ವೇನು ?'

'ದುಃಖಾಗ್ನಿಗೆ ಸಿಕ್ಕಿ ಅವಳ ಮೊದಲಿನ ಸೌಂದರ್ಯ ಸುಟ್ಟುಹೋಗಿದೆ ಗೆಳೆಯಾ. ಮೊದಲನೆಯ ದಿನ ಅವಳ ಕೊರಳಿನಲ್ಲಿ ಒಂದೆಳೆ ಚಿನ್ನದ ಸರ ನೋಡಿದ್ದೆ ಈಚೀಚೆಗೆ ಆ ಸರ ಅವಳ ಕತ್ತಿನಲ್ಲಿ ಕಾಣಿಸುತ್ತಿರಲಿಲ್ಲ.'

'ಮಾರಿಕೊಂಡಳೋ ಏನೋ. ಅವಳ ಮುಖ ನೋಡಿದರೆ ಹೆದರಿಕೆಯಾಗು ವಂತಿದೆ. ಅವಳ ಕಣ್ಣುಗಳು ಕಾಂತಿಹೀನವಾಗಿವೆ. ತುಂಬಿದ ದೇಹ ಬಡಕಲಾಗಿದೆ. ಅವಳ ಸೌಂದರ್ಯ........'

'ಹೌದು. ನಶಿಸಿಹೋಗಿದೆ.'

'ಮೊದಲನೆಯ ದಿನ ಅವಳ ಚೆಲುವು ನೋಡಿ ನಾನು ಎಷ್ಟು ಹಿಗ್ಗಿದ್ದೆ ?'

'ಎರಡು ವರ್ಷ ಸತತವಾಗಿ ಗಂಡನ ಸೇವೆ ಮಾಡಿದುದನ್ನು ಮರೆತೆಯಾ ? ಅವನ ಆರೋಗ್ಯಕ್ಕಾಗಿ, ತನ್ನ ಸೌಭಾಗ್ಯಕ್ಕಾಗಿ ಈಕೆ ತನ್ನ ಸೌಂದರ್ಯ, ಸಂತೋಷ, ಆರೋಗ್ಯ ಎಲ್ಲವನ್ನೂ ಬಲಿಗೊಟ್ಟಿದ್ದಾಳೆ. ಎಂತಹ ತ್ಯಾಗ !'

* * * * * *

ನಾನು ಹೆಂಗಸರ ವಾರ್ಡಿಗೆ ಬಂದುದು ಇದೇ ಮೊದಲನೆಯ ಬಾರಿ. ವಾರ್ಡಿಗೆ ಬಂದ ಕೂಡಲೇ ನಾನು ಎಲ್ಲರ ಪರಿಚಯವನ್ನೂ ಮಾಡಿಕೊಂಡೆ.

'ನಾನು ಹೆಂಗಸರ ವಾರ್ಡಿಗೆ ಬಂದೇ ಇರಲಿಲ್ಲ. ನನ್ನನ್ನು ಈಗ ಯಾಕೆ ತಂದರೋ !' ಎನ್ನುತ್ತಾ ನಾನು ನರ್ಸ್ ತೂಗಿಹಾಕಿದ ಚೀಟಿಯನ್ನು ನೋಡಿದೆ.

'ನಿನ್ನ ನಂಬರ್ ಎಷ್ಟು ?' ಎಂಟನೆಯ ಬೆಡ್ಡು ಕೇಳಿತು.

'ಬೆಡ್ ನಂಬರ್ ಏಳು. ನನ್ನ ಇಲ್ಲಿಗೇಕೆ ತಂದರು ?'

'ಯಾಕೆ ತಂದರು ಎಂದರೆ—ಹೊಸ ರೋಗಿ ಬಂದಿರಬೇಕು.'

'ಪಾಪ! ಇನ್ನೊಂದು ಜೀವಿ ಈ ನರಕ ಪ್ರವೇಶಿಸುವುದನ್ನು ನೋಡಿದರೆ ವ್ಯಥೆಯಾಗುತ್ತದೆ.'

'ಶ್, ಹೊಸ ರೋಗಿ ಬರುತ್ತಿದ್ದಾಳೆ.'

ನಾನು ಕುತೂಹಲದಿಂದ ನೋಡಿದೆ.

ಉಮಾ !

ನಾನು ಚಕಿತನಾದೆ. ಅವಳ ಸೌಂದರ್ಯ ಮಾಯವಾಗಿತ್ತು. ಅವಳ ಕಣ್ಣು ಗಳು ಗುಳಿ ಬಿದ್ದಿದ್ದವು. ಕೆನ್ನೆಯ ಮೂಳೆ ಹಾಯ್ದುಕೊಂಡಿತ್ತು. ಆಕೆ ಚರ್ಮ, ಎಲುಬಿನ ಗೂಡಾಗಿದ್ದಳು.

ನಾನು ಉದ್ವೇಗದಿಂದ 'ಉಮಾ, ಉಮಾ' ಎಂದು ಚೀರಿದೆ. ಉಮಾ ತನ್ನೊಡನೆ ಬರುತ್ತಿದ್ದ ವ್ಯಕ್ತಿಗೆ,

'ನೀವು ಹೋಗಿ, ಆಫೀಸಿಗೆ ಹೊತ್ತಾಗುತ್ತದೆ' ಎಂದಳು.

ವಿಶ್ವನಾಥ! ನನಗೆ ಅವನ ಗುರುತೇ ಸಿಕ್ಕಿರಲಿಲ್ಲ. ಆರು ತಿಂಗಳಲ್ಲಿ ವಿಶ್ವನಾಥ ಎಷ್ಟು ಬದಲಾಯಿಸಿದ್ದಾನೆ! ಆ ಮೂಳೆ ದೇಹವೆಲ್ಲಿ! ಈ ಕೊಬ್ಬಿದ ಶರೀರವೆಲ್ಲಿ? ವಿಶ್ವನಾಥ ಕೊಬ್ಬಿದ ಗೂಳಿಯಂತಿದ್ದ. ರಕ್ತ ಮುಖದಿಂದ ಚಿಮ್ಮುತ್ತಿತ್ತು.

'ಹಾಗಾದರೆ ನಾನು ಹೋಗಲೇ ?'

'ಹೂಂ, ಮಗೂನ ಸರಿಯಾಗಿ ನೊಡಿಕೊಳ್ಳಿ.'

ವಿಶ್ವನಾಥ ಹೊರಟುಹೋದ. ಉಮೆಯ ದುಸ್ಥಿತಿಯನ್ನು ನೆನೆದು ನಾನು ದುಃಖಿಸಿದೆ.

* * * * *

ಒಂದು ದಿನ ಸಂಜೆ ಬಸ್ಸು ಬರುವ ಸಮಯವಾಗುತ್ತಲೇ ಉಮಾ ಎದ್ದು ಕುಳಿತು ತಲೆ ಬಾಚಿಕೊಂಡಳು.

'ಎಲ್ಲಿಗೆ ಹೋಗ್ತೀರಾ ?' ಎಂಟನೆಯ ಬೆಡ್ಡಿನ ರೋಗಿ ಪ್ರಶ್ನಿಸಿದಳು.

'ಬೇಜಾರಾಗಿದೆ. ವರಾಂಡದಲ್ಲಿ ನಿಲ್ಲುತ್ತೇನೆ.'

'ಗಂಡ ಬರುವ ಸಮಯವಾದರೆ ಅವಳ ಮುಖ ಹೇಗೆ ಅರಳುತ್ತದೆ' ಎಂಟನೆಯ ಬೆಡ್ಡು ಹಾಸ್ಯಮಾಡಿ ನಕ್ಕಿತು.

'ಅವನು ಈಚೀಚೀಗೆ ಸರಿಯಾಗಿ ಬರುತ್ತಿಲ್ಲ.'

ಬಸ್ಸಿನ ಹಾರನ್ನಿನ ಸದ್ದು ಕೇಳಿಸಿತು.

'ಓ ಬಸ್ಸು ಬಂತು. ಅವಳ ಗಂಡ ಬಂದಿರಬಹುದಲ್ಲವೇ ?'

'ಆದರೂ ಅವರು ಒಳಗೇಕೆ ಬರಲಿಲ್ಲ ?'

'ಮರಗಳ ಕೆಳಗೇ ಕುಳಿತು ಮಾತನಾಡುತ್ತಿರಬಹುದು.' ಕಾಲು ಗಂಟೆಯ ನಂತರ ಎಂಟನೆಯ ಬೆಡ್ಡು ಕೂಗಿತು.

'ಅವಳು ಬಂದಳು !'

'ಯಾರು ? '

'ನಿನ್ನ ರೋಗಿ-'

'ಉಮಾನೇ ? ಅವಳ ಗಂಡ ಎಲ್ಲಿ ? ಒಬ್ಬಳೇ ಬರುತ್ತಿದ್ದಾಳೆ.'

'ಹೌದು. ಮುಖ ತುಂಬಾ ಪೆಚ್ಚಾಗಿದೆ.'

ಉಮಾ ಒಬ್ಬಳೇ ಬಂದುದನ್ನು ನೋಡಿ ಪಕ್ಕದಾಕೆ ಪ್ರಶ್ನಿಸಿದಳು.

'ಈ ದಿನವೂ ನಿಮ್ಮ ಯಜಮಾನರು ಬರಲಿಲ್ಲವೇ ?'

'ಇಲ್ಲಮ್ಮ, ಈಚೀಚೆಗೆ ಅವರಿಗೆ ಆಫೀಸಿನಲ್ಲಿ ತುಂಬಾ ಕೆಲಸವಂತೆ. ಆದುದರಿಂದ ಬರುವುದಕ್ಕಾಗುವುದಿಲ್ಲ ಎಂದು ಹೇಳಿ ಕಳಿಸಿದ್ದಾರೆ.'

ಇಷ್ಟು ನುಡಿದವಳೇ ಉಮಾ ಮುಸುಕು ಹಾಗಿ ಮಲಗಿದಳು. ಅವಳ ಕಣ್ಣಿನಿಂದ ನೀರು ಹರಿಯ ತೊಡಗಿತು.

'ಉಮಾ ಅಳುತ್ತಿದ್ದಾಳೆ' ನಾನು ಕೂಗಿ ಹೇಳಿದೆ.

'ಯಾಕೆ ?'

'ಅವಳಿಗೆ ತುಂಬಾ ದುಃಖವಾಗಿದೆ. ಈಚೀಚೆಗೆ ಅವಳ ಗಂಡ ತುಂಬಾ ಉದಾಸೀನನಾಗುತ್ತಿದ್ದಾನೆ. ತನಗೆ ತಾನೆ ಮಾತನಾಡಿಕೊಂಡು ಕಂಬನಿಗರೆಯುತ್ತಿದ್ದಾಳೆ.'

'ಪಾಪ ! ಬಡಪಾಯಿ. ಹಾಗಾದರೆ ಸ್ನೇಹಿತೆ ಬಂದು ಹೇಳಿದುದು ಸುಳ್ಳೇ ?'

'ಸುಳ್ಳು. ತನ್ನ ಗಂಡನ ಔದಾಸೀನ್ಯವನ್ನು ನೆರೆಯುವಳಿಂದ ಮುಚ್ಚಲು ಹಾಗೆ ಹೇಳಿಕೊಂಡಳು. ನೋಡು, ಅವಳ ಕಣ್ಣೀರಿನಿಂದ ನನ್ನ ದಿಂಬೆಲ್ಲಾ ಒದ್ದೆಯಾಗುತ್ತಿದೆ.'

'ರೋಗಗ್ರಸ್ತ ಹೆಂಡತಿಯಲ್ಲಿ ಅವನಿಗೆ ಆಸಕ್ತಿಯಿಲ್ಲವೇನೋ ?'

'ಸಾಕು ಸುಮ್ಮನಿರು. ಇವಳಿಗೂ ಹೃದಯವಿಲ್ಲವೆ ? ಅವನಿಗಾಗಿ ಎಲ್ಲವನ್ನೂ ತ್ಯಾಗಮಾಡಿದಳು. ಅವನಿಗೆ ಆ ಕೃತಜ್ಞತೆಯಾದರೂ ಬೇಡವೇ ? ಆಫೀಸು ಕೆಲಸ ಎಲ್ಲಾ ಬರೀ ನೆಪ. ತನಗೆ ಉಪಯೋಗವಿಲ್ಲದ ಹೆಂಡತಿಯಲ್ಲಿ ಅವನಿಗೆ ಶ್ರದ್ಧೆಯಿಲ್ಲ.'

'ಅವನು ಇಲ್ಲಿಗೆ ಬಂದು ಎಷ್ಟು ದಿನವಾಯಿತು ?'

'ಇವಳು ಇಲ್ಲಿಗೆ ಸೇರಿದ ಹೊಸದರಲ್ಲಿ ದಿನವೂ ಬರುತ್ತಿದ್ದ. ಆ ಮೇಲೆ ಮೂರು ದಿನಕ್ಕೊಂದು ಬಾರಿ ಬರಲಾರಂಭಿಸಿದ. ಅದು ವಾರಕ್ಕೊಂದು ಬಾರಿಗಿಳಿದು

ಈಗ ಹದಿನೈದು ದಿನವಾದರೂ ಗಂಡನ ಮುಖವನ್ನು ನೋಡಿಲ್ಲ- ರೋಗಿಗೆ ಔಷಧಿಗಿಂತಲೂ ಪ್ರೀತಿ, ವಿಶ್ವಾಸ ಬೇಕು.'

'ಅವನು ಕಟುಕ.'

'ಇವಳು ಇಲ್ಲಿಗೆ ಬಂದು ಒಂದೂವರೆ ವರ್ಷವಾಯಿತು. ಒಂದು ದಿನ ತನ್ನ ಮಗುವನ್ನು ನೋಡಿಲ್ಲ.'

'ಕಾರಣ ?'

'ಗಂಡ ಆ ಮಗುವನ್ನು ಇಲ್ಲಿಗೆ ಕರೆದು ತರುವುದಿಲ್ಲ.'

'ಹಾಗಾದರೆ ಇವಳ ಗತಿ?' ಎಂಟನೆಯ ಬೆಡ್ಡು ಕಳವಳದಿಂದ ಕೇಳಿತು.

' ಗಂಡನ ಔದಾಸೀನ್ಯದ ಅರಿವಾಗಿದೆ. ನಿನ್ನೆ ಮುಸುಕಿನಲ್ಲಿ ಅಳುತ್ತಾ ಹೇಳಿಕೊಳ್ಳುತ್ತಿದ್ದಳು.' "ಭಗವಂತಾ, ನಾನವರಿಗೆ ಬೇಡವಾದ ಮೇಲೆ ನನಗೆ ಬದುಕಲಾಶೆಯಿಲ್ಲ" ಎಂದು.

'ಗಂಡನ ಔದಾಸೀನ್ಯ ತಿಳಿದಿದ್ದರೂ ಪ್ರತಿದಿನವೂ ಬಸ್ಸು ಬರುವವೇಳೆಗೆ ಇವಳು ಅಲಂಕರಿಸಿಕೊಂಡು ಹೊರಗೆ ನಿಲ್ಲಲು ಕಾರಣವೇನು?'

'ಅವಳಿಗಿನ್ನೂ ಆಸೆಯಿದೆ. ಒಂದಲ್ಲ ಒಂದು ದಿನ ಗಂಡ ಬಂದಾನು ಎಂಬ ಹಂಬಲವಿನ್ನೂ ಅವಳ ಹೃದಯದಿಂದ ದೂರವಾಗಿಲ್ಲ. ಈ ಹಂಬಲಿನಿಂದಾಗಿ ಅವಳ ಆತ್ಮ ಇನ್ನೂ ದೇಹದೊಳಗಿದೆ.'

'ಅದಾರೋ ಬರುವ ಸದ್ದು. ಅವಳ ಗಂಡನಿರಬೇಕು.'

ನಾನು ತಿರುಗಿ ನೋಡಿದೆ. ಹೆಂಗಸೊಬ್ಬಳು ಉಮೆಯ ಬಳಿ ನಿಂತು 'ಉಮಾ' ಎಂದು ಕೂಗಿದಳು.

ಉಮಾ ಮುಸುಕು ತೆಗೆದು,

'ಕುಳಿತುಕೋ ಗೌರಿ. ಇದೇನು ಇಲ್ಲಿಗೆ ಬಂದೆ' ಎಂದಳು.

'ನಮ್ಮ ಗುರುತಿನವರೊಬ್ಬರನ್ನು ನೋಡಲು ಬಂದೆ. ಹಾಗೆ ನಿನ್ನನ್ನೂ ನೋಡಿಕೊಂಡು ಹೋಗೋಣವೆಂದು ಬಂದೆ. ನಿಮ್ಮ ಯಜಮಾನರು ಬರಲಿಲ್ಲವೇ?'

'ಅವರಿಗೆ ಸಮಯ ಸಿಗುವುದಿಲ್ಲ. ಆಫೀಸಿನ ಕೆಲಸ ತುಂಬಾ ಇರುತ್ತದೆ. ಬಿಡುವಿದ್ದ ದಿನ ಬರುತ್ತಾರೆ.'

ನಾನೂ, ಎಂಟನೆಯ ಬೆಡ್ಡು ಪರಸ್ಪರ ನೋಡಿಕೊಂಡೆವು. 'ಸುಳ್ಳು ಹೇಳುವುದರಲ್ಲಿ ಈಕೆ ಚತುರೆ.' ಎಂಟನೆಯ ಬೆಡ್ಡು ಟೀಕಿಸಿತು.

'ಗಾದೆ ಕೇಳಿಲ್ಲವೇ ? ಸಂಸಾರ ಗುಟ್ಟು, ರೋಗ ರಟ್ಟು ಅಂತ.'

'ತಾಳು ಅವರ ಮಾತು ಕೇಳೋಣ.' ಎಂಟನೆಯ ಬೆಡ್ಡು ಕೂತೂಹಲದಿಂದ ಅವರ ಸಂಭಾಷಣೆಗೆ ಕಿವಿಯೊಡ್ಡಿತು.

ನಿಮ್ಮ ಯಜಮಾನರು ಬಂದು ಎಷ್ಟು ದಿನವಾಯಿತು ?"

'ಮೂರು ದಿನವಾಯಿತು.'

ಗೌರಿ, ಉಮೆಯನ್ನು ತೀಕ್ಷ್ಣವಾಗಿ ನೋಡಿದಳು.

'ಸುಳ್ಳೇಕೆ ಹೇಳುವೆ? ನಿನ್ನ ಗಂಡನ ಚರ್ಯೆಯನ್ನು ನನ್ನಿಂದ ಅಡಗಿಸಿಡಬೇಡ.'

ಉಮಾ ವಿಷಾದದಿಂದ ನಕ್ಕಳು.

'ಉಮಾ, ನಾನೊಂದು ಸುದ್ದಿ ಕೇಳಿದೆ. ಮುಂದಿನ ಸೋಮವಾರ ನಿನ್ನ ಗಂಡನಿಗೆ ಕುಲಕರ್ಣಿಯವರ ಮಗಳನ್ನು ಕೊಟ್ಟು ಪಶ್ಚಿಮವಾಹಿನಿಯಲ್ಲಿ ಮದುವೆ ಯಂತೆ.'

'ಏನು !' ಉಮೆಯೊಡನೆ ನಾವೂ ಚೀರಿದೆವು.

'ಸುಳ್ಳು' ಎಂದು ಅವಳೊಡನೆ ಪ್ರತಿಭಟಿಸಿದೆವು.

'ಖಂಡಿತವಾಗಿಯೂ ಸುಳ್ಳಲ್ಲ ಉಮಾ. ಕುಲಕರ್ಣಿಯವರ ಅಕ್ಕನೇ ನನಗೆ ಈ ಸುದ್ದಿ ತಿಳಿಸಿದರು.'

ಉಮಾ ಅಷ್ಟು ಬೇಗ ಶಾಂತಳಾದುದು ನನಗೆ ಆಶ್ಚರ್ಯವನ್ನುಂಟುಮಾಡಿತು.

'ದೇವರು ಅವರಿಬ್ಬರಿಗೂ ಒಳ್ಳೆಯದು ಮಾಡಲಿ. ಛಿದ್ರವಾದ ಅಂಗಿಯನ್ನು ತೊಡಲು ಆದೀತೇ ?'

ಗೌರಿ ಹೊರಟುಹೋದೊಡನೆ ಉಮಾ ಮುಸುಕು ಬೀರಿ ಮಲಗಿದಳು. ಅವಳ ಕಣ್ಣೀರಿನಿಂದ ದಿಂಬು ತೊಯ್ದುಹೋಯಿತು. ನಾನು ಮೌನವಾಗಿ ಅವಳೊಡನೆ ದುಃಖಿಸತೊಡಗಿದೆ.

ಕತ್ತಲು ನಿಧಾನವಾಗಿ ಕವಿಯತೊಡಗಿತು.

—ತ್ರಿವೇಣಿ

# ಭಾವ ಬಂಧನ

ನಾಲ್ಕನೆಯ ಮಾಳಿಗೆ. ಹತ್ತೊಂಭತ್ತನೆಯ ಕೋಣೆ. ಬಾಗಿಲಿಗೆ ಹೊಂದಿಕೊಂಡೆ ಇರುವ ಸಣ್ಣ ಕಿಟಕಿಯಿಂದ ಒಳಗೆ ಸುಳಿಯುವ ಗಾಳಿಯಿಂದಷ್ಟೆ ಕೋಣೆಗೆ ಹೊರಗಿನ ವಾತಾವರಣದ ಸಂಪರ್ಕ.

ರಾತ್ರಿಗಂತೂ ಬಾಗಿಲು ತೆರೆದಿರುವುದು ಸಾಧ್ಯವಿಲ್ಲ. ಹಗಲಿಗೋ, ತೆರೆದ ಬಾಗಿಲು, ಅರಸುವ ಕಣ್ಣುಗಳು ಬಯಸುವ ಭಾಗ್ಯ. ಕಟ್ಟಡದ ಆ ತುದಿಯಿಂದ ಈ ತುದಿಯ ತನಕ, ಕೆಲಸವಿರಲಿ, ಇಲ್ಲದಿರಲಿ, ತಿರುಗುವ ಜನರಿಗೆ ಬಾಲ್ಕನಿ ಸಾರ್ವಜನಿಕ ರಸ್ತೆ. ಕಾಲುಗಳ ತಿರುಗಾಟವನ್ನು ನಿರ್ಬಂಧಿಸುವುದು ಸಾಧ್ಯವಿಲ್ಲವೆಂದ ಮೇಲೆ, ಕಣ್ಣುಗಳ ತಿರುಗಾಟಕ್ಕೂ ಅದೇ ಮಾತು ಅನ್ವಯಿಸುತ್ತದೆ. ಎಂತಲೇ ಕುತೂಹಲ ಪೂರ್ಣವಾದ ದೃಷ್ಟಿಗೆ ಸಮರ್ಪಕವಾದ ಉತ್ತರ ಒಂದೇ—ಮುಚ್ಚಿದ ಬಾಗಿಲು.

ವಿಪರೀತ ಸೆಖೆ.

ಕಿಟಕಿಯ ಪರದೆಯನ್ನಾದರೂ ತುಸ ಬದಿಗೆ ಸರಿಸಿದರೆ, ಸ್ವಲ್ಪವಾದರೂ ಗಾಳಿ ಒಳಗೆ ಬರಬಹುದೆಂದು ಶಾರದೆಗೆ ತೋರಿತು. ಆದರೂ ಮಲಗಿದಲ್ಲಿಂದ ಏಳಲು ಆಲಸ್ಯ. ದೇಹವನ್ನು ಮುತ್ತಿರುವ ವಿಚಿತ್ರ ರೀತಿಯ ಜಡತೆ; ಮಲಗಿದಾಗಲೆಲ್ಲ ಎದ್ದು ಕುಳಿತುಕೊಳ್ಳುವ, ತಿರುಗುವ ಆಸೆ. ಎದ್ದ ಮೇಲೆ ಮತ್ತೆ ಮಲಗುವ ಆಸೆ.

ಒಳಗೆ ಅಡಿಗೆಯ ಕೋಣೆಯಲ್ಲಿ 'ಸ್ಟವ್' ಸದ್ದುಮಾಡುತ್ತಾ ಉರಿಯುತ್ತಿದೆ. ಅದರ ಮೇಲಿರಿಸಿದ್ದ 'ಕುಕ್ಕರ್'ನ ಉಗಿಯ ಸುಂಯ್‌ಕಾರ – ಈಗೀಗ ತುಂಬ ಪರಿಚಿತವಾಗಿರುವ ಸದ್ದು – ಸ್ಟವ್‌ನ ಸಂಗೀತಕ್ಕೆ ಶ್ರುತಿ ಹಿಡಿದಿದೆ. ಇನ್ನೂ ಹತ್ತು ಹದಿನೈದು ನಿಮಿಷಗಳಲ್ಲಿ ನಿತ್ಯನಿಯಮದಂತೆ ಬಾಗಿಲಿನ ಚಿಲಕ 'ಟಿಕ್' 'ಟಿಕ್' ಎಂದು ಸದ್ದುಮಾಡುತ್ತದೆ. ಜೊತೆಗೆ ಅದೇ ಒರಟು ದನಿ 'ಡಬ್ಬಾವಾಲಾ....'

ಇನ್ನು ಮಲಗಿರುವುದು ಸರಿಯಲ್ಲವೆಂದು ಶಾರದೆ ಲಗುಬಗೆಯಿಂದೆದ್ದು ಸ್ಟವ್‌ನ ಬಳಿಗೆ ಹೋದಳು. 'ಕುಕ್ಕರ್ ' ಕೆಳಗಿಳಿಸಿ ಅನ್ನ ಬೆಂದಿದೆಯೋ ಎಂದು ನೋಡಿದಳು. ಆಮೇಲೆ ಮೇಲೋಗರದ ತಯಾರಿ. ಎಲ್ಲ 'ಕ್ಯಾರಿಯರ್'ಗೆ ತುಂಬಿಸಿದ ಮೇಲೆ ಶಾರದೆಗೆ ಇನ್ನು ಏನೋ ಮರೆತಂತಿದೆಯೆಂದು ತೋರಿತು. ಆಮೇಲೆ ನೆನಪಾಯಿತು. ಕಮಲೆ ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ನಿಂಬೆಯ ಹಣ್ಣಿನ ಉಪ್ಪಿನಕಾಯಿ. ಶಾರದೆಗೆ ತಿಳಿದೂ, ತಿಳಿಯದೆಯೂ ಮರೆಯುತ್ತಿದ್ದ ಒಂದೇ ಒಂದು ವಸ್ತು. 'ಇಂದು

ಕೂಡ ಹಾಗೇ ಮರೆಯೋಣ; ಕಮಲೆ ಸಂಜೆಗೆ ಬಂದು ರೇಗಲಿ' ಎಂದಿತು ಮನಸ್ಸು. ಆದರೆ ಡಬ್ಬಾವಾಲಾ ಬಾಗಿಲಸದ್ದು ಮಾಡಿದಾಗ, ಈ ಉದ್ದೇಶಪೂರ್ವಕವಾದ ಚೇಷ್ಟೆ ಸರಿಯಾದುದಲ್ಲವೆಂದು ತೋರಿದುದರಿಂದ, ಉಪ್ಪಿನ ಕಾಯನ್ನು ತುಂಬಿಸಿ 'ಕ್ಯಾರಿಯರ್' ಮುಚ್ಚಿ ಅದನ್ನು ಹಿಡಿದುಕೊಂಡು ಬಂದು ಶಾರದೆ ಬಾಗಿಲು ತೆರೆದಳು. ಹೊರಗೆ ಕರಿಯ ಹುಡುಗನೊಬ್ಬ ನಿಂತಿದ್ದ.

ಬೇರೆ ಮಾತು ಆಡದೆ ಆತ ಡಬ್ಬಾ ಪಡೆದು ಹೋದ. ಆಯಾಸದಿಂದ ಜಗೆ ಬಿಡುತ್ತಿದ್ದ ಶಾರದೆಗೆ ಮನೆಯ ಬಾಗಿಲು ತೆರೆದಾಗಲೇ, ಹೊರಗಿನ ಗಾಳಿ ಬೆವರಿದ್ದ ತನ್ನ ಮೈಯನ್ನು ಸೋಂಕಿದಾಗಲೇ, ಆ ಶೀತಲ ಮಾರುತ ಸ್ಪರ್ಶದಿಂದ ತುಂಬ ಸಂತೋಷವಾಯಿತು. ಬಾಗಿಲು ಮುಚ್ಚದೇನೇ, ಬಾಲ್ಕನಿಯ ದಂಡೆಯ ಬಳಿಗೆ ಬಂದು ಇದಿರಿನ ರಾಜಮಾರ್ಗವನ್ನು ನೋಡತೊಡಗಿದಳು.

ಅಗಲವಾದ 'ಲೆಮಿಂಗ್ಟನ್' ರಸ್ತೆ, ಅಸಂಖ್ಯಾತ ಕಾರುಗಳಿಂದ, ಬಸ್ಸುಗಳಿಂದ ತುಂಬಿದೆ. ಆಫೀಸುಗಳೆಲ್ಲ ಆರಂಭವಾಗುವ ಹೊತ್ತು, ಮಂದಗತಿಯಿಂದ ಸಾಲು ಹಿಡಿದು ಈ ವಾಹನಗಳು ಶಹರದ ವ್ಯವಹಾರ ಕೇಂದ್ರಗಳತ್ತ ಸಾಗುತ್ತಿವೆ. ಅನತಿ ದೂರದಲ್ಲೇ ಕಾಣಿಸುವ 'ಗ್ರ್ಯಾಂಟ್ ರೋಡ್'.

ತುಸುವೇಳೆ ಶಾರದೆ ಆ ರಸ್ತೆಯಲ್ಲಿ ಚಲಿಸುತ್ತಿದ್ದ ಟ್ರಾಂ ಬಂಡಿಗಳನ್ನೆ ನಿರೀಕ್ಷಿಸಿದಳು. ಆ ಮೇಲೆ ಬಸ್‌ಗಾಗಿ ಕಾದು ನಿಂತಿದ್ದ ಜನರ ಸಾಲುಗಳನ್ನಷ್ಟು ನೋಡಿದಳು. ಎಲ್ಲರ ಮುಖಗಳಲ್ಲೂ ಕಾಣುವ ಭಾವ ಒಂದೇ: ಅವಸರ, ದುಡಿಯುವ ತಾಣಸೇರುವ ಅವಸರ, ಏನೂ ಅವಸರವಿಲ್ಲದೆ ಮನೆಯಲ್ಲೆ ಮಲಗಬೇಕಾದವಳು ತಾನೊಬ್ಬಳೇ ಎಂದು ತೋರಿತು ಶಾರದೆಗೆ.

ಎರಡು ತಿಂಗಳಿಂದ ಇದೇ ರೀತಿ.

ಈಗ ಕಮಲ ಕೆಲಸ ಆರಂಭಿಸಿರಬಹುದು. ಆರಾಮವಾಗಿ ಮಾಡಬಹುದಾದ ಕೆಲಸ; ಹೆಚ್ಚೆಂದರೆ ದಿನಕ್ಕೆ ಮೂರು-ನಾಲ್ಕು ತಾಸುಗಳಷ್ಟು, ಇದಿರಿಗಿರುವ ಟೈಪ್ ರೈಟರ್ ಯಂತ್ರದ ಮೇಲೆ ಕೈಬೆರಳುಗಳನ್ನಷ್ಟು ಓಡಿಸಿದರೆ ಸರಿ, 'ಟಪ್ಪ ಟಪ ಟಪ ಟಪ್ಪ ಟಪ ಟಪ....'

ತಾನು ಎರಡು ವರ್ಷ ಕಾಲ ಮಾಡಿದ್ದ ಕೆಲಸ. ಅದೇ ಜಾಗ; ಅದೇ ಕೆಲಸ; ಅದೇ ಮೇಲಧಿಕಾರಿ. ಈಗ ತನ್ನ ಸ್ಥಾನದಲ್ಲಿ ಕುಳಿತಿರುವುದು ಮಾತ್ರ ಕಮಲ.

'ಹೇಗಿದ್ದೀರಿ ಶಾರದಾಬಾಯಿ ?'

ಯೋಚಿಸುತ್ತಿದ್ದ ಶಾರದೆಯನ್ನು ಶ್ರೀಮತಿ ಕೊರೆಗಾಂವ್‌ಕರಳ ದನಿ ಎಚ್ಚರಿಸಿತು. ಅವಳ ಗಂಡ ಆಗಷ್ಟೇ ಬೂಟಿನ ಸದ್ದುಮಾಡುತ್ತಾ, ಇಡೀ ಮಾಳಿಗೆಯೇ

ತನ್ನದೆಂಬಂತೆ ಹೋಗಿದ್ದ. ಆತ ತನ್ನನ್ನು ಹಾದು ಹೋಗುವಾಗ 'ಯಾರಿದು?' ಎಂದು ನೋಡಲು ಶಾರದೆ ಒಂದು ಕ್ಷಣ ಮುಖ ತಿರುಗಿಸಿದ್ದಳು, ಹಾಗೆ ನೋಡಿದಾಗ ಹೋಗುತ್ತಿದ್ದ ಕೊರೆಗಾಂವ್‌ಕರನ ಕಡೆಗಣ್ಣ ನೋಟ ತನ್ನ ಮೇಲಿದೆಯೆಂಬ ಅರಿವಾದಾಗ ಪುನಃ ಮುಖ ತಿರುಗಿಸಿ ಬೀದಿಯ ಕಡೆ ನೋಡಿದ್ದಳು. ಎಂತಲೇ ಗಂಡನ ಹಿಂದಿನಿಂದ ಮನೆಯ ಬಾಗಿಲಿಗೆ ಬಂದ ಶ್ರೀಮತಿ ಕೊರೆಗಾಂವ್‌ಕರಳನ್ನು ಆಕೆ ಗಮನಿಸಿರಲಿಲ್ಲ. ಈಗ ಪರಿಚಿತ ದನಿ.

'ಇದ್ದೇನೆ ಹೀಗೆ'. ಮುಖ ತಿರುಗಿಸಿ ನೆರೆಯ ಬಂಧುವನ್ನು ನೋಡಿದ ಶಾರದೆ ಈ ರೀತಿ ಹೇಳಿದರೂ ಆ ದನಿಯಲ್ಲಿ ಮಾತಿನ ಕುರಿತು ಅಷ್ಟೇನು ಉತ್ಸಾಹವಿರಲಿಲ್ಲ ಮುಂದೆ ಬರುವ ಪ್ರಶ್ನೆಗಳೆಲ್ಲ ಆಕೆಗೆ ಗೊತ್ತು.

'ಎಂಟು ತಿಂಗಳು ಅಲ್ಲವೆ?' ಎಷ್ಟೋ ಸಲ ಕೇಳಿದ್ದ ಪ್ರಶ್ನೆ. ಯಾಂತ್ರಿಕವಾಗಿ ಮತ್ತೆ ಉತ್ತರ 'ಹೌದು'.

'ಇನ್ನು ಒಂದು ಒಂದೂವರೆ ತಿಂಗಳಿದೆ'. ಹೀಗೆ ಹೇಳಿದ ಗೆಳತಿಯ ದೃಷ್ಟಿ ತನ್ನ ಹೊಟ್ಟೆಯ ಮೇಲಿದೆಯೆಂಬ ಅರಿವು ಬಂದಾಗ ಶಾರದೆಗೆ ವಿಲಕ್ಷಣ ಸಂಕಟವಾಯಿತು. ಆದರೆ ಅಲ್ಲಿಗೆ ಮಾತುಕತೆ ನಿಲ್ಲಿಸಿ ಒಳಗೆಹೋಗಿ ಬಾಗಿಲು ಹಾಕಿಕೊಳ್ಳುವ ಧೈರ್ಯ ವುಂಟಾಗಲಿಲ್ಲ. ಶ್ರೀಮತಿ ಕೊರೆಗಾಂವ್‌ಕರ್ ಏನೇ ಹೇಳಲಿ, ಏನೇ ಮಾಡಲಿ, ತನ್ನ ಕಷ್ಟ ಕಾಲದಲ್ಲಿ ತಾನು ಯೋಚಿಸಬಹುದಾಗಿದ್ದ ಸಹಾಯ ಅವಳದು ಮಾತ್ರ.

'ನಿಮ್ಮ ತಂದೆಯುವರು ಇನ್ನೂ ಬಂದಿಲ್ಲವೆಂತ ಕಾಣುತ್ತದೆ.'

'ಬರಬಹುದು ಮಧ್ಯಾಹ್ನ, ಊಟದ ಹೊತ್ತಿಗೆ.'

'ನಿಮ್ಮ ಗಂಡ ಹೇಗಿದ್ದಾರೆ ಈಗ?' ಅದೇ ಬೇಡವಾದ ಪ್ರಶ್ನೆ. ತಾನು ಬಯಸದ ಪ್ರಶ್ನೆ. 'ನನ್ನ ಗಂಡ ಹೇಗಿದ್ದರೇನು! ನಿನ್ನ ಗಂಡನನ್ನು ನೋಡಿಕೊಂಡಿರಬಾರದೆ?' ಎಂದು ಹೇಳಬೇಕೆಂದು ತೋರಿತು ಶಾರದೆಗೆ ಒಂದು ಕ್ಷಣ. ಆದರೆ ಹೇಳಿದ ಉತ್ತರ ಮಾತ್ರ ಬೇರೆಯೆ.

'ತುಂಬ ಗುಣವಿದೆ.'

ಅಷ್ಟರಿಂದಲೂ ಆಕೆಗೆ ಸಮಾಧಾನವಾಗಲಿಲ್ಲ. 'ಇನ್ನು ಎಷ್ಟು ದಿನ ಆಸ್ಪತ್ರೆಯಲ್ಲಿ?' ಎಂದು ಹೇಳಿದಳು.

'ಇರಬಹುದು ಇನ್ನೂ ಒಂದೆರಡು ತಿಂಗಳು' ಎಂದು ಹೇಳಿದ ಶಾರದೆ ದೀರ್ಘವಾಗಿ ಉಸಿರೆಳೆದಳು—ತನಗೆ ಆಯಾಸವಾಗಿದೆಯೆಂದು ತೋರಿಸುವಂತೆ.

'ಮಗುವಿನ ನಾಮಕರಣಕ್ಕೆ ಅವರು ಮನೆಗೆ ಬರಬಹುದು ಹಾಗಾದರೆ' ಎಂದು ಶಾರದೆಯ ಆಯಾಸವನ್ನು ಗುರುತಿಸದೇನೇ ಶ್ರೀಮತಿ ಕೊರೆಗಾಂವ್‌ಕರ್ ಪುನಃ ಹೇಳಿದರು.

ಶಾರದೆಯ ಮುಖದಲ್ಲಿ ಒಂದು ಕ್ಷೀಣ ನಗು ಹರಡಿತು. ಆದರೆ ಈ ಪ್ರಶ್ನೆಗಳೆಲ್ಲ ಕೊಟ್ಟ ನೋವಿನಿಂದ ಆಕೆಗೆ ತಾನು ಅಲ್ಲಿ ನಿಂತಿರುವುದು ಸಾಧ್ಯವಿಲ್ಲವೆಂದು ತೋರಿದ ರಿಂದ 'ಬರುತ್ತೇನೆ. ತುಂಬಾ ಸಾಕಾಗಿದೆ. ಹೋಗಿ ಮಲಗುತ್ತೇನೆ' ಎಂದಳು. ಉತ್ತರದ ದಾರಿ ಕಾಯದೆ ಮನೆಯೊಳಗೆ ಹೋದಳು. 'ಹೌದು ಶಾರದಾಬಾಯಿ, ತುಂಬ ಜಾಗ್ರತೆಯಿಂದಿರಬೇಕು—ಹೆಚ್ಚು ಆಯಾಸ ಮಾಡಿಕೊಳ್ಳಬೇಡಿ' ಎಂದು ಶ್ರೀಮತಿ ಕೊರೆಗಾಂವ್‌ಕರಳ ಉತ್ತರ ಶಾರದೆಯನ್ನನುಸರಿಸಿತು. ಆದರೆ ಆ ಉತ್ತರ ಹೇಳುತ್ತಿರುವಂತೆ ತಾನೂ ಶಾರದೆಯ ಮನೆಯೊಳಗೆ ಪ್ರವೇಶಿಸಲಿಲ್ಲ, ಆಕೆ. ಶಾರದೆಗೆ ಬೇಕಾಗಿದ್ದುದು ಅಷ್ಟೆ.

ಒಳಗೆ ಬಂದ ಶಾರದೆ ಬಾಗಿಲಿಕ್ಕಿಕೊಂಡು, ಕಿಟಕಿಯ ಪರದೆಯನ್ನು ತುಸುವೇ ಸರಿಸಿ, ಬಿಡಿಸಿಯೇ ಇದ್ದ ಹಾಸಿಗೆಯ ಮೇಲೊರಗಿದಳು.

ಆದರೆ ಒರಗಿದೊಡನೆ ನಿದ್ದೆ ಬರುವಂತಿದೆಯೆ ? ಕೆದರಿದ ಮನಸ್ಸು ಸುಮ್ಮನಾ ಗಿರುವುದೆಂದಿದೆಯೆ ?

'ನಿಮ್ಮ ಗಂಡ ಹೇಗಿದ್ದಾರೆ ಈಗ ?'

'ಅವರು' ಕೂಡ ಈಗ ಇದೇ ರೀತಿ ಮಲಗಿಕೊಂಡಿರಬಹುದು, ಅಂಧೇರಿಯ ಸಮೀಪವಿರುವ ವರ್ಸೋವಾ ಸೆನೆಟೋರಿಯಮ್‌ನಲ್ಲಿ, ಮಲಗಿ ಏನನ್ನು ಯೋಚಿಸು ತ್ತಿರಬಹುದು ? ಕೈಹಿಡಿದ ಹೆಂಡತಿಯ ವಿಚಾರವೆ ? ಅಥವಾ ಕುಟುಂಬದ ಪೋಷಣೆಗಾಗಿ ದುಡಿಯುವ ನಾದಿನಿಯ ವಿಚಾರವೆ ?

ಎಂಟು ದಿನಗಳ ಹಿಂದೆ ಶಾರದೆ ಗಂಡನನ್ನು ಕಂಡಿದ್ದಳು—ಸಂಜೆ. ಕಮಲ ಜೊತೆಗೇ ಬಂದಿದ್ದರೂ ಅವರೊಡನೆ ಮಾತನಾಡುವಾಗ ಬಳಿಯಿರಲಿಲ್ಲ. ಎಲ್ಲೋ ಹೋಗಿದ್ದಳು - ಜಾಣೆ.

ಆದರೆ ಅಂಥ ಅಶಾಂತದ ಮಾತು ಏನಿತ್ತು ಅಲ್ಲಿ ? ಇಂದು ಶ್ರೀಮತಿ ಕೊರೆ ಗಾಂವ್‌ಕರ್ ಕೇಳಿದ ಪ್ರಶ್ನೆಯನ್ನೇ ತಾನೂ ಕೇಳಿದ್ದು: ಹೇಗಿದ್ದೀರಿ ಈಗ ? ಕ್ಷೀಣವಾದ ದೇಹ. ಬಲವಂತದ ನಗು. ತನ್ನ ಮುಖವನ್ನು ನೇರವಾಗಿ ನೋಡ ದೇನೇ ಮುಖ ತಿರುಗಿಸಿ ಅವರು ಕೊಟ್ಟಿದ್ದ ಉತ್ತರ:

'ಇದ್ದೇನೆ, ಹೀಗೆ. ಮೊನ್ನೆ 'ಸ್ಕ್ರೀನ್'ಮಾಡಿ ನೋಡಿದ್ದರು. ಎಡ ಶ್ವಾಸ ಕೋಶದಲ್ಲಿ ಇನ್ನೂ ಸ್ವಲ್ಪ ಉಳಿದಿದೆಯೆಂತೆ. ಒಂದೆರಡು ತಿಂಗಳಲ್ಲಿ ಸರಿಯಾಗ ಬಹುದಂತೆ.'

ಮೂರು ಬಾರಿ ಬಂದು ಹೋಗಿದ್ದ 'ಒಂದೆರಡು ತಿಂಗಳು'. ಆದರೆ ಆ ಸನ್ನಿವೇ ಶದಲ್ಲೂ 'ಗುಣವಾಗುತ್ತಿದೆಯಲ್ಲ' ಎಂಬ ಆಸೆಯೊಂದು ತನ್ನ ಕ್ಷೀಣ ಪ್ರಕಾಶವನ್ನು ಬೀರಿತ್ತು. ಎದೆ ಹಗುರಾಗಿತ್ತು.

'ಅಂತೂ ಕಡಿಮೆಯಾಗುತ್ತಿದೆಯಲ್ಲ,' ಎಂದು ನಗುತ್ತಲೇ ಶಾರದೆ ಹೇಳಿದ್ದಳು. ಮೋಹನ ಆ ಮಾತು ಕೇಳಿ ನಗಲಿಲ್ಲ. 'ನಾನು - ಸಾಯುವೆನೆಂದು ಹೆದರಿದ್ದೀಯೇನು ?' ಎಂದು ಕೇಳುವ ಮನಸ್ಸಾದರೂ ಆತ ಹಾಗೆ ಕೇಳಲಿಲ್ಲ.

'ನನಗೆ ಇನ್ನು ಬರಲು ಸಾಧ್ಯವಾಗುತ್ತದೋ ಇಲ್ಲವೋ. ಈಗಲೇ ತುಂಬ ಆಯಾಸವಾಗುತ್ತಿದೆ.'

ಹೆಂಡತಿಯ ಈ ಮಾತು ಕೇಳಿದಾಗ ಮೋಹನ ಆಕೆಯ ಹೊಟ್ಟೆಯ ಕಡೆ ದೃಷ್ಟಿ ಹೊರಳಿಸಿ ತುಂಬ ಕಾತರತೆಯಿಂದಲೇ ಹೇಳಿದ್ದ:

'ಹೌದು ಶಾರದಾ. ಇನ್ನು ನೀನು ಬರಬಾರದು. ಏನೂ ಆಯಾಸಮಾಡಿಕೊಳ್ಳಬಾರದು. ನನ್ನಿಂದಾಗಿ ನಿನಗೆ ಏನೆಲ್ಲ ತೊಂದರೆ?'

'ಛೆ! ತೊಂದರೆಯೇನು? ಹೇಗಾದರೂ ನಿಮಗೆ ಗುಣವಾದರೆ ಸರಿ.'

ಆದರೂ ಆತ್ಮಜ್ಞಾನಿಯ ಅವನ ಮಾತುಗಳು ನಿಲ್ಲಲಿಲ್ಲ.

'ನನ್ನಿಂದ ದೊಡ್ಡ ಅಪರಾಧವಾಯಿತು ಶಾರದಾ......ಇನ್ನೂ ಒಂದೆರಡು ವರ್ಷ ಹೋಗಿದ್ದರೆ....'

ಆಕೆ ಮೌನವಾಗಿ ನಿಂತಿದ್ದಳು. ಗಂಡನ ಮಾತಿಗೆ ಉತ್ತರ ಹೇಳುವ ಗೋಜಿಗೇ ಹೋಗಿರಲಿಲ್ಲ. ಆದರೆ ಹೆಂಡತಿಯ ಕಣ್ಣು ತುಂಬಿಕೊಳ್ಳುತ್ತಿದ್ದುದನ್ನು ಗಮನಿಸಿ ಮೋಹನ ಇನ್ನಷ್ಟು ಗಲಿಬಿಲಿಗೊಂಡು ಹೇಳಿದ್ದ:

'ನೀನು ಕೆಲಸಮಾಡುತ್ತಿದ್ದು ಒಂದುವೇಳೆ ನನಗೆ ಹೀಗಾಗಿದ್ದರೂ ಇಷ್ಟು ದುಃಖವಾಗುತ್ತಿರಲಿಲ್ಲ. ಬಸುರಿಯೆಂದು ನಿನ್ನ ಕೆಲಸ ಹೋಯಿತು. ಈಗ.... ಇಬ್ಬರೂ ಕಮಲೆಯ ಅಧೀನ....'

'ನೀವು ಇದನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳಬಾರದು. ಕಮಲ ಹಾಗೇನೂ ಯೋಚಿಸಿಲ್ಲ. ದಿನಾಲೂ ಇಲ್ಲಿಗೆ ಬರುವುದಿಲ್ಲವೆ?'

ಮೊಹನನಿಗೆ ಈ ಸಮಾಧಾನ ಸಮಾಧಾನವಾಗಿ ತೋರಲಿಲ್ಲ. 'ತಪ್ಪಾಯಿತು ಶಾರದಾ ...ಇನ್ನೂ ಒಂದೆರಡು ವರ್ಷ ಹೋಗಿದ್ದರೆ?'

ಶಾರದೆಗೆ ಗಂಡನನ್ನು ಆ ಮೇಲೂ ಸಮಾಧಾನಪಡಿಸಬೇಕೆಂದು ತೋರಿರಲಿಲ್ಲ. ಆ ರೀತಿಯ ಆತ್ಮಾವಹೇಳನ ಅವಳಿಗೆ ಬೇಕಾಗಿರಲಿಲ್ಲ.

ಮಲಗಿದಲ್ಲೇ ಗಂಡನ ಅಂದಿನ ಮಾತುಗಳನ್ನೇ ಮೆಲಕು ಹಾಕುತ್ತಿದ್ದ ಶಾರದೆ ತನ್ನ ಹೊಟ್ಟೆಯನ್ನು ಮೆಲ್ಲನೆ ಸವರಿಕೊಂಡಳು. ಬೆಳೆಯುವ ಪಿಂಡದ ಸ್ಪರ್ಶ ತನ್ನ ಕೈಗಾಗುತ್ತಿದೆಯೆಂದು ಭಾಸವಾಗಿ ಮೈ ರೋಮಾಂಚವಾಯಿತು. ಪಕ್ಕಕ್ಕೆ ಹೊರಳಿ ಶಾರದೆ ಮತ್ತೆ ಯೋಚಿಸತೊಡಗಿದಳು.

ತಪ್ಪು?

ಗಂಡನ ಮಾತಿನ ಧಾಟಿ ಕೇಳಿ ಅಂದು ಬೇಸರವಾಗಿತ್ತು. ಯೌವನದ ಆ ಉತ್ಸಾಹದ, ಮಧುರವಾದ ಸಂಭ್ರಮದ ಜೀವನದ ಸ್ಮೃತಿಯ ಜೀವಂತ ಸಾಕ್ಷಿಗೆ ಎಂಥ ಅಪಮಾನ!

ಇಬ್ಬರ ದುಡಿಮೆ—ಇಬ್ಬರ ಸಂಪಾದನೆ, ಎಂದು ತಂದೆಯ ನಿವೃತ್ತ ಜೀವನ ದಲ್ಲೂ ಮನೆಯಲ್ಲಿ ನಗು ಮಾಸಿರಲಿಲ್ಲ. ಪ್ರಾಯಶಃ ಈ ನಗು ಎಂದೆಂದಿಗೂ ಮಾಸು ವುದಿಲ್ಲವೆಂದು ನಂಬಿ ಹಿರಿಯ ಮಗಳು ತಾನೇ ಆರಿಸಿಕೊಂಡ ವರನ ಬಗ್ಗೆ ಅವರು ಆಗ ವಿರೋಧದ ಧ್ವನಿಯೆತ್ತಲಿಲ್ಲ. ಸಂಪ್ರದಾಯ ರೂಢಿಸಿದ ಒಳಗಿನ ನೋವನ್ನು ಅರಗಿಸಿಕೊಂಡು ಅವರು ಒಪ್ಪಿಗೆ ಕೊಟ್ಟಿರಬೇಕು.

ಆದರೆ ಆ ಒಪ್ಪಿಗೆ ದೊರಕಿದಂದು, ದೊಡ್ಡದೊಂದು ಸ್ವರ್ಗದ ಮಹಾದ್ವಾರವೇ ತೆರೆದಂತೆ ಶಾರದೆಗೆ ತೋರಿತ್ತು. ಮೊದಲಿನಿಂದಲೂ ಗಂಡುಬೀರಿಯೆಂದೆ ಹೆಸರುವಾಸಿ ಯಾಗಿದ್ದರೂ, ಶಾಂತ ಸ್ವಭಾವದ ಕಮಲೆಗೆ ವಿರುದ್ಧ ಸ್ವಭಾವದ ಅಕ್ಕ ಎಂದು ಬಿರುದು ಪಡೆದಿದ್ದರೂ, ತಂದೆಯ ಒಪ್ಪಿಗೆ ಬೇಕಾಗಿತ್ತು.

ಅದು ದೊರಕಿದಾಗ....

ಅದು ದೊರಕಲೆಂದು ತನ್ನ ಹಿರಿಯರೊಬ್ಬರನ್ನು ಕರೆದುಕೊಂಡು ಬಂದು ಇದೇ ಮನೆಯಲ್ಲಿ ನಮ್ರನಾಗಿ ಅವರು ಕುಳಿತಿದ್ದ ಸನ್ನಿವೇಶವನ್ನು ಶಾರದೆ ನೆನೆಸಿಕೊಂಡಳು.

ಅದು ನಾಂದಿ.

ಅವರ ಪರಿಚಯ ಅದಕ್ಕೂ ಮೊದಲು. ಸೇರೆಯ ಆಫೀಸಿನಲ್ಲೇ ಅವರಿಗೆ ಕೆಲಸ. ಮಧ್ಯಾಹ್ನ 'ಲಂಚ್' ಬಿಡುವಿನ ವೇಳೆಯಲ್ಲಿ 'ಬೆಲ್ಲಾರ್ಡ್ ಡಾಕ್ಸ್'ನ ಬಳಿ ಸಮುದ್ರ ತಟದಲ್ಲಿ ಭೆಟ್ಟಿ. ಕನ್ನಡದ ದನಿ ಕೇಳಿ ಮೊದಲು ಪರಿಚಯದ ನಗು, ಆಮೇಲೆ ಮಾತು. ಆ ಮೇಲೆ ಅಕ್ಕಪಕ್ಕದ ಉಪಾಹಾರ ಗೃಹಗಳಲ್ಲಿ ಆಗೊಮ್ಮೆ ಈಗೊಮ್ಮೆ, ಮತ್ತೆ ನಿತ್ಯ ನಿಯಮದಂತೆ ಭೆಟ್ಟಿ. ಸಲುಗೆ.

ಮತ್ತೆ ಒಂದೆರಡು ಬಾರಿ 'ಮೆಟ್ರೋ' 'ಲಿಬರ್ಟಿ' 'ರೀಗಲ್' ಚಿತ್ರಮಂದಿರ ಗಳು. ಆ ಮೇಲೆ ಮದುವೆಯ ಮಾತುಕತೆ, ಮದುವೆ....

ಮುಂದಿನ ಆರು ತಿಂಗಳ ಸುಖಜೀವನ. ಅದಕ್ಕೆ ಸಾಕ್ಷಿಯಾಗಿ ಬೆಳೆಯುತ್ತಿ ರುವ ಗರ್ಭ ಪಿಂಡ.

ತಪ್ಪು?

ಶಾರದೆಗೆ ಗಂಡನ ಆತ್ಮಾವಹೇಳನ ಸೇರಿರಲಿಲ್ಲ. ತಾನು ಗರ್ಭಧರಿಸಿದ ಎರಡೇ ತಿಂಗಳಲ್ಲಿ 'ಅವರು' ಟಿ. ಬಿ. ಗೆ ಗುರಿಯಾಗುವರೆಂದು ಯಾರಾದರೂ ಕನಸು ಕಂಡಿದ್ದರೆ? ಎಂದು ಎಷ್ಟೋಬಾರಿ ಆಕೆ ತನ್ನನ್ನೇ ತಾನು ಪ್ರಶ್ನಿಸಿಕೊಂಡುದಿದೆ.

ಆದರೂ....

'ಇಷ್ಟು ಬೇಗ ಮಗು ಬೇಡವಿತ್ತು' ಎಂದು ಆಕೆಯೂ ತಿಳಿಯದಿರಲಿಲ್ಲ. ಅದು ಒಂದೇ ಒಂದು ಕಾರಣಕ್ಕಾಗಿ. ಇದರಿಂದಾಗಿ ತನ್ನ ಕೆಲಸ ಹೋಗುವುದು, ಮುಂದೆ ತಂಗಿಯ ಹಂಗಿನಲ್ಲಿ ಬಾಳುವೆ ನಡೆಸಬೇಕಾಗುವುದು ಎಂದು ಆಕೆ ಯೋಚಿಸಿರಲಿಲ್ಲ.

ಎಂಟು ತಿಂಗಳು ತುಂಬಿದ ಮೇಲೆ, ಸಂಬಳವಿದ್ದೋ, ಇಲ್ಲದೆಯೋ ನಾಲ್ಕು ತಿಂಗಳ ರಜ ಪಡೆಯುಬಹುದು ಎಂದು ಭಾವಿಸಿದ್ದ ಆಕೆಗೆ, ಗಂಡನ ಕ್ಷಯ ರೋಗ ಮೊದಲ ಏಟು. ಆ ನೋವು ಕೊಟ್ಟ ಆಯಾಸದಿಂದಾಗಿ, ದೇಹದ ಅನಾರೋಗ್ಯದಿಂದಾಗಿ ಆಫೀಸಿಗೆ ಹೋಗುವುದು ಸಾಧ್ಯವಿಲ್ಲವೆಂದಾದಾಗ ದೊರಕಿದುದು ಎರಡನೆಯ ಏಟು.

'ಒಂದು ಆರು ತಿಂಗಳ ರಜ ಕೊಡಿ. ಮತ್ತೆ ಬಂದು ಸೇರಿಕೊಳ್ಳುತ್ತೇನೆ' ಎಂದು ಅಂಗಲಾಚಿ ಬೇಡಿಕೊಂಡರೂ, ಆಕೆಯ ಮೇಲಧಿಕಾರಿಗೆ ಕರುಣೆಯುಂಟಾಗಿರಲಿಲ್ಲ.

'ನಮ್ಮಲ್ಲಿ "ಮೆಟರ್ನಿಟಿ ಲೀವ್"ನ ಅಭ್ಯಾಸವೇ ಇಲ್ಲ. ಈಗ ನಿಮಗಾಗಿ ಕೊಟ್ಟರೆ ಮತ್ತೆ ಪ್ರತಿಯೊಬ್ಬರೂ ಕೇಳುತ್ತಾರೆ. ಆಮೇಲೆ ಎಲ್ಲರಿಗೂ ವರ್ಷಕ್ಕೆ ನಾಲ್ಕು ತಿಂಗಳು ರಜೆ ಕೊಡುತ್ತಾ ಹೋದರೆ, ನಮ್ಮ ವ್ಯವಹಾರ ನಡೆಯುವುದು ಹೇಗೆ!'

ನಾಚಿಕೆಯಿರದ ಮಾತು ಗರ್ಭಿಣಿ ಹೆಂಗಸಿನೊಡನೆ.

ಆದರೂ ಆಕೆಗೆ ಉದಾರಿಯಾಗಿ ಸಹಾಯದ ಭರವಸೆ ಕೊಟ್ಟ. ಅದು ತಂಗಿಗೆ, ಅದೇ ಸ್ಥಾನದಲ್ಲಿ ನೇಮಕಮಾಡುವ ಆಶ್ವಾಸನೆ.

ಮೆಟ್ರಿಕ್‌ನಲ್ಲಿ ಸೋತು ಒಂದು ಪರಿಮಳ ದ್ರವ್ಯಗಳ ಕಂಪೆನಿಯ 'ಪ್ಯಾಕಿಂಗ್' ವಿಭಾಗದಲ್ಲಿ ತಿಂಗಳಿಗೆ ಅರುವತ್ತು ರೂಪಾಯಿ ಸಂಬಳ ತರುತ್ತಿದ್ದ ಕಮಲೆಗೆ, ಸ್ವಲ್ಪ ಹೆಚ್ಚು ಮರ್ಯಾದೆಯ ಆವರಣದಲ್ಲಿ ನೂರಮೂವತ್ತು ರೂಪಾಯಿಗಳ ಬೇರೆ ಕೆಲಸ ದೊರಕಿದುದಷ್ಟೆ ಎಲ್ಲರೂ ಗಳಿಸಿದ ಲಾಭ.

ಅದೇ ಮೂರು ಜೀವಗಳ ಜೀವನಾಧಾರ. ಒಂದು ರೋಗಿ, ಮತ್ತೊಂದು ಬಸುರಿ, ಮೂರನೆಯದು ಗಳಿಕೆಯಿಲ್ಲದ ನಿವೃತ್ತ ಜೀವನ ನಡೆಸುವ ತಂದೆ.

ತಂಗಿಯು ಹೆಂಗು....

ತಾನಾಗಿಯೇ ಶಾರದೆ ಇದನ್ನು ವಿಶೇಷವಾಗಿ ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಇದು ನಿಜವಿದ್ದರೂ, ಕಷ್ಟಕಾಲದಲ್ಲಿ ನೆರವಾಗಬೇಕಾದುದು ಎಲ್ಲರ ಕರ್ತವ್ಯವೆಂದೇ ಆಕೆ ಭಾವಿಸಿದ್ದಳು. ಆದರೆ 'ತನ್ನ ಹಂಗಿನಲ್ಲಿ ಇವರೆಲ್ಲ ಇದಾರೆ' ಎಂಬಂತೆ ವರ್ತಿಸುತ್ತಿದ್ದ ಕಮಲಳ ನಡವಳಿಕೆ ಮಾತ್ರ ಎದೆಯನ್ನು ಕೊರೆಯುತ್ತಿತ್ತು, ಗರಗಸದ ಅಲುಗಿನಂತೆ.

ತಾನು ಸಂಪಾದಿಸಿ ಉಳಿಸಿದ್ದ ಹಣದ ಬಹು ಅಂಶ ಆಗಲೇ ಕರಗಿತ್ತು, 'ಸ್ಟ್ರೆಪ್ಟೋಮ್ಯಾಸಿನ್', 'ಪೆನಿಸಿಲಿನ್', 'ಲೀವರ್ ಎಕ್ಸ್‌ಟ್ರ್ಯಾಕ್ಟ್' ಎಂದು ಹಲವಾರು ಮದ್ದುಗಳ ರೂಪದಿಂದ. ಇನ್ನು ಮುಂದಿನ ಖರ್ಚು ಹಾಗೇ ಇದೆ. ಹೆರಿಗೆ, ಬಾಣಂತಿತನ, ಮಗುವಿನ ಆರೈಕೆ....ಗಂಡನಿಗೆ ನೆರವು ಕೊಡುವ ಬಂಧುಗಳು ಮುಂಬಯಿಯಲ್ಲಿ ಸಿಗುವಂತಿಲ್ಲ. ಅವರಿಗೆ ರಜೆಯೇನೋ ದೊರಕಿದರೂ ಪಗಾರ ಸೊನ್ನೆ, ಎಂದಮೇಲೆ ಕೈಚಾಚಬೇಕಾದುದು ತಂಗಿಯೊಡನೇ........

ಆಕೆಯದಾದರೂ ಏನು ಮಹಾ ಸಂಪಾದನೆ ! ಆದರೂ ಒಮ್ಮೆ ಔಷಧಿ ತರಲು 'ಒಂದು ಹತ್ತು ರೂಪಾಯಿ ಕೊಡು ಕಮಲಾ' ಎಂದಾಗ ಆಕೆ ಕೊಟ್ಟದ್ದ ಉತ್ತರ !........

'ನಿನ್ನ ಗಂಡನನ್ನು ನಾನು ಸಾಕಬೇಕೇನು ?'

'ನಾಯಿಯ ಹಾಗೆ ಬೊಗುಳಬೇಡ ಕಮಲಾ. ತಲೆ ಜಜ್ಜಿಯೇನು' ಎಂದು ಶಾರದೆ ಗದರಿಸಿದ್ದರು. ಅದು ಬರೇ ಗದರಿಕೆ. ಕಮಲೆಯ ನೆರವು ಪಡೆಯದೆ ಬೇರೆ ಗತಿಯೇ ಇದ್ದಿಲ್ಲ.

ಆದರೆ ಅಕ್ಕ ತಂಗಿಯರ ಸಂಬಂಧವೇ ಆ ರೀತಿಯದು. ತಾಯಿ ಬದುಕಿದಾಗಲೂ ಅದೇ ಹಾಡು, ಆಕೆ ತೀರಿಕೊಂಡಮೇಲೂ ಅದೇ. ತಂದೆ 'ಏಕ ನಕ್ಷತ್ರ' ಎಂದು ಬೈದು ಸುಮ್ಮಗಾಗುತ್ತಿದ್ದರು. ಆದರೆ ಎಂಥ ಸಮಾಧಾನ ಅದು ? ತಪ್ಪು ಯಾವಾಗಲೂ ಅವರ ಪಾಲಿಗೆ ಶಾರದೆಯದೇ. ಸದಾ ಕನ್ನಡ, ಮರಾಟೀ ಕತೆ ಕಾದಂಬರಿಗಳಲ್ಲಿ ಮಗ್ನಳಾಗಿರುತ್ತಿದ್ದ ಕಮಲ ಯಾವಾಗಲೂ ಶಾಂತೆಯೇ. ಅವರ ಪ್ರೀತಿಯ ಸರ್ವಸ್ವ.

ಯೋಚಿಸಿ ಯೋಚಿಸಿ ಅಲ್ಲೇ ಜೊಂಪುಹಿಡಿದಿದ್ದ ಶಾರದೆಯನ್ನು ಬಾಗಿಲಿನ ಸದ್ದು ಎಚ್ಚರಿಸಿತು. ಎಚ್ಚರವಾದಮೇಲೂ ಏಳುವ ಮನಸ್ಸಾಗಲಿಲ್ಲ. ಆದರೆ ಬಾಗಿಲಿನ ಸದ್ದು ಹೆಚ್ಚಾಗತೊಡಗಿದಾಗ, ಇದು ತಂದೆಯೇ ಇರಬೇಕು ಎಂದು ಮನವರಿಕೆಯಾಗಿ ಆಕೆ ಎದ್ದುಹೋಗಿ ಬಾಗಿಲು ತೆರೆದಳು.

ಹೊರಗೆ ಬೆವರಿಳಿಸುತ್ತ ನಿಂತಿದ್ದ ತಂದೆಯನ್ನು ನೋಡಿದೊಡನೆ ಶಾರದೆಗೆ ಅಯ್ಯೋ! ತಡಮಾಡಿದೆ ಎನಿಸಿತು. 'ನಿದ್ದೆ ಬಂದಿತ್ತು ಅಪ್ಪಾ' ಎಂದು ಅವರಿಗೆ ಸಮಾಧಾನ ಹೇಳಿದಳು.

ಕಾದು ಸಿಟ್ಟು ಬಂದಿದ್ದ ರಾಧಾಕೃಷ್ಣಯ್ಯನಿಗೆ ಮಗಳ ಸಮಾಧಾನದ ಮುಂದೆ ಏನು ಹೇಳುವುದೆಂದು ತಿಳಿಯಲಿಲ್ಲ. ಅವರು ಒಳಗೆ ಬಂದವರು ಕೋಟು ಕಳಚಿ ಅಡಿಗೆಯ ಮನೆಗೆ ನಡೆದರು. ಬಾಗಿಲಿಕ್ಕಿಕೊಂಡ ಶಾರದೆ ತಂದೆಗೆ ಬಡಿಸಲೆಂದು ಅವರನ್ನನುಸರಿಸಿದಳು.

ಊಟ ಮಾಡುತ್ತಿದ್ದ ರಾಧಾಕೃಷ್ಣಯ್ಯನಿಗೆ ಮಾತು ಬೇಕಿರಲಿಲ್ಲ. ಆದರೆ ಶಾರದೆಗೆ ಬೇಕಾಗಿದ್ದುದು ಅದೇ. ತಂದೆ ವಿನಾಕಾರಣವಾಗಿ ಸಿಟ್ಟಿಗೇಳುವ ಪ್ರವೃತ್ತಿಯವರೆಂಬುದನ್ನು ಅವಳು ಅರಿತಿರಲಿಲ್ಲವೆಂದಲ್ಲ. ತಾನು ಮದುವೆಯಾದುದರಿಂದ ದೊಡ್ಡದೊಂದು ಅಪರಾಧವೇ ಘಟಿಸಿತು ಎಂದು ಈಗ ಅವರು ತಿಳಿದಿದ್ದಾರೆ ಎಂಬುದನ್ನು ಆಕೆ ಮರೆತಿರಲಿಲ್ಲ. ಈಗ ಮನೆಗೆ ಅನ್ನ ಒದಗಿಸುವ ಕಮಲೆಯೇ ಅವರ ಒಲುವಿನ ಸರ್ವಸ್ವ, ಆಶಾ ದೀಪ ಎಂಬುದನ್ನು ಆಕೆ ಅರಿತಿರಲಿಲ್ಲವೆಂದಲ್ಲ. ಆದರೂ ಬಾಳಿನ ಬಿರುಗಾಳಿಯಲ್ಲಿ ಸೋತುಹೋದ ತಂದೆಯು ಆರೈಕೆ, ತಮ್ಮ ಸದಾನಂದ ಒಂದು ರೇಲ್ವೆ ಅಪಘಾತದಲ್ಲಿ ತೀರಿಕೊಂಡಂದಿನಿಂದ, ತನ್ನದೇ ಹೊಣೆಗಾರಿಕೆಯೆಂದು ಭಾವಿಸಿದ್ದ ಆಕೆಗೆ ಅವರೊಡನೆ ಯಾವಾಗಲೂ ಮಾತು ಬೇಕಿತ್ತು. ಎಂತಲೇ ಕೇಳಿದಳು.

'ಎಷ್ಟು ತಡಮಾಡಿ ಬಂದಿರಿ ಅಪ್ಪಾ. ಲೈಬ್ರೆರಿಗೆ ಹೋಗಿದ್ದಿರೇನು ?'

'ಇಲ್ಲ ಸೋನಾಪುರಕ್ಕೆ (ಸ್ಮಶಾನಕ್ಕೆ) ಹೋಗಿದ್ದೆ.'

ಮುಂದೆ ಮಾತನಾಡುವುದು ಶಾರದೆಗೆ ಕಷ್ಟವಾಯಿತು. ಆದರೂ ತನ್ನಿಂದ ಏನೂ ತಪ್ಪಿರದೆ ತಂದೆ ಈ ರೀತಿ ಮಾತನಾಡಿದರಲ್ಲಾ ಎಂಬ ನೋವಿನಿಂದಲೇ ಆಕೆ ಉತ್ತರ ಕೊಟ್ಟಳು.

'ಒಂದಲ್ಲ ಒಂದು ದಿನ ಎಲ್ಲ ಸೋನಾಪುರಕ್ಕೆ ಹೋಗುವವರೇ, ನಾನು ಹೋಗುವುದಿಲ್ಲವೇನು ?'

'ಇನ್ನೇನು ಉಳಿದಿದೆ ನನಗೆ ? ಸದಾ ತೀರಿಕೊಂಡಾಗಲೇ ಎಲ್ಲ ಹೋಯಿತು. ಈಗ ಮಗು ಕಮಲೆಗಾಗಿ ಜೀವ ಹಿಡಿದು ಇದ್ದೇನೆ. ತನ್ನ ಹಿರಿಯಕ್ಕನಿಗೆ ದೊರಕಿದ ಶಾಪ ಅದಕ್ಕೂ ತಟ್ಟದಿರಲಿ, ಎಂತ.'

'ಈಗ ನನಗೆ ಅಂಥ ಶಾಪ ಏನು ಬಂದಿದೆಯೋ ?'

'ಏನೂ ಆಗಿಲ್ಲವೆ ? ಗಂಡ ಆಸ್ಪತ್ರೆಯಲ್ಲಿ ಬಿದ್ದಿದ್ದಾನೆ. ಕೆಲಸ ಹೋಯಿತು.

ಈಗ, ಈಗ, ಈಗ........'

'ಅಪ್ಪಾ ಏಏಏ' ಎಂದು ಶಾರದೆ ನಡುವೆಯೇ ತಡೆದಳು, ಅವರ ದೃಷ್ಟಿ ತನ್ನ ಹೊಟ್ಟೆಯ ಕಡೆ ಹೊರಳಿ ಆ ಮಾತು ಹೊರಡಿತ್ತು ಎಂಬ ತಿಳುವಳಿಕೆ ಮೂಡಿ ದೊಡನೆ.

ನಡುಗುವ ಕೈಯಿಂದ ತುತ್ತು ಅವರ ಬಾಯಿಗೇರುತ್ತಿತ್ತು. ಮಗಳ ದೃಷ್ಟಿ ಯನ್ನು ಇದಿರಿಸಲಾರದೆ ಅವರು ಬಟ್ಟಲನ್ನೇ ನೋಡುತ್ತಾ 'ಮದುವೆ ಯಾಗುವಾಗ ನನ್ನನ್ನು ಕೇಳಿದ್ದರೆ............ನನ್ನನ್ನು ಕೇಳಿದ್ದರೆ. ಬೆಳೆದ ಮಕ್ಕಳ ಮದುವೆಯಾಗ ಬೇಕೆಂದು ಅಷ್ಟು ನನಗೆ ತಿಳಿದಿಲ್ಲವೇ ?'

'ನಿಮ್ಮನ್ನು ಕೇಳಿದ್ದೆ ಅಪ್ಪಾ...........ಈಗ ನನಗೆ ಇಷ್ಟು ನೋವು ಸಾಲದೆಂದು ಸುಳ್ಳು ಹೇಳಿ ಹಂಗಿಸಬೇಕೇ ?'

'ನಿಮ್ಮನ್ನು ಕೇಳಿದ್ದೆ ಅಪ್ಪಾ' ಎಂದು ರಾಧಾಕೃಷ್ಣಯ್ಯ ಅಣಕಿಸಿದರು. 'ಯಾವಾಗ ? ಎಲ್ಲಾ ನಿಶ್ಚಯವಾದಮೇಲೆಯೇ ?'

'ಹಾಗಾದರೆ ಈಗ ಏನು, ಕುತ್ತಿಗೆಗೆ ಹಗ್ಗ ಹಾಕಿಕೊಂಡು ಸಾಯಬೇಕೆ ? ನಾನು ? ಶಾರದೆ ಕೈಲಿದ್ದ ಸಟ್ಟುಗವನ್ನು ದೂರ ಎಸೆದು ಸಿಟ್ಟಿನಿಂದಲೇ ಈ ಮಾತು ಹೇಳಿ ಎದ್ದು ನಿಂತಾಗ ರಾಧಾಕೃಷ್ಣಯ್ಯನ ಸಿಟ್ಟು ಕಡಿಮೆಯಾಯಿತು. ಊಟ ತೀರಿಸಿ, ಕೈ ತೊಳೆದುಕೊಂಡು ಆಚೆಯ ಕೋಣೆಗೆ ಹೋಗುವವರು, ವಿಷಯ ಬದ ಲಿಸಲೆಂದು ಮಗಳೊಡನೆ ಕೇಳಿದರು. 'ಕಮಲೆಗೆ ಡಬ್ಬಾ ಕಳಿಸಿದಿಯೇನು'

'ಇಲ್ಲ ಉಪವಾಸ ಹಾಕಿದ್ದೇನೆ. ಏನು ಒಂದು ದಿನ ಉಪವಾಸವಿದ್ದರೆ ?' ಶಾರದೆ ಸಿಟ್ಟಿನಿಂದ ಕೊಟ್ಟ ಉತ್ತರ. ತಂದೆ ದಿನವೂ ಮಧ್ಯಾಹ್ನ ಕೇಳುವ ಪ್ರಶ್ನೆ, ಊಟ ತೆಗೆದುಕೊಂಡು ಹೋಗುತ್ತಿದ್ದ ಡಬ್ಬಾ ವಾಲ, ಆ ಮನೆಯಂತೆ, ಲೆಮಿಂಗ್ಟನ್ ರಸ್ತೆಯಂತೆ, ಗಾಳಿಯಂತೆ, ಬೆಳಕಿನಂತೆ ನಿತ್ಯ ಸತ್ಯ ಎಂದು ತಿಳಿದಿದ್ದರೂ ಅವರು ಪ್ರೀತಿಯ ಮಗಳ ವಿಚಾರ ತೋರಿಸುತ್ತಿದ್ದ ಆದರ ಈ ರೀತಿ ಮಾತಿನಲ್ಲಿ ಪ್ರಕಟ ವಾಗುತ್ತಿತ್ತು.

ಮಗಳು ಹೇಳಿದುದು ಸುಳ್ಳೆಂದು ರಾಧಾಕೃಷ್ಣಯ್ಯನಿಗೆ ಗೊತ್ತು. ಅವರು ಮತ್ತೆ ಮಾತನಾಡದೆ ಹೋಗಿ ತಮ್ಮ ಮಂಚದಮೇಲೊರಗಿದರು.

ಶಾರದೆಯ ಹೊಟ್ಟೆ ಹಸಿದಿತ್ತು. ಆದರೆ ಊಟ ಮಾಡಲು ಮನಸ್ಸಾಗಲಿಲ್ಲ. ತಂದೆ ಉಂಡ ಬಟ್ಟಲನ್ನು ತೊಳೆದಿರಿಸಿ, ವೀಳ್ಯದೆಲೆಯ ತಟ್ಟೆಯನ್ನು ತಂದು ಅವರ ಮುಂದಿರಿಸಿದವಳು ಮಾತನಾಡದೆ ಬಾಗಿಲು ತೆರೆದುಕೊಂಡು ಬಾಲ್ಕನಿಗೆ ಬಂದಳು. ಬೆಳಿಗ್ಗೆ ನಿಂತಿದ್ದ ಜಾಗದಲ್ಲೇ ದಂಡೆಗೊರಗಿ ನಿಂತಳು.

ಕಮಲ ! ಕಮಲ ! ಕಮಲ !

ಅವಳೊಬ್ಬಳೇ ಈಗ ಅಪ್ಪನ ಬಾಳಿನ ಧೃವತಾರೆ. ತನಗೆ ಅಲ್ಲಿ ಸ್ಥಾನವೇ ಇಲ್ಲ. ಒಪ್ಪಿದ ಗಂಡನ್ನು ಕೈಹಿಡಿದುದರ ಪ್ರಾಯಶ್ಚಿತ್ತ. ಅಲ್ಲ. ಅವರಿಗೊದಗಿದ ವಿಪತ್ತಿನಿಂದಾಗಿ ತಾನು ಅನುಭವಿಸಬೇಕಾದ ಪ್ರಾಯಶ್ಚಿತ್ತ. ಆದರೆ, ಆದರೆ... ....

ತನ್ನ ಹೊಟ್ಟೆಯಲ್ಲಿ ಬೆಳೆಯುವ ಜೀವ ಏನು ತಪ್ಪು ಮಾಡಿದೆಯೆಂದು ಅದರ ಮೇಲೆ ಈ ರೀತಿಯ ದ್ವೇಷ ?

ಶಾರದೆಗೆ ತುಂಬ ದುಃಖವಾಯಿತು.

ತಿಂಗಳ ಹಿಂದೆ ಒಂದು ಬೆಳಗ್ಗೆ ನಡೆದಿದ್ದ ಘಟನೆ. ತಂಗಿ ಆಡಿದ್ದ ಮಾತು.

ಕಮಲ ಆಫೀಸಿಗೆ ಹೊರಡುವ ಅವಸರದಲ್ಲಿ ಸ್ನಾನ ತೀರಿಸಲೆಂದು ಬಾಗಲಿಕ್ಕಿಕೊಂಡು ಅಡಿಗೆಯ ಮನೆಯ ನಳದ ಬಳಿಯಿದ್ದಳು. ಸ್ನಾನ ತೀರಿಸುವವರೆಗೂ ಅಂಗವಸ್ತ್ರ ಮರೆತಿರುವೆನೆಂದು ಆಕೆಗೆ ತಿಳಿದಿರಲಿಲ್ಲ. ನೆನಪಾಗಿ ಈಚೆಯ ಕೋಣೆಯಲ್ಲಿದ್ದ ಶಾರದೆಯೊಡನೆ 'ಟವಲ್ ಬಿಸಾಡೆ, ಅಕ್ಕಾ' ಎಂದು ಹೇಳಿದಾಗ ಕುಳಿತು ಏನೋ ಕಸೂತಿಯ ಕೆಲಸದಲ್ಲಿದ್ದ ಶಾರದೆ ಏಳಲು ಯತ್ನಿಸಿದಳು. ಆದರೆ ಕೂಡಲೇ ಏಳಲಾಗಲಿಲ್ಲ. ಹೊಟ್ಟೆಯ ಪಕ್ಕದಲ್ಲಿ ಏನೋ ನೋವು ಬಂದದರಿಂದ ಏಳಲು ತುಸು ತಡವಾಯಿತು. ಅಷ್ಟಕ್ಕೇ ಕೂಗಿಕೊಂಡಳು 'ತಡವಾಯಿತು ಬೇಗ ಕೊಡೇ' ಎಂದು ಕೇಳಿದ ಕಮಲ 'ಯಾಕೋ ಹೊಟ್ಟೇ ನೋಯುತ್ತಿದೆ. ಸ್ವಲ್ಪ ತಡಿಯೇ' ಎಂದ ಅಕ್ಕನ ಮಾತಿಗೆ ಯಾವ ರೀತಿ ಉತ್ತರಿಸಿದ್ದಳು !

'ರೊಮಾನ್ಸ್ ಕೊಡುವುದು ಕೊನೆಗೆ ನೋವೆ ಅಕ್ಕ' ಎಂದೂ. ಕಮಲೆಯ ಕೆನ್ನೆಗೆ ಎರಡೇಟು ಬಿಗಿಯಬೇಕೆಂದು ಶಾರದೆಗೆ ಮನಸ್ಸಾಗಿತ್ತು. ಆದರೆ ಅದರ ವಿಪರೀತ ಪರಿಣಾಮಗಳನ್ನು ಆಕೆ ಅರಿತಿದ್ದುದರಿಂದ ಸಂಯಮ ಸಿದ್ಧವಾಗಿತ್ತು.

ಈಗ ಅದು ನೆನಪಾಗುತ್ತಿದೆ.

ಒಬ್ಬಳೇ ಒಡಹುಟ್ಟಿದ ತಂಗಿ. ಇನ್ನೊಬ್ಬರು ಪೂಜ್ಯ ತಂದೆ–ಇಬ್ಬರಿಗೂ ಜೇಡವಾಗಿದೆ ಈ ಹೊಸ ಜೀವ.

ಕೈಹಿಡಿದ ಗಂಡ ಈಗ ರೋಗಿ 'ತಪ್ಪಾಯಿತು ಶಾರದಾ........' ಎಂದ ಸೋತ ಜೀವ.

ಅಳುವುದೆಂದರೇನೆಂದು ತಿಳಿದಿರದ ಶಾರದೆಗೆ ಈಗ ಮಾತ್ರ ಕಣ್ಣೀರು ತಡೆಯುಲಾಗಲಿಲ್ಲ. 'ಹೇಗಾದರೂ, ಒಮ್ಮೆ ಹೊತ್ತ ಜೀವ ಸುಖವಾಗಿ ಭೂಮಿಗಿಳಿದಿದ್ದರೆ ಬೇಡಿ ಕಾಡಿ, ಎಲ್ಲಾದರೂ ನೌಕರಿ ದೊರಕಿಸಿಕೊಂಡು ಬಾಳುವೆ ನಡೆಸುತ್ತಿದ್ದೆ'

ಎಂದು ಯೋಚಿಸಿದ ಶಾರದೆಗೆ ಹೊರಗೆ ಬಾಲ್ಕನಿಯಲ್ಲಿ ನಿಲ್ಲಲಾಗಲಿಲ್ಲ. ಒಳಗೆ ಬಂದಾಗ, ಅಪ್ಪನ ತನಕ ಊಟ ಮಾಡದೆ ಹೊರಗೇ ನಿಂತಿದ್ದ ಮಗಳು ಏನು ಮಾಡು ತ್ತಿದ್ದಾಳೆ, ಎಂದು ಕಂಗಾಲಾಗಿದ್ದ ರಾಧಾಕೃಷ್ಣಯ್ಯನಿಗೆ ಅವಳ ಮುಖ ಕಂಡು ಗಾಬರಿಯಾಯಿತು.

ಶಾರದೆ ಅಳುವುದನ್ನು ಅವರು ಕಂಡಿದ್ದುದೇ ಕಡಿಮೆ. ಆದರೆ ಆಕೆ ಅಳುವಾಗ ಅವರ ಧೈರ್ಯವೆಲ್ಲ ಕುಸಿಯುತ್ತಿತ್ತು. ಎದ್ದು ಬಂದು ಒಳಗೆ ಕುಳಿತಿದ್ದ ಮಗಳ ಬಳಿಯೇ ಕುಳಿತು ಅವಳ ತಲೆಯನ್ನು ನೇವರಿಸುತ್ತ ಹೇಳಿದರು. 'ನನಗೆ ಬುದ್ಧಿ ಸರಿಯಿಲ್ಲ ಶಾರದಾ, ಬುದ್ಧಿ ಸರಿಯಿಲ್ಲ. ನೀನು ಅಳಬಾರದು. ಮೋಹನನಿಗೆ ಗುಣ ವಾಗುತ್ತದೆ. ನಾನು ಇವೊತ್ತು ಸಂಜೆ ಹೋಗಿ ನೋಡಿಕೊಂಡು ಬರುತ್ತೇನೆ. ನೀನು ಇದಕ್ಕೆಲ್ಲ ಅಳಬಾರದು. ನೋಡು. ಪಾಪ, ಕಮಲಾ.........ಅಷ್ಟು ಸಣ್ಣ ಹುಡುಗಿ, ಎಷ್ಟೆಲ್ಲ ಜನರಿಗೋಸ್ಕರ ಕಷ್ಟ ಪಡುತ್ತಾಳೆ.'

ಆ ರೀತಿಯ ಸಂತಯಿಸುವಿಕೆಯಲ್ಲಿಯೂ ಕಿರಿ ಮಗಳ ಕುರಿತಾದ ಅವರ ಪ್ರಕಟವಾಗದೆ ಇರಲಿಲ್ಲ.

ತಂದೆಯ ಒತ್ತಾಯಕ್ಕಾಗಿ ಶಾರದೆ ಊಟ ಮಾಡಿ ಮಲಗಿದಳು. ಮಲಗುವ ಮೊದಲು ತನ್ನ ಔಷಧಿಯ ಬಾಟ್ಲಿಯ ಕಡೆ ದೃಷ್ಟಿ ಹೊರಳಿದಾಗ 'ಯಾಕೆ ಈ ಔಷಧಿಯೆಲ್ಲ? ಈ ಜೀವವೇ ಹೇಗಾದರೂ ಹೋಗಬಾರದೆ?' ಎಂದು ಒಂದು ಕ್ಷಣ ತೋರಿದರೂ, 'ಇಲ್ಲ! ನನ್ನ ಮಗುವಿನ ಕೊಲೆ ಯಾರಿಂದಲೂ ಆಗಗೊಡುವುದಿಲ್ಲ' ಎನ್ನುವ ನಿಶ್ಚಯ ಮತ್ತೆ ಮನಸ್ಸಿನಲ್ಲಿ ಮೂಡಿತು. ಔಷಧಿ ಸೇವಿಸಿ ಮಲಗಿದ ಶಾರದೆ ಯನ್ನು ಸಂಜೆ ಎಚ್ಚರಿಸಿದುದು ರಾಧಾಕೃಷ್ಣಯ್ಯನೇ.

ಚಾ ಕುಡಿದು ಆಸ್ಪತ್ರೆಗಾಗಿ ಹೊರಟು ನಿಂತ ರಾಧಾಕೃಷ್ಣಯ್ಯ ಮಗಳನ್ನು ಪ್ರೀತಿಯಿಂದಲೇ ಮಾತನಾಡಿಸಿದರು. ತಂದೆಯ ಸ್ವಭಾವದಲ್ಲಿ ಕ್ಷಣಕ್ಕೊಮ್ಮೆ ಆಗು ತ್ತಿದ್ದ ಪರಿವರ್ತನೆ ಶಾರದೆಗೆ ತಿಳಿದಿದ್ದರೂ, ಅವರು ಸಂತೋಷದಿಂದಿರುವ ಸಂದರ್ಭ ವನ್ನೇ ಉಪಯೋಗಿಸಿಕೊಳ್ಳಲೆಂದು ಅವರೊಡನೆ ಕೇಳಿದಳು.

'ಅಪ್ಪಾ! ಹೋಗುವಾಗಲಾದರೂ, ಬರುವಾಗಲಾದರೂ, ಸಾಂತಾಕ್ರೂಜ್ ನಲ್ಲಿಳಿದು ಬರುವುದು ಸಾಧ್ಯವೇ?'

'ಓಹೋ! ಅದಕ್ಕೇನಂತೆ ಯಾಕೆ?'

'ಅವರ ಮಾವ ಊರಿನಿಂದ ಸ್ವಲ್ಪ ಹಣ ಕಳುಹಿಸುವರೆಂದು ತೋರುತ್ತದೆ. "ವಕೋಲಾ"ದಲ್ಲಿ "ಅವರ" ತಂಗಿಯ ಮನೆಯಲ್ಲಿ ವಿಚಾರಿಸಿ, ಸಿಕ್ಕಿದರೆ ಆ ಹಣ

ತಂದರೆ ಒಳ್ಳೆಯದು. ನಾಡಿದ್ದು ಶುಕ್ರವಾರ "ಸ್ಟ್ರೆಪ್ಟೊಮ್ಯಾಸಿನ್" ತೆಗೆಸಿ ಕಳಿಸಿ ಕೊಡಬೇಕು.'

'ಖಂಡಿತ ಹೋಗುತ್ತೇನೆ' ಎಂದು ರಾಧಾಕೃಷ್ಣಯ್ಯ ಮನೆಯಿಂದ ಹೊರಬಿದ್ದರು.

ತಂದೆ ಹೊರಟು ಹೋದಮೇಲೆ ಶಾರದೆ ಮತ್ತೆ ಮಂಚದಮೇಲೆ ಬಿದ್ದುಕೊಂಡು ಯೋಚಿಸತೊಡಗಿದಳು.

'ಎರಡು ತಿಂಗಳು ಈಗ ಅನುಭವಿಸಿದ ಕಷ್ಟ ಇನ್ನು ಮೂರು ನಾಲ್ಕು ತಿಂಗಳು ಇದೇ ರೀತಿಯ ಒದ್ದಾಟ, ಹೇಗಾದರೂ ಸುಖರೂಪದ ಬಿಡುಗಡೆ ದೊರಕಿದರೆ! ಅಷ್ಟರೊಳಗೆ ಗುಣಮುಖರಾಗಿ "ಅವರು" ಮನೆಗೆ, ದುಡಿಮೆಗೆ ಮರಳುವಂತಾದರೆ.... ಉಪವಾಸ ಬೀಳದೆ ಇರುವಷ್ಟು ಸ್ವತಂತ್ರ ಉತ್ಪನ್ನ ದೊರಕುವಂತಾದರೆ.... ...ಆಗ ಅಪ್ಪನೊಡನೆ ಹೇಳುವುದಿಷ್ಟೆ: 'ನೀವು ಕಮಲೆಯ ಮದುವೆ ಮಾಡಿಸಿ ಅಪ್ಪ, ನಮ್ಮಷ್ಟಕ್ಕೆ ನಾವು ಇರುತ್ತೇವೆ' ಎಂದು.

ಸಂಜೆಯಾಗುತ್ತಿದ್ದಂತೆ ಶಾರದೆ ಹಲವುಬಾರಿ ಬಾಲ್ಕನಿಗೆ ಬಂದುಹೋದಳು. ಬೀದಿಯಲ್ಲಿ ವಾಹನ ಸಂಚಾರ ಹೆಚ್ಚಿತ್ತು. ಜನದಟ್ಟಣೆಯೂ ಹೆಚ್ಚುತ್ತಿತ್ತು. ಕಮಲ ಪ್ರಾಯಶಃ ಸೆನೆಟೋರಿಯಮ್‌ಗೆ ಹೋಗಿರಬೇಕು; ಬೇಗ ಬರಲಾರಳು, ಎಂದು ತಿಳಿದು ಶಾರದೆ ಕೊರೆಗಾಂವ್‌ಕರಳ ಮನೆಯಲ್ಲಿ ತುಸು ಹೊತ್ತು ಇದ್ದು ಮನೆಗೆ ಬಂದಳು.

'ಅಪ್ಪ ಬರಲು ಇನ್ನೂ ತಡವಾಗಬಹುದು. ಅಡಿಗೆಯ ಸಿದ್ಧತೆ ನಡೆಸಬೇಕು' ಎಂದು ದೀಪ ಹಚ್ಚಿ, ಸ್ಟವ್ ಹಚ್ಚಲು ತೊಡಗಿದಾಗ ಹೊರಗಿನಿಂದ ಬಾಗಿಲ ಸದ್ದು ಕೇಳಿಸಿತು–ಬಾಗಿಲು ಒಡೆಯುವದೇನೋ ಎಂಬಷ್ಟು ಗಟ್ಟಿಯಾಗಿ.

'ಯಾರಿರಬಹುದು?' ಎಂದು ಓಡಿ ಬಂದು ಬಾಗಿಲು ತೆರೆದ ಶಾರದೆ ಇದಿರು ಕಂಡ ದೃಶ್ಯದಿಂದ ಕಂಗಾಲಾಗಿ ಹೋದಳು.

ಬಲಗೈಯಿಂದ ಕಮಲೆಯ ಜಡೆಯನ್ನು ಹಿಡಿದಿದ್ದ ತಂದೆ ಅವಳನ್ನು ಮನೆಯೊಳಗೆ ನೂಕುತ್ತಿದ್ದರು. ಒಳಗೆ ಬಂದವಳೇ ಕಮಲೆ ಚಪ್ಪಲಿಗಳನ್ನು ದೂಡಿ, ತನ್ನ 'ವ್ಯಾನಿಟಿ ಬ್ಯಾಗ'ನ್ನು ಮಂಚದ ಮೇಲೊಗೆದು, ಅಲ್ಲೇ ಕುಕ್ಕರಿಸುವವಳು. ಆದರೆ ತಂದೆಯ ಹಿಡಿತ ಸಡಿಲಾಗಿರಲಿಲ್ಲ.

ಕೆಂಪೇರಿದ ಮುಖ. ಇಡೀ ಜಗತ್ತನ್ನೇ ದ್ವೇಷಿಸುವಂತೆ ಕಿಡಿ ಕಾರುತ್ತಿದ್ದ ಕಣ್ಣುಗಳು. ತನ್ನ ಪ್ರೀತಿಯ ಮಗಳನ್ನೇ ರಾಕ್ಷಸಿಯೆಂಬಂತೆ ನೋಡುತ್ತಿದ್ದ ತಂದೆ. ಶಾರದೆ ಆಕೆಯ ಜೀವಮಾನದಲ್ಲೇ ಆ ರೀತಿ ಹೆದರಿರಲಿಲ್ಲ. ಬಾಗಿಲು ಮುಚ್ಚಿಕೊಂಡ ಬಳಿಗೂ ಮಾತನಾಡುವ ಧೈರ್ಯ ಉಂಟಾಗಲಿಲ್ಲ.

ರಾಧಾಕೃಷ್ಣಯ್ಯನೇ ಮಾತನಾಡಿದರು.

'ಹೇಳು. ಈಗ ಹೇಳು. ಮರ್ಯಾದೆಗೆಟ್ಟ ಹುಡುಗಿ. ನಿನಗೇನು ಕೆಲಸವಿತ್ತು ಸಾಂತಾಕ್ರೂಜ್‌ನಲ್ಲಿ ? ಯಾರ ಸಹವಾಸ ಮಾಡಿದ್ದೀ, ಹೇಳು. ಆ ಘಟಿಂಗ ಯಾರೆಂದು ಒಮ್ಮೆ ನೋಡಿಬಿಡುತ್ತೇನೆ.'

'ಅಕ್ಕಾ ! ಅಪ್ಪ ಕೊಲ್ಲುತ್ತಿದ್ದಾರೆ ಅಕ್ಕಾ; ಬಿಡಿಸೇ'— ಎಂದು ಕೂಗಿದ ಕಮಲೆಯ ಕಣ್ಣಲ್ಲಿ ನೀರು ತುಂಬಿತ್ತು, ವೇದನೆಯಿಂದ.

ಆಗ ಶಾರದೆಗೆ ಧೈರ್ಯ ಬಂತು. ತಂದೆಯ ಕೈಯನ್ನು ಬಿಡಿಸಲು ಪ್ರಯತ್ನಿಸಿದಾಗ ಕೈ ಮೈಗಳಲ್ಲಿ ಗಾಯಗಳಾದರೂ ಲೆಕ್ಕಿಸದೆ ಆಕೆ ಕಮಲೆಯನ್ನು ಎಳೆದು ತಂದೆಗೂ ಅವಳಿಗೂ ನಡುವೆ ನಿಂತಳು.

'ಏನಾಯಿತು ಅಪ್ಪಾ ! ಯಾಕಿಷ್ಟು ಸಿಟ್ಟು ?'

ಮಗಳ ಕೈಯಲ್ಲಿ ಆಗಿದ್ದ ಉಗುರಿನ ಗಾಯದಿಂದ ರಕ್ತ ಒಸರುತ್ತಿದ್ದುದನ್ನು ನೋಡಿದಾಗ ರಾಧಾಕೃಷ್ಣಯ್ಯನ ಸಿಟ್ಟು ಇಳಿಯಿತು. ನಿಂತಿದ್ದಲ್ಲೇ ಕುಸಿದುಬಿದ್ದರು. ಸದ್ದಿಲ್ಲದೆ ಅಳಲಾರಂಭಿಸಿದರು.

'ಏನಾಯಿತೆ ಕಮಲಾ ?' ಕೋಣೆಯ ಮೂಲೆಯಲ್ಲಿ ಕುಳಿತಿದ್ದ ಕಮಲೆ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. 'ಏನಾಯಿತು ಅಪ್ಪಾ' ಎಂಬ ಪ್ರಶ್ನೆಗೆ ಉತ್ತರ ಬರುವಂತಿರಲಿಲ್ಲ. ಕೋಣೆಯಲ್ಲೆಲ್ಲ ಮೂಕ ರೋದನ ವ್ಯಾಪಿಸಿತ್ತು. ಶಾರದೆಗೆ ಆಗಿದ್ದುದೇನೆಂಬುದನ್ನು ಊಹಿಸಲು ಹೆಚ್ಚು ಸಮಯ ಬೇಕಾಗಿರಲಿಲ್ಲ. ನಿಜವಾಗಿಯೂ ನಡೆದಿದ್ದುದಿಷ್ಟೆ.

ಮಗಳು ಹೇಳಿದ ಕೆಲಸ ತೀರಿಸಿ, ಹಣ ಸಿಗದೆ ನಿರಾಶರಾಗಿ, ಸಾಂತಾಕ್ರೂಜ್ ನಿಲ್ದಾಣಕ್ಕೆ ಬಂದಿದ್ದ ರಾಧಾಕೃಷ್ಣಯ್ಯ 'ಸೆನೆಟೋರಿಯಮ್'ಗೆ ಹೋಗಲು ಅಂಧೇರಿಯ ಗಾಡಿಗಾಗಿ ಕಾಯುತ್ತಿದ್ದರು. ಗಾಡಿ ಬಂದಾಗ, ಒಳಗೆ ಪ್ರವೇಶಿಸಲು ಅವರು ಮುಂದೆ ಬಂದಾಗ, ತಾನು ಪ್ರವೇಶಿಸಲಿದ್ದ ಡಬ್ಬಿಯಿಂದಲೇ ನಗುನಗುತ್ತ ಇಳಿದ ಕಮಲೆಯನ್ನು ನೋಡಿದಾಗ ಅವರಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಜೊತೆಗೇ ಗಾಡಿಯಿಂದಿಳಿದ ಯಾರಿಗೋ 'ಬ್ಯಾ ಬ್ಯಾ' ಎಂದು ವಂದಿಸಿ, ತಂದೆಯನ್ನು ಕಾಣದೇನೇ ಮುಂದಿನ ಹೆಂಗಸರ ಡಬ್ಬಿಯೊಳಗೆ ಪ್ರವೇಶಿಸಲು ಹೊರಟ ಕಮಲೆಯನ್ನು ರಾಧಾಕೃಷ್ಣಯ್ಯನ ಕೈಗಳು ತಡೆದು ನಿಲ್ಲಿಸಿದವು.

'ಎಲ್ಲಿಗೆ ?'

ಅನಿರೀಕ್ಷಿತವಾಗಿ, ಆ ಸ್ಥಳದಲ್ಲಿ ತಂದೆಯನ್ನು ಕಂಡಾಗ ಕಮಲೆಯಲ್ಲಿ ಪ್ರಸಂಗಾವಧಾನತೆ ಉಳಿಯಲಿಲ್ಲ. ಧೈರ್ಯ ಗಾಳಿಗೆ ಹಾರಿ ಹೋಯಿತು. ಗಾಡಿ ಹೊರಟಿತು.

'ಇಲ್ಲಿಗೇ ಅಪ್ಪಾ, ಅಂಧೇರಿಗೆ........ '

'ಅಂಧೇರಿಗೆ, ಹೌದು. ಸಾಂತಾಕ್ರೂಜ್‌ನಲಿ ಯಾಕೆ ಇಳಿದದ್ದು ?'

'ಗಾಡಿಯಲ್ಲಿ ತುಂಬ ಜನ. ಅದಕ್ಕೇ ಹೆಂಗಸರ........'

ಪ್ಲಾಟ್‌ಫಾರ್ಮಿನಲ್ಲೇ ಫಳೀರೆಂದು ಕಮಲೆಯ ಗೆನ್ನೆಗೊಂದು ಏಟು ಬಿತ್ತು. ಆಗಲೇ ಜನ ಸೇರಲಾರಂಭಿಸಿದರು. ಮತ್ತೆ ರಾಧಾಕೃಷ್ಣಯ್ಯ ಮಾತನಾಡಲಿಲ್ಲ. ಮಗಳ ಕೈ ಹಿಡಿದುಕೊಂಡೇ ಪ್ಲಾಟ್‌ಫಾರ್ಮ ಬದಲಿಸಿ, ಬೇರೆ ಗಾಡಿ ಹಿಡಿದು, ಮನೆಗೆ ಮರುಳುವವರೆಗೂ ಅವರು ಕಮಲೆಯೊಡನೆ ಮಾತಾಡಲಿಲ್ಲ.

ಆ ಸಹನಾತೀತ ಮೌನವನ್ನು ಭೇದಿಸಿಕೊಂಡು ಶಾರದೆಯ ಮಾತು ಬಂತು.

'ಯಾರೆ ಅದು, ಕಮಲಾ'

ಕಮಲೆ ಉತ್ತರಿಸಲಿಲ್ಲ. ಆಗ ಬಂತು ತಂದೆಯ ಅಬ್ಬರದ ದನಿ 'ಬೊಗುಳೇ!'

ಶಾರದೆಯ ಬಲಗೈ ತಂಗಿಯನ್ನು ಬಳಸಿತ್ತು. ಅಕ್ಕನ ಭುಜದ ಮೇಲೆ ಕಮಲೆಯ ತಲೆಯಿತ್ತು. ತಂದೆ ಗದರಿಸಿದಾಗ ಅಳು ದನಿಯಲ್ಲಿ ಉತ್ತರ ಬಂತು.

'ನಮ್ಮ ಆಫೀಸಿಗೆ ಹೊಸದಾಗಿ ಬಂದಿದ್ದಾರೆ ಅಕ್ಕಾ........ಲಾ ಕಾಲೇಜಿನಲ್ಲಿ ಕಲಿಯುತ್ತಿದ್ದಾರೆ........'

'ಇಷ್ಟೇನೆ.'

'ನಾನೇನೂ ಕೆಟ್ಟ ಕೆಲಸ ಮಾಡಿಲ್ಲ ಅಕ್ಕಾ.....ನಾಡಿದ್ದು ಭಾವನಿಗೆ "ಸ್ಪ್ರಿಪ್ಟ್ ಮ್ಯಾಸಿನ್" ಬೇಕೇ ಬೇಕು ಎಂದು ಹೇಳಿದ್ದಾರೆ. ನನ್ನ ಕೈಯಲ್ಲಿ ಒಂದು ಕಾಸಿಲ್ಲ. ಸಂಬಳವೆಲ್ಲ ಖರ್ಚಾಗಿದೆ. ಒಂದ್ಯೆವತ್ತು ರೂಪಾಯಿ ಇದ್ದರೆ ಕೊಡಿ, ಎಂದು ಕೇಳಿದೆ ಅವರ ಹತ್ತಿರ. ಅವರ ಕೈಯಲ್ಲಿರಲಿಲ್ಲ. ದಾದರಿನಲ್ಲಿ ಒಬ್ಬ ಸ್ನೇಹಿತರ ಹತ್ತಿರ ತೆಗೆದು ಕೊಡುತ್ತೇನೆ, ಎಂದರು. ತೆಗೆಸಿ ಕೊಟ್ಟರು. ದಾದರಿನಿಂದ ಅಂಧೇರಿಗೆ ಹೋಗುವಾಗ ಅವಸರದಲ್ಲಿ ಸರಿಯಾದ ಡಬ್ಬಿ ಸಿಗಲಿಲ್ಲ. ಹೀಗಾಗಿ ಒಟ್ಟಿಗೇ ಹೋದೆವು. ಸಾಂತಾಕ್ರೂಜ್‌ನಲ್ಲಿ ಅವರು ಇಳಿದಮೇಲೆ ನಾನು 'ಲೇಡೀಸ್' ಡಬ್ಬಿಗೆಂದು ಹೋಗುವಾಗ ಅಪ್ಪ........'

ರಾಧಾಕೃಷ್ಣಯ್ಯ ಬಾಗಿಲುತೆರೆದು ಹೊರಗೆ ಹೋದರು. ಶಾರದೆಯ ಹಿಡಿತ ಬಿಗಿಯಾಗುತ್ತಿತ್ತು. ಸಾವಿರ ಚೇಳು ಕುಟುಕಿದ ವೇದನೆಯಾಯಿತು ಅವಳಿಗೆ. ತಂಗಿಯಮಾತಿನಲ್ಲಿ ಏನಾದರೂ ಸುಳ್ಳಿದೆಯೇ ? ಎಂದು ತಿಳಿಯಲು ಅವಳ ಮುಖ

ವನ್ನೇ ಮತ್ತೆ ಮತ್ತೆ ಪರೀಕ್ಷಿಸುವಂತೆ ನೋಡಿದಳು. ಆ ನಿಷ್ಕಲ್ಮಷ ಮುಖ ಸುಳ್ಳಾಡು ತ್ತಿರಲಿಲ್ಲವೆಂದು ಖಚಿತವಾದಾಗ ಶಾರದೆಯ ಕಣ್ಣು ತುಂಬಲಾರಂಭಿಸಿದವು.

ತಂಗಿಯನ್ನು ಅಪ್ಪಿಕೊಂಡು, ಅವಳ ಕೇಶರಾಶಿಯಲ್ಲಿ ತನ್ನ ಮುಖವನ್ನು ಹುದುಗಿಸಿಕೊಂಡು, ಕಣ್ಣೀರಿಳಿಸುತ್ತಲೇ ಶಾರದೆ ತಂಗಿಯ ಬೆನ್ನನ್ನೇ ಸವರುತ್ತಾ ಹೇಳಿದಳು.

'ಇಷ್ಟೇನೇ, ಕಮಲಾ ಇಷ್ಟೇನೇ.'

—ವ್ಯಾಸರಾಯ ಬಲ್ಲಾಳ

# ಪೂವಮ್ಮ

ಮಾದಿಹಳ್ಳ ಸಲಿಲವಾಗಿ ಹರಿಯುತ್ತಿತ್ತು. ಶ್ರಾವಣ ಸಮೀರ ಸ್ವಚ್ಛಂದದಿಂದ ಬೀಸುತ್ತಿತ್ತು. ಖಗ ಕೂಜನ ಸುತ್ತಣ ಸೃಷ್ಟಿಯನ್ನು ತಬ್ಬಿ ತಳ್ಕೈಸುತ್ತಿತ್ತು. ಭೂಮಿತಾಯಿಗೆ ಆನಂದವೇ ಆನಂದ !

ನಮ್ಮೂರ ಕೆರೆಯಂಗಳದಲ್ಲಿ ಸಂತೆ ಇಳಿದಿತ್ತು. ಅಂಗಳದ ಮಧ್ಯದಲ್ಲಿ ಹುಡುಗೆಯರ ಗುಂಪೊಂದು ನೆರೆದಿತ್ತು. ದಣಿದ ಸೂರ್ಯ ತಾಯಮಡಿಲನ್ನು ಸೇರುತ್ತಿರುವದನ್ನು ಅವರ ಗಮನಕ್ಕೆ ತಂದುಕೊಂಡೇ ಇರಲಿಲ್ಲ. ಆಡುವ ಆಟದಲ್ಲಿ ಅವರೆಲ್ಲ ಕರಗಿಹೋಗಿದ್ದರು. ಅಲ್ಲಿ ಸೂರ್ಯ ಮುಳುಗಲಾರ; ಮೂಡಲಾರ, ಇರುಳು ಬಾರದು; ಬೆಳಗು ಅಳಿಯದು. ಅವರ ಪಾಲಿನ ಸೃಷ್ಟಿಯೇ ಬೇರೆ; ಬ್ರಹ್ಮನೇ ಬೇರೆ.

ಗೊಂಬೆಯ ಮದುವೆ ನಡೆದಿತ್ತು; ಹುಡಿಗೆಯನ್ನು ನೋಡಲು ವರನ ಕಡೆಯವರು ಬಂದರು. ವರನ ವರಮಾನವನ್ನು ಕೇಳುವಂತಿಲ್ಲ. ಅಪರೂಪ ಹುಡುಗ. ಹೊಲ-ಮನೆ, ಹಣ-ಕಾಸು, ಉಟ-ಊಡಿಗೆ ಯಾವುದಕ್ಕೂ ಕೊರತೆ ಇಲ್ಲ. ಚೆಲುವ. ಸಂಪನ್ನ, ಇನ್ನೇನು ಬೇಕು ? ವಧುವನ್ನು ಪರೀಕ್ಷಿಸುವುದಷ್ಟೆ ಬಾಕಿ.

ವಧುವೇನು ? ಅವಳೂ ಚೆಲುವಿ. ಸಂಪನ್ನೆ. ಕಸೂತಿ ಹಾಕಬಲ್ಲಳು. ರಂಗವಲ್ಲಿ ಹೊಯ್ಯಬಲ್ಲಳು. ನೀರು ಸೇದುವಳು. ಮನೆಯ ಕಸ ಮುಸುರೆ ಬೇಸರಿಲ್ಲದಂತೆ ಮಾಡುವಳು. ಅರಿವೆ ಹಸನುಗೆಯ್ಯುವದರಲ್ಲಿ ತುಂಬಾ ಜಾಣೆ. ಹೋಗಬರುವವರ ಆತಿಥ್ಯ ಚನ್ನಾಗಿ ನೋಡಿಕೊಳ್ಳುವಳು. ಮಾತು ಕಡಿಮೆ. ದುಡಿಮೆ ಹಸನು. ಇನ್ನೇನು ಬೇಕು ? ಇಷ್ಟೇ; ತಂದೆ ತಾಯಿಗಳು ಬಡವರು. ಗುಂಜಿ ಬಂಗಾರ ಇಡುವದಕ್ಕೂ ತ್ರಾಣವಿಲ್ಲ. ವಧುವಿಗೆ ಇಡುವದೂ ಬೇಡ. ವರನಿಗೆ ಕೊಡುವದೂ ಬೇಡ. ಮಂಗಲ ಸೂತ್ರದ ಮೇಲೆ ಕನ್ಯೆ ಹೋಗಲಿ ! ಮೊದಲು ಹುಡುಗಿ ಪಸಂದು ಬರಬೇಕಲ್ಲವೇ ?

ಹೋ! ಹುಡಿಗಿ ಮನಸ್ಸಿಗೆ ಬಂದಳು. ಹುಡುಗನು ಮೊದಲೆ ಮನಸ್ಸಿಗೆ ಬಂದಿದ್ದಾನೆ. ಇನ್ನೇನು ಉಳಿಯಿತು ? ಕರಿಗಡಿಬಿನ ಊಟ ಆಗಿಯೇ ಬಿಡಲಿ. ಹೂಂ. ಓಣಿಯುವರಿಗೆಲ್ಲ ಆಮಂತ್ರಣ. ಎಲ್ಲಿರೂ ಬರಬೇಕು. ಕುಲದ ಬಳ್ಳಿ ಹಬ್ಬುವಂತೆ ಹಾರೈಸಬೇಕು.

ಚಪ್ಪರಬದನೆಯ ಪಲ್ಯ. ಮಣ್ಣಿನ ಸುರುಳಿಗಳೇ ಕಡಬು. ಹಳ್ಳದ ನೀರು ತುಪ್ಪ. ಗಂಜಿ, ಕಾರಿ, ಬೋರೆಯ ಗಿಡದ ಎಲೆಗಳ ಚೂರು ಚೂರು ಅನ್ನ. ಕಾಕಿಯ ರಸವೇ ಸಾರು. ನೀವು ಬರ್‍ರಿ. ನೀವು ಕೂಡಿರಿ. ಅವಳೂ ಬರಲಿ. ಆಕೆಯನ್ನೂ ಕರೆಯಿರಿ. ಒಟ್ಟನಲ್ಲಿ ಎಲ್ಲರೂ ಬರಬೇಕು. ಮದುವೆಯ ಒಪ್ಪಂದ ಎಲ್ಲರ ಸಮಕ್ಷಮದಲ್ಲಿ ಆಗಿ ಹೋಗಲಿ!

ಊಟ ಆಯಿತು. ಬೀಗರಿನ್ನು ಊರಿಗೆ ತಿರುಗಲಿ. ಮದುವೆ ಯಾವಾಗ ಇಡೋಣ ಬೀಗರೆ? ಯಾವಾಗಿಲ್ಲ. ನಾಳೆಯೇ. ವರನ ಮನೆಯಲ್ಲಿ ಅಡಿಗೆ ಮಾಡುವವರು ಯಾರೂ ಇಲ್ಲ. ಮುದಿಕಿಗೆ ಕಣ್ಣು ಕಾಣದು. ಎಷ್ಟು ಬೇಗ ಆದಷ್ಟು ಗುಣ. ಯುದ್ಧ ಕಾಲದ ಮದುವೆ. ತುಟಾಗ್ರತೆಯ ಮೇಲೆಯೇ ಸಾಗಿಸಬೇಕು. ನೀವಾದರೂ ಕಡಿಮೆ ಮಂದಿ ಕರೆದುಕೊಂಡು ಬರ್‍ರಿ. ಅಕ್ಕಿ ಕೊರತೆ. ಬೆಲ್ಲ ಸಾಲದು ಬೇಳೆ ನೀಗದು. ನೀರು ಅರಬು. ಅಕ್ಕಿಯ ಕಾಳಿನ ದಿನ ತುಸು ಜನ ಬರಬೇಕು. ಹುಡುಗಿಯ ಕೂಡಂತು ಮನೆಯವರು, ಹತ್ತಿರದವರು, ಓರಗಿತ್ತಿಯರು ಬರಲಿ. ಮದುವೆಯ ಮುಹೂರ್ತ ಸಮೀಪದಲ್ಲಿದೆ. ಅಯ್ಯನವರನ್ನು ಕೇಳಿ ನಿರ್ಧಾರ ಮಾಡಿದರಾಯಿತು. ಕೇಳಲಿಕ್ಕೇನು? ಅನುಕೂಲಕ್ಕೆ ಸರಿಯಾಗಿ ತಿಥಿ ಅಯ್ಯನವರು ತೆಗೆದು ಕೊಟ್ಟಾರು. ಇಬ್ಬರಿಗೂ ಆ ಸಮಯ ಸರಿ ಹೋದರೆ ತೀರಿತು ಅಲ್ಲವೇ?

ಹೌದೌದು. ಮದುವೆ ಬೇಗನೆ ಆಗಲಿ. ಆಗಿಯೇ ಬಿಡಲಿ. ಆಗಲಿ. ಏನು ನೋಡುತ್ತೀರಿ. ಮದುವೆಯ ಮುಹೂರ್ತ ಬಂತು. ಸೀರೆ ಕುಪ್ಪಸ ಬಂದಿವೆ. ವಧುವನ್ನು ಸಿಂಗರಿಸಿರಿ. ನೀನು, ಓ ಅವಳೆ, ಏ ಈಕೆ ಬರ್‍ರೆ ತಾಯಿ. ಮದುವಣಗಿತ್ತಿಯ ಸಿಂಗಾರ ಮಾಡಬರ್‍ರೆ ನಮ್ಮವ್ವ! ಚಂದ್ರಕಾಳಿಯ ಸೀರೆಗೆ ರೇಷ್ಮೆಯ ಕುಪ್ಪಸವೆ ಇರಲಿ. ಹೇಳಲು ಉದ್ದ ಬೇಡರೇ. ಕಟ್ಟೆ ಬಿಡರಿ. ಹೂ ಮುಡಿಸಿರಿ. ಹೂ ಸಾಕು. ಗಮುಗಮು ಬೇಡ. ಏನೂ ಅವೂ ಇಲ್ಲ ? ಇರಲಿ. ಬಂಡೆ ಕಟ್ಟಬಿಡಿರಿ. ವಧುವನ್ನು ಕರೆಯಿರಿ. ಏರಲಿ ಅವಳು ಬಂಡೆಯನ್ನು. ಏನು ಹಸಿರು ಶಾಲು ಸಿಕ್ಕಲಿಲ್ಲ ? ಅಲ್ಲೇ ಐತಲ್ಲ? ಏನು ಸಿಗಲಿಲ್ಲ? ಇದೇನು ಹೊರಟು ನಿಂತ ಹೊತ್ತಿನಲ್ಲಿ ಅವಲಕ್ಷಣ........?

ಗೊಂಬೆಯ ಆಟವಿಂತು ಜೋರಿನಿಂದ ನಡೆದಿತ್ತು. ಆರೇಳು ಹುಡುಗೆಯರು ತಮ್ಮ ತಮ್ಮೊಳಗೆ ಗಂಡು ಹೆಣ್ಣಿನ ಪಾತ್ರವಹಿಸಿ ತವರು ಗಂಡನ ಮನೆಯವರ ಪಕ್ಷ ಕಟ್ಟಿ ಕಟ್ಟಿಗೆಯ ಗೊಂಬೆಯಲ್ಲಿ ಜೀವ ತುಂಬಿ ಅದರೊಡನೆ ನಕ್ಕು ನಲಿದು ಉಲಿದು ಕೆಲೆದು ಬಾಹ್ಯವನ್ನೇ ಮರೆತು ಕಾರ್ಯ ಸಾಗಿಸಿದ್ದರು. ಕಾರ್ಯದಲ್ಲಿ ಏನೋ ಒಂದು ಕೊರತೆ ಬಂತು. ಆಗ ಒಬ್ಬರನ್ನೊಬ್ಬರು ಮಿಕಿ ಮಿಕಿ ನೋಡಿದರು. ಅತ್ತಿತ್ತ ನೋಡಿದರು.

ಆಗಸೇ ಒಡ್ಡು ಇಳಿದು ಹಳ್ಳದ ತೆಂಬ ಏರಿ ಸಮನಾದ ದಾರಿಯನ್ನು ಕೂಡಿ ಕೆರೆಯಂಗಳದ ಕಡೆಗೆ ಯಾರೋ ಬರುತ್ತಿರುವದನ್ನು ನೋಡಿದರು. ಎಲ್ಲರೂ ನೋಡಿದರು. ತಲೆಯ ಮೇಲೊಂದು ಅರಿವೆಯ ಬುಟ್ಟಿ. ಆ ಎಳೆವರಯದಲ್ಲಿ ಅಷ್ಟೊಂದು ಭಾರವಾದ ಮೊಟ್ಟೆ! ಇರಲಿ. ಒಗೆದಾಳು. ದೊಡ್ಡದಲ್ಲ. ಹೆಣ್ಣಿಗೆ ಅದೇನು ಒಜ್ಜೆ? ಮೊದಲು ಈ ಆಟದಲ್ಲಿ ಬಂದು ಸೇರಬೇಕು? ನೆರವಾಗಬೇಕು. ನಂತರ ಅರಿವೆ ಹಸನು. ಎಲ್ಲರಿಗೂ ಒಂದೊಂದು ಬಹಳವಲ್ಲ! ಹೌದು, ಹೊತ್ತಿಗೇನೆ ಬಂದಳು.

'ಪೂವಮ್ಮ! ಪೂವಮ್ಮ! ಪೂವಮ್ಮ!!'

'ಓ! ಓ! ಓ!!'

'ಬಾ, ಅಕ್ಕ. ಬಾ, ಚಿಗವ್ವ. ಬಾ, ಅತ್ತೆವ್ವ. ಮದುವೆ ನಿಂತೈತಿ.'

'ಅರಿವೆ ಒಗೆಯಬೇಕರೆ. ಬಹಳ ಅದಾವು.'

'ನಾವೆಲ್ಲ ಬರುತ್ತೇವವ್ವ. ಬಾ ಗೊಂಬೆಯ ಮದುವೆ ಮುಗಿಸಿ ಕೊಡು.'

'ಹೊತ್ತು ಮುಣುಗತೈತರೆ!'

'ಏಟು ಹೊತ್ತು ಬಾ ಪೂವಮ್ಮ.'

'ಅವ್ವ ಬೈಯುತ್ತಾಳರೆ.'

'ಅವ್ವ ಬೈಯದಿದ್ದರೆ ಇನ್ನಾರು ಬೈಯಬೇಕು.'

'ಇಲ್ಲರೆ. ಮನ್ಯಾಗ ಕೆಲಸ ಬಾಳೈತಿ.'

'ಕೆಲಸ ಯಾವಾಗಿಲ್ಲ? ಬಾ ಪೂವಮ್ಮ.'

'ಬರಲೇ.'

'ಹೂಂ ಹೂಂ.'

ಪೂವಮ್ಮ ಮೈಲಿಗೆಯ ಬಟ್ಟೆ ಇಳಿಸಿದಳು. ಹುಡುಗಿಯರ ಗುಂಪಿನಲ್ಲಿ ಬೆರೆತಳು ಅವರೆಲ್ಲರಿಗಿಂತ ಅವಳೇ ತುಸು ದೊಡ್ಡವಳು. ದೊಡ್ಡವಳು ಎಂದರೆ ನೀವು ಊಹಿಸುವಷ್ಟು ದೊಡ್ಡವಳಲ್ಲ! ಆಲದ ಮನೆಯವರ ಹುಡುಗಿ ಹಾಲಮ್ಮ ಇದ್ದಾಳಲ್ಲ! ಈಕೆ ಅವಳ ಓರಗಿತ್ತಿ. ಲಂಗ ಬಿಟ್ಟು ಬಹಳವಾದರೆ ಒಂದು ವರುಷವಾಗಿರಬೇಕು. ಕಂಟ್ರೋಲ್‌ದಟ್ಟಿ ಅಷ್ಟು ಸಣ್ಣದೂ ಅಗುವದಿಲ್ಲ. ಅಷ್ಟು ದೊಡ್ಡದೂ ಆಗುವದಿಲ್ಲ. ಕುರುಳಿಗೆ ಹೂವು ಇದ್ದರೂ ಸರಿ. ಇರದಿದ್ದರೂ ಸರಿ. ಕುಂಕುಮ ಮಾತ್ರಬೇಕು. ರಂಗವಲ್ಲಿ ಹೊಯ್ಯುವಳು. ಕಸೂತಿ ಇನ್ನೂ ಇಲ್ಲ. ಶಾಲೆಯ ಕೆಲಸವೇ ಸಾಕಷ್ಟು ಉಂಟು. ಮೊನ್ನೆ 'ಜ್ಞ' 'ಜ್ಞಾ' ಮುಗಿದು ಒಂದು ಎರಡು ಪ್ರಾರಂಭ. ಮನೆಯ ಕೆಲಸವನ್ನೆಲ್ಲ ಮುಗಿಸಿ ಪಾಠ ಸುರುವು ಮಾಡುವ ಹೊತ್ತಿಗೇ ತೂಗಡಿಕೆ! ದಣಿದ ದೇಹ. ದಡ್ಡು ಬಿದ್ದ ಪಾದ. ಒರಟು ಅಂಗೈ. ತೂಗುವ ರೆಪ್ಪೆ. ಪಾಠ ಅಲ್ಲಿಗೇ ಮುಕ್ತಾಯ.

ಸಂಗ್ರಹವಾದ ಪೂವಮ್ಮನ ಈ ದಿನಚರಿ ನೀವು ನೆನೆದುಕೊಂಡರೆ ರೇಖಾ ಚಿತ್ರವೊಂದು ನಿಮ್ಮ ಕಣ್ ಮುಂದೆ ಬಂದು ನಿಲ್ಲುವದು. ಅವಳೆ ಪೂವಮ್ಮ!

'ಪೂವಮ್ಮ! ಪೂವಮ್ಮ! ಎಂತಹ ಚಂದ ಹೆಸರು. ಮಲ್ಲೂರ ಮಕ್ಕಳು ಹೀಗೇನೆ' ಎಂದುಕೊಳ್ಳುವಿರಿ ನೀವು. ಸತ್ಯ ನಿಮ್ಮ ಅಭಿಪ್ರಾಯ. ಅವರೆಲ್ಲ ಹಾಗೇನೆ. ಹೂವಿನಂತಹ ಮಕ್ಕಳು. ಬಾಳಿನಲ್ಲಿ ಮಾತ್ಸರ್ಯವಿಲ್ಲ. ಕರುಬಿಲ್ಲ. ಆಸೆಯಿಲ್ಲ. ಅವಗುಣವಿಲ್ಲ. ಕಾಡ ಮಲ್ಲಿಗೆಯಂತೆ ಅವರ ಬದುಕು. ಸೃಷ್ಟಿ ಅರಳು ಎಂದಾಗ ಅರಳುವರು. ಅಡಗು ಎಂದಾಗ ಅಡಗುವರು. ಬಾಡಿದ ಹೂ ಭೂಮಿಯಮೇಲೆ ಬಿದ್ದಂದು ಲೋಕ ಅವರನ್ನು ಗುರುತಿಸಲಿ ಬಿಡಲಿ. ಅಷ್ಟೇಕೆ? ಗುರುತಿಸಬೇಕೆಂಬ ಅಭಿಲಾಷೆ ಅವರ ಕನಸು ಮನಸ್ಸಿನಲ್ಲಿಯೂ ಸುಳಿದಾಡದು!

ಪೂವಮ್ಮ ಹಾಗೆ. ಅವಳ ಬಳಗವನ್ನು ಈಗಾಗಲೇ ನೀವು ಅರಿತುಕೊಂಡಿರ ಬೇಕು. ಇನ್ನೂ ಸಣ್ಣವರು. ನೋಟ ಹಕ್ಕಿಯಂತೆ. ಅಂಗೈ ಅರಳುಮಲ್ಲಿಗೆ ಯಂತೆ. ಪಾದ ನೊರೆಯಂತೆ. ಅಪ್ಪ ಕರೆದರೆ ಮನೆ; ಇಲ್ಲದಿದ್ದರೆ ಅಂಗಳ. ತಾಯಿ ಕರೆದರೆ ಅನ್ನ. ಇಲ್ಲದಿದ್ದರೆ ಆಟ. ಅಂತಹ ಕಾಲ ಎಲ್ಲರ ಬಾಳಿನಲ್ಲಿಯೂ ಒಮ್ಮೆ ಬರುತ್ತದೆ. ಒಮ್ಮೆ ಹೋದರೆ ಆ ಕಾಲ ಬಾರದು!

ಪೂವಮ್ಮ ಗೊಂಬೆಯ ಮದುವೆಗೆ ನಿಂತಳು. ಮದುವೆಯಲ್ಲಿ ತುಸು ಅವ್ಯವಸ್ಥೆ ನೆಲೆಗೊಂಡಿತ್ತು. ಹೊಂದಿಕೆ ಇಲ್ಲ. ಹದನಿಲ್ಲ. ಹಿರಿಯರಿಲ್ಲದ ಮನೆಯೇ ಹಾಗೆ. ಮೊದಲು ಮದುವಣಗಿತ್ತಿಯನ್ನು ಬಂಡೆಯಲ್ಲಿ ಕುಳ್ಳಿರಿಸಲು ಹವ ಣಿಸುತ್ತಾರೆ. ಹಂದರ ಸೇರುವ ಮುನ್ನ ಮೆರವಣಿಗೆ. ಇದಿರುಗೊಳ್ಳಲು ಬರುವರು. ತೌರಿನಿಂದ ಬಂದ ಅಡಿಗೆಯ ಸಾಮಾನಿನ ಪ್ರದರ್ಶನ ಆಗಬೇಕು. ಇದೇ ಏನು 'ಮಸೂಟ?' ನಕ್ಕಾರು. ಅಪಹಾಸ್ಯಕ್ಕೆ ಈಡಾಗಬೇಕಾದೀತು. ಸಂಡಿಗೆ, ಹಪ್ಪಳ, ಬುರುಬುರಿ, ಸುರಳೀಹೋಳಿಗೆ, ಕರಚೀಕಾಯಿ.........ಅವೆಲ್ಲ ಆಗಬೇಕು. ಡೌಲಿನಿಂದ ಆಗಬೇಕು. ಗಂಡಿನವರು ಬೆರಳು ಕಚ್ಚಿ ನೋಡಬೇಕು. ಮದುವೆ ಅಂದರೆ ಹಾಗೆ. ಹೆಣ್ಣು ಅಂದರೆ ಹಾಗೆ. ನಗುವಂತಾಗಬಾರದು. ಹೆಮ್ಮೆಯಿಂದ ನೋಡಬೇಕು. ಅದು ಚಂದ ಹಸನು ಸಿಂಗಾರ.

ಪೂವಮ್ಮನ ಅಪ್ಪಣೆಯಂತೆ 'ಮಸೂಟ'ದ ವ್ಯವಸ್ಥೆ ಬಿಗುವಿನಿಂದಲೇ ಸಾಗಿತು. ಎಲ್ಲರಿಗೂ ಒಂದು ನಿಮಿಷದಲ್ಲಿ ಕಾರ್ಯದ ಹೊರೆ ಬೆನ್ನೇರಿ ಬಂತು. ಅಲ್ಲಿ ಹೂ. ಇಲ್ಲಿ ಕಾಯಿ. ಅಲ್ಲಿ ಮಿಡಿ. ಇಲ್ಲಿ ಹಣ್ಣು. ತರ್ರಿ. ಕೊಯ್ಯಿರಿ. ಚಿವುಟಿರಿ. ಕೂಡಿಸಿರಿ. ಮದುವೆ ಅಂದರೆ ಹಾಗೇನೆ. ಬಿಡುವಿಲ್ಲದಂತೆ ಕೆಲಸ. ಮನೆ ಕಟ್ಟಿಸಿ ನೋಡು; ಮದುವೆ ಮಾಡಿ ನೋಡು. ಆ ಮಾತು ಸುಳ್ಳಲ್ಲ. ಅನುಭವದಿಂದ

ಆಡಿದ ಮಾತು ಹೇಗೆ ಸುಳ್ಳಾದೀತು ? ಪ್ರತ್ಯಕ್ಷವಾಗಿಯೋ ನಡೆದ ಆ ಕಾರ್ಯವೇ ಪ್ರಮಾಣ.

ಸಾಕಷ್ಟು ಸಂಗ್ರಹ ಆಯಿತೆನ್ನಬೇಕು. ಇಷ್ಟು ಈ ಯುದ್ಧ ಕಾಲದಲ್ಲಿ ಯಾರು ಮಾಡುತ್ತಾರೆ ? ಅಕ್ಕಿ, ಬೇಳೆ, ಬೆಲ್ಲ—ಎಲ್ಲಾ ಕೂಡಿದಂತಾಯಿತು ಕರೆಯಿರಿ. ಅವಳು ಇನ್ನೇನೋ ಕೂಡಿಸುತ್ತಿದ್ದಾಳೆ. ಅಲ್ಲಿ ಆಕೆ ಏನೋ ಸಂಗ್ರಹಿಸುತ್ತಿದ್ದಾಳೆ. ಸಾಕಿನ್ನು. ಇಷ್ಟಕ್ಕೆ ನಿಲ್ಲಲಿ. ಮದುವೆ ಜರುಬಿನಿಂದ ನಡೆಯುತ್ತಿದೆ. ಎಲ್ಲರೂ ಬರಲಿ. ಕರೆಯಿರಿ. ಬಂದರೇನು ?

ಹಾ. ಅವಳು ಬಂದಳು. ಆಕೆ ಬಂದಳು. ಆಯಿತೇನು ? ಹೂಂ. ಎಲ್ಲರೂ ಬಂದರು. ಇನ್ನು ಮದುವೆ !

ಬಂಡಿ ಹೂಡಿರಿ. ಮದುವಣಗಿತ್ತಿ ಏರಲಿ. ಅವಳಿಗೇನು ಕೊರತೆ? ಏನು ಹಸಿರು ಶಾಲೆ, ಇಗೋ ! ಇನ್ನೇನು ? ಮಾಲೆಯೆ ? ಹೂ ತರಲು ಮರೆತಿರೇನು ? ಗಂಜಿಯ ಹೂ ಇಲ್ಲೇ ಇವೆ. ನಿಲ್ಲಿರಿ ತರುತ್ತೇನೆ.

ಪೂವಮ್ಮ ವಧುವಿಗೆ ಹೂದಿರಿಯಲು ಹೋದಳು. ಹತ್ತಿರದ ಕಂಟಿಯ ಕಡೆಗೆ ಓಡಿ ಹೋದಳು. ಮಂಗಲ ಸಮಯಕ್ಕೆ ಎಷ್ಟು ಬೇಗ ಬಂದು ಕೂಡಿದರೆ ಅಷ್ಟು ಒಳಿತು. ಎಂತಲೇ ಓಡಿ ಓಡಿ ಹೋದಳು ಪೂವಮ್ಮ !

ಸಂಜೆಯ ಸೂರ್ಯ ಅವಸರದಿಂದ ಇಳೆಗೆ ಇಳಿಯುತ್ತಿದ್ದ. ಹಕ್ಕಿಗಳು ಇನ್ನೂ ಸ್ವರಗೆಯ್ಯುತ್ತಿದ್ದವು. ದನಕರುಗಳ ಕೊರಲ ಗಂಟೆಯಲ್ಲಿ ಅವುಗಳ ಸರ ಬೆರೆತು ಕೆರೆಯಂಗಳದಲ್ಲಿ ನಡೆದ ಸನ್ನಿವೇಶಕ್ಕೆ ಶೋಭೆಯನ್ನು ತರುತ್ತಿತ್ತು !

ಬಳಗವೆಲ್ಲ ಪೂವಮ್ಮನ ಕಡೇಗೇ ನೋಡುತ್ತಿತ್ತು. ಪೂವಮ್ಮ ಸಾಗಿ ಬಿದ್ದ ಕಂಟಿಯ ಮೇಲಿನ ಟೊಂಗೆಯನ್ನು ಬಾಗಿಸಿ ಹೂ ಬಿಡಿಸುತ್ತಿದ್ದಳು.

ಗಾಳಿ ಅಕಸ್ಮಾತ್ತಾಗಿ ಜೋರನಿಂದ ಬೀಸಿತು. ಅವಳ ಕೈ ತಪ್ಪಿತು. ಕಂಟಿ ಬಂದು ಕಣ್ಣಿಗೆ ಬೀಸಿತು. ಮುಳ್ಳೊಂದು ಗೊಂಬೆಯನ್ನು ಸೇರಿತು.

ಪೂವಮ್ಮ 'ಹಾಯ್' ಎಂದು ಚೀರಿದಳು. ಮದುವೆ ಮಾಡುವದನ್ನು ಬಿಟ್ಟು ಎಲ್ಲರೂ ಓಡಿ ಬಂದರು. ಪೂವಮ್ಮನ ಕಣ್ಣಿನ ರೆಪ್ಪೆಗುಂಟ ದಳ ದಳ ನೀರು ಹರಿಯುತ್ತಿತ್ತು. ರೆಪ್ಪೆಯಲ್ಲಿ ಇನ್ನೂ ಮುಳ್ಳು ನಟ್ಟಿತ್ತು. ಅದು ಅಲ್ಲಿಯೇ ಮುರಿದು ನೆಲೆಯೂರಿ ನಿಂತಿತ್ತು. ಪೂವಮ್ಮ ಒದ್ದಾಡಿದಳು. ಚಡಪಡಿಸಿದಳು.

ಮದುವೆ ನಿಂತಿತು. ಕೆಲವರು ಪೂವಮ್ಮನಿಗೆ ಆಸರೆಯಾಗಿ ನಿಂತರು. ಕೆಲವರು ಅರಿವೆ ಹಿಂಡಿದರು.

ಎಲ್ಲರೂ ಮನೆ ಮುಟ್ಟುವ ಹೊತ್ತಿಗೆ ಕತ್ತಲು ಕವಿದಿತ್ತು. ಪೂವಮ್ಮನ ಕಣ್ಣಿನಲ್ಲಿ ಮಾತ್ರ ಇರುಳು ಇಳಿದು ಬಹಳ ಹೊತ್ತಾಗಿತ್ತು. ತಾಯಿ 'ಏಕೆ ತಡ ಪೂವೀ' ಎಂದಾಗ ಅವಳು 'ಅವ್ವಾ' ಎಂದು ಒದರಿದಳು. ಅತ್ತಳು.

ನಿಜ ಸಂಗತಿ ಗೊತ್ತಾದಾಗ ತಂದೆ ತಾಯಿಗಳಿಗೂ ಕಷ್ಟವಾಯಿತು. ಮಗಳು ಬೆಳೆದು ದೊಡ್ಡವಳಾಗುವಳು. ಇಷ್ಟಕ್ಕೆ ಮುಗಿಯಿತೇ ?

*    *    *    *    *    *

ತುಂಬಿದ ಬಿಂದಿಗೆಯನ್ನು ತಲೆಯ ಮೇಲಿಟ್ಟುಕೊಂಡು ಪೂವಮ್ಮ ಮನೆಯ ಬಾಗಿಲನ್ನು ಸೇರುವದರಲ್ಲಿದ್ದಳು. ಮನೆಯವರೆಗೆ ಅವಳು ಬಂದಿದ್ದರೂ ಕೂಡ ಮನಸ್ಸು ಮಾತ್ರ ಇನ್ನೂ ಕುಂಬಾರ ಬಾವಿಯ ಬಳಿಯಲ್ಲಿಯೇ ಸುಳಿದಾಡುತ್ತಿತ್ತು. ನೆರೆದ ಓರಗಿತ್ತಿಯರು ಪೂವಮ್ಮನನ್ನು ಕಂಡು ಪಿಸು ಪಿಸು ಮಾತನಾಡುತ್ತಿದ್ದರು. ಹುಳು ಹುಳು ಅವಳ ಮೊಗ ದಿಟ್ಟಿಸುತ್ತಿದ್ದರು. ನೋಟವನ್ನು ತೀಕ್ಷ್ಣವಾಗಿ ಚಾಚಿ ಅವಳ ಕಣ್ಣಿನಲ್ಲಿ ಕಣ್ಣಿಟ್ಟು ನೋಡುತ್ತಿದ್ದರು. ದೊಡ್ಡವಳಾಗಿ ಮೂರು ವರುಷ ತುಂಬುತ್ತ ಬಂದವು. ಇನ್ನೂ ಮನೆ ಬಿಟ್ಟಿಲ್ಲ. ಅದಕ್ಕೂ ಬೇಕು ಪುಣ್ಯ. ಇಲ್ಲ. ಪಾಪ ಅವಳೇನು ಮಾಡಿಯಾಳು ? ದೇವರಲ್ಲಿ ಇದನ್ನು ಬೇಡಿ ಬಂದಳೇ ? ಆಯಿತು ಹಿಂದಿನ ಜನುಮದ ಕೇಡು, ಬೆನ್ನು ಬಿಡಲಿಲ್ಲ. ನಸೀಬದಾಟ, ಕಣ್ಣೊಂದು ಚೆಂದಿದ್ದರೆ ಕೈ ಹಿಡಿಯಲು ಮೇಲೆ ಮೇಲೇರಿ ಬರುತ್ತಿದ್ದರು. ಮೊಗ, ತುಟಿ, ಕೆನ್ನೆ, ಒಂದೊಂದೂ ತಿದ್ದಿ ತೀಡಿದಂತೆ. ಕಲಾವಿದ ನಯವಾದ ಕುಂಚದಿಂದ ಬಣ್ಣ ಎಳೆದಂತೆ. ಒಂದರಲ್ಲಿ ಹೆಸರಿಡುವಂತಿಲ್ಲ. ಆದರೆ ಹಾಳು ನಸೀಬ. ಗಂಜಿಯ ಹೂ ಹೂಗಣ್ಣಿನವಳನ್ನು ಕಂಡು ಕರುಬಿತು. ಮುಳ್ಳು ಸೇರಿ ಕಣ್ಣ ಕೆಡಸಿತು. ಗೊಂಬೆಯಲ್ಲಿ ಹೂ ಕುಂತು ಚೆಲುವಿಯನ್ನು ಅಂದಗೆಡಿಸಿತು. ಗುಣವಂತಿಗೆ ಹೆಸರು ತಂದಿತು. ಇನ್ನೂ ನೋಡಬೇಕು. ದೈವ ತೆರೆದರೆ........ಇಲ್ಲ ಅದೂ ಮೀರುತ್ತ ಬಂತು. ಮೂರು ವರುಷ ಮನೆಯಲ್ಲಿ ಕುಳಿತ ಹೆಣ್ಣು; ಯಾರು ನೋಡಲು ಬಂದಾರು ? ಅರಳಿದ ಹೂ, ಕಳಿತ ಹಣ್ಣು, ನೆರೆತ ಹೆಣ್ಣು ಒಂದೇ ಒಂದು ದಿನ ಹೆಚ್ಚು ಕಡಿಮೆ ಆಗುವಂತಿಲ್ಲ. ಹೊತ್ತು ಬಂದಾಗ ತೂರಿಕೊಳ್ಳಬೇಕು. ಅಯ್ಯೋ ಪೂವಮ್ಮ ! ತಾಯಿ ತಂದೆಗಳಿಗೆ ಭಾರ, ಓಣಿಯವರಿಗೆ ಆಗದು, ಓರಗಿತ್ತಿಯರು ಸಹಿಸರು, ಛೀ, ಇನ್ನೂ ಬದುಕು ಹೊರಬೇಕೆ ?

ಬಾವಿಯ ಮೇಲೆ ಕೂಡಿದ ಹೆಣ್ಣುಗಳ ಕಂಗಳಲ್ಲಿ, ತುಟಿಯಲ್ಲಿ, ಮನದಲ್ಲಿ ಪೂವಮ್ಮನನ್ನು ಕುರಿತು ಈ ತೆರನಾಗಿ ಒಂದೊಂದು ವಿಚಾರ. ಪೂವಮ್ಮ ಯಾರಿಗೊ ಮಹತ್ತಾದ ಅನ್ಯಾಯ ಮಾಡಿದಂತೆ ಕೆಲವರ ನೋಟ. ಇನ್ನ್ಯಾವುದೊ ಪಾಪಗೆಯ್ದಂತೆ

ಮತ್ತಿನ್ನಿತರರ ದೃಷ್ಟಿ. ಹೊಲ್ಲದ ಅನ್ಯಾಯ ಪಾಪ, ಹಸುಗೂಸಿನ ಮೇಲೆ ಬಂದು ಬಿದ್ದಂತೆ ಕರುಣಾಜನಕವಾದ ನೋಟ ಮತ್ತಿನ್ನಿತರರದು. ನೀರು ಸೇದಿ ಸಿಂಬಿ ಸುತ್ತಿ, ತಲೆಯಮೇಲೆ ಬಿಂದಿಗಿಯನ್ನಿಟ್ಟುಕೊಂಡು ಮನೆಯ ಹೊಸ್ತಿಲಿಗೆ ಬರುವಷ್ಟರಲ್ಲಿ ಅವಳ ಜೀವ ಜಡವಾಗಿ ಹೋಗಿತ್ತು.

ಏನು ಮಾಡಲಿ ನಾನು ? ಅಕ್ಕಾ, ಅವ್ವಾ, ತಾಯೀ ನಾನು ಮಾಡಿದ್ದೇ ? ನನ್ನನಿಂತು ಏಕೆ ನೋಡುತ್ತೀರಿ ? ಏಕೆ ತಿರಸ್ಕಾರ ತೋರುತ್ತೀರಿ ? ನನಗೇಕೆ ನಿಮ್ಮ ಮರುಕ ? ಈ ನೋಟ ಬೇಡ; ಈ ಕರುಣೆ ಬೇಡ. ನನ್ನ ಪಾಲಿಗೆ ನನ್ನನ್ನು ಬಿಡಿರಿ ? ಪೂವಮ್ಮನ ಮನಸ್ಸು ಬಾವಿಯ ಮೇಲಿನ ಹೆಂಗಳಿಗೆ ಒಂದೇ ಸಮನೆ ಬೇಡಿಕೊಳ್ಳುತ್ತಿತ್ತು. ಅವರೆಲ್ಲ ಅವಳ ಬಿನ್ನಹ ಕೇಳಿ ನಸುನಗುತ್ತಿದ್ದರು. ಕಿಲ ಕಿಲ ನಗುತ್ತಿದ್ದರು. ಒಬ್ಬರನ್ನೊಬ್ಬರು ತೂಗಿ ತೂಗಿ ನಗುತ್ತಿದ್ದರು.

ಪೂವಮ್ಮ ಕೈ ಮುಂದೆ ಮಾಡಿ, ಬೇಡಿರೆ ತಾಯಿ ಹಾಗನ್ನ ಬೇಡಿರೆ ನಮ್ಮವ್ವ ಕೈ ಮುಗಿದು ಬೇಡಿಕೊಳ್ಳುತ್ತೇನೆ. ಇಗೋ ಸಾಕು ಮಾಡಿರಿ ಎಂದಳು. ಮನಸ್ಸಿನಲ್ಲಿಯೇ ಇಂತು ಹೋರಾಟ ನಡೆದಿದ್ದರೂ ಆ ಅವ್ಯಕ್ತ ಧ್ವನಿಗೆ ಜೋಡಣೆಯಾಗುವಂತೆ ಕೈಯನ್ನು ಮಾತ್ರ ಜೋಡಿಸಿದಳು.

ಹೊಸ್ತಿಲ ಹತ್ತಿರ ಬಂದ ಪೂವಮ್ಮ ಕೈ ಜೋಡಿಸಿದಳು. ಮನದಲ್ಲಿ ಬೇಡಿಕೊಂಡಳು. ಹೊಸ್ತಲ ದಾಟುವದರಲ್ಲಿದ್ದಳು, ಸಿಪ್ಪೆಯಮೇಲೆ ಕಾಲಿಟ್ಟಳು, ಜಾರಿದಳು, ದೊಪ್ಪನೆ ಬಿದ್ದಳು. ಧಡಂ ಎಂಬ ಸಪ್ಪಳಾಯಿತು. ಚೂರು ಚೂರಾದ ಬಿಂದಿಗೆಯಿಂದ ನೀರು ಹರಿದು ಹೋಗುತ್ತಿರುವ ಹೊತ್ತಿನಲ್ಲಿ ಒಳಗಿನಿಂದ ತಾಯಿ ಓಡಿ ಬಂದಳು ; ಹೊರಗಿನಿಂದ ಅಪ್ಪ ಬಂದ.

'ಪೂವೀ ನಿನ್ನ ಸಲುವಾಗಿ ಸಾಕಾಗಿ ಹೋಯಿತು.'

'ಸತ್ತು ಹೋಗಬಾರದಿತ್ತೇ, ಹೆಣ್ಣೆ ? '

'ಊರಲ್ಲೆಲ್ಲ ಅಪವಾದ ಕೇಳಿ ಮನೆಗೆ ಬಂದರೆ ಈ ಹಾಡು.'

'ಒಲೆಯ ಮುಂದೆ ಕುಳಿತು ಕಣ್ಣೀರು ಹಾಕುವದಷ್ಟೇ ಸಾಲದು. ಈ ಪಾಡು ಬೇರೆ.'

'ಎಲ್ಲಾದರೂ ದುಡಿದು ಉಣ್ಣುಹೋಗು.'

'ಯಾಕೆ ಬದುಕಿದ್ದೀ ಒಬ್ಬರಿಗೆ ಭಾರವಾಗಿ ಪೂವಿ.'

'ಇಲ್ಲ, ಅವ್ವ........'

'ಇಲ್ಲ, ಅಪ್ಪ........'

'ಕಾಲು ಜಾರಿತು. ಸಿಪ್ಪೆಯ ಮೇಲೆ ಕಾಲಿಟ್ಟೆ. ಜಾರಿದೆ. ಬಿದ್ದೆ. ನಿಮ್ಮನ್ನು ದುಃಖಕ್ಕೀಡು ಮಾಡಬೇಕೆಂದು ಹೀಗೆ ಮಾಡಬೇಕೆಂದು ಹೀಗೆ ಮಾಡುತ್ತೇನೆಯೇ ? ಎಂದಾದರೂ ಏನಾಡಿದೇನೇ ? ಎಲ್ಲಿಯಾದರೂ ತಪ್ಪಿದೇನೇ ಯಾಕೆ ನನ್ನನ್ನು ಬೈಯುತ್ತೀರಿ.'

ತಂದೆ ತಾಯಿಗಳು ಇದಿರು ಬದಿರಾಗಿ ನಿಂತು ಬೈಯುವದನ್ನು ಕಂಡು ಪೂವಮ್ಮ ಒಮ್ಮೆ ಉಪ್ಪುಗಡಲಲ್ಲಿ ಮುಳುಗಿ ಮೇಲಕ್ಕೆದ್ದಳು. ಅರಿವೆ ಹಿಂಡಿದಂತೆ ಆಗಿದ್ದಳು. ಒಂದೆರಡು ಮಾತನ್ನೇನೋ ಆಡಿದಳು. ಆದರೆ ಅದರ ಅರಿವೇ ಇರಲಿಲ್ಲ. ತಂದೆ ತಾಯಿಗಳಿಗೂ ಮಗಳಿಗೆ ಆಡಿದೆವೆಂಬುದು ಪ್ರಜ್ಞೆಯೇ ಇರಲಿಲ್ಲ. ಅಪವಾದದ ಕಿಚ್ಚು. ಮಗಳ ಹಾಳಾದ ಬಾಳನ್ನು ಕಂಡು ಸಂಕಟ. ಏನೋ ಆಡಿದರು. ಸಾತ್ವಿಕ ರೋಷ. ಪೂವಮ್ಮನಿಗೆ ಅವರಿದಿರು ನಿಲ್ಲುವಷ್ಟು ಶಕ್ತಿ ಇತ್ತೋ ಇಲ್ಲವೊ ಅಂತೂ ನಿಂತಳು ; ಬೇಡಿಕೊಂಡಳು. ಕ್ಷಮೆ ಕೋರಿದಳು.

ತಾಯಿ ಬಿಂದಿಗೆಯ ಚೂರು ಆರಿಸಿದಳು.

ಅಪ್ಪ ನೀರು ಗುಡಿಸಿದ.

ಮಗಳು ತಂದೆ ತಾಯಿಗಳ ಕೈಗೆ ನೀರು ಹಣಿಸಿದಳು. ಪಾಪ ವಿನಾಶಿನಿ ಗಂಗೆ ಅವರನ್ನು ಕ್ಷಮಿಸಿದಳು. ತಾಯಿ ಉಪ್ಪಿನಂತೆ. ತಂದೆ ನೆರಳಿನಂತೆ. ಮಗಳು ಮುತ್ತಿನಂತೆ. 'ಪಾಪಿಗಳ ಪಾಪವನ್ನು ತೊಳೆದ ಗಂಗೆಗೆ ಪಾಪಲೇಪನ ಹೇಗುಂಟಾಯಿತು ?'

* * * * * *

ಐದಾರು ತಾಸು ರಾತ್ರಿ. ಪೂವಮ್ಮ ಅಲ್ಲಿ ಮಲಗಿದ್ದಳು. ಒಡಹುಟ್ಟಿದವರು ಬದಿಯಲ್ಲಿ. ಅಲ್ಲೊಂದು ಚಿಮಣಿ. ಇಲ್ಲಿ ದನಕರು. ಈ ಕಡೆ ಕುಳ್ಳುಕಟ್ಟಿಗೆ. ಆ ಕಡೆ ಚೀಲ ಚಪಾಟಿ.

ಪಡಸಾಲೆಯ ಕಂಬಕ್ಕೆ ಆತುಕೊಂಡು ಕುಳಿತ ಪೂವಮ್ಮನ ಅಪ್ಪ ಇಲ್ಲಿ. ಕಣ್ಣಿಗೆ ನಿದ್ರೆಯೇ ಬಾರದು. ಗೋಡೆಗೆ ಬೆನ್ನು ಹಚ್ಚಿ ತಲೆಗೆ ಕೈಕೊಟ್ಟು ಯೋಚನೆಯಲ್ಲಿ ಮೂಡಿ ಮುಳುಗುವ ಪೂವಮ್ಮನ ತಾಯಿ ಅಲ್ಲಿ. ಜೀವನದಲ್ಲಿ ಅವಂಗೆ ಶಾಂತಿಯೇ ಇಲ್ಲ. ಮಗಳನ್ನು ಗೊತ್ತಿಗೆ ಹಚ್ಚಬೇಕು. ಹಡೆದೊಡಲು ಉರಿಯುತ್ತಿದೆ. ಎತ್ತಿದ ತೋಳು ಹರಿಯುತ್ತಿದೆ. ಮುದ್ದಿಟ್ಟ ಮೊಗ ಬತ್ತಿದೆ. ಪೂವಮ್ಮನ ತಂದೆ ತಾಯಿಗಳಿಗೆ ಸಮಾಧಾನವೇ ಬಾರದು. ಕುದಿವ ಮನಕ್ಕೆ ಎಷ್ಟು ತಣ್ಣೀರು ಹೊಯ್ದರೂ ಶಾಂತಿ ದೊರೆಯದು.

‘ ಈಗ ಏನು ಮಾಡಬೇಕು ಅಂತೀದಿ ? ’

‘ ಏನಿಲ್ಲ. ಹುಡುಕಾಡಿ ಬರ್ರಿ. ಇನ್ನೂ ನೋಡಿರಿ. ಇಷ್ಟಕ್ಕೆ ಕೈ ಕಟ್ಟಿಕೊಂಡು ಕುಳಿತರೆ ಹ್ಯಾಂಗ.’

‘ ಹ್ಯಾಂಗಿಲ್ಲ. ಎಂತಿಲ್ಲ. ಎಲ್ಲಾ ಊರು ತಿರುಗಿ ಬಂದದ್ದು ಗೊತ್ತಿಲ್ಲೇನು ?’

‘ ಇಲ್ಲ ಇನ್ನೂ ತಿರುಗಬೇಕು. ನಮ್ಮ ಕೆಲಸ.’

‘ ತಿರುಗಬೇಕು. ಬನ್ನೂರಲ್ಲಿ ಒಂದು ಮನೆಗೆ ಹೇಳಿ ಬಂದಿದ್ದೇನೆ. ನೋಡಬೇಕು.’

‘ ಹುಡುಗ ಹ್ಯಾಂಗ.’

‘ ಎಲ್ಲಾ ಚಲೊ. ಆದರೆ ಹುಡಿಗೆಯ ಕಣ್ಣಿಂದೇ ನನಗೆ ಚಿಂತೆ ’

‘ ಹೇಳೂನು. ಅರಿವೆ ಅಂಚಡಿ ಇಲ್ಲದೆ ಮಾಡಿಕೊಡೋನು ’

‘ ಸಾಧ್ಯ ಇದ್ದಷ್ಟು ಸರಿದು, ಕೈಲಾದಷ್ಟು ಕೊಟ್ಟರೂ ಬಂದೀತು. ಮೊದಲು ಒಪ್ಪಬೇಕಲ್ಲ ವರ ! ’

‘ ಮತ್ತೆಲ್ಲಾದರೂ ಈಗಲೇ ನೋಡಿ ಇಡಿರಿ. ಒಂದಕ್ಕೇ ನೆಚ್ಚಿಕೊಂಡು ಕೂಡುವಹಾಗಿಲ್ಲ.’

‘ ನನಗೂ ಗೊತ್ತಿದೆ. ಅಲ್ಲೆ ಇಲ್ಲೆ ನೋಡಿದ್ದೇನೆ. ಬನ್ನೀ ಕೊಪ್ಪದಲ್ಲಿ........’

‘ ಹೂ, ಬನ್ನಿಕೊಪ್ಪದಲ್ಲಿ........ಎಲ್ಲರೀ ’

‘ ಒಂದು ವರಾ ಐತೀ ’

‘ ಮನೆತನ ಹ್ಯಾಂಗರಿ?’

‘ ಎಲ್ಲಾ ಉತ್ತಮ. ಆದರೆ ವರಾ ತುಸು ’

‘ ತುಸು ಏನರಿ........’

‘ ತುಸು ವಯಸ್ಸು........’

‘ ವಯಸ್ಸು ಎಷ್ಟರಿ........’

‘ ಏನಿಲ್ಲ. ಐವತ್ತು ಐವತ್ತೊಂದು ಬಹಳ ಆದರೆ....’

‘ಯಾಕೆ ಸುಮ್ಮನೆ ಆದಿ ? ಆದರೂ ಬಾಳ ಅಲ್ಲ. ವರಾ ಇನ್ನೂ ಹುಡುಗ ಕಂಡಂತೆ ಕಾಣತಾನು. ನಾವು ಒಪ್ಪಿದರೆ ಒಪ್ಪಿಯಾನು. ಮನೆತನ ಸಾಕಷ್ಟು ಉತ್ತಮ. ಕಂಟ್ರೋಲ ಜೋಳ ತುಂಬಿ ಇನ್ನೂ ಒಂದೆರಡು ಹಗೆ ತುಂಬ್ಯಾನ.’

‘ಅದು ಇರ್‍ಲಿರೀ. ಐವತ್ತೊಂದು ಅಂದರೆ........’

‘ಬಹಳ ಆತೇನು ? ಅವನೂ ಸಿಕ್ಕರೆ ಪುಣ್ಯ. ಅವರಿಗೆ ಕೊಡಬೇಕೂಂತ ನಾಕಾರು ಮನೆಯವರು ಬಂದು ನೋಡಿ ಹೋಗ್ಯಾರು.’

‘ಹೀಗೇನರೀ’

‘ಹೂಂ ಮೊದಲ ಹೆಂಡತಿ ಸತ್ತು ತಿಂಗಳಾತು. ಮೂರು ಮಕ್ಕಳು. ಅವನಿಗೂ ಸಾಕಾಗಿ ಹೋಗಿದೆ. ಲಗು ಮದುವೆ ಆಗಲು ಹವಣಿಸುತ್ತಿದ್ದಾನೆ. ಈಗ ನಾವು ಬನ್ನೂರೆ ಅಂದು ಕುಳಿತರೆ...........’

‘ಇಲ್ಲ. ಒಂದೇ ಎಂದು ಕುಳಿತುಕೊಳ್ಳುವ ಹಾಂಗಿಲ್ಲ. ಅವನೂ ಬಂದು ನೋಡಿಕೊಂಡು ಹೋಗಲಿ. ನೀವೂ ಹೋಗಿ ಬರ್‍ರಿ. ಹೇಳಿ ಬರ್‍ರಿ !’

‘ಅಲ್ಲೆ ಇಲ್ಲೆ ತಿಳಿಸಿ ಬಂದೇನಿ. ಯಾವುದಾದರೂ ಒಂದಾದರೆ ಸಾಕು. ಇದೊಂದು ಪಡೆದು ಬಂದ ಜೀವ........’

‘ಹೆಣ್ಣು ಜೀವ........’

ಪೂವಮ್ಮನ ತಂದೆ ತಾಯಿಗಳು ‘ಹೆಣ್ಣು ಜೀವ’ ‘ಹೆಣ್ಣು ಜೀವ’ ಎನ್ನುತ್ತಲೇ ತೇಲುಗಣ್ಣು ಹಾಕಿದರು. ಅವರ ನಿತ್ಯ ಜೀವನದ ದುಗುಡ ದುಮ್ಮಾನ ಒಂದೊಂದೆ ಹಿಂಜರಿಯತೊಡಗಿದವು. ನಿದ್ರಾಂಗನೆ ಅವರ ಕಣ್ಣಲ್ಲಿ ಮರವೆಯ ತೊಟ್ಟು ಹಿಂಡಿದಳು.

ಅಲ್ಲಿ ತಾಯಿ ತಂದೆಗಳು ನಿದ್ರೆಹೋಗುವ ಹೊತ್ತಿನಲ್ಲಿ ಪೂವಮ್ಮ ಹಿಗ್ಗಿ ಹಿಗ್ಗಿ ನಲಿಯುತ್ತಿದ್ದಳು. ಕನಸಿನ ಲೋಕ. ಅವಳೇ ಕನಸಿನ ಕೆಳದಿ. ಹೂವಿನ ಮಂಟಪದಲ್ಲಿ ಹೂವಿನ ಹಾಸಿಗೆಯ ಮೇಲೆ ಪವಡಿಸಿದ ರಾಣಿ. ಪಕ್ಕದಲ್ಲಿ ‘ಅವರು’. ಇನ್ನು ತಿರಸ್ಕಾರವಿಲ್ಲ. ನಿಂದೆಗೆಡೆಯಿಲ್ಲ. ಗಂಡನ ಮೊಗದಲ್ಲಿ ಮೊಗ. ಕೈಯಲ್ಲಿ ಕೈ. ಹೃದಯದಲ್ಲಿ ಹೃದಯ. ಕಣ್ಣಿನಲ್ಲಿ....? ಯಾಕೆ ? ಏನಾಯಿತು ?

‘ಪುಷೀ ? ಏನಿದು ? ಮೋಸ ? ಥೂ........?

‘ಇಲ್ಲರೀ. ಕೈ ಬಿಡಬೇಡಿರಿ’

ಕನಸಿನ ಲೋಕದಿಂದ ಪೂವಮ್ಮ ಹೊರಗೆ ಬಂದಾಗ ಮನೆ ತುಂಬ ಕತ್ತಲು ತಂದೆಯ ಗೊರಕೆ ಕೇಳುತ್ತಿತ್ತು. ಒಂದರ ಮೇಲೆ ಒಂದು ಕಾಲು ಚಲ್ಲಿಕೊಂಡು ಬಡಬಡಿಸುತ್ತಿರುವ ಒಡಹುಟ್ಟಿದವರು. ಹತ್ತಿರದಲ್ಲಿ ತಾಯಿ. ಮೂಕ ದನ ಕರುಗಳು ಮೆಲುಕಾಡಿಸುತ್ತಿವೆ. ಮೂಕ ಪ್ರಾಣಿ ಅವುಗಳಿಗೇನು ? ದುಡಿಯುತ್ತವೆ. ತಿನ್ನುತ್ತವೆ. ಮಲಗುತ್ತವೆ. ಹೆರವರಿಗಾಗಿ ದೇಹ ಸವಿಸಿ ಬಾಳಿನ ಅಂತನ್ನು ಕಾಣುತ್ತವೆ. ಹೋ, ಜೀವ ! ಏಕೆ ಬಂದೆ ?

ತಂತಾನೆ ದುಃಖ ಉಕ್ಕಿ ಬಂತು ಪೂವಮ್ಮನಿಗೆ. ದುಃಖ ಆರಿದ ಮೇಲೆ ಮತ್ತೆ ನಿದ್ರೆ ಬಂತು. 'ಅಪ್ಪಾ' 'ಅಪ್ಪಾ'' ಎನ್ನುತ್ತ ಪುನಃ ಸಿದ್ರೆ ಹೋದಳು. ಮರುದಿನ ಏಳುವದಕ್ಕೆ ನಿದ್ರೆ ಹೋದಳು ಪೂವಮ್ಮ!

ಬನ್ನೂರಿಗೆ ಪೂವಮ್ಮನನ್ನು ಕೊಟ್ಟರಂತೆ! ಓಹೋ! ಪೂವಮ್ಮನನ್ನು ಕೊಟ್ಟರಂತೆ.

ಹುಡುಗಿಯನ್ನು ನೋಡಲು ಹುಡುಗನೇ ಸ್ವತಃ ಬಂದಿದ್ದ. ಹುಡುಗನ ಜತೆಯಲ್ಲಿ ಹಿರಿಯರಿರಲಿಲ್ಲ. ಇಪ್ಪತ್ತುನಾಲ್ಕು, ಇಪ್ಪತ್ತೈದರ ಹೊಸ್ತಿಲಲ್ಲಿ ಹುಡುಗ ತಿರುಗಾಡುತ್ತಿರಬೇಕು. ತನ್ನ ಸಮ ವಯಸ್ಸಿನವರನ್ನೆ ಹೆಣ್ಣನ್ನು 'ಪಾಸು' ಮಾಡಲು ಕರೆದು ತಂದಿದ್ದ.

ಮಣೆಯ ಮೇಲೆ ಹುಡುಗಿ ಬಂದು ಕುಳಿತಾಗ ಪರೀಕ್ಷಕರೆಲ್ಲರೂ 'ಚೆಲುವೆ' ಎಂದು ಒಮ್ಮತದ ಸಲಹೆಯನ್ನಿತ್ತರು. ಮಾಡಿಕೊಳ್ಳುವವನಿಗಂತೂ ತುಂಬ ಹಿಗ್ಗು. ಈ ರೂಪ ಇನ್ನೆಲ್ಲಿ? ಮಾತು ಮೃದು. ನೋಟ ತಿಳಿ. ಆಕಾರ ಸುಂದರ. ಹಣತೆಯ ಬೆಳಕಿನಲ್ಲಿ ಪೂವಮ್ಮನ ರೂಪ ಹುಡುಗನನ್ನು ಪೂರ್ತಿಯಾಗಿ ಆವರಿಸಿತು. ಮದುವೆಯ ಒಪ್ಪಂದ ಮುಗಿಯಿತು.

ಅಯ್ಯನವರನ್ನು ಕೇಳಿ ಮುಹೂರ್ತ ನೋಡಿ ಆಯಿತು. ಕಾರ್ತೀಕ ಮಾಸದಲ್ಲಿ ಲಗ್ನ.

ಸಕ್ಕರೆ ಹಂಚಿ ಹೋದರು. ಊರ ತುಂಬೆಲ್ಲ ಅದೊಂದು ಹೊಸ ಸುದ್ದಿ. ಮನೆಮನೆಗಳ ಒಳಗೂ ಹೊರಗೂ ಸುದ್ದಿಯೇ ಸುದ್ದಿ. ಪೂವಮ್ಮ, ಪೂವೇ ಸರಿ. ಏನೋ ಒಂದು ಕಾಡುವ ಕಾಲ ಬಂದಿತ್ತು. ಹೋಯಿತು. ಚಂದ್ರಬಿಂಬಕ್ಕೆ ಗ್ರಹಣ ಇದ್ದ ಹಾಗೆ. ತಂದೆ ತಾಯಿಗಳೂ ಬಹಳ ಕಷ್ಟಪಟ್ಟರು. ಕಷ್ಟಕ್ಕೂ ಸಾರ್ಥಕವಾಯಿತಲ್ಲ! ಅವರ ಜೀವನದಲ್ಲಿ ಇಳಿದು ಬಂದಿದ್ದ ಚಳಿಗಾಲ ಮಾಯವಾಯಿತು. ವಸಂತಕಾಲ ಬೀಡು ಬಿಟ್ಟಿತು. ಮಗಳೇ ಕೋಗಿಲೆ; ಅವರೇ ಸುಖಿಗಳು.

ಮದುವೆಯ ಕಾರ್ಯ ಹಮ್ಮಿಕ್ಕಿದ ಮೇಲೆ ಹೊತ್ತು ನಿಲ್ಲುತ್ತದೆಯೆ? ಪೂವಮ್ಮನ ತಂದೆ ತಾಯಿಗಳು ಮದುವೆಯ ಸಿದ್ಧತೆಗಾಗಿ ಹಗಲೂ ರಾತ್ರಿ ದುಡಿದೇ ದುಡಿದರು. ಮಗಳು ಇಷ್ಟುದಿನ ನಿಂತಳು. ಅದಕ್ಕಾದರೂ ಮದುವೆಯನ್ನು ಅಚ್ಚುಕಟ್ಟಾಗಿ ಮಾಡಬೇಕೆಂಬ ಹಂಬಲ ಅವರದು. ಯುದ್ಧಕಾಲದ ದಿನಗಳು. ಅವರನ್ನು ಇವರನ್ನು ಕಾಯ್ದುಕೊಂಡು ಸಾಮಾನುಗಳನ್ನು ಕೂಡಿಸಿದರು. ಇದ್ದುದರಲ್ಲಿಯೇ ಹಬ್ಬ ಹಸನಾಗಬೇಕು. ಇದಿರುಗೊಳ್ಳುವ ಕಾಲದಲ್ಲಿ ತಮ್ಮ ಹೆಚ್ಚಳವನ್ನು ತೋರಿಸಬೇಕು. ಆ ಕಡೆಯಿಂದ ಗಂಡಸಿನವರು. ಈ ಕಡೆಯಿಂದ ಹೆಣ್ಣಿನವರು. ಬಿಜಲಿ ಉರಿಯಲಿ.

ಬಜಂತ್ರಿ ಕೂಗಲಿ. ಮಂಟಪ ಮೆರೆಯಲಿ. ಪೂವಮ್ಮನ ಹೆಸರು ಹೇಳಿ ಅವೆಲ್ಲ ಮೆರೆಯಲಿ !

ಪೂವಮ್ಮನಿಗೆ ಎಷ್ಟು ಆನಂದವಾಗಬೇಡ ! ಹಿಂದೊಮ್ಮೆ ಮಾದಿಹಳ್ಳದ ದಂಡೆಯ ಮೇಲೆ ಕಂಡ ಕನಸು ಇಂದು, ಎಷ್ಟು ದಿನಗಳ ಮೇಲೆ ನನಸಾಗುತ್ತಿದೆ ! ಕೆರೆಯಂಗಳದಲ್ಲಿ ಅಂದು ಹೂಡಿದ ಆಟ, ಗೊಂಬೆಯ ಮದುವೆ ; ಉತ್ಸಾಹದಿಂದ ನಡೆಯಿತು. ಒಂದಕ್ಕೂ ಕೊರತೆ ಇಲ್ಲ. ಮದುವೆಯ ಸಾಮುಗ್ರಿ ಯಥೇಚ್ಛವಾಗಿ ತಂದು ಹಾಕಿ ಮದುವೆ ಮಾಡಿದ ನೆನಹು ಈಗೆಷ್ಟು ನಿಚ್ಚಳವಾಗಿ ಕಾಣುತ್ತಿದೆಯಲ್ಲ ! ಗಂಜಿಯ ಹೂ ಕರುಬಿ ಕಣ್ಣಲ್ಲಿ ಮುಳ್ಳು ಸೇರಿತು. ಈಸು ದಿನ ಕಷ್ಟ ಪಡಿಸಿತು. ತಂದೆ ತಾಯಿಗಳನ್ನು ದಣಿಸಿತು. ನೂರೊಂದು ಕಡೆಯಿಂದ ಸಲ್ಲದ ಮಾತು. ಅದೆಲ್ಲ ಆಗಬೇಕಿತ್ತು. ಅಂದು ಗೊಂಬೆಯ ಮದುವೆಯ ಕಾಲದಲ್ಲಿ ಆರತಿಯೆತ್ತಿದ ಮುತ್ತೈದೆಯರು ಇಂದು ಮಕ್ಕಳ ತಾಯಿಗಳು. ಅದೇ ಜಾವ ಬಂತು. ಇಂದು ಬಂತೇ ? ಈಸು ದಿನ ತಡೆದು ಇವತ್ತು ಬಂತೆ ?

ಪೂವಮ್ಮನಿಗೆ ಹಿಗ್ಗೇ ಹಿಗ್ಗು. ಕುಂಕುಮ, ಹೆಳಲು, ಕಂಕಣ, ಗೆಜ್ಜೆ— ಪೂವಮ್ಮನಿಗಾದ ಸಂತಸವನ್ನು ಬಿಡಿಸಿ ಬಿಡಿಸಿ ಹೇಳುವದನ್ನು ಕಣ್ಣು ಕಿವಿ ಇದ್ದವರೆಲ್ಲರೂ ಅರಿಯಬಹುದು. ಒಂದೆರಡು ಕಡೆ ಆರತಿ ಮಾಡುವ ಪ್ರಸಂಗ ಬಂದಾಗ ಗಂಡನ ಹೆಸರನ್ನು ಬಾಯಿ ತುಂಬ ಹೇಳಿದಳು. ಪೂವಮ್ಮ ಬೀಸುವ ಕಲ್ಲಿನ ಮುಂದೆ ಕುಳಿತಾಗ, ಕೋಲಾಟ ಹೊಯ್ಯುವಾಗ 'ಅವರು' ಬರಲೇಬೇಕು. ಆಗ ಸ್ವರ ಏರುವದು. ಕಣ್ಣು ಅರಳುವದು. ಮೊಗ ಹಿಗ್ಗುವದು. ಆಟಕ್ಕೇ ಕಳೆ, ಬಾಳಿಗೇ ಹಿಗ್ಗು ?

ಅಳಿಯನಿಗೆ ಅರಿವೆ, ಹೆಣ್ಣಿಗೆ ಸೀರೆ ಕುಪ್ಪಸ ಎರಡೂ ಕಡೆಯಿಂದ ಹೋದವು. ಕಾರ್ತೀಕಮಾಸ ಸಮೀಪಿಸುತ್ತ ಬಂದಿತು.

ಮದುವೆಯ ಮಾತು ಕತೆ ಇನ್ನೊಮ್ಮೆ ನಿಶ್ಚಯ ಮಾಡಿಕೊಂಡು ಪೂವಮ್ಮನ ಅಪ್ಪ ಬನ್ನೂರಿಗೆ ಒಂದು ಮುಂಜಾವಿನಲ್ಲಿ ಹೊರಟ. ಹೊರವಾಗಿಲ ಮರೆಯಲ್ಲಿ ನಿಂತು ಪೂವಮ್ಮ ಅಪ್ಪ ಹೋಗುವದನ್ನು ನೋಡಿದಳು.

ಮನೆಯಲ್ಲಿ ಸಿದ್ಧತೆ ನಡದೇ ಇತ್ತು. ಆ ಕೆಲಸದಲ್ಲಿ ತಾನು ಕೈ ಇಟ್ಟರೆ ಏನು ವಿಶೇಷ ? ಮಾಡುವವರು ಉಂಟು. ಓಣಿಯವರೆಲ್ಲ ಬಂದು ಮಾಡುವದರಲ್ಲಿಯೋ ಕಳೆ. ಪೂವಮ್ಮ ಯೋಚಿಸಿದಳು. ಆನಂದದಿಂದ ಹೊರೆಯೇರಿದಳು.

ಪೂವಮ್ಮನ ತಾಯಿ ಒಳಗೆ ಕೆಲಸ ಮಾಡುತ್ತಿದ್ದರೂ ಮನವೆಲ್ಲ ಗಂಡನ ಜತೆಯಲ್ಲಿಯೇ ಹೋಯಿತು. ಮದುವೆಯ ಕೊಡುಕೊಳ್ಳಿ ನಿಶ್ಚಯಿಸಲು, ಪುಳಿಚಾರು

ಮಾತು ಕತೆ ಆಡಲು, ಇನ್ನೊಮ್ಮೆ ಅಳಿಯನನ್ನು, ಅವನ ಮನಸ್ಸನ್ನು ಪರೀಕ್ಷಿಸಲು ಗಂಡನ ಜತೆಯಲ್ಲಿಯೇ ಅವಳೂ ತನ್ನ ಮನಸ್ಸನ್ನು ಕಳಿಸಿಕೊಟ್ಟಳು. ಅರ್ಧ ದಾರಿ ಹೋಗಿ ಅದು ಹಿಂತಿರುಗಿ ಬಂದಿತು.

ಸಂಜೆ ಆಯಿತು. ರಾತ್ರಿ ಆಯಿತು. ಸರಿರಾತ್ರಿ ಆಯಿತು. ಬನ್ನೂರಿಗೆ ಹೋದವನು ಬರಲೇ ಇಲ್ಲ. ಪೂವಮ್ಮನ ತಾಯಿ ದಿಗಿಲುಗೊಂಡಳು. ಮಗಳು ಪಿಳಿ ಪಿಳಿ ಕಣ್ಣು ಬಿಟ್ಟಳು. 'ಎಷ್ಟೊತ್ತಿದ್ದರೂ ಸಂಜೆಗೆ ತಿರುಗಿ ಬರುತ್ತೇನೆಂದು ಹೇಳಿ ಹೋದವರು ಬರಲೇ ಇಲ್ಲವಲ್ಲ !' ಎಂದು ತಾಯಿ ಮಕ್ಕಳು ಒಳಗೆ ಹೊರಗೆ ಹೋಗಿ ಬಂದದ್ದೇ ಬಂದದ್ದು!

ನಿಜ, ಸಂಜೆಗೆ ಬರಬೇಕಿತ್ತು. ಆದರೆ........?

ಆದರೆ....ಏಕೆ ? ಏಕೆಂದರೆ ಮದುವೆಯ ಬಿಂಬಕ್ಕೆ ಗ್ರಹಣ ! ಪೂವಮ್ಮನಿಗೆ ಬಿಡುಗಡೆಯೇ ಇಲ್ಲ !

' ಹುಡಿಗೆಯ ಕಣ್ಣಲ್ಲಿ ಹೂ. ಹಿರಿಯರಿಲ್ಲದೆ ಹುಡುಗ ಬಂದರೆ ಮೋಸ ಮಾಡಬೇಕೇನು ? '

' ನಾ ಮುಂದೆ ನೀ ಮುಂದೆ ಎಂದು ಓಡಿ ಓಡಿ ಬಂದು ಕನ್ಯೆ ಕೊಡುವ ಹೊತ್ತಿನಲ್ಲಿ ಮೋಸದ ಹೆಣ್ಣು ಯಾರು ಕೊಂಡಾರು ?'

' ಹೌದು, ಹೇಳಬಾರದೇನು ? ದೂರದಲ್ಲಿ ಹೆಣ್ಣು ಕುಳ್ಳಿರಿಸಿ ಕಣ್ಣಲ್ಲಿ ಮಣ್ಣು ಹಾಕಬೇಕೇನು ?'

' ವಯಸ್ಸಿಗೆ ಬಂದವನಿಗೆ ಎಂತಹ ಹೆಣ್ಣೂ ಚಂದ ಕಂಡೀತು. ಕೊಡುವವರಿಗೆ ಲೋಪ ದೋಷಗಳ ಅರಿವಿರಬಾರದೇನು ?'

' ಊರ ತುಂಬ, ಕಣ್ಣಿನಲ್ಲಿ ಹೂ ಇದ್ದುದು ಗೊತ್ತಿದ್ದರೂ ಎಷ್ಟು ಪ್ರಚಾರ ! ಸತ್ಯ ಮರೆಸಲು ಯತ್ನಿಸಿದರೆ ನಿಜ ಸಂಗತಿ ಬಯಲಿಗೆ ಬರದೆ ಇದ್ದೀತೇನು ? ಮಾಡಿದ್ದುಣ್ಣೊ ಮಾರಾಯ !'

' ಇಲ್ಲ ಆಗದು. ಬಂದ ದಾರಿಗೆ ಸುಂಕವಿಲ್ಲ !'

ಬನ್ನೂರಿನಲ್ಲಿ ಪೂವಮ್ಮನ ಅಪ್ಪನ ಇದಿರಿನಲ್ಲಿ ಮದುವೆಯ ಪಂಚಾಯಿತಿ ನಡೆದು ಬಿಟ್ಟಿತ್ತು. ಹಾಲಿನಲ್ಲಿ ಉಪ್ಪು. ಮೇಲಿನಂತೆ ಒಬ್ಬೊಬ್ಬರು ಅಭಿಪ್ರಾಯ ಕೊಟ್ಟರು. ಅವರೆಲ್ಲರ ಅಭಿಪ್ರಾಯದ ಹಿಂದೆ ಆಶೆಯ ಸರ್ಪ ಹೆಡೆ ತೆರೆದು 'ಹಾಲಾಹಲ'ವನ್ನು ತೂರುತ್ತಿತ್ತು. ತಮ್ಮ ಮಗಳನ್ನು ಕೊಡಲೆಂದು ಒಬ್ಬೊಬ್ಬರದು ಒಂದೊಂದು ಸಂಚು ! ಸ್ವಾರ್ಥಲಾಲಸೆ ಇಲ್ಲದ ಜಗತ್ತು ಜಗತ್ತೇ ಅಲ್ಲವೆಂದು ತೋರುತ್ತದೆ.

ಪೂವಮ್ಮನ ಅಪ್ಪ ಸಣ್ಣ ಮುಖ ಮಾಡಿಕೊಂಡು ಮನೆಗೆ ಬಂದ. ಹೆಂಡತಿ 'ಏನಾಯಿತು' 'ಏನಾಯಿತು' ಎಂದು ಕೇಳಿ ಕೇಳಿ ಅತ್ತಳು. ಪೂವಮ್ಮ ಅದನ್ನೆಲ್ಲ ನೋಡಿ ಕಲ್ಲಿನಂತಾಗಿಬಿಟ್ಟಿದ್ದಳು !

* * * * *

ಕೆಟ್ಟ ಸುದ್ದಿ ಹಬ್ಬುವದಕ್ಕೆ ತಡವೇ ?

ಅದೇ ಹೊತ್ತು ಕಾಯ್ದುಕೊಂಡು ಕುಳಿತ, ಬನ್ನೀಕೊಪ್ಪದ ಮುದುಕ ಪೂವಮ್ಮನನ್ನು ನೋಡುವದಕ್ಕೆಂದು ಚಕ್ಕಡಿ ಹೂಡಿಕೊಂಡು ಬಂದ. ಆಮಂತ್ರಣವು ಹೋಗಿತ್ತೊ ಇಲ್ಲವೋ ನಾ ಅರಿಯೆ !

ಊರ ತುಂಬೆಲ್ಲ ಸುದ್ದಿ. ಯಾರು ಕೊಡುತ್ತಾರೆ ಮುದುಕನಿಗೆ ? ನಾಲ್ಕೈದು ಕಡೆಯುವರು ಬಂದು ಕೇಳಿಹೋದವರು ಉತ್ತರವನ್ನೇ ಕಳಿಸಲಿಲ್ಲ.

ಉತ್ತರದ ದಾರಿಯನ್ನು ಕಾಯುವುದು ಮುದುಕನಿಗೂ ಬೇಡಾಗಿತ್ತು. ಅವನ ಮನಸ್ಸಿನಲ್ಲೊಂದು ಸುಂದರ ಹೂ ಅರಳಿ ನಿಂತಿತ್ತು. ಎಂದ ಮೇಲೆ ಮುದುಕ ಯಾಕೆ ಕಾದಾನು ?

ಕನ್ಯೆ ನೋಡುವ ಸಮಯ. ಇದಿರಿನಲ್ಲಿ ಗಂಡ; ಮುದುಕ. ಅಲ್ಲಿ ಜೋತಿಷ್ಯದ ಹೊತ್ತಿಗೆ ಹಿಡಿದುಕೊಂಡು ಕುಳಿತ ಅಯ್ಯನವರು. ಅಯ್ಯನವರ ಶಾಸ್ತ್ರಕ್ಕೆ ಚಪ್ಪಾಳೆಯಿಕ್ಕುವ ಹಿರಿಯರು ಇಲ್ಲಿ. ಮುಸುಕು ಹಾಕಿಕೊಂಡು ಪೂವಮ್ಮ ಬಂದಳು. ಹಿಂದಿನಿಂದ ಯಾರೋ 'ಹೂಂ ಹೋಗು. ಕುಳಿತುಕೊ. ನಾಚಬೇಡ' ಎಂದು ಅನ್ನುತ್ತಾ ನೂಕುತ್ತಿದ್ದರು.

ಪೂವಮ್ಮ ಬಂದು ಕುಳಿತಳು. 'ತಂಗೀ, ನೊಗಯೆತ್ತು. ಸೆರಗು ಓರೆ ಮಾಡು' ಎಂದರು ಒಬ್ಬರು. ವರನಿಗೆ ಹುಡುಗೆಯನ್ನು ನೋಡಬೇಕಾಗಿತ್ತಂತೆ !

ಪೂವಮ್ಮನ ತಾಯಿ ಮಗಳ ಸೆರಗು ಓರೆ ಮಾಡಿದ್ದರು. ಚಂದಿರಬಿಂಬ !

'ತಂಗೀ ಇದಿರಿಗೆ ನೋಡು' ಎಂದರು ಇನ್ನೊಬ್ಬರು. ಪೂವಮ್ಮ ನೋಡಿದಳು.

'ಏನಾದರೂ ಪ್ರಶ್ನೆ ಕೇಳುತ್ತೀರೇನು' ಎಂದು ಒಬ್ಬರು ನೋಡಲು ಬಂದ ವರನನ್ನು ಕೇಳಿದರು. ಅತ್ತ ಕಡೆಗೆ ಪೂವಮ್ಮನ ದೃಷ್ಟಿ ಹೋಯಿತು. ಆದೊಂದು ನಿಮಿಷ ಅವಳ ಹೃದಯುದ ಚಲನವಲನೆ ಸಂಪೂರ್ಣವಾಗಿ ತನ್ನ ಅಭಿಪ್ರಾಯನ್ನು ವ್ಯಕ್ತಪಡಿಸಿ ಮತ್ತೆ ಟುಕು ಟುಕು ಎನ್ನತೊಡಗಿತು.

ವಧು ವಯಸ್ಸಿಗೆ ಬಂದಳು. ಅಯ್ಯನವರ ಹೊತ್ತಿಗೆಯೂ ಸಮ್ಮತಿ ಸೂಚಿಸಿತು. ಎಲ್ಲರೂ ಚಪ್ಪಾಳಿ ಬಡಿದರು. ಕಾಲ ಮೂಲ ಎಲ್ಲಾ ಕೂಡಿ ಬಂದವು.

ಪೂವಮ್ಮನ ಅಭಿಪ್ರಾಯ ಒಬ್ಬರೂ ಕೇಳಲಿಲ್ಲ. ವರ 'ಹೂಂ' ಎಂದ. ಶಾಸ್ತ್ರಿ ಸಾಕ್ಷಿ ಹೇಳಿದರು. ನೆರೆದವರು ಕೇಳಿದರು.

ಗಂಜಿಯ ಹೂವೊಂದು ಮಾತ್ರ ಪೂವಮ್ಮನ ಸಮ್ಮುಖದಲ್ಲಿ ನಿಂತು ಏನನ್ನೊ ಸುದ್ದಿಯನ್ನು ಸಾರುತ್ತಿತ್ತು.

ಕಾರ್ತಿಕ ಮಾಸದಲ್ಲಿಯೆ ಮದುವೆ ಮಾಡುವದು ನಿಶ್ಚಿತವಾಯಿತು. ಹೆಣ್ಣಿನ ಕಡೆಯವರು ಈಗಾಗಲೆ ಸಿದ್ಧತೆ ಮಾಡಿ ಇಟ್ಟಿದ್ದುಂಟು. ಗಂಡಿನಕಡೆಯವರಲ್ಲೂ ಸಾಕಷ್ಟು ಸಂಗ್ರಹ ಉಂಟು. ಯಾವುದಕ್ಕೂ ಅಡ್ಡಿ ಆತಂಕವೇ ಇಲ್ಲ !

ಸುಮುಹೂರ್ತವನ್ನು ಬನ್ನೀಕೊಪ್ಪದವರು ಕಾಯ್ದುಕೊಂಡು ಕುಳಿತ ಹೊತ್ತನ್ನೆ ಪೂವಮ್ಮನ ತಂದೆ ತಾಯಿಗಳು ಜಾನಿಸುತ್ತಿದ್ದರು. ನಾಳೆ ನಿಬ್ಬಣ ಹೊರಡುವ ದಿನ.

ಪೂವಮ್ಮನ ಮೊಗದಲ್ಲಿ ಈ ಮೊದಲು ಎಂದಿಗೂ ತೋರಿಬರದಂತ ಉತ್ಸಾಹ ಕುಣಿಯುತ್ತಿತ್ತು. ಬನ್ನೂರಿನ ಮದುವೆಯ ಕಾಲದಲ್ಲಿ ಅಪ್ಪ ತಂದಿಟ್ಟ ಸೀರೆಯನ್ನು 'ಎಲ್ಲಿ, ನೋಡುತ್ತೇನೆ' ಎಂದು ಹೇಳಿ ಉಟ್ಟುಕೊಂಡಳು. ತಾಯಿಯ ಹತ್ತಿರ ಹೋಗಿ 'ನೋಡು. ಹೇಗವ್ವ' ಎಂದಳು. ತಾಯಿಗೊಂದು ಕನಸು. ಮಗಳಿಗೊಂದು ಕನಸು.

ಮಟ ಮಟ ಮಧ್ಯಾಹ್ನದ ಹೊತ್ತು. 'ಈ ವ್ಯೆಲಿಗೆ ಅರಿವೆ ಹಿಂಡಿಕೊಂಡು ಬರುತ್ತೇನೆ ಅವ್ವಾ' ಎಂದಳು ಪೂವಮ್ಮ. ತಾಯಿ 'ಬೇಗ ಬಾ. ಮುಂದಿಗೆ ತಯಾರಾಗಲು ಹೇಳಿ ಬರಬೇಕು' ಎಂದಳು. 'ಹೂಂ' 'ಹೂಂ' ಎನ್ನುತ್ತ ಅವಳು ತಲೆಯ ಮೇಲೊಂದು ಬುಟ್ಟಿಯನ್ನು ಇಟ್ಟುಕೊಂಡು ಅಗಸೆಯ ಕಡೆಗೆ ನಡೆದಳು

ಮಾದಿ ಬತ್ತಿತ್ತು. ಕೆರೆಯಂಗಳ ಕೊರಕಲಾಗಿತ್ತು. ಗಾಳಿ ಇರಲಿಲ್ಲ. ಖಗ ಕೂಜನವಿರಲಿಲ್ಲ.

ಅಗಸೆ ಇಳಿದು, ಹಳ್ಳದ ತೆಂಬ ಏರಿ, ಸಮನಾಗಿ ದಾರಿಯನ್ನು ಕೂಡಿದಳು ಪೂವಮ್ಮ. ಗಂಜಿಯ ಹೂ ಕೈ ಬೀಸಿ ಬೀಸಿ ಅವಳನ್ನೆ ಕರೆಯುತ್ತಿದ್ದವು. ಕೆರೆಯಂಗಳದಲ್ಲಿ ಹುಡಿಗೆಯರು 'ಅಕ್ಕಾ, ಅವ್ವಾ, ಅತ್ತೆವ್ವ' ಎಂದು ಒಂದೇ ಸಮನೆ ಕೂಗುವಂತೆ ಅವಳಿಗೆ ಕೇಳಿಸುತ್ತಿತ್ತು. ಪೂವಮ್ಮನಿಗೆ ಕಿವಿಯೇ ಇಗಲಿಲ್ಲ. ಅವಳ ಕಂಗಳಲ್ಲಿ ಕತ್ತಲು ಕವಿದಿತ್ತು. ಹೃದಯ ಕಲ್ಲಾಗಿತ್ತು.

ಮಸಣದಾಚೆಗಿರುವ ಒಗೆಯುವ ಬಾವಿಗೆ ಬಂದಳು. ಯಾರೂ ಇರಲಿಲ್ಲ. ಮಟ ಮಟ ಮಧ್ಯಾಹ್ನದಲ್ಲಿ ಯಾರು ಇದ್ದಾರು? ಆ ಸಮಯ ಪೂವಮ್ಮನನ್ನೇ ಇದಿರು ನೋಡುತ್ತಿತ್ತು. ಅವಳೂ ಬಂದಳು ?

ಬಾವಿಯ ದಂಡೆಯ ಮೇಲೆ ಬಂದು ಬಟ್ಟೆಯನ್ನಿರಿಸುವ ಹೊತ್ತಿಗೆ 'ಪೂವಮ್ಮ' 'ಪೂವಮ್ಮ !' ಎಂದು ಯಾರೋ ಕೂಗಿದಂತಾಯಿತು. ಅವಳು ಅತ್ತಿತ್ತ ಹೊರಳಿ ನೋಡಿದಳು.

'ಪೂವಮ್ಮ ? '

'ಓ, ಪೂವಮ್ಮ ಎಂಥ ಚಂದ ಹೆಸರು? ಆದರೆ....'

'ಗಂಜಿಯ ಹೂ ಮುಡಿಯುತ್ತಾರೇನೆ ಪೂವಮ್ಮ? '

'ಬಾಡಿದ ಹೂ, ಮುಕ್ಕಾದ ವಿಗ್ರಹ, ಅಪಹಾಸ್ಯಕ್ಕೀಡಾದ ಹೆಣ್ಣು ಈ ಲೋಕದ ಕಣ್ಣಲ್ಲಿ ಏನೇನು ? '

'ಬಚ್ಚಲುದಕ ಯಾರ ಮೀಯಕ್ಕೆ ಯೋಗ್ಯ ಪೂವಮ್ಮ ? '

'ನಾಯಿಯ ಹಾಲು ಯಾರ ಊಟಕ್ಕೆ ಬರುತ್ತೆ, ತಂಗೀ ? '

'ಪ್ರೇತವನದೊಳಗೆ ಬೆಳೆದ ಹೂ ಯಾರ ಮುಡಿಹಕ್ಕೆ ಯೋಗ್ಯ ಪೂವಮ್ಮ ?'

'ಹೌದು, ಹೌದು ' ಎನ್ನುತ್ತ ಬಾವಿಯ ಪಾವಟಿಗೆಗಳನ್ನು ಇಳಿದಳು ಪೂವಮ್ಮ. ಇಳಿದೇ ಇಳಿದಳು; ಮೇಲಕ್ಕೆ ಹತ್ತಿ ಬರಲೇ ಇಲ್ಲ !

—ಹಿರೇಮಲ್ಲೂರ ಈಶ್ವರನ್

# ದ್ಯಾಮು – ಕೆಂಚಿ

೧

ಅಂದು ಅದೇಕೋ ಗಾಡಿಯಲ್ಲಿ ಅಷ್ಟು ಜನಸಂದಟ್ಟಣೆ ಇರಲಿಲ್ಲ. ಆದುದರಿಂದಲೇ ಏನೋ, ಆ ಗಾಡಿಯಲ್ಲಿಯ ಟಿಕಿಟ್ ಕಲೆಕ್ಟರನು ಬರಿಯ ಎರಡನೆಯ ವರ್ಗದ ಡಬ್ಬಿಗಳಲ್ಲಿಯೇ ಸುಳಿದಾಡದೆ, ಗಾಡಿ ವೇಗದಿಂದ ಸಾಗಿದ್ದರೂ, ಮೂರನೆಯ ವರ್ಗದಲ್ಲಿ ಹೋಗಿ ಟಿಕಿಟು ಇಲ್ಲದವರನ್ನು ಹಿಡಿಯಹತ್ತಿದ್ದನು. ಅವನ ಕಾಠಿಣ್ಯ ನಾಲ್ಕಾರು ಜನರಿಗೆ ಬೇಡವಾಗಿತ್ತಾದರೂ ನೂರಾರು ಪ್ರಾಮಾಣಿಕ ಪ್ರವಾಸಿಕರಿಗೆ ಸ್ಥಳಸೌಕರ್ಯವನ್ನು ಒದಗಿಸಿಕೊಟ್ಟಿತ್ತು.

ಅವನು ಗಾಡಿಯ ಕಡೆಯ ಡಬ್ಬಿಗೆ ಬಂದಾಗ ಒಬ್ಬ ಕುರುಡಿ ಅದೇ ತಾನೇ ಹಾಡು ಮುಗಿಸಿ ತನ್ನ ಕೈಗೋಲನ್ನು ಮೂಲೆಯಲ್ಲಿರಿಸಿ ಭಿಕ್ಷೆ ಬೇಡಲು ಸುರುವು ಮಾಡಿದ್ದಳು. ಆಕೆಯ ಎಳೆಯ ವಯಸ್ಸು, ಅಸಹಾಯತೆ ಮಧುರ ಕಂಠ, ಹಾಡನ್ನು ಸುಶ್ರಾವ್ಯವಾಗಿ ಹೇಳುವ ಶೈಲಿ, ತಾಳಬದ್ಧತೆ—ಎಲ್ಲವೂ ಪ್ರವಾಸಿಕರಲ್ಲಿ ಸಹಾನುಭೂತಿಯ ಉಕ್ಕನ್ನು ಎಬ್ಬಿಸಿದ್ದವು. ಅಂತೆಯೇ ಪ್ರತಿಯೊಬ್ಬನೂ ಕೈಯಲ್ಲಿ ಒಂದೊಂದು ದುಡ್ಡನ್ನು ಹಿಡಿದುಕೊಂಡು ತನ್ನ ಕಡೆ ಆಕೆ ಕೈಯೊಡ್ಡುವ ಹಾದಿಯನ್ನೇ ನೋಡುತಿದ್ದನು. ಆಕೆ ಭಿಕ್ಷೆ ಬೇಡುವದನ್ನು ಮುಗಿಸಿಕೊಂಡು ತಿರುಗಿ ತನ್ನ ಸ್ಥಳಕ್ಕೆ ಬರುವದೊಂದೇ ತಡ, ಟಿಕಿಟು ಕಲೆಕ್ಟರನು ಅವಳಿಗೆ ಗದ್ದರಿಸಿದ:

'ಟಿಕಿಟು ಐತೇನು ನಿನ್ನ ಕಡಿ' ?

ಹೀಗೆನ್ನುವಾಗ ಅವನಿಗೆ ಚನ್ನಾಗಿ ಮನವರಿಕೆಯಾಗಿದ್ದಿತು, ಇವಳಲ್ಲಿ ಟಿಕಿಟು ಇಲ್ಲ ಎಂಬುದು. ಭಿಕ್ಷುಕರಾರೂ ಟಿಕಿಟು ಕೊಳ್ಳುವದಿಲ್ಲ ಎಂಬುದು ಅವನಿಗೆ ಹೊಸದೇ?

ಆಕೆ ಗಾಬರಿಯಾದಳು. ತಾನು ಬಡವಿಯೆಂದೂ, ಕುರುಡಿಯೆಂದೂ, ಹೆಂಗಸೆಂದೂ ಉದಾಹರಣೆ ಹೇಳಿದಳು. ಅಷ್ಟರಲ್ಲಿ ಅವನ ಚಿತ್ತ ಎದುರಿನ ಮೂಲೆಯಲ್ಲಿ ಆಸನದ ಬುಡನಲ್ಲಿ ಹುದುಗಿ ಕುಳಿತ ಇನ್ನೊಬ್ಬ ಕುರುಡನ ಕಡೆ ಹೋಯಿತು.

'ಏನೋ, ಮತ್ತ ಈ ಡಬ್ಯಾಗ ಬಂದು ಕೂತೀಯಾ?'

'ಏನು ಮಾಡಲಿ ಎಪ್ಪಾ ಮತ್ತ? ಹ್ಯಾಂಗಾರ ಮಾಡಿ ಹೊಟ್ಯಾಗ ಹಾಕ್ಕೊಳ್ಳಿ' ಎಂದು ಅವನು ಕುಳಿತಲ್ಲಿಯೇ ಕುಳಿತ.

ಹಿಂದಿನ ಸ್ಟೇಶನ್ನಿನಲ್ಲಿ ಈ ಕುರುಡನನ್ನು ಟಿಕಿಟ್‌ಕಲೆಕ್ಟರನು ಬೇರೊಂದು ಡಬ್ಬಿಯಿಂದ ಹೊರಗೆ ಹಾಕಿದ್ದನು. ಅವನು ಅವಸರ ಅವಸರಪಟ್ಟು, ಹೇಗೋ ಮಾಡಿ, ಗಾಡಿ ಬಿಡುವದರಲ್ಲಿಯೇ ನಿಲ್ದಾಣದ ವಿರುದ್ಧ ಮಗ್ಗಲಿಗೆ ಹೋಗಿ ನಿಂತು ಕೊಂಡಿದ್ದನು; ಗಾಡಿ ಕೂಗುವದೊಂದೇ ತಡ ಈ ಡಬ್ಬಿಯಲ್ಲಿ ಹಿಂದಿನ ಬಾಕಿಲಿನಿಂದ ನುಸುಳಿಕೊಂಡಿದ್ದನು.

ಅವನಿಗೆ ಅದೇ ಡಬ್ಬಿಯಲ್ಲಿ ಇನ್ನೊಬ್ಬ ಭಿಕ್ಷುಕಿ ಇರುವದು ಮೊದಲು ಗೊತ್ತಿರ ಲಿಲ್ಲ. ಗಾಡಿಯು ನಿಲ್ದಾಣವನ್ನು ಬಿಟ್ಟಕೂಡಲೇ ಇಬ್ಬರೂ ಹಾಡಲು ಸುರುವು ಮಾಡಿ ದ್ದರು. ಇವರ ಸ್ಪರ್ಧೆಯನ್ನು ನೋಡಿ ಜನ ಬಿದ್ದು ಬಿದ್ದು ನಕ್ಕಿದ್ದರು. ಹೆಂಗಸಿನ ಬಗೆಗೆ ಇರುವ ಸಹಜವಾದ ಪಕ್ಷಪಾತ ಬುದ್ಧಿಯಿಂದ ಜನ ಇವನಿಗೆ ಸುಮ್ಮನೆ ಕೂಡಲು ಹೇಳಿದ್ದರು. ಅನಿವಾರ್ಯವಾಗಿ ನಿರಾಶೆಯಿಂದ ಅವನು ತನ್ನ ಕೋಲನ್ನೂ ಎಡದ ಹೆಗಲಿನಲ್ಲಿ ಜೋತಾಡುತ್ತಿದ್ದ ಗಂಟನ್ನೂ ಕೆಳಗೆ ಇಟ್ಟು ಕುಳಿತುಕೊಂಡಿದ್ದನು. ಅವ ಳೊಬ್ಬಳೇ ದುಡ್ಡು ಸೆಳೆದುಕೊಳ್ಳುವಳಲ್ಲಾ ಎಂಬ ಕಿಚ್ಚಿನಿಂದ ಮೊದಮೊದಲು ಬೆಂದಿ ದ್ದನು. ಆದರೆ ಆಕೆಯ ಹಾಡೂ ಕಂಠವೂ ಇವನ ಮನವನ್ನೂ ಅರಳಿಸಿದ್ದವು. ಅವಳು ಹಾಡಿ-ಹಾಡಿದಂತೆ ಅವನೂ ತನ್ನ ಕೈಯಲ್ಲಿಯ ಕಡ್ಡಿಯನ್ನೂ ಗಿರಿ-ಗಿರಿ ತಿರು ಗಿಸಹತ್ತಿದ್ದನು. ತನ್ನ ಬಲ ಬೆರಳಿನಲ್ಲಿಯ ತಾಮ್ರದ ಉಂಗುರದಿಂದ ಬೆನ್ನಹಿಂದಿನ ಗೋಡೆಗೆ ಆಕೆಯ ಹಾಡಿಗೆ ಮೇಳವಾಗುವಂತೆ ತಾಳ ಕಟೆಯುತ್ತಿದ್ದನು.

ಗಾಡಿ ನಿಲ್ಲುವಷ್ಟರಲ್ಲಿ ಟಿಕಿಟು ಕಲೆಕ್ಟರನು ಎಲ್ಲ ಟಿಕಿಟುಗಳ ಮೇಲೆ ಸಹಿ ಮಾಡಿ ತನ್ನ ಕೆಲಸ ಮುಗಿಸಿದ್ದನು.

ಮುಂದಿನ ನಿಲ್ದಾಣದಲ್ಲಿ ಆತ ಅವರಿಬ್ಬರನ್ನು ಹೊರಗೆ ತಳ್ಳಿದನು. ನಿಲ್ದಾ ಣದ ಹೊರಗೂ ಹಾಕಿ, ಗಂಟೆ ಬಾರಿಸುವವರೆಗೆ ಅಲ್ಲಿಯೇ ನಿಂತು, ಇವರಿಬ್ಬರು ತಿರುಗಿ ಗಾಡಿಯಲ್ಲಿ ಬಾರದಂತೆ ದಕ್ಷತೆ ವಹಿಸಿದನು.

ಗಾಡಿ ಹೊರಟಿತು. ಇವರಿಬ್ಬರೇ ಅಲ್ಲಿ—ಆ ಅಡವಿಯ ನಿಲ್ದಾಣದಲ್ಲಿ ಉಳಿದರು.

೨

ಗಾಡಿ ಹೊರಟ ಐದೇ ನಿಮಿಷಗಳಲ್ಲಿ ನಿಲ್ದಾಣವೆಲ್ಲ ನಿರ್ಜನವಾಯಿತು. ಅತ್ತ ಇತ್ತ ಸುಳಿದಾಡುತಲಿದ್ದ ಪೋರ್ಟರರೂ ಗೂಡು ಸೇರಿದರು. ಸ್ಟೇಶನ್ ಮಾಸ್ತರರು ಟಿಕಿಟುಗಳ ಲೆಕ್ಕಾಚಾರ ಮುಗಿಸಿ. ತಮ್ಮ ಆಫೀಸಿಗೆ ಕೀಲಿ ಹಾಕಿ, ಹೊರಹೊರಟರು. ಮೂರನೇ ವರ್ಗದ ವಿಶ್ರಾಂತಿ ಗೃಹದೊಳಗಿಂದ; ಅವರು

ಹಾಯ್ದು ಹೋಗುವಾಗ ಒಂದು ಮೂಲೆಯಲ್ಲಿ ಆ ಕುರುಡಿ ಕುಳಿತುದನ್ನೂ ಆ ಬದಿಯ ಬೆಂಚಿನ ಮೇಲೆ ಆ ಕುರುಡ ಒರಗಿದುದನ್ನೂ ಕಂಡು ಕೆಕ್ಕರಗಣ್ಣಿನಿಂದ ನೋಡುತ್ತ ಮುಂದೆ ಸಾಗಿದರು.

ಹದಿನೈದು ನಿಮಿಷಗಳಾದವು; ಅರ್ಧ ತಾಸಾಯಿತು. ಅವರು ಸುಮ್ಮನೆ ಕುಳಿತಿದ್ದರು. ಅವನು ಈಕೆಗೆ ಮಸುಕುಮಸುಕಾಗಿ ಕಾಣುತ್ತಿದ್ದ. ಅವನಿಗೂ ಆಕೆ ಅಲ್ಲಿ ಕುಳಿತಿದ್ದು ಗೊತ್ತಿತ್ತು. ಆದರೂ ಇಬ್ಬರೂ ಮಾತನಾಡಲಿಲ್ಲ.

ಇಂಥ ಪ್ರಸಂಗಗಳು ಅವರಿಗೇನೂ ಹೊಸತಾದುವಾಗಿರಲಿಲ್ಲ. ಗಾಡಿಯಿಂದ ಹೊರಗೆ ತಳ್ಳಿಸಿಕೊಳ್ಳುವದು ಅವರಿಗೆ ರೂಢಿಯಾಗಿಬಿಟ್ಟಿದ್ದಿತು. ಅಂತೆಯೇ ಆ ಕುರುಡ ನಿಶ್ಚಿಂತೆಯಿಂದಿದ್ದ. ಕೂತಲ್ಲಿ ನಿಂತಲ್ಲಿಯೇ ತನ್ನ ಜಗತ್ತು ಎನ್ನುತ್ತಿದ್ದ. ಮತ್ತೊಂದು ಗಾಡಿ ಬರುವ ದಾರಿ ನೋಡುತ್ತಿದ್ದ. ಆಕೆ ಮಾತ್ರ ಸ್ವಲ್ಪ ಗಾಬರಿಯಾಗಿದ್ದಳು. ಆಕೆ ರಾತ್ರಿ ತಿರುಗಾಡುವ ರೂಢಿಯನ್ನು ಇಟ್ಟುಕೊಂಡಿದ್ದಿಲ್ಲ - ತಾನು ಹೆಂಗಸಾದುದರಿಂದ ತಿರಿದು ಕೂಡಿ ಹಾಕಿದ ನಾಲ್ಕಾರು ದುಡ್ಡುಗಳನ್ನು ಯಾರಾದರೂ ಕಸಿದುಕೊಂಡಾರು ಎಂದು. ಮೇಲಾಗಿ ಬರಿಯ ಕೈಗೋಲಿನ ಸಹಾಯದಿಂದ ರಾತ್ರಿ ಅಲೆದಾಡುವದೂ ಅವಳಿಗೆ ದುಸ್ತರವಾಗಿತ್ತು. ಹತ್ತಿರದಲ್ಲಿಯೇ ಯಾವವಾದರೂ ಹಳ್ಳಿಗಳಿದ್ದರೆ, ಇಷ್ಟರಲ್ಲಿ ಅವನು ಎಲ್ಲಿಯೋ ? ಅವಳು ಎಲ್ಲಿಯೋ ?

ಆಕೆ ಹರಕು ಕುಬಸದೊಳಗಿಂದ ಕಿಮುಟು - ಕಿಮುಟಾದ ಚಂಚಿಯನ್ನು ತೆಗೆದು ಅಡಿಕೆ ಹಾಕಿಕೊಂಡಳು; ಒಣಗಿದ ಎಲೆಯ ಚೂರಿಗೆ ಸುಣ್ಣ ಹಚ್ಚಿ ದವಡೆಯಲ್ಲಿ ಇಟ್ಟುಕೊಂಡಳು; ತುಣುಕು ಕಡ್ಡಿಯ ಪುಡಿಯನ್ನು ಕಚ್ಚಿದಳು. ಆತ ಎದ್ದು ಕುಳಿತು ತಲೆಗೆ ಸುತ್ತಿದ ವಲ್ಲಿಯ ಚುಂಗಿನಲ್ಲಿ ಕಟ್ಟಿದ ಚಿಲುಮೆಯಲ್ಲಿ ತಂಬಾಕ ತುಂಬಿ ಕಡ್ಡಿ ಕೊರೆದ. ಉಟ್ಟ ಪಂಚೆಯನ್ನು ಚಿಲುಮೆಯ ತಳಕ್ಕೆ ಹಿಡಿದು ಒಂದು ಜುರಿ ಜಗ್ಗಿದ. ಹೊಗೆ ಎದಿಗೆ ಹತ್ತಿ ಕೆಮ್ಮುತ್ತಿದ್ದಾಗಲೇ ಆಕೆಯನ್ನು ವಿಚಾರಿಸಿದ:

'ಗಾಡಿ ತಿರುಗಿ ಏಟು ಹೊತ್ತಿಗೆ ಬರತಾವು?'

'ಹೊತ್ತು ಮುಳುಗಿ ಎಳ್ಡು ತಾಸಿಗೆ ಒಂದು ಇತ್ತಾಗಿಂದ ಐತಿ. ಅತ್ಲಾಗಿಂದು ಬೆಳಗಿನ ಜಾವ ಬರತೈತಿ.'

ಒಂದು ಕ್ಷಣ ಸುಮ್ಮನೆ ಕುಳಿತು ಆಕೆ ಕೇಳಿದಳು.

'ಎಲ್ಲೀತಂಕಾ ಹೋಗಬೇಕಾಗಿತ್ತವ್ವ ಹೀಂಗs. ಗುಡ್ಡದ ಜಾತ್ರೀಗೆ ಹೊಂಟಿದ್ದೆ—ದೊಡ್ಡ ಜಾತ್ರಿ ನಾಕು ದುಡ್ಡು ಹುಟ್ಯಾವೂ ಅಂತಾ. ನೀ ಎಲ್ಲಿಗೆ ಹೋಗಬೇಕವ್ವ?'

'ನಾನೂ ಅಲ್ಲಿಗೇ.'

'ನಡೀ ಹಂಗಾರ. ಜತೀ ಆಗತೈತಿ. ಇಬ್ರೂ ಕೂಡೇ ಹೋಗಾಣ. ರಾತ್ರೀ ಗಾಡಿಗೇ ಹೋದ್ರಾತು. ತಿಕೀಟನವರ ತರಾಸು ಕಡ್ಮಿ ಇರತೈತಿ ರಾತ್ರೀ.'

'ಅಯ್ಯ ಶಿವನs! ರಾತ್ರೀ ಏನ್ ಹೋದಿಯೋ ಎಣ್ಣಾ. ಕಾಲು ಗೀಲು ಮುರಕೊಂಡು ಕೂಡಬೇಕಾದೀತು. ಚುಮು - ಚುಮು ಅನ್ನತ್ಲೆ ಒಂದು ಗಾಡಿ ಐತಿ. ಆವಾಗ ಹೋಗಾಣಂತೆ.'

ಐದು ನಿಮಿಷದ ಅವರ ಸಂಭಾಷಣೆ ಅವರ ಪರಿಚಯವನ್ನು ಹೆಚ್ಚಿಸಿತು. ಅವರಲ್ಲಿ ಆತ್ಮೀಯತೆಯು ಅಂಕುರವನ್ನು ಮೂಡಿಸಿತು. ಆ ಕುರುಡಿಗೆ ಜೊತೆಗೆ ಒಬ್ಬ ಇರುವನಲ್ಲ ಎಂದು ಸಮಾಧಾನವಾಯಿತು; ಧೈರ್ಯ ಬಂದಿತು.

ಮಧ್ಯಾಹ್ನದ ಅಸಹನೀಯವಾದ ಬೇಗುದಿ ಇದೀಗ ಕಡಿಮೆಯಾಗಿದ್ದಿತು. ಆದರೂ ಗವ್ಮು ಮಾತ್ರ ಇನ್ನೂ ಇದ್ದಿತು. ಕುರುಡಿ ನೀರಡಿಸಿದಳು. ತನ್ನ ಹರಕು ಚಿಂದಿಗಳ ಗಂಟನ್ನು ಉಚ್ಚಿ ಅದರಲ್ಲಿಯ ಅಲ್ಯುಮನಿಯಮ್‌ದ ಕೊಳಗವೊಂದನ್ನು ಹೊರಗೆ ತೆಗೆದಳು.

ಅದೇ ನಿದ್ದೆ ಮುಗಿಸಿ ಜೋಲಿ ಹೊಡೆಯುತ್ತ ಬಲಗೈಯಲ್ಲೊಂದು ಕಂದೀಲನ್ನೂ ಎಡದ ಕೈಯಲ್ಲೊಂದು ಹಿಡಿಕಿಯುಳ್ಳ ಕಬ್ಬಿಣದ ಕೊಂಕಿಯನ್ನೂ ಹಿಡಿದುಕೊಂಡು ಬರುತ್ತಲಿದ್ದ ಪೋರ್ಟರನ ಸುಳಿಹು ಹತ್ತಿತವಳಿಗೆ. 'ಎಪ್ಪಾ ಕುಡಿಯಾಕ ನೀರು ಏನಾರ ಸಿಕ್ಕ್ಯಾವೇನು ಇಲ್ಲಿ?' ಎಂದು ಕೇಳಿದಳು. ಆತ ನಿಲ್ಲಲಿಲ್ಲ. ಆಕೆಯ ಕಡೆ ತಿರುಗಿ ನೋಡಲಿಲ್ಲ. ಮುಂದೆ ಸಾಗು–ಸಾಗುತ್ತಲೇ 'ಆಫೀಸಿನ ಬಾಗಲಾಗ ಹೂಜಿ ಐತಿ ನೋಡು. ಕೈ–ಪೈ ಎದ್ದೀ. ನಳದಾಗೀಂದ ನೀರು ಬಿಟಗೋ ಮತ್ತ. ಇಲ್ಲದಿದ್ದರ ಹೊರ್‍ಯಾಕ ಹೋಗು. ಧರ್ಮಸಾಲೀ ಹತ್ರ ಚಾದಂಗಡಿ ಐತಿ; ಕೇಳು. ನೀರು ಹಣಸತಾರ' ಎಂದ.

ಕುರುಡಿ ಉಚ್ಚಿದ ಗಂಟನ್ನು ಮತ್ತೆ ಕಟ್ಟಿಟ್ಟು, ಒಳಗೆ ಹೋಗಿ ಹೂಜಿಯೊಳಗಿಂದ ನೀರು ತಂದಳು. ಗಂಟಿನ ಬದಿಯಲ್ಲಿಯೇ ಇದ್ದ ಜೋಳಿಗೆಯೊಳಗಿಂದ ಪುಡಿ - ಪುಡಿಯಾದ ರೊಟ್ಟಿಯ ತುಣುಕುಗಳನ್ನು ತೆಗೆದಳು. 'ಉಣ್ಣಾಣ ಬಾರs ಎಣ್ಣಾ' ಎನ್ನುತ್ತ ತುಣಕುಗಳನ್ನು ಎರಡು ಗುಂಪುಮಾಡಿ ನೆಲದ ಮೇಲಿಟ್ಟು ಪ್ರತಿಯೊಂದು ಗುಂಪಿನ ಮೇಲೆ ತುಸು ತುಸು ಹಿಂಡಿಯನ್ನು ಹಚ್ಚಿದಳು.

ಕುರುಡು ಗುಡ್ಡೆಗಳನ್ನು ಅತ್ತಿತ್ತ ಹೊರಳಾಡಿಸುತ್ತ ಕೈಯಲ್ಲಿಯ ಕಡ್ಡಿಯನ್ನು ಗಿರಿಗಿರಿ ತಿರುಗಿಸುತ್ತ ಕುಳಿತ ಕುರುಡ 'ಉಣ್ಣವ್ವ ನೀನs. ನನ್ನ ಹಂತ್ಯಾಕೂ ಐತಿ ರೊಟ್ಟಿ' ಎಂದ.

ಆಕೆ ಕೇಳಲಿಲ್ಲ. ತಡವರಿಸುತ್ತ ಅವನು ಕುಳಿತಲ್ಲಿಗೆ ಬಂದು, ಕೈಯಲ್ಲಿ ರೊಟ್ಟಿಯ ತುಣುಕುಗಳನ್ನಿಟ್ಟಳು.

ಇಬ್ಬರೂ ಮೌನವಾಗಿಯೇ ರೊಟ್ಟೀ ತಿಂದರು. ಆಕೆ ಅರ್ಧ ಕೊಳಗ ನೀರು ಕುಡಿದು, ಉಳಿದ ನೀರನ್ನು ಅವನಿಗೆ ಕೊಟ್ಟಳು.

ಹತ್ತಿರ ಚಹಾದ ಅಂಗಡಿ ಇರುವದೆಂದು ಪೋರ್ಟರನು ಅಂದ ಮಾತು ಕುರುಡನ ನೆನಪಿಗೆ ಬಂತು. ಅವನು ಮೇಲೆ ಎದ್ದ. ಏನೂ ಮಾತಾಡದೇ ಅದೇ ಕೊಳಗವನ್ನು ತೆಗೆದುಕೊಂಡು ಮೆಲ್ಲಗೆ ಕೋಲು ಊರುತ್ತ ಹೊರಕ್ಕೆ ಹೋದ.

ಕುರುಡಿ ಇದೇ ಸಮಯ ಸಾಧಿಸಿ ತನ್ನ ಚಂಚಿಯಲ್ಲಿದ್ದ ಎಲ್ಲ ದುಡ್ಡನ್ನೂ ಕೆಳಗೆ ಸುರುಹಿದಳು. ಕುಬಸದ ತೋಳಿನಲ್ಲಿ ಸುತ್ತಿದ ಎರಡಾಣೆಯನ್ನೂ ಅದರಲ್ಲಿ ಹಾಕಿದಳು. ಸೀರೆಯ ಬಾಳಿಯಕಾಯಿಯಲ್ಲಿಯೂ ನಾಲ್ಕಾರು ದುಡ್ಡು ಇದ್ದುದು ನೆನಪಾಯಿತು. ಮೊದಲು ಎಲ್ಲವನ್ನೂ ಕೂಡಿಸಿದಳು. ಮುಖವನ್ನು ಮೇಲೆತ್ತಿ ಶೂನ್ಯ ದೃಷ್ಟಿಯ ಕಣ್ಣುಗಳ ರೆಪ್ಪೆಗಳನ್ನು ಬಡೆಯುತ್ತ ಬೆರಳನ್ನು ಒಂದೊಂದೇ ನಾಣ್ಯದ ಅಂಚಿನ ಗುಂಟ ಆಡಿಸಿ ಆಡಿಸಿ ನಾಣ್ಯಗಳನ್ನು ವಿಂಗಡಿಸಿದಳು. ಸ್ಪರ್ಶಸಹಾಯದಿಂದಲೇ ಸವಕಳಿ ಹಣವನ್ನೂ ಬೇರ್ಪಡಿಸಿದಳು. ಎಲ್ಲವನ್ನೂ ಬೇರೆ ಬೇರೆಯಾಗಿ ಎಣಿಸಿ ಚಂಚಿಯಲ್ಲಿ ಭದ್ರವಾಗಿ ಇಟ್ಟುಕೊಂಡಳು.

ಇಷ್ಟರಲ್ಲಿ ಕೋಲಿನ ಸಪ್ಪಳವಾಯಿತು. ಆಕೆಯ ಚಂಚಿ ಕುಬಸದ ಒಡಲಲ್ಲಿ ಕುಳಿತಿತು.

ಕುರುಡ ತನ್ನ ಜೋಳಿಗೆಯೊಳಗಿನ ಜಂಗು ತಿಂದ ಬಟ್ಟಲವನ್ನು ತೆಗೆದು, ಕೊಳಗದಲ್ಲಿ ತಂದ ಚಹದಲ್ಲಿ ಅರ್ಧವನ್ನು ಅದರಲ್ಲಿ ಸುರುಹಿಕೊಂಡ. ಉಳಿದುದನ್ನು ಕುರುಡಿಯ ಮುಂದೆ ಇಟ್ಟು, 'ಕುಡಿ, ಆರತೈತಿ' ಎಂದ.

'ಏನು ತಂದಿ ?' ಎಂದು ಆಕೆ ಕೊಳಗವನ್ನು ಮುಟ್ಟಿದಳು. ಬಿಸಿ ಹತ್ತಿತು.

'ಚಾ.'

'ಎಲ್ಲಿಂದ ತಂದಿ ?'

'ಹೊರ್ರ್ಯಾಕ ಅಂಗಡಿ ಐತಿ.'

'ಬಿಕ್ಸಾ ?'

'ಕೊಟ್ಟಾರವ್ವ! ಅಂಗಡೇರಿಗೆ ದಯಾ - ಮಾಯಾ ಇರತೈತೇನು ? ರೊಕ್ಕಾ ಕೊಟ್ಟು ತಂದೆ.'

ಅವಳ ಕುರುಡು ಗಣ್ಣುಗಳು ಉಪಕಾರದ ಪ್ರತಿಕ್ರಿಯೆಯನ್ನು ವ್ಯಕ್ತಮಾಡಲು ಅಸಮರ್ಥವಾಗಿದ್ದರೂ, ಅವಳ ಮುಖದ ಮೇಲಿನ ಮಿದುವು ನಗೆ ವ್ಯಕ್ತಮಾಡಿತು ಆದಾದರೂ ಆ ಕುರುಡನಿಗೆ ತಿಳಿಯುವದೆಂತು ?

'ನಿನ್ನ ಹೆಸರೇನಪ್ಪ?' ಎಂದಳಾಕೆ ಚಹವನ್ನು ಕುಡಿಯುತ್ತ.

'ದ್ಯಾಮು. ನಿನ್ನ ಹೆಸರು ?' ಎಂದು ಆತ ತಿರುಗಿ ಪ್ರಶ್ನಿಸಿದ.

'ಕೆಂಚಿ' ಎಂದು ಉತ್ತರ ಬಂತು.

ತಾವು ಪರಕೀಯರು ಅಪರಿಚಿತರು ಎಂಬ ಭಾವನೆ ಆಗಲೇ ಕಡಿಮೆಯಾಗು ತಲಿದ್ದ ದ್ಯಾಮು - ಕೆಂಚಿಯರನ್ನು ಪರಸ್ಪರರ ಹೆಸರುಗಳ ಪರಿಚಯ ಹತ್ತಿರ ತಂದಿತು. ಆತ್ಮೀಯತೆ ಸದೃಢವಾಗಹತ್ತಿತು. ಸಹಾನುಭೂತಿ ಬೆಳೆದು ಪರಸ್ಪರ ಪರಿಚಯವನ್ನು ಪೂರ್ಣವಾಗಿ ಮಾಡಿಕೊಳ್ಳುವ ಆತುರ ಅವರಲ್ಲಿ ಹೆಚ್ಚಿ ತಮ್ಮ ತಮ್ಮ ಕರುಣ ಕಥೆ ಯನ್ನು ತೋಡಿಕೊಂಡರು:

ಕೆಂಚಿ ಬಾಲ್ಯದಲ್ಲಿ ಸುಖದಿಂದ ಬೆಳೆದುದನ್ನೂ, ಐದು ವರ್ಷದವಳಿರುವಾಗ ತಾನೂ ತಾಯಿಯೂ ಮೈಲೀ ಬೇನೆಗೆ ತುತ್ತಾಗಿ ಕಣ್ಣುಗಳನ್ನೂ ತಾಯಿಯನ್ನೂ ಕಳೆದುಕೊಂಡು ಆ ಮೇಲೆ ಅರ್ಧಮರ್ಧ ಹುಚ್ಚನಂತಿದ್ದ ತಂದೆಯ ಕಪಾಳಕ್ಕೆ ಬಿದ್ದು ದನ್ನೂ, ತಂದೆ ಮನೆ ಕಟ್ಟುವ ಕೆಲಸದಲ್ಲಿದ್ದಾಗ ಹಸಿಯ ಗೋಡೆ ಮೈಮೇಲೆ ಬಿದ್ದು ತೀರಿಕೊಂಡು ಜಗತ್ತಿನಲ್ಲಿ ತನ್ನೊಬ್ಬಳನ್ನೇ ಕಷ್ಟನಷ್ಟಕ್ಕೆ ಈಡುಮಾಡಿದುದನ್ನೂ, ಸಾದ್ಯಂತವಾಗಿ ಸವಿಸ್ತಾರವಾಗಿ ನಿವೇದಿಸಿದಳು.

ದ್ಯಾಮುನ ತಂದೆ - ತಾಯಿಗಳಿಬ್ಬರೂ ಹುಟ್ಟುಗುರುಡರಿದ್ದರೆಂದೂ ಅವರ ಹೊಟ್ಟೆಯಲ್ಲಿ ತಾನು ಸಹ ಹುಟ್ಟು—ಗುರುಡನಾಗಿಯೇ ಹುಟ್ಟಿದನೆಂಬುದನ್ನೂ ಕೇಳಿ ಕೆಂಚಿಗೆ ಆಶ್ಚರ್ಯವಾಯಿತು. ತಂದೆ ಇಳಿವಯಸ್ಸಿನಲ್ಲಿಯೇ ಬೇನೆಬಂದು ಸತ್ತನಾ ದರೂ ತಾಯಿ ತನ್ನ ಕುರುಡತನದ ಪ್ರತಿಫಲವಾಗಿ ಗಾಡಿಯ ಬಾಯಿಗೆ ಸಿಕ್ಕು ಸತ್ತ ಳೆಂಬುದನ್ನು ಕೇಳಿ ಕೆಂಚಿ ಹಳಹಳಿಪಟ್ಟಳು. ಕುರುಡುಗಣ್ಣಿನ ಕುಂಕಣಿಯಿಂದ ಎರಡು ಹನಿ ನೀರು ತಂದಳು. ತನ್ನದೆಂಬ ಊರು-ಮನೆ-ಮಾರುಗಳಾವವೂ ತನಗಿ ಲ್ಲವೆಂದೂ ತನ್ನ ಕೈಗೋಲೊಂದೇ ತನ್ನ ಆಪ್ತಸ್ನೇಹಿತನೆಂದೂ ದ್ಯಾಮು ಹೇಳಿದಾಗ ಕೆಂಚಿ ಕನಿಕರಗೊಂಡಳು. ಇಬ್ಬರೂ ಸಮಾನ-ದುಃಖಿಗಳೆಂದು ಅವನ ಬಗೆಗೆ ಆಕೆಯ ಸಹಾನುಭೂತಿ ಇಮ್ಮಡಿಸಿತು; ನೂರ್ಮಡಿಯಾಯ್ತು.

ಅವರ ಹರಟೆ ನಡೆದಾಗ ತೋಳಿನಲ್ಲಿ ಕೂಸನ್ನೆತ್ತಿಕೊಂಡು ಸ್ಟೇಶನ್ ಮಾಸ್ತ ರರು ನಿಲ್ದಾಣಕ್ಕೆ ಬಂದರು. ದ್ಯಾಮು—ಕೆಂಚಿಯರನ್ನು ನೋಡಿ ಕುಪಿತರಾದರು; ಗದ್ದರಿಸಿದರು:

'ಇಲ್ಲಿ ಯಾಕ ಕೂತೀರೊ: ಜಗಾ ಹೊಲಸು ಮಾಡಲಿಕ್ಕೆ? ಇದೇನು ಧರ್ಮ ಸಾಲಿ ಅಂತಾ ತಿಳಿದೀರೇನು? ಹೋಗರಿ ಇಲ್ಲಿಂದ ಹೊರಗ. ಅಲ್ಲಿ ಧರ್ಮಸಾಲಿ ಇದs ನೋಡ್ರಿ. ಹೋಗ್ರಿ ಅಲ್ಲಿ ಬಿದ್ದುಕೊಳ್ಳಿರಿ. ಯಾರು ಇದ್ದೀರೋ ಒಳಗೆ? ಬಸಪ್ಪಾ, ಬಾ ಇಲ್ಲಿ; ಇವರನ್ನ ಹೊರಗ ಹಾಕು.'

ಬಸಪ್ಪ 'ಓ' ಎನ್ನಲಿಲ್ಲ; ಬರಲೂ ಇಲ್ಲ.

ದ್ಯಾಮು - ಕೆಂಚಿ ಬೆದರಿದರು. ಆದರೆ ಇಂಥ ಬೆದರಿಕೆ, ಅವರಿಗೆ ಹೊಸ ದೇನೂ ಅಲ್ಲದ್ದರಿಂದ, ಮರುಕ್ಷಣ ಮಾಯವಾಯಿತು. ಕೆಂಚಿ ಸ್ವಲ್ಪ ಸಿಟ್ಟಿಗೂ ಎದ್ದಳು. ಜಗತ್ತೆಲ್ಲ ನಿರ್ದಯದ ಮುದ್ದಿ ಎಂದುಕೊಂಡಳು. ಜಗತ್ತೆಲ್ಲ ಒಂದು, ತಾನೂ ಕೆಂಚನೂ ಒಂದು ಎಂದು ತಮ್ಮಿಬ್ಬರನ್ನು ಜಗತ್ತಿನಿಂದಲೇ ಬೇರ್ಪಡಿಸಿದಳು.

ಅವಳಿಗೇ ಅಲ್ಲಿ ನಿಲ್ಲಲು ಮನಸ್ಸಾಗಲಿಲ್ಲ. ಮೇಲಾಗಿ ಸಂಜೆಯಾದಂತೆ ಗಾಳಿ ಬೀಸತೊಡಗಿತ್ತು. ಮಧ್ಯಾಹ್ನದ ಅಸಹನೀಯವಾದ ಶಕೆಯಿಂದಲೋ ಏನೋ ಮೋಡಗವಿಯಹತ್ತಿದ್ದಿತೆಂಬುದು ಗಾಳಿಗುಂಟ ಬರುವ ತಂಪಿನಿಂದಲೂ ಮಳೆಯ ಬರುವನ್ನು ಸೂಚಿಸುವ ವಾಸನೆಯಿಂದಲೂ ಅವಳಿಗೆ ಗೋಚರವಾಯಿತು. ಆ ವಿಶ್ರಾಂತಿ ಗೃಹದಲ್ಲಿ ಯಾವ ಬಗೆಯ ಮೊರೆಯಾಗಲೀ ಚಾಟಾಗಲೀ ಇರಲಿಲ್ಲ.

ಆದುದರಿಂದ ದ್ಯಾಮು - ಕೆಂಚಿಯರು ಧರ್ಮಶಾಲೆಯತ್ತ ಪ್ರಯಾಣ ಬೆಳಸಿ ದರು.

೩

ಕಗ್ಗಾವಳಾಯಿತು. ಧರ್ಮಶಾಲೆಯ ಮುಂದಿನ ದೀಪದ ಕಂಭದಲ್ಲಿ ದೀವಿಕೆ ಮಿನುಗುತ್ತಿದ್ದುದರ ಸುಳುಹು ಕೆಂಚಿಗೆ ಹತ್ತಿತಾದರೂ ದ್ಯಾಮುನಿಗೆ ತಿಳಿಯಲಿಲ್ಲ. ಅವರಿಗೆ ಅದರ ಅವಶ್ಯಕತೆಯೇ ಇರಲಿಲ್ಲ. ಅವರಿಗೆ ಹಗಲು - ರಾತ್ರಿಗಳ ಅಂತರವೂ ಅಷ್ಟೊಂದು ಇರಲಿಲ್ಲ. ನಿದ್ರೆ ಬಂದಾಗ ರಾತ್ರಿ; ಉಳಿದ ವೇಳೆಯೆಲ್ಲ ಹಗಲು.

ಒಂದು ತಾಸು ಗತಿಸಿತು.

ದ್ಯಾಮು ತನ್ನ ಅಂಗಾಲಿನ ಮೇಲೆ ಬೆರಳು ಆಡಿಸುತ್ತ, ಕಡ್ಡಿಪುಡಿಯನ್ನು ಜಗಿಯುತ್ತ ಕುಳಿತಿದ್ದ ಕೆಂಚಿಗೆ ಅಂದ:

'ಮುಳಗಡ್ಡಿ ಐತೇನು ಕೆಂಚವ್ವ ನಿನ್ ಹಂತ್ಯಾಕ?'

'ಇಲ್ಲ. ಯಾಕ?'

'ಆಗಲೇ ಚಾ ತರಾಕ ಹೋದಾಗ, ಕಾಲಾಗ ಮುಳ್ಳು ಮುರಕೊಂಡೈತಿ. ಕೈಗೆ ಅಟೀತೈತಿ, ಬರಾಕ ವಲ್ದು.'

'ನಾ ತಗೀತೇನಿ ತಡಿ; ಉಗುರು ದೊಡ್ವು ಅದಾವು.' ಎಂದು ಕೆಂಚಿ ಅವನ ಉಲುವು ಹಿಡಿದು ಹತ್ತಿರ ಹೋದಳು. ಕೈಯನ್ನು ನೆಲದ ಮೇಲೆ ಸವರಿದಳು. ದ್ಯಾಮ ಆಕೆಯ ಬೆರಳನ್ನು ಹಿಡಿದು, ತನಗೆ ಮುಳ್ಳುನಟ್ಟ ಸ್ಥಳದಲ್ಲಿ ಇರಿಸಿದ. ಕೆಂಚಿ ಬೆರಳನ್ನು ಒತ್ತಿ ಒತ್ತಿ ಮುಳ್ಳನ್ನು ಅಳುಕಿಸಿ ಅದು ಇರುವ ಸ್ಥಳವನ್ನು ನಿಶ್ಚಿತ ಗೊಳಿಸಿದಳು. ಅವನ ಕಾಲನ್ನು ತನ್ನ ತೊಡೆಯ ಮೇಲಿಟ್ಟುಕೊಂಡು, ಅನಾಯಾ ಸವಾಗಿ ಆ ಮುಳ್ಳನ್ನು ತೆಗೆದೊಗೆದಳು.

ಅಂದು ಮಧ್ಯಾಹ್ನ ದ್ಯಾಮ ಕೆಂಚಿಯ ಹಾಡು ಕೇಳಿದಾಗಲೇ ಆಕೆಯ ಬಗೆಗೆ ಅವನ ಕುತೂಹಲ ಕೆರಳಿದ್ದಿತು. ರೂಪ - ಲಾವಣ್ಯಗಳೆಂದರೆ ಏನೆಂಬ ಕಲ್ಪನೆಯು ಸಹ ಅವನಿಗಿರಲಿಲ್ಲವಾದರೂ, ಆಕೆಯ ಮೃದುವಾದ ಧ್ವನಿ ಅವನ ಹೃದಯವನ್ನು ಕುಣಿಸಿದ್ದಿತು. ಈಗ ಆಕೆ ತನ್ನನ್ನು ಮುಟ್ಟಿದಾಗ, ಅವಳ ಮೃದುವಾದ ಹಸ್ತವು ತನ್ನ ಕಾಲನ್ನು ಒತ್ತಿದಾಗ, ಅವನ ಸ್ಪರ್ಶೇಂದ್ರಿಯುಗಳು ಉದ್ರೇಕಗೊಂಡವು. ಆತ ಅನಿರ್ವಚನೀಯವಾದ ಸುಖದ ತರಂಗವನ್ನು ಅನುಭವಿಸಿದ. ಅವಳ ತೊಡೆಯ ಮೇಲಿನ ಕಾಲನ್ನು ಬೇಗ ಹಿಂದೆಗೆದುಕೊಳ್ಳಬೇಕೆನಿಸಲಿಲ್ಲ. ಆಕೆಯೂ ಹಾಗೆಯೇ ಕುಳಿತಿದ್ದಳು.

ಒಂದು ಕ್ಷಣ ಗತಿಸಿತು.

'ನಿನಗ ಏಸು ವರುಸಾ ಈಗ ?' ಎಂದ ದ್ಯಾಮ.

'ನನಗೆ ಗೊತ್ತಿಲ್ಲ. ಇಪ್ಪತ್ತು ವರಸದ ಮ್ಯಾಗ ಎಳ್ಡು ಮೂರು ವರಸ ಆಗಿದಾವೋ ಏನೊ ? ನಿನಗ ?'

'ನಂಗೂ ಇಪ್ಪತ್ತೈದು - ಇಪ್ಪತ್ತಾರು ವರಸ ಆಗಿದ್ದಾವು.'

ಅವಳ ವಯಸ್ಸಿನ ಬಗ್ಗೆ ಅವನ ಆತುರ; ಅವನ ವಯಸ್ಸಿನ ಬಗ್ಗೆ ಅವಳ ಆತುರ.

ತಾನೀಗ ಒಬ್ಬ ಹರೆಯದ ಗಂಡಸಿನ ಬಳಿ ಕುಳಿತಿರುವೆನೆಂಬ ಕಲ್ಪನೆ ಕೆಂಚಿಯ ಅಂಗಾಂಗದಲ್ಲಿಯೂ ಕಂಪನ ಹುಟ್ಟಿಸಿತು. ಹಿಂದೆ ಸರಿದು ಕುಳಿತಳು.

ಇಬ್ಬರೂ ಕೂಡಿ ಮತ್ತೆ ಊಟ ಮಾಡಿದರು. ದ್ಯಾಮ ಚಹದ ಅಂಗಡಿಯ ವರೆಗೆ ಹೋಗಿ ನೀರು ತಂದ.

ದ್ಯಾಮ - ಕೆಂಚಿಯರು ಮತ್ತೆ ಸ್ವಲ್ಪ ಹೊತ್ತು ಹರಟೆ ಹೊಡೆದರು. ಕೆಂಚಿಯ ಸಲಿಗೆಗೀಗ ಯಾವ ಬಗೆಯ ಅಡೆ-ತಡೆಗಳಿರಲಿಲ್ಲ. ಪರಕೀಯತೆಯ ಬೇಲಿಯೀಗ ಸಂಪೂರ್ಣವಾಗಿ ನಶಿಸಿ ಹೋಗಿದ್ದಿತು. ಆಕೆ ತಾನು ಅನುಭವಿಸಿದ ನಾನಾ ಪ್ರಸಂಗ ಗಳನ್ನು ಚಿತ್ರ-ವಿಚಿತ್ರವಾಗಿ ವರ್ಣಿಸಿ ದ್ಯಾಮನನ್ನು ಹೊಟ್ಟೆ ಹಿಡಿಸಲಾರದಷ್ಟು ನಗೆ ಸಿದಳು.

ಕಡೆಗೆ ಕೆಂಚಿ ಗಾಳಿ ತಾಗದ ಮೂಲೆಯೊಂದರಲ್ಲಿ ಮಲಗಿಕೊಂಡಳು. ದ್ಯಾಮು ಆ ಕಡೆಗೆ ದೂರ ಮಲಗಿಕೊಂಡ.

ತಾಸಾಯಿತು; ಎರಡು ತಾಸಾಯಿತು.

ಕೆಂಚಿಗೆ ನಿದ್ದೆ ಹತ್ತಲಿಲ್ಲ. ವಿಚಾರಿಸಿದಳು; ಮತ್ತೆ ಮತ್ತೆ ವಿಚಾರಿಸಿದಳು. ಏನೇನೋ ಬಯಸಿದಳು: ಈ ಧರ್ಮಶಾಲೆಯಂಥ ತನ್ನದೇ ಒಂದು ಮನೆಯಿರಬೇಕು; ಟಿಕಿಟು ಕಲೆಕ್ಟರರ ಕಾಟವಿಲ್ಲದೇ, ಸ್ಟೇಶನ್ ಮಾಸ್ತರರ ಭೀತಿಯಿಲ್ಲದೇ, ಈಗಿನಂತೆಯೇ ಸ್ವತಂತ್ರಳಿರಬೇಕು. 'ತನ್ನವನೆ'ನ್ನುವವ ಒಬ್ಬ ಬಳಿಯಲ್ಲಿ ಇರಬೇಕು. ಆತ ತಾನು - ಇಬ್ಬರೇ - ಅಲ್ಲಿ ವಾಸಿಸುತ್ತಿರಬೇಕು....ಮರುಕ್ಷಣ 'ಇವೆಲ್ಲ ಹುಚ್ಚು ಬಯಕೆಗಳು' ಎನಿಸುತಿತ್ತು. ಹೃದಯದಲ್ಲಿ ಮತ್ತೆ ಭಾವನಾತರಂಗಗಳು ಮೂಡಿದಾಗ, 'ಮನೆ ಮಾರು ಅಸಾಧ್ಯವಾದ ಮಾತಾಗಬಹುದು. ಆದರೆ, ಉಳಿದ ಬಯಕೆಗಳೂ ಈಡೇರಲಾರವೇ ?' ಎಂದು ತನ್ನನ್ನೇ ತಾನು ಪ್ರಶ್ನಿಸುತ್ತಿದ್ದಳು.

ಆಕೆ ಅತ್ತಿತ್ತ ಹೊರಳಾಡಿದಳು; ಉಸಿರುಗರೆದಳು. ಧರ್ಮಶಾಲೆಯ ಹೊರಗೆ ಬಿರುಗಾಳಿ ಹೆಚ್ಚಾಗಹತ್ತಿತ್ತು. ಬಿರುಗಾಳಿಗೆ ಸಿಕ್ಕ ಒಣಗಿದ ಎಲೆಗಳು ಒಳಗೂ ನುಗ್ಗಿ ಗೋಡೆಗಳಿಗೆ ಅಪ್ಪಳಿಸುತ್ತಿದ್ದವು.

'ದ್ಯಾಮುಪ್ಪ!' ಎಂದಳಾಕೆ.

'ಓ' ಎಂದ ದ್ಯಾಮುಪ್ಪ.

'ನಿದ್ದಿ ಹತ್ತಿಲ್ಲ ?'

'ಇಲ್ಲವ್ವ ಕೆಂಚವ್ವ, ಹತ್ತಿಲ್ಲ.'

'ಯಾಕಽ ?'

ದ್ಯಾಮುಪ್ಪ ಒಂದು ನಿಮಿಷ ಸುಮ್ಮನಿದ್ದ. ಆ ಮೇಲೆ ನೆವದ ಕಾರಣ ಕೊಟ್ಟ:

'ಗಾಳೀ, ತಂಡೀ, ಬಾಳ ಐತಿ.'

ಆಕೆ ಒಂದು ನಿಮಿಷ ಮೌನವಾಗಿದ್ದು, ಅನುಮಾನಿಸುತ್ತ, ಮಿದುವಾಗಿ ಎಂದಳು:

'ದ್ಯಾಮುಪ್ಪ, ನನಗ ಇನ್ಮ್ಯಾಕ "ಕೆಂಚವ್ವ" ಅನಬ್ಯಾಡ. ಚಂದಕಾಣ್ಸದಿಲ್ಲ. "ಕೆಂಚಿ" ಅನ್ನು !'

'ಹಂಗಾರ ನನಗೂ ನೀ "ದ್ಯಾಮು" ಅಂತಾನಽ ಕರೀಬೇಕು ಮತ್ತ!'

ಇಬ್ಬರೂ ಮುಸುಗಿನಲ್ಲಿಯೇ ನಕ್ಕರು. ಆ ನಗೆ ಬರಿಯೆ ವಿನೋದದ ನಗೆಯಾಗಿರಲಿಲ್ಲ; ಬರಿಯ ಆನಂದದ ನಗೆಯಾಗಿರಲಿಲ್ಲ; ಅರ್ಥಪೂರ್ಣವಾಗಿದ್ದಿತು-ಎಂಬುದು ಇಬ್ಬರಿಗೂ ಹೊಳೆಯದೆ ಇರಲಿಲ್ಲ.

* * * *

ನಸುಕಿನಲ್ಲಿ ನಿಲ್ದಾಣದ ಗಂಟೆ ಬಾರಿಸಿದಾಗ ಅವರಿಬ್ಬರೂ ಎಂದೂ ಅರಿಯದ ಗೆಲವಿನಿಂದ ಎದ್ದರು. ಮೊದಲೇ ಅವರು ಕರಿದು - ಬಿಳಿದು ಎಂಬುದನ್ನು ಅರಿತಿರಲಿಲ್ಲ; ನೆಳಲು-ಬೆಳಕು ಎಂಬುದರ ಕಲ್ಪನೆಯಿರಲಿಲ್ಲ; ಅಂಕು - ಡೊಂಕು ಎಂಬುದನ್ನು ಕನಸಿನಲ್ಲಿಯೂ ಕಂಡಿರಲಿಲ್ಲ. ಅವರ ಜೀವನ ಪ್ರವಾಹಗಳು, ಪ್ರತ್ಯೇಕವಾಗಿಯಾದರೂ, ಸರಳವಾಗಿ ಧಾರಾಳವಾಗಿ ನಿರಂತರವಾಗಿ ನಿರಾತಂಕವಾಗಿ ಹರಿಯುತ್ತ ಬಂದಿದ್ದವು. ಇಂದು ಅವೆರಡೂ ಪ್ರವಾಹಗಳು ಸಂಗಮ ಹೊಂದಿ ಇಮ್ಮಡಿಯಾಗಿ ಹರಿಯಹತ್ತಿದ್ದವು. ಇಂದು ಅವರ ಮನ ಹಕ್ಕಿಯ ಪುಚ್ಚಕ್ಕಿಂತಲೂ ಹಗುರಾಗಿದ್ದಿತು.

ಅವರು ಗಂಟು - ಮೊಟ್ಟೆಗಳನ್ನು ಹೆಗಲಿಗೆ ಹಾಕಿಕೊಂಡು ಲಗುಬಗೆಯಿಂದ ನಿಲ್ದಾಣದ ಕಡೆಗೆ ಹೊರಟಾಗ ಕೆಂಚಿ ದ್ಯಾಮನನ್ನು ಕೇಳಿದಳು:

'ತಿಕೀಟು ಕೊಂಡು ಬಿಡಾಣೇನು, ದ್ಯಾಮ ?'

'ಯಾಕs ?'

'ತಿಕೀಟನಾಂವಾ ತರಾಸು ಕೊಟ್ಟು ನಮ್ಮಿಬ್ಬರನ್ನೂ ಅಗಲಿಸ್ಯಾನೆಲ್ಲೊ ಅಂತಾ ಅಂಜಿಕಿ'

ದ್ಯಾಮ ನಕ್ಕ 'ಕೆಂಚಿ, ಇಂದಿನ ತಂಕಾ ಸೂರ್ಜಾ ನಮ್ ಕಣ್ ತಪ್ಪಿ ಓಡಾಡಿದ್ರೂ, ಅಂವಗs ನಮ್ಮ ಸುಕಾ ಸೆಳಕೊಂಡು ಹೋಗsದು ಆಗಿಲ್ಲ. ಅಂದಮ್ಯಾಕ, ಇನ್ಮ್ಯಾಲೆ ಸೊಟ್ಟ ತಿಕೀಟನಾಂವಗ ಅಂಜೋದs ?' ಎಂದ.

ಕೆಂಚಿಗೆ ದಾರಿಯ ಸುಳುಹು ತುಸು ತುಸು ಹತ್ತುತ್ತ ಇದ್ದಿತಾದ್ದರಿಂದ ದ್ಯಾಮನ ಬಲಗೈಯನ್ನು ತನ್ನ ಎಡದ ಕೈಯಿಂದ ಹಿಡಿದು ಮುಂದೆ ಸಾಗಿದಳು; ದ್ಯಾಮ ಅವಳನ್ನೆ ಹಿಂಬಾಲಿಸಿದ. ದ್ಯಾಮನ ಕೈಗೋಲು ಕೆಂಚಿಯ ಕೈಗೋಲನ್ನು ಅನುಸರಿಸಿ ತಾಳಕಟಿಯುತ್ತ ಸಾಗಿತು.

—ವರಗಿರಿ

# ಬಾಗಿಲು ತೆರೆದಿತ್ತು

ಆ ಮನೆಯ ಮುಂದಿನ ಬಾಗಿಲು ಯಾವಾಗಲೂ ಇಕ್ಕಿರುವುದು! ನನ್ನ ಓದುವ ಕೋಣೆಯ ಕಿಡಿಕೆಯೊಳಗಿಂದ ಆ ಮನೆಯ ಬಾಗಿಲು ಕಾಣುವುದು. ನಾನು ಕಿಡಿಕೆಯೊಳಗಿಂದ ಎಷ್ಟೋ ಸಲ ಅತ್ತ ಕಡೆ ನೋಡುತ್ತಿರುತ್ತೇನೆ. ನನ್ನ ಲಕ್ಷ್ಯ ಎಷ್ಟೋ ಸಲ ಆ ಕಡೆಗೇ ಇರುತ್ತದೆ. ಆದರೆ ಆ ಮನೆಯ ಬಾಗಿಲು ತೆರೆಯುವುದು ಬಹುಶಃ ನಾನು ಕಂಡಿಯೇ ಇಲ್ಲ !

ಅದು ಮನೆ! ಅಹುದು, ಮನೆಯೆಂದು ನಾವು ಕರೆಯಬೇಕು, ಅಷ್ಟೆ. ಮನೆಯ ಛಪ್ಪರ ಹಳೆಯ ತಗಡುಗಳದು ! ಗೋಡೆ ತಟ್ಟೆಯದು ! ಬಾಗಿಲು ಬೀಳಾದದ್ದು ! ಹಿಂದಕ್ಕೆ ಇದೇ ಮನೆಯಲ್ಲಿ 'ದನಗಳು' ಇರುತ್ತಿದ್ದವಂತೆ ! ಈಗ 'ಜನಗಳು' ಇವೆ! ಅಹುದು ಇರಲೇಬೇಕಲ್ಲ. ಮನೆಗಳು ಬಾಡಿಗೆಗೆ ಸಿಗದ ಕಾಲದಲ್ಲಿ, ಎಲ್ಲಿಯಾದರೂ ವಾಸವಾಗಿರಬೇಕಲ್ಲ !

ಇಂಥ ಮನೆಯಲ್ಲಿ ಯಾರು ವಾಸವಾಗಿರಲು ಬಂದಿರುವರೋ ನನಗೇನೂ ತಿಳಿಯದು. ಅವರು ಹೊರಗೆ ಬಂದುದನ್ನು ನೋಡಿಲ್ಲ. ಹೊರಗಿನ ಜನರ ಸಂಗಡ ಸಹವಾಸ ಬೆಳೆಸಿದುದನ್ನು ಕಂಡಿಲ್ಲ. ಒಳಗೆ ಯಾರೂ ಇಲ್ಲದವರಂತೆ ಮನೆ ಇದೆ. ಆದರೂ ಯಾರೋ ಅಲ್ಲಿ ಇರುವರೆಂಬ ಸುದ್ದಿ ಮಾತ್ರ ನಿಜ.

ನಾನೇನೋ ಅಲ್ಲಿ ಘೋಷಾ ಸ್ತ್ರೀಯರು ಬಂದಿರಬಹುದೇನೋ ಎಂದು ಹಲವು ಸಲ ಯೋಚಿಸಿದೆ. ಆದರೆ ಗಂಡಸರೂ ಘೋಷಾದಲ್ಲಿ ಇರುವುದಿಲ್ಲವಷ್ಟೇ?...... ಮತ್ತೆ ಯಾರಾದರೂ ಕೆಲಸ ಮಾಡುವವರಾಗಲಿ, ವಿದ್ಯಾರ್ಥಿಗಳಾಗಲಿ ಇರಬಹುದೇನೋ ಎಂದೆನಿಸಿತು. ಆದರೆ ರಾತ್ರಿಯಲ್ಲಿಯಾದರೂ ಅವರ ಮಾತುಕತೆ ಕೇಳಬೇಡವೇ ? ಇಷ್ಟು ಮೌನವಾಗಿ ಇರುವವರು ತಪಸ್ವಿಗಳು, ಆದರೆ ಅವರು ತಪೋವನವನ್ನು ಬಿಟ್ಟು ಇಲ್ಲಿಗೆ ಹೇಗೆ ಬರುವರು !........ಹೀಗೆ ಏನೇನೊ ಕಿಡಿಕೆ ಹತ್ತಿರ ಕುಳಿತು ಬಾಗಿಲದ ಕಡೆಗೆ ನೋಡುವ ನನಗೆ ವಿಚಾರಗಳು ಬರುತ್ತವೆ.

ಒಂದುದಿನ ನನ್ನಾಕೆ ಆ ಮನೆಯಲ್ಲಿ ಯಾರೋ ಒಬ್ಬ ಹೆಂಗಸು ಇರುವಳೆಂಬ ಸುದ್ದಿಯನ್ನು ತಿಳಿದುಕೊಂಡಳು. ಇದರಿಂದ ನನ್ನ ಕೂತೂಹಲವು ಮತ್ತಿಷ್ಟು ಕೆರಳಿತು. ಒಬ್ಬಳೇ ಒಬ್ಬಳು ಹಗಲು ರಾತ್ರಿ ಅಲ್ಲಿ ಇರಬೇಕಾದರೆ ! ! ಆದರೆ ಇದರ ಬಗ್ಗೆ ಹೆಚ್ಚಿಗೆ ವಿಚಾರ ವಿನಿಮಯ ಮಾಡುವ ಹಾಗಿರಲಿಲ್ಲ. ನನ್ನಾಕೆಯ ಸಂಗಡ

ಇದರ ಬಗ್ಗೆ ಕೇಳದ ಹಾಗಾಯಿತು. ಹೆಂಗಸರ ಬಗ್ಗೆ ಕೇಳಿದರೆ ಅವಳಾದರೂ ಏನು ತಿಳಿದುಕೊಂಡಾಳು ! ಅಂತೆಯೇ ನಾನು ಮೌನವನ್ನು ತಾಳಬೇಕಾಯಿತು.

ನನ್ನ ಕೋಣೆಯಲ್ಲಿ ಕುಳಿತಾಗ, ಅತ್ತ ಕಡೆಗೆ ನನ್ನ ಲಕ್ಷ್ಯ ಹೋಗಹತ್ತಿ ನನ್ನ ಓದುವಿಕೆಗೂ ತೊಂದರೆಯಾಗತೊಡಗಿತು. ಕಣ್ಣುಗಳ ಎದುರಿಗೆ ಪುಸ್ತಕವಿರಬೇಕು; ಚಿತ್ತವೆಲ್ಲ ಬಾಗಿಲದ ಕಡೆಗೆ ಇರಬೇಕು ! ಕಿಡಕಿಯ ಬಾಗಿಲ ಮುಚ್ಚಿದರೂ ಹಾಗೆಯೇ ಆಗತೊಡಗಿತು. ಇನ್ನು ನಾನೇ ಎಲ್ಲಿ ಆ ಮನೆ ಬಿಡಬೇಕಾಗುವದೋ ಎಂದೊಮ್ಮೆ ಎನ್ನಿಸಿತು.

ಇದ್ದಕ್ಕಿದ್ದಂತೆ ಆ ಬಾಗಿಲದ ಎದುರಿಗೆ ಗದ್ದಲ ಕಾಣಿಸಿತು ! !

ಒಬ್ಬ ಡಾಕ್ಟರನು ಒಳಗೆ ಹೊದನು. ಅವನ ಹಿಂದೆ ಅವನ ಕಂಪೌಂಡರ ಮತ್ತು ನರ್ಸ ಹೋದರು. ಜೊತೆಗೆ ಸುಮಾರು ಮೂವತ್ತು ವರ್ಷದ ಒಬ್ಬ ಮನುಷ್ಯನು ಬಾಗಿಲು ಮುಂದೆ ಮಾಡಿಕೊಂಡು ಒಳಗೆ ಮಾಯವಾದನು.

ನಾನು ಆ ಕಡೆಗೆ ನೋಡುತ್ತಿದ್ದೆ !

ಹದಿನೈದು ನಿಮಿಷ ಒಳಗೆ ಏನೇನೋ ಗದ್ದಲ ಸಾಗಿತ್ತು. ಒಳಗೆ ನಡೆಯುವ ಮಾತುಕತೆಗಳು ಸ್ಪಷ್ಟವಾಗಿ ಏನೂ ಕೇಳುತ್ತಿರಲಿಲ್ಲ. ಆದರೆ ಯಾರಿಗೋ ಬಹಳ ಜಡ್ಡಾಗಿರಬೇಕು ! ಏನೋ ಗಂಭೀರ ಸ್ವರೂಪದ್ದಿರಬೇಕು ! ಎಂದು ಮಾತ್ರ ಅನಿಸುವಂತಿತ್ತು.

ಡಾಕ್ಟರನು ಹೊರಗೆ ಬಂದನು. ಅವನು ಹಸನ್ಮುಖಿಯಾಗಿಯೇ ಇದ್ದನು. ಅವನ ಹಿಂದೆ ನರ್ಸ ಮತ್ತು ಕಂಪೌಂಡರರು ಓಡಿ ಬಂದರು. ಆದರೆ ಆ ಮೂವತ್ತು ವರುಷದ ಮನುಷ್ಯನ ಮುಖದಲ್ಲಿ ಮಾತ್ರ ಚಿಂತೆ ಒಟ್ಟುಗೂಡಿತ್ತು. ಕಂಗೆಟ್ಟವನಂತೆ ಹುಚ್ಚ ಕಳೆ ಮುಖದಮೇಲೆ ಸುರಿಯುತ್ತಿತ್ತು.

ಆ ಕಡೆಗೆ ದಾರಿಯ ಒಂದು ಬದಿಗೆ 'ಕಾರು' ನಿಂತುಕೊಂಡಿತ್ತು. ಡಾಕ್ಟರ ಆದರೊಳಗೆ ಸೇರಿ ಕಾರು ಹೊಡೆಯುವ ತಯಾರಿ ನಡೆಸಿದ. ನರ್ಸ ಮತ್ತು ಕಂಪೌಡರ ತನ್ನ ಹಿಂದಿನ ಸ್ಥಳಗಳಲ್ಲಿ ಕುಳಿತುಕೊಂಡರು.

ಆ ಮನುಷ್ಯನು ಬಾಗಿ ಅತ್ಯಂತ ದೀನ ಸ್ವರದಿಂದ ಡಾಕ್ಟರಿಗೆ ಕೇಳಿದ: 'ಏನ್ರಿ ಡಾಕ್ಟರ ? ಹೇಗೆ ಮಾಡಬೇಕು ?'

'ನಾನೇನು ಹೇಳುವುದು ? ಕೇಸ ಸೀರಿಯಸ್ ಇದೆ. ಒಂದೊಂದು ಇಂಜಕ್ಷನ್ನಿಗೆ ಸುಮಾರು ಐವತ್ತು ರೂಪಾಯಿ ಬೀಳಬಹುದು. ಆಪರೇಶನ್ ಮಾಡಬೇಕಾಗುತ್ತದೋ ಏನೋ !........'

'ನೋಡ್ರಿ ಡಾಕ್ಟರ! ಹೇಗಾದರೂ ಮಾಡಿ ಬಿಡಬೇಕು. ಇದೊಂದು ಪುಣ್ಯದ ಕೆಲಸ!'

'ಓ! ಪುಣ್ಯದ ಕೆಲಸ! ಹೀಗೆ ಎಲ್ಲರೂ ಅಂದರೆ ನಾನು ಈ ಧಂದೆಯನ್ನಾದರೂ ಏಕೆ ಮಾಡಬೇಕು?'

'ನೋಡ್ರಿ ಡಾಕ್ಟರ........ಏನೋ ಬಡವ........'

'ಛೇ, ನನ್ನಿಂದ ಈ ಕೆಲಸವು ಆಗದು. ಊರಲ್ಲಿ ವೈದ್ಯರಿದ್ದಾರೆ. ಅವರು ಸಹಾಯ ಮಾಡಬಹುದು. ಅವರಿಗೆ ಎರಡು ರೂಪಾಯಿ ಕೊಟ್ಟರೆ ಸಾಕು.'

'ಜೀವದ ಪ್ರಶ್ನೆ, ಅದಕ್ಕಾಗಿಯೇ ಇಲ್ಲಿ ಪಟ್ಟಣಕ್ಕೆ ಬಂದಿದ್ದೇವೆ ಡಾಕ್ಟರ. ನಿಮ್ಮ ಹೆಸರು ಕೇಳಿ ಬಂದಿದ್ದೇವೆ........ನಾನು ಹಣ ಕೊಡುತ್ತೇನೆ........ಕಂತು ಮಾಡಿ ಕೊಡುತ್ತೇನೆ...........ಕೊಡುತ್ತೇನೆ, ಡಾಕ್ಟರ ವಿಶ್ವಾಸವಿಡಿರಿ.'

'ಈಗ ಎಷ್ಟು ಕೊಡುವಿರಿ?'

'ಹದಿನೈದು ಕೊಡುತ್ತೇನೆ, ಕೆಲಸ ಆರಂಭಿಸಿ.'

'ಹದಿನೈದು!! ನೂರು ರೂಪಾಯಿ ಖರ್ಚು ಬರುವಾಗ ಹದಿನೈದರಿಂದ ಏನಾಗಬೇಕು?'

'ಆಯಿತು ಇಪ್ಪತ್ತು ಕೊಡುತ್ತೇನೆ. ನಿಮ್ಮ ದವಾಖಾನೆಗೆ ಬಂದು ಕೊಟ್ಟು ಹೋಗುತ್ತೇನೆ.'

'ಹೂಂ, ಆಗಲಿ. ಟಿಪ್ಪಣಿ ಮಾಡಿಕೊಳ್ಳಿರಿ.'

'ಹೆಸರು?' ನೋಟುಬುಕ್ಕು ತೆಗೆಯುತ್ತ ಕಂಪೌಂಡರ ಕೇಳಿದ.

'ಚಂದ್ರಕಾಂತ........'

'ಅಡ್ಡ ಹೆಸರು ಮತ್ತು ವಯಸ್ಸು?'

'ಕಲ್ಲೂರ— ವಯಸ್ಸು, ಮೂವತ್ತು'

'ಅಲ್ಲಾ ಮರೆತೆ ನಿಮ್ಮ ಮನೆಯವರ ಹೆಸರು?'

ಚಂದ್ರಕಾಂತ ಹಿಂದು ಮುಂದು ನೋಡಿದನು. ನರ್ಸ ಹೇಳಿದಳು. 'ಶಾಂತಾ ಎಂದು ಏನೋ ಅಂದಂತಾಯಿತು.'

ಚಂದ್ರಕಾಂತ 'ಹೌದು....ಅದೇ' ಎಂದು ನುಡಿದ.

ಕಾರು ಸಪ್ಪಳ ಮಾಡಿತು. ಚಂದ್ರಕಾಂತ ಹಿಂದೆ ಸರಿದು ಬಂದ. ಚಂದ್ರಕಾಂತ ತಿರುಗಿ ಬರುವಾಗ ಕಾಲಲ್ಲಿ ಶಕ್ತಿಯೇ ಇರಲಿಲ್ಲ. ಅವನು ಬಾಗಿಲು ತೆರೆದು ಒಳಗೆ ಹೋಗಬೇಕೆನ್ನುವಾಗ, ಎದುರಿಗೆ ನನ್ನ ಕಿಡಿಕೆಯ ಕಡೆಗೆ ನೋಡಿದನು. ಅವನು ಹೊರಳಿದುದನ್ನು ಕಂಡ ಕೂಡಲೇ ನನ್ನ ಮುಖ ಕೆಳಗೆ ಮಾಡಿದೆ.

ಆ ಬಾಗಿಲು ಮತ್ತೆ ಇಕ್ಕಿಕೊಂಡಿತು. !

ಮುಚ್ಚಿದ ಬಾಗಿಲು ಮುಚ್ಚಿಯೆ ಇದೆ; ಬಾಗಿಲದೊಳಗೆ ಏನು ನಡೆದಿದೆಯೊ ಏನೂ ತಿಳಿಯುವಂತಿರಲಿಲ್ಲ. ಆ ಜನರಿಗೆ ಏನಾದರೂ ತೊಂದರೆ ಇರಬೇಕು. ಚಿಂತೆ ಯಿರಬೇಕು ಎಂದು ಊಹಿಸಿದೆ. ಆದರೆ ಆ ಬಾಗಿಲದವರೆಗೆ ಹೋಗಿ ನಾನಾ ಗಿಯೆ ಮಾತನಾಡಿಸುವ ಧೈರ್ಯ ನನಗಾಗಲಿಲ್ಲ.

........ಒಂದು ತಿಂಗಳ ನಂತರ !

ಅವು ಚಂದ್ರೋದಯದ ದಿನಗಳು ! ಅದೇಕೋ ಮೋಡಗಳಿಲ್ಲ ಮಾಯವಾಗಿ ಬಾನು ತಿಳಿಯಾಗಿತ್ತು. ತಂಗದಿರ ಮುಗುಳ್ನಗೆಯಿಂದ ಮೂಡಣದಲ್ಲಿ ನಿಂತುಕೊಂಡು ಭೂಮಿಯ ಕಡೆಗೆ ನೋಡುತ್ತಿದ್ದ. ಅವನ ಸ್ಪರ್ಶ ಮಾತ್ರದಿಂದಲೇ ಇಳೆಯು ಹರ್ಷ ಪುಲಕಿತವಾಗಿತ್ತು. ಮಳೆಗಾಲದ ದಿನಗಳಲ್ಲಿ ಇಂಥ ಬೆಳದಿಂಗಳ ಇರುಳುಗಳು ಇರುವುದು ತೀರ ಕಡಿಮೆ.

ಬೆಳದಿಂಗಳ ಅಪರೂಪ ಅಮೃತವನ್ನು ಸವಿಯುತ್ತ ನಾನು ಕಿಡಿಕೆಯ ಬಳಿ ಕುಳಿತಿದ್ದೆ. ಗೋಪುರದಲ್ಲಿಯ ದೊಡ್ಡ ಗಡಿಯಾರವು ಢಣ ಢಣ ಎಂದು ಹತ್ತು ಗಂಟೆ ಬಾರಿಸಿತು. ಸನಿಹದ ಒಂದು ಮನೆಯಲ್ಲಿ ಬಾನುಲಿ ಹಚ್ಚಿದರು. ತರತರದ ಗಾನಗಳ ಇನಿದನಿ ಇಂಪಾಗಿ ಕೇಳಬರುತ್ತಿತ್ತು. ಈ ಧ್ವನಿಯ ಜೊತೆಗೆ ಕಪ್ಪೆಗಳ ಸ್ಪರ್ಧೆ ಇದ್ದಿತೋ ಏನೋ ! ಅವು ಪೊರ್ರ್ ಪೊರ್ರ್ ಎಂದು ಜೋರಾಗಿಯೇ ಒದರುತ್ತಿದ್ದವು.

ಹೀಗೆ ಬೆಳದಿಂಗಳ ಚೆಲ್ವರಾಣಿ ನನ್ನ ಮನದಲ್ಲಿ ಆಟವಾಡುತ್ತಿರುವಾಗ ಒಮ್ಮೆಲೆ ಬಾಗಿಲು ತೆರೆದ ಸಪ್ಪಳವಾಯಿತು. ಅಹುದು, ಅದು ಅದೇ ಮನೆಯ ಬಾಗಿಲು ! ಒಂದು ವ್ಯಕ್ತಿ ಆ ಬಾಗಿಲದೊಳಗಿಂದ ಹೊರಗೆ ಬಂದಿತು. ಸೀರೆಯ ಬಣ್ಣ ಎದ್ದು ಕಾಣುತ್ತಿದ್ದುದರಿಂದ ಅವಳು ಹೆಂಗಸು ಎಂಬುದು ಕೂಡಲೇ ಗೊತ್ತಾ ಯಿತು. ಅವಳು ಚಂದ್ರಕಾಂತನ ಹೆಂಡತಿ ಶಾಂತಾ ಇರಲೇಬೇಕೆಂದೂ ಅನಿಸಿತು. ಆ ಮನೆಗೆ ಬಂದು ಇಷ್ಟು ದಿನಗಳಾಗಿದ್ದರೂ, ಅವಳು ಹೊರಗೆ ಬಂದಿರುವುದನ್ನು ನಾನು ನೋಡಿಯೇ ಇರಲಿಲ್ಲ.

ಕೂಡಲೇ ನಾನು ನನ್ನ ಕೋಣೆಯೊಳಗಿನ ದೀಪವನ್ನು ಆರಿಸಿದೆ. ಇದರಿಂದ ನನ್ನ ಮುಖ ಹೊರಗೆ ಕಾಣಬಾರದೆಂಬುದೇ ನನ್ನ ಉದ್ದೇಶವಿತ್ತು. ಬಹಳ ದಿನಗ ಗಳಿಂದ ನನ್ನ ಕುತೂಹಲವನ್ನು ಕೆರಳಿಸಿದ ಅವಳನ್ನು ನೋಡುತ್ತ ಕುಳಿತೆ.

ಬೆಳದಿಂಗಳು ಬಾಗಿಲದ ಒರೆಗೂ ಪಸರಿಸಿತ್ತು. ಆದುದರಿಂದ ಬಾಗಿಲದ ಹೊರಗೆ ನಿಂತ ಅವಳನ್ನು ನೋಡುವುದು ಶಕ್ಯವಿತ್ತು.

ಅವಳು ಚಂದ್ರನ ಕಡೆಗೆ ಮೊಗವೆತ್ತಿ ಅವನನ್ನೇ ನೋಡುತ್ತ ಹಲವು ನಿಮಿಷ ನಿಂತಳು. ಬೆಳದಿಂಗಳಲ್ಲಿ ನಳನಳಿಸುವ ಬಳ್ಳಿ ಅವಳಾಗಿದ್ದಳು. ಅವಳು ತೆಳುವಾಗಿದ್ದಳು. ಅದೇ ಆಗ ಹಾಸಿಗೆಯಿಂದ ಎದ್ದುಬಂದವರಂತೆ ಅವಳ ಬಟ್ಟೆಗಳ ಉಡುವಿಕೆ ಇದ್ದಿತು. ಕೂದಲುಗಳೂ ಹರವಿದ್ದವು. ಪಾಪ! ಅವಳಿಗೆ ಯಾರೂ ಆರೈಕೆ ಮಾಡಲಿಲ್ಲವೋ ಏನೋ!

ಪ್ರಶಾಂತವಾದ, ಕಾಂತಿಯುತವಾದ, ಉಲ್ಲಾಸದಾಯಕವಾದ ಬೆಳದಿಂಗಳನ್ನು ನೋಡಿ ಅವಳಿಗೆ ಏನನಿಸಿತೋ! ಚಂದ್ರನ ಕಿರಣಗಳನ್ನು ನುಂಗಿಬಿಡಬೇಕು ಅನ್ನುವವರಂತೆ ಒಂದು ಚಣ ಅವನ ಕಡೆ ನೋಡಿದಳು. ಮರುಚಣದಲ್ಲಿಯೆ ನಿಟ್ಟುಸಿರು ಬಿಟ್ಟಳು. ತಲೆಯನ್ನು ತನ್ನ ಎರಡೂ ಕೈಗಳಿಂದ ಒತ್ತಿಕೊಂಡಳು.

ಒಳಗೆ ಯಾವುದೋ ಧ್ವನಿ ಕೇಳಿಸಿತು. ಅದು ಕೂಸಿನ ಧ್ವನಿಯಂತೆ ಇದ್ದಿತು. ಅವಳು ಬಾಗಿಲವಿಕ್ಕಿ ಒಳಗೆ ಹೋಗಬೇಕೆಂದಳು, ಆದರೆ ಅಷ್ಟರಲ್ಲಿ........??

ಆಗೋ ಚಂದ್ರಕಾಂತ! ಯಾವಾಗಲೂ ಉಡುವ ಖಾದಿ ಬಟ್ಟೆಗಳನ್ನೇ ಧರಿಸಿದ್ದಾನೆ. ಕೈಯಲ್ಲಿ ಒಂದು ಕೈಚೀಲ. ಕುಲಕುಲನೆ ನಗುತ್ತ ಅಲ್ಲಿಗೆ ಬಂದನು. ಶಾಂತಾ ಅವನನ್ನು ನೋಡಿ ಮುಗುಳ್ನಗೆ ಸೂಸಿದಳು.

ಅವನನ್ನು ನೋಡಿದ ಕೂಡಲೆ ಅವಳು ಕೇಳಿದಳು. 'ಏನು? ಏನುಮಾಡಿದಿರಿ? ಔಷಧ ತಂದಿರಾ? ರೂಪಾಯಿ ತಂದಿರಾ?'

ಚಂದ್ರಕಾಂತ ಇವೆಲ್ಲ ಪ್ರಶ್ನೆಗಳಿಗೆ ಉತ್ತರ ಕೊಡಲಿಲ್ಲ. 'ನೋಡು ಇವೊತ್ತು ನಿನಗೆ ಬೇಕಾದ ಮುಖ್ಯ ವಸ್ತುವನ್ನು ತಂದಿದ್ದೇನೆ. ಬಹಳ ಮಹತ್ವದ ವಸ್ತು.'

ಅವಳು ಆಶ್ಚರ್ಯದಿಂದ ಕೇಳಿದಳು. 'ಏನು? ಏನದು? ನೋಡೋಣ.'

ಚಂದ್ರಕಾಂತ ಒಂದು ಪದಾರ್ಥವನ್ನು ತೆರೆದು ಅದನ್ನು ಅವಳ ಕೈಯಲ್ಲಿಡುತ್ತ ಹೇಳಿದ, 'ಸಂಪಿಗೆಯ ಹೂವಿನ ಮಾಲೆ. ನಮ್ಮ ಜೀವನ ಹೂವಿನ ಹಾಗೆ ಇರಬೇಕೆಂದು ಅನಿಸುತ್ತದೆ ನನಗೆ.'

'ಛೀ, ಏನು ಹುಚ್ಚುತನ? ಈಗ ಆ ಹಿಂದಿನ ಬೆಳದಿಂಗಳ ದಿನಗಳು ಇಲ್ಲ. ಮನೆಯಲ್ಲಿಯ ಗೋಳು ಏನು ಹೇಳಲಿ? ಬಾಡಿಗೆಯನ್ನು ಐದಾರು ಸಲ ಕೇಳಿ ಹೋದರು. ಹಾಲು, ಮಸರಿನವರು ನನಗೆ ಗಂಟುಬಿದ್ದಿದ್ದಾರೆ. ನೀವೇನು ಮನೆಯಲ್ಲಿ ಇರುವುದೇ ಇಲ್ಲ. ಎಲ್ಲಾ ಗೋಳು ನನ್ನ ಸುತ್ತ. ಈ ಹೂವನ್ನು ತೆಗೆದುಕೊಂಡು ಏನು ಮಾಡಲಿ?'

ಅವಳು ಒಂದೇಸವನೆ ಹೀಗೆ ಆಡಿದುದನ್ನು ಕೇಳಿ ಅವನು ತೆಪ್ಪಗಾದ!

ಅವಳು ಹೇಳಿದಳು 'ನಾನು ಎಲ್ಲವನ್ನೂ ಸಹನೆ ಮಾಡಬಹುದು, ನೀವಾದರೂ ಯಾವಾಗಲೂ ಮನೆಯಲ್ಲಿದ್ದರೆ?'

ಇಬ್ಬರೂ ಕೆಳಮೊಗ ಮಾಡಿದರು, ಮೌನವಾದರು!

ಒಳಗಿನ ಧ್ವನಿ ಮತ್ತೆ ಕೇಳಿಸಿತು. ಅವರು ಒಳಗೆ ಹೋದರು ಬಾಗಿಲು ಇಕ್ಕಿತು!

ಮರುದಿನ ಬೆಳಗು. ಆಗ ನಾನು ಚಹ ತೆಗೆದುಕೊಳ್ಳುವ ಹೊತ್ತಾಗಿತ್ತು. ಒಳಗೆ ಸ್ಟೋವಿನ ಸಪ್ಪಳವಿತ್ತು. ಕಪ್ಪು ಬಸಿಗಳ ಸಪ್ಪಳವೂ ಆಯಿತು. ಇನ್ನು ಚಹ ಬೇಗ ಬರಬಹುದೆಂದು ದಾರಿ ಕಾಯುತ್ತ ನನ್ನ ಕೋಣೆಯಲ್ಲಿಯೇ ಕುಳಿತಿದ್ದೆ.

ಬಾಗಿಲದಲ್ಲಿ ಏನೋ ಸದ್ದಾಯಿತು. ಚಹವೇ ಬಂದಿತೆಂದು ನಾನು ಮುಖ ವನ್ನು ಎತ್ತಿದೆ. ಆದರೆ ಅಲ್ಲಿ ಯಾರು? ಚಂದ್ರಕಾಂತ! ನನಗೆ ಅತ್ಯಂತ ಅಚ್ಚರಿ ಯಾಯಿತು. ಇಷ್ಟು ದಿನಗಳಾದರೂ ಒಂದು ಸಲವೂ ನನ್ನ ಕಡೆಗೆ ಬಂದಿರಲಿಲ್ಲ. ಅವನ ಆಗಮನವನ್ನು ಕಂಡು ಚಕಿತನಾದೆ.

ಚಂದ್ರಕಾಂತ ದೂರದಲ್ಲಿರುವಾಗ ಏಕವಚನದಿಂದ ಸಂಭೋದಿಸಿಯೇ ನಾನು ವಿಚಾರಿಸುತ್ತಿದ್ದೆ. ಈಗ ಮನೆಗೆ ಬಂದಾಗ ಬಹುವಚನದಲ್ಲಿ ಸಂಭೋದಿಸುವುದನ್ನು ಆರಂಭಿಸಿದೆ. 'ಬನ್ನಿ ಬನ್ನಿ' ಎಂದೆ.

ಅವರು ಸಾವಧಾನವಾಗಿ ಬಂದು ಚಾಪೆಯಮೇಲೆ ಕುಳಿತರು. ಏನೋ ಒಮ್ಮೆಲೆ ಹೇಳಬೇಕೆಂದಿದ್ದರು. ಅದರಂತೆ ಅವರ ಮುಖಚರ್ಯೆ ಇದ್ದಿತು. ಆದರೆ........? ಮತ್ತೆ ಬೇರೆ ಏನೋ ಮಾತು ತೆರೆಯುತ್ತಿದ್ದರು.

ಇಬ್ಬರೂ ಕೂಡಿ ಚಹ ಕುಡಿದೆವು. ರೇಶನ್, ಕಂಟ್ರೋಲ್, ಕಾಂಗ್ರೆಸ್ ರಾಜ್ಯ, ಸಂಸ್ಥಾನ ಇವೆಲ್ಲ ಮಾತುಗಳು ಹಲವು ನಿಮಿಷಗಳಲ್ಲಿಯೆ ಬಂದು ಹೋದವು ಆದರೆ ಮನೆತನದ ಮಾತುಗಳು ವಿಶೇಷವಾಗಿ ಏನೂ ಬರಲಿಲ್ಲ.

ನಾನೇ ಕೇಳಿದೆ 'ಏನೋ ನಿಮ್ಮ ಮನೆಯಲ್ಲಿ ತ್ರಾಸವಿರಬೇಕು?'

'ನಮ್ಮ ತ್ರಾಸ ಹೇಳುವ ಹಾಗಿಲ್ಲ. ಅವಳು ಬದುಕಿದ್ದೇ ಹೆಚ್ಚಿನದು.'

'ಏನಾಗಿತ್ತು?'

'ಗರ್ಭಿಣಿ ಇದ್ದಳು. ನೂರೆಂಟು ಬೇನೆ..........'

'ಏನು ಬೇನೆ?'

ಚಂದ್ರಕಾಂತ ಮುಖ ಕೆಳಗೆ ಮಾಡಿದರು. ಒಮ್ಮೆಲೇ ನಿಟ್ಟುಸಿರು ಬಿಡುತ್ತ ಹೇಳಿದರು. 'ಡಾಕ್ಟರರೇ ಬದುಕಿಸಿದರು.'

'ಹೊತ್ತು ಚನ್ನಾಗಿತ್ತು ಹಾಗಾದರೆ ?'

'ಹೂಂ ಆದದ್ದು ಆಗಿಹೋಯಿತು. ಆದರೆ ಈಗ ನೀವು........?'

ನನ್ನಿಂದ ಏನೋ ಸಹಾಯ ಯಾಚನೆ ಇದೆಯೆಂಬುದು ಅವರ ಮಾತುಗಳಿಂದ ಅನಿಸಿತು.

'ನಾನು ಏನು ಮಾಡಬೇಕಾಗಿದೆ ?' ಎಂದು ಕೇಳಿದೆ.

'ನೀವೇನೋ.........ಇದ್ದವರು ಎಂದು ಕೇಳಿದ್ದೇನೆ.' ಈಗ ಚಂದ್ರಕಾಂತರು ತಮ್ಮ ಧ್ವನಿಯಲ್ಲಿ ಧೈರ್ಯವನ್ನು ತುಂಬಿಕೊಳ್ಳುತ್ತಿದ್ದರು.

ಅವರ ಮಾತಿನ ಅರ್ಥ ನನಗೆ ಸರಿಯಾಗಿ ಆಗಲಿಲ್ಲ. 'ಏನು ಸಹಾಯ ಮಾಡಬೇಕೊ ಹೇಳಿ. ನನಗೆ ಶಕ್ಯವಿದ್ದಷ್ಟು ಮಾಡುವೆ' ಎಂದೆ.

'ನೂರು ರೂಪಾಯಿ ಸಹಾಯ ಆಗಬಹುದೆ ?' ಚಂದ್ರಕಾಂತ ಮೆತ್ತಗಿನ ಧ್ವನಿಯಲ್ಲಿ ನುಡಿದರು.

ನಾನು ಸ್ವಲ್ಪ ಸುಮ್ಮನೇ ಕುಳಿತೆ. ನನ್ನ ಮೌನದ ಅರ್ಥವನ್ನು ಅವರು ಏನು ಮಾಡಿಕೊಂಡರೋ ಏನೋ ?

ಅವರು ಸುತ್ತು ಮುತ್ತು ನೋಡಿದರು. ಧೈರ್ಯದಿಂದ ತಮ್ಮ ಕಿಸೆಯೊಳಗಿನ ಒಂದು ಬಿಲವಾರವನ್ನು ತೆಗೆದು, 'ನೋಡಿ ಇದರ ತೂಕ ಒಂದು ತೊಲೆ ಆಗಬಹುದು. ನಿಮ್ಮ ಹತ್ತಿರ ಇದು ಇರಲಿ. ನಾನು ಹಣ ನಿಮಗೆ ತಿರುಗಿ ಕೊಟ್ಟಮೇಲೆ ಕೊಟ್ಟೀರಂತೆ ಅಂದು' ಅಂದರು.

ಡಾಕ್ಟರನ ಎದುರಿಗೆ ಮಾತನಾಡುವಾಗ ಎಷ್ಟು ದೈನ್ಯದಿಂದ ಮಾತನಾಡುತ್ತಿದ್ದರೋ ಅಷ್ಟೇ ದೈನ್ಯದಿಂದ ನನ್ನೆದುರು ಮಾತನಾಡಿದರು. ನನಗೆ ಬಹಳ ಕನಿಕರವೆನಿಸಿತು. ಹಣವಿಲ್ಲದಿದ್ದರೆ ಮನುಷ್ಯ ಹೇಗೆ ತನ್ನ ಸ್ವಾಭಿಮಾನಕ್ಕೆ ಗೋರಿ ಕಟ್ಟುತ್ತಾನೆ ! ಮೃಚ್ಛಕಟಿಕ ನಾಟಕದಲ್ಲಿ ಹಣವಿಲ್ಲಂತೆ ಗೋಳಿಡುವ ಚಾರುದತ್ತನ ಪಾತ್ರವು ಒಂದು ಕ್ಷಣ ನನ್ನ ಕಣ್ಣೆದುರು ಹಾದುಹೋಯಿತು.

ಎರಡನೆಯವರ ಪದಾರ್ಥಗಳನ್ನು ತೆಗೆದುಕೊಂಡು ವತ್ತಿ ಇಟ್ಟುಕೊಂಡು ಹಣ ಕೊಡುವ ವ್ಯವಹಾರವನ್ನು ನಾನು ಎಂದಿಗೂ ಮಾಡಿದವನಲ್ಲ. ಚಂದ್ರಕಾಂತ ಬಿಲವಾರ ಹೊರಗೆ ತೆಗೆದಕೂಡಲೇ ನನಗೆ ಅತ್ಯಂತ ಕೆಡುಕೆನಿಸಿತು. ನಾನು ಅವರಿಗೆ ಸ್ಪಷ್ಟವಾಗಿ ಹೇಳಿದೆ. 'ನಿಮ್ಮ ಬಿಲವಾರ ಬೇಡ. ನಾನು ನಿಮಗೆ ಐವತ್ತು ರೂಪಾಯಿ ಕೊಡುತ್ತೇನೆ. ಮತ್ತೆ ನಿಮಗೆ ಅಡಚಣೆ ಎನಿಸಿದರೆ ಕೊಡುತ್ತೇನೆ. ಸದ್ಯ ನನ್ನ ಹತ್ತಿರ ಇಲ್ಲ.'

ನನ್ನ ಮಾತುಗಳನ್ನು ಕೇಳಿ ಅವರಿಗೆ ಆನಂದವಾಗಿರಬೇಕು. ಅಂತೆಯೇ ಮುಖದಲ್ಲಿ ಒಮ್ಮೆಲೇ ಬದಲಾವಣೆ ಕಂಡಿತು. ಮೌನವಾಗಿಯೇ ಕೃತಜ್ಞತೆಯನ್ನರ್ಪಿಸುವಂತೆ ಅವರ ಮುಖವಾಗಿತ್ತು. ನಾನು ಕಪಾಟನಲ್ಲಿರುವ ರೂಪಾಯಿಗಳನ್ನು ತಿರೆದು ಅವರ ಕೈಯಲ್ಲಿ ಇಟ್ಟಾಗ, ಅವರು 'ಮೇನಿ ಥ್ಯಾಂಕ್ಸ. ನಿಮ್ಮಂಥ ಜನರು ಸಿಗುವದು ದುರ್ಲಭ' ಎಂದು ಉದ್ಗಾರ ತೆಗೆದರು.

ಬಾಗಿಲು ತೆಗೆಯಿತು ! ಮತ್ತೆ ಇಕ್ಕಿತು !

ಇಕ್ಕಿದ ಬಾಗಿಲು ಹಾಗಿಯೇ ಇದೆ. ಮೊದಲಿನಂತೆಯೇ ಇದೆ. ಅಲ್ಲಿ ಯಾವ ಸುಳಿವೂ ಇಲ್ಲ.

ಚಂದ್ರಕಾಂತ ನನ್ನ ಕಡೆಗೆ ಹಣದ ಸಲುವಾಗಿ ಹೇಗೆ ಬಂದರೊ, ಅವರ ಮನೆತನದ ಇತಿಹಾಸವೇನೊ, ಅರ ಸ್ವಭಾವವೇನೋ, ಯಾವುದೂ ಅರಿಯದ ಸಂಗತಿ. ನನ್ನ ಕಡೆಗೆ ಅವರು ಬಂದುದು ಮೊದಲ ಸಲ. ಅಂತೆಯೆ ಅವುಗಳ ಬಗ್ಗೆ ನಾನು ಕೇಳುವುದು ಸಾಧ್ಯವಿರಲಿಲ್ಲ. ಪುನಃ ಕಿಡಿಕೆಯ ಹತ್ತಿರ ಕುಳಿತು ಬಾಗಿಲ ಕಡೆಗೆ ನೋಡುವದೊಂದೆ ನನ್ನ ಕಾರ್ಯವಾಗಿತ್ತು.

ಹೀಗೆ ಹಲವು ದಿನ ಉರುಳಿದವು. ಒಂದು ದಿನ ಒಮ್ಮಿಂದೊಮ್ಮೆ ನಮ್ಮ ಮನೆಯಲ್ಲಿ ಅತಿಥಿದೇವರ ಪ್ರವೇಶವಾಯಿತು. ಬಹಳ ಪರಿಚಿತ ಶಬ್ದದಲ್ಲಿ ಹೇಳಬೇಕಾದರೆ ಅವರು 'ಟೊಣ್ಣ್ಯಾ' ಆಗಿದ್ದರು. ತಲೆಯುಮೇಲೆ ರುಮಾಲವಿತ್ತು. ಕೈಯಲ್ಲಿ ಒಂದು ಹಳೆ ಚತ್ತರಿಗೆಯಿತ್ತು. ನಿರ್ಭಿಡೆಯಿಂದ ಅವರು ಒಳಗೆ ಬಂದು ಕುರ್ಚಿಯುಮೇಲೆ ಕುಳಿತರು.

ಈ ಅತಿಥಿಗಳನ್ನು ಸತ್ಕರಿಸುವುದು ಒಂದು ಮೋಜೆನಿಸಿತು. ಒಮ್ಮೆ ಗಾಬರಿಯೂ ಆಯಿತು. ನಾನು ಅವರಿಗೆ ಏನೂ ಪ್ರಶ್ನೆ ಕೇಳಬೇಕಾಗಿರಲಿಲ್ಲ. ಅವರು ತಾವಾಗಿಯೇ ತಮ್ಮ ನಿರರ್ಗಳವಾದ ಶೈಲಿಯಲ್ಲಿ ಭಾಷಣ ಪ್ರಾರಂಭಿಸಿದರು,

'ನಿಮ್ಮದೆಲ್ಲಾ ನನಗೆ ಗೊತ್ತಿದೆ. ನೀವೇ ನನ್ನನ್ನು ಗುರುತಿಸಿರಲಿಕ್ಕಿಲ್ಲ. ನಾನು ಚಂದ್ರಕಾಂತನ ಅಣ್ಣ.' ಹೀಗೆಂದು ಅವರು ತಮ್ಮ ಧೋತರ ಚುಂಗನ್ನು ಹೊರಗೆ ತೆಗೆದು ತಮ್ಮ ಮುಖವನ್ನು ಒರೆಸಿಕೊಂಡರು. 'ಸ್ವಲ್ಪ ನೀರು ಕೊಡುತ್ತೀರಾ ?' ಎಂದು ಕೇಳಿದರು.

'ದಣಿದು ಬಂದಿದ್ದಿರೆಂದು ಕಾಣುತ್ತದೆ. ಬಿಸಿನೀರನ್ನೇ ಕೊಡುತ್ತೇನೆ' ಎಂದೆ.

'ಹೂಂ ಅದೂ ಆಗಬಹುದು. ಈಗ ಸ್ವಲ್ಪ ನೀರು ಕೊಡಿರಿ' ಹಾಗೆಯೇ ಅವರು ಮುಂದುವರಿಯುತ್ತ ಹೇಳಿದರು. 'ನೋಡಿರಿ, ನಮ್ಮದು ಭಿಡೆ ಸ್ವಭಾವನೇ ಅಲ್ಲ.

ನಾವು ದಿನಾಲು ಹಳ್ಳಿ ಹಳ್ಳಿ ತಿರುಗುವವರು. ಭಿಡೆ ಮಾಡಿದರೆ ಬದುಕುವುದೇ ಸಾಧ್ಯವಿಲ್ಲ.'

ನಾನು ನೀರು ತರಿಸಿಕೊಟ್ಟೆ. ಒಳಗೆ ಚಹದ ತಯಾರಿಯೂ ಸಾಗಿತು. ಆಸಾಮಿ ಜೋರಾಗಿಯೇ ಕಾಣುತ್ತದೆಂದು ಅವಲಕ್ಕಿಯ ಸಿದ್ಧತೆಯನ್ನೂ ಮಾಡಲು ಹೇಳಿದೆ.

ನಾನು ಒಳಗಿನಿಂದ ಬರುತ್ತಲೇ ಕೇಳಿದೆ, 'ನೀವು ಹಳ್ಳಿ ಹಳ್ಳಿ ತಿರುಗುತ್ತೀರೆಂದಮೇಲೆ........ನೀವು ?'

'ಹೌದು........ಹೌದು....ಅದೇ ಶಾನಭೋಗರ ಕೆಲಸ. ಒಂದು ಹಳ್ಳಿಯಲ್ಲ–ಎರಡು ಮೂರು ಹಳ್ಳಿ ಶ್ಯಾನಭೋಕಿ ಅವೆ ನಮ್ಮವು. ನೋಡಿರಿ, ನಿಮ್ಮ ಸಂಗಡ ಒಂದು ಮಹತ್ವದ ಸಂಗತಿ ಕೇಳಲಿಕ್ಕೆ ಬಂದಿರುವೆ.'

'ಏನದು ?' ಎಂದೆ.

'ನಮ್ಮ ಚಂದ್ರಕಾಂತ........ನಿಮ್ಮಲ್ಲಿ....?'

'ಬಂದಿದ್ದರು. ಒಂದು ದಿನ ಮಾತ್ರ...........

'ಅದಾಯಿತು. ಆದರೆ ಏನಾದರೂ...........?'

ಸ್ವಲ್ಪ ಸುತ್ತು ಮುತ್ತು ನೋಡಿದರು. ತರುವಾಯ ಪಿಸುಮಾತುಗಳಲ್ಲಿ 'ಹಣ ಏನಾದರೂ ಒಯ್ದಿದ್ದಾನೆಯೆ ?' ಎಂದು ಕೇಳಿದರು.

'ಹೌದು. ಏನೋ ರೂಪಾಯಿ ಐವತ್ತು ತೆಗೆದುಕೊಂಡಿದ್ದಾರೆ' ಎಂದು ಹೇಳಿದೆ.

'ಅದಕ್ಕೇ ಅಂದೆ. ಲುಚ್ಚ್ಯಾ ! ಥೇಟ ಲುಚ್ಚ್ಯಾರಿ ಅವನು' ಎಂದು ಮೇಜಿನ ಮೇಲೆ ತಮ್ಮ ಕೈ ಜೋರಾಗಿ ಬಡಿದು ಅಂದರು. ಅವರ ಧ್ವನಿಯಲ್ಲಿಯೂ ಜೋರು ಬಂದಿದ್ದಿತು.

'ಅಲ್ರಿ ರಾಯರ, ಅವರಿಗೆ ಹಾಗೇಕೆ ಅನ್ನಬೇಕು ? ಅವರಿಗೇನೊ ತ್ರಾಸವಿದೆಯೆಂದು ಕಾಣುತ್ತದೆ.'

'ತ್ರಾಸ ? ಇವರದು ಮುಗಿಯುವ ಹಾಗೇ ಇಲ್ಲ. ಇವನ ಹೆಂಡತಿಗೆ ಮಾಡಿ ಮಾಡಿ ನಮ್ಮ ಅವ್ವ ಬೇಸತ್ತು ಹೋದಳು. ಇವನು ಲಗ್ನ ಮಾಡಿಕೊಂಡ!............ ಆ ಕಡೆ ಚಳವಳಿ ಎಂದು ಊರುಬಿಟ್ಟು ಹೋಗಿಬಿಟ್ಟ! ಯಾರು ಮಾಡಬೇಕು ? ಇವನ ಹೆಂಡತಿ ನೋಡಲಿಕ್ಕೆ ಕರಪರ ಗೊಂಬಿ. ಏನೂ ತ್ರಾಣ ಇಲ್ಲ. ನೂರೆಂಟು ಬ್ಯಾನಿ. ತೀರ್ಥ ಕುಡಿದರೆ ನೆಗಡಿ, ಆರತಿ ತೆಗೆದುಕೊಂಡರೆ ಕಾವು.'

ನಾನೇನೋ ನಡುವೆ ಪ್ರಶ್ನೆ ಕೇಳಬೇಕೆಂದಿದ್ದೆ. ಆದರೆ ಅವರ ಆವೇಶ ಹೆಚ್ಚುತ್ತಿದ್ದುದರಿಂದ ನಾನು ಮೌನವಾಗಿ ಕೂಡಬೇಕಾಯಿತು.

ಅತಿಥಿದೇವರೇ ಹೇಳಲು ಮುಂದುವರಿದರು. 'ನೋಡ್ರಿ, ನಿಜ ಸಂಗತಿ ಹೇಳಬೇಕು ಅಂದರೆ, ಆಣೆಮಾಡಿ ಹೇಳಬೇಕು ಅಂದರೆ, ನಮ್ಮ ಮನೆತನ ಎಲ್ಲಾ ಹಾಳುಮಾಡಿಬಿಟ್ಟ ಚಂದ್ರಕಾಂತ! ಅವನು ಜೇಲಿಗೆ ಹೋದದ್ದರಿಂದ ನಮ್ಮ ಆಸ್ತಿ ಜಪ್ತ ಆದವು. ಈಗಿನ ಕಾಂಗ್ರೆಸ ಸರಕಾರದವರು ಏನು ಕೊಟ್ಟರು ಇವನಿಗೆ ಅಣ್ಣಾ....?'

ಪ್ರಶ್ನೆ ಕೇಳುವ ಹೊತ್ತಿಗೆ ಚಹ ಬಂದಿತು, 'ನಿಮಗೇನಾದರೂ ಇದರ ಸಂಗಡ ಬೇಕೆ ?' ಎಂದು ಸಹಜವಾಗಿ ಕೇಳಿದೆ.

'ಓಹೋ ಅದರಲ್ಲೇನು ? ನಾನು ನಿಮಗೆ ಮೊದಲೇ ಹೇಳಿರುವೆನಲ್ಲ ?' ಎಂದು ಹುರುಪಿನಿಂದ ಅಂದರು.

ನಾನು ಎಣಿಸಿದುದು ನಿಜವೇ ಆಯಿತು !

ಅವರು ಮತ್ತೆ ತಮ್ಮ ವಾದಸರಣಿಯನ್ನೆ ಎತ್ತಿ ಹೇಳಿದರು : 'ನೋಡಿರಿ, ಈಗ ಪಣ ತೊಟ್ಟು, ಮನೆಬಿಟ್ಟು ಹೊರಗೆ ಬಂದಿರುವ ತನಗಾದರೂ ಏನಾದರೂ ನೌಕರಿ ಇದೆಯೇನು ? ನಮ್ಮಲ್ಲಿ ಇದ್ದುಕೊಂಡು ಕುಲಕರ್ಣಿಕಿ ಮಾಡು ಅಂದರೆ ಕೇಳಲಿಲ್ಲ. ಹಿರಿಯರ ಮಾತು ಕೇಳುವ ಹಾಗೆಯೇ ಇಲ್ಲ ಹೀಗೆ ಆದರೆ ಸಂಸಾರ ಸುರಳೀತ ಹೇಗೆ ಸಾಗಬೇಕು, ನೀವೇ ಹೇಳ್ರಿ ? ಏನೋ ಹೇಳುವನು. ಹಳ್ಳಿ ಹಳ್ಳಿ ಪಿರಿ ಪಿರಿ ತಿರುಗುವನು. ಏನು ಕೆಲಸವೊ ಏನೊ ಯಾರಿಗೂ ತಿಳಿಯುವ ಹಾಗಿಲ್ಲ. ನನ್ನ ಬಿಟ್ಟು ಬಿಡಿರಿ. ಸ್ವತಃ ಅವ್ವನಿಗಾದರೂ ಹೇಳಬೇಕೊ ಬೇಡವೊ? ಏನೋ ಸುಳ್ಳು ಹೇಳುತ್ತ ತಿರುಗುವನು. ಏನೋ ಸಮಾಜ ಸೇವೆಯ ಹುಚ್ಚು ಅವನಿಗೆ! ರಾಜಕಾರಣದ ಹುಚ್ಚು ಅವನಿಗೆ! ಬೆಕ್ಕು ತಿರುಗಿದ ಹಾಗೆ ತಿರುಗುತ್ತಾನೆ. ಹೆಂಡತಿ ಒಂದು ಕಡೆಗೆ, ತಾನು ಒಂದು ಕಡೆಗೆ ! ಏನು ಹೇಳಲಿ ಅವನ ಮಹಿಮಾ! ರಾಮ! ರಾಮ ಸಾಕಾಗಿ ಹೋಗಿದೆ. ಈಗ ಸಾಲಾ ಮಾಡಿದ್ದಾನೆ. ಅದೊಂದು ಬೇರೆ. ಎಲ್ಲಾ ಭಂಗಾರದ ಸಾಮಾನು ಹೋದವು......ಓಹೋ ಮರೆತೆ .......' ಪಿಸು ಮಾತಿನಲ್ಲಿ ಅವರು ಕೇಳಿದರು, 'ಏನಾದರೂ ನಿಮ್ಮಲ್ಲಿ ಒತ್ತಿ ಇಟ್ಟಿದ್ದಾನೆಯೇ ?'

' ಏನೂ ಇಲ್ಲ ' ಎಂದು ಸರಳವಾಗಿ ಹೇಳಿದೆ.

' ಲುಚ್ಚಾ ! ಬಿಲವಾರ ಇಟ್ಟಿದ್ದೇನೆ ಅಂತ ಅವ್ವಗ ತಿಳಿಸಿದ್ದಾನೆ. ಎಷ್ಟು ಸುಳ್ಳು ! ಅವೂ ನನ್ನ ಹೆಂಡತಿ ಬಿಲವಾರ ! ಏನೋ ಪಾಪ ! ಇವನ ಹೆಂಡತಿ ಕೈಯಲ್ಲಿ ಇರಲಿ ಎಂದು ನಾನು ಪ್ರೀತಿಯಿಂದ ಕೊಡಿಸಿದ್ದೆ. ಥೇಟ ಲುಚ್ಚಾ. ಅವುಗಳನ್ನು ಕೊಡಬಾರದೂ ಅಂತ ಈ ಸೋಗು ! ನನ್ನ ಹೆಂಡತಿ ಸತ್ತುಹೋದಳು "ಇವನಿಗೇಕೆ ಬೇಕು ?" ಎಂದು ತಿಳಿದಿದ್ದಾನೆ, ಅವನು !'

' ನಿಮ್ಮ ಮನೆಯವರು ತೀರಿಕೊಂಡಿದ್ದಾರೇನು ? ಎಷ್ಟು ದಿವಸವಾದವು ?' ಎಂದು ಅವರ ಮಾತುಗಳ ಮಧ್ಯದಲ್ಲಿಯೆ ಕೇಳಿದೆ.

'ಈ ನಮ್ಮ ಚಂದ್ರಕಾಂತ ಲಗ್ನವಾದ ಒಂದು ವರ್ಷದಲ್ಲಿಯೆ. ಯಾವ ಮುಹೂರ್ತದಿಂದ ಅವಳು ನಮ್ಮ ಮನೆಯಲ್ಲಿ ಕಾಲಿಟ್ಟಳೋ! ಅತ್ತೆಯ ಮನೆಗೆ ಬಂದವಳು ಒಂದೂ ಕೆಲಸ ಮಾಡಲಿಲ್ಲ. ಗೊಂಬಿಯ ಹಾಗೆ ಕೂತುಬಿಡುತ್ತಿದ್ದಳು. ಎಲ್ಲಾ ಕೆಲಸಗಳ ಭಾರ ಇವಳ ಮೈಮೇಲೆ. ಕೆಲಸ ಮಾಡಿ ಮಾಡಿ ಜಡ್ಡು ಹಚ್ಚಿಕೊಂಡು........'

'ಪಾಪ! ಈ ವಯಸ್ಸಿನಲ್ಲಿ ನಿಮಗೆ ತ್ರಾಸವಾಗಿರಬೇಕು! ಅಲ್ಲವೆ?'

'ಈ ತ್ರಾಸ ಹೇಗಾದರೂ ತಡೆದುಕೊಳ್ಳಬಹುದು. ಆದರೆ ಈ ಚಂದ್ರಕಾಂತನದು ಹೇಗೆ ತಡೆದುಕೊಳ್ಳಬೇಕು! ನಮ್ಮ ಅವ್ವ ಇವರ ಸಂಸಾರದ ಸಲುವಾಗಿ ಚಿಂತೆ ಹಚ್ಚಿಕೊಂಡು ಸಾಯಲಿಕ್ಕೆ ಆಗಿದ್ದಾಳೆ. ಅದಕ್ಕೆ ಬಂದೆ ಈಗ........! ಇವನು ಚಳವಳಿಯಲ್ಲಿರುವಾಗ ಎಲ್ಲವನ್ನೂ ನೋಡಿಕೊಂಡು ಹೋಗುತ್ತಿದ್ದೆ. ಎಲ್ಲವೂ ಸುಸೂತ್ರ ಸಾಗಿತ್ತು! ಈಗ ಹೇಗೆ ಆಗಿದೆ. ನೋಡಿರಿ. ನಮಗಂತೂ ಇವನ ಮುಖ ನೋಡಬಾರದು; ಇವನ ಮನೆಯಲ್ಲಿ ಕಾಲಿಡಬಾರದು ಅಂತ ಅನಿಸಿಬಿಟ್ಟದೆ. ನೋಡ್ರಿ, ಇದೊಂದೇ ಉದಾಹರಣೆ. ನಮ್ಮ ಮನೆಯಲ್ಲಿ ಬಾಣಂತನ ಮಾಡಿಸಲಿಕ್ಕೆ ಬರುತ್ತಿದ್ದಿಲ್ಲವೆ? ನಮ್ಮ ಅವ್ವ ಸತ್ತಿರುವಳೇನು ಇವರ ಪಾಲಿಗೆ? ಲುಚ್ಚ್ಯಾಳೆ!'

ಅವರು ಹೊರಡಲು ತಯಾರಾದರು. 'ಇನ್ನೂ ಸ್ವಲ್ಪ ಕುಳಿತು ಹೋಗಬಹುದಲ್ಲ?' ಎಂದು ಬಿನ್ನವಿಸಿದೆ. ಆದರೆ ಅವರು ಕೇಳಲಿಲ್ಲ. 'ನೀವು ಕೆಲಸದವರು. ನಿಮ್ಮ ಹೊತ್ತು ಏಕೆ ಹಾಳು ಮಾಡಬೇಕು? ಬರುತ್ತೇನೆ' ಎಂದು ಹೊರಟೇಬಿಟ್ಟರು.

ಅವರು ಹೊರಗೆ ಹೋಗುವುದನ್ನು ನೋಡಿದೆ. ಆದರೆ ಅವರು ಆ ಮನೆಯ ಕಡೆಗೆ ಆಗ ಹೊರಳಿ ಸಹ ನೋಡಲಿಲ್ಲ. ಇಕ್ಕಿದ ಬಾಗಿಲು ಹಾಗೆಯೇ ಇತ್ತು.

ಅವರಿಗೆ ನಾನು ಅತಿಥಿದೇವರೆಂದೇ ಕರೆಯುತ್ತಿದ್ದೇನೆ. ಏಕೆಂದರೆ ಕೊನೆಯವರೆಗೂ ಅವರ ಹೆಸರು ನನಗೆ ಗೊತ್ತಾಗಲಿಲ್ಲ. ಆ ಅತಿಥಿದೇವರ ಮಾತುಗಳನ್ನು ಕೇಳಿ ನನ್ನಾಕೆ ಎಂದಳು, 'ಸುಮ್ಮನೆ ನೀವು ಗೊಂದಲದಲ್ಲಿ ಬೀಳುತ್ತೀರಿ' ಎಂದು. ಅವಳ ಮಾತುಗಳು ನಿಜವಾಗಿದ್ದವು. ನನಗೆ ಏನೂ ತಿಳಿಯದಾಯಿತು.

ಮರುದಿನ ಬೆಳಿಗ್ಗೆ ಚಂದ್ರಕಾಂತ ನಮ್ಮ ಮನೆಗೆ ಬಂದರು. ಅವರು ಒಳಗೆ ಬಂದವರೆ ನೇರವಾಗಿ ಪ್ರಶ್ನೆ ಕೇಳಿದರು, 'ನಿನ್ನೆ ನಿಮ್ಮ ಮನೆಗೆ ನಮ್ಮ ಅಣ್ಣ ಬಂದಿದ್ದನೇನು?' ಎಂದು.

'ಅಹುದು........ಏಕೆ?' ಎಂದು ಕೇಳಿದೆ.

‘ಅವನು ಭಯಂಕರ ಇದ್ದಾನೆ’ ಎಂದು ಚಂದ್ರಕಾಂತ ನುಡಿದರು. ‘ನಿಮ್ಮ ಮುಂದೆ ಏನು ಹೇಳಿದ ?’

ಎಲ್ಲವನ್ನೂ ಇವರ ಮುಂದೆ ಯಾವ ರೀತಿ ಹೇಳಬೇಕು ? ನಾನು ಸುಮ್ಮನೆ ನಕ್ಕುಬಿಟ್ಟೆ.

ಚಂದ್ರಕಾಂತ ಹೇಳಿದರು, ‘ಇಲ್ಲ, ಏನಾದರೂ ಹೇಳಿರಲೇಬೇಕು. ನನ್ನ ಹಣದ ವಿಷಯ ಕೇಳಿದನಲ್ಲವೆ ?’

‘ಅಹುದು, ಕೇಳಿದರು.’

‘ಆಭರಣ ವಿಷಯ ಕೇಳಿದನೆ ?’

‘ಹೂಂ, ಅದನ್ನೂ ಕೇಳಿದರು.’

‘ನೋಡಿರಿ ಎಷ್ಟು ಭಯಂಕರ ಇರುವನು !’ ಚಂದ್ರಕಾಂತನ ಮುಖದಲ್ಲಿ ಉದ್ವಿಗ್ನತೆ ಇತ್ತು.

‘ಏನಾಗಿದೆ ಈಗ ?’ ಎಂದು ಕೇಳಿದೆ.

‘ಏನಾಗಬೇಕು ? ನನಗೆ ಹಣ ಕೊಡುತ್ತೇನೆಂದು ಹೇಳಿದ. ಭಂಗಾರದ ಆಭರಣ ಕೊಟ್ಟುಬಿಟ್ಟೆ ವಿಶ್ವಾಸದಿಂದ. ಈಗ ಅವೆಲ್ಲವನ್ನು ಮಾಯಮಾಡಿ ಬಿಟ್ಟಿದ್ದಾನೆ.’

‘ಅಬ್ಬಾ! ಹೀಗೋ ?’

‘ಹೂಂ ! ಅದಲ್ಲದೇ ಇದ್ದುಬಿದ್ದ ಸ್ವಲ್ಪ ಬಂಗಾರವೆಲ್ಲವೂ ತನ್ನದೇ ಅನ್ನುತ್ತಾನೆ.’

‘ಬಿಲವಾರ ?’

‘ಹೂಂ ! ಅದೇ ಆ ಬಿಲವಾರ ಅವ್ವ ಕೊಟ್ಟಿದ್ದಾಳಂತೆ, ತನ್ನವೆನ್ನುತ್ತಾನೆ.’

‘ನಿಜವೇ ?’

‘ಹೂಂ ! ಇಷ್ಟೇ ಅಲ್ಲದೇ .....’

‘ಏನ್ರಿ, ಚಂದ್ರಕಾಂತ ಏನದು ?’

‘ನೀವು ಬಹಳ ಒಳ್ಳೆಯವರು. ನಿಮ್ಮ ಮುಂದೆ ಹೇಳಿಬಿಡುತ್ತೇನೆ. ಯಾರಿಗೂ ಹೇಳಬೇಡಿರಿ. ನನ್ನ ಅಣ್ಣ ಕೆಟ್ಟ ಸ್ವಭಾವದವ. ನಾನು ಚಳವಳಿಯಲ್ಲಿರುವಾಗ ನನ್ನ ಹೆಂಡತಿ ಒಬ್ಬಳೇ ಇದ್ದಳು. ಆಗ....!’

ಚಂದ್ರಕಾಂತರ ಮಾತಿನ ಅರ್ಥ ಕೂಡಲೇ ಆಯಿತು. ‘ಅಯ್ಯೋ ಪಾಪ !’ ಎಂದು ಮರುಗುವಂತಾಯಿತು.

'ಇವಳು ಗಟ್ಟಿ. ಅವನ ಆಟವನ್ನು ಸಾಗಗೊಟ್ಟಿಲ್ಲ! ಏನು ಹೇಳಲಿ? ಅಣ್ಣನು ನಾನು ಅಲ್ಲಿ ಇರಬೇಕೆಂದು ಮುದ್ದಾಂ ಬಯಸುತ್ತಿದ್ದಾನೆ. ನಾವು ಅವನ ಸಲುವಾಗಿ ಊರುಬಿಟ್ಟು ಬಂದಿದ್ದೇವೆ. ಇನ್ನು ಅಲ್ಲಿಗೆ ಹೋಗುವದೆ ಇಲ್ಲ. ಬೇಕಾದಷ್ಟು ಕಷ್ಟ ಬರಲಿ!........ಆ ಊರಲ್ಲಿದ್ದರೆ ಇವಳಿಗೆ ಏನೂ ಶಾಂತಿ ಇಲ್ಲ. ಇವಳ ಜೀವನ.......'

ಚಂದ್ರಕಾಂತನ ಕಣ್ಣುಗಳಲ್ಲಿ ಕಂಬನಿ ತುಂಬಿದವು. ದೊಡ್ಡ ಹನಿಗಳು ಒಣ ಗಲ್ಲಗಳ ಮೇಲೆ ಉದುರಿದವು.

'ಚಂದ್ರಕಾಂತ, ನೀವು ಅವಳೊಬ್ಬಳನ್ನೇ ಬಿಟ್ಟು ಹೋಗಿಬಿಡುತ್ತೀರಿ. ಅವಳು ಏನು ಮಾಡಬೇಕು?'

'ನಾನು ಏನು ಮಾಡಬೇಕು? ಹೊಟ್ಟೆಗಾಗಿ ದುಡಿಯಬೇಕಲ್ಲ? ಮುಲ್ಕೀ ಪರೀಕ್ಷೆಗೆ ನಮ್ಮ ಶಿಕ್ಷಣ ನಿಂತುಬಿಟ್ಟಿದೆ. ನಮಗೆ ಯಾರು ನೌಕರಿ ಕೊಡಬೇಕು? ಏನೋ ರಾಜಕಾರಣದಲ್ಲಿ ಓಡಾಡಿದ್ದರಿಂದ ಗ್ರಾಮೋದ್ಯೋಗದಲ್ಲಿ ಕೆಲಸ ಸಿಕ್ಕಿದೆ. ಅದರ ಸಲುವಾಗಿ ಹಳ್ಳಿ ಹಳ್ಳಿ ತಿರುಗಬೇಕು. ಇಲ್ಲವಾದರೆ ನಮ್ಮ ಗತಿ? ನೋಡಿರಿ, ಡಾಕ್ಟರ ಬಿಲ್ಲು ಕೊಡಬೇಕು........ಅದಿರಲಿ ನನ್ನಲ್ಲಿ ನಿಮ್ಮ ವಿಶ್ವಾಸವಿರಲಿ. ನಿಮ್ಮ ಹಣ ನಾನು ಕೊಟ್ಟೇಕೊಡುವೆ.'

'ಚಂದ್ರಕಾಂತ, ನನ್ನ ಹಣದ ಬಗ್ಗೆ ಚಿಂತಿಸಬೇಡಿ. ಮೊದಲು ಉಳಿದುದು ಸರಿಹೋಗಲಿ.'

ಭಾರವಾದ ಹೃದಯದಿಂದ ಚಂದ್ರಕಾಂತ ನಮ್ಮ ಮನೆಯಿಂದ ಎದ್ದು ಹೋದರು!

ಆ ದಿನ ರಾತ್ರಿ ನನ್ನ ಕೋಣೆಯಲ್ಲಿ ಮಲಗಿದಾಗ ಅದೇ ಚಿತ್ರ ನನ್ನ ಮುಂದೆ. ಚಂದ್ರಕಾಂತ, ಅವರ ಅಣ್ಣ, ಶಾಂತಾ!!! ಮೂವರ ರೂಪಗಳೂ ನನ್ನ ಕಣ್ಣೆದುರು ಹಾದುಹೋಗುತ್ತಿದ್ದವು. ಅವರೆಲ್ಲರೂ ನನ್ನೆದುರು ನಿಂತು ಏನೇನೋ ಮಾತನಾಡುತ್ತಿದ್ದರು. ಅಡಕೊತ್ತಿನಲ್ಲಿರುವ ಅಡಕೆಯ ಹಾಗೆ ಶಾಂತಾಳ ಸ್ಥಿತಿ ಇರುವದೆಂದು ಅನಿಸುತ್ತಿತ್ತು.......ಜೀವನದಲ್ಲಿಯ ದುಃಖದಾಳವನ್ನು ಅಳೆದು ನೋಡುತ್ತಿದ್ದೆ!

ಹೊರಗೆ ಏನೋ ಸಪ್ಪಳವಾಯಿತು. ಯಾರೊ ಗುದ್ದಾಡುವಂತೆ ಧ್ವನಿ ಕೇಳಿಸಿತು. ಹಾಸಿಗೆಯಲ್ಲಿಯೇ ನಾನು ಹೊರಳಾಡುತ್ತಿದ್ದೆ. ಬಾಗಿಲದ ಹತ್ತಿರ ಸಪ್ಪಳ ಜೋರಾಗಿ ಉಂಟಾಯಿತು. ಯಾರೋ ಕೆಳಗೆ ಬಿದ್ದಂತೆಯೂ ಕೇಳಿಸಿತು. ಲಗುಬಗೆಯಿಂದ ಎದ್ದು ಕಿಡಿಕೆಯಲ್ಲಿ ನೋಡಿದೆ.

ಅವಳು ಶಾಂತಾ ! ಕೈಯಲಿ ಮಿಣಿ ಮಿಣಿ ದೀಪ ! ಎದೆಯುಬ್ಬಿ ಬರುತ್ತಿದೆ ! ಸೀರೆಯ ಸೆರಗು ಹೇಗೋ ಬಿದ್ದಿದೆ ! ಕೂದಲು ಅಸ್ತವ್ಯಸ್ತವಾಗಿದೆ ! ಒಂದೇಸಮನೆ ಉಸಿರುಬಿಡುವ ಧ್ವನಿ ಕೇಳಿಸುತ್ತಿದೆ! ಅವಳು ಶಾಂತಾ!! ಮನಸ್ಸಿನಲ್ಲಿ ಏನೂ ಶಾಂತತೆ ಇರಲಿಲ್ಲ ! ಯಾರ ಸಂಗಡವೋ ಜಗಳಾಡಿರಬೇಕು ! ಪ್ರಕ್ಷುಬ್ಧ ಸಮುದ್ರದಂತೆ ಮಿಣಿ ಮಿಣಿ ದೀಪದ ಬೆಳಕಿನಲ್ಲಿ ಇವಳ ಮುಖ ಕಾಣಿಸುತ್ತಿದ್ದಿತು !........ದಾರಿಯಲ್ಲಿ ಯಾವುದೋ ವ್ಯಕ್ತಿಯು ಜೋರಾಗಿ ಹೆಜ್ಜೆಗಳನ್ನು ಅಪ್ಪಳಿಸುವುದು ಕೇಳಿ ಬರುತ್ತಿದ್ದಿತು ! !

ಮಿಣಿ ಮಿಣಿ ದೀಪ ಮಾಯವಾಯಿತು ! ಬಾಗಿಲು ಬಂದಾಯಿತು.

ಮರುದಿನ ರಾತ್ರಿ ಗೋಪುರದ ಗಡಿಯಾರವು ಢಣ್ ಢಣ್ ಎಂದು ಹತ್ತು ಬಾರಿಸಿತು. ನಾನು ನನ್ನ ಕೋಣೆಯಲ್ಲಿ ಓದುತ್ತ ಕುಳಿತಿದ್ದೆ. ಕಿಡಿಕೆಯಲ್ಲಿ ಒಮ್ಮೆಲೆ ನನ್ನನ್ನು ಕೂಗಿದ ಧ್ವನಿ ಕೇಳಿಸಿತು.

'ಓಹೋ ಚಂದ್ರಕಾಂತ. ಬನ್ನಿ ಒಳಗೆ' ಎಂದು ಕರೆದೆ. ಅವರು ಒಳಗೆ ಬರಲು ನಿರಾಕರಿಸಿದರು. ಕಿಡಿಕೆಯೊಳಗೆ ತಮ್ಮ ಕೈಯನ್ನು ಮುಂದಕ್ಕೆಮಾಡಿ 'ತಗೊಳ್ಳಿ' ಎಂದರು.

ಅವರ ಕೈಯಲ್ಲಿ ರೂಪಾಯಿ ನೋಟುಗಳು ಇದ್ದವು. 'ಇಷ್ಟೇನು ಅವಸರವಿತ್ತು?........ಇರಲಿ. ಒಳಗಾದರೂ ಬನ್ನಿರಲ್ಲ?' ಎಂದು ಮತ್ತೆ ಬಿನ್ನವಿಸಿದೆ.

ಚಂದ್ರಕಾಂತ ಕಿಡಿಕೆಯಲ್ಲಿಯೆ ನಿಂತು ನೇರವಾಗಿ ಒಂದು ಪ್ರಶ್ನೆಕೇಳಿದರು— 'ನಿನ್ನೆ ನಮ್ಮ ಅಣ್ಣ ಇಲ್ಲಿ ಇದ್ದನೇನು?'

'ಯಾವಾಗ ?'

'ನಿನ್ನೆ ರಾತ್ರಿ'. ಚಂದ್ರಕಾಂತ ತುಟಿ ಕಚ್ಚಿದರು. ಪ್ರತಿಸಲದಂತೆ ಅವರ ಮುಖ ಇರಲಿಲ್ಲ. ಯಾವುದೋ ಸಂಶಯ, ಯಾವುದೋ ಚಿಂತೆ ಅವರ ಮನದಲ್ಲಿ ಮನೆ ಮಾಡಿಕೊಂಡಿತ್ತು.

ನಾನು ಹೇಳಿದೆ, 'ನನಗೇನೂ ಗೊತ್ತಿಲ್ಲ. ಆದರೆ....?'

'ನೀವು ಹೇಳಲು ಏನೂ ಅಭ್ಯಂತರವಿಲ್ಲ. ನನ್ನ ಹೃದಯದ ಬಾಗಿಲನ್ನೆ ನಿಮ್ಮೆದುರು ತೆರೆದಿಟ್ಟಿದ್ದೇನೆ. ಏಕೆ ಹೇಳಬಾರದು ?'

'ಹಾಗೇನೂ ಇಲ್ಲ. ಆದರೆ....ರಾತ್ರಿ ಏನೋ ಸಪ್ಪಳವಾಯಿತು. ಯಾರೋ ಬಂದಂತೆ ಕಂಡಿತು. ನಿಮ್ಮ ಅಣ್ಣ ಇದ್ದರೂ ಇರಬಹುದು.'

‘ಅಹುದು, ಅವನೇ ಬಂದಿದ್ದನು. ನನಗೆಲ್ಲ ಸುದ್ದಿ ಗೊತ್ತಾಗಿದೆ ನಾನು ಅವಳ ಮಾತಿಗೆ ಬಲಿ ಬಿದ್ದೆ....ಹೆಣ್ಣಿನ ಹೃದಯ ತಿಳಿಯುವದಿಲ್ಲ....’

ಚಂದ್ರಕಾಂತ ಭಾರವಾದ ಮನಸ್ಸಿನಿಂದ ತಮ್ಮ ತಲೆಯನ್ನು ತಗ್ಗಿಸಿ, ಕಿಡಿಕೆಯ ಸಲಾಕಿಗೆ ತಲೆಯನ್ನು ಆನಿಸಿದರು. ಅವರ ಕಣ್ಣುಗಳು ವಿಲಕ್ಷಣಭಾವವನ್ನು ವ್ಯಕ್ತ ಪಡಿಸಿದವು. ಅವರ ಮುಖ ಬೆವರತೊಡಗಿತು.

‘ಇಲ್ಲಿಯೂ ಅವನು ! !’ ಚಂದ್ರಕಾಂತ ಆಶ್ಚರ್ಯವನ್ನು ತೋರಿಸುತ್ತ ಅಂದರು.

‘ಒಳಗೆ ಬನ್ನಿ. ಎಲ್ಲವನ್ನೂ ಮಾತನಾಡೋಣ’ ಎಂದೆ.

‘ಇಲ್ಲ....ನಾನು ಬಲಿಬಿದ್ದೆ....ಬಿಲವಾರ ಅವನೆ ಕೊಟ್ಟಿರುವನಂತೆ....ಇವಳೇ ಇಸಕೊಂಡಿರಬೇಕು....ಛೆ....ಇರಲಿ. ಅವನು ಬರುತ್ತಾನಂತೆ !....ದಿನಾಲು !.... ನಾನು ಬರುತ್ತೇನೆ....ಎಲ್ಲಾ ಮರೆತುಬಿಡಿ....ಏನೋ ನಮ್ಮ ಜೀವನ........’

ಚಂದ್ರಕಾಂತ ಹೊಯ್ದಾಡುತ್ತ ಕಿಡಿಕೆಯಿಂದ ಹೋದರು. ಬಾಗಿಲದ ಬಳಿ ಸ್ವಲ್ಪ ನಿಂತರು ! ಅತ್ತಿತ್ತ ನೋಡಿದರು ! ಮತ್ತೆ ಹೊರಗೆ ಹೋಗಿ ಬಿಟ್ಟರು ! ಅವರ ಹೆಜ್ಜೆಗಳ ಸಪ್ಪಳ ಆ ರಾತ್ರಿಯ ಆ ಶಾಂತ ವಾತಾವರಣದಲ್ಲಿ ಕೇಳ ಬರುತ್ತಿತ್ತು.

ಎರಡು ಮೂರು ದಿನಗಳು ಉರುಳಿದವು. ಮುಚ್ಚಿದ ಬಾಗಿಲು ಹಾಗೆಯೆ ಇದೆ. ಬಾಗಿಲದೊಳಗೆ ನಡೆಯುವ ವ್ಯವಹಾರವೇನೂ ತಿಳಿದು ಬರುತ್ತಿರಲಿಲ್ಲ. ಚಂದ್ರಕಾಂತರ ಸುದ್ದಿಯೇ ಇಲ್ಲ.

ಒಂದು ದಿನ ಬೆಳಗಿನಲ್ಲಿ ಬಾಗಿಲದ ಎದುರಿಗೆ ಮಾಲಕನ ದರ್ಶನ ! ಗೋಣನ್ನು ಬಿಕ್ಕೊಂಡು ಒಂದು ಬಡಿಗೆಯನ್ನು ಹಿಡಿದುಕೊಂಡು ನಿಂತಿದ್ದನು. ‘ನೋಡವಾ, ನಾಳೆಯೊಳಗಾಗಿ ಬಾಡಿಗೆ ರೂಪಾಯಿ ಕೊಡಲಿಕ್ಕೇ ಬೇಕು. ಎಷ್ಟು ದಿವಸ ಹೀಗೆ ಬಿಡಬೇಕು ! ಬಾಕಿ ಚುಕ್ತಾ ಮಾಡಬೇಕು. ಈ ಮನೆಯೊಳಗೆ ಇರಬೇಕು. ಇಲ್ಲಾ ಅಂದರೆ....ನಾನು ಏತಕ್ಕೂ ಹೇಸುವವನಲ್ಲ. ನಿನ್ನನ್ನು ಹೊರಗೆ ಹಾಕಿ ಬಿಡುತ್ತೇನೆ. ನಿನ್ನ ಯಜಮಾನರಂತೂ ಊರೊಳಗೆ ಇರುವ ಹಾಗೇ ಇಲ್ಲ. ನಾನು ಯಾರನ್ನು ಕೇಳಬೇಕು ? ನನಗೇನು ಕಿಮ್ಮತ್ತು ಇಲ್ಲ ? ನೋಡು ನಾಳೆ ಕೊಡಲಿಕ್ಕೇಬೇಕು.’

ಮನೆಯ ಮಾಲಕನು ಥಡಥಡನೆ ಮಾತನಾಡಿ ಸಿಟ್ಟಿನಿಂದ ಕೋಲು ಬೀಸುತ್ತ ಹೋಗಿಬಿಟ್ಟನು !

ಅರ್ಧ ತಾಸಿನ ನಂತರ 'ಕಂಪೌಂಡರನ ಆಗಮನ ! ಬಾಗಿಲು ಬಡೆದನು. ಬಾಗಿಲು ತೆರೆಯಲಿಲ್ಲ. 'ನೋಡ್ರಿ, ನಾಳೆಯಾದರೂ ಬೇಕು. ಇಲ್ಲಾ ಅಂದರೆ ನಿಮ್ಮ ಮೇಲೆ ಖಟ್ಲೆ ಹಾಕುತ್ತೇವೆ ಅಂದಾರೆ ಡಾಕ್ಟರು.'

ಕಂಪೌಂಡರ ಬಿಲ್ಲಿನ ಹಾಳೆ ಮಡಿಚಿಕೊಂಡು ಸಾಯಕಲ್ಲ ಹತ್ತಿಕೊಂಡು ಹೋದನು.

ಇಪ್ಪತ್ತು ನಿಮಿಷಗಳ ನಂತರ ಹಾಲಿನವ ಬಂದನು. 'ರೊಕ್ಕಾ ಇಲ್ಲಾ ಅಂದರೆ ನಾವು ಏನುಮಾಡಬೇಕು ! ನಾವು ಹೇಗೆ ಹಾಲು ಕೊಡಬೇಕು ! ಇವೊತ್ತು ನಾನು ಕೊಡುವುದೇ ಇಲ್ಲ.'

ಗವಳಿಯು ಹಾಲನ್ನು ತೆಗೆದುಕೊಂಡು ಹಾಗೆಯೇ ಹೋಗಿಬಿಟ್ಟನು! ಇಷ್ಟು ಜನರು ಬಂದು ಹೋದರೂ ಅವಳು ಬಾಗಿಲವನ್ನೇನೂ ತೆರೆಯಲಿಲ್ಲ. ಒಳಗೆ ಕುಳಿತುಕೊಂಡು ಅವಳು ಮಾತುಗಳನ್ನು ಹೇಗೆ ಸಹನೆ ಮಾಡಿಕೊಳ್ಳುತ್ತಿದ್ದಳೊ!

ಅದೇ ದಿನ ರಾತ್ರಿ ಬಾಗಿಲು ಬಡಿದ ಸಪ್ಪಳವಾಯಿತು ಒಂದು ವ್ಯಕ್ತಿ ಹೊರಗೆ ನಿಂತು 'ಬಾಗಿಲೂ ಬಾಗಿಲೂ' ಎಂದು ಕೂಗಿಕೊಳ್ಳುತ್ತಿದ್ದಿತು. ಮಳೆ ಜಿಟಿ ಜಿಟಿ ಬೀಳುತ್ತಿತ್ತು. ಗಾಳಿ ಸೊಯ್ ಎಂದು ಬೀಸುತ್ತಿತ್ತು. ಇಂಥ ವೇಳೆಯಲ್ಲಿ ಆ ಬಾಗಿಲದ ಹತ್ತಿರ ಯಾರು ಇರಬೇಕು ? ಧ್ವನಿಯ ಮೇಲಿಂದ ಚಂದ್ರಕಾಂತರ ಅಣ್ಣಂದಿರೆ ಅಲ್ಲಿ ಇರಬಹುದೇನೋ ಎಂದು ಸಂಶಯ ಪಟ್ಟೆ!

ಬೆಳಗಿನ ಮಳೆ ನಿಂತಿದ್ದಿತು. ನಾನು ಕಿಡಿಕೆಯಲ್ಲಿ ಕುಳಿತು ನೋಡುವಾಗ ಒಬ್ಬ ಬಿಕ್ಷುಕ ಆ ಮನೆಯ ಬಾಗಿಲದ ಎದುರು ನಿಂತಿದ್ದನು. ಅವನು ಒಂದು ಏಕತಾರಿಯನ್ನು ಹಿಡಿದಿದ್ದನು. ಅದರ ತಂತಿಗಳನ್ನು ಜೋರಾಗಿ ಮೀಟುತ್ತ ತನ್ನದೇ ಆದ ಸುಂದರವಾದ ಧ್ವನಿಯಿಂದ ಕಿರಿಚಿಕೊಳ್ಳುತ್ತಿದ್ದ. 'ಬಾಗಿಲು ತೆರೆದು ವರವನು ಕೊಡು ಓ ಹರಿಯೇ....' ಎಂದು.

ನನ್ನಾಕೆ ಆತುರದಿಂದ ಬಂದು ಹೇಳಿದಳು: 'ಅವಳಿಗೆ ಬಹಳ ತ್ರಾಸ.'

'ಯಾರಿಗೆ ? '

'ಅವಳೇ ಚಂದ್ರಕಾಂತರ ಹೆಂಡತಿ.'

'ಏನಾಗಿದೆಯಂತೆ ? '

'ಎಷ್ಟೋ ದಿನವಾಯಿತಂತೆ! ಊಟವೇ ಇಲ್ಲವಂತೆ! ಏನೋ ಹಾಲು ಕುಡಿಯುತ್ತಿದ್ದಳಂತೆ! ನಿನ್ನೆ ಅದೂ ಇಲ್ಲವಂತೆ! ಪಾಪ ಹರುಕು ಸೀರೆ ಉಟ್ಟುಕೊಂಡು ಹಾಗೆಯೆ ಇದ್ದಾಳಂತೆ ! '

'ನಿನಗೆ ಇದನ್ನೆಲ್ಲ ಯಾರು ಹೇಳಿದರು ?'

'ಅವಳೇ ಆ ಕೆಲಸ ಮಾಡುವ ಹುಡುಗಿ. ಅವಳೇನೋ ನಿನ್ನೆ ಮಧ್ಯಾಹ್ನ ಒಳಗೆ ಹೋಗಿದ್ದಳಂತೆ. ಮನೆಯಲ್ಲಿ ಏನೂ ಇಲ್ಲವಂತೆ ! ಪಾಪ !'

'ಚಂದ್ರಕಾಂತ ಎಂದು ಬರುವರಂತೆ ?'

'ಏನೂ ತಿಳಿಯದಂತೆ.'

'ನಾನೇ ನೋಡಿಕೊಂಡು ಬರುವೆ.'

ನನಗೆ ಬಹಳ ಚಿಂತೆಯಾಯಿತು. ಲಗುಬಗೆಯಿಂದ ಅಲ್ಲಿಗೆ ಹೋದೆ. ಭಿಕ್ಷುಕ ಇನ್ನೂ ಹಾಡುತ್ತಿದ್ದ. 'ಬಾಗಿಲವ ತೆರೆದೂ....' ನಾನು ಅಲ್ಲಿಗೆ ಹೋದ ಕೂಡಲೆ ಅವನು ಆ ತೆರೆದ ಬಾಯನ್ನು ಬಂದು ಮಾಡಿದ.

ಬಾಗಿಲು ಬಡೆದೆ. ಒಳಗಿನಿಂದ ಏನೂ ಉತ್ತರ ಬರಲಿಲ್ಲ ! ನನ್ನಮೇಲೂ ಏನಾದರೂ ಸಂಶಯ ತೆಗೆದುಕೊಂಡಿರುವರೋ ಏನೊ, ಎಂದು ನನ್ನ ಹೆಸರು ಹೇಳಿ ಕೂಗಿದೆ. ಆದರೂ ಉತ್ತರ ಬರಲಿಲ್ಲ. ಬಾಗಿಲು ನೂಕಿದೆ ! ಬಾಗಿಲು ತೆರೆದಿತ್ತು ! ಸಾವಕಾಶ ಒಳಗೆ ಹೋಗಿ ನೋಡಿದೆ. ಒಂದು ಉದ್ದನ್ನ ಕೋಣೆ. ನಡುವೆ ಒಂದು ಅರ್ಧ ಹಾಳು ಗೋಡೆ ಎದ್ದು ನಿಂತಿದೆ. ಈ ಮುಂದಿನ ಅರ್ಧ ಭಾಗದಲ್ಲಿ ಯಾರೂ ಕಾಣಲಿಲ್ಲ. ಧೈರ್ಯಮಾಡಿ ಒಳಗೆ ಹೆಜ್ಜೆ ಇಟ್ಟೆ. ಅಲ್ಲಿಯೂ ಅವಳು ಇರಲಿಲ್ಲ. ನನ್ನೆದೆ ಒಡೆದು ನೀರಾಯಿತು !

ಕೂಸು ಮಾತ್ರ ನೆಲದಮೇಲೆ ಇತ್ತು. ನಾನಲ್ಲಿಗೆ ಹೋದಕೂಡಲೇ ಕಣ್ಣು ತೆರೆದು ಒಂದು ಸಲ ನನ್ನನ್ನು ನೋಡಿತು !

ಆ ಕೂಸಿನ ಹತ್ತಿರವೇ ಒಂದು ಚೀಟಿ ಬಿದ್ದಿತ್ತು. ಅದನ್ನು ನನ್ನ ಕೈಯಲ್ಲಿ ತೆಗೆದುಕೊಂಡೆ. ನನ್ನ ಕೈಗಳು ನಡುಗಹತ್ತಿದವು. 'ಇದನ್ನು ಸಾಕುವ ಧೈರ್ಯ ವಿದ್ದವರು ಸಾಕಬಹುದು' ಎಂದು ಅದರಲ್ಲಿ ಬರೆದಿತ್ತು. ನನ್ನ ಕಣ್ಣುಗಳನ್ನೇ ನಾನು ನಂಬದಾದೆ ! ನನ್ನ ದೇಹವೆಲ್ಲ ನಡುಗಿತು. ಕಣ್ಣಿಗೆ ಕತ್ತಲು ಕವಿದಂತಾಗಿ ನಾನು ಹೊರಗೆ ಬಂದೆ.

ಬಾಗಿಲು ತೆರೆದಿತ್ತು ! ಕಂಪೌಂಡರ, ಮನೆಯ ಮಾಲಕ ಎಲ್ಲರೂ ಒಳಗೇ ಬಂದರು.

' ಬಾಗಿಲು ತೆರೆದು ವರವನು ಕೊಡು ಓ ಹರಿಯೆ ' ಎಂದು ಭಿಕ್ಷುಕನ ಬೇಡಿಕೆಯ ಧ್ವನಿ ಇನ್ನೂ ಕೇಳಬರುತ್ತಿತ್ತು.

—ವರದರಾಜ ಹುಯಿಲಗೋಳ

# ತ್ಯಾಗ

ಆ ಕಿಟಕಿಯ ಕಂಬಿಗಳ ಮೂಲಕ ದಿನಕ್ಕೆ ನೂರುಬಾರಿ ಅವಳ ದೃಷ್ಟಿ ಹಾದು ಹೋಗುತ್ತಿತ್ತು. ಅವಳ ಕಣ್ಣುಗಳನ್ನು ನೋಡಿದವರು ಯಾರಾದರೂ ಅವುಗಳಲ್ಲಿ ಒಲವು ತುಂಬಿದೆಯೆಂದು ಹೇಳಬಹುದಾಗಿತ್ತು. ಆ ಕಂಬಿಗಳನ್ನು ಮೆಲ್ಲನದುಮಿ ಅದರ ಮೇಲೆ ಕೈ ಅಲ್ಲಾಡಿಸುತ್ತಿದ್ದುದನ್ನೂ ಅದಕ್ಕೆ ಕೆನ್ನೆಯೊರಗಿಸಿ ಕಣ್ಣೆವೆಯಿಕ್ಕದೆ ಹೊರಗೆ ನೋಡುತ್ತಿದ್ದುದನ್ನೂ ನೋಡಿದರೆ ಗೋಡೆಯ ಆಚೆ ಯಾರಿದ್ದಾರೆಂದು ಯಾರಾದರೂ ಹೇಳಬಹುದಾಗಿತ್ತು. ಅವಳ ಗಂಡನ ಧ್ವನಿಯನ್ನು ಕೇಳಿದಾಗ ಸ್ವಲ್ಪ ನಡುಗಿ, ನಿಟ್ಟುಸಿರು ಬಿಟ್ಟು, ಭಾರವನ್ನು ಹೊತ್ತವಳಂತೆ ತೋರುತ್ತಿದ್ದುದನ್ನು ನೋಡಿದರೆ ನವೀನ ವಾರಪತ್ರಿಕೆಗಳನ್ನೋದಿದವರಿಗೆಲ್ಲಾ ಅವಳಿಗೆ ಏನಾಗಿದೆ ಎನ್ನುವುದು ಗೊತ್ತಾಗುತ್ತಿತ್ತು.

ಮತ್ತೊಂದು ಬಾಣ ಮನ್ಮಥನ ಕೈ ಜಾರಿತ್ತು.

ಗುಣ, ರೂಪು, ಯೌವನಗಳಲ್ಲಿ ಪರಿಪೂರ್ಣನಾಗಿದ್ದ ಯಶೋಧರನ ಹೆಂಡತಿ–ಮಹಾರಾಣಿ ಅಮೃತಮತಿಯೆ ಈ ಬಾಣದಾಘಾತದಿಂದಾಗಿ ಬೇರೊಬ್ಬನನ್ನು ಪ್ರೀತಿಸಿದ ಮೇಲೆ ಇನ್ನು ನಮ್ಮ ಕಥಾನಾಯಕಿಯ ಪಾಡೇನು!

ತಮ್ಮ ಸ್ನೇಹಿತರು ತಮ್ಮಿಬ್ಬರನ್ನೂ ಆರತಿಯೆತ್ತಿ ಗಂಡ ಹೆಂಡತಿ ಎಂದು ಹಾಸ್ಯ ಮಾಡುತ್ತಿದ್ದರು.

'ನಮ್ಮ ನಿರಾಶೆಯನ್ನು ನೀಗುವ ಆಶೆ.'

'ಹೇಗೆ ನೀಗಬಹುದು ?'

'ಹೇಗೆ ? ಹೇಳು.'

'ಇಬ್ಬರೂ ಎಲ್ಲಾದರೂ ದೂರದ ಊರಿಗೆ ಓಡಿ ಹೊರಟು ಹೋಗೋಣ.'

'ನನ್ನ ಗಂಡನನ್ನು ಬಿಟ್ಟು ?'

ಅವನಿಗೆ ಆಶ್ಚರ್ಯದಿಂದ ಮಾತು ಹೊರಡದೆ ಅವಳನ್ನೇ ನೋಡುತ್ತ ನಿಂತುಬಿಟ್ಟ. ಆದರೆ ಅವನು ಆಡಬೇಕಾದುದೆಲ್ಲವನ್ನು ಆ ನೋಟ ಹೇಳುತ್ತಿತ್ತು.

'ಮತ್ತೆ ನನ್ನನ್ನು ಪ್ರೀತಿಸುತ್ತೇನೆ ಎಂದೇಕೆ ಹೇಳಿದೆ ? ಸುಳ್ಳಲ್ಲವೆ ಅದು ?' ಎಂದು ಕೇಳುತ್ತಿತ್ತು ಆ ನೋಟ.

'ನಿನ್ನನ್ನು ಪ್ರೀತಿಸುತ್ತೇನೆ ಎನ್ನುವುದರಲ್ಲಿ ಸಂದೇಹವೆ ? ಚಿಕ್ಕ ಮಕ್ಕಳಾಗಿದ್ದಾಗಿನಿಂದ ನಾವಿಬ್ಬರೂ ಒಬ್ಬರ ಹೃದಯುವನ್ನೊಬ್ಬರು ಅರಿತಿದ್ದೇವೆ. ಈಗ ಈ ಸಂದೇಹವೇಕೆ ?' ಎಂದು ಅವಳ ನೋಟ ಪ್ರತ್ಯುತ್ತರವಿತ್ತಿತು.

'ಹಾಗಾದರೆ ನನ್ನ ಜೊತೆ ಏಕೆ ಬರುವುದಿಲ್ಲ ?' ಅವನ ನೋಟ ಕೇಳಿತು.

'ನನ್ನ ಗಂಡನನ್ನು ಬಿಟ್ಟು ನಾನು ಬರುವುದಿಲ್ಲ' ಎಂದು ಅವಳು ಮೌನವನ್ನು ಮುರಿದಳು.

'ನೀನು ಅವನನ್ನು ಅಷ್ಟೊಂದು ಪ್ರೀತಿಸುತ್ತೀಯಾ ?' ಎಂದು ಅವನು ಕೇಳಿದ.

'ಇಲ್ಲ, ನಾನು ಅವನನ್ನು ಪ್ರೀತಿಸುವುದಿಲ್ಲ.'

'ಮತ್ತೇಕೆ ಅವನನ್ನು ಬಿಡಲಾರೆ ?'

'ಗಂಡನ ಬಳಿಯಿರುವುದು ಹೆಂಡತಿಯ ಕರ್ತವ್ಯವಲ್ಲವೆ ?'

'ಹೌದು, ಆದರೆ ಪ್ರೇಮಕ್ಕಿಂತ ಕರ್ತವ್ಯ ಹೆಚ್ಚಾಯಿತೆ ?'

'ಹೌದು, ಪ್ರೇಮಕ್ಕಿಂತ ಕರ್ತವ್ಯ ಹೆಚ್ಚು.'

'ಹಾಗಾದರೆ ಚಿಕ್ಕಂದಿನಿಂದ ಪ್ರೀತಿಸಿದವನೊಡನಿರುವುದು ಕರ್ತವ್ಯವಲ್ಲವೆ ?'

'ಅದನ್ನು ದೇವರು ಮುರಿದಿದ್ದಾನೆ.'

'ಈಗ ಸರಿಮಾಡಬಲ್ಲ, ಆತ.'

'ಇಲ್ಲ ಅದು ಸರಿಯಾಗದು.'

'ಏಕಾಗಬಾರದು ?'

'ನಾನು ಸೂಳೆಯಾಗಲಾರೆ.'

ಮತ್ತೊಮ್ಮೆ ಅವನು ಮೌನವನ್ನವಲಂಬಿಸಬೇಕಾಯಿತು.

ಹಿಂದೆ ಬಾಗಿಲ ಸದ್ದಾಯಿತು.

'ಅವರು ಬರುತ್ತಾರೆ, ಹೋಗು.'

'ಅದೇಕೆ ಹೆದರುತ್ತೀ ಅವನಿಗೆ ?'

'ಹೆದರಬೇಕಾದುದು ನನ್ನ ಕರ್ತವ್ಯ. ನೀನು ಈಗ ಹೋಗು, ಹೊತ್ತಾಯಿತು.'

'ಹೋಗುತ್ತೇನೆ. ಆದರೆ ಕೊನೆಯಬಾರಿ ಸತ್ಯವಾಗಿ ಹೇಳಿಬಿಡು. ನೀನು ನನ್ನನ್ನು ಪ್ರೀತಿಸುತ್ತೀಯಾ ?'

'ಹೌದು, ಹೌದು, ಹೌದು, ನಾನು ನಿನ್ನನ್ನು ಬಿಟ್ಟು ಈ ಪ್ರಪಂಚದಲ್ಲಿ ಯಾರನ್ನೂ ಪ್ರೀತಿಸುವುದಿಲ್ಲ. ಆದರೆ ಸ್ವಾರ್ಥಕ್ಕಾಗಿ ಮಿಕ್ಕವರ ಬಾಳನ್ನು ನಾನು ನಾಶಗೊಳಿಸಲಾರೆ.'

ತನ್ನ ಗಂಡ ತನಗಾಗಿ ಅಷ್ಟುಹೊತ್ತಿನಲ್ಲಿ ಎದ್ದುಬಂದು, ತನ್ನ ಮನೋವ್ಯಥೆಗೆ ಕಾರಣವನ್ನು ಕೇಳಿ, ಅವಳು ಹೇಳಿದುದಕ್ಕೆ ಸಮಾಧಾನ ಮಾಡಿ, ಮಲಗಿಸಿ ಹೊದಿಸಿ ಕೆನ್ನೆಯನ್ನೊಮ್ಮೆ ಸವರಿ ಹೋದಾಗ, ಅವಳಿಗೆ ಅವನನ್ನು ಕಂಡು, 'ಪಾಪ, ಇಂತ ಹವನ ಬಾಳನ್ನು ನಾನು ಕೆಡಿಸಬೇಕೆ ?' ಎಂದುಕೊಂಡಳು. ತನ್ನ ಈ ವಿಚಾರ ವನ್ನು ಖಂಡಿತವಾಗಿಯೂ ಅವನಿಗೆ ತಿಳಿಯಗೊಡಬಾರದೆಂದು ಕೊಂಡಳು.

ಆದಿನ ತನ್ನ ಗಂಡ, 'ಚಿನ್ನ, ನೀನು ನನ್ನನ್ನು ಪ್ರೀತಿಸುತ್ತೀಯಾ?' ಎಂದು ಕೇಳಿದಾಗ ಅವಳಿಗೆ ಆಶ್ಚರ್ಯವಾಯಿತು. ಆದಗೂ ಮುಖದ ಮೇಲೊಂದು ನಗೆ ಯನ್ನು ತಂದುಕೊಂಡು 'ಹೌದು' ಎಂದಳು.

'ಸುಳ್ಳು. ನಿಜವಾಗಿ ಹೇಳು.'

'ನಿಜವಾಗಿ ಪ್ರೀತಿಸುತ್ತೇನೆ.'

'ಹಾಗಾದರೆ ನಾನು ಹೇಳಿದೊಂದು ಕೆಲಸವನ್ನು ಮಾಡುತ್ತೀಯಾ ?'

'ನಿಮಗಾಗಿ ನಾನು ಏನು ಮಾಡಲಾರೆ ?'

'ಮಾಡದಿದ್ದರೆ ?'

'ಖಂಡಿತವಾಗಿಯೂ ಮಾಡುತ್ತೇನೆ.'

'ಭಾಷೆ ಕೊಡು.'

'ನನ್ನ ಆಣೆಗೂ, ನಿಮ್ಮ ಆಣೆಗೂ ಮಾಡುತ್ತೇನೆ.'

ಅವಳ ಗಂಡ ಒಳಗೆ ಹೋಗಿ ಇನ್ನೊಬ್ಬರನ್ನು ಕರೆತಂದು ಅವಳೆದುರಿಗೆ ನಿಲ್ಲಿ ಸಿದ. ಅವನೇ ಅವಳ ಪ್ರೇಮದ ಮೂರ್ತಿ !

'ನೀನು ನನ್ನನ್ನು ಬಿಟ್ಟು ಇವರೊಡನೆ ಇರಬೇಕು.'

ಅವಳು ತನ್ನ ಗಂಡನನ್ನು ಬೆರಗಾಗಿ ನೋಡಿದಳು. ತಕ್ಷಣ ಹೊಳೆಯಿತು ಅವನೇಕೆ ಹೀಗೆನ್ನುತ್ತಿದ್ದಾನೆ ಎನ್ನುವುದು. ತಕ್ಷಣ ಅವನ ಹತ್ತಿರಕ್ಕೆ ಹೋಗಿ ಸಣ್ಣ ದನಿಯಲ್ಲಿ, 'ಅಂದು ನೀವು ಅವನೊಡನೆ ನಾನು ಮಾತನಾಡುತ್ತಿದುದನ್ನು ಕಂಡು ನಾನು ನಿಮ್ಮನ್ನು ವಂಚಿಸಿದ್ದೇನೆಂದು ತಿಳಿದುಕೊಂಡಿರಬಹುದು. ಆದರೆ ನಿಮ್ಮೆಲ್ಲರ ಆಣೆಯಾಗಿಯೂ ಹೇಳುತ್ತೇನೆ, ನಾನು ನಿಮ್ಮನ್ನು ವಂಚಿಸಬೇಕೆಂದು ಒಮ್ಮೆಯಾ ದರೂ ಯೋಚಿಸಿಲ್ಲ,' ಎಂದು ಹೇಳಿದಳು. ಅವಳ ಪ್ರಣಯಿ ಆಶ್ಚರ್ಯದಿಂದ ಅವ ಳನ್ನೇ ನೋಡುತ್ತಿದ್ದ. ಅವಳ ಗಂಡ ಸ್ವಲ್ಪ ಹೊತ್ತಿನಮೇಲೆ ಚೇತರಿಸಿಕೊಂಡು 'ನೀನು ವಂಚಿಸುತ್ತಿದ್ದೀ ಎಂದು ನಾನು ಹೇಳಿದೆನೆ ?' ಎಂದು ಕೇಳಿದ.

'ಹಾಗೆಂದು ಹೇಳಬೇಕೆ ?'

'ನೀನು ನನ್ನನ್ನು ಪೂರ್ಣವಾಗಿ ತಿಳಿದುಕೊಂಡಿಲ್ಲ.'

'ಇನ್ನು ಮೇಲೆ ತಿಳಿದುಕೊಳ್ಳುತ್ತೇನೆ. ಆದರೆ ನೀವು ಹೀಗೆ ನನ್ನನ್ನು ಚುಚ್ಚ ಬಾರದಾಗಿತ್ತು.'

'ನೀನು ದೇವತೆ, ಚಿನ್ನ. ಮನುಷ್ಯಳಲ್ಲ. ನನಗೆ ಅದು ಸಂಪೂರ್ಣವಾಗಿ ಗೊತ್ತು. ಆದರೆ ನಿನ್ನಂತಹವಳಿಗೆ ದೇವರು ಈ ತರಹ ಕಷ್ಟವನ್ನು ಕೊಡಬಾರದಾ ಗಿತ್ತು. ನಾನು ನಿನ್ನ ಕೈಹಿಡಿದು ಧನ್ಯನಾದೆ. ಆದರೆ ಅದಕ್ಕೆ ನಿನಗೆ ಪ್ರತ್ಯುಪಕಾರ ಮಾಡಬೇಡವೆ ? ನಿನ್ನ ದುಃಖವನ್ನು ನೀಗುವುದಕ್ಕೆ ಪ್ರಯತ್ನಪಡಬೇಡವೆ ? ನಾನು ಇದನ್ನೆಲ್ಲ ಕೋಪಕ್ಕಾಗಿ ಮಾಡುತ್ತಿಲ್ಲ, ನಿನ್ನ ಮೇಲಿನ ಪ್ರೀತಿಗಾಗಿ ಮಾಡುತ್ತಿದ್ದೇನೆ. ನಿನಗೂ ನನ್ನಲ್ಲಿ ಪ್ರೀತಿಯಿದ್ದರೆ ನೀನು ಇದನ್ನು ಮಾಡಲೇಬೇಕು. ನಿನ್ನಂತಹವಳ ಪ್ರೇಮವನ್ನು ಸವಿದು ಇನ್ನೂ ಪ್ರೇಮಿಗಳನ್ನು ಅಗಲಿಸಬಾರದೆಂದು ಬುದ್ಧಿ ಬಾರ ದಿದ್ದರೆ ನಾನು ಮನುಷ್ಯನಾಗುತ್ತೇನೇ ? ನೀನು ಇದನ್ನು ಒಪ್ಪಲೇಬೇಕು, ಚಿನ್ನ.'

'ಇಲ್ಲ. ನಾನು ನಿಮಗೆ ದ್ರೋಹ ಮಾಡಲಾರೆ.'

'ಹೌದೆ ?'

'ಹೌದು.'

'ದಿಟವಾಗಿಯೂ ನೀನು ನನಗೆ ದ್ರೋಹವನ್ನು ಮಾಡುವುದಿಲ್ಲವೆ ?'

'ಇಲ್ಲ.'

'ಈಗ ನೀನು ನನಗೆ ದ್ರೋಹವನ್ನು ಮಾಡುತ್ತಿದ್ದೀಯೆ.'

'ನನಗೆ ಪ್ರೇಮಿಗಳನ್ನು ಅಗಲಿಸಿದ ರಾಕ್ಷಸನೆಂಬ ಹೆಸರನ್ನು ತಂದು ಕೊಡುತ್ತಿ ದ್ದೀಯೆ; ನಾನು ಹೇಳಿದುದನ್ನು ಮಾಡುವೆನೆಂದು ಭಾಷೆ ಕೊಟ್ಟಿದ್ದೀ; ಚಿನ್ನ, ನಾನು ಇದನ್ನೆಲ್ಲ ನಿನ್ನ ಮೇಲಿನ ವಿಶ್ವಾಸದಿಂದ ಮಾಡುತ್ತಿದ್ದೇನೆ. ನನಗೆ ನಿನ್ನಮೇಲೆ ಸ್ವಲ್ಪವೂ ಕೋಪವಿಲ್ಲ. ಬಾ, ಕೊನೆಯಬಾರಿ ನನ್ನನ್ನು ಪ್ರೀತಿಯಿಂದ ಆಲಂಗಿಸು. ಕೊನೆಯಬಾರಿ. ಇನ್ನು ನೀನು ನನ್ನ ತಂಗಿ. ಇವನನ್ನು ಕೂಡಿ ಇನ್ನು ಸುಖವಾಗಿ ಬಾಳು. ನಿನಗೆ ನನ್ನ ಪ್ರೀತಿ ಆಶೀರ್ವಾದಗಳೆರಡೂ ಇವೆ,' ಎಂದು ಹೇಳಿ ಅವ ರಿಬ್ಬರ ಕೈಗಳನ್ನೂ ಜೊತೆಗೂಡಿಸಿದ.

'ಎಂತಹ ತ್ಯಾಗ!' ಎಂದು ಇಬ್ಬರೂ ಕೂಡಿದ ಕಂಠದಿಂದ ಹೇಳಿದಾಗ, ಹಿಂದಿ ನಿಂದ ಹೆಂಗಸಿನ ದನಿಯೊಂದು, 'ಸಧ್ಯ, ಕೊನೆಗೂ ತೊಲಗಿಸಿದರಲ್ಲ ಅವಳನ್ನ. ಇನ್ನಾದರೂ ನಾವು ಸುಖವಾಗಿರಬಹುದು' ಎಂದುದು ಕೇಳಿಸಿತು.

ಎಸ್. ಆರ್. ಶಂಕರನಾರಾಯಣರಾವ್

# ಶೂರ್ಪನಖಿ

ಶೂರ್ಪನಖಿ ಸೀಳುದಾರಿಯನ್ನು ಹಿಡಿದು ಬರುತ್ತಿದ್ದಳು. ಎಡಬಲಕ್ಕೆ ಹೊರಳುತ್ತ ಆಕೆ ಏನನ್ನೋ ಹುಡುಕುವಂತಿದೆ. ಒಮ್ಮೊಮ್ಮೆ ಹುಬ್ಬಿನ ಮೇಲೆ ಕೈಯಿಟ್ಟು ಮರೆಯಾಗುವ ಗಿಡಗಳಿಂದಾಗಿ, ಆಚೀಚೆ ಬಾಗಿ ನೋಡುತ್ತ ಸಾಗಿದ್ದಳು.

ಕತ್ತಲೆ ಇನ್ನೂ ಆಗಿಲ್ಲ; ಮಬ್ಬು ಬೆಳಕು ಅಲ್ಲಿರುವ ಗಿಡಮರಗಳನ್ನೂ, ದಿಗಂತವನ್ನೂ, ಪ್ರತಿಯೊಂದು ವಸ್ತುವನ್ನೂ ಮುಸುಕಿ, ಸಪ್ಪೆಯಾದ ಒಂದು ಸೊಬಗನ್ನು ನೀಡಿದೆ. ಅದನ್ನು ಕಡಿಮೆ ಮಾಡುತ್ತ, ಆಗಾಗ ಚಿಲಿಪಿಲಿಗುಟ್ಟುತ್ತಿವೆ ಹಕ್ಕಿಗಳು.

ಮುಖವನ್ನೆತ್ತಿ ಆ ಕಡೆ ಈ ಕಡೆ ನೋಡುತ್ತಿರುವ ಶೂರ್ಪನಖಿಯ ಕಾಲಿಗೆ ಮುಳ್ಳು ಬಳ್ಳಿಯೊಂದು ಎಟುಕಿತು. ಬಿಡಿಸಿಕೊಳ್ಳಲೆಂದು ಬಾಗಿದಳು.

ಆಗ ಹೆಜ್ಜೆಯ ಸಪ್ಪಳ ಕೇಳಿಸಿತು. ಥಟ್ಟನೆ ಹಿಂತಿರುಗಿ ಆ ಕಡೆ ಕಿವಿಗೊಟ್ಟಳು. ಹೌದು, ಯಾರೋ ಬರುತ್ತಿದ್ದರು.

ಸೀಳುದಾರಿಯನ್ನು ಬಿಟ್ಟು ಶೂರ್ಪನಖಿ ಒಂದು ಕಂಟಿಯ ಮರೆಗೆ ಅಡಗಿದಳು. ಬಂದವರನ್ನು ನೋಡಿದಳು.

ಒಬ್ಬ ಸುಂದರ ತರುಣ. ಅವನ ಬೆನ್ನಿಗೆ ತೂಗುತ್ತಿದ್ದ–ಹಗ್ಗೊ ಏನನ್ನೊ ಹಾಕಿ ಕಟ್ಟಿದ ಒಂದು ಗಂಟು. ಎಡಗೈಯಲ್ಲಿ ಹಿಡಿದಿರುವ ಬಿಲ್ಲನ್ನು ಊರುತ್ತ ಆತ ಸಾಗಿದ್ದನು.

ಅವನಿಗೆ ತನ್ನ ಸುಳಿವು ಹತ್ತಿತೇನೊ ಎಂದು ಹೆದರಿದಳು ಆಕೆ. ಹತ್ತಿರಲಿಲ್ಲ.

ಹಾಗೆ ಇದ್ದರೆ ಅಂತಹ ದಿಟ್ಟ ಯುವಕನ ಮೊಗದಮೇಲೆ ಸಂಶಯ ಭಾವ ಸುಳಿಯದೇ ಹೋಗುತ್ತಿತ್ತೇ ? 'ನನ್ನ ಹಿಂದೆಯೇ ಬಂದ; ಅವನಿಗೆ ನಾ ಕಾಣಲಿಲ್ಲ. ಅದೆಂತಹ ಆತನ ಕಾರ್ಯತತ್ಪರತೆಯೊ !........ಎಷ್ಟು ಚಲುವನೀತ ! ಈತನೇ ರಾಮಚಂದ್ರನಾಗಿರಬಹುದೇ ? ಛೇ, ಇರಲಾರದು. ರಾಮನ ಮೈಬಣ್ಣ ತಿಳಿ ನೀಲಿಯದು, ಎಂದು ಅಣ್ಣ ಅಂದಿದ್ದ. ಅಲ್ಲದೆ ಅವನು ಇಷ್ಟು ಎಳಕನಾಗಿರಲಿಕ್ಕಿಲ್ಲ....ಹಾಗಿದ್ದರೆ ಅವನ ತಮ್ಮನಿರಬಹುದೆ ? ಹಾಂ. ಇರಬೇಕು. ಏನಿದ್ದರೂ ಇಷ್ಟು ಪ್ರಖರ ತೇಜಸ್ಸು ಋಷಿಕುಮಾರರಿಗೆಲ್ಲಿಂದ ಬರಬೇಕು. ?—'

ಶೂರ್ಪನಖಿ ನಿಂತಲ್ಲಿ ಮಾಯವಾಗಿ ಅವನಿಗೆ ಕಾಣದಂತೆ ಅವನ ಬದಿಯಿಂದಲೆ ಸಾಗಿದಳು. ಇಬ್ಬರೂ ಒಂದು ಪರ್ಣಕುಟಿಗೆ ಬಂದರು.

'ಅಕೋ-ಅಲ್ಲಿದ್ದಾನೆ ರಾಮಚಂದ್ರ. ನಿಜವಾಗಿಯೂ ಎಷ್ಟೊಂದು ಸೊಗಸಿದೆ! ಎಂತಹ ಒಂದು ನಿರ್ಮಲ ಕಳೆ ಉಕ್ಕುತ್ತಿದೆ! ಅಹಹ........'ಎಂದು ನೆನೆದಳು ಶೂರ್ಪನಖಿ.

ರಾಮಚಂದ್ರನು ಕುಳಿತುದು ಒಂದು ಕರಿ ಶಿಲೆಯ ಮೇಲೆ. ಅದರ ಬದಿಗೇ ಒಂದು ಮಾಟವನ್ನ ಅಶ್ವತ್ಥ ವೃಕ್ಷ. ಸುತ್ತಲಿನ ಬೈಲೆಲ್ಲ ಉಳಿದ ಕಡೆಯಂತೆ ಕಸಕಡ್ಡಿಗಳಿಂದ ತುಂಬಿರದೆ, ಇಲ್ಲಿ ಸ್ವಚ್ಛವನ್ನ ತನಿಹುಲ್ಲು ಹಾಸಿದೆ. ಎದುರಿಗಿದ್ದ ಪರ್ಣಕುಟಿಯನ್ನು ಛಂದಾಗಿ ಕಟ್ಟಲಾಗಿದೆ. 'ರಾಜಮಂದಿರದ ವಾಸದಲ್ಲಿ ಏನೂ ಸುಖವಿಲ್ಲ' ಎಂದುಕೊಂಡಳು ಶೂರ್ಪನಖಿ.

ಒಳಗಿನಿಂದ ಬಂದ ಒಬ್ಬಳು ಲಕ್ಷ್ಮಣನಿಗೆ 'ಏಕೆ ಇಷ್ಟೊತ್ತು ಮಾಡಿದಿರಿ?' ಎಂದು ನುಡಿದು ಕೈಯಲ್ಲಿ ಹಿಡಿದಿದ್ದ ಕೃಷ್ಣಾಜಿನವನ್ನು ರಾಮಚಂದ್ರನು ಕುಳಿತ ಎದುರಿಗೆ ತುಸು ಅಂತರದಲ್ಲಿ ಹಾಸಿದಳು.

'ಇವಳೆಯೋ ಸೀತೆ? ರೂಪವಾಣಿ ಈಕೆಯಲ್ಲದೆ, ಇನ್ನಾರು? ನಮ್ಮಣ್ಣ ಮರುಳಾದುದು ಸರಿಯೇ. ನಾನು........' ಮುಂದೆ ವಿಚಾರಿಸುವುದಕ್ಕೆ ಅವಳಿಗೆ ಮನಸ್ಸಾಗಲಿಲ್ಲ. ಹೃದಯವಾವುದೋ ಅತೃಪ್ತಿಯಿಂದ ನೊಂದುಕೊಂಡಿತು. ನಿಡಿದಾದ ಉಸಿರೊಂದು ಹೊರಬಿದ್ದಿತು.

ಅದರ ಸಪ್ಪಳಕ್ಕೆ ಅಲ್ಲಿಯೇ ಇದ್ದ ಲಕ್ಷ್ಮಣನು ಗಡಬಡಿಸಿದ-ಹತ್ತಿರ ಯಾರಿದ್ದಾರೆಂದು ನೋಡಲು! ಆದರೆ ಯಾರೂ ಇಲ್ಲ.

'ಏನಾಯಿತು?' ಎಂದು ರಾಮಚಂದ್ರನು ಮಧುರ ದನಿಯಲ್ಲಿ ಕೇಳಿದನು.

'ಹ್ಞ ಏನಿಲ್ಲ' ಎಂದು ಲಕ್ಷ್ಮಣನು ಸುಧಾರಿಸಿಕೊಂಡನು. ಈಗ ಶೂರ್ಪನಖಿ ತುಸು ಹಿಂದೆ ಸರಿದಳು.

ಕತ್ತಲೆಯಾಗತೊಡಗಿತು. ರಾಮಚಂದ್ರನ ಸುಂದರ ಮುಖ ಶೂರ್ಪನಖಿಗೆ ಕಾಣದಾಯಿತು. ಅವನ ಕೋಮಲ ಕಂಠದಿಂದ ಮಾತಾದರೂ ಕೇಳಿಸುತ್ತಿದೆಯಲ್ಲ. ಅದನ್ನು ಕೇಳುವುದೂ ಎಷ್ಟು ಹಿತಕರ, ಎಂದುಕೊಂಡಳು.

ಥೂ ಕೆಟ್ಟ ಸೀತೆ! 'ಮಾತು ಸಾಕು ಒಳಕ್ಕೆ ಬನ್ನಿರಿ, ಫಲಾಹಾರ ಮುಗಿಸುವ' ಎಂದು ಕರೆದೊಯ್ದು ಬಿಟ್ಟಳು.

ಶೂರ್ಪನಖಿಗೆ ನರ್ಮದಾನದಿಯ ಕರೆ ಈಗ ಗಟ್ಟಿಯಾಗಿ ಕೇಳಿಸತೊಡಗಿತು. ಇಷ್ಟುಹೊತ್ತಾದರೂ ಮಗ್ಗುಲದಲ್ಲಿ ನದಿ ಇರುವುದು ನನ್ನ ಲಕ್ಷಕ್ಕೆ ಬರಲಿಲ್ಲವಲ್ಲ, ಎಂದು ಯೋಚಿಸಿದಳು.

ನದಿಯ ದಡಕ್ಕೆ ಹೋದಳು. ಮುಖವನ್ನು ತೊಳೆದುಕೊಂಡಳು. 'ಈ ನನ್ನ ಕಪ್ಪು ಮುಖವನ್ನು ಸುಂದರವಾಗಿ ಮಾಡಬಲ್ಲ ಅಮೂಲ್ಯ ಗುಣ ಈ ನೀರಿಗಿದ್ದಿದ್ದರೆ.' ಎಂದುಕೊಂಡಳು. ನೀರಿನಲ್ಲೇ ಇರುವ ಬಂಡೆಯೊಂದರ ಮೇಲೆ ಕುಳಿತು, ಕಾಲನ್ನು ನೀರಲ್ಲಿ ಮೀಯಿಸುತ್ತ, ತಂಗಾಳಿಯನ್ನು ಸೇವಿಸುತ್ತಿದ್ದಳು.

ಚಂದ್ರನುದಯಿಸಿ ಬಂದ. ಆಗ ಅಲ್ಲಿ ಕೂಡುವುದಕ್ಕೆ ಅವಳಿಗೆ ಮನಸ್ಸಾಗ ಲಿಲ್ಲ. ವಾಸನೆಯಿಂದ ಉರಿದೆದ್ದ ಹೃದಯಕ್ಕೆ, ಇಷ್ಟು ಶಾಂತಿ, ಇಷ್ಟು ಮಾರ್ದವತೆ ಹೆಚ್ಚಿನ ಕಿಚ್ಚನ್ನು ಎಬ್ಬಿಸಿತು. ಆ ಜಾಗ ಬಿಟ್ಟು ಎದ್ದಳು.

ಹೊಟ್ಟೆ ಹಸಿದಿತ್ತು. ಫಲಗಳಿಗಾಗಿ ಗಿಡಮರಗಳನ್ನು ಹುಡುಕಾಡಿದಳು. ಹಣ್ಣು ಗಳು ಅಲ್ಲೊಂದು ಇಲ್ಲೊಂದು ತುದಿಯಲ್ಲಿ ಕಾಣುತ್ತಿದ್ದವು. 'ಲಕ್ಷ್ಮಣನೇ ಹರಿದಿರ ಬೇಕು, ಮತ್ತಾರು ?' ಎಂದಳು. ಕೊನೆಗೆ ಹಣ್ಣುಗಳನ್ನರಸಿ ದೂರದವರೆಗೂ ಹೋಗಬೇಕಾಯಿತು.

ಚಂದಿರನು ಸ್ವಚ್ಛಂದವಾಗಿ ದಿಗಂತದಲ್ಲಿ ಹರಿದಾಡುತ್ತಿದ್ದ. ರಮ್ಯವಾದ ಆ ವಾತಾವರಣದಲ್ಲಿ ಕಣ್ಣನ್ನು ಹಿಗ್ಗಿಸಿ, ಆ ಉನ್ಮಾದಿನಿಯು ಮೇಲೆ ನೋಡಿದಳು. 'ಈ ಹೊನ್ನ ಚೆಂಡನ್ನು ತೋಳ ತೆಕ್ಕೆಯಲ್ಲಿ ಸಿಲುಕಿಸಿ, ಚಿನ್ನಾಟವಾಡಬೇಕು' ಎಂದು ಬಯಸಿದಳು.

ಆ ಕೂಡಲೇ ರಾಮಚಂದ್ರನ ನೆನಪಾಯಿತು. ಅಲ್ಲಿಗೋಡಿದಳು. ಮತ್ತೆ ಹವೆಯಲ್ಲಿ ಮರೆಯಾಗಿ, ಆ ಎಲೆವನೆಯ ಹಿಂಬದಿಗೆ ಏನಾದರೂ ಕಾಣಸಿಕ್ಕುವುದೆ ಎಂದು ಒಂದು ಸಂದಿನಲ್ಲಿ ದೃಷ್ಟಿಯನ್ನು ತೂರಿದಳು. ಕಾಣಸಿಗಲಿಲ್ಲ. ಸಂಭಾಷಣೆ ಮಾತ್ರ ಕೇಳಿಸುತ್ತಿತ್ತು.

'ಆ ಮಾತೇಕೆ ? ನಾನು ಇನ್ನುಮೇಲೆ ನಿಮ್ಮ ಸಂಗಡವೇ ಹೊರಗೆ ಬಂದು ಬಿಡುತ್ತೇನೆ'—ಹೆಣ್ಣಿನ ದನಿಯಷ್ಟೇ. ಹೇಳಿದವಳು ಸೀತೆ.

'ಛೇ, ಕಲ್ಲುಮುಳ್ಳು ತುಳಿಯುತ್ತ, ಅದೇನದು ಬರುವುದು ? ಹೊಸ ಜಾಗ. ಸ್ವಲ್ಪ ಬೇಸರ ಬರುವುದು ಸ್ವಾಭಾವಿಕ. ಕೆಲದಿನ ಹೋದಮೇಲೆ ತಾನೇ ರೂಢ ವಾಗುತ್ತದೆ. ಅಷ್ಟೂ ಬೇಸರ ಬಂದರೆ ಮಾತು—ಹರಟೆಗೆ, ಇಬ್ಬರ ಪೈಕಿ ಒಬ್ಬರು ಇಲ್ಲೇ ಇರುತ್ತೇವಲ್ಲ.'

'ಬರೀ ಮಾತನ್ನಾದರೂ ಏನೆಂದು ಆಡುವುದು ? ಅಥವಾ ಅಷ್ಟು ಮಾತಿಗೆ ಇರುವುದಾದರೂ ಏನು ?' ಎಂದಳು ಸೀತೆ.

'ನೋಡು, ನಾ ಬೇಡ ಎಂದು ಹೇಳಿದರೆ ಕೇಳಲಿಲ್ಲ. ಸುಮ್ಮನೆ ಬೆನ್ನುಹತ್ತಿ ಬಂದೆ.' ರಾಮಚಂದ್ರನು ತುಸು ನಗೆಯಲ್ಲಿ ನುಡಿದನು.

'ಸಾಕು ಬಿಡಿರಿ. ನಿಮ್ಮ ಮಾತು ನಿಮಗೇ ಛಂದ. ನನಗಿಲ್ಲಿ ಕಷ್ಟವಾಗುವು ದೆಂದು ತಿಳಿದು ಹಾಗೆ ಹೇಳಿದೆನೇ ? ಋಷಿ ಪತ್ನಿಯರು ಯಾರಾದರೂ ಒಬ್ಬರು ಜೊತೆಗಿದ್ದರೆ ಸಾಕಾಗಿತ್ತು—ಎಂದಿಷ್ಟು ನಾನು ಬಯಸಿದರೆ, ಇಲ್ಲದ ಕೊಂಕು ಮಾತು.' ಜಾನಕಿ ಸಹಜ ಸಿಟ್ಟಿನಲ್ಲಿ ಹೇಳಿದಳು.

'ಲಕ್ಷ್ಮಣಾ, ಹಾಗಿದ್ದರೆ ನೀನು ಇಲ್ಲಿ ಇದ್ದಾಗ ಅವಳಿಗೆ ನೀತಿಯ ಕತೆ, ತತ್ತ್ವ ವಿಚಾರ ಮುಂತಾದ್ದನ್ನು ಹೇಳತೊಡಗು.'

'ಏನಣ್ಣಾ, ಅತ್ತಿಗೆಯನ್ನೇನು ಸಣ್ಣ ಹುಡುಗರೆಂದು ತಿಳಿದುಬಿಟ್ಟೆಯಲ್ಲ ? ಅವರಿಗೆ ನೀತಿ ತತ್ತ್ವ ಪರಿಚಯ ನಾ ಮಾಡಿಕೊಡಲೆ ? ನಿನ್ನ ಚೇಷ್ಟೆ ಬಹಳ ಬೆಳೆಯಿತು.'

'ಹೋಗಲಿ ಬಿಡು, ಆಕೆಯ ಅಪೇಕ್ಷೆಯಾದರೂ ಏನು ? ಒಬ್ಬ ತಪಸ್ವಿಗಳ ಕುಟುಂಬವನ್ನು ಕರೆತಂದು ಬಿಟ್ಟರಾಯಿತಿಲ್ಲೊ. ಆ ಮೇಲೆ ನಾವು ನಿಶ್ಚಿಂತರಾಗು ತ್ತೇವೆ. ನೀನೂ ಹುಡುಕು, ನಾಳೆ ಮುಂಜಾನೆ ನಾ ಹೋದೆನೆಂದರೆ, ನಾನೂ ಹುಡುಕಿಕೊಂಡು ಬರುವೆ.'

'ದಿನವೂ ಓಡಾಡುತ್ತಿದ್ದೇವೆ, ಸಮೀಪದಲ್ಲಿ ಒಂದಾದರೂ ಋಷಿಗಳ ಆಶ್ರಮ ಕಣ್ಣಿಗೆ ಬೀಳಲೊಲ್ಲದು. ನರ್ಮದೆಯ ಸಾನ್ನಿಧ್ಯವೊಂದನ್ನು ಗಮನಿಸಿ, ಹಿಂದುಮುಂದಿನ ಯೋಚನೆಯಿಲ್ಲದೆ, ಅಯೋಧ್ಯೆಯಿಂದ ಬಂದವರು ನೆಟ್ಟಗೆ ಇಲ್ಲಿ ನೆಲೆಯೂರಿ ಬಿಟ್ಟೆವು.'

'ನಾವಿಲ್ಲಿ ಸುಖಪಡುವದಕ್ಕೆಂದು, ತಾಯಿ ನಮ್ಮನ್ನು ಕಳಿಸಿದ್ದಾಳೆಂದು ತಿಳಿ ದೀರ ? ಕಾನನವೆಂದಮೇಲೆ ಹೀಗೇ.'

'ನಾ ಹಾಗೆಲ್ಲಿ ಅಂದೆ ? ಈ ಜಾಗಬಿಟ್ಟು ಮತ್ತೆಲ್ಲಾದರೂ ಹೋಗುವ ಎಂದು ನನ್ನ ಸೂಚನೆ. ಅದೂ ಮುಖ್ಯ ಅತ್ತಿಗೆಯ ಸಲುವಾಗಿ. ಋಷಿ ಪತ್ನಿಯರು ಜೊತೆ ಗಿದ್ದರೆ, ಅವರಿಗೆ ಎಷ್ಟು ಹಿತ !'

'ಕೆಲ ದಿನ ಕಳೆದಮೇಲೆ, ನಿಮಗೇ ಇದು ಒಗ್ಗಿಹೋಗುವುದು, ಎಂದು ನನಗ ನಿಸುತ್ತದೆ. ಮುಂದೆ ನೋಡೋಣ, ಈಗೇಕೆ ಆದರ ಯೋಚನೆ ?' ಎಂದು ರಾಮ ಚಂದ್ರನು ಮಾತು ಮುಗಿಸಿದನು.

ಮೊದಲಿನಂತೆ ಆ ಕುಟೀರದ ಹತ್ತಿರ ನಿಲ್ಲಲು, ಅವಳ ಮನಸ್ಸು ಒಪ್ಪಲಿಲ್ಲ. ಆಗ ಲಕ್ಷ್ಮಣನೂ ಹೊರಗೆ ಬಂದ. ಶೂರ್ಪನಖಿ ತಿರುಗಿ ನಡೆದಳು. ಒಂದು ಮರದ ಅಡಿಯಲ್ಲಿ ಸ್ವಸ್ಥ ಕುಳಿತಳು.

'ಮುಂದೇನು?' ಎಂದು ಕೆದರಿ ಕೇಳಿತು ಒಂದು ಸರಣಿ. 'ಕಾರ್ಯ ಕೈಗೂಡುವ ಬಗೆ ಹೇಗೆ?' ಎಂದು ಸಮಸ್ಯೆ ನಿಂತಿತು.

'ರಾಮಚಂದ್ರನು ಒಬ್ಬನೇ ಸಿಕ್ಕಾಗ ಬಲಾತ್ಕಾರದಿಂದ ಎಳೆಯಲೆ? ಛೆ, ಇದೇನು ಯುದ್ಧವೆ? ಪ್ರೇಮದ ಕೋಮಲಗೆಲಸ. ಲಕ್ಷ್ಮಣನಾಗಲೀ ಸೀತೆಯಾಗಲೀ ಇರಬಾರದಿತ್ತು. ಅಂದರೆ ನನ್ನ ಕೆಲಸ ಎಷ್ಟು ಸುಲಭವಾಗುತ್ತಿತ್ತು! ಲಕ್ಷ್ಮಣನೊಬ್ಬನನ್ನು ತೀರಿಸಿಬಿಡಲೆ?........ಏನು ಮಾಡಬೇಕು?......'

ರಾಮನೊಬ್ಬನೇ ಹೊರನಡೆದಾಗ ಒಲುಮೆಯ ಮಾತುಗಳನ್ನಾಡಿ ಒಲಿಸಿಕೊಳ್ಳಬೇಕೆಂದು ಒಂದುಸಲ ಗೊತ್ತುಮಾಡಿಕೊಂಡಳು. ಸೀತೆಯ ಚಲ್ವಿಕೆಯನ್ನು ನೆನೆದು ಅದು ಸಾಧ್ಯವಾಗಲಿಕ್ಕಿಲ್ಲ ಎಂದು ಮಿಡುಕಿದಳು. 'ಅಂತಹರನ್ನು ಬಿಟ್ಟು ನನ್ನೆಡೆ ಬರಬಹುದೆ? ನಾನು ಕುರೂಪಿ......ಹೌದು......ಆದರೇನು? ನಾನು ಚನ್ನಾಗಿ ಸಿಂಗರಿಸಿಕೊಂಡೆನೆಂದರೆ ತುಸುವಾದರೂ ಆ ಕುರೂಪ ಮರೆಯಾಗಲಿಕ್ಕಿಲ್ಲವೆ? ಅವನಲ್ಲೂ ಒಂದು ಅವಗುಣ ಇದೆಯಲ್ಲ? ನನ್ನಂತೆ ಅವನೂ ಕಪ್ಪು ಬಣ್ಣದವ......ಅಲ್ಲದೆ ಆ ಪೆದ್ದ ಹುಡುಗಿಗಿಂತಲೂ ಪ್ರೇಮ ಚೇಷ್ಟೆಗಳನ್ನು ನಾನು ಹೆಚ್ಚಾಗಿ ಬಲ್ಲೆ' ಎಂದು ಸಮಾಧಾನಗೊಂಡಳು.

ಆದರೂ ಅವಳು ಕುರೂಪಿಯೆಂಬ ಮಾತೆಲ್ಲಿ ಹೋಗಬೇಕು? ಅದು ಅವಳ ಮನಸ್ಸನ್ನು ಬಲವಾಗಿ ಹಿಂಡುತ್ತಿತ್ತು. ಅಲ್ಲದೆ ಆಕೆ ಇನ್ನೊಂದಕ್ಕೆ ಹೆದರಿದಳು. 'ನನ್ನ ಮೇಲೆ ದ್ವೇಷಗೊಂಡು ಬಿಲ್ಲನ್ನು ಹೂಡಿದರೆ? ನನ್ನ ಅಣ್ಣನಿಗೂ ಕೂಡ ಮೀರಿದ ಬಲಶಾಲಿಯನ್ನು ಎದುರಿಸಬಲ್ಲೆನೆ? ಅದು ಹೇಗೂ ಆದೀತು. ಒಂದುವೇಳೆ ಬಿದ್ದರೆ ಅವನ ಆಶೆಯನ್ನು ನಾ ಒಟ್ಟಿಗೇ ಸಂಪೂರ್ಣ ಬಿಡಬೇಕಲ್ಲ.'

'ಸೀತೆಯನ್ನು ಎಷ್ಟು ಹಚ್ಚಿಕೊಂಡಿದ್ದಾನೆ ಆತ! ನಾನೂ ಸೀತೆಯ ಸರಿಸಮಾನ ಚೆಲುವೆಯಾಗಿದ್ದಿದ್ದರೆ, ಕೆಲಸ ಆಗಿಯೇ ಹೋಗುತ್ತಿತ್ತು, ರಾಮನು ಒಲಿಯುಬಹುದಿತ್ತು.

'ನಾನೂ ಸೀತೆಯ ಹಾಗಿದ್ದರೆ............!!............' ಶೂರ್ಪನಖಿ ಇನ್ನೂ ಯೋಚಿಸುತ್ತಿದ್ದಳು.

ಬೇರೊಂದು ರಾತ್ರಿ. ಸುತ್ತಲೂ ಕತ್ತಲೆ ಕವಿದಿದೆ. ಚಂದ್ರನು ಅಸ್ತನಾಗಿ ಹೋದುದರ ಗುರುತು ಇನ್ನೂ ಇತ್ತು.

ಆ ಕತ್ತಲೆಯಲ್ಲಿ ಇಬ್ಬರು ಭಾರವಾದ ಹೆಜ್ಜೆಗಳನ್ನಿಡುತ್ತ ಬರುತ್ತಿದ್ದರು. ಆ ಸಪ್ಪಳ ಕಡಿಮೆ ಮಾಡಬೇಕೆಂದು ಆಗಾಗ ಪ್ರಯತ್ನಿಸುತ್ತಿದ್ದರು. ನಡೆದು ಬರುವಂತಿತ್ತು, ಅವರು.

'ಇನ್ನೆಷ್ಟು ದೂರ ?' ಒಬ್ಬನು ಕೇಳಿದ.

'ಇನ್ನೇನು ದೂರಿಲ್ಲ, ಇದೇ ಬೈಲಿನಲ್ಲಿ ಅವರಿರುವ ಪರ್ಣಕುಟಿಯನ್ನು ಕಂಡಿದ್ದೇನೆ. ಸ್ವಲ್ಪ ಹುಡುಕುವ.'

...............................

'ಏನು: ಸಿಗಲಿಲ್ಲವೇ ?'

'ಕತ್ತಲೆ ಬೇರೆ ಆಗಿದೆ, ಕಾಣಲೊಲ್ಲದು. ಅದರ ಹತ್ತಿರ ಒಂದು ಅಶ್ವತ್ಥ ವೃಕ್ಷದ ಕಟ್ಟೆಯಿದೆ, ನೋಡು. ನೀನೂ ಹುಡುಕು.'

'ನನಗೂ ಕಾಣಲೊಲ್ಲದು.........ಮಾವಯ್ಯ, ನೀನೆಲ್ಲೋ ತಪ್ಪಿರಬೇಕು.'

'ಇಲ್ಲ; ನನಗೆ ಪೂರ್ಣ ನೆನಪಿದೆ. ನಿನ್ನ ಅಪ್ಪಣೆಯ ಪ್ರಕಾರ ಮೊನ್ನೆ ಬಂದಾಗ ಇಲ್ಲೇ ನಾನು ಅವರನ್ನು ಕಂಡದ್ದು. ಇದೇ ಜಾಗದಲ್ಲಿ ನಾನೂ ಅಡ್ಡಾಡಿದ ಹಾಗೆ ಅನಿಸುತ್ತದೆ......ಹಾ, ಈ ಮುಳ್ಳು ಕಂಟಿ ಇಲ್ಲೇ ಇದೆ. ಸರಿ, ಇಲ್ಲಿ ಒಂದು ಸೀಳು ದಾರಿ ಇತ್ತು......'

ಇನ್ನೊಬ್ಬನು, 'ಇದೇ; ನಾವೀಗ ನಿಂತಿದ್ದೇ ಅಲ್ಲವೆ ?' ಎಂದು ಮನಗಾಣಿಸಿದನು. ಇಬ್ಬರೂ ತುಸು ಮುಂದೆ ನಡೆದರು.

'ಹಾಂ, ಅಲ್ಲಿ ಕಾಣಿಸುತ್ತದೆ ನೋಡು. ಅದೇ ಅವರಿರುವ ಆಶ್ರಮವಷ್ಟೆ ?'

'ಶ್, ಮೆಲ್ಲಗೆ! ಇಲ್ಲೇ ನಿಲ್ಲು. ಹೊರಗೇ ಆ ಲಕ್ಷ್ಮಣ ಮಲಗಿರುತ್ತಾನೆ...... ಬಾ ಇಲ್ಲಿ ಕೂಡೋಣ.'

ಕೆಳಗೆ ಕೂಡುತ್ತ, ಪಿಸುದನಿಯಲ್ಲಿ ರಾವಣನು ಕೇಳಿದ, 'ಮುಂದೇನು ಮಾಡುವುದು ? ನೀನಂದಹಾಗೆ ನಿಜವಾಗಿಯೂ ಅವರು ಆ ಹುಡುಗಿಯನ್ನು ಸರ್ಪ ಕಾಯ್ದ ಹಾಗೆ ಕಾಯುತ್ತಾರೆಯೇ ?'

'ಹೌದು. ಇಡೀದಿನ ಇಲ್ಲೇ ಇದ್ದೆನಲ್ಲ, ಒಬ್ಬನು ತಪ್ಪಿದರೆ, ಇನ್ನೊಬ್ಬ ಆಶ್ರಮದಲ್ಲಿ ಅವಳ ಹತ್ತಿರ ಇದ್ದೇ ಇರುತ್ತಾನೆ.'

'ನೀ ಈಗ ಏನು ಮಾಡಬೇಕೆನ್ನುವಿ ?'

'ಇದು ಜೀವದ ಮೇಲಿನ ಪ್ರಸಂಗ. ಎದುರೇ ನಿಂತು, ಸೆಣಸಾಟ ಮಾಡುವುದು ಮಾತ್ರ ಬೇಡ........ನನಗೇನೂ ತೋಚದಾಗಿದೆ' ಎಂದು ಮಾರೀಚನು ನುಡಿದನು.

'ಛಂದಕ್ಕೆ ಕರೆದುಕೊಂಡು ಬಂದಿರುವೆನೇನು ನಿನ್ನ ? ಏನು ಮಾಡಬೇಕು ಎನಿಸುವುದನ್ನು ಹೇಳಬಾರದೆ ?' ಆಗ ಇನ್ನೊಬ್ಬನಿಂದ ಉತ್ತರ ಬಾರದಿರಲು, ರಾವಣನೇ ಸಮಾಧಾನದ ದನಿಯಲ್ಲಿ ಹೇಳಿದ. 'ಮಾವಯ್ಯ, ಈಗ ನಾವಿಷ್ಟು

ಮಾಡಬೇಕು. ಹೇಗಾದರೂ ಮಾಡಿ, ಅವರಿಬ್ಬರೂ ಮನೆಬಿಟ್ಟು ಹೊರಬೀಳುವಂತೆ ಆದರೆ ಆಯಿತು. ಆ ಹುಡುಗಿ ಒಬ್ಬಳೇ ಒಂದು ಅರ್ಧಗಳಿಗೆ ಇದ್ದರೆ ಸರಿ, ಉಳಿದದ್ದನ್ನು ನಾ ನೋಡಿಕೊಳ್ಳುವೆ......ನೀ ಸಹಾಯ ಮಾಡದೆ ಗತ್ಯಂತರವಿಲ್ಲ ಮಾವಯ್ಯ......ಮತ್ತಾವ ಚಿಂತೆಯೂ ನನಗಿಲ್ಲ, ಮಿಥಿಲೆಯಲ್ಲಿ ನನಗಾದ ಅಪಮಾನಕ್ಕೆ ಆ ಚೋಟುದ್ದ ಹುಡುಗಿ, ನನ್ನ ಕಡೆಯಿಂದ ಅವತ್ತು ಧನುಸ್ಸನ್ನೆತ್ತಲು ಆಗದೆ ಇದ್ದಾಗ ಪಿಸಿ ಪಿಸಿ ನಕ್ಕದ್ದು ಇನ್ನೂ ಕಿವಿಯಲ್ಲಿ ಕಟ್ಟಿದೆ.'

'ಮತ್ತೇನು ? ಇಷ್ಟು ದೊಡ್ಡ ದೇಹ, ಇಪ್ಪಿಪ್ಪತ್ತು ಕೈಗಳು ಇದ್ದೂ, ಎತ್ತುವು ದಾಗಲಿಲ್ಲೆಂದಾಗ, ಯಾರಿಗಾದರೂ ನಗೆಬರಬೇಕು.'

'ವ್ಯಂಗ್ಯಕ್ಕಿದು ಸಮಯವೇ, ಮಾವಯ್ಯ ? ನೀನೂ ನನ್ನ ಅಪಮಾನ ಮಾಡು ವುದೆ ?' ಎಂದು ರಾವಣನು ಬಿರುಸಿನಲ್ಲಿ ಅಂದನು.

'ಇಲ್ಲ ಮಹಾರಾಯ, ತಪ್ಪುಆಯಿತು ಅನ್ನು. ಸಹಜ ಬಾಯಿಗೆ ಬಂತು.' ಒಂದು ತುಸು ತಡೆದು ಮಾರೀಚನು ಕೂಡಲೇ ಹೇಳಿದ, 'ಹಾಂ. ನನಗೊಂದು ಯೋಚನೆ ಬರುತ್ತದೆ. ಹೆಂಗಸರಿಗೆ ಚಿಗರೆಯೆಂದರೆ ಬಲು ಪ್ರೀತಿಯಷ್ಟೇ. ನಾನು ಹೊಂಬಣ್ಣದ ಚಿಗರೆಯಾಗಿ, ಅವರ ಆಶ್ರಮದ ಮುಂದೆ ಸುಳಿದಾಡುತ್ತೇನೆ. ಸೀತೆ ಹೊರಕ್ಕೆ ಬಂದು ನೋಡಿದಳೆಂದರೆ ನನ್ನ ಬಿಡಲಾರಳು. ಅವರಿಬ್ಬರ ಪೈಕಿ ಯಾರೊ ಬ್ಬರು ನನ್ನ ಹಿಡಿಯ ಬಂದರೂ, ನಾ ಅವರ ಕೈಗೆ ಸಿಗುವುದಿಲ್ಲ. ನನ್ನ ಹಿಡಿಯ ಲೆಂದು ಬಿಲ್ಲು ಬಾಣ ಬೇರೆ ತರುವುದಿಲ್ಲವಷ್ಟೇ. ಜೋರಿನಿಂದ ಓಡುತ್ತ ಹೋಗಿ ಬಿಡುವೆ. ನನ್ನ ಸಂಗಡ ಬಂದವನು ಮರಳಿ ಬರಲಿಲ್ಲೆಂದು ಇನ್ನೊಬ್ಬನೂ ಬೆನ್ನು ಹತ್ತಿ ಬರಲೇಬೇಕು.'

'ವ್ಹಾ ! ನೀನು ಚಿಗರೆಯಾಗುವುದು ತುಂಬ ಒಳ್ಳೆಯ ಉಪಾಯ. ಆದರೆ ಹೀಗೆ ಮಾಡುವುದು ಬೇಡ. ಅವರಿಬ್ಬರಲ್ಲಿ ಒಬ್ಬನು ಆಶ್ರಮದಲ್ಲಿ ಇಲ್ಲದ ಹೊತ್ತನ್ನೇ ನೋಡಿ, ನೀನು ಅಲ್ಲಿ ಸುಳಿದಾಡಿದೆಯೆಂದರೆ, ಇನ್ನೊಬ್ಬನು ಅವಳ ಅಪೇಕ್ಷೆಯ ಮೇರೆಗೆ ಬೆನ್ನುಹತ್ತದೆ ಇರನು.'

'ಇದೂ ಸರಿಯೆ. ಇಲ್ಲವಾದರೆ ಇಬ್ಬರೂ ಇದ್ದ ವೇಳೆಯಲ್ಲಿ, ಒಬ್ಬನು ಬೆನ್ನು ಹತ್ತಿ ಬಂದರೆ, ಇನ್ನೊಬ್ಬನು ಬರದೇ ಇರುವ ಸಂಭವವೇ ಇದೆ........ಆದರೆ ನನಗೆ ಇನ್ನೂ ಒಂದು ಸಂದೇಹ. ಇಷ್ಟೆಲ್ಲ ಆಗಿ, ನಮ್ಮ ಹಂಚಿಕೆ ಯಶಸ್ವಿಯಾಯಿತೆಂದು ತಿಳಿ. ಆ ಹುಡುಗಿಯೊಂದು ನಿನಗೆ ಒಲಿದು ಬರಬೇಕಲ್ಲ. ಬಲಾತ್ಕಾರದಿಂದೇನು ಬಂತು ?'

'ಹುಚ್ಚು ನಿನಗೆ, ಅಲ್ಲೋ, ಅಲ್ಲಿಂದ ಇಲ್ಲಿಯ ತನಕ ಅವಳಿಗೆ ಮೋಹಗೊಂಡು ಬಂದೆನೆಂದು ತಿಳಿದೆಯ ? ನನಗೆ ಬೇಕಾಗಿರುವುದು ಸೇಡು. ಅವರಿಬ್ಬರ ಮೇಲೆಯೂ ಸೇಡು ತೀರಿಸಿಕೊಳ್ಳಬೇಕಾಗಿದೆ. ನಮ್ಮ ರಾಜಧಾನಿಯಲ್ಲಿ ಚೆಲುವೆಯರಿಗೇನು ಕೊರತೆಯೆ ? ಇವಳಿಗಿಂತ ಸಾವಿರಪಾಲು ಮಿಗಿಲಾದವರನೇಕರನ್ನು ನಿನ್ನ ಕಾಲಡಿಗೆ ಬೇಕಾದರೆ ತಂದೊಗೆಯುವೆ......ಆ ಮಂಗನೇನೋ ಏಕಪತ್ನೀವ್ರತಸ್ಥನಂತೆ. ಇದ್ದೊಬ್ಬ ಹೆಂಡತಿಯೂ ಅವನನ್ನು ನೆಚ್ಚಿಕೊಂಡಿರಲಾರದಷ್ಟು ಅಪ್ರಾಳಿಯಿರುವನೆಂದು ಜಗತ್ತಿಗೇ ತೋರಿಸಿಕೊಡುತ್ತೇನೆ. ಇವನ ಬಾಳುವೆ ಹೀಗೆ ಹಸಗೆಟ್ಟು ಹೋದರೆಯೆ, ನನ್ನ ಸೇಡು ತೀರಿದಂತೆ......ಹಾಂ. ಹೀಗೆ ಮಾಡಬೇಕು. ಆ ಹುಡುಗಿ ಒಲಿದು ಬರಬೇಕು ಎಂದೆಯಲ್ಲ, ಹೌದು, ಆಕೆ ತಾನಾಗಿ ಮೆಚ್ಚಿ ಬರುವಂತೆ ಮಾಡುವೆ. ಮೋಸದಿಂದಲೆ ವಶಪಡಿಸಿಕೊಂಡರೆಯೋ ನನ್ನ ಸೇಡಿಗೆ ಹೆಚ್ಚು ಕಳೆ......ಹೀಗೆ ಮಾಡಬೇಕು.'

'ಏನದು, ಮತ್ತಾವ ವಿಚಾರ ?'

'ಮಾವಯ್ಯ, ನನ್ನ ಬುದ್ಧಿಮತ್ತೆಗೆ ಏನಂತೀಯ ? ನೀನು ರಾಮನನ್ನು ಅಟ್ಟಿಸಿಕೊಂಡು ಹೋದೆಯೆಂದರೆ ನಾನು ಅಲ್ಲಿಗೆ ಹೋಗುವುದಿಲ್ಲ, ರಾಮನೇ ಸೀತೆಯ ಬಳಿ ಹೋಗುವನು !'

'ನಿನಗೆ ಸೀತೆಯ ಭ್ರಮೆ ಬಹಳವಾದಂತೆ ಕಾಣುತ್ತದೆ ! ಹಾಗೆಂದರೇನು ? ಹೀಗೇಕೆ ಅರ್ಥವಾಗದ ಮಾತು !'

'ಅಂದರೆ ನಿಜ ರಾಮನು ಅಲ್ಲಿಗೆ ಹೋಗುವುದಿಲ್ಲ. ರಾಮನ ವೇಷದಲ್ಲಿದ್ದ ರಾವಣನು ಮಾತ್ರ ಹೋಗುವನು. ಹ್ಹ ಹ್ಹ, ಹ್ಹ !'

'ತಿಳಿಯಿತು. ರಾಮನಂತೆಯೇ ರೂಪವನ್ನು ಧರಿಸುವಿ, ಮುಂದೇನು ?'

'ಮುಂದೇನು, ನಾನು ರಾಮನೆ ಎಂದು ಆಕೆ ಮೋಸಹೋಗುತ್ತಾಳೆ, ಒಲಿದು ಬರುತ್ತಾಳೆ. ಆಗ ಏನೇನೂ ಬಲಾತ್ಕಾರ ಕಾರಣವಿಲ್ಲ. ನಾನು ಚಿಗರೆಯನ್ನು ಕೊಟ್ಟರೆ, ನೀನು ನನಗೇನನ್ನು ಕೊಡುವಿ, ಎಂದು ಅವಳನ್ನು ಹಿಡಿದುಕೊಂಡು ಕೇಳುವೆ. ಹೇಗಿದೆ ನನ್ನ ವಿಚಾರ ?'

'ಸರಿ, ಸರಿ. ಅಡ್ಡಿಯಿಲ್ಲ. ನೀನೇನೊ ಪಾರಾಗಬಹುದು. ನಿಜ. ರಾಮನು ನನ್ನ ಬೆನ್ನುಹತ್ತಿ ಬಂದು ಕೊಂದು ಬಿಟ್ಟರೆ, ಎಂದು ಯೋಚಿಸುತ್ತಿದ್ದೇನೆ' ಎಂದನು ಮಾರೀಚ.

'ನೀನು ಹೀಗೆ ಹೆದರಿದರೆ ಹೇಗೆ ? ಶೂರ್ಪಣಂಥ ಹೆಣ್ಣು ಹೆಂಗಸು, ರಾಮನನ್ನು ವಶಪಡಿಸಿಕೊಳ್ಳುವೆ ಎಂದು ನಮ್ಮೆದುರು ಅವತ್ತು ಲಂಕೆಯಲ್ಲಿ ಪಣತೊಡಲಿಲ್ಲವೆ ? ಹಾಗೆಂದವಳು ಆಕೆಯೇನು ಮುಂದುವರಿಯಲಿಲ್ಲ ನಿಜ, ಆದರೂ ಮನು

ಷ್ಯನಿಗೆ ಧೈರ್ಯ ಬೇಕು, ಅದೇ ಮುಖ್ಯ. ಇಷ್ಟಕ್ಕೂ ನಿನಗೆ ಪ್ರಸಂಗ ಮೈಮೇಲೆ ಬಂದುದಾದರೆ ಸುಮ್ಮನೆ ಕೂಡುವೆನೆ ? ಅಲ್ಲಿಯೆ ಅವನ ಪ್ರಾಣವನ್ನು ಹೀರಿಬಿಡುವೆ.'

'ನಾನೇನು ಎದೆಗುಂದಿಲ್ಲ. ಸಹಜ ಹೇಳಿದೆ, ಅಷ್ಟೆ........ನಾಳೆಗೆ ಹಾಗಿದ್ದರೆ ನಮ್ಮ ಹಂಚಿಕೆಯನ್ನು ಕಾರ್ಯರೂಪದಲ್ಲಿ ತರುವ. ಸೂರ್ಯನು ಮೇಲೆ ಬರುವ ಹೊತ್ತಿಗೆ ಸರಿಯಾಗಿ ಲಕ್ಷ್ಮಣನು ಎದ್ದು ನದಿಗೆ ಹೋದವನು, ತುಸು ಹೊತ್ತೇರಿಯೆ ಬರುತ್ತಾನೆ. ಆವಾಗ ನಮ್ಮ ಕೆಲಸ ತೀರಿಸಿಬಿಡುವ. ಅಲ್ಲವೆ ?'

'ಹೌದು, ಹಾಗೇ ಮಾಡುವ. ನನಗೆ ಬೇಗ ಲಂಕೆಗೆ ತಿರುಗಬೇಕಾಗಿದೆ. ಯಾರಿಗೂ ತಿಳಿಸದೆ ಇಲ್ಲಿ ಬಂದುಬಿಟ್ಟಿದ್ದೇನೆ.'

ಹಾಗೆಂದ ರಾವಣನಿಗೆ ಇನ್ನೇನೋ ಯೋಚನೆಗಳು. ಅರ್ಧಮರ್ಧ ನಿದ್ರೆ ಹತ್ತಿದಂತಾಗಿ, ನಸುಕು ಇರುತ್ತಲೇ ಎದ್ದುಬಿಟ್ಟನು. ಅವನ ಮಾವಯ್ಯನು ಇನ್ನೂ ನಿದ್ರಿಸುತ್ತಿದ್ದ.

ಇನ್ನು ಹೊತ್ತಾಗುವುದೆಂದು ಅವನನ್ನೂ ಎಬ್ಬಿಸಬೇಕಾಯಿತು. ಇಬ್ಬರೂ ಮತ್ತೆ ಮಾತನಾಡಿಕೊಂಡರು. ರಾವಣನಿಗೆ ಅತಿಯಾದ ಆತುರ.

'ಈಗ ಲಕ್ಷ್ಮಣನು ಹೋಗಿರಬೇಕಲ್ಲವೆ ?' ಎಂದನು.

'ಹೌದು. ಅವತ್ತು ಅವನು ಹೋದದ್ದು ಇದೇ ವೇಳೆಗೆ.'

'ಸರಿ, ಎಲ್ಲಿ, ಒಮ್ಮೆ ಚಿಗರೆಯಾಗಿಬಿಡು.'

ಒಂದು ಕ್ಷಣದಲ್ಲಿ ರಾವಣನ ಮುಂದೆ ಸುಂದರ ಹರಿಣವೊಂದು ನಿಂತಿತ್ತು.

'ವ್ಹಾ. ಎಷ್ಟು ಚೆನ್ನಾಗಿ ಕಾಣುತ್ತೀಯೋ ಮಾವಯ್ಯ ! ನನಗೆ ಮೋಹ ಬರುವಂತಾಗಿದೆ. ಇನ್ನು ಆ ಸೀತೆಯು ಬಿಟ್ಟಾಳೆಯೇ ?........ಇಲ್ನೋಡು ರಾಮನು ಬೆನ್ನುಹತ್ತಿದಾಗ ಅವನ ಕೈಗೆ ಸಿಕ್ಕುಗಿಕ್ಕೀಯೆ ! ಹಾಗೆಂದು ಒಮ್ಮೆಗೆ ಓಡಲೂಬೇಡ. ಸಿಕ್ಕವರಂತೆ ಮಾಡಿ, ತಪ್ಪಿಸ್ಯಾಡುತ್ತ ದೂರ ದೂರ ಒಯ್ಯಬೇಕು. ಇಲ್ಲವಾದರೆ ನಾ ಪರ್ಣಕುಟಿಗೆ ಹೋದಾಗ ಅನರ್ಥವಾದೀತು.'

'ಒಳ್ಳೇದು, ನಾನು ಹೊರಡುವೆ. ಸ್ವಲ್ಪ ವೇಳೆಯನಂತರ ನೀನು ಅಲ್ಲಿ ಹೋಗು........ಅಲ್ಲ, ಕಾರ್ಯ ಯಶಸ್ವಿಯಾದುದು ನಿನಗೆ ಹೇಗೆ ತಿಳಿಯಬೇಕು ಎಂದು ಯೋಚನೆಯಾಗಿದೆ.'

'ಅದರಲ್ಲೇನೊ. ನೀನಿನ್ನೂ ಆಶ್ರಮದ ಮುಂದೆ ಸುಳಿದಾಡುತ್ತಿದ್ದರೆ ಕೆಲಸ ಆಗಿಲ್ಲವೆಂದು ತಿಳಿಯುವೆ. ನೀ ಅಲ್ಲಿರದಿದ್ದರೆ, ಒಮ್ಮೆ ಮೆಲ್ಲನೆ ಆ ಕುಟೀರದ

ಹಿಂಬದಿಗೆ ಬಂದು ಕಿವಿಗೊಡುವೆ. ಮಾತೇನು ಕೇಳಬರದಿದ್ದರೆ, ರಾಮಲಕ್ಷ್ಮಣರಿಬ್ಬರೂ ಹೊರಗೆ ಹೋದಂತಾಗಲಿಲ್ಲವೇ ? ಆ ಮೇಲೇನು, ಸೀತೆ ಒಬ್ಬಳೇ.'

'ಪ್ರೇಮಿಯಾದವನ ಬುದ್ಧಿ ಶಕ್ತಿ ಬಲು ಹರಿತವಾಗಿರುತ್ತದೆ, ಅನ್ನುತ್ತಾರೆ ; ಸುಳ್ಳಲ್ಲ, ನೋಡು. ಸರಿ, ನಾನಿನ್ನು ಹೊರಡುವೆ.' ಮಾರೀಚನು ತುಸು ಮುಂದೆ ನಡೆದು, ಹಿಂತಿರುಗಿದ.

'ಏಕೊ ಎದೆ ತುಸು ಡವ ಡವ ಎನ್ನುತ್ತಿದೆ. ನಮ್ಮ ಕಾರ್ಯ ಸಿದ್ಧಿಸುವುದರಲ್ಲೇನೂ ನನಗೆ ಸಂಶಯವಿಲ್ಲ. ಅನ್ಯಾಯದ ಕೆಲಸ ಅಂತ....?'

'ಇರಲಿ ಹೋಗು. ನ್ಯಾಯಾನ್ಯಾಯದ ವಿಚಾರ ಹಿಂದುಗಡೆ. ಈಗಂತೂ ನೀನು ಹೊರಡು.'

ಚಿಗರೆಯು ನೆಗೆಯುತ್ತ ಹೋಗುತ್ತಲೂ, ರಾವಣನು ವಿಚಾರ ಮಗ್ನನಾದನು. ಮಿಥಿಲೆಯಲ್ಲಿ ಕಂಡ ರಾಮನ ರೂಪವನ್ನು ಧೇನಿಸಿಕೊಂಡನು. ಅಲಂಕಾರಗಳನ್ನು ಧರಿಸಿದ ರಾಮನೀತನಾಗಿರಲಾರ ಎಂದು ಅವನಿಗೆ ತಟ್ಟನೆ ಹೊಳೆಯಿತು. ಅರಣ್ಯದ ನಾರು ಬಟ್ಟೆಗಳೂ ಸಿದ್ಧವಾದವು. ಮಾಯಾವಿಗಳಿಗೆ ಯಾವುದು ತಾನೆ ಅಸಾಧ್ಯ ?

ಆ ಸಮಯಕ್ಕಾಗಿ, ರಾವಣನು ಐದ್ಹತ್ತು ಗಳಿಗೆ ಅಲ್ಲಿಯೆ ಕಾದನು. ಅವನಿಗೆ ತುಂಬ ಬೇಸರ ಬಂತು. ಎದ್ದು, 'ಈ ಕಡೆಗೆ ಸ್ವಲ್ಪ ಏನೇನಿದೆ ನೋಡುವ' ಎಂದು ಹೊತ್ತು ಕಳೆಯಲು ಅಡ್ಡಲಾಗಿ ಹೊರಟನು. ಬಹಳಷ್ಟು ವಿಚಾರಗಳು ಬಂದು ಮುಕುರಿದವು. ಅದರ ಭರದಲ್ಲಿ, ಬಹಳ ಮುಂದೆ ಬಂದೆನೆಂದು ಅವನಿಗೆ ಅನಿಸಿತು. ಅಲ್ಲಿಯೆ ನಿಂತು, ರಾಮನ ರೂಪವನ್ನು ಧರಿಸಿದನು. ಉಟ್ಟ ನಾರು ಬಟ್ಟೆಯನ್ನು ತೀಡಿಕೊಳ್ಳುತ್ತ ಪರ್ಣಕುಟಿಯ ಕಡೆಗೆ ಹೊರಟನು.

ಎಲ್ಲವೂ ಅವನು ನಿರೀಕ್ಷಿಸಿದಂತೆಯೇ ಆಯಿತು. ಪರ್ಣಕುಟಿಯ ಮುಂದೆ ಎರಳೆಯು. ಕಾಣಲಿಲ್ಲ. ಹಿಂಬದಿಯಿಂದ ಕಿವಿಗೊಟ್ಟನು. ಒಳಗೇನೂ ಗದ್ದಲವಿರಲಿಲ್ಲ.

ಆಶ್ರಮದ ಬಾಗಿಲಿಗೆ ಬಂದು ತುಸು ತಡೆದನು. ಹಚ್ಚ ಹಸಿರು ಎಲೆಗಳಿಂದ ಆ ಕುಟಿಯು ಹೊಸದಾಗಿ ಕಟ್ಟಿದಂತಿತ್ತು. 'ಬಹಳ ಸೊಗಸಾಗಿ ಕಟ್ಟಿಕೊಂಡಿದ್ದಾರೆ.' ಎಂದುಕೊಂಡನು. ಉರಿದೆದ್ದು ವಾಸನೆಯು ಒಳಗಿನ ಹೆಣ್ಣನ್ನು ಅರಸಲೆಂದಿತು. ಒಳಗೆ ಹಣಕಿ ಹಾಕುವ ಮುನ್ನ, ತನ್ನದನಿ ಮಿದುವಾಗಿದೆಯೆ ಇಲ್ಲವೆ ಎಂದು ನೋಡಿಕೊಳ್ಳಲು, 'ಪ್ರಿಯೆ' ಎಂದು ತನ್ನಲ್ಲೇ ಅಂದನು.

ಒಳಗೆ ಬಳೆಗಳ ಸಪ್ಪಳವಾಗಿ, ಕೂತವಳು ಮೇಲಕ್ಕೆದ್ದಂತೆ ರಾವಣನಿಗೆ ಭಾಸವಾಯಿತು. ಹಣಿಕಿ ಹಾಕಿದನು. ಸೀತೆ ಅವನಿಗೆ ಕಂಡಳು ಮತ್ತು ಒಬ್ಬಳೆ ಇದ್ದಳು. 'ಪ್ರಿಯೆ ?' ಎಂದು ಇನ್ನೊಮ್ಮೆ ಹಂಬಲದ ದನಿಯಲ್ಲಿ ನುಡಿದನು.

ಆದರೆ ಅವನ ಕಣ್ಣಿಗೆ ಆಕೆ ತುಸು ಭಯಗೊಂಡವಳಂತೆ ಕಂಡಳು. ಪ್ರಿಯೆ– ಎಂಬುದಾಗಿ ರಾಮನು ಕರೆಯುವುದಿಲ್ಲವೇನೊ, ಅಥವಾ ನಾನು ನಿಜರಾಮನಲ್ಲ ಎಂಬುದರ ಸಂಶಯ ಅವಳಲ್ಲಿ ಮೂಡಿತೇನೊ ಎಂದುಕೊಂಡನು. ಆದರೆ ಅವನ ಗಂಡೆದೆ ಇದನ್ನೆಲ್ಲ ಬಹಳ ಹೊತ್ತು ಗಣಿಸಲಿಲ್ಲ. ಅವಳೆಡೆಗೆ ಹೋದನು.

ಆಕೆ ನಿಂತಲ್ಲೇ ನಿಂತಿದ್ದಳು. ಒಮ್ಮೆ ಅವನ ಕಡೆ ನೋಡಿ ಮುಖ ತೆಳಗೆ ಹಾಕಿದಳು, ಮತ್ತೊಮ್ಮೆ ನೋಡಿದಳು. ಹತ್ತಿರದಲ್ಲಿದ್ದ ಕಂಬಕ್ಕೆ ಆಸರೆ ಹೊಂದಿದ್ದಳು.

ಇಬ್ಬರೂ ಯಾವುದೋ ಒಂದು ಪ್ರಶ್ನೆಯನ್ನು ಒಬ್ಬರಿಂದೊಬ್ಬರು ಅಪೇಕ್ಷಿಸು ತ್ತಿರುವಂತೆ ಒಂದು ಕ್ಷಣ ತಡೆದರು. 'ಚಿಗರೆ ಎಲ್ಲಿದೆ?' ಎಂದು ಆಕೆ ಕೇಳುವಳೇನೊ ಎಂದು ರಾವಣನು ಹತ್ತಿರ ಬರುವ ಮುನ್ನ ತಡೆದನು. ಆಕೆ ಮಾತನಾಡಲೆಯಿಲ್ಲ. ರಾವಣನು ಅವಳನ್ನು ಹಿಡಿದುಕೊಂಡನು.

ರಾವಣನಿಗೆ ಆಗ ಇನ್ನೊಂದು ಯೋಚನೆ, 'ಲಕ್ಷ್ಮಣನು ಬಂದುಗಿಂದಾನು, ಬಿಡಿರಿ' ಎಂದು ಆಕೆ ಎಲ್ಲಿ ಕೊಸರಿಕೊಳ್ಳುವಳೊ ಎಂದು ಯೋಚಿಸಿ, ಅವನು ತನ್ನ ಅಪ್ಪುಗೆಯನ್ನು ಬಿಗಿಮಾಡಿದನು. ಆದರೆ ಆಕೆ ಹಾಗೇನಾಡಲಿಲ್ಲ. ಬದಲಾಗಿ ಅದರಿಂದ ಅತಿಯಾಗಿ ಸಂತೋಷಪಟ್ಟವಳಂತೆ, ಅವನ ಕೊರಲಿಗೆ ನೇತು ಬಿದ್ದು, ಕಣ್ಣು ಮುಚ್ಚಿದಳು. ಆದರೂ ಅವನಿಗೆ ಹೊಂದಿಕೊಂಡಿದ್ದ ಅವಳ ಎದೆ ಏಕೊ 'ಧಕ್ ಧಕ್' ಎಂದು ಜೋರಾಗಿ ಬಡಿದುಕೊಳ್ಳುವುದು ಅವನಿಗೆ ಕಂಡು ಬಂತು.

ರಾವಣನು ತನ್ನ ಉಬ್ಬಿನಲ್ಲೇ ಇದ್ದನು. ಧನುಸ್ಸು ಮುರಿಯ ಹೋಗಿ ಅಪಮಾನ ಹೊಂದಿದುದಕ್ಕೆ ತನ್ನ ಪ್ರತೀಕಾರ ದೊರೆತಂತಾಯಿತು, ಎಂದು ಹೆಮ್ಮೆ ಗೊಂಡನು. 'ಈಕೆಯ ಪಾವಿತ್ರ್ಯ ಹಾಳಾಯಿತು. ರಾಮನು ನನ್ನೆದುರು ತಲೆ ತಗ್ಗಿಸುವಂತಾಯಿತು' ಎನ್ನುವ ಸಂತಸದ ಅತಿರೇಕದಲ್ಲಿ ದೊಡ್ಡ ಸ್ವರದಲ್ಲಿ 'ಖೊಕ್ ಖೊಕ್' ಎಂದು ನಕ್ಕನು.

ಅದರಿಂದಾಗಿ ಆಕೆ ಕಣ್ಣು ತೆರೆದಳು. ಮೇಲ್ಭಾವಣಿ ಅಲುಗಾಡಿದಂತೇ ಆಯಿತು. ಈ ನಗೆ ಏಕೊ ಬೇಡವಾದರಂತೆ, ಏನನ್ನೊ ಗುರುತಿಸುವವಳಂತೆ, ಅವನ ಮೋರೆಯನ್ನು ಹುಳು ಹುಳು ನೋಡಹತ್ತಿದಳು.

' ನಾನು ರಾಮನಲ್ಲ ' ಎಂಬುದರ ಸುಳಿವು ಈಕೆಗೆ ಹತ್ತಿ ಹೀಗೆ ನೋಡುತ್ತಿರಬೇಕೆಂದು ರಾವಣನಿಗೆ ಭಾಸವಾಯಿತು.

ಒಂದು ಕ್ಷಣ ಸುಮ್ಮನಿದ್ದನು. ' ಏನೂ ಅಡ್ಡಿಯಿಲ್ಲ. ನಾನು ರಾಮನಲ್ಲ ಎಂಬುದು ಈಕೆಗೆ ಗೊತ್ತಾಗಲಿ ' ಎನ್ನುವ ಉನ್ಮಾದದಲ್ಲಿ ಅವಳ ಮೈಯೆಲುಬು ನುರಿನುರಿಯಾಗುವಂತೆ, ತನ್ನ ಶಕ್ತಿಯನ್ನೆಲ್ಲ ಹಾಕಿ, ಬಲವಾಗಿ ಅಪ್ಪಿದನು. ' ಈ ಕೋಮಲ ಶರೀರವು ಹೀಗೇ ಸಂಕಟಪಡಲಿ ' ಎಂದು ಅಪೇಕ್ಷಿಸಿದನು.

ಅವಳಿಗೆ ಇದರಿಂದ ಕಷ್ಟವೇನೊ ಆಯಿತು. ಆದರೂ ತಾಳಿಕೊಂಡಳು. ಮತ್ತೊಮ್ಮೆ ಅವನು ಕಠೋರ ದನಿಯಲ್ಲಿ ನಗಲುತೊಡಗಿದಾಗ ಆಕೆ ತನ್ನ ಬಲವನ್ನೆಲ್ಲ ಉಪಯೋಗಿಸಿ ಅವನ ಹಿಡಿತವನ್ನು ಬಿಡಿಸಿಕೊಂಡಳು. ಭಿರಿಭಿರಿಗಣ್ಣುಗಳಿಂದ ನೋಡತೊಡಗಿದಳು.

ಆಗ ರಾವಣನು ' ಚಿಗರೆಯನ್ನು ತರಲಿಲ್ಲೆಂದು ಸಿಟ್ಟಿಗೇಳಬೇಡ ಪ್ರಿಯೆ. ದಾರಿಯಲ್ಲಿ ಲಕ್ಷ್ಮಣನು ಭೆಟ್ಟಿಯಾದ. ಅವನಿಗೆ ಚಿಗರೆಯನ್ನು ತರಲು ಹೇಳಿ, ನಿನ್ನೆಡೆಗೆ ಓಡಿಬಂದೆ. ಕಾಳಜಿ ಬೇಡ, ಇಷ್ಟು ಬೇಗ ಅವನು ಬರುವದಿಲ್ಲ.' ಎಂದನು.

'ಎಲ್ಲಿಯ ಚಿಗರೆ ? ಯಾರು ನೀನು ? ' ಎಂದಳಾಕೆ.

ಉತ್ತರ ಕೊಡುವಂತಹದಿರಲಿಲ್ಲವೇನೊ. ಅವಳ ಕೈಯನ್ನು ಜೋರಾಗಿ ಎಳೆದು ಮತ್ತೆ ಹಿಡಿದುಕೊಳ್ಳಹೋದನು.

ಕೊಸರಿಕೊಳ್ಳಲು ಆಕೆ ಸಾಕಷ್ಟು ಪ್ರಯತ್ನಪಟ್ಟಳು. ಅವನ ಕೈಯನ್ನು ಬಲವಾಗಿ ಕಡಿದಳು. ಅವನು ಅದನ್ನು ಗಣಿಸದೆ ಹಟತೊಟ್ಟನು. ಯಶಸ್ವಿಯಾದನು.

ಆದರೆ ಈ ಪಟ್ಟು ಅವನ ಕೈಗೆ ಸಿಕ್ಕವಳು ಸೀತೆಯಲ್ಲ, ಶೂರ್ಪನಖಿ ! ಅವನ ತಂಗಿ!

ಥಟ್ಟನೆ ಅವಳ ಕೈಬಿಟ್ಟನು. ಅವನ ಕಣ್ಣಿಗೆ ಚಕ್ರಬಂದಂತಾಗಿ ನಿಂತ ಜಾಗ ಗಿಮಿಗಿಮಿ ತಿರುಗಿದಂತಾಯಿತು. ಆ ಕ್ಷಣವೆ ಆತನು ರಾವಣನಾಗಿದ್ದ.

' ಚಾಂಡಾಲೀ, ನೀ ಯಾವಾಗ ಬಂದಿ ?' ಎಂದು ಚೀರಿದ.

ಶೂರ್ಪನಖಿ ಅಷ್ಟರಲ್ಲಿ ಧೇನಿಸಿ, ಪರಿಸ್ಥಿತಿಯನ್ನು ಅರಿತುಕೊಂಡಿದ್ದಳು; ಅಣ್ಣನ ಕೈಹಿಡಿದು, 'ಯಾಕೆ ಹಾಗೆ ಕೂಗುತ್ತೀ? ಆದದ್ದಾಗಿ ಹೋಯಿತು. ನೀನು ಯಾವ

ಕೆಲಸಕ್ಕೆ ಬಂದೆಯೊ, ಅದೇ ಬಗೆಯ ಕೆಲಸಕ್ಕೆ ನಾನು ಬಂದೆ. ಮೋಸದಿಂದ ಅವರನ್ನು ವಶಪಡಿಸಿಕೊಳ್ಳಲೆಂದೆವು. ನಾವೇ ಮೋಸ ಹೋದೆವು. ನಿನಗೆ ಯಾವ ಕೆಟ್ಟ ಯೋಚನೆ ಹೊಳೆಯಿತೊ, ಅದೇ ನನಗೆ ಹೊಳೆದುದು ಆಶ್ಚರ್ಯವಲ್ಲವೆ ? ಅವರು ಮೊನ್ನೆಯೇ ಈ ಜಾಗ ಬಿಟ್ಟು ಹೋಗಿರಬೇಕು. ನಾ ಇಲ್ಲಿಗೆ ಬಂದ ದಿನವೇ, ಈ ವಿಷಯ ಅವರು ಮಾತನಾಡುತ್ತಿದ್ದರು........ನೋಡು, ಅಂತು ದೈವ ತಾನಾಗಿ ಕೈಕೊಟ್ಟಿತು.'

ರಾವಣನು ಏನೂ ಮಾತನಾಡಲಿಲ್ಲ.

' ಈ ಮಾತು ಮತ್ತೆ ಮತ್ತೆ ಆಶ್ಚರ್ಯವನ್ನುಂಟು ಮಾಡುತ್ತದೆ. ಇಬ್ಬರೂ ಒಂದೇ ಬಗೆಯ ಹಂಚಿಕೆ ಹೂಡಿದೆವು. ಅದರ ಫಲವಾಗಿ ನಾವಿಬ್ಬರೇ ಕೂಡಿದೆವಲ್ಲವೆ? ನಾನು ಸೀತೆಯಾಗಬೇಕೆಂಬ ವಿಚಾರ ಬಂದೊಡನೆ ಅವರಂತಹದೇ ಆದ ಮಾಯಾ ಪರ್ಣಕುಟಿಯನ್ನು ಕಟ್ಟಿ ಇಲ್ಲಿ ನಾನಿರತೊಡಗಿದೆ. ನೀನು ಆ ಕುಟಿಗೆ ಹೋಗಲಿಲ್ಲ, ಇಲ್ಲಿಗೇ ಬಂದೆ. ವಿಧಿ ಬೇಕೆಂದೇ ಹಾಗೆ ಮಾಡಿಸಿತು, ಅಲ್ಲವೆ?' ಅಂಥದರಲ್ಲೂ ನಿರ್ವಿಣ್ಣ ನಗೆಯೊಂದು ಅವಳ ಮುಖದಲ್ಲಿ ಸುಳಿಯಿತು.

ರಾವಣನ ಮುಖವು ಆಗೂ ಉಗ್ರವಾಗಿತ್ತು. ಆತ ಆಕೆಗೇನೂ ಉತ್ತರ ಹೇಳಲಿಲ್ಲ. ಶೂನ್ಯವಾಗಿ ಏನನ್ನೊ ನೋಡುತ್ತಿದ್ದನು. ಬಹುಶಃ ಇನ್ನೊಂದು ಪರ್ಣ ಕುಟಿಯ ಮುಂದೆ ಸುಮ್ಮನೆ ಸುಳಿಯುತ್ತ ಇದ್ದ ಚಿಗರೆಯನ್ನು ಕುರಿತು ಯೋಚಿಸು ತ್ತಿರಬೇಕು.

— ಶ್ರೀನಿವಾಸ ಹಾವನೂರ

# ಕ್ರಿಮಿಗಳು

ಮೂರ್ ಮಾರ್ಕೆಟ್ಟಿನ ಎದುರು ಆ ಬಸ್ಸು ನಿಲ್ಲುವ ತಾಣದಲ್ಲಿ ಪಯಣಿಗರ ಒಂದು ಸಣ್ಣ ಗುಂಪೇ ಕೂಡಿದ್ದರೂ, ಅರೆಕ್ಷಣದ ಪರಿಶೀಲನೆಯಲ್ಲಿ ಕನಿಯಪ್ಪನ ಪಳಗಿದ ದೃಷ್ಟಿಗೆ ಬಿದ್ದವನು ಆ ಹಿಂದೆ ನಿಂತುಕೊಂಡು ಕುಡಿಮೀಸೆಯ ತರುಣ. ಅವನ ಗಮನವನ್ನು ಆ ತರುಣ ಸೆಳೆದುದರ ಕಾರಣ ಆ ವಸ್ತ್ರಾಲಂಕಾರವೋ, ಆ ನಿಂತ ಠೀವಿಯೋ, ಆ ಕುಡಿ ಮೀಸೆಯೋ—ಅಲ್ಲ ಗುಂಪಿನಲ್ಲಿ ಕಲೆತಿದ್ದ ಆ ಎರಡು ಚೆಲುವೆಯರತ್ತ ಹೊರಳುತ್ತಿದ್ದ ಚಂಚಲ ಕಣ್ಣುಗಳೋ—ನಮಗೆ ತಿಳಿಯದು. ಅವನೇ ವಿವರಿಸಬೇಕಷ್ಟೆ ಅದನ್ನು. ಅದವನ ಅನುಭವದ ಫಲವಾಗಿರಬಹುದು. ಅವನದೇ ಆದ ವಿಚಿತ್ರ ಕೌಶಲ್ಯವಾಗಿರಬಹುದು.

ಬಹಳ ಅವಸರವಾಗಿ ಬಸ್ಸನ್ನೇರಬೇಕಾಗಿ ಬಂದವನಂತೆ ಕನಿಯಪ್ಪ ಆ ತರುಣನ ಬಳಿಸಾರಿ, ಸಂಕಟ ಪಟ್ಟವನಂತೆ ನಟಿಸಿ ಅವನನ್ನು ವಿಚಾರಿಸಿದ.

‘ ಗಂಟೆ ಎಷ್ಟು ಸಾರ್ ?’

ಕೈ ಗಡಿಯಾರವನ್ನು ನೋಡಿ ತರುಣ ತಿಳುಹಿಸಿದ.

‘ ಐದೂ ಇಪ್ಪತ್ತೈದು.’

‘ ಇಪ್ಪತ್ತಕ್ಕೇ ಬಸ್ಸು ಬರಬೇಕಿತ್ತಲ್ಲಾ ? ಇನ್ನೂ ಬಂದಿಲ್ಲ. ಅರ್ಜೆಂಟ್ ಬೇಕಾದಾಗ ಈ ಬಸ್ಸುಗಳು ಕುತ್ತಿಗೆ ಅಮುಕಿ ಬಿಡುತ್ತವೆ. ಅದೂ ಈ ಗವರ್ನಮೆಂಟು ಸರ್ವೀಸ್ ಆರಂಭವಾಯಿತಲ್ಲಾ ! ಛಿಃ ಛಿಃ ! ಶುದ್ಧ ಮೋಸ !....’

ಜನಪ್ರಿಯವಾದ ಟೀಕೆಯದು. ಕನಿಯ:ಪ್ಪನಂತೂ ವೇದಿಕೆಯ ಮೇಲೆ ನಿಂತ ಉಪನ್ಯಾಸಕನಂತೆ ಒದರಿ ಹೇಳಿದ್ದ. ಕೂಡಿದವರೆಲ್ಲರೂ ಹಿಂದೆ ತಿರುಗಿ ಅನುಮೋದನೆಯಿಂದ ನಗಾಡಿದರು. ಅವರಲ್ಲಿ ಆ ಇಬ್ಬರು ಚೆಲುವೆಯರು ; ಅವರ ನೋಟ ತನ್ಮತ್ತ ಹೊರಳುತ್ತಲೇ ತರುಣನೇನು ತೀರ ಆ[illegible]ಯ ಗ[illegible]ಯನೋಎಂಬಂತೆ, ಅವನ ಬೆನ್ನು ತಟ್ಟಿ ಮುಖವನ್ನು ನೋಡಿ—

‘ ಹೌದು, ಅಲ್ಲದೆ ಮತ್ತೇನು ? ’ ಎಂದು ಹೇಳಿ ಬಲಕಣ್ಣು ಮಿಟುಕಿಸಿದನು ಅರ್ಥವತ್ತಾಗಿ.

ಕನಿಯಪ್ಪನ ಕಣ್ಣು ಹೊಡೆತ ಆ ಹುಡುಗಿಯರನ್ನು ಚಂಚಲ ದೃಷ್ಟಿಯಿಂದ ನಿರೀಕ್ಷಿಸುತ್ತಿದ್ದ ಆ ತರುಣನ ದೇಹದಲ್ಲಿ ವಿದ್ಯುತ್ಸಂಚಾರ ಮಾಡಿಸಿರಬೇಕು.

ತರುಣ ಪೆಚ್ಚು ನಗು ತೋರಿಸಿದನು. ಕೆಂಪಗಾದ ಮುಖವನ್ನು ಕರವಸ್ತ್ರದಿಂದ ಉಜ್ಜಿಕೊಂಡನು.

ಅಷ್ಟರಲ್ಲಿ ಬಸ್ಸು ಬಂತು. ಜನರೆಲ್ಲ ಅದರ ಮೇಲೆ ಎರಗಿದರು. ಮುಂದೆ ಕಾಲಿಟ್ಟ ತರುಣನ ಶರಟ ತುದಿಯನ್ನು ಹಿಡಿದೆಳೆದು ಕನಿಯಪ್ಪ ಪಿಸಗುಟ್ಟಿದ.

' ಆ ಹುಡುಗಿಯರೇನು ಸಾರ್ ? ಅವರನ್ನು ನಾಚಿಸುವ ಸುಂದರಿಯರು ಇದ್ದಾರೆ ಈ ಮದ್ರಾಸಿನಲ್ಲಿ. ಹೇಳಿ, ನಿಮಗೆ ಬೇಕೇ ? '

ದಿಙ್ಮೂಢನಾಗಿ ತರುಣ ನಿಂತು ಬಿಟ್ಟನು. ಎವೆಯಿಕ್ಕದ ಅವನ ನೆಟ್ಟ ನೋಟಕ್ಕೂ ಹೆದರದೆ—

' ಕೇವಲ ಹತ್ತೇ ರೂಪಾಯಿ ಸಾರ್. ಬೇಕಾದರೆ ಯಾವ ಹೋಟಲಿಗಾದರೂ ಕರೆಕೊಂಡು ಹೋಗಿರಿ. ಇಲ್ಲವಾದರೆ ಬೇರೆ ಅರೇನ್‌ಜಮೆಂಟ್ ಮಾಡೋಣ....ಇಲ್ಲೇ ಹತ್ತಿರ ಇದಾಳೆ ಸಾರ್, ಮೈ ಲೇಡೀಸ್ ಗಾರ್ಡನಿನಲ್ಲಿ....' ಎಂದು ಗೊಣಗಿದನು.

ತರುಣನ ಮೈ ನಡುಗುತ್ತಿತ್ತು. ಸ್ವರ ನಡುಗುತ್ತಿತ್ತು. ' ಬೇಡ....ಬೇಡ.... ನನಗೆ ಬೇಡ....' ಭೂತ ಪ್ರೇತವನ್ನು ಕಂಡವನಂತೆ ಎಡವಿ ಬಿದ್ದು ಬಸ್ಸನ್ನೇರಿ ಕಣ್ಮರೆಯಾದನಾತ.

' ಛೀ, ಹೇಡಿ! ಶುದ್ಧ ಹೇಡಿ!' ಎಂದು ಬಯ್ಯುತ್ತಾ ಕನಿಯಪ್ಪ ಮಾರ್ಕೆಟ್ಟಿನ ಒಳಹೊಕ್ಕನು.

ಸಂಜೆಯ ಆ ಮಾರ್ಕೆಟ್ಟಿನ ಒಳಗಣ ರಸ್ತೆ ಜನನಿಬಿಡವಾಗಿತ್ತು. ತಣಿದ ಬಿಸಿಲಲ್ಲಿ ವಿವಿಧ ರೀತಿಯ ಜನವೃಂದ ಬಹು ನಿಧಾನವಾಗಿ ಯಾವ ಉದ್ದೇಶವೂ ಇಲ್ಲವೇನೋ ಎಂಬಂತೆ ಚಲಿಸುತಿತ್ತು. ಕನಿಯಪ್ಪ ನಿರಾಶೆಯಿಂದ ತಲೆ ತಗ್ಗಿಸಿ ಗುಂಪಿನಲ್ಲಿ ನಡೆಯುತ್ತಿದ್ದನು. ಯಾರೂ ಇನ್ನು ಮೇಲೆ ಅವನ ಗಮನವನ್ನು ಸೆಳೆಯುವಂತಿಲ್ಲ.

ಹನ್ನೊಂದು ಗಂಟೆಗೆ ಮನೆಯಿಂದ ಹೊರಬಿದ್ದ ಅವನು ಎಷ್ಟೆಲ್ಲ ಪ್ರಯತ್ನಿಸಿದ್ದನು ! ಒಂದೂ ಫಲದಾಯಕವಾಗಿರಲಿಲ್ಲ. ಅಷ್ಟರಲ್ಲೇ ಮದರಾಸ ಜನ ಮಾನವಂತರಾಗಿ ಬಿಟ್ಟರೇ ?

ಈ ಯೋಚನೆಯಿಂದ ನಗಬೇಕೆಂದೆನಿಸಿತಾತನಿಗೆ. ಆದರೆ ನಗಲೂ ಸಾಧ್ಯವಿರಲಿಲ್ಲ. ಹೊಟ್ಟೆ ಹಸಿವೆಯಿಂದ ತಾಳ ಹಾಕುತಿತ್ತು. ಹಿಂದಿನ ದಿನ ರಾತ್ರಿ

ಏನೋ ನಾಲ್ಕು ತುತ್ತು—ಅದೂ ಹೊಟ್ಟೆಯ ಉರಿ ಆರಿರಲಿಲ್ಲ-ಊಟ ಮಾಡಿದ್ದಷ್ಟೆ. ಮತ್ತೆ ಒಂದು ಗುಟುಕು ಚಾ ಕುಡಿದಿರಲಿಲ್ಲ ; ಊಟದ ಮಾತುಬಿಡಿರಿ.

ಮಾರ್ಕೆಟ್ಟಿನ ಹಿಂಬದಿಯ ಖಾಲಿ ಕೊಳಕು ಜಾಗವನ್ನು ಪಾರ್ಕನ್ನಾಗಿ ಮಾರ್ಪಡಿಸಲು ಕಾರ್ಪೊರೇಷನ್ನಿನವರ ಯತ್ನ ನಡೆದಿತ್ತು. ಹುಲ್ಲು ಬೆಳೆಸಿ ಗಿಡಗಳನ್ನು ನೆಟ್ಟು ಕಲ್ಲು ಮಂಚಗಳನ್ನು ಹಾಕಿಸಿದ್ದರು. ಪರಮಯೋಗ್ಯ ನಾಗರಿಕ ನಂತೆ ಕನಿಯಪ್ಪ ಗಿಡವೊಂದರ ಬುಡದಲ್ಲಿ ಕುಕ್ಕರಿಸಿ ಕುಳಿತು ಚಿಂತಿಸಿದ.

ಊಟ ?....ಹೆಂಡತಿ ಬೈದು ಕಳುಹಿಸಿದ್ದಳು ಮನೆಯಿಂದ ಹೊರಗೆ. ಅಳಲು ಹೊರತು ಬೇರೇನೂ ತಿಳಿಯದ ಅವರೆರಡು ಮಕ್ಕಳು ಬೆಳಗ್ಗಿನಿಂದ ಒಂದೇ ಸಮನೆ ಅಳಹತ್ತಿದ್ದುವು. ಅವಕ್ಕೆ ಆಯಾಸವೆಂಬುದೂ ಇಲ್ಲವೇನೋ ? ಮಕ್ಕಳ ತಾಯಿ ತಾಳ್ಮೆ ತಪ್ಪಿ ಚೆನ್ನಾಗಿ ಅವುಗಳನ್ನು ಥಳಿಸಿದ್ದಳು; ಮನೆಯಿಂದ ಹೊರತಳ್ಳಿದ್ದಳು. ತಬ್ಬಲಿಗಳಂತೆ ಅವು ಫುಟ್‌ಫಾತಿನ ಹೊಲಸಲ್ಲಿ ಹೊರಳಾಡಿದ್ದುವು.

—ಹೊಲಸು ? ಹೆಂಡತಿ ಕಿರುಚಿ ಹೇಳಿದ್ದಳು:

'ಜೈಲಲ್ಲಿ ಸರಕಾರ ಅನ್ನ ಹಾಕಿತೆಂದು ಇಲ್ಲಿ ಸುಮ್ಮಗೆ ಕುಳಿತರೆ ಅನ್ನ ಬರುತ್ತದೆಯೇ ? ಹೋಗಿ ಏನಾದರೂ ಸಂಪಾದಿಸಿಕೊಂಡು ಬರಬಾರದೇ ?....'

ಹೌದು; ಅವನು ಸೆರೆಮನೆಯಿಂದ ಹೊರಗೆ ಬಂದಿದ್ದನಷ್ಟೆ. ವೇಶ್ಯಾವೃತ್ತಿ ನಡೆಯಿಸುವವನೆಂಬ ಆಪಾದನೆಗೆ ಒಳಪಟ್ಟು ಇದೀಗ ಹೊರಗೆ ಬಂದಿದ್ದ. ಎಷ್ಟೋ ಜೈಲು ಯಾತ್ರೆಗಳ ಅನಂತರ ಅದು ಮತ್ತೊಂದು ಜೈಲು ಯಾತ್ರೆ !

ಹೇಗಾದರೂ ನಾಲ್ಕು ಕಾಸು ಕೂಡಿಸಬೇಕೆಂದು ಹನ್ನೊಂದು ಗಂಟೆಗೆ ಅವನು ಹೊರ ಬಿದ್ದಿದ್ದ. ಮೊತ್ತ ಮೊದಲು ದೂರದ ಮಿಂಟ್ ಬೀದಿಗೆ ನಡೆದು ತನ್ನ ಕೂಟದವರ ಮನೆ ಬಾಗಿಲುಗಳನ್ನು ತಟ್ಟಲಾರಂಭಿಸಿದ್ದ. ಮೂರು ತಿಂಗಳುಗಳ ಅನಂತರದ ಪ್ರಥಮ ಸಂದರ್ಶನವದು; ಎಂತೆಂತಹ ಬದಲಾವಣೆಗಳಾಗಿರಬೇಕು ! ಕಣ್ಮುಚ್ಚಿ ತೆರೆಯುವುದರೊಳಗೆ ನೂರು ಮಾರ್ಪಾಟಾಗುವ ಪ್ರಪಂಚವದು !

ಒಬ್ಬಳು ಕಡು ರೋಗಿಷ್ಟೆಯಾಗಿ ಬರಿ ನೆಲದಲ್ಲಿ ಹೊರಳಾಡುತ್ತಿದ್ದಳು. ಇನ್ನೊಬ್ಬಳು ಏನಾದರೂ ಇದ್ದರೆ ಎರಡು ಕಾಸು ಕೊಡೆಂದು ಹಸಿವೆಯೆಂದು ಕಂಗೆಟ್ಟ ಮುಖದಿಂದ ಅವನನ್ನು ಬೇಡಿದ್ದಳು. ಮತ್ತೊಂದು ಮನೆಗೆ ಬೀಗ ಹಾಕಿತ್ತು. ಪೋಲೀಸಿನವನೊಬ್ಬ ಹೊರ ಪಹರೆ ಮಾಡುತ್ತಿದ್ದ. ಅಲ್ಲಿ ಕೆಲವು ದಿನಗಳ ಹಿಂದೆ ಭೀಭತ್ಸ ಕೊಲೆ ನಡೆಯಿತಂತೆ. ಇನ್ನೊಬ್ಬಳು ಸಿನಿಮಾದಲ್ಲಿ ಎಕ್ಸ್ಟ್ರಾ ಆಗಿ ಸೇರಿ ಈಗ ತಾರಾಪಥದಲ್ಲಿದ್ದಾಳಂತೆ. ಕೊಳಕು ತುಂಬಿದ ಆ ನೀಳ ಬೀದಿಯ ಒಂದು

ತುದಿಯಿಂದ ಇನ್ನೊಂದು ತುದಿಯ ತನಕ ನಡೆದಿದ್ದನಾತ. ಆದರೆ ಚಿಕ್ಕಾಸೂ ಹುಟ್ಟಿರಲಿಲ್ಲ !

ಕೊನೆಗೆ ಅಕಸ್ಮಾತ್ತಾಗಿ ಪಡುವಾಂಬ ದೊರೆತಿದ್ದಳು. ಅವಳ ಗುರುತೇ ಹತ್ತಿರಲಿಲ್ಲ ಆವನಿಗೊಂದು ಕ್ಷಣ. ಉಬ್ಬಿಕೊಂಡಿದ್ದ ದೇಹ ಹಿಂಗಿ ಹೋಗಿ ಅವಳು ಕ್ಷಯ ರೋಗಿಣಿಯಂತಾಗಿದ್ದಳು. ಮುಖದ ಎಲುಬುಗಳು ಹೊರ ಚಾಚಿ ಆಳಕ್ಕಿಳಿದ ಕಣ್ಣುಗಳು ಏನನ್ನೋ ಅರಸುವಂತೆ ಬಳಲಿಕೆಯಿಂದ ಅತ್ತಿತ್ತ ಹೊರಳುತ್ತಿದ್ದುವು. ಕನಿಯಪ್ಪ ವಿಚಾರಿಸಿದ್ದ.

' ಹೀಗೇಕೆ ಪಡವ ? '

' ಕಾರಣ ನಾ ವಿವರಿಸಬೇಕೇ ? '

ವಿಚಿತ್ರವಾದ ಆ ಒಣನಗೆ ಅವನನ್ನು ನಡುಗಿಸಿತ್ತು. ಕಾರಣ ತಿಳಿದೂ ತಾನೇಕೆ ಪ್ರಶ್ನಿಸಿದೆನೆಂದು ಕಳವಳವಾಯಿತವನಿಗೆ.

' ಆಸ್ಪತ್ರೆಗೆ ಹೋಗಬಾರದೇ ? '

' ಪ್ರವೇಶ ದೊರೆಯ ಬೇಡವೇ ? ಔಟ್ ಪೇಷಂಟಾಗಿದ್ದರೆ ಊಟಕ್ಕೆ ದಾರಿ ? '

ಕನಿಯಪ್ಪ ತಲೆ ತಗ್ಗಿಸಿದ್ದ. ಕೇಳಲೋ ಬೇಡವೋ ಎಂದು ಚಂಚಲಚಿತ್ತನಾಗಿ ಮತ್ತೆ ನಿರ್ಧಾರದಿಂದ ತೊದಲಿದ.

' ಮೊನ್ನೆ ತಾನೇ ಜೈಲಿನಿಂದ ಹೊರಬಂದೆ........ಒಂದು ತುತ್ತು ಕೂಡ ಉಣ್ಣಲಿಲ್ಲ !....'

' ನಾನೂ ಕೂಡ ಅದಕ್ಕೇ ಹೊರಟಿದ್ದೇನೆ. ಯಾರಾದರೂ ಸಿಗುತ್ತಾರೋ ಏನೋ ?.... ....'

ಕನಿಯಪ್ಪ ಸಪ್ಪೆಯಾಗಿದ್ದನು. ಅವಳು ನಿಟ್ಟುಸಿರಿನಿಂದ ಗೊಣಗುಟ್ಟಿದ್ದಳು.

' ಈಗ ನನ್ನನ್ನು ಯಾರೂ ಕಣ್ಣೆತ್ತಿ ನೋಡುವುದಿಲ್ಲ. ಹೀರುವಷ್ಟು ಹೀರಿ ಬಿಸಾಡಿದ್ದಾರೆ ನನ್ನನ್ನು....ನಾನೀಗ ಬೀದಿಯ ಕಸ....'

ಅವಳ ಧ್ವನಿಯಲ್ಲಿ ಕಾವಿತ್ತು ; ಉದ್ವೇಗವಿತ್ತು. ಆದರೂ ಅವನ ಹೊಟ್ಟೆಯ ಹಸಿವು ಕೇಳಿಸಿತು.

' ಒಂದು ಚಾ ಕುಡಿಯಲಿಕ್ಕಾದರೂ....ಕೊನೆಯ ಪಕ್ಷಕ್ಕೆ.'

ವಿಲಕ್ಷಣವಾಗಿ ನಕ್ಕು ಅವಳು ಉದ್ಗಾರವೆತ್ತಿದ್ದು—

' ಅಯ್ಯೋ, ನಮ್ಮ ಪತನವೇ ! '

ಯಾವಾಗಲೂ ಹಾಗೆ ಆ ವಡುವಾಂಬ. ಅವಳು ಇತರರಂತಲ್ಲ. ಅನಿರೀಕ್ಷಿತ ವಾಗಿ ನಕ್ಕುಬಿಡುವಳು. ಮರುಕ್ಷಣದಲ್ಲಿ ಕಣ್ಣೀರ ಹೊಳೆ ಹರಿದರೂ ಹರಿದೀತು ! ಕೆಲವೊಮ್ಮೆ ಮಹಾಜ್ಞಾನಿಯಂತೆ ಬಿಸುಸುಯ್ಯುವಳು. ಅವಳು ಕಲಿತವಳಂತೆ....

............ವರುಷವೊಂದರ ಹಿಂದೆ ಮುಸ್ಸಂಜೆಯ ನಸುಗತ್ತಲಲ್ಲಿ ಕನಿಯಪ್ಪ ಮನೆಯತ್ತ ಹೊರಳಿದ್ದ. ಪ್ಲಾಟ್‌ಫಾರ್ಮಿನ ಒಂದು ಮೂಲೆಯಲ್ಲಿ ಹೆಂಗಸೊಬ್ಬಳು ಕುಳಿತಿದ್ದುದು ಅವನ ದೃಷ್ಟಿಗೆ ಬಿದ್ದಿತ್ತು. ದೂರದಲ್ಲೇ ನಿಂತು ಅವಳನ್ನು ನೋಡಿ ಮತ್ತೆ ಹತ್ತಿರ ಸರಿದು ವಿಚಾರಿಸಿದ್ದ.

'ಯಾರವಳಮ್ಮ ನೀನು ?'

'ಯಾರಾದರೆ ನಿನಗೇನು ?'

'ಹಸಿವೆಯಾಗುತ್ತಿದೆಯೇ ?'

'ಕೇಳಲು ನೀನು ಯಾರು ?'

'ಚಾ ತರಿಸಿ ಕೊಡಲೇ ?'

'ಬೇಡ.........ದೂರ ಸರಿ ! ದೂರ ಸರಿ ಇಲ್ಲಿಂದ !.........' ಕಿರುಚಿದ್ದಳಾಕೆ.

ಹೆದರಿ ಹಿಂಸರಿದು ಒಲ್ಲದ ಮನಸ್ಸಿನಿಂದ ಅವಳನ್ನು ತೊಲಗಿ ಹೋಗಿದ್ದ. ಮೂರು ದಿನ ಆ ಹೆಂಗಸು ಅಲ್ಲೇ ಕುಳಿತಿದ್ದಳು. ನಾಲ್ಕನೆಯ ದಿನ ಕುಳಿತಿರಲಾರದೆ ಬಿದ್ದುಕೊಂಡಿದ್ದಳು. ಕೆದರಿದ ಕೂದಲು, ನಿಸ್ತೇಜವಾದ ಕಣ್ಣುಗಳು, ನಿರ್ಬಲವಾದ ದೇಹ—ಶವದಂತಿತ್ತು ಅವಳ ಪರಿಸ್ಥಿತಿ. ಈ ಬಾರಿ ಕನಿಯಪ್ಪ ನೇರವಾಗಿ ಚಾ ದಂಗಡಿಗೆ ತೆರಳಿ ಒಂದು ಕಪ್ ಚಾ ತಂದು, ಒಲ್ಲೆನೆಂದಾಕೆ ಹೊರಳಾಡಿದರೂ ಬಲಾತ್ಕಾರದಿಂದ ಅವಳಿಗದನ್ನ ಕುಡಿಸಿದ್ದನು. ಅವಳ ಪಾಲಿಗೆ ಅದು ಅವನ ವಶೀ ಕರಣದ ವಿಷವಾದಂತಾಗಿತ್ತು.

'ಅಯ್ಯೋ, ನಮ್ಮ ಪತನವೇ !' ಎಂದ ವಿಷಾದ ಪೂರ್ಣ ನಗು ತುಂಬಿದ ಮುಖವನ್ನು ಪೆಚ್ಚು ಮೋರೆಯಿಂದ ಪಿಳಪಿಳನೆ ನೋಡುತ್ತಾ ನಾಚಿಕೆಯಿಂದಲೂ ನಿರಾಶೆಯಿಂದಲೂ ತಡವರಿಸಿದ್ದನಾಗ ಕನಿಯಪ್ಪ. 'ಸರಿ, ನಾನು ಹೋಗುತ್ತೇನೆ.... ಹಾಗಾದರೆ....'

ಅವಳನ್ನು ಬೀಳ್ಕೊಟ್ಟು ಮುಂದೆ ನಡೆದಿದ್ದನಾತ. ಅವಳು ಆತನಿಗೇಕೋ ಪರಮ ಪುನೀತೆಯೂ ಸಾಧ್ವಿಯೂ ಆದ ಸ್ತ್ರೀಯಂತೆ ಗೋಚರಿಸುತ್ತಿದ್ದಳು. ಅವಳ ಸಾಮೀಪ್ಯದಲ್ಲಿ ತಾನೇನೋ ತೀರ ಅಲ್ಪ ಜೀವಿಯಂತೆ ಅನಿಸುತಿತ್ತಾತನಿಗೆ. ಈ ಅನುಭವದ ಪುನರಾವರ್ತನೆಯಿಂದಲೂ ಸಹನಾತೀತ ಹಸಿವೆಯಿಂದಲೂ ಪ್ರಾಣ ಸಂಕಟವಾಗಿತ್ತು ಅವನಿಗೆ. ಬೀದಿಯ ಬದಿಯಲ್ಲಿ ನೀರ ನಲ್ಲಿಯು ದೃಷ್ಟಿಗೆ ಬೀಳಲು ಅದರೆಡೆಗೆ ಬಾಗಿ, ಬಾಯೊಡ್ಡಿ ಗುಂಡಿಯನ್ನಮುಕಿ ಒತ್ತಿದ.

ಮಧ್ಯಾಹ್ನದ ಆ ಹೊತ್ತಿನಲ್ಲಿ ಒಂದು ಬಿಂದು ನೀರೂ ಬಂದಿರಲಿಲ್ಲ.

'ಕನಿಯಪ್ಪ!'

ಅಗಲ ಕಿರಿದಾದ ಆ ನೀಳ ಬೀದಿಯ ಮಧ್ಯದಲ್ಲಿ ಅವಳು ಅಲ್ಲೇ ನಿಂತು ಕೊಂಡಿದ್ದಳು.

'ನೋಡು, ಸಂಜೆ ನಾನು ಮೂರ್‌ಮಾರ್ಕೆಟ್ಟಿನ ಹಿಂಬದಿಯ ಮೈ ಲೇಡೀಸ್ ಗಾರ್ಡನಿನಲ್ಲಿರುತ್ತೇನೆ. ನೀನೂ ನಿನ್ನ ಪ್ರಯತ್ನಮಾಡು. ಸಂಪಾದನೆಯಾದ್ರೆ ಒಂದು ಪಾಲು ನಿನಗೂ ಕೊಡುತ್ತೇನೆ....'

ಹಸಿದ ಮಗುವನ್ನು ಸಮಾಧಾನ ಪಡಿಸುವ ತಾಯಿಯ ಧ್ವನಿಯಂತಿತ್ತು ಅವಳ ಮಾತುಗಳು. ಗಂಟಲನ್ನು ಕಟ್ಟಿ ಬಂದ ಎಂಜಲನ್ನು ನುಂಗಿಕೊಂಡು ಪಶ್ಚಿಮಾಭಿ ಮುಖವಾಗಿ ನಗರ ಪರ್ಯಟಣಕ್ಕೆ ಅವನು ಹೊರಟಿದ್ದನು. ಪೂರ್ವಕ್ಕೆ ಚಾಚಿದ ಬೀದಿಯೊಂದರಲ್ಲಿ ಅವಳು ಕಣ್ಮರೆಯಾಗಿದ್ದಳು.

* * * * * *

' ಏಯ್, ಕನಿಯಪ್ಪಾ ! '

ಬೆದರಿಕೆಯ ಆ ಧ್ವನಿಗೆ ಬೆಚ್ಚಿಬಿದ್ದು ತಲೆಯೆತ್ತಿ ನೋಡಿದನಾತ. ಇಬ್ಬರು ಪೋಲೀಸರು ನಿಂತು ಕೊಂಡಿದ್ದರು.

' ಇಲ್ಲಿ ಯಾಕೋ ಕುಳಿತಿದ್ದೀ ? ' ಒಬ್ಬ ವಿಚಾರಿಸಿದ.

' ಹೀಗೇ....ಸುಮ್ಮನೆ....ಆಯಾಸವಾಯಿತು....'

' ಪುನಃ ನಿನ್ನ ಕೊಳಕು ಕೆಲಸ ಆರಂಭಿಸಿದಿಯೇನೋ ?'

' ಇಲ್ಲಾ ಸಾರ್ ! '

' ಮತ್ತೆ ಈ ಪಾರ್ಕಿನಲ್ಲಿ ರಾತ್ರಿ ನಿನಗೇನೋ ಕೆಲಸ ? '

' ಹಸಿವೆ....ಸಾರ್ ! '

' ಜೈಲಿನಿಂದ ಬಂದ ಅನಂತರ ಬೇರೆ ಕೆಲಸ ಸಿಗಲಿಲ್ಲವೇ ? '

' ಇಲ್ಲ ಸಾರ್. ನಿನ್ನೆಯಿಂದ ಪೇಟೆಯಿಡೀ ಅಲೆಯುತಿದ್ದೇನೆ.'

' ಹುಟ್ಟಿದಂದಿನಿಂದ ಆ ಕೆಲಸ ಮಾಡಿ ಈಗ ಬೇರೆ ಉದ್ಯೋಗ ಹಿಡಿಸೀತೇ ನಿನಗೆ ? ' ಪೋಲೀಸರಿಬ್ಬರೂ ಚನ್ನಾಗಿ ನಕ್ಕು ಲಾಠಿಯನ್ನು ತಿರುಗಿಸುತ್ತಾ ಗದರಿ ಸಿದರು. ' ನಡೆ ! ನಡೆ ! ಇಲ್ಲಿಂದ ! ಓಡು ಮನೆಗೆ ! ಹೂಂ....'

ಎದ್ದು ಮುಂದೆ ಹೊರಟನಾತ. ಉರಿಯುತಿದ್ದ ಶುಭ್ರವಾದ ವಿದ್ಯುತ್ ದೀಪಗಳು ರಾತ್ರಿಯಾಯಿತೆಂದು ಸಾರುತಿದ್ದವು. ಜನ ಸಂದಣಿ ಶೀಘ್ರಗತಿಯಲ್ಲಿ

ಕರಗಿಕೊಳ್ಳುತ್ತಿತ್ತು. ಅವಸರ ಅವಸರವಾಗಿ ಮನೆ ಸೇರುವ ಜನರೊಡನೆ ಕನಿಯಪ್ಪ ನಿಧಾನವಾಗಿ ಗಾರ್ಡನಿನತ್ತ ಹೊರಳಿದನು. ಸ್ವೇಡಿಯುಮನ್ನು ಬಳಸಿಕೊಂಡು ತೋಟದೊಳಹೊಕ್ಕನು. ಎಂದಿನಂತೆ ಅಲ್ಲಿಯೂ ಹೆಚ್ಚು ಜನರಿರಲಿಲ್ಲ. ಅಲ್ಲಲ್ಲಿ ಗಿಡಗಳ ಮೂಲೆಯಲ್ಲಿ ಕೆಲವು ದಂಪತಿಗಳು ಕೂಡಿ ಸರಸ ಸಲ್ಲಾಪದಲ್ಲಿ ಮೈ ಮರೆತು ಸಮಯ ಹೋದದ್ದು ತಿಳಿಯದೆ ಕುಳಿತುಕೊಂಡಿದ್ದರು. ಅವರನ್ನೆಲ್ಲ ನೋಡುತ್ತಾ ವಡುವಾಂಬಳಿಗಾಗಿ ಹುಡುಕಾಡಿದನು.

ಅಲ್ಲೆಲ್ಲಿಯೂ ಕಾಣಸಿಗಲಿಲ್ಲವಾಕೆ. ತೋಟದಿಂದ ಹೊರಬಂದು ರಾಜ ಮಾರ್ಗವನ್ನು ಸೇರಿ ತನ್ನ ಮನೆಯತ್ತ ಹೊರಳಿದನು. ಹೆಚ್ಚು ದೂರದಲ್ಲಿರಲಿಲ್ಲ ಅವನ ಮನೆ. ಮಾರ್ಗವನ್ನು ದಾಟಿ ಅಶೋಕ ಟಾಕೀಸನ್ನು ಹಾದು ಇಕ್ಕಟ್ಟಾದ ಬೀದಿಯೊಂದರೊಳಹೊಕ್ಕನು. ಬೀದಿಯನ್ನೇ ಮನೆಯನ್ನಾಗಿ ಮಾರ್ಪಡಿಸಿಕೊಂಡ ನಿರ್ಗತಿಕರ ಬಳಗಗಳ ಒಲೆಗಳಿಂದ ಹೊರಟ ಹೊಗೆ ಚಳಿಗಾಲದ ಮಂಜಿನಂತೆ ವಾತಾವರಣವನ್ನೆಲ್ಲ ದಟ್ಟವಾಗಿ ಕವಿದಿತ್ತು. ಕೆಲವು ಮಕ್ಕಳು ಚೀರಾಡುತ್ತಾ ಓಡಾಡುತಿದ್ದುವು. ಇನ್ನೂ ಹಲವರು ಹಗಲ ದುಡಿತದಿಂದ ಆಯಾಸಗೊಂಡು ಲೋಕವನ್ನೇ ಮರೆತವರಂತೆ ನಡು ಬೀದಿಯಲ್ಲಿ ಬಿದ್ದುಕೊಂಡಿದ್ದರು ನಿದ್ರೆ ಮಾಡಲೆಂದು. ಆ ಕತ್ತಲಲ್ಲಿ ಅವರನ್ನು ಮೆಟ್ಟಿಕೊಂಡು ಬೈಸಿಕೊಂಡು ಕನಿಯಪ್ಪ ತನ್ನ ಬಿಡಾರದತ್ತ ಬಂದನು.

ವಿದ್ಯುತ್ ದೀಪದ ಕಂಭದ ಕೆಳಗೆ ತನ್ನೆರಡು ಮಕ್ಕಳು ನಿದ್ದೆಮಾಡಿಕೊಂಡಿದ್ದುವು. ಮಧ್ಯಾಹ್ನ ಹೊರಹಾಕಿದ ಅವುಗಳನ್ನು ಒಳ ಬಂಮಾಡಿಕೊಳ್ಳಲೇ ಇಲ್ಲವೇ ಎಂದು ನೆನೆದಾಗ ಅವನಿಗೆ ತನ್ನ ಹೆಂಡತಿಯ ಮೇಲೆ ಎಲ್ಲಿಲ್ಲದ ಸಿಟ್ಟು ಉಕ್ಕಿ ಬಂತು. ಆದರೆ ಅಲೆದಲೆದು ತಾನೀಗ ಬರಿಗೈಯಲ್ಲಿ ಹಿಂತಿರುಗಿದ್ದೇನೆಂದು ಅರಿವಾದಾಗ ಸಿಟ್ಟು ಮಾಯವಾಗಿ ಸಂಕಟವಾಯಿತು. ಮಕ್ಕಳ ಮೇಲೆ ನೆಟ್ಟಿದ್ದ ದೃಷ್ಟಿಯನ್ನು ತನ್ನ ಮನೆಯ ಮುರುಕು ಬಾಗಿಲತ್ತ ಹೊರಳಿಸಿದನು. ಬಾಗಿಲು ಭದ್ರವಾಗಿ ಮುಚ್ಚಿತ್ತು.

ಮುಚ್ಚಿದ ಬಾಗಿಲ ಬಳಿ ಬಂದು ತಳ್ಳಿದನಾತ. ಆದರೆ ಒಳಗಿನಿಂದ ಚಿಲಕ ಹಾಕಿತ್ತು. ಮೆಲ್ಲನೆ ತಟ್ಟಿದನು. ಮಕ್ಕಳನ್ನು ಬೀದಿಯಲ್ಲಿ ತಳ್ಳಿ ಮನೆಯೊಳಗೆ ಇವಳ ಸ್ವಚ್ಛಂದ ನಿದ್ರೆಯೇ ಎಂದುಕೊಂಡಾಗ ಅವನಿಗೆ ಸಹಿಸಲಸಾಧ್ಯವಾದ ಸಿಟ್ಟು ಬಂತು. ಆ ಸಿಟ್ಟನ್ನೆಲ್ಲ ಬಾಗಿಲ ಮೇಲೆ ಪ್ರಯೋಗಿಸಿದನು. ಪುರಾತನ ಕಾಲದ ಆ ಗೆದ್ದಲು ಹಿಡಿದ ಬಾಗಿಲು ಇವನ ಶಕ್ತಿಗೆ ಬಲಿಯಾಗಿ ಒಳಕ್ಕೆ ಸರಿಯಿತು.

—ಅದೇ ರಭಸದಲ್ಲಿ ಒಳಕ್ಕೆ ಕಾಲಿರಿಸಿದಾಗ ಅವನ ದೃಷ್ಟಿಗೆ ಬೆದರಿ ನಡುಗುತ್ತಾ ನಿಂತ ಎರಡು ವ್ಯಕ್ತಿಗಳು ಕಾಣಿಸಿದರು.

—ಅವನ ಹೆಂಡತಿ, ಮತ್ತೊಬ್ಬ ಪುರುಷ !

ಮಿಂಚೊಮ್ಮೆ ಬೆಳ್ಳನೆ ಬೆಳಗಿ ಕಣ್ಣುಗಳನ್ನು ಕುರುಡುಗಟ್ಟಿಸುವಂತೆ ಕ್ರೋಧದ ಮಹಾಪ್ರವಾಹವೊಂದು ಅವನನ್ನು ಕೊಚ್ಚಿಕೊಂಡು ಹೋಯಿತು. ಮದವೇರಿದ ಆನೆಯಂತೆ ಆ ಮನುಷ್ಯನೆಡೆಗೆ ಹಾರಿದನು.

ಆದರೆ ಆಕ್ಷಣ ಆತನು ಜಿಂಕೆಯವೇಗದಲ್ಲಿ ಪಕ್ಕಕ್ಕೆ ಸರಿದು ಬಾಗಿಲನ್ನು ನುಸುಳಿ ಓಡಿ ಹೋದನು.

ಕನಿಯಪ್ಪ ತನ್ನ ಹೆಂಡತಿಯತ್ತ ಹೊರಳಿದನು. ಅವಳ ತಲೆಗೂದಲನ್ನು ಹಿಡಿದು ಹೊರಗೆಳೆದು ತಂದು ಮುಖದ ಮೇಲೆ ರಪರಪನೆ ಹೊಡೆದನು. ಅವಳೂ ಆತ್ಮರಕ್ಷಣೆಗಾಗಿ ಇವನೊಡನೆ ಉರುಳಾಡಿದಳು. ಜೈಲಲ್ಲಿ ಬಳಲಿ ಉಪವಾಸದಿಂದ ಕಂಗಾಲಾದ ಅವನ ಆಟ ಅವಳೊಡನೆ ಹೆಚ್ಚು ಹೊತ್ತು ಸಾಗಲಿಲ್ಲ. ಅವಳು ಅವನ ಕುತ್ತಿಗೆಯನ್ನಮುಕಿ ಹಿಡಿದು ಹಿಂದಕ್ಕೆ ಬಲವಾಗಿ ತಳ್ಳಿದಳು. ಅವನು ಬೀದಿಯ ನಲ್ಲಿಯ ಮೇಲೆ ಅಂಗಾತವಾಗಿ ಬಿದ್ದುಬಿಟ್ಟನು. ಫಲವಾಗಿ ತಲೆಯ ಹಿಂಭಾಗದಿಂದ ರಕ್ತವೊಡೆಯಿತು. ಥರಥರನೆ ನಡಗುತ್ತಾ ಮೆಲ್ಲಗೆ ಎದ್ದು ಕುಳಿತು ಕೂಡಿದ ಜನರೆಲ್ಲರನ್ನೂ ನೋಡುತ್ತಾ ತನ್ನೆದುರು ನಿಂತ ಹೆಂಡತಿಯನ್ನು ದುರುಗುಟ್ಟಿ ನೋಡಿದನು.

' ನೀವು ಜೈಲಿಗೆ ಹೋದಾಗ ನಿಮ್ಮಪ್ಪ ಅನ್ನ ಹಾಕುತ್ತಾನೊ ? ನೀವು ಮಾಡೋ ಕೆಲಸವನ್ನೇ ನಾನೂ ಮಾಡುತ್ತೇನೆ ! ಅದರಲ್ಲಿ ತಪ್ಪೇನು ? ' ಎಂದು ಗರ್ಜಿಸುತ್ತಾ ಇದೀಗ ಎಚ್ಚತ್ತು ಪುನಃ ಅಳಲಾರಂಭಿಸಿದ ಮಕ್ಕಳನ್ನೆತ್ತಿಕೊಂಡು ಮನೆಯೊಳಗೆ ಹೋದಳಾಕೆ.

ತಗ್ಗಿಸಿದ ತಲೆಯನ್ನು ಕನಿಯಪ್ಪನೆತ್ತಲಿಲ್ಲ. ಲಜ್ಜೆಯಿಂದ ಅವನ ಮೈಯೆಲ್ಲ ಬೆವೆತು ಹೋಗಿತ್ತು. ಕೂಡಿದ ಜನ ಏನೇನೋ ಟೀಕಿಸುತ್ತ ನಗಾಡುತ್ತಾ ಚೆದರುತ್ತಿದ್ದರು. ಆ ಸಮ್ಮಿಳಿತ ಧ್ವನಿ ಅವನ ಮನದಲ್ಲಿ ಸುಳಿಸುಳಿದು ವಿಚಿತ್ರ ವೇದನೆಯ ಜ್ವಾಲೆಗಳಲ್ಲಿ ಅವನನ್ನು ತಳ್ಳುತ್ತಿತ್ತು. ಕಣ್ಣರೆಪ್ಪೆಯನ್ನು ಗಟ್ಟಿಯಾಗಿ ಮುಚ್ಚಿಕೊಂಡು ಅಲುಗಾಡದೆ ಕುಳಿತ. ಗುಂಪು ಚೆದರಿ ನಿಃಶಬ್ದತೆ ಕವಿಯಿತು.

' ಕನಿಯಪ್ಪ ! '

ಪರಿಚಿತ ಧ್ವನಿ ಕೇಳಿಸಿ ಬೆಚ್ಚಿ ಬಿದ್ದು ತಲೆಯೆತ್ತಿದನಾತ. ಇದಿರಿನಲ್ಲೇ ವಡಿವಾಂಬ.

' ಇಗೋ ಹಣ, ತೆಗೆದುಕೋ ! '

ಅವನ ಮುಖದಲ್ಲಿ ಆಶ್ಚರ್ಯದ ಹಾಗೂ ಸಂತೋಷದ ಛಾಯೆಯೊಂದು ಹರಿದು ಹೋಯಿತು.

' ಹೇಗೆ ಸಂಪಾದಿಸಿದೆನೆಂದು ಆಶ್ಚರ್ಯಗೊಂಡೆಯಾ ? ಗಾರ್ಡನಿನಲ್ಲಿ ಒಬ್ಬ ಗಿರಾಕಿ ದೊರೆತ. ಆದರೆ ನನ್ನ ಒಣಕಲು ದೇಹ ಅವನಿಗೆ ಬೇಕಾಗಿರಲಿಲ್ಲ. ಅವನನ್ನು ನಿನ್ನ ಮನೆಗೆ ಕರಕೊಂಡು ತಂದೆನು........'

ಮುಂದೆ ನೀಡಿದ ಕೈಯನ್ನು ಮಿಂಚಿನಂತೆ ಅವನು ಹಿಂದಕ್ಕೆಳೆದುಕೊಂಡನು. ನಕ್ಕು ಅವಳದೇ ಆದ ವಿಶಿಷ್ಟ ರೀತಿಯಲ್ಲಿ ಕೇಳಿದನು :

' ಒಂದು ದಿನದಿಂದ ನೀನೂಟ ಮಾಡಿಲ್ಲ. ಹಸಿವೆಯಾಗುತ್ತಿದೆ, ಅಲ್ಲವೇ ? '

ಕನಿಯಪ್ಪ ಬಾಯಿ ತೆರೆಯಲಿಲ್ಲ. ತಲೆಯನ್ನು ತಗ್ಗಿಸಲೂ ಇಲ್ಲ. ತೀರ ನಿರಾಸಕ್ತ ಧ್ವನಿಯಲ್ಲಿ ಅವಳು ಮುಂದುವರಿಸಿದಳು.

' ನೆನಪುಂಟೇ ನಿನಗೆ ? ಒಂದು ವರ್ಷದ ಹಿಂದೆ ಅನಾಥೆಯಾದ ಒಬ್ಬಳನ್ನು ನೀನು ಕೆಡಿಸಿದೆ. ಕೆಡಿಸಿ ನಿನ್ನ ಹೊಟ್ಟೆಯನ್ನು ಹೊರೆದುಕೊಂಡೆ. ಹೀಗೆ ನಿನ್ನ ಹಸಿವೆಗಾಗಿ ಎಷ್ಟು ಹೆಂಗಸರನ್ನು ಬಲಿಯಿತ್ತಿರುವೆಯೋ ? ಆಗೇನೂ ನಿನಗೆ ವಿಚಿತ್ರ ಅನಿಸಲಿಲ್ಲ ಅಲ್ಲವೇ ? ಆಗ ನೀನು ಮಾಡುತ್ತಿರುವುದು ಅಪರಾಧವೆಂದು ನಿನಗೇನೂ ತೋರಲಿಲ್ಲ ಅಲ್ಲವೇ........?'

ರೂಪಾಯಿಯ ನೋಟೊಂದನ್ನು ಮುಂದೆ ನೀಡಿದಳಾಕೆ. ಹಸಿದವನು ಅನ್ನವನ್ನು ಸೆಳೆದುಕೊಳ್ಳುವಂತೆ ಗಬಕ್ಕನೆ ಅದನ್ನಾತ ಸೆಳೆದು ಕೈಮುಷ್ಠಿಯನ್ನು ಹಿಸುಕಿಕೊಂಡನು.

' ಸೆಗಣಿಯಲ್ಲಿ ಹುಟ್ಟಿ ಕೊಳೆಯುತ್ತಿರುವ ಕ್ರಿಮಿಗಳಿಗೆ ಸೆಗಣಿಯೂ ದುರ್ವಾಸನೆಯುಳ್ಳದ್ದೆಂದು ಒಂದೊಂದು ಬಾರಿ ಅನಿಸುವುದುಂಟು, ಅಲ್ಲವೇ ? ' ಎಂದು ನಗುತ್ತಾ ಹೊರಟು ಹೋದಳು ವಡುವಾಂಬ.

ಕುಳಿತಲ್ಲೇ ಮನೆಯತ್ತ ದೃಷ್ಟಿ ಹೊರಳಿಸಿದನು. ಅಳುವ ಮಕ್ಕಳ ಮತ್ತು ಸಮಾಧಾನ ಪಡಿಸುವ ಅವುಗಳ ತಾಯಿಯ ಮಿಶ್ರಧ್ವನಿ ಅವನ ಮನಸ್ಸನ್ನು ಚಂಚಲಗೊಳಿಸಿ ವಿಚಿತ್ರ ಶಕ್ತಿಯಿಂದ ವಿಲಕ್ಷಣವಾಗಿ ಏಕೋ ಆಕರ್ಷಿಸಿದುವು ; ಸ್ವಾಗತಿಸಿದುವು.

— ಕೆ. ಶ್ರೀಕಂಠ ಪುತ್ತೂರು

# ವ್ಯಭಿಚಾರ

ಪಿಲಾನಿಯು ಜಯಪುರದ ಬನಿಯ. ಸಣಕಲ ಶರೀರ. ಮೂರುದಿನ ಉಪವಾಸದ ಮೊಗ. ಅವನು ಸಣ್ಣ ಹಾಸಿಗೆಯನ್ನು ಕಂಕಳಿನಲ್ಲಿ ಇರಿಕಿಕೊಂಡು, ಒಂದು ಲೋಟ ಹಿಡಿದುಕೊಂಡು ತನ್ನ ಊರಿನಿಂದ ಮುಂಬಯಿಗೆ ಬಂದು ಆಗಲೇ ಬಹಳ ವರ್ಷಗಳಾದುವು. ಈಗ ಅವನ ಮಳಿಗೆ ನಮ್ಮ ಮನೆ ಎದುರಿಗೆ ಎತ್ತರವಾದ ಜಗಲಿಯ ಮೇಲಿದೆ. ಹೆಸರಿಗೆ ಮಾತ್ರ ಕಿರಾಣಿ ಅಂಗಡಿ. ಆದರೆ ಅವನಲ್ಲಿ ಸಿಕ್ಕದ ಸಾಮಾನು ಅಪೂರ್ವ ಅನ್ನಿ. ಯುದ್ಧ ಮೊದಲಾದ ಮೇಲಂತೂ ಅವನ ವ್ಯಾಪಾರ ಬಹಳ ಭರಾಟೆಯಿಂದ ಸಾಗಿತು. ಬೆಲೆಯು ಹತ್ತೋಟೆ ಜಾರಿಗೆ ಬಂದಮೇಲಂತೂ ಅವನ ಲಾಭವೂ ಹತೋಟಿಯನ್ನೇ ಮೀರಿತು. ಮಿತಿಯಾದ ಬೆಲೆಗೆ ಪದಾರ್ಥವನ್ನು ಮಾರಿದರೆ ಅವನ ಕುಲಕ್ಕೇ ಅತಿಯಾದ ಹಾನಿ ಎಂದು ಅವನ ನೀತಿ.

ಉದಾಹರಣೆಗೆ ಸಕ್ಕರೆಯನ್ನೇ ತೆಗೆದುಕೊಳ್ಳಿ. ಇದರ ಮೇಲೆ ಸರಕಾರದ ಕಟ್ಟು ಮೊದಲಾದಂದಿನಿಂದ ಇವನ ಬಳಿಯಲ್ಲಿ ಸಕ್ಕರೆಯ ಸರಕು ಬೆಳೆಯುವುದೂ ಮೊದಲಾಯಿತು. ಸರಕಾರಿ ಸಕ್ಕರೆ ಸಾಲದೆಇದ್ದ—ಯಾರಿಗೆ ತಾನೆ ಸಾಕು ?—ಸುತ್ತುಮುತ್ತಿನವರಿಗೆಲ್ಲ ಪಿಲಾನಿ ಹತ್ತಿರ ಸಕ್ಕರೆಗೆ ಬರವಿಲ್ಲ ಅನ್ನುವುದು ಗೊತ್ತು. ನೀವು ಹೋಗಿ ಮೊದಲು ಕೇಳಿದಾಗ ಅವನು 'ಇಲ್ಲ' ಅಂತಲೇ ಹೇಳುವುದು. ಹುಂ. ಸಕ್ಕರೆ ಸರಕಾರದ ಅಂಗಡಿಯಲ್ಲಿಲ್ಲದೆ ಬೇರೆ ಎಲ್ಲಿ ಸಿಕ್ಕಬೇಕು ? ಆದರೆ ನೀವು ಕೊಂಚ ನಿಂತು 'ನೋಡಿ, ನನಗೆ ಬಹಳ ಅಗತ್ಯವಿದೆ; ಬೆಲೆಯ ಮುಖ ನೋಡುವುದಿಲ್ಲ. ಏನಾದರೂ ಅಷ್ಟು ಇಷ್ಟು ಉಳಿದಿದ್ದರೆ ಕೊಂಚ ನೋಡಿ' ಎಂದು ಹೇಳಿದರೆ, ಪಿಲಾನಿ ಮಾರ್ವಾಡಿಗೆ ನೀವು ತಂಟೆಕೋರರಲ್ಲ, ಸಾಧುವಾದ ಬಲಿ ಎಂದು ಕಂಡುಬಂದರೆ 'ಹಾಗೇ ? ನೋಡುತ್ತೇನೆ. ಏನಾದರೂ ಇದ್ದರೆ ನಿಮಗೆ ಕೊಟ್ಟುಬಿಡುತ್ತೇನೆ. ಆದರೆ ಬೆಲೆ ಮಾತ್ರ ಪೌಂಡಿಗೆ ಹತ್ತಾಣೆ ಆಗುತ್ತದೆ' ಅನ್ನುವನು. ನೀವು ಬೆಚ್ಚಿ 'ಏನು, ಆರಾಣೆಯಿಂದ......' ಎನ್ನುವಾಗಲೇ ಅವನು ಮಧ್ಯೆ ಬಾಯಿಹಾಕಿ 'ಆ ಹತೋಟಿ ಮಾತು ಬಿಡಿ. ಈಗ ಸರಕನ್ನು ಜಮಾಯಿಸಬೇಕಾದರೆ ಹತ್ತಾಣೆ ನಾನೇ ಕೊಡಬೇಕು, ಭಾಯಿ. ಇದನ್ನು ಮಾರಿ ನನಗೆ ಒಂದು ಬಿಡಿಕಾಸೂ ಲಾಭವಿಲ್ಲ' ಅನ್ನುವನು ನೀವು ಕೊಂಚ ಮಿಸಿ ಮಿಸಿ ಮಾಡುವಾಗ ಅವನು ಶಾಂತವಾಗಿ ಕುಳಿತಿದ್ದು, ಕಡೆಗೆ ನಿಮಗೇ ಸಾಕಾಗಿ ಸೋತು ನಿಟ್ಟುಸಿರನ್ನು ಬಿಟ್ಟು, 'ಹುಂ ಹೋಗಲಿ, ಕೊಡಿ ಒಂದು ಪೌಂಡು. ನಾಳೆ ಹಬ್ಬ. ಮಿಠಾಯಿ ಮಾಡದೇ ಇದ್ದರೆ ಆಗುತ್ತದೆಯೆ ?'

ಅಂದರೆ, ಅವನು ನಿಮ್ಮ ಮಾತಿನ ಉತ್ತರಾರ್ಧಕ್ಕೆ ಗಮನಕೊಡದೆ ಒಳಗೆಹೋಗಿ, ಒಂದು ಪೊಟ್ಟಣ ತಂದು, 'ಇಗೋ, ನನ್ನಲ್ಲಿ ಇದ್ದದ್ದೇ ಇಷ್ಟು; ಬಳಿದು ಕೊಟ್ಟಿದ್ದೇನೆ' ಅಂದು, ಕೊಟ್ಟ ನಿಮ್ಮ ರೂಪಾಯಿ ನೋಟನ್ನು ತೆಗೆದುಕೊಂಡು, ನೀವೇನಾದರೂ ಅಲ್ಪ ಸ್ವಲ್ಪ ರಿಯಾಯಿತಿಗೆ ಆಶಿಪಡುತ್ತಿದ್ದರೆ ನಿರಾಶೆ ಮಾಡಿ, ಸರಿಯಾಗಿ ಆರಾಣೆ ಚಿಲ್ಲರೆಯನ್ನು ಎಣಿಸಿ ಕಟುಕ ಹೃದಯದಿಂದ ಕೊಟ್ಟುಬಿಡುವನು.

ಒಂದುದಿನ ಇದ್ದಕ್ಕೆ ಇದ್ದಹಾಗೆಯೆ—ನಮ್ಮ ದೃಷ್ಟಿಯಿಂದ-ಕೊಬ್ಬರಿ ಎಣ್ಣೆಯ ಬೆಲೆಗೆ ಹತೋಟ ಬಂದಿತು. ಸರಿ, ಆ ದಿನದಿಂದ ಯಾವ ಅಂಗಡಿಯಲ್ಲೂ ಎಣ್ಣೆಯೇ ಇಲ್ಲ—ನಮಗಾಗಿ. ವಾರದ ಮೇಲೆ ವಾರ ಕಳೆಯಿತು. ಮನೆಯಲ್ಲಿ ಇದ್ದ ಎಣ್ಣೆಯೂ ತೀರಿತು. 'ಟಾಂಕೋ' ಮೊದಲಾದ ಎಣ್ಣೆಗಳೂ ಮಾಯ. ಅವು ಇದ್ದರೆ ತಾನೆ ಅವನ್ನು ಕೊಂಡು ಪೂರಯಿಸಬಹುದೊ ನಾವು ? ಅಂತು ತಲೆಗೆ ಒಳ್ಳೆಣ್ಣೆಯನ್ನು ಹಚ್ಚಿಕೊಳ್ಳುವ ಗತಿ ಬರುತ್ತಿತ್ತು. ಸರಿ, ಈ ಪಾಡು ಬರುವ ಹಿಂದಿನ ದಿನ ನಾನು ಹೋಗಿ ಪಿಲಾನಿಯನ್ನು ಮರೆಹೊಕ್ಕೆ. ರೂಢಿಯ ಪ್ರಕಾರ ಮೊದಲನೆಯ ಮಾತು ಕತೆಯಾದ ಮೇಲೆ ಪಿಲಾನಿಯಲ್ಲಿ ಕೊಂಚವೇ-ನನಗೆ ಬೇಕಾದಷ್ಟೇ ತಾನೆ-ಕೊಬ್ಬರಿ ಎಣ್ಣೆ ಇರುವುದಾಗಿಯೂ, ಆದರೆ ಬೆಲೆಯು ಹತೋಟಿಯ ಹಿಂದಿನದಿನ ಇದ್ದುದಕ್ಕೆ ಎರಡರಷ್ಟು ಎಂದು ಗೊತ್ತಾಯಿತು. ಇದನ್ನು ಕೇಳಿದೊಡನೆ ನನಗೆ ಉಂಟಾದ ಕೋಪವನ್ನು ನುಂಗಿಕೊಂಡು ಒಂದು ಪೌಂಡು ಎಣ್ಣೆಯನ್ನು ಕೊಂಡು ಎರಡು ರೂಪಾಯಿ ಕೊಟ್ಟು ಪಿಲಾನಿಯನ್ನು ಮನಸ್ಸಿನಲ್ಲಿ—ಅಂಗಡಿಯನ್ನು ಬಿಟ್ಟಮೇಲೆ ಗಟ್ಟಿಯಾಗಿ—ಶಪಿಸುತ್ತ ಮನೆಗೆ ಬಂದೆ. ಮಾರನೆಯ ದಿನ ನಮ್ಮವಳು ಅದನ್ನು ತಲೆಗೆ ಹಚ್ಚಿಕೊಳ್ಳುತ್ತಾ 'ಇದೇನು ಕೊಬ್ಬರಿ ಎಣ್ಣೆಯೋ ಒಳ್ಳೆಣ್ಣೆಯೋ ತಂದದ್ದು ? ಒಳ್ಳೆಣ್ಣೆ ಮನೆಯಲ್ಲೇ ಇತ್ತು' ಅಂದಳು. ಆಗ ನನ್ನಲ್ಲಿ ಅಡಗಿದ್ದ, ಹೆಚ್ಚುತ್ತಿದ್ದ ಸಿಟ್ಟನ್ನು ಎಲ್ಲಿ ತೋರಿಸಬೇಕು? 'ಏನೋ ಎಂತಹದೋ ಸುಮ್ಮನೆ ತಲೆಗೆ ಚಟ್ಟಿಕೊ' ಅಂದು ಗದರಿಸಿದೆ.

ಈ ಮಾದರಿಯ ವ್ಯಾಪಾರದಿಂದ ಪಿಲಾನಿಯು ಅಷ್ಟು ಇಷ್ಟು ದುಡ್ಡನ್ನು ಕೂಡಿ ಹಾಕಿರಬೇಕೆಂಬುದನ್ನು ಸುಲಭವಾಗಿ ಊಹಿಸಬಹುದು. ಹಾಗೆಯೇ ಇವನು ಸುಳ್ಳು ಲೆಕ್ಕದ ಮೂಲಕ ವರಮಾನ ತೆರಿಗೆಯಿಂದ ತಪ್ಪಿಸಿಕೊಂಡಿದ್ದನೆಂದೂ ಹೇಳಬಹುದು. ಇದಕ್ಕೆ ಸರಿಯಾಗಿ ಇವನು ಬ್ಯಾಂಕಿನಲ್ಲಿ ಕಳ್ಳ ಹಣವನ್ನು ಇಟ್ಟಿರಲಿಲ್ಲವೆಂದೂ ತಿಳಿದೇ ತಿಳಿಯುತ್ತದೆ. ಅಲ್ಲದೆ ಇವನಿಗೆ ದಿನ ದಿನವೂ ಏರಿ ತಗ್ಗುವ ಚಿನ್ನ ಬೆಳ್ಳಿಗಳನ್ನು ಗುಡ್ಡೆ ಹಾಕಿಕೊಳ್ಳುವ ಧೈರ್ಯವಿರಲಿಲ್ಲವೆಂದರೆ ಇವನ ಗಳಿಕೆ ಎಲ್ಲವೂ ಅವನು ಹಾಗೂ ಹೀಗೂ ನಂಬಿಕೊಂಡಿದ್ದ ಸರಕಾರದ ಹಣದ ರೂಪದಲ್ಲೇ ಇವನ ಬಳಿ ಇದ್ದಿ

ತೆಂದು ಹೇಳಬೇಕಾಗಿಲ್ಲ. ಇನ್ನು ಸ್ಪಷ್ಟವಾಗಿ ಹೇಳುವುದಾದರೆ ಅವನು ಕೂಡಿಟ್ಟು ಕೊಂಡಿದ್ದುದು ಸಾವಿರ ರೂಪಾಯಿ ಮೌಲ್ಯದ ಇಪ್ಪತ್ತಐದು ನೋಟುಗಳನ್ನು.

ಹೀಗಿದ್ದು ಜನವರಿ ಹನ್ನೆರಡನೆಯ ತಾರೀಕಿನ ದಿನದ ಬೆಳಗ್ಗೆ ಪಿಲಾನಿಯು ಮೆಲ್ಲಗೆ ಗುಜರಾತಿ ಪತ್ರಿಕೆಯನ್ನು ತೆಗೆದಾಗ 'Demonetisation' ಶಾಸನದ ಬರಸಿಡಿಲು ಕಳ್ಳವ್ಯಾಪಾರಿ ಲಂಚಕೋರರೆಲ್ಲರಿಗೂ ಬಡಿದಂತೆ ಅವನಿಗೂ ಒಮ್ಮೆಲೇ ಬಡಿಯಿತು. 'ಐನೂರು ರೂಪಾಯಿನಿಂದ ಮೇಲಿನ ಮೌಲ್ಯದ ನೋಟುಗಳೆಲ್ಲ ರದ್ದು' ಎಂದಿದ್ದ ದೊಡ್ಡ ಅಕ್ಷರದ ತಲೆಬರಹವು ಕಣ್ಣಿಗೆ ಬಿದ್ದೊಡನೆ ಪಿಲಾನಿಗೆ ತಲೆ ತಿರುಗಿ ಕಣ್ಣು ಕತ್ತಲೆ ಇಟ್ಟಿತು. ಎದೆ ಧಸಕ್ಕೆಂದಿತು. ಉಸಿರು ಮೇಲೆ ಬಂದಿತು. ಕೈ ನಡುಗಿ ಪತ್ರಿಕೆಯು ಬಿದ್ದುಹೋಯಿತು. ಹಣೆಯಮೇಲೆ ಬೆವರು ಹನಿಗಟ್ಟಿತು. 'ಅಯ್ಯೋ ಕೆಟ್ಟೆ! ಕೆಟ್ಟೆ!' ಅಂದುಕೊಂಡ ಬಡ ಪಿಲಾನಿ. ತಲೆಯನ್ನು ನಡುಗುವ ಎರಡು ಕೈಗಳಿಂದಲೂ ಚಚ್ಚಿಕೊಂಡ. 'ಮರುಗಿದನು ಕಲ್ಮರಂ ಕರಗುವಂತೆ.' ಮತ್ತೆ ಪತ್ರಿಕೆ ಯನ್ನು ತೆಗೆದುಕೊಂಡು ಬುದ್ಧಿಯನ್ನು ಸ್ತಿಮಿತಕ್ಕೆ ತಂದುಕೊಂಡು ಓದುವುದಕ್ಕೆ ಕೊಂಚ ಕಾಲವೇ ಹಿಡಿಯಿತು. ಆದರೆ ವಿಷಯದ ವಿವರಗಳನ್ನು ಪೂರ್ತಿಯಾಗಿ ಓದಿದಾಗ ಅವನ ಉಸಿರು ಕಟ್ಟಿದ್ದುದು ಸ್ವಲ್ಪ ಬಿಟ್ಟಿತು. ಹುಂ, ಹಣೆಯಬರಹ ತೀರ ಅಷ್ಟು ಕೆಟ್ಟುಹೋಗಿರಲಿಲ್ಲ. ನೋಟುಗಳನ್ನು ಬದಲಾಯಿಸಲು ಕೊಂಚ ಕಾಲ ಕೊಟ್ಟಿದ್ದರು. ಆದರೆ........ಆದರೆ ಈ ಬದಲಾವಣೆಯಾಗಬೇಕಾದರೆ ಸಂಪಾ ದನೆಗೆ ಸಕಾರಣ ಕೊಡಬೇಕು! ಓ, ಇದಕ್ಕೆ ಏನು ಗತಿ? ತಾನು ಏನನ್ನು ತಾನೇ ಹೇಳಬಲ್ಲ? ಇನ್ನು ತೆರಿಗೆ ವಿಚಾರ ಬೇರೆ—ಶಿವ! ಶಿವ! ಇವಕ್ಕೆಲ್ಲಾ ಏನು ಉಪಾಯ? ಕಡೆಗೂ ದುಡ್ಡು ಹೋದಂತೆಯೋ? ಇಲ್ಲ, ಇದನ್ನು ಉಳಿಸಿ ಕೊಳ್ಳಲು ಹೋಗಿ ಬಂದಿಖಾನೆಗೆ ಹೋಗುವುದೋ? ಈ ಕಷ್ಟದಿಂದ ಪಾರಾಗಿ ಹಣವನ್ನು ಉಳಿಸಿಕೊಳ್ಳುವುದು ಹೇಗೆ? ಹೇಗೆ ನಿಜವಾಗಿ?

ಪಿಲಾನಿಯು ತಲೆ ಸಿಡಿಯುವಷ್ಟು ಯೋಚಿಸಿದ. ಪ್ರಯೋಜನವಾಗಲಿಲ್ಲ. ಆ ದಿನವಂತೂ ರಿಸರ್ವ್ ಬ್ಯಾಂಕಿಗೆ ರಜವಾಗಿ ಕಾರ್ಯದ ಆತುರವಿರಲಿಲ್ಲ. ಪಿಲಾ ನಿಯು ಅಂಗಡಿಯನ್ನು ಮುಚ್ಚಿ ಹಾಸಿಗೆಯಮೇಲೆ ಮಲಗಿಕೊಂಡು ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ಒದ್ದಾಡಿದ. ಊಟವು ಒಂದು ತುತ್ತೂ ಒಳ ಹೋಗಲಿಲ್ಲ. ಮಧ್ಯಾಹ್ನ ರಾತ್ರಿಯೆಲ್ಲ ಜ್ವರ ಬಂದವನಂತೆ ನರಳಿದ. ಪಿಲಾನಿಯ ಹೆಂಡತಿ ಶಾಂತಾ ಬಾಯಿ ಇನ್ನಿಲ್ಲದ ಹಾಗೆ ಕಾರಣವನ್ನು ಬೇಡಿದಳು. ಆದರೆ ಪಿಲಾನಿಯು ಮಾತ್ರ ಏನನ್ನೂ ಹೇಳಲಿಲ್ಲ. ನರಳುವುದನ್ನು ಬಿಟ್ಟು ಸುಮ್ಮನಾಗಲೂ ಇಲ್ಲ. ಮರುದಿನ ವಂತೂ ಅವನ ಪಾಡು ಹೇಳುವಂತಿರಲಿಲ್ಲ. ಆ ದಿನ ದುಡ್ಡು ಸಿಕ್ಕುವ ಸಂಭವವುಂಟು. ಆದರೆ ಇವನು ಅದನ್ನು ಉಪಯೋಗಿಸಿಕೊಳ್ಳುವಂತಿರಲಿಲ್ಲ. ಸುಮ್ಮನೆ ದಿಕ್ಕು

ತೋಚದೆ ಮಿಲಿಮಿಲಿಗುಟ್ಟಿದ. ಆ ದಿನವೂ ಉಪವಾಸ. ನಿದ್ದೆಯಿಲ್ಲದೆ ಕಣ್ಣುಗಳು ಗುಳಿಗಿಳಿದಿದ್ದವು. ಪಿಲಾನಿಯು ಈ ಪರಿಸ್ಥಿತಿಯಲ್ಲಿದ್ದುದನ್ನು ಶಾಂತಾಬಾಯಿಯು ಇಲ್ಲಿಯವರೆಗೆ ಎಂದೂ ಕಂಡಿರಲಿಲ್ಲಿ. ಅವಳಿಗೆ ಗಾಬರಿಯಾಯಿತು. ಮರುದಿನ ರಾತ್ರಿಯ ಹೊತ್ತಿಗೆ ಅವಳು ನಿರ್ಧರಿಸಿ, 'ನಿಮಗೆ ಏನೋ ದೊಡ್ಡ ಜಡ್ಡು ಹಿಡಿದಿದೆ. ವೈದ್ಯರನ್ನು ಬರಮಾಡುತ್ತೇನೆ' ಎಂದು ಗಂಡನಿಗೆ ತಿಳಿಸಿದಳು. ಅವನು 'ಬೇಡ' ಎಂದ. ಅವಳು ಪಟ್ಟನ್ನು ಬಿಡಲಿಲ್ಲ. ಅವನು ವಿಷಯವನ್ನು ಬಿಡಿಸಲಿಲ್ಲ. ಕೊನೆಗೆ ಅವಳನ್ನು ತಡೆಯುವ ದಾರಿಯನ್ನು ಕಾಣದೆ ಪಿಲಾನಿಯು 'ನನ್ನ ರೋಗಕ್ಕೆ ವೈದ್ಯರ ಹತ್ತಿರ ಮದ್ದಿಲ್ಲ' ಎಂದು ಕ್ಷೀಣ ಸ್ವರದಿಂದ ಹೇಳಿದ. ಅವಳು ಸಿಟ್ಟುಗೊಂಡು 'ರೋಗವನ್ನು ವೈದ್ಯರಲ್ಲದೆ ಇನ್ನೇನು ಲಾಯರು ವಾಸಿಮಾಡುತ್ತಾರೆಯೇ ?' ಎಂದು ಕೇಳಿದಳು. ಪಿಲಾನಿಯು 'ಆ ಏನೆಂದೆ ? ಲಾಯರೆ ?' ಅಂದ. ಅವನ ಮನಸ್ಸಿನ ಕಾರ್ಮುಗಿಲಿನಲ್ಲಿ ಮಿಂಚೊಂದು ಹೊಳೆಯಿತು. ಹುಂ, ತನ್ನ ವ್ಯಾಪಾರದ ಬುದ್ಧಿಯು ನಿಸ್ಸಹಾಯವಾದ ಕಡೆ ಲಾಯರು ಕೊಂಚ ನೆರವಾಗಬಹುದೇನೊ. ನಿಜ, ಇದು ಪರೀಕ್ಷಿಸತಕ್ಕದ್ದೆ. ಹೀಗೆ ಹೊಳೆದ ಮೇಲೆ ಪಿಲಾನಿಯು ಕೊಂಚ ಸಮಾಧಾನ ತಂದು ಕೊಂಡು, ಶಾಂತಾಬಾಯಿಗೆ 'ನೀನು ಹೇಳಿದುದು ಒಳ್ಳೆಯದಾಯಿತು. ನಾಳೆ ಲಾಯ ರನ್ನು ನೋಡುತ್ತೇನೆ.' ಅಂದ. ಶಾಂತಾಬಾಯಿ 'ನಿಮಗೇನು ಹುಚ್ಚು ಹಿಡಿದಿರ ಬೇಕು. ಲಾಯರು ಏನನ್ನು ಮಾಡಬಲ್ಲರು ? ಅವರ ಬಳಿ ಜ್ವರದ ಗುಳಿಗೆ ಇರುತ್ತ ದೆಯೇ ?' ಅಂದಳು. ಪಿಲಾನಿಯು 'ಹುಂ. ನನ್ನ ಜ್ವರಕ್ಕೆ ಮಾತ್ರೆ ಸಿಕ್ಕರೆ ಅವರ ಲ್ಲಿಯೆ' ಅಂದ. 'ಹಾಗಂದರೆ ?' ಎಂದು ಶಾಂತಾಬಾಯಿ ಬಲವಾಗಿ ಗಂಟುಬಿದ್ದಳು. ಪಿಲಾನಿಯು ಒಂದೇ ಮಾತಿನಲ್ಲಿ 'ಲೇ, ಹುಚ್ಚಿ, ಈಗ ನಾನು ದಿವಾಳಿ ಆಗುವ ಗತಿಗೆ ಬಂದುಬಿಟ್ಟಿದ್ದೇನೆ—ಈ ಹೊಸ ಹಣದ ಶಾಸನದಿಂದ' ಅಂದ. ಶಾಂತಾಬಾಯಿ 'ಹಾಗೇ ?' ಅಂದು ಅವನ ಗುಟ್ಟನ್ನೆಲ್ಲ ಮೆಲ್ಲಗೆ ಹೊರಗೆಳೆದಳು. ಆಗ ಇಬ್ಬರೂ ಸೇರಿ ವಿಷಯವನ್ನು ಕಡೆದರು. ಹೇಗೆ ಹೇಗೆ ಎಷ್ಟು ಎಷ್ಟು ಕಡೆದರೂ ನಿರಾಶೆಯ ಹಾಲಾಹಲವೇ ಹುಟ್ಟುತ್ತಿತ್ತು. ಆ ದಿನ ಗಂಡನೊಂದಿಗೆ ಹೆಂಡತಿಗೂ ನಿದ್ರಾಭಂಗ ವಾಯಿತು. ಒಟ್ಟಿನಲ್ಲಿ ಲಾಯರ ಬಳಿಗೆ ಹೋಗುವುದೇನೋ ನಿರ್ಧಾರವಾಗಿದ್ದಂತಿ ದ್ದಿತು. ಈ ಬಗ್ಗೆ ಪಿಲಾನಿಯ ಪೇಚಾಟವೆಂದರೆ ಲಾಯರು ಬಹಳ ದುಡ್ಡನ್ನು ಎಳೆ ದುಬಿಡುವರೆಂಬುದು. ಆದರೆ ಅದಕ್ಕೆ ಉಪಾಯವಿಲ್ಲವೆಂದು ಶಾಂತಾಬಾಯಿಯ ವಾದ. ಅಂತೂ ಕಡೆಗೆ ಪಿಲಾನಿಯು ತಮ್ಮ ಊರಿನವರೇ ಆದ ಶ್ರೀ 'ಇಚ್ಛಾಪೂರಯ' ಅವರಲ್ಲಿ ಹೋದರೆ ಆದಷ್ಟು ಕಡಿಮೆಯ ಖರ್ಚಿನಲ್ಲಿ ಕೆಲಸವು ಸಾಗಬಹುದೆಂದು ಸಮಾಧಾನ ತಂದುಕೊಂಡು ಬೆಳಗಾಗುವುದನ್ನೇ ಕಾಯುತ್ತಿದ್ದ.

ಪಿಲಾನಿಯು ಇಚ್ಛಾಪೂರಯರನ್ನು ಕಂಡಾಗ ಆ ದಪ್ಪ ವಕೀಲರು ತಮ್ಮ ವಿಶಾಲವಾದ ಕೋಣೆಯಲ್ಲಿ ಮೇಜಿನ ಮೇಲೆ ದಪ್ಪ ದಪ್ಪ ಪುಸ್ತಕಗಳನ್ನು ಮುಂದೆ

ಬಿಚ್ಚಿಕೊಂಡು, ದಪ್ಪ ಕನ್ನಡಕವನ್ನು ಹಾಕಿಕೊಂಡು ಓದಿನಲ್ಲಿ ಮಗ್ನರಾಗಿದ್ದರು. ಹಿಂದೆಯೇ ಇಬ್ಬರಿಗೂ ಪರಿಚಯವಿದ್ದುದರಿಂದ, ವಕೀಲರು ಪಿಲಾನಿಯನ್ನು ಗಮನಕ್ಕೆ ತಂದುಕೊಂಡು ಕೂಡಲು ಹೇಳಿದರು. ಅವರ ಕುಶಲ ಪ್ರಶ್ನೆಗಳಾದ ತರುವಾಯ ಪಿಲಾನಿಯು 'ಎಲ್ಲವೂ ತಮ್ಮ ದಯೆ' ಎಂದು ಹೇಳಿದಮೇಲೆ ವಕೀಲರು ತುಟಿಯನ್ನು ಚೊಕ್ಕಟ ಮಾಡಿ ನಗುತ್ತ ಪಿಲಾನಿಯು ಬಂದ ಕಾರಣವನ್ನು ಊಹಿಸಿದಂತೆ 'ಹುಂ, ಏನು ತಾವು ಇಲ್ಲಿಗೆ ಬಂದಿದ್ದು ?' ಎಂದು ಕೇಳಿದರು.

'ಕೊಂಚ ಕಷ್ಟಕ್ಕೆ ಸಿಕ್ಕಿದ್ದೇನೆ.'

'ಓ, ಏನು ಈ ಹಣದ ಶಾಸನದ ಬಗ್ಗೆಯೋ ಹೇಗೆ ?' ವಕೀಲರು ಸ್ಪಷ್ಟವಾಗಿಯೇ ನಕ್ಕರು.

'ತಮಗೆ ಹೇಗೆ ತಿಳಿಯಿತು ?'

'ಅಹಹ ! ಹೇಗೆ ? ಮೋಡ ಕಟ್ಟಿರುವಾಗ ಮಳೆ ಬರಬಹುದಲ್ಲವೆ ?'

'ತಾವು ಸರಿಯಾಗಿ ಊಹಿಸಿದಿರಿ.'

'ಹನ್ನೆರಡನೆಯ ತಾರೀಖಿನಿಂದ ಇದು ಆರನೇ ಕೇಸು ನನಗೆ. ತಿಳಿಯಿತೆ ? ಎಲ್ಲವೂ ಇದೇ ಸಂದರ್ಭದ್ದೇ. ನಾನು ಪುಸ್ತಕವನ್ನೆಲ್ಲ ತಿರುವಿಹಾಕಿ ಏನಾದರೂ ಸರಿಯಾದ ಉಪಾಯ ಕಂಡುಹಿಡಿಯಬೇಕು ಅಂತ ನೋಡುತ್ತಿದ್ದೇನೆ. ಒಬ್ಬರ ಪರವಾಗಿ ಸರಕಾರದ ಮೇಲೆ ಕೇಸನ್ನು ಹೂಡಿಸಿದ್ದೇನೆ. ಅದಕ್ಕಿಂತಲೂ ಸುಲಭವಾದ ದಾರಿ ಬೇರೆ ಒಂದು ಇದ್ದಹಾಗೆ ಕಾಣುತ್ತದೆ.'

'ತಾವು ಅಷ್ಟು ಉಪಕಾರ ಮಾಡಿದರೆ !'

'ಇದರಲ್ಲೆಲ್ಲ ಉಪಕಾರ ಏನು ? ನಮ್ಮ ಸಲಹೆಯನ್ನೇನು ಬಿಟ್ಟೀ ತೆಗೆದುಕೊಳ್ಳುತ್ತೀರ ?'

'ಹಾಗಲ್ಲ, ನಾನೇನೋ ಬಡವನೆ.'

'ಹುಂ. ಯಾರಲ್ಲ—ಈಗ ? ಈಗ ಯುದ್ಧಕಾಲದಲ್ಲಿ ಪದಾರ್ಥಗಳ ಬೆಲೆ ಆಕಾಶಕ್ಕೇರಿದಾಗ ?'

'ನಿಜ.'

'ಸರಿ, ತಮ್ಮದೆಷ್ಟು ದುಡ್ಡು ಸಿಕ್ಕಿಹಾಕಿಕೊಂಡಿದೆ ?'

'ಇಪ್ಪತ್ತೈದು ನೋಟುಗಳು.'

'ಏನು ಐನೂರರದ್ದೋ ?'

'ಇಲ್ಲ. ಸಾವಿರದ್ದು.'

'ಹುಂ!'

ವಕೀಲರು ಯೋಚಿಸಿದರು. ಪಿಲಾನಿಯೂ ಒದ್ದಾಡುತ್ತಿದ್ದ. ಎರಡು ನಿಮಿಷ ಗಳ ತರುವಾಯ ವಕೀಲರು ಪಿಲಾನಿಯನ್ನು ನೋಡಿ,

'ನನ್ನ ಫೀ ಸೇಕಡ ಹತ್ತು' ಅಂದರು.

ಪಿಲಾನಿಯ ಎದೆ ಜಗ್ಗಿಂದಿತು. 'ಅಬ್ಬಬ್ಬ ಎರಡು ಸಾವಿರದ ಐನೂರು ರೂಪಾಯಿ! ಅಯ್ಯೋ ಈ ಪಪ್ಪಕ್ಕೆ ಹಾಳು ತೆರಿಗೆಯನ್ನೇ ಕೊಡಬಹುದಾಗಿದ್ದಿತೋ ಏನೋ. ಇವರು ತನ್ನ ಊರಿನವರು ಎಂದು ಬಂದರೆ ಇದೇನು ಹೀಗೆ ಸುಲಿಯು ತ್ತಾರೆ? ಬೇರೆ ದಾರಿಯೇ ಇಲ್ಲವೆ?'

ಈ ಬಾರಿ ಪಿಲಾನಿಯು ಚಿಂತಾಸಕ್ತನಾದ, ತನ್ನ ಸರದಿಯಲ್ಲಿ. ಇದನ್ನು ಕಂಡು ವಕೀಲರು ಮತ್ತೆ ಪುಸ್ತಕಗಳ ಕಡೆಗೆ ತಿರುಗಿದರು. ಪಿಲಾನಿಯು ಮನಸ್ಸಿನಲ್ಲೇ ಕಸ ರತ್ತು ಮಾಡಿ ದಣಿದು, ವಕೀಲರ ಕಡೆಗೆ ದೈನ್ಯದೃಷ್ಟಿಯಿಂದ ನೋಡಿ ಫಲ ಪಡೆಯದೆ,

'ಇದು ನಾನು ಬಹು ಕಷ್ಟಪಟ್ಟು ಸಂಪಾದಿಸಿದ ಆಸ್ತಿ' ಅಂದ.

'ಯಾರು ಇಲ್ಲ ಅಂದರು? ಸರಿ.'

'ಅನ್ಯಾಯದ್ದಲ್ಲ.'

'ನನಗೆ ಗೊತ್ತಿಲ್ಲವೇ? ನೀವು ಹೇಳಬೇಕೆ?'

'ಏನೋ ಕೂಡಿಡುವ ರೀತಿಯಲ್ಲಿ ಮೋಸಹೊಂದಿದೆ ಅಷ್ಟೆ.'

'ಹುಂ. ಪಾಪ, ಹಾಗೂ ಆಗುತ್ತದೆ.'

'ತಾವು ಅಲ್ಪ ಸ್ವಲ್ಪ ರಿಯಾಯಿತಿ........'

'ಕ್ಷಮಿಸಬೇಕು. ಅದು ಮಾತ್ರ ಆಗುವದಿಲ್ಲ. ಕಟ್ಟಳೆಗೆ ವಿರೋಧವಾಗಿ ನಡೆ ಯುವುದಿಲ್ಲ. ಅದರಲ್ಲೂ ನೀವು ನಮ್ಮ ಊರಿನವರು ಅಂತ ನೇರವಾಗಿ ಕನಿಷ್ಟವಾ ದದ್ದನ್ನೇ ಹೇಳಿಬಿಟ್ಟೆ.'

'ಯೋಗ್ಯವಾದ ಕಡೆ ಕೊಂಚ........'

'ನಿಜವಾಗಿ ಹೇಳುತ್ತೇನೆ. ಹೆಚ್ಚು ಮಾತಾಡಿ ಫಲವಿಲ್ಲ.'

ಮತ್ತೆ ಒಂದೆರಡು ನಿಮಿಷ ನಿಶ್ಶಬ್ದ. ಪಿಲಾನಿಯು ಮತ್ತೆ ಮನಸ್ಸಿನಲ್ಲಿ ಲಾಗ ಹಾಕಿ ನೋಡಿದ. ವಕೀಲರು 'ಜುಂ. ಜಪ್ಪಯ್ಯ' ಅನ್ನುವಹಾಗಿರಲಿಲ್ಲ. ಇವರು ತನ್ನ ಗುಟ್ಟನ್ನು ತಿಳಿದಿರುವರೆಂದೂ, ಆದುದರಿಂದ ಕಪಿ ಮುಷ್ಟಿಯನ್ನು ಬಿಡುವುದಿಲ್ಲ ವೆಂದೂ, ಎಲ್ಲ ಹಾಳು ವಕೀಲರೂ ಇದೇ ಗೋತ್ರದವರೆಂದೂ ಯೋಚಿಸಿ, ಪಿಲಾ ನಿಯು ಕಲ್ಲೆದೆ ಮಾಡಿಕೊಂಡು ಕಣ್ಣನ್ನು ಮುಚ್ಚಿಕೊಂಡು 'ಆಗಲಿ' ಅಂದುಬಿಟ್ಟ. ವಕೀಲರು ಹಣವನ್ನು ಕೇಳಿದರು. ಪಿಲಾನಿಯು ಬೆದರಿ,

'ಏನು ಮುಂಗಡವಾಗಿ ?' ಎಂದು ಕೇಳಿದ.

'ಹುಂ. ಅದೇ ನಮ್ಮ ಕಟ್ಟಳೆ.'

'ನನ್ನಲ್ಲಿ ಆ ನೋಟುಗಳಲ್ಲದೆ ಮೂರು ಕಾಸೂ ಬೇರೆ ಇಲ್ಲ.'

'ಹುಂ ?'

'ಖಂಡಿತವಾಗಿ. ಹತ್ತು ಇಪ್ಪತ್ತು ರೂಪಾಯಿ ಚಿಲ್ಲರೆ ಇದ್ದರೆ ಏನು ಆದ ಹಾಗಾಯಿತು ?'

ವಕೀಲರು ಬೆರಳುಗಳಿಂದ ಪುಸ್ತಕದ ಮೇಲೆ ತಬಲ ಬಡಿಯುತ್ತಾ ಯೋಚಿಸಿದರು. ಅವರು ಇದು 'ಆರನೆಯ ಕೇಸು' ಎಂದು ಹೇಳಿದ್ದರೂ ಅವರಿಗೆ ಬಂದಿದ್ದುದು ಇದೇ ಮೊದಲನೆಯದು. ಕಕ್ಷಿಯಲ್ಲಿ ಭರವಸೆಯನ್ನು ಹುಟ್ಟಿಸುವುದಕ್ಕಾಗಿ ಹಾಗೆ ಅಂದಿದ್ದರು. ವಕೀಲರಲ್ಲವೆ ? ಹೀಗೆ ಸಿಕ್ಕಿದ ಕಕ್ಷಿಯನ್ನು ಬಿಟ್ಟುಕೊಡುವುದಕ್ಕೆ ಅವರಿಗೆ ಮನಸ್ಸು ಬಾರದು. ಅದರಲ್ಲೂ ಪುಷ್ಟಿಯಾದ 'ಫಿ'ಗೇ ಒಪ್ಪಿಸಿದ್ದರು. ಇಷ್ಟನ್ನೂ ಈಗಲೇ ಈತನು ತೆರುವ ಸ್ಥಿತಿಯಲ್ಲಿರಲಿಲ್ಲವೆಂದು ಅವರಿಗೆ ತಿಳಿದಿದ್ದಿತು. ಆದುದರಿಂದ ಅವರು,

' ಹೋಗಲಿ, ಇದರಲ್ಲಿ ಅರ್ಧವನ್ನಾದರೂ........' ಎಂದು ಮೊದಲು ಮಾಡುವಾಗಲೇ ಪಿಲಾನಿಯು ವಿಷಯವು ತನಗೆ ಅನುಕೂಲವಾಗುತ್ತಿದ್ದ ಸುಳಿವನ್ನು ತಿಳಿದು ' ನನ್ನಲ್ಲಿ ಏನೇನೂ ಇಲ್ಲ. ದೇವರಾಣೆಗೆ ಕೈಗೆ ಹಣ ಬಂದೊಡನೆ ತಮಗೆ ಕೊಟ್ಟು ಬಿಡುತ್ತೇನೆ, ಖಂಡಿತವಾಗಿ ' ಅಂದ.

ವಕೀಲರು ಬಾಯಿತಪ್ಪಿ ಏಕೊ ' ಹುಂ ' ಅಂದುಬಿಟ್ಟರು. ಅಂದ ಮೇಲೆ ಅವರಿಗೇ ಆಶ್ಚರ್ಯವಾಯಿತು. ಮತ್ತೆ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳಲಾರದೆ ಮುಂದಿನ ಮಾತುಕತೆ ನಡೆಸಿದರು.

' ಹುಂ, ನಿಮಗೆ "ಫರಾಸು ರೋಡಿ"ನಲ್ಲಿ ಯಾರದ್ದಾದರೂ ಪರಿಚಯಉಂಟೆ?' ವಕೀಲರು ನಗುತ್ತಾ ಕೇಳಿದರು.

ಪಿಲಾನಿಗೆ ಅತ್ಯಾಶ್ಚರ್ಯವಾಯಿತು. ಅವನಿಗೆ ' ಫರಾಸು ರೋಡು ' ಮುಂಬಯಿಯಲ್ಲಿ ಸೂಳೆಯರಿಗೆ ಪ್ರಸಿದ್ಧಿ ಎನ್ನುವುದು ಗೊತ್ತಿದ್ದು, ವಕೀಲರ ಪ್ರಶ್ನೆ ಅರ್ಥವಾಯಿತು. ಆದರೆ ಅವನು ಈ ಗಡಿಬಿಡಿಗೆ ದೂರವಾಗಿ ಬಾಳಿದ ಪ್ರಾಣಿಯಾದುದರಿಂದ ಕೊಂಚ ಗಾಬರಿಯಿಂದ,

'ಏ, ಇದೇನು ವಿಚಾರ ?' ಎಂದ, ಮಾರುತ್ತರ ಕೊಟ್ಟ.

'ಅಲ್ಲ; ಕೇಳಿದೆ.'

' ಅಲ್ಲಿಗೂ ನನಗೂ ಬಲು ದೂರ.'

' ಬಲ್ಲೆ, ಆದರೆ ಈಗ ಹತ್ತಿರ ಹೋಗಬೇಕಾಗಬಹುದು.'

' ಅದೇನು ?'

' ಅದು ನನ್ನ ಗುಟ್ಟು—ಇನ್ನೂ ಇರಲಿ. ಇನ್ನೇನು ನಾನೇ ದಾರಿ ತೋರಿಸಬೇಕಾದ ಸಂದರ್ಭ ಅನ್ನಿ.'

' ಹುಂ.'

' ಸರಿ, ಹನ್ನೊಂದು ಗಂಟೆಯ ಹೊತ್ತಿಗೆ ಲೋಕಲ್ ನಿಲ್ದಾಣದಲ್ಲಿ ನನಗೆ ಭೇಟಿ ಆಗಬೇಕು. ಹನ್ನೊಂದು ಇಪ್ಪತ್ತಮೂರಕ್ಕೆ ಒಂದು "ಫಾಸ್ಟು" ಇದೆ. ನಿಮ್ಮ ನೋಟನ್ನೆಲ್ಲ ತೆಗೆದುಕೊಂಡು ಬನ್ನಿ.'

' ಆಗಲಿ.' ಪಿಲಾಜಿಯು ಹೊರಡಲನುವಾದ.

' ಹಾಗೇ ಎರಡು ಸೆಕೆಂಡ್ ಕ್ಲಾಸಿನ ಟಿಕೀಟನ್ನು ತೆಗೆದುಕೊಂಡಿರಿ. ಸ್ವಲ್ಪ ದುಡ್ಡೂ ಕೈಯಲ್ಲಿರಲಿ' ಎಂದು ವಕೀಲರು ಕಡೆಯ ಗೋಲಿ ಬಾರಿಸಿದರು. ಪಿಲಾಜಿಯು ಪೆಚ್ಚಾಗಿ ಹೊರಗೆ ಕಾಲಿಟ್ಟನು.

ರೈಲು ಗಾಡಿಯಲ್ಲಿ ಈ ಬಗ್ಗೆ ಮಾತುಕತೆಗಳಾಗಲಿಲ್ಲ. ಪಾಶ್ಚಾತ್ಯ ಉಡುಪಿನ ವಕೀಲರು ಸೆಕೆಂಡು ಕ್ಲಾಸಿನ ಮೆತ್ತೆಯ ಮೇಲೆ ಆರಾಮವಾಗಿ ಕುಳಿತು ಎದುರಿನ ಬೆಂಚಿನ ಮೇಲೆ ಎರಡು ಕಾಲನ್ನೂ ಎಸೆದು, ತಮ್ಮ 'ಪೈಪ'ನ್ನು ಹಚ್ಚಿಸಿ 'ಬುಸು ಬುಸು' ಸೇದುತ್ತಿದ್ದರು. ಪಿಲಾಜಿಗೆ ಹೆಚ್ಚು ವೆಚ್ಚದ ಹೊಗೆಯಸೊಪ್ಪಿನ ಅಭ್ಯಾಸವಿರಲಿಲ್ಲ. ಆಗಾಗ್ಗೆ ಮಾತನಾಡಲು ಮೊದಲು ಮಾಡಿ ಪ್ರತ್ಯುತ್ತರಗಳು ಸರಿಯಾಗಿ ಬರದೆ ಇದ್ದುದರಿಂದ ಆಯಾಸಹೊಂದಿ ತಾನು ತಂದಿದ್ದ ಪತ್ರಿಕೆಯಕಡೆ ನೋಡುವಂತೆ ನಟಿಸುತ್ತ ಕಾಲಹಾಕುತ್ತಿದ್ದ. ರೈಲು ಗಾಡಿಯನ್ನು ಬಿಟ್ಟು ಹೊರಗೆ ಬಂದೊಡನೆ ವಕೀಲರು ' ಟ್ಯಾಕ್ಸಿ'ಯನ್ನು ಗೊತ್ತುಮಾಡಬೇಕೆಂದು ಪಿಲಾಜಿಗೆ ಸೂಚನೆ ಇತ್ತರು. ಕಾಸು ಕಾಸಿಗೆ ಗಂಟು ಹಾಕುತ್ತ 'ಟ್ರಾಂ'ಗೂ ದುಡ್ಡನ್ನು ಕೊಡದೆ ಕಾಲನ್ನು ಸವೆಸುತ್ತಿದ್ದ ಮಾರವಾಡಿಯು ತನ್ನಲ್ಲಿಯೇ ಗೊಣಗಿಕೊಳ್ಳುತ್ತ ವಕೀಲರ ಅಪ್ಪಣೆಯನ್ನು ಪಾಲಿಸಿದ ಒಳಗೆ ಕುಳಿತಾಗ ಡ್ರೈವರನು ' ಎಲ್ಲಿಗೆ ?' ಎಂದು ಕೇಳಿದ. ವಕೀಲರು ಪಿಲಾಜಿಯನ್ನು ನೋಡಿ ' ಹೇಳಿ ' ಅಂದರು. ಬಡ ಪಿಲಾಜಿಯು '............ ರೋಡಿಗೆ !' ಅಂದ.

............ರೋಡಿಗೆ ಬಂದಮೇಲೆ ಡ್ರೈವರನು ಹಿಂತಿರುಗಿ ನೋಡಿದನು. ವಕೀಲರು ' ಇಲ್ಲೆ. ಇನ್ನೇನು ಸಿಕ್ಕಿತು.........ನಿಲ್ಲಿಸು ಅನ್ನಿ' ಎಂದು ಪಿಲಾಜಿಯನ್ನು ತಿವಿದರು. ಪಿಲಾಜಿಯು 'ಸಾಕು ನಿಲ್ಲಿಸು ' ಅಂದ. ಡ್ರೈವರನು ಮುಗುಳುನಗೆ

ಷಗುತ್ತ ಬ್ರೇಕನ್ನು ಒತ್ತಿದನು. ಒಡನೆಯೇ ಮೋಟಾರು ದೊಡ್ಡ ಮಹಡಿಯ ಮನೆಯೊಂದರ ಮುಂದೆ ನಿಂತಿತು. ಪ್ರಯಾಣಿಕರು ಇಳಿದರು ಮೋಟಾರಿನ ಮೀಟರು ಮೂರೇ ರೂಪಾಯಿಯನ್ನು ತೋರಿಸುತ್ತಿದ್ದರೂ ಡ್ರೈವರನು ಅದಕ್ಕೆ ತೃಪ್ತಿಪಡದೆ 'ಬಕ್ಷೀಸು' ಕೇಳಿದನು. ಪಿಲಾನಿಯು ಹೆಚ್ಚೊಂದು ಕಾಸಿಗೂ ಒಪ್ಪಲಿಲ್ಲ. ಡ್ರೈವರನು ಹಲ್ಲು ಕಿರಿಯುವುದನ್ನು ಬಿಡಲಿಲ್ಲ. ವಕೀಲರು ಮಧ್ಯಸ್ತಿಕೆ ಮಾಡಿ ನಾಲ್ಕು ರೂಪಾಯಿಗೆ ತೀರ್ಮಾನ ಮಾಡಿದರು. ಪಿಲಾನಿಯು ಸಂಕಟಪಡುತ್ತ ಪೀಕಿದನು.

ಮನೆಯ ಬಾಗಿಲನ್ನು ವಕೀಲರು ತಮ್ಮ ಕೋಲಿನಿಂದ ತಟ್ಟಿದ ಮೇಲೆ ಬಾಗಿಲು ತೆರೆಯಿತು. ವಕೀಲರು ಸಿಳ್ಳು ಹೊಡೆಯುತ್ತ ಒಳಹೊಕ್ಕರು. ಅನುಯಾಯಿಯು ಹಿಂಬಾಲಿಸಿದನು. ಮಾಮೂಲಿನಂತೆ ಆಗಂತುಕರಿಗೆ ಸುಸಜ್ಜಿತವಾದ ಕೋಣೆಯು ತೋರಿಸಲ್ಪಟ್ಟು, ಅಲ್ಲಿ ಅವರು ಸುಖಾಸೀನರಾದೊಡನೆ ಮುದಿ ಹೆಂಗಸು ಒಬ್ಬಳು ಪ್ರವೇಶಿಸಿ ವಕೀಲರನ್ನು ಗುರುತಿಸಿ, 'ವಕೀಲರು ದಯಮಾಡಿಸಿ ಬಹಳಕಾಲವಾಯಿತು' ಅಂದಳು. ವಕೀಲರು 'ಹುಂ ಹುಂ' ಅಂದು ನಸುನಕ್ಕರು. ಅವಳು ಮತ್ತೆ 'ಈಗಲೇ ಸಂಗೀತಕ್ಕೆ ಏರ್ಪಾಡಾಗುತ್ತದೆ; ತಮಗೆ....'ಎನ್ನುವಲ್ಲೇ ವಕೀಲರು ನಡುವೆ ಬಾಯಿಹಾಕಿ,

'ನಮಗೆ ಈಗಲೇ ಸಂಗೀತದ ಆಗತ್ಯವಿಲ್ಲ. ನಿಮ್ಮವರ ಪೈಕಿ ಚುರುಕಾದವಳೊಬ್ಬಳು ನಮ್ಮ ಜತೆ ಸ್ವಲ್ಪ ಹೊತ್ತು ಹೊರಕ್ಕೆ ಬರಬೇಕಾಗುತ್ತದೆ. ಸಾಧ್ಯವೆ?' ಎಂದರು.

ಹೆಂಗಸು ಕೊಂಚ ಅನುಮಾನಿಸುತ್ತ 'ಸಾಧ್ಯವಲ್ಲದೆ ಏನು ? ಆದರೆ........' ಎಂದಳು.

'ನೀವು ಏನೂ ಯೋಚನೆಯನ್ನು ಮಾಡಬೇಡಿ. ಎರಡು ಮೂರು ಗಂಟೆಯೊಳಗಾಗಿ ಅವಳನ್ನು ವಾಪಸು ಕರೆತಂದು ಬಿಡುತ್ತೇವೆ' ಅಂದು ವಕೀಲರು ಭರವಸೆಕೊಟ್ಟರು.

'ಸರಿ, ಅದನ್ನು ತಾವು ಹೇಳಬೇಕೆ ?'

ವಕೀಲರು ಹಳೆಯ ಗಿರಾಕಿಯಾದುದರಿಂದ ಹೆಂಗಸು ಒಪ್ಪದೆ ಇರುವುದಕ್ಕೆ ಕಾರಣವಿರಲಿಲ್ಲ. ಆದರೆ ಅವಳು ಈ ಸಂದರ್ಭವು ಏನೋ ವಿಶೇಷವಾದುದೆಂದು ಊಹಿಸಿ ತಕ್ಕಮಟ್ಟಿಗೆ ಸುಲಿಗೆ ಮಾಡುವ ಮನಸ್ಸಿನಿಂದ 'ಸರಿಯಾದ ಚಾಲೂಕಾದ ಹುಡುಕಿ ಬೇಕಾದರೆ ಚಾರ್ಜು ಹೆಚ್ಚಾಗುತ್ತದೆ' ಎಂದು ನಕ್ಕಳು.

'ಅಂದರೆ ಎಷ್ಟು ?' ವಕೀಲರು ಪ್ರಶ್ನಿಸಿದರು.

'ಮುನ್ನೂರು.'

ಪಿಲಾನಿಯ ಮೇಲೆ ಕಪ್ಪೆ ಬಿದ್ದಂತಾಯಿತು. ವಕೀಲರು ಮಾತ್ರ 'ಆಗಬಹುದು ಅದಕ್ಕೇನು, ಈ ನಮ್ಮ ಸ್ನೇಹಿತರು ಕೊಡುತ್ತಾರೆ. ಬಹಳ ಶ್ರೀಮಂತರು' ಎಂದು ಮುಗಿಸಿದರು. ಈಗಲಂತೂ ಪಿಲಾನಿಗೆ ಬರೆ ಎಳೆದಂತಾಯಿತು. ಆದರೆ ಬೇರೆ ಗತಿಯೇನು ? ಯಾತನೆಯನ್ನು ಸುಮ್ಮನೆ ಸಹಿಸಿದನು.

ಹೆಂಗಸು ಪಿಲಾನಿಯನ್ನು ನೋಡಿ ನಮಿಸಿ, ಮಂದಹಾಸವನ್ನು ಬೀರಿ, ಆಳನ್ನು ಕರೆದು,

'ಹೋಗು, ತಾಂಬೂಲ ತೆಗೆದುಕೊಂಡು ಬಾ' ಎಂದು, ಅವನು ಹೋಗುತ್ತಲೆ, 'ನಾನು ಈಗಲೇ ಹುಡುಗಿಯನ್ನು ಕಳುಹಿಸುತ್ತೇನೆ' ಅನ್ನುತ್ತ ಹೊರಟು ಹೋದಳು.

ತಾಂಬೂಲವು ಬಂದಿತು. ಜೊತೆಗೆ ಮದ್ಯದ ಸೀಸೆಗಳೂ ಬಟ್ಟಲುಗಳೂ ಇದ್ದುವು. ವಕೀಲರು ಸೀಸೆಯೊಂದರ ಬಿಗಡೆ ತೆಗೆದು ಎರಡು ಬಟ್ಟಲುಗಳಿಗೆ ಮದ್ಯವನ್ನು ಧಾರಾಳವಾಗಿ ಬಗ್ಗಿಸಿ, ಪಿಲಾನಿಗೆ ಒಂದನ್ನು ಕೊಡಹೋದರು. ಈಗ ಮಾತ್ರ ಪಿಲಾನಿಯು ಲಾಯರ ಸಲಹೆಯಂತೆ ನಡೆದುಕೊಳ್ಳಲಿಲ್ಲ. ತನಗೆ ಅದು ಸೇರದೆಂದು ತಲೆಯಾಡಿಸಿದನು. ವಕೀಲರು ನಕ್ಕು, 'ನೀವೇನೂ ಪ್ರಯೋಜನವಿಲ್ಲ !' ಎಂದು ತಮ್ಮದನ್ನೂ ಪಿಲಾನಿಯ ಭಾಗವನ್ನೂ ತಾವೇ ಮುಗಿಸಿ, ಮತ್ತೆ ಮತ್ತೆ ಇನ್ನಷ್ಟನ್ನು ಬಗ್ಗಿಸಿ ಕುಡಿದರು. ಅವರ ಮುಖವು ಹೆಚ್ಚು ಹೆಚ್ಚು ಕೆಂಪಾಗುತ್ತ ಬಂತು.

ಸೀಸೆಯು ಬರಿದಾಗುವ ಹೊತ್ತಿಗೆ ಕೈಬಳೆಗಳ ಸದ್ದೂ, ಜರಿಸೀರೆಯ "ಸರಸರ"ವೂ ಕೇಳಬಂದುವು. ಪರಿಮಳದ ಸುವಾಸನೆಯು ಮುಂದು ಹಾಯಿತು. ಇನ್ನು ಅರೆ ನಿಮಿಷದಲ್ಲಿ ಕೊಠಡಿಯೊಳಕ್ಕೆ ಸುಂದರಿಯೊಬ್ಬಳು ನಸುನಗುತ್ತ ಕಾಲನ್ನಿಟ್ಟಳು. ಇವಳ ರೂಪು, ಠೀವಿ, ಬಿಂಕ,ಗೆಲವು, ಉಡುಗೆತೊಡಿಗೆಗಳನ್ನು ನೋಡಿ ಹಳೆಗೈಯಾದ ವಕೀಲರೂ ಬೆರಗಾದರು. ಅವರ ಕಣ್ಣುಗಳು ಅರಳಿದವು, ಹೊಳೆದವು. ಪಿಲಾನಿಗಂತೂ ಹೃದಯವು ಬಾಯಿಗೆ ಬಂದಂತಾಯಿತು. ಎದೆಯು ಢವಢವನೆ ಬಡಿದುಕೊಳ್ಳಲಾರಂಭಿಸಿತು. ಇನ್ನು ಹುಡುಗಿಯಂತೂ ಬಿನ್ನಾಣದಿಂದ ಮುಂದೆ ಸಾರಿ ಆಗಂತುಕರ ಮಧ್ಯೆ ಬಂದು ಕುಳಿತಾಗ, ಪಿಲಾನಿಗೆ ಜೀವವೇ ಹಾರಿಹೋದಂತಾಯಿತು. ಅವನು ತನಗೆ ತಿಳಿಯದಂತೆಯೇ ಕೊಂಚ ದೂರ ಸರಿದುಕೊಂಡನು. ಇದಕ್ಕೆ ಪ್ರತಿಯಾಗಿ ವಕೀಲರು ಹಿಗ್ಗುತ್ತ ಅವಳ ಹತ್ತಿರಕ್ಕೆ ಸರಿದುಕೊಂಡರು ಮತ್ತು ಮತ್ತೊಂದು ಸೀಸೆಯನ್ನು ಒಡೆದು ಮದ್ಯವನ್ನು ಬಗ್ಗಿಸಿದರು. ಈಗ ವಕೀಲರು ತನ್ನ ಕೆಲಸವನ್ನು ಮರೆತಂತೆಯೇ ಪಿಲಾನಿಗೆ ಭಾಸವಾಯಿತು. ಅವನು ಹೇಗೋ ಧೈರ್ಯಮಾಡಿ, 'ವಕೀಲರೆ, ನಮ್ಮ ಕೆಲಸಕ್ಕೆ ಹೊತ್ತಾಗಲಿಲ್ಲವೆ ?' ಅಂದ.

ವಕೀಲರು 'ಹೌದು, ಆದರೆ ಟ್ಯಾಕ್ಸಿ ತರಬೇಕಲ್ಲ. ಇಲ್ಲಿ ಯಾರಿಗಾದರೂ ಹೇಳೋಣ. ಅಲ್ಲಿಯವರೆಗೆ........' ಅನ್ನುವಾಗ ಈ ಸಂದರ್ಭದಿಂದ ಪಾರಾಗುವ ಬಗೆಯನ್ನೇ ಯೋಚಿಸುತ್ತಿದ್ದ ಪಿಲಾನಿಯು 'ನಾನೇ ನೋಡಿಕೊಂಡು ಬರುತ್ತೇನೆ' ಎನ್ನುತ್ತ ಮೇಲೆದ್ದನು. ಟ್ಯಾಕ್ಸಿಯ ಬಾಡಿಗೆಯನ್ನು ಕಡಿಮೆಮಾಡುವುದೂ ಇದಕ್ಕೆ ಒಂದು ಕಾರಣ. ವಕೀಲರು 'ಆಗಬಹುದು ಹಾಗಾದರೆ' ಎಂದು ಬಹಳ ಸಂತೋಷದಿಂದ ಹೇಳಿ, 'ನೀವು ಬರುವ ಹೊತ್ತಿಗೆ ನಾವೂ ಸಿದ್ಧವಾಗಿರುತ್ತೇವೆ' ಎಂದು ಹುಡುಗಿಯನ್ನು ನೋಡುತ್ತ ಮುಗಿಸಿದರು. ಪಿಲಾನಿಯು ಹೊರಟನು. ಅವನ ಬೆನ್ನು ಕಾಣುತ್ತಲೇ ವಕೀಲರು ಸುಂದರಿಯನ್ನು ಸೆಳೆದು ಮುತ್ತಿಟ್ಟರು. ಅವಳು ಅವರ ಜೋಲು ಕೆನ್ನೆಗಳನ್ನು ಮೃದುವಾಗಿ ಚಿಗುಟಿದಳು.

ಪಿಲಾನಿಯು ವಾಪಸು ಬರುವ ಹೊತ್ತಿಗೆ ವಕೀಲರು ಹುಡುಗಿಯೊಂದಿಗೆ ಆಟಪಾಟಗಳನ್ನು ಮುಗಿಸಿದ್ದರು. ಮೂವರೂ ಟ್ಯಾಕ್ಸಿಯ ಹಿಂದಿನ ಆಸನದಲ್ಲಿ ಕುಳಿತಾಗ ವಕೀಲರು ಪಿಲಾನಿಯನ್ನು ಕುರಿತು 'ರಿಸರ್ವ್ ಬ್ಯಾಂಕಿಗೆ ಅಂತ ಹೇಳಿ' ಅಂದರು. ಪಿಲಾನಿಯು ಕೊಟ್ಟ ಅಪ್ಪಣೆಯಂತೆ ಮೋಟಾರು ಹೊರಟಿತು.

ಆ ದಿನ ರಿಸರ್ವ್ ಬ್ಯಾಂಕಿನ ಭವ್ಯ ಮಂದಿರದಲ್ಲಿ ಮತ್ತು ಸುತ್ತುಮುತ್ತು ಗಲಾಟೆಯು ಹೇಳತೀರದು. ರಸ್ತೆಯ ಅಕ್ಕಪಕ್ಕಗಳಲ್ಲಿ ನೂರಾರು ಮೋಟಾರು ವಾಹನಗಳು ಸಾಲಾಗಿ ನಿಂತಿದ್ದುವು. ಜನರು ಸಾಲಾಗಿ ಒಳಗೆ ಎಲ್ಲಿಂದಲೋ ಮೊದಲಾಗಿ ಹೊರಗೆ ಬೀದಿಗೂ ಹರಿದು ಅಲ್ಲೂ ಸಾಲು ನಿಂತಿದ್ದರು. ಅಲ್ಲದೆ ಈ ಸಾಲಿಗೂ ಇನ್ನೂ ಜನರು ಬಂದು ಬಂದು ಭರ್ತಿಯಾಗುತ್ತಲೇ ಇದ್ದರು. ಎಷ್ಟೋ ಜನರು ಬೆಳಗಿನ ಜಾವ, ಮಧ್ಯರಾತ್ರಿಯಿಂದಲೂ ಮುಂದಿನ ಜಾಗಕ್ಕಾಗಿ ಕಾದಿದ್ದರು. ಇವರ ಪೈಕಿ ಎಷ್ಟೋ ಜನ ಭಯ್ಯಾಗಳು ದುಡ್ಡಿಲ್ಲದಿದ್ದರೂ ಹಿಂದಿನ ಸಂಜೆಯಿಂದ ಅಲ್ಲೇ ಮಲಗಿದ್ದು ಮುಂದಿನ ಜಾಗವನ್ನು ಗಳಿಸಿದ್ದರು. ಇವರ ಏಜೆಂಟು ಒಬ್ಬನು ಅಲ್ಲಲ್ಲಿ ಸುಳಿದಾಡಿ ಮುಂದಿನ ಸ್ಥಳ ಸಂಪಾದಿಸಲು ಆತುರರಾಗಿರುವವರಿಂದ ಹತ್ತು ಹತ್ತು ರೂಪಾಯಿ ವಸೂಲುಮಾಡಿ, ಆ ಭಯ್ಯಾಗಳ ಸ್ಥಳಗಳನ್ನು ಕೊಡಿಸುತ್ತಿದ್ದನು. ಈ ಹಣ ಶಾಸನದ ಪರಿಣಾಮವಾಗಿ ಹುಟ್ಟಿದ ಅನೇಕ ಕಳ್ಳ ವ್ಯಾಪಾರಗಳಲ್ಲಿ ಇದೂ ಒಂದು. ಸಾಲು ಜನರು ಒಬ್ಬರನ್ನೊಬ್ಬರು ಒತ್ತಿ ನಿಂತಿದ್ದರು. ಅವರ ಮೊಗಗಳಲ್ಲಿ ಭಯ ಆತಂಕ ಆತುರಗಳು ಎದ್ದು ಕಾಣುತ್ತಿದ್ದವು. ಕೆಲವರ ಆತುರದಿಂದ ಒತ್ತಡವು ಜಾಸ್ತಿಯಾಗಿ ಜನರು ಬೀಳುವಂತಾಗುತ್ತಿದ್ದರು. ಆಗ ಮಧ್ಯೆ ಮಧ್ಯೆ ವಾಗ್ವಾದಗಳೂ ಕೇಳಿಬರುತ್ತಿದ್ದುವು. ಕೈ ಕೈಗೆ ಹತ್ತಿಕೊಳ್ಳದಂತೆ, ಸಾಲಿನ ನೀತಿಯು ಹಾಳಾಗದಂತೆ, ಜನರ ನಡವಳಿಕೆಯು ಕೆಡದಂತೆ ನೋಡಿಕೊಳ್ಳಲು ದೊಡ್ಡ ನೀಲಿ ಅಂಗಿ, ಹಳದಿ ರುಮಾಲಿನ ಪೋಲೀಸು ದಳವು ಹಾಜರಿದ್ದಿತು. ಈ 'ಅಧಿಕಾರಿ'ಗಳು ಆಗಾಗ

ಚೀರಾಡುತ್ತ ಅಲ್ಲಿ ಇಲ್ಲಿ ಜನರನ್ನು ತಳ್ಳುತ್ತ ಎಳೆಯುತ್ತ ತಮ್ಮ ಕೆಲಸವನ್ನು ಸಾಗಿಸುತ್ತಿದ್ದರು. ಹಾಗೂ ತಮ್ಮ ಮಾತಿಗೆ ಜಗ್ಗದ ಜನರನ್ನು ಎಳೆದೊಯ್ದು ಅಲ್ಲಿಯೇ ಓಡಾಡುತ್ತಿದ್ದ ಬಿಳಿಯ ಸೂಟು ಹ್ಯಾಟಿನ ಆಂಗ್ಲೊ ಇಂಡಿಯನ್ ಅಧಿಕಾರಿಯ ತೀರ್ಮಾನಕ್ಕೆ ಒಳಗು ಮಾಡುತ್ತಿದ್ದರು. ಈವರೆಗಾಗಲೇ ಎಷ್ಟೋ ಮೊಕದ್ದಮೆಗಳು ದಾಖಲಾಗಿದ್ದುವು, ಆಗುತ್ತಲೂ ಇದ್ದುವು. ಹಾಗೆಯೇ ಅಷ್ಟು ಇಷ್ಟನ್ನು ಪೋಲೀಸರಿಗೆ ತೆತ್ತಮೇಲೆ ಅಲ್ಲಿಯೇ ಆಗಲೇ ಮೊಕದ್ದಮೆಗಳು ಖುಲಾಸೆಯಾಗುತ್ತಲೂ ಇದ್ದುವು.

ಈ ರಂಗಸ್ಥಳಕ್ಕೆ ನಮ್ಮವರ ಟ್ಯಾಕ್ಸಿಯು ಬಂದು ನಿಂತಿತು. ವಕೀಲರು ಹುಡುಗಿಗೆ ಒಂದು ಕಾಗದವನ್ನು ಕೊಟ್ಟು, ಪಿಲಾನಿಗೆ 'ನಿಮ್ಮ ನೋಟಿನ ಪಿಂಡಿಯನ್ನು ಇವಳಿಗೆ ಕೊಟ್ಟುಬಿಡಿ' ಅಂದರು. ಈವರೆಗೆ ವಕೀಲರ ಉಪಾಯವನ್ನು ಪಿಲಾನಿಯು ಊಹಿಸಿದ್ದನಾದರೂ ಇಪ್ಪತ್ತೈದು ಸಾವಿರ ರೂಪಾಯಿನ ಪಿಂಡಿಯನ್ನು ಸೂಳೆಯೊಬ್ಬಳಿಗೆ ಕೊಟ್ಟುಬಿಡಲು ಅವನ ಮನಸ್ಸು ಹಿಂದೆಗೆಯಿತು. ಅವನು ಕೊಂಚ ಅನುಮಾನಿಸಿದನು. ವಕೀಲರು ಇದನ್ನು ಕಂಡು, 'ಏನು ಅನುಮಾನಿಸುತ್ತೀರಿ ? ಹಾಗೆ ಮಾಡದೆ ವಿಧಿಯಿಲ್ಲ. ನಿಮ್ಮ ಹಣವು ಉಳಿಯಬೇಕಾದರೆ ಇವಳ ಮೂಲಕವೇ. ನಾನೂ ನೀವೂ ಇದರ ಸಂಪಾದನೆಯ ಬಗ್ಗೆ ಏನು ಹೇಳಲು ಸಾಧ್ಯ ?' ಎಂದು ಪಿಸುಮಾತಿನಲ್ಲಿ ಹೇಳಿದರು. ಪಿಲಾನಿಯು ನೋಟಿನ ಪಿಂಡಿಯನ್ನು ಹುಡುಗಿಗೆ ಒಪ್ಪಿಸಿದಾಗ ಪ್ರಪಂಚವನ್ನೇ ಕಳೆದುಕೊಂಡವನಂತೆ ಕಂಡನು. ಅವಳಾದರೋ ಪ್ರಪಂಚದ ಪಟ್ಟವೇ ತನಗಾಯಿತೋ ಎನ್ನುವಂತೆ ಹಿಗ್ಗುತ್ತ ಅದನ್ನು ತೆಗೆದುಕೊಂಡು ತನ್ನ ಚರ್ಮದ ಕೈಚೀಲಕ್ಕೆ ಸೇರಿಸಿದಳು. ಅವಳು ಮೋಟಾರಿನಿಂದ ಇಳಿಯುವಾಗ ವಕೀಲರು 'ನಾನು ಹೇಳಿದ್ದೆಲ್ಲ ನೆನಪಿದೆಯೋ—ಹೇಗೆ?' ಎಂದು ಕೇಳಿದರು. ಅದಕ್ಕೆ ಅವಳು 'ಓಹೋ, ಎಲ್ಲಾ ಗೊತ್ತಿದೆ. ಜಯಿಸಿಕೊಂಡು ಬರುತ್ತೇನೆ. ನೋಡುತ್ತಿರಿ' ಅಂದಳು. ವಕೀಲರು ನಗುತ್ತಾ 'ನೋಡಿದಿರಾ ಹೇಗಿದೆ ?' ಎಂದು ಪಿಲಾನಿಯನ್ನು ತಿವಿದರು. ಪಿಲಾನಿಗೆ ಮಾತನಾಡಲು ತ್ರಾಣವಿರದೆ ಕ್ಷೀಣವಾಗಿ ನಸುನಗೆಯನ್ನು ತೋರ್ಪಡಿಸಿದನು.

ಹೆಂಗಸರ ಸಾಲು ಸಣ್ಣದಾಗಿದ್ದು ಹುಡುಗಿಯು ಬ್ಯಾಂಕಿನ ಒಳಗೆ ಹೋದಳು. ವಕೀಲರೂ ಕಕ್ಷಿಗಳೂ ಹಿಂಬಾಲಿಸಿದರು. ಹುಡುಗಿಯ ಸರದಿಯು ಬರುವುದಕ್ಕೆ ಕೊಂಚ ಕಾಲ ಹಿಡಿಯಿತು. ಇಷ್ಟು ಹೊತ್ತೂ ಪಿಲಾನಿಯು ತಳಮಳಿಸುತ್ತಿದ್ದನು. ಕಡೆಗೆ ಅವಳು ಭರ್ತಿಯಾಗಿದ್ದ ಕಾಗದವನ್ನು ನೌಕರನಿಗೆ ಕೊಟ್ಟಾಗಲಂತು ಪಿಲಾನಿಯು ಅಂಗುಷ್ಠದ ಮೇಲೆ ನಿಂತು ನೋಡುತ್ತಿದ್ದನು. ಹುಡುಗಿಯು ಕೊಟ್ಟ ಕಾಗದವನ್ನು ನೌಕರನು ಸ್ವಲ್ಪ ಓದಿದವನೆ, ಆಶ್ಚರ್ಯದಿಂದ ಕತ್ತೆತ್ತಿ ಹುಡುಗಿಯ ಕಡೆಗೆ ನೋಡಿ

ನಸುನಕ್ಕನು. ಮತ್ತೆ ನಿಧಾನವಾಗಿ ಓದಿ, ಏನೋ ತೊಡಕಿಗೆ ಸಿಕ್ಕಿದವನಂತಾಗಿ ಬ್ಯಾಂಕಿನ ಆಳನ್ನು ಕರೆದು ಕಾಗದವನ್ನು ಕೊಟ್ಟು, ಅವನಿಗೆ ಹುಡುಗಿಯನ್ನು ತೋರಿಸಿ, 'ಇವರನ್ನು ಸಾಹೇಬರ ಬಳಿಗೆ ಕರೆದುಕೊಂಡು ಹೋಗು' ಎಂದು ಹೇಳಿದನು. ಹುಡುಗಿಯು ಆಳನ್ನು ಹಿಂಬಾಲಿಸಿ ಒಳಗೆ ಸಾಹೇಬರ ಬಳಿಗೆ ಹೋದಳು. ಇದನ್ನು ಕಂಡು ಪಿಲಾನಿಗೆ ಬಾಯಿ ಒಣಗಹತ್ತಿತು.

ಸಾಹೇಬರು ಹುಡುಗಿಯನ್ನು ಕುಳಿತುಕೊಳ್ಳುವಂತೆ ಹೇಳಿ ಕಾಗದವನ್ನು ಪರೀಕ್ಷಿಸಲು ಮೊದಲು ಮಾಡಿದರು. ಹುಡುಗಿಯು ದಿಟ್ಟವಾಗಿ ಕುರ್ಚಿಯಲ್ಲಿ ಕುಳಿತು ಪಾಟೀ ಸವಾಲಿಗೆ ಸಿದ್ಧವಾಗಿದ್ದಳು. ಅಧಿಕಾರಿಯೂ ಕೊಂಚ ಓದಿದವನೆ, ಹುಡುಗಿಯ ಕಡೆಗೆ ಕಣ್ಣನ್ನು ಹೊರಳಿಸಿ ನಸುನಕ್ಕು, ಮುಂದೆ ಓದಿಕೊಂಡನು. ಮುಗಿದ ಮೇಲೆ ಏನನ್ನೋ ಯೋಚಿಸುತ್ತ ನಸುನಗುತ್ತ ತಲೆಯಾಡಿಸುತ್ತ ಮೇಜಿನ ಮೇಲೆ ಬೆರಳಿನಿಂದ ತಬಲಾ ಬಡಿಯುತ್ತ ಒಂದೆರಡು ನಿಮಿಷವನ್ನು ಕಳೆದನು. ಅನಂತರ ತಲೆಯನ್ನು ಕೆರೆದುಕೊಂಡನು. ಹುಬ್ಬು ಗಂಟಿಕ್ಕಿ ನೋಡಿದನು. ಕಡೆಗೆ ಹುಡುಗಿಯನ್ನು ಪ್ರಶ್ನಿಸಿದನು.

'ನಿಮಗೆ ಇಂಗ್ಲೀಷನ್ನು ಬರೆಯಲು ಬರುವುದಿಲ್ಲ, ಅಲ್ಲವೆ ?'

'ಹೌದು.'

'ಇದನ್ನು ಯಾರು ಬರೆದವರು ?'

'ನಿನ್ನೆ ಬಂದವರೊಬ್ಬರಿಂದ ಬರೆಯಿಸಿದ್ದೇನೆ.'

'ಎಷ್ಟು ವರ್ಷದಿಂದ ಹೀಗೆ....ಆ....'

'ನಾಲ್ಕು ವರ್ಷದಿಂದ.' ಹುಡುಗಿಯು ತಿಳಿದು ಉತ್ತರವನ್ನು ಹೇಳಿದಳು.

'ಸರಾಸರಿ ದಿನಕ್ಕೆ ಎಷ್ಟು ಸಂಪಾದನೆ ಆಗುತ್ತದೆ ?'

'ಅದನ್ನು ಹೇಗೆ ಹೇಳುವುದು? ಅವೆಲ್ಲ ದಾತೃಗಳು ಇದ್ದಹಾಗೆ, ಬಂದಹಾಗೆ. ಹತ್ತರಿಂದ ಸಾವಿರಕ್ಕೂ ಮೀರಿ ಹಣ ಕೊಡುವವರಿರುತ್ತಾರೆ....'

'ಓ, ಸರಿ. ಸರಿ.' ಅಧಿಕಾರಿಯು ಕೊಂಚಹೊತ್ತು ಸುಮ್ಮನಾದನು. ಅನಂತರ ಮತ್ತೆ ಯೋಚಿಸಿ ಕೇಳಿದನು.

'ಹಾಗಾದರೆ ನಿಮ್ಮ ಹತ್ತಿರ ಈಗ ನೀವು ತಂದಿರುವುದಕ್ಕೂ ಮೀರಿ ಹಣ ಕೂಡಿರಬೇಕಲ್ಲವೆ ?'

'ನಮ್ಮ ಬಳಿಗೆ ಹಣ ಬರುವಹಾಗೇ ಕರ್ಚೂ ಆಗುತ್ತದೆ.'

'ಆದರೆ ಇದು ?'

'ಇಷ್ಟು ಎಷ್ಟೋ ಬಾರಿ ಕೂಡಿ ಕರ್ಚಾಗಿದೆ. ಈಗ ಮಾತ್ರ ಇದನ್ನು ಬದಲಾಯಿಸಬೇಕಾಗಿದೆ.'

'ಹೋ, ಹಾಗೋ.'

ಮತ್ತಷ್ಟು ಕಾಲ ಮೌನ. ಆ ಮೇಲೆ ಮತ್ತೊಂದು ಪ್ರಶ್ನೆ.

'ನೀವು ಈ ಆದಾಯಕ್ಕೆಲ್ಲ ಲೆಕ್ಕ........'

'ನಾವೇನು ಹಣಕ್ಕೆ ರಸೀದಿ ಕೊಡುತ್ತೇವೊ ? ಕೊಡಬೇಕೊ ? ನಮಗೆಲ್ಲಿ ಲೆಕ್ಕಪಕ್ಕದ........'

'ಹೂಂ, ಹೂಂ. ಸರಿ.'

ಅಧಿಕಾರಿಯು ಮತ್ತೆ ಯೋಚಿಸಿದನು. ಏನೂ ಫಲವಾದಂತೆ ಕಾಣಲಿಲ್ಲ. ಈ ಅಸಹಾಯತೆಯೋ, ದಾಕ್ಷಿಣ್ಯವೋ, 'Chivalry'ಯೋ' ದೌರ್ಬಲ್ಯವೋ, ಹೇಗೋ ಅಂತೂ ಕಡೆಗೆ ಒಂದು ಚೀಟಿಯನ್ನು ಗೀಚಿ ಆಳನ್ನು ಕರೆದು ಅದನ್ನು ಕೊಟ್ಟು, ಹುಡುಗಿಯನ್ನು ನೋಡಿ, 'ನೀವಿನ್ನು ಹೋಗಿ ಹಣ ಬದಲಾಯಿಸಿಕೊಳ್ಳಬಹುದು' ಎಂದನು.

ಹುಡುಗಿಯು ಸಂಭ್ರಮದಿಂದ ಸಾವಿರದ ನೋಟುಗಳನ್ನು ನೂರರದಕ್ಕೆ ಬದಲಾಯಿಸಿಕೊಳ್ಳುತ್ತಿರುವಾಗ ಪಿಲಾನಿಗೆ ಉಕ್ಕಿದ ಸಂತೋಷವನ್ನು ಹೇಳತೀರದು ವಕೀಲರೂ ಹಿಗ್ಗುತ್ತ, 'ನೋಡಿದಿರೊ ಹೇಗಿದೆ ನನ್ನ ಬುದ್ಧಿ !' ಎಂದು ಪಿಸು ಮಾತಿನಲ್ಲಿ ಹೇಳಿದರು. ಹುಡುಗಿಯು ನೋಟುಗಳನ್ನು ಜೋಡಿಸಿಕೊಂಡು ಚೀಲಕ್ಕೆ ಸೇರಿಸಿಕೊಂಡು ಹತ್ತಿರಕ್ಕೆ ಬಂದೊಡನೆ ಪಿಲಾನಿಯು ಆತುರವನ್ನು ತಡೆಯಲಾರದೆ ಅವಳಲ್ಲಿಗೆ ಹಾರಿ ಕೈ ನೀಡಿದನು. ಆ ಸಮಯಕ್ಕೆ ವಿಧಿಯು ಕಾದಿಟ್ಟ ದೊಡ್ಡ ಪೆಟ್ಟು ಈಗ ಅವನಿಗೆ ತಗುಲಿತು. ಹುಡುಗಿಯು ಹಣವನ್ನು ಕೊಡುವುದರ ಬದಲು ಸುಮ್ಮನೆ ಗಂಭೀರವಾಗಿ ಕತ್ತನ್ನೆತ್ತಿ, 'ನೀವು ಯಾರು ? ನನ್ನಿಂದ ಏನಾಗಬೇಕು' ಎಂದು ಕೇಳಿಬಿಟ್ಟಳು !

ಈ ಮಾತುಗಳು ಕಿವಿಯನ್ನು ಮುಟ್ಟಿದೊಡನೆ ಪಿಲಾನಿಯ ಎದೆ ಹಾರಿತು. ಅವನು ತತ್ತರಿಸಿದನು. ವಕೀಲರೂ ಬೆರಗಾಗಿ 'ಓಹೋ, ಕೈಕೊಟ್ಟಳು !' ಅಂದುಕೊಂಡರು. ಇದಕ್ಕೆ ಉಪಾಯವನ್ನು ಕಂಡುಹಿಡಿಯಲು ಅವರ ಮಿದುಳಿನಲ್ಲಿ ತಳಮಳವು ಮೊದಲಾಗಿ ಮುಗಿಯುವುದರಲ್ಲೇ ಪಿಲಾನಿಯು ತಲ್ಲಣದಿಂದ ಚೇತರಿಸಿಕೊಂಡು 'ನನ್ನ ಹಣ ! ನನ್ನ ಹಣ !' ಎಂದು ಹುಚ್ಚನಂತೆ ಚೀರುತ್ತ ಹುಡುಗಿಯ ಕೈಹಿಡಿದುಕೊಂಡನು. ಹುಡುಗಿಯು 'ಅಯ್ಯೋ ! ಅಯ್ಯೋ !' ಎಂದು ಕೂಗಿಕೊಂಡಳು. ಕೆಲವು ಜನರು ಸುತ್ತುಗಟ್ಟಿದರು. ಪೋಲೀಸನವರೂ ಬಂದು

'ಬದ್ಮಾಷ್ !' ಎನ್ನುತ್ತ ಪಿಲಾನಿಯ ಹೆಗಲಮೇಲೆ ಕೈಹಾಕಿ ಹಿಂದಕ್ಕೆಳೆದರು. ಪಿಲಾನಿಯ ಕೈ ಹುಡುಗಿಯ ಕೈಬಿಟ್ಟಿತು. ಅವಳು ಪೋಲೀಸನವನನ್ನು ಕುರಿತು, 'ನೋಡಿ ಇವನು ನನ್ನ ದರೋಡೆ ಮಾಡೋಕೆ ಹವಣಿಸಿದ್ದ' ಅಂದಳು. ಪಿಲಾನಿಯು 'ಅಲ್ಲ. ಅಲ್ಲ. ನನ್ನ ಹಣ !' ಅಂದನು. ಅವಳು 'ಅಲ್ಲ. ಇದು ನನ್ನದು' ಅಂದಳು. ಪಿಲಾನಿಯು 'ಇವಳ ಮಾತನ್ನು ನಂಬಬೇಡಿ. ಇವಳು ಸೂಳೆ' ಎಂದನು. ಈ ಗಲಭೆಯಲ್ಲಿ ಹುಡುಗಿಯು ಚಮತ್ಕಾರದಿಂದ ಪೋಲೀಸನವನ ಕೈಗೆ ಹಿಂಬಾಗದಿಂದ ಏನನ್ನೋ ಕೊಟ್ಟಳು. ಪೋಲೀಸನವನು ಹುಡುಗಿಯನ್ನು ನೋಡಿ ನಗುತ್ತ ಪಿಲಾನಿಯ ಕಡೆ ತಿರುಗಿ, 'ಹಣ ನಿನ್ನದಾಗಿದ್ದಿರಬಹುದು. ಆದರೆ ಅವಳಿಗೇನು ಬಿಟ್ಟಿ ಕೊಟ್ಟಿಯೊ?' ಅಂದನು. ಜನಗಳ ಪೈಕಿ ಒಬ್ಬನು 'ಸುಖಪಡಲಿಲ್ಲವೇ ?' ಅಂದ. ಎಲ್ಲರೂ ಗೊಳ್ಳೆಂದು ನಕ್ಕರು. ಇನ್ನೊಬ್ಬ 'ಸೂಳೆಗೆ ಕೊಟ್ಟ ಕಾಸು ಹಾಳಾದ ಹಾಗೇ. ಅದಕ್ಕೆಲ್ಲಿಯ ಲೆಕ್ಕ ?' ಅಂದ. ಜನರು ಮತ್ತೂ ನಕ್ಕರು. ಮತ್ತೊಬ್ಬನು 'ಈಗ ಹಣವಂತೂ ದೊಡ್ಡ ನೋಟಾಗಿದ್ದರೆ ಸಿಕ್ಕದವರಿಗೇ ಶೀರುಂಡೆ–ಅದೇ ಕಾನೂನು' ಅಂದ.

ಪಿಲಾನಿಯು ಎಚ್ಚೆತ್ತು ಪೆಚ್ಚಾದನು. ಅವನಿಗೂ ಇದೆಲ್ಲವೂ ಗೊತ್ತಿದ್ದಿತು. ಮಾಡುವುದು ಏನೂ ಅವನಿಗೆ ತೋಚಲಿಲ್ಲ. ಪೋಲೀಸನವನು ಮೂರನೆಯ ಬಾರಿ 'ಹುಂ. ನಡಿ ಸಾಹೇಬರ ಬಳಿಗೆ' ಎಂದನು. ಪಿಲಾನಿಯು ಏನನ್ನೋ ಹೇಳಲು ಹೊರಟನು. ಆದರೆ ಪೋಲೀಸಿನವನು ಕೇಳದೆ, 'ಹೇಳುವುದು ಏನಿದ್ದರೂ ಅವರಿಗೆ ಹೇಳು' ಎಂದು ಮೆಲ್ಲಗೆ ಮುಂದಕ್ಕೆ ತಳ್ಳಿದನು. ಪಿಲಾನಿಯು ಹಿಂದಕ್ಕೆ ನೋಡುತ್ತ 'ಅವಳು........ಅವಳು' ಎಂದನು. ಪೋಲೀಸಿನವನು 'ಅವಳೇನು ಮಾಡಿದ್ದಾಳೆ ? ಗಲಭೆಗೆ ಕಾರಣ ನೀನು. ಇನ್ನೇಕೆ ? ನಾನೇ ನೋಡಿದೆನಲ್ಲ. ನೀನು ಕೈಮಾಡಿದ್ದು' ಅಂದನು. ಗುಂಪಿನಲ್ಲಿ ಯಾರೋ 'ಸೇಟರೆ, ಆ ಮೇಲೆ ಹೋಗುವಿರಂತೆ ಅವಳ ಬಳಿಗೆ. ಹಳೆಯ ಪರಿಚಯ ತಾನೆ. ಈಗ ಹೋಗಿ ಮೊದಲು ಪೋಲೀಸಿಗೆ ದಾಖಲಾಗಿ' ಅಂದರು. ಎಲ್ಲರೂ ನಕ್ಕರು. ಪೋಲೀಸನವನು ಹಿಂದೆ ಹಿಂದೆ ಉಳಿಯುತ್ತಿದ್ದ ಪಿಲಾನಿಯನ್ನು ಬಲವಂತದಿಂದ ಕರೆದೊಯ್ದನು.

ಇಲ್ಲಿಯವರೆಗೆ ಮರ್ಯಾದೆಗೆ ಕಟ್ಟುಬಿದ್ದು, ಈ ನಾಟಕದಲ್ಲಿ ಭಾಗವಹಿಸಿ ಜನರ ಗಮನಕ್ಕೆ ಬರಲು ಇಷ್ಟವಿಲ್ಲದೆ ಹಿಂದೆಯೇ ನಿಂತಿದ್ದ ವಕೀಲರು ,ಈಗ ತಮ್ಮ ಅಪಾಯವನ್ನು ತಿಳಿದರು. ಪಿಲಾನಿಯು ಪೋಲೀಸು ಅಧಿಕಾರಿಗೆ ನಿಜವೆಲ್ಲವನ್ನೂ ಹೇಳಿದರೆ ತಮಗೂ ಪೀಕಲಾಟ ಬರುವುದೆಂದು ನೆನೆಸಿ ಪಿಲಾನಿಯ ಕಡೆಗೆ ಸಾಗುತ್ತ ಮೆಲ್ಲನೆ ಹುಡುಗಿಯ ಕಡೆಗೆ ಹೋಗಿ, ಸಮಯೋಚಿತವಾದ ಕಡೆಯ ಉಪಾಯನ್ನು ಹೂಡಿ ಪಿಸುಮಾತಿನಲ್ಲಿ 'ನನಗೆ ಗೊತ್ತಾಯಿತು, ನೀನು ಯೋಚಿಸಬೇಡ. ನಾನು ಎಲ್ಲವನ್ನೂ ಸರಿಪಡಿಸುತ್ತೇನೆ. ನೀನು ಹೊರಗೇ ಕಾದಿರು. ಇವನನ್ನು ಬಿಡಿಸಿಕೊಂಡು

ಈಗಲೇ ಬರುತ್ತೇನೆ' ಎಂದು ಸಮಾಧಾನ ಹೇಳಿ ಹೆಚ್ಚು ಮುಖ್ಯವಾದ ಕೆಲಸವನ್ನು ಗಮನಿಸಲು ಧಾವಿಸಿ ಹೋದರು.

ವಕೀಲರು ಹಾಗೆ ತಿರುಗುತ್ತಲೇ ಹುಡುಗಿಯು ಹೊರಕ್ಕೆ ಬಂದು ಟ್ಯಾಕ್ಸಿಯೊಂದನ್ನು ಕರೆದು 'ಬೋರಿಬಂದರ್' ಅಂದಳು. ಗಾಡಿಯು ವಿಕ್ಟೋರಿಯಾ ಟರ್ಮಿನಸ್ಸಿಗೆ ನಡೆಯಿತು. ಅಲ್ಲಿ ಮಧ್ಯಾಹ್ನ ಒಂದೂಮುಕ್ಕಾಲಿಗೆ ಹೊರಡುವ ಮದ್ರಾಸು ಮೇಯಿಲು ಗಾಡಿಯು ತಯಾರಾಗಿ ನಿಂತಿದ್ದಿತು. ಇನ್ನು ಹದಿನೈದು ನಿಮಿಷಗಳು ಮಾತ್ರ ಕಾಲವು ಉಳಿದಿದ್ದಿತು. ಹುಡುಗಿಯು ಮೊದಲು ಎರಡನೆಯ ತರಗತಿಯ ಬುಕಿಂಗ್ ಕಚೇರಿಗೆ ಹೋಗಿ, ಬುಕಿಂಗ್ ಗುಮಾಸ್ತನನ್ನು ಕಂಡು 'ನನಗೆ ಮದರಾಸಿಗೆ ಒಂದು ಟಿಕೀಟು ಬೇಕಾಗಿದೆ. ಬಹಳ ತುರ್ತು' ಅಂದಳು. ಅವನುಅವಳನ್ನು ಕೆಳಗಿನಿಂದ ಮೇಲಿನವರೆಗೆ ನೋಡಿ 'ಯಾವ ದಿನಕ್ಕೆ ?' ಅಂದ.

'ಈಗಿನ ರೈಲಿಗೆ.'

'ಈ ದಿನಕ್ಕೆ ಎಲ್ಲಾ ಬುಕ್ಕಾಗಿದೆ. ಖಾಲಿಯಿಲ್ಲ, ಹೊತ್ತೂ ಇಲ್ಲ, ಎಂಟು ದಿನ ಮುಂಗಡವಾಗಿ ಬುಕ್ ಮಾಡಬೇಕು' ಬಹಳ ದರ್ಪದಿಂದ ಹೇಳಿದನು.

'ಇರಬಹುದು. ಆದರೆ ನನ್ನ ಸಂದರ್ಭ ಬಹಳ ಮುಖ್ಯ ಹೋಗಲೇಬೇಕು. ಹೇಗಾದರೂ ಮಾಡಿ ನನಗೆ ಸ್ಥಳವನ್ನು ದೊರಕಿಸಿ ಕೊಟ್ಟರೆ ನಾನೂ ನೀವು ಕೇಳುವ ಸಹಾಯವನ್ನು ಮಾಡಬಲ್ಲೆ' ಎಂದು ಪಿಸುಮಾತಿನಲ್ಲಿ ಹೇಳಿ ಹುಡುಗಿಯು ಕಣ್ಣು ಮಿಟುಕಿಸಿ ನೂರರ ನೋಟು ಒಂದನ್ನು ತೋರಿಸಿದಳು. ಅದನ್ನು ನೋಡಿದೊಡನೆ ಗುಮಾಸ್ತನ ನಡೆವಳಿಕೆಯು ಬದಲಾಯಿಸಿತು. ಒಡನೆಯೇ ಅವನು ಹೊಸ ಜೀವ ಪಡೆದವನಂತೆ ಚಟುವಟಿಕೆಯನ್ನು ತೋರಿಸುತ್ತ, 'ನೀವು ಇಲ್ಲಿರಿ. ನಾನು ನನ್ನ ಕೈಲಾದುದನ್ನು ಮಾಡುತ್ತೇನೆ' ಅಂದು ಹೊರಗೆ ಹೋಗಿ, ಅವರಿವರೊಡನೆ ಮಾತಾಡಿ ಏರ್ಪಡಿಸಿ, ಮತ್ತೆ ಬಂದು, 'ನೋಡಿ ಫಸ್ಟು ಕ್ಲಾಸಿನಲ್ಲಿ ಮಾತ್ರ ಒಂದು ಜಾಗವನ್ನು ಒದಗಿಸಬಹುದು. ಅದೂ ಬಹು ಕಷ್ಟದಿಂದ ಸಾಧ್ಯವಾಯಿತು' ಅಂದನು. ಹುಡುಗಿಯು 'ಹಾಗೆಯೇ ಆಗಲಿ. ಬಹಳ ಉಪಕಾರವಾಯಿತು' ಎಂದು ದರವನ್ನು ಕೇಳಿ ಜತೆಗೆ ಒಂದು ನೂರರ ನೋಟನ್ನು ಸೇರಿಸಿ ಕೊಟ್ಟಳು. ಟಿಕೀಟು ಸಿಕ್ಕಿತು. ನೌಕರನೊಬ್ಬನು ಅವಳನ್ನು ಕರೆದುಕೊಂಡು ಹೋಗಿ ಸ್ಥಳವನ್ನು ತೋರಿಸಿದನು. ಆಗಲೇ 'ರಿಸರ್ವ್' ಚೀಟಿಯಲ್ಲಿ ಅವಳ ಹೆಸರು ಬರೆಯಲ್ಪಟ್ಟಿತು. ಹುಡುಗಿಯು ಹತ್ತಿದ ಎರಡು ನಿಮಿಷದೊಳಗಾಗಿ ಗಾಡಿಯು ಹೊರಟಿತು. ಅವಳು ಮೆತ್ತೆಯ ಮೇಲೆ ಆರಾಮವಾಗಿ ಮಲಗಿಕೊಂಡು, ತನ್ನಲ್ಲೇ ತಾನು 'ಇದು ಶಿವನ ಪ್ರಸಾದವೇ ಸರಿ. ಅವನನ್ನು ಮಾತ್ರ ವಂಚಿಸುವುದಿಲ್ಲ. ಇನ್ನಾದರೂ ಮಾನವಾಗಿ ಬಾಳಲು ಅವನೇ ಸಹಾಯ ಮಾಡಿದ್ದಾನೆ. ಹಾಳು ಸೂಳೆಗಾರಿಕೆ ಸಾಕಾಯಿತು. ಈ ಕೆಟ್ಟ

ಜಾಗದಿಂದ ಆದಷ್ಟು ದೂರ ದೂರ ಹೋಗಿಬಿಡಬೇಕು' ಅಂದುಕೊಂಡಳು. ಅವಳ ಇಷ್ಟ ಪೂರ್ತಿಗೋ ಎನ್ನುವಂತೆ ರೈಲುಗಾಡಿಯು ದಡಗುಟ್ಟುತ್ತ ವೇಗದಿಂದ ಸಾಗಿತು.

ಇತ್ತ ವಕೀಲರು ಪಿಲಾನಿಯ ಬಾಯಿಕಟ್ಟಿ, ಮುಖ್ಯ ವಿಷಯವನ್ನು ಮುಚ್ಚಿ ಹಾಕಿ, ಪೋಲೀಸು ಅಧಿಕಾರಿಗೆ ದಪ್ಪ ಲಂಚವನ್ನು ಕೊಡಿಸಿ, ಪಿಲಾನಿಯನ್ನು ಬಿಡಿಸಿ ಕೊಂಡು, ತಮಗೂ ಒದಗಿದ್ದ ಗಂಡವನ್ನು ತಪ್ಪಿಸಿಕೊಂಡು ಸಾಕು ಸಾಕಾಗಿ ವಾಪಸು ಬಂದು ನೋಡುವಲ್ಲಿ ಹುಡುಗಿಯು ಅಲ್ಲಿ ಎಲ್ಲೂ ಇರಲಿಲ್ಲ. ಪಿಲಾನಿಯು ತಾನು ದಿವಾಳಿಯಾದೆನೆಂದು ಗೋಳಿಟ್ಟನು. ವಕೀಲರು ಸಮಾಧಾನಪಡಿಸುತ್ತ, 'ಅವಳೆಲ್ಲಿ ಹೋಗುತ್ತಾಳೆ, ಅವಳ ಮನೆ ಬಿಟ್ಟು ? ಬನ್ನಿ ಹೋಗೋಣ' ಅಂದರು. ಅವರು ಟ್ಯಾಕ್ಸಿ ಮಾಡಿಕೊಂಡು ಮತ್ತೆ ಫರಾಸು ರೋಡಿಗೆ ಬಂದರು.

ಅಲ್ಲಿಗೆ ಹುಡುಗಿಯು ಬಂದಿಲ್ಲದ ವಿಷಯವು ತಿಳಿದೊಡನೆ ವಕೀಲರು ಭ್ರಾಂತ ರಾದರು. ಪಿಲಾನಿಗೆ ಜೀವವು ಹೋದಂತಾಯಿತು. ಯಜಮಾನಿಗೆ ಈಗ ಹುಡು ಗಿಯು ತಪ್ಪಿಸಿಕೊಂಡುದು ಗೊತ್ತಾಗಿ, 'ಅಯ್ಯೋ, ಅವಳ ಮೇಲೆ ಎರಡು ಸಾವಿರ ವನ್ನು ಸುರಿದಿದ್ದೆ' ಎಂದು ಗೋಳಿಟ್ಟು ವಕೀಲರನ್ನು ಕುರಿತು, 'ನಿಮ್ಮ ತಿಳಿಗೇಡಿ ತನದಿಂದ ಆಷ್ಟೂ ನಷ್ಟವಾಯಿತು. ನಿಮ್ಮಿಂದ ನಾನು ಮೋಸಹೋದೆ. ಚಾಲೂಕು ಹುಡುಗಿ ನೋಡಿಕೊಳ್ಳುವುದಕ್ಕೆ ಚುರುಕಾಗಿರಬೇಕು' ಎಂದು ಸಿಟ್ಟಾದಳು. ಪಿಲಾ ನಿಯು ವಕೀಲರ ಕಡೆಗೆ ತಿರುಗಿ, 'ಅವಳಿಗಾಗಿ ನಾನು ತೆತ್ತದ್ದು ಇಪ್ಪತ್ತೈದು ಸಾವಿರ. ನಿಮ್ಮನ್ನು ನಂಬಿ ದಿವಾಳಿಯಾಗಿ ನಾನೂ ಕೆಟ್ಟೆ' ಅಂದನು. ತಮ್ಮ ಸರದಿಯಲ್ಲಿ ವಕೀಲರೂ ಸಿಟ್ಟಾಗಿ 'ನನ್ನದೇನೋ ಒಳ್ಳೆಯ ಉಪಾಯವೆ. ನಿಮ್ಮ ಹುಚ್ಚತನ' ಕೆಟ್ಟ ಅದೃಷ್ಟಕ್ಕೆ ಯಾರೇನು ಮಾಡಬಲ್ಲರು ? ವ್ಯಾಪಾರದ ವ್ಯಭಿಚಾರದಲ್ಲಿ ಸಂಪಾ ದಿಸಿದುದು ವ್ಯಭಿಚಾರಿಣಿಗೆ ಸೇರಿತು ಅಷ್ಟೆ' ಎಂದು ತಿರಸ್ಕಾರದಿಂದ ಹೇಳಿದರು.

ಪಿಲಾನಿಯು ತಿರುಗಿಬಿದ್ದು, 'ನಿಮ್ಮದೇನು ಹೆಚ್ಚು ? ಅದೂ ಬುದ್ಧಿಯ ವ್ಯಭಿ ಚಾರವೆ. ಆದಕ್ಕೇ ನಿಮಗೂ ಸೊನ್ನೆ ಬಿತ್ತು' ಎಂದು ಆದಷ್ಟು ಸೇಡನ್ನು ತೀರಿಸಿ ಕೊಂಡನು. ತನ್ನ ಗತಿಗಾಗಿ ಗೋಳಿಟ್ಟನು. ಯಜಮಾನಿಯು 'ಸಾಕು ನಿಮ್ಮ ಸಹವಾಸ, ಸದ್ಯ ಈಗಲೇ ಹೊರಟುಹೋಗಿ' ಎಂದು ಗದರಿಸಿದಳು.

—ಅಶ್ವತ್ಥ

# ಮುಯ್ಯಿ

ಹನುಮಪುರಕ್ಕೆ ಹೋಗಬೇಕೆಂದು ಯಜಮಾನರು ತಿಳಿಸಿದಾಗ ಚಿನ್ನಪ್ಪನಿಗೆ ಬಂದ ಭಾವನೆಗಳು ಹಲವು. ಹನುಮಪುರ ಅವನು ಹುಟ್ಟಿ ಬೆಳೆದ ಸ್ಥಳ; ಅದನ್ನು ಬಿಟ್ಟು ಆಗಲೇ ಇಪ್ಪತ್ತೈದು ವರ್ಷವಾಗಿತ್ತು. ಈ ಇಪ್ಪತ್ತೈದು ವರ್ಷಗಳಲ್ಲಿ ಒಂದು ಸಲವೂ ಅವನು ಅಲ್ಲಿ ಕಾಲಿಟ್ಟಿರಲಿಲ್ಲ. ಬೇಕೆಂದೇ ಅವನು ಆ ಸ್ಥಳಕ್ಕೆ ಹೋಗುವುದನ್ನು ತಪ್ಪಿಸಿಕೊಂಡಿದ್ದ. ಈಗ ಯಜಮಾನರು ಮರುದಿನ ಬಸ್ಸನ್ನು ಹನುಮಪುರಕ್ಕೆ ತೆಗೆದುಕೊಂಡು ಹೋಗಬೇಕೆಂದಾಗ ಅವನು ಹಿಂದೆಗೆದ.

'ಮತ್ತೆ ಯಾರನ್ನಾದರೂ ಕಳುಹಿಸಿಕೊಡಲು ಸಾಧ್ಯವಾದರೆ—' ರಾಗವೆಳೆದ.

'ಇಲ್ಲ, ಚಿನ್ನಪ್ಪ. ಮತ್ತೆ ಯಾರನ್ನೂ ಕಳುಹಿಸುವುದಕ್ಕೆ ನನಗೆ ಒಪ್ಪಿಗೆಯಿಲ್ಲ. ಹನುಮಪುರದಿಂದ ಕೊಪ್ಪಕ್ಕೆ ಹೋಗೋ ಗುಡ್ಡ ಘಾಟುಗಳ ರಸ್ತೆಯಲ್ಲಿ ಬಸ್ಸನ್ನು ಮತ್ತೆ ಯಾರೂ ನಿನ್ನ ಹಾಗೆ ಬಿಡಲಾರರು. ಅದೂ ಮದುವೆ ಮನೆಗೆ ಹೋಗೋ "ಪಾರ್ಟಿ"ಗೋಸ್ಕರ ಬಸ್ಸು. ಪಟೇಲ ಮಾದೇಗೌಡರಿಗೆ ಹೇಳಿದ್ದೇನೆ—ನಮ್ಮ ಕಂಪೆನೀಲಿರೋ ಡ್ರೈವರುಗಳಲ್ಲೆಲ್ಲ ತುಂಬಾ ಗಟ್ಟಿಗನಾದವನನ್ನೇ ಕಳಿಹಿಸುತ್ತೇನೆ ಅಂತ.'

'ಮಾದೇಗೌಡರ ಮನೆಗೇ, ಸಾರ್ ?'

'ಹುಂ. ಮಾದೇಗೌಡರ ಮಗನಿಗೆ ಮದುವೆ. ಅವರು ಗೊತ್ತೇನು ನಿನಗೆ ?'

'ಹುಂ. ಎಲ್ಲೋ ಸ್ವಲ್ಪ ಅಷ್ಟೆ.'

'ಅವರ ಮಗನಿಗೆ ನಾಡಿದ್ದು ಕೊಪ್ಪದಲ್ಲಿ ಮದುವೆ. ಇರೋನು ಒಬ್ಬನೇ ಹುಡುಗ. ಗಂಡಿನವರೆಲ್ಲ ನಾಳೆ ಹನುಮಪುರದಿಂದ ಹೊರಡ್ತಾರೆ. ಮಾದೇಗೌಡರು ನನಗೆ ಬಹಳ ಬೇಕಾದ ಸ್ನೇಹಿತರು. ನೀನು ಹೋದರೆ ನನಗೆ ಧೈರ್ಯ. ಆ ರಸ್ತೇಲಿ ಲೀಲಾಜಾಲವಾಗಿ ಬಸ್ ಬಿಡುತ್ತಿ, ಸುಖವಾಗಿ ಮದುವೆ ಮನೆಯವರನ್ನು ಕೊಪ್ಪಕ್ಕೆ ಕರೆದುಕೊಂಡು ಹೋಗಿಬಿಡುತ್ತಿ ಅಂತ.'

ಚಿನ್ನಪ್ಪ ಮಾತನಾಡಲಿಲ್ಲ.

'ಯಾಕೆ ಚಿನ್ನಪ್ಪ ಅನುಮಾನಿಸ್ತೀ ? ಮಾದೇಗೌಡರು ಬಹಳ ಹೆದರ್‍ತಾ ಇದ್ರು—ಏನಪ್ಪಾ ಈ ಗುಡ್ಡಗಳು ಕಣಿವೆಗಳ ಮಧ್ಯೆ ಬಸ್ ಪ್ರಯಾಣ ಅಂದರೆ ಹೇಗೋ ಏನೋ, ಮದುವೆ ಮನೆಗೆ ಹೋಗೋದು, ಹೆಂಗಸರು ಮಕ್ಕಳು ಎಲ್ಲ ಇರ್ತಾರೆ ಅಂತ. ನಾನೇ ಹೇಳಿದೆ, ನಿಮಗೆ ಸ್ವಲ್ಪವೂ ಹೆದರಿಕೆ ಕೂಡ ಆಗದ ಹಾಗೆ

ನಿಮ್ಮನ್ನು ಕರೆದುಕೊಂಡು ಹೋಗಿ ಬಿಡೋ ಧೀರನ್ನ ಕಳಿಸ್ತೀನೆ ಅಂತ. ಮದುವೆಗೆ ಹೋಗೋ ಪಾರ್ಟಿ, ಅಲ್ಲದೆ ಮಾದೇಗೌಡರದೂ ಹಿಡಿತದ ಕೈಯಲ್ಲ. ಇನಾಮು ಸಿಕ್ಕೀತು.'

'ಸರಿ, ಸ್ವಾಮಿ' ಎಂದು ಅಲ್ಲಿಂದ ಕಾಲ್ತೆಗೆದ ಚಿನ್ನಪ್ಪ.

ಮರುದಿನ ಮಾದೇಗೌಡರ ಮನೆಯ ಮುಂದೆ ಹತ್ತು ಗಂಟೆಗೆ ಬಸ್ ಬಂದು ನಿಂತಿತು. ಮಾದೇಗೌಡರ ಭಾವಮೈದ ಬಂದು ಅದಕ್ಕೆ ಹೂವುಗೀವು ಹಾಕಿ, ಅಲಂಕಾರ ಮಾಡಿದ. ಹುಡುಗರಿಗಂತೂ ಆನಂದವೇ ಆನಂದ. ಬಸ್ಸಿನೊಳಕ್ಕೆ ನುಗ್ಗುವರು, ಇಲ್ಲಿ ಕುಳಿತುಕೊಳ್ಳುವರು, ಅಲ್ಲಿ ಕುಳಿತುಕೊಳ್ಳುವರು, ಕೂಗುವರು, ಕುಣಿಯುವರು. ಚಿನ್ನಪ್ಪನು ಮಾತ್ರ ಅಲ್ಲಾಡಲಿಲ್ಲ, ತನ್ನ 'ಸೀಟ'ನ್ನು ಬಿಟ್ಟೇಳಿಯ ಲಿಲ್ಲ. ಕಂಡಕ್ಟರ್ ಆರೋಗ್ಯಸಾಮಿಗೆ ಕೂಡ ಆಶ್ಚರ್ಯ, 'ಇದೇನು ಹೀಗಿದ್ದಾನೆ ಇವತ್ತು ಚಿನ್ನಪ್ಪ ?' ಎಂದು. ತನ್ನ 'ಸೀಟ'ನಲ್ಲಿ ಹಿಂದಕ್ಕೆ ಒರಗಿಕೊಂಡು ಬಸ್ಸಿನ ಛಾವಣಿಯನ್ನು ದೃಷ್ಟಿಸುತ್ತಿದ್ದ ಚಿನ್ನಪ್ಪ. ಅವನ ಮನಸ್ಸು ಮೂವತ್ತು ವರ್ಷ ಗಳನ್ನು ದಾಟ ಹಿಂದಕ್ಕೆ ಹೋಗಿತ್ತು.

ಚಿನ್ನಪ್ಪನ ತಾಯಿ ತಂದೆ ಇದ್ದದ್ದು ಹನುಮಪುರದಲ್ಲಿ. ಆಸ್ತಿವಂತರಲ್ಲದಿದ್ದರೂ ಮರ್ಯಾದೆಯಿಂದಿದ್ದವರು. ಚಿನ್ನಪ್ಪನ ತಾಯಿ ಗಂಡನಮನೆಗೆ ಬಂದಾಗ ನಿಂಗೇ ಗೌಡರು ಪಟೇಲರಾಗಿದ್ದರು. ನಿಂಗೇಗೌಡರೆಂದರೆ ಹಳ್ಳಿಯವರಿಗೆಲ್ಲ ಬಹಳ ಭಯ, ಭಕ್ತಿ. ದೇವರಿಗಂಜಿ ಆತ್ಮಸಾಕ್ಷಿಯಾಗಿ ಕೆಲಸ ಮಾಡುವ ಮನುಷ್ಯ ಅವರು. ಬೇಕಾ ದಷ್ಟು ಭೂಮಿಕಾಣಿ ಬಹಳ ಮಾಡಿಕೊಂಡಿದ್ದರೂ ಅನ್ಯಾಯದಿಂದ ಒಂದು ಕಾಸನ್ನೂ ಸಂಪಾದಿಸಿದವರಲ್ಲ. ಮೊಸರು ಕಡೆದರೆ ಬೆಣ್ಣೆ ಬರುವ ಬದಲು ವಿಷ ಬಂದಂತೆ ಅವರ ಮಕ್ಕಳು ಮಾದೇಗೌಡ, ನಂಜೇಗೌಡ. ನಿಂಗೇಗೌಡರು ಸ್ವತಃ ಕಷ್ಟಪಟ್ಟವರು, ಅದರಿಂದ ಬಡವರ ವಿಷಯದಲ್ಲಿ ಅವರಿಗೆ ಸಹಾನುಭೂತಿ. ಮಾದೇಗೌಡ, ನಂಜೇ ಗೌಡರು ಬೆಳ್ಳಿಯ ತೊಟ್ಟಿಲಲ್ಲಿ ತೂಗಿಕೊಂಡವರು. ಮೊದಲಿನಿಂದ ಊರ ಪೋಲಿ ತಂಡಕ್ಕೆ ಅವರು ಮುಖಂಡರು. ವಯಸ್ಸಾಗುತ್ತ ಮೈ ಕೈ ಬಲಿತು, ತರುಣರಾದ ಹಾಗೆಲ್ಲ ಅವರ ಹಾವಳಿ ಹೆಚ್ಚಾಗುತ್ತ ಹೋಯಿತು. ಯಾವುದೋ ಕಳ್ಳತನದ ಕೇಸಿನಲ್ಲಿ ನಂಜೇಗೌಡನ ಮೇಲೆ ಅನುಮಾನವಿತ್ತು. ಅವನು ಊರನ್ನೇ ಬಿಟ್ಟು ಓಡಿ ಹೋದ. ಇದಾದ ಒಂದೆರಡು ವರ್ಷಕ್ಕೆ ನಿಂಗೇಗೌಡರು ಕಣ್ಣು ಮುಚ್ಚಿದರು. ಮಾದೇಗೌಡ ಪಟೇಲನಾದ; ನಂಜೇಗೌಡ ವಾಪಸ್ಸು ಬಂದ.

ಧರ್ಮರಾಯನಂತಹ ತಂದೆ ಬದುಕಿದ್ದಾಗಲೇ ಆಡಬಾರದ ಆಟ ಆಡುತ್ತಿದ್ದ ಅಣ್ಣ ತಮ್ಮಂದಿರು ಈಗ ಪಂಜರದಿಂದ ಹೊರಕ್ಕೆ ಹಾರಿದ ಸಿಂಹಗಳಾದರು.

ಮೈಯಲ್ಲಿ ಬಿಸಿ ರಕ್ತ, ಕೈಯಲ್ಲಿ ಕಾಸು, ಸಹಾಯಕ್ಕೆ ಅಧಿಕಾರ, ಅಲ್ಲದೆ ಪೋಲಿಗಳ ತಂಡವೊಂದು; ಇವರ ಹಾವಳಿಗೆ ಮಿತಿಯೇ ಇಲ್ಲವಾಯಿತು. ಇವರಿಗೆ ಎದುರು ಬಿದ್ದವನ ಅವತಾರ ಮುಗಿಯಿತೆನ್ನುವ ಮಟ್ಟಿಗೆ ಬಲಿತರು. ಈ ದರ್ಪದ ಶಿಖರ ದಲ್ಲಿ ಇವರು ಇದ್ದಾಗಲೇ ನಿಂಗಮ್ಮ—ಚಿನ್ನಪ್ಪನ ತಾಯಿ—ನಂಜೇಗೌಡನ ಕಣ್ಣಿಗೆ ಬಿದ್ದದ್ದು.

ನಿಂಗಮ್ಮ ಹೊಲದಲ್ಲಿ ಕೆಲಸ ಮಾಡುತ್ತಿದ್ದ ಗಂಡನಿಗೆ ಹಿಟ್ಟು ತೆಗೆದುಕೊಂಡು ಹೋಗಿ ಕೊಟ್ಟು ಹಿಂದಕ್ಕೆ ಬರುತ್ತಿದ್ದಳು. ತನ್ನ ಗೆಳೆಯರೊಡನೆ ಹೋಗುತ್ತ ನಂಜೇ ಗೌಡ ದೂರದಿಂದ ಅವಳನ್ನು ನೋಡಿದ. 'ಯಾರೀ ಹೆಣ್ಣು ?' ಎಂದ.

'ರಾಮಪ್ಪನ ಎಂಡ್ರು', ತಂಡದಲ್ಲಿ ಒಬ್ಬ ಹೇಳಿದ.

ಅದಾದ ಮೂರು-ನಾಲ್ಕು ದಿನಗಳಿಗೆ ನಂಜೇಗೌಡ ಕುಡಿದು ಬರುತ್ತಿದ್ದವನು ನಿಂಗಮ್ಮನನ್ನು ಮತ್ತೆ ಕಂಡ. ನಿಂಗಮ್ಮ ಮನೆಯ ಹೊರಗೆ ಬೆರಣಿ ಆರಿಸುತ್ತಿದ್ದಳು. ನಂಜೇಗೌಡ ಬಂದದ್ದನ್ನು ಅವಳು ಮೊದಲು ನೋಡಲಿಲ್ಲ. ನಂಜೇಗೌಡ ದೂರ ದಿಂದಲೇ ಅವಳನ್ನು ಕಂಡ; ಬಿಲ್ಲಿನಂತೆ ಬಾಗಿದ್ದ ಅವಳ ಮೈ ಎಂದಿಗಿಂತ ಸುಂದರ ವಾಗಿ ಕಂಡಿತು ಅವನಿಗೆ. ಅವಳ ತಲೆಗೂದಲು ಮುಂದೆ ಬಾಗಿ ಹಣೆಯಮೇಲಾ ಡುತ್ತಿತ್ತು. ಗಾಳಿ ಸೆರಗಿನ ಕೊನೆಯೊಡನೆ ಆಡುತ್ತಿತ್ತು.

'ನಿಂಗೀ' ಎಂದ ನಂಜೇಗೌಡ.

ತಟ್ಟನೆ ಮೇಲೆದ್ದಳು ನಿಂಗಮ್ಮ. ನಂಜೇಗೌಡ ಹತ್ತಿರ ಬಂದದ್ದೂ ಅರಿವಿರ ಲಿಲ್ಲ ಅವಳಿಗೆ. ತಲೆಯೆತ್ತುತ್ತಲೇ ಕುಡಿತದ ಫಲವಾಗಿ ಕೆಂಪಾಗಿದ್ದ ಕಣ್ಣಿನ ನೋಟ ಅವಳನ್ನು ಬೆದರಿಸಿತು. ಸುಮ್ಮನೆ ನಿಂತಳು.

ನಂಜೇಗೌಡನೂ ಅವಳನ್ನೇ ನೋಡುತ್ತ ನಿಂತ. ಕೊನೆಗೆ ಅವಳೇ ಕೇಳಿದಳು: 'ಏನು ಬಂದದ್ದು ?

'ರಾಮಪ್ಪ ಅವ್ನ ?'

'ಇಲ್ಲ' ಹೊಲದಿಂದಲೇ ಬಂದಿಲ್ಲ.'

ಮತ್ತೆ ನಂಜೇಗೌಡ ಅವಳನ್ನು ದೃಷ್ಟಿಸುತ್ತ ನಿಂತ. ನಿಂಗಮ್ಮನಿಗೆ ಏನು ಮಾಡಲೂ ತೋರದಾಯಿತು. ಗುಡಿಸಲೊಳಕ್ಕೆ ಹೋಗಲು ತಿರುಗಿದಳು. ನಂಜೇ ಗೌಡ ಬಂದು ಅವಳ ಕೈ ಹಿಡಿದ. 'ಅಯ್ಯೋ' ಎಂದು ಚೀರಿ ಕೈ ಬಿಡಿಸಿಕೊಳ್ಳಲು ಯತ್ನಿಸಿದಳು ನಿಂಗಮ್ಮ. ನಂಜೇಗೌಡ ಕೈಯ್ಯನ್ನು ಬಿಗಿಯಾಗಿ ಹಿಡಿದಿದ್ದ. ಅಷ್ಟು ಹೊತ್ತಿಗೆ ಯಾರೋ 'ಥೂ ನಾಯಿ' ಎನ್ನುತ್ತ ನಂಜೇಗೌಡನನ್ನು ಹಿಂದಿನಿಂದ ಒದ್ದರು. ಅಷ್ಟು ದೂರ ಹೋಗಿ ಬಿದ್ದ ಗೌಡ.

ಒದ್ದವರು ಬೇರೆ ಯಾರೂ ಅಲ್ಲ, ರಾಮಪ್ಪ. ಹೊಲದಿಂದ ಬರುತ್ತಿದ್ದವನು ತನ್ನ ಮನೆಯ ರಸ್ತೆಯಲ್ಲಿ ತಿರುಗುವ ಹೊತ್ತಿಗೂ, ನಂಜೇಗೌಡ ನಿಂಗಮ್ಮನ ಕೈ ಹಿಡಿಯುವ ಹೊತ್ತಿಗೂ ಸರಿಹೋಯಿತು. ಅವಳ ಕೂಗು, ಕೈ ಬಿಡಿಸಿಕೊಳ್ಳಲು ಪಟ್ಟ ಸಾಹಸ, ಎಲ್ಲದಕ್ಕೂ ಅವನೇ ಸಾಕ್ಷಿಯಾಗಿದ್ದ.

'ನಿಂಗೇಗೌಡನ ಮಗನಾದ್ದಕ್ಕೆ ಬದುಕಿದೆ. ಮತ್ತೊಬ್ಬನಾಗಿದ್ದರೆ ಇಲ್ಲೇ ಸೀಳಿ ಹಾಕುತ್ತಿದ್ದೆ, ಹೋಗಾಚೆ' ಎಂದು ಉಗುಳಿ ರಾಮಪ್ಪ ಗುಡಿಸಲೊಳಕ್ಕೆ ಹೋದ.

ಇದಾದ ನಾಲ್ಕು ದಿನಕ್ಕೆ ರಾಮಪ್ಪನ ದೇಹ ಅವನ ಹೊಲದಲ್ಲಿ ಸಿಕ್ಕಿತು. ಕುಡುಗೋಲಿನೇಟಿನಿಂದ ಪ್ರಾಣ ಹೋಗಿತ್ತು. ಪೋಲೀಸಿನವರು ಅನುಮಾನದ ಮೇಲೆ ನಂಜೇಗೌಡನನ್ನೂ ಇನ್ನೂ ಕೆಲವರನ್ನೂ ದಸ್ತಗಿರಿ ಮಾಡಿದರು; ಆದರೆ ಅವರ ವಿರುದ್ಧ ಸಾಕ್ಷಿಯೇನೂ ದೊರೆಯದೆ ಅವರನ್ನು ಬಿಟ್ಟುಬಿಟ್ಟರು. ಊರಿನಿಂದ ಬಂದಿದ್ದ ನಿಂಗಮ್ಮನ ಅಣ್ಣ, ತಂಗಿಯ ಕತೆಯನ್ನೆಲ್ಲ ಕೇಳಿ, ಇನ್ನು ಅವಳು ಅಲ್ಲಿರುವುದು ಕ್ಷೇಮವಲ್ಲವೆಂದು, ಅವಳನ್ನೂ ಅವಳ ಒಂದು ವರ್ಷದ ಕೂಸು ಚಿನ್ನಪ್ಪನನ್ನೂ ತನ್ನ ಊರಿಗೆ ಕರೆದುಕೊಂಡುಹೋದ.

ಚಿನ್ನಪ್ಪ ಬೆಳೆದಂತೆ ಕ್ರಮೇಣ ಈ ವಿಷಯವೆಲ್ಲ ಅವನಿಗೆ ತಾಯಿಯಿಂದ ತಿಳಿದು ಬಂದಿತ್ತು. ಸೋದರಮಾವನ ಮನೆಯಲ್ಲಿ ಅವನ ಬಾಲ್ಯ ಅಷ್ಟೇನೂ ಸುಖ ಕರವಾಗಿರಲಿಲ್ಲ. ಅವನ ಸೋದರಮಾವ ಇದ್ದದ್ದು ದೊಡ್ಡ ಊರಿನಲ್ಲಿ. ಯಾವುದೋ ಕಚೇರಿಯಲ್ಲಿ ಜವಾನನಾಗಿದ್ದ. ಮನೆಯಲ್ಲಿ ಎಮ್ಮೆ ಕಟ್ಟಿಕೊಂಡು ಹಾಲು ಮಾರಿ ಒಂದಿಷ್ಟು ದುಡ್ಡು ಮಾಡುತ್ತಿದ್ದ. ಅಣ್ಣ ನಮ್ಮವನಾದರೆ ಅತ್ತಿಗೆ ನಮ್ಮವಳೇ ? ನಿಂಗಮ್ಮ ಅಣ್ಣನ ಮನೆಯಲ್ಲಿ ಬಹಳ ಕಷ್ಟಪಡಬೇಕಾಯಿತು. ಆದರೆ ಮಗ ಬೆಳೆದು ಮುಂದಕ್ಕೆ ಬರಲೆಂದು ಎಲ್ಲವನ್ನೂ ಸಹಿಸಿದಳು. ಹಾಗೂ ಹೀಗೂ ಕಷ್ಟಪಟ್ಟು, ಅವರಿವರ ಗೆಳೆತನ ಮಾಡಿ, ಅವರಿವರ ಕೈಕಾಲು ಕಟ್ಟಿ ಚಿನ್ನಪ್ಪ ಡ್ರೈವಿಂಗ್ ಕಲಿತ. ಬಸ್ ಕಂಪೆನಿಯಲ್ಲಿ ಡ್ರೈವರ್ ಕೆಲಸವೂ ಸಿಕ್ಕಿತು. ಆದರೆ ವಿಧಿ ಕೊಡುವ ಪಾಯಸ ದಲ್ಲಿ ಯಾವಾಗಲೂ ನೊಣವಿರಲೇಬೇಕೆಂಬ ನಿಯಮವೇನೊ ! ಅವನಿಗೆ ಕೆಲಸ ವಾದ ಹದಿನೈದು ದಿವಸಕ್ಕೆ ನಿಂಗಮ್ಮ ಕಣ್ಮುಚ್ಚಿ ನಡೆದಳು.

ಅದರಿಂದಲೇ ಯಜಮಾನರು ಹನುಮಪುರಕ್ಕೆ ಹೋಗಬೇಕೆಂದಾಗ ಚಿನ್ನಪ್ಪ ಬೆಚ್ಚಿದುದು. ಅದರಲ್ಲಿಯೂ ಮಾದೇಗೌಡರ ಮನೆಗೆಂದು ಹೇಳಿದಾಗ ಚಕಿತನಾದ. ದಿನವೆಲ್ಲ ಅವನ ಮನಸ್ಸಿನಲ್ಲಿ ಕಡೆಗೋಲು ಹಾಕಿ ಕಡೆಯುತ್ತಿರುವಂತಾಗಿತ್ತು. ಮನ ಸ್ಸೆಲ್ಲ ಕಲಕಿಹೋಗಿತ್ತು. ಯಜಮಾನರಿಗೆ ಹೋಗಿ ಇದ್ದ ಸ್ಥಿತಿಯನ್ನು ತಿಳಿಸಿಬಿಡು ವುದೇ ? ತಿಳಿಸಿ, 'ನಾನು ಅಲ್ಲಿಗೆ ಹೋಗಲಾರೆ' ಎಂದು ಹೇಳಿಬಿಡುವುದು ವಿಹಿತ

ವಲ್ಲವೆ? ಆದರೆ ಅವರು ತನ್ನಲ್ಲಿ ಎಷ್ಟು ವಿಶ್ವಾಸವಿಟ್ಟಿದ್ದಾರೆ? ಇಷ್ಟು ಜನ ಡ್ರೈವರು ಗಳಲ್ಲಿ ತನ್ನನ್ನೇ ಆರಿಸಿ ನಿಯಮಿಸಿದ್ದಾರೆ. ತಾನು ಹೋಗಿಯೇ ಹೋಗು ತ್ತೇನೆ ಎಂದು ನಂಬಿಕೆಯಿಟ್ಟಿದ್ದಾರೆ. ಈಗ ತಾನು ಒಲ್ಲೆ ಎಂದರೆ ಅವರೇನು ಮಾಡಬೇಕು? ಆದರೆ ತನ್ನ ತಂದೆಯನ್ನು ಕೊಂದು ತಾಯಿ ಬಾಳಿಗೆ ವಿಷ ಬೆರ ಸಿದ ನೀಚರ ಮನೆಯ ಸಂಭ್ರಮಕ್ಕೆ ತಾನು ಪಾಲುಗಾರನಾಗುವುದೆ? ಅಥವ ವಿಧಿಯೇ ಅವರನ್ನು ತನ್ನ ವಶಮಾಡಿದೆಯೇ? ಮಾದೇಗೌಡ ಮಾತ್ರವಲ್ಲ, ಅವನ ಸಂಸಾರದವರೆಲ್ಲರ ಪ್ರಾಣ ತನ್ನ ಕೈಯ್ಯಲ್ಲಿ ವಿಧಿ ತಂದುಕೊಟ್ಟಿದೆ, ಈಗ ಮುಯ್ಯಿ ತೀರಿಸಿಕೊಳ್ಳದಿರುವುದು ಮೂರ್ಖತನವಲ್ಲವೆ? ತನ್ನ ಪ್ರಾಣ ಹೋದರೂ ಚಿಂತೆ ಯಿಲ್ಲ. ತನಗಾಗಿ ಅಳುವವರು, ತನ್ನಸಾವಿನಿಂದ ನಷ್ಟಪಡುವವರು ಯಾರೂ ಇಲ್ಲ. ತಂದೆಯ ಸಾವು, ತಾಯಿಯ ನೋವು ಇದಕ್ಕೆ ಪ್ರತೀಕಾರ ಮಾಡಿದಂತಾಗುವುದು.

ಯೋಚನೆ ಮಾಡಿದಂತೆಲ್ಲ ಈ ಕೊನೆಯ ಭಾವನೆ ಅವನ ಮನಸ್ಸನ್ನು ಸೆಳೆ ಯಿತು. ತನ್ನ ಮನೆಯೊಂದನ್ನು ಮಾತ್ರವಲ್ಲ, ಹತ್ತಾರು ಸಂಸಾರಗಳನ್ನು ಹಾಳು ಮಾಡಿದ ಇವರಿಗೆ ತಕ್ಕ ಶಿಕ್ಷೆ ವಿಧಿಸಲೆಂದೇ ದೇವರು ತನಗೆ ಈ ಅವಕಾಶ ಕಲ್ಪಿಸಿ ಕೊಟ್ಟಿದ್ದಾನೆ ಎಂದು ತೋರಿತು. ತನ್ನ ತಾಯಿ ಮಾದೇಗೌಡನನ್ನು, ನಂಜೇಗೌಡ ನನ್ನು ಎಷ್ಟು ಸಲ ಶಪಿಸಿದ್ದಳು! ತಾನು, ಅವರು ತನ್ನ ಕೈಗೆ ಸಿಕ್ಕರೆ ಸಾಕು, ತಕ್ಕ ಬುದ್ಧಿ ಕಲಿಸುತ್ತೇನೆಂದು ಎಷ್ಟು ಸಲ ಯೋಚನೆ ಮಾಡಿರಲಿಲ್ಲ! ತನ್ನ ತಾಯಿಯಂತೆ, ತನ್ನಂತೆ—ಎಷ್ಟು ಜನರ ಶಾಪವಿತ್ತೋ ಆ ಸಂಸಾರಕ್ಕೆ. ಎಷ್ಟು ಬೆಂದ ಕರುಳುಗಳ ನಿಟ್ಟುಸಿರ ಬೇಗೆ ತಾಗಿತ್ತೋ ಆ ಮನೆಗೆ. ಅವರು ಯಾರಿಗೆ ಅನ್ಯಾಯ ಮಾಡಿದ್ದರೊ ಅವರಿಂದಲೆ ಪ್ರತೀಕಾರ ಮಾಡಬೇಕೆಂದು ವಿಧಿ ತನಗೆ ಈ ಕೆಲಸ ನಿಯಮಿಸಿರಬೇಕು! ಯೋಚಿಸಿದ ಹಾಗೆಲ್ಲ—ಇವರಿಗೆ ಶಿಕ್ಷೆ ಮಾಡಲು ವಿಧಿ ಆರಿಸಿದ ಸಾಧನ ತಾನು, ತಾನು ಈಗ ಹಿಂಜರಿದರೆ, ಮನಸ್ಸು ಬೆಣ್ಣೆಯಾಗಲು ಬಿಟ್ಟರೆ, ಪಾಪ ಮಾಡಿದಂತೆ ಎಂದು ತೋರಿತು ಚಿನ್ನಪ್ಪನಿಗೆ.

ರಾತ್ರಿಯನ್ನೆಲ್ಲ ಇದೇ ಯೋಚನೆಯಲ್ಲಿ ಕಳೆದ. ಕಣ್ಣು ಮುಚ್ಚಿದರೆ ಕನಸಿ ನಲ್ಲಿಯೂ ಇದೇ ಯೋಚನೆ. ತನ್ನ ತಾಯಿ ಬದುಕಿದ್ದಂತೆ, ಅವಳು ತನ್ನ ಅತ್ತಿಗೆಯ ಮನೆಯಲ್ಲಿ ಪಡಬಾರದ ಕಷ್ಟ ಪಡುತ್ತಿದ್ದಂತೆ ಕನಸು ಕಂಡ. ಮತ್ತೆ ಆಕೆಯ ಮರಣದ ದೃಶ್ಯ, ಮುಖದ ವೇದನೆ, ಕಣ್ಣಿನಲ್ಲಿ ನಟ್ಟಿದ್ದ ದೈನ್ಯ ನೆನಪಾಯಿತು.

ಬೆಳಗಾಗುವ ಹೊತ್ತಿಗೆ ಚಿನ್ನಪ್ಪ ಮನಸ್ಸು ಮಾಡಿದ್ದ—ಮಾದೇಗೌಡನ ಮನೆ ಯವರಿಗೆಲ್ಲ ಇವತ್ತು ಆಯಸ್ಸು ತುಂಬಿ ಬಂದಿದೆ ಎಂದು.

ಮಾದೇಗೌಡರ ಮನೆಯ ಮುಂದೆ ಬಸ್ಸು ಬಂದು ನಿಂತಿತು. ಮುದುಕನೊಬ್ಬ ಹೊರಗೆ ಬಂದು, ಚಿನ್ನಪ್ಪ, ಆರೋಗ್ಯಸಾಮಿ ಇಬ್ಬರನ್ನೂ ಊಟಕ್ಕೆ ಕರೆದ. ಚಿನ್ನಪ್ಪ

ಹೋಗಲಿಲ್ಲ. ಆರೋಗ್ಯಸಾಮಿಗೆ 'ನನಗೆ ಹಸಿವಿಲ್ಲ, ನೀನು ಊಟಮಾಡು,' ಎಂದು ಹೇಳಿ ಕಳುಹಿಸಿದ. ಆರೋಗ್ಯಸಾಮಿ ಬಂದ ಮೇಲೆ, 'ಆ ಮುದುಕ ಯಾರು ?' ಎಂದು ಕೇಳಿದ.

'ಪಟೇಲರ ತಮ್ಮ ನಂಜೇಗೌಡ್ರು.'

ಚಿನ್ನಪ್ಪ ಏಕೆ ನಕ್ಕನೆಂಬುದು ಆರೋಗ್ಯಸಾಮಿಗೆ ಅರ್ಥವಾಗಲಿಲ್ಲ.

ಹನುಮಪುರದಿಂದ ಕೊಪ್ಪಕ್ಕೆ ಹೋಗುವ ರಸ್ತೆಯೆಂದರೆ ಯಾವ ಡ್ರೈವರಿಗೇ ಆಗಲಿ ಸ್ವಲ್ಪ ನಡುಕವೇ. ಅದರಲ್ಲಿಯೂ ಮೂರು ತಿರುವುಗಳಂದರೆ ಅಪಾಯದ ತವರು. ಸ್ವಲ್ಪ ಎಚ್ಚರಿಕೆ ತಪ್ಪಿದರೆ, ಆಯ ತಪ್ಪಿದರೆ ಘಾಟುಗಳ ಮಧ್ಯೆ ಇನ್ನೂರು–ಮುನ್ನೂರು ಅಡಿ ಬಸ್ ಉರುಳಬೇಕಾಗಿತ್ತು. ಚಿನ್ನಪ್ಪ ಮೂರು ತಿರುವುಗಳಲ್ಲಿ ಯಾವುದನ್ನಾರಿಸಬೇಕು ಎಂಬುದನ್ನು ಯೋಚನೆ ಮಾಡುತ್ತಿದ್ದ. ಅವನು ಒಟ್ಟು ಹೋಗಬೇಕಾಗಿದ್ದುದು ಮೂವತ್ತು ಮೈಲಿ, ಅಷ್ಟೆ. ಮೊದಲನೆಯ ತಿರುವಿಗೂ ಮೂರನೆಯ ತಿರುವಿಗೂ ಮಧ್ಯೆ ನಾಲ್ಕೈದು ಮೈಲು ದೂರ. ಚಿನ್ನಪ್ಪನಿಗೆ ಒಂದೇ ಆಸೆ—ಮಾದೇಗೌಡನಿಗೆ, ನಂಜೇಗೌಡನಿಗೆ ಗೊತ್ತಾಗಬೇಕು ತಾನು ಯಾರು ಎನ್ನುವುದು. ತಾನು ಮುಯ್ಯಿ ತೀರಿಸಿಕೊಳ್ಳುತ್ತಿದ್ದೇನೆ ಎಂಬುದು ಅರಿವಾಗಬೇಕು. ಆದರೆ ಅದು ತೀರ ಮುಂಚೆ ಗೊತ್ತಾದರೆ ಅವರು ಬಸ್ಸಿನಿಂದ ಇಳಿದು ಬಿಡಬಹುದು, ಅಥವಾ ಮತ್ತೇನಾದರೂ ಮಾಡಬಹುದು. ತಿರುವು ಹತ್ತಿರ ಬಂದಾಗ ಅವರಿಗೆ ತಾನು ಯಾರು ಎಂಬುದನ್ನು ಹೇಳಬೇಕು, ಆ ಪೆಟ್ಟಿನಿಂದ ಅವರ ಮನಸ್ಸು ಚೇತರಿಸಿ ಕೊಳ್ಳುವ ಹೊತ್ತಿಗೆ ಬಸ್ಸನ್ನು ತಿರುವಿನಲ್ಲಿ ಕೆಡವಿ ಬಿಡಬೇಕು.

ಆದರೆ ಆರೋಗ್ಯಸಾಮಿ-? ಹುಂ, ದೇವರ ದಯೆ; ಅವನೂ ತನ್ನ ಹಾಗೆಯೇ ಹೆಂಡತಿ, ಮಕ್ಕಳು ಯಾರೂ ಇಲ್ಲದ ಅನಾಥ. ತಾನು ಸತ್ತರೆ ಹೇಗೆ ಚಿಂತೆಯಿಲ್ಲವೋ ಅವನು ಸತ್ತರೂ ಚಿಂತೆಯಿಲ್ಲ.

ಮಕ್ಕಳು, ಹೆಂಗಸರು ಬಸ್ ಹತ್ತುತ್ತಿದ್ದರು. ಬಣ್ಣಬಣ್ಣದ ಉಡುಪು ತೊಟ್ಟು, ಬಗೆಬಗೆಯ ಹೂವು ಮುಡಿದು ಹೆಂಗಸರು ಬರುತ್ತಿದ್ದರು. ಚಿಕ್ಕ ಹುಡುಗಿಯರು, ಯೌವನದ ಬೆಡಗಿಯರು, ಮಧ್ಯ ವಯಸ್ಸಿನ ತಾಯಿಯರು, ವೃದ್ಧೆಯರು ಎಲ್ಲ ಇದ್ದರು ಆ ಗುಂಪಿನಲ್ಲಿ. ಆ ಮೇಲೆ ಗಂಡಸರು.

ನಂಜೇಗೌಡ ಹೊರಕ್ಕೆ ಬರುತ್ತಲೇ ಚಿನ್ನಪ್ಪ ಹೇಳಿದ: 'ಸ್ವಾಮಿ ತಾವು ಪಟೇಲರು "ಫ್ರಂಟ್ ಸೀಟಿ"ಗೆ ಬರಬೇಕು.'

'ಆಗಲೇಳಯ್ಯ, ಅದಕ್ಕೇನು' ಎಂದ ನಂಜೇಗೌಡ.

ಅಷ್ಟು ಹೊತ್ತಿಗೆ ಮುದುಕಿಯೊಂದು ಬಂದಿತು. ಅಲ್ಲಿಯೇ ನಿಂತಿದ್ದ ಆರೋಗ ಸಾಮಿಯನ್ನು, 'ಈ ಬಸ್ಸು ಕೊಪ್ಪಕ್ಕೆ ಹೋಗುತ್ತೇನಪ್ಪ?' ಎಂದು ಕೇಳಿತು ಮುದುಕಿ.

'ಹೌದಮ್ಮ.'

'ಹತ್ತಬಹುದೇನಪ್ಪ?'

'ಇಲ್ಲಮ್ಮ, ಇದು ಮದುವೆ ಮನೆಯವರಿಗೋಸ್ಕರ ಹೋಗೋ ಬಸ್ಸು.'

'ನೋಡಪ್ಪ, ಮನಸ್ಸು ಮಾಡು.'

'ಇಲ್ಲ ಅಜ್ಜಿ, ನಾನೇನೂ ಮಾಡೋ ಹಾಗಿಲ್ಲ.'

'ನೋಡಪ್ಪ ನನ್ನ ಮಗಳು ಪ್ಲೇಗ್ನಲ್ಲಿ ಓಗ್ಬಿಟ್ಲಂತೆ. ಅವಳ ಗಂಡನಿಗೂ ತಗ ಲೈತಂತೆ. ಎರಡು ಮಕ್ಕಳವೆ, ಕರ್ಕೊಂಡ್ಬರ್ಬೇಕು.'

'ಹೌದು, ಅಜ್ಜಿ, ನಾನೇನು ಮಾಡಲಿ ಹೇಳು.'

ಒಳಗಿನಿಂದ ಹೆಣ್ಣುದನಿ ಕೇಳಿತು. 'ಹೋಗಲಿ, ಅವಳನ್ನೂ ಬಿಡಪ್ಪ'

'ಹೌದು, ಅವಳೂ ಬರಲೇಳು' ನಂಜೇಗೌಡ ದನಿ ಸೇರಿಸಿದ.

ಆರೋಗ್ಯಸಾಮಿ ಸುಮ್ಮನಿದ್ದ. ಮುದುಕಿ ಹತ್ತಿತು.

ಮನೆಯಿಂದ ಕೊನೆಗೆ ಹೊರಗೆ ಬಂದವನು ಮಾದೇಗೌಡ. ಚಿನ್ನಪ್ಪ ಅಣ್ಣತಮ್ಮಂದಿರನ್ನು ದೃಷ್ಟಿಸಿ ನೋಡಿದ. ಅವರಿಬ್ಬರಿಗೆ ವಯಸ್ಸಿನ ವ್ಯತ್ಯಾಸ ಬಹಳ ಇದ್ದಂತೆ ತೋರಲಿಲ್ಲ. ಮುಖದ ರೀತಿ ಒಂದೇ. ಇಬ್ಬರದೂ ಒಳ್ಳೆಯ ಕಟ್ಟಿನ ಮೈ. ಮುಖದಲ್ಲಿ ಕ್ರೌರ್ಯ ಎದ್ದು ಕಾಣುತ್ತಿತ್ತು. ಚಿಕ್ಕ ವಯಸ್ಸಿನಲ್ಲಿ ಯೌವನ ಆ ಕ್ರೌರ್ಯವನ್ನು ಸ್ವಲ್ಪ ಹಿಂಬದಿಗೊತ್ತಿತ್ತೇನೊ, ವೃದ್ಧಾಪ್ಯ ದಲ್ಲಿ ಮುಖದಲ್ಲಿ ಉಳಿದಿದ್ದುದು ಅದೊಂದೇ. ಹಣೆಯಲ್ಲಿನ ಗೀರುಗಳು, ಈ ವಯಸ್ಸಿ ನಲ್ಲಿಯೂ ಹಲ್ಲಿಗೊತ್ತಿದ್ದ ತುಟಿ, ಒಳಕ್ಕೆ ಇಳಿದ ಗಲ್ಲ ಮುಖದ ಕ್ರೌರ್ಯದ ಛಾಯೆ ಯನ್ನು ಆಳವಾಗಿ ಮಾಡಿದ್ದುವು. ಕಣ್ಣಿನ ಬೆಳಕು ಹಿಂಗಿಹೋಗಿ, ಕಾಮದ ಮಂಕು ಮನೆಮಾಡಿತ್ತು.

ಚಿನ್ನಪ್ಪ ತಮ್ಮನ್ನು ನೆಟ್ಟದೃಷ್ಟಿಯಿಂದ ನೋಡಿದುದನ್ನು ಕಂಡು ಮಾದೇ ಗೌಡರಿಗೆ ಏನೆನ್ನಿಸಿತೋ, 'ನಿಮ್ಮೆಜಮಾನ್ರು ಏಳವ್ರೆ, ಒಲೆ ಪಸಂದಾಗಿ ಬಸ್ ಬಿಡಿ ಅಂತ ಕಣಪ್ಪ. ಮಕ್ಕುಮರಿ ಅವೆ. ಸ್ವಲ್ಪ ಉಷಾರಾಗಿ ಬಿಡು,' ಎಂದರು. ಚಿನ್ನಪ್ಪ ನಕ್ಕುಬಿಟ್ಟ. ಅಷ್ಟೆ.

ಬಸ್ ಹೊರಟಿತು.

ಮೊದಲನೆಯ ತಿರುವು ಇನ್ನು ಎರಡು—ಎರಡೂವರೆ ಮೈಲಿ ಇರಬೇಕು. ಚಿನ್ನಪ್ಪ ಪಕ್ಕದಲ್ಲಿದ್ದ ನಂಜೇಗೌಡನನ್ನು ಕೇಳಿದ—'ನಿಮ್ಮೂರಲ್ಲಿ ರಾಮಪ್ಪ ಅಂತಿದ್ದ, ನೆನಪ್ಪೈತ?'

ನಂಜೇಗೌಡ ಹೊಗೆಸೊಪ್ಪನ್ನು ಚೀಲದಿಂದ ತೆಗೆದು ಆರಿಸುತ್ತ ಹೇಳಿದ: 'ಯಾವ ರಾಮಪ್ಪ ? ಆ ಎಸರ್ನೋರು ಏಟೋ ಪಂದಿ.'

'ಇಲ್ಲೇ ಆರಂಬ ಮಾಡ್ತಾ ಇದ್ದ. ಅವನ ಎಂಡ್ತಿ ನಿಂಗಮ್ಮ ಅಂತಿದ್ಲು.'

'ಓ, ಆ ಒಲದಲ್ಲಿ ಒಡದಾಕಿದ್ರಲ್ಲ ಆ ರಾಮಪ್ನ ? '

'ಹೂಂ, ಅದೇ ರಾಮಪ್ಪ.'

ಇಷ್ಟು ಹೊತ್ತಿಗೆ ಮಾದೇಗೌಡರಿಗೆ ಇದ್ದಕ್ಕಿದ್ದಂತೆ ಕೆಮ್ಮು ಆರಂಭವಾಯಿತು. ನಂಜೇಗೌಡ ಚಿನ್ನಪ್ಪನನ್ನು ಬಿಟ್ಟು ಅಣ್ಣನ ಕಡೆ ತಿರುಗಿ, ಬೆನ್ನು ನೀವಿದ ಚಿನ್ನಪ್ಪ ಬಸ್ಸಿನ ವೇಗವನ್ನು ಕಡಮೆ ಮಾಡಿದ. ಆದರೂ ಮಾದೇಗೌಡರ ಕೆಮ್ಮು ನಿಲ್ಲುವ ಹೊತ್ತಿಗೆ ಮೊದಲನೆಯ ತಿರುವು ದಾಟಿ ಎರಡನೆಯ ತಿರುವು ಒಂದು ಮೈಲಿ ಉಳಿದಿತ್ತು.

ಮತ್ತೆ ಚಿನ್ನಪ್ಪನೇ ಮಾತನ್ನು ಆರಂಭಿಸಿದ. 'ರಾಮಪ್ಪನ ಎಂಡ್ತಿ ಏನಾದ್ಲು ಗೊತ್ತ ? '

ನಂಜೇಗೌಡ ಅಣ್ಣನ ಕೆಮ್ಮು ನಿಂತ ಮೇಲೆ ಸುತ್ತಮುತ್ತ ಪ್ರಕೃತಿಯ ದೃಶ್ಯವನ್ನು ನೋಡುತ್ತಿದ್ದ. ಘಾಟಿಗಳ ಮಧ್ಯೆ ಸಾಗಿದ ರಸ್ತೆ ಅದು. ಎರಡು ಪಕ್ಕದಲ್ಲಿಯೂ ಮೋಡವನ್ನು ಮುಟ್ಟಲೆಳಸಿ ನಿಂದ ಗಿರಿ ಪಂಕ್ತಿಗಳು. ಗಿರಿಗಳಿಗೆ ತೊಡಿಸಿದ ಹಸಿರು. ಒಂದನ್ನೊಂದು ಮೀರಿಸಿ ನಿಲ್ಲಲು ಸ್ಪರ್ಧಿಸಿದ ಮರಗಳು. ಮಧ್ಯೆ ಮರಗಳನ್ನು ಹಿಮ್ಮೆಟ್ಟಿಸಿ ನಿಂತ ಬಂಡೆಗಳು. ಬಸ್ಸು ಈಗ ಮೇಲಕ್ಕೆ ಹತ್ತಿ ತಿರುಗಿಕೊಳ್ಳಬೇಕು.

ಆ ತಿರುವಿನಲ್ಲಿ ಏನಾದರೂ ಆಯ ತಪ್ಪಿದರೆ ಕಣಿವೆ ಅದನ್ನು ನುಂಗಲು ಸಿದ್ಧವಾಗಿತ್ತು.

ಚಿನ್ನಪ್ಪನ ಮಾತು ಕೇಳಿ ನಂಜೇಗೌಡ ತಿರುಗಿದ—'ಎಲ್ಲವ್ಳೊ ಆ ಮುಕ್ಕಿ, ಯಾರಿಗೆ ಗೊತ್ತು? ಅವರ ಅಣ್ಣನ್ಜೊತೆಗೆ ಪಟ್ಟಣಕ್ಕೆ ಓದ್ಲು.'

'ಓದಲ್ವಾ ? ಅವಳು ನಮ್ಮಮ್ಮ. ನಿಮ್ಮ ವಿಷಯ ಎಲ್ಲ ಗೊತ್ತು ನನ್ಗೆ!'

ನಂಜೇಗೌಡ ಬೆಚ್ಚಿಬಿದ್ದ. ಅರ್ಧ ಕ್ಷಣ ಚಿನ್ನಪ್ಪನ ಕಡೆ ದೃಷ್ಟಿಸಿನೋಡಿದ. ಚಿನ್ನಪ್ಪ ಇದನ್ನು ಲಕ್ಷ್ಯ ಮಾಡದವನಂತೆ ಮುಂದೆ ರಸ್ತೆಯನ್ನು ದಿಟ್ಟಿಸುತ್ತಿದ್ದ. ಬಸ್ಸು ಪ್ರಯಾಸದಿಂದ ಮೇಲೆ ಸಾಗಿತ್ತು.

ಅಷ್ಟು ಹೊತ್ತಿಗೆ ಹಿಂದಿನಿಂದ ಮಾತು ಕೇಳಿಸಿತು. 'ತುಂಬಿದ ಬಸುರಿ ಕಣಮ್ಮ, ಎಂಟು ತಿಂಗಳಾಗಿತ್ತು. ಗಂಡ ಬೇರೆ ಮಲಗನ್ನಂತೆ.'

ಈ ಸಲ ಬೆಚ್ಚಿ ಬಿದ್ದವನು ಚಿನ್ನಪ್ಪ. ಬಸ್ಸಿನಲ್ಲಿ ಆ ಮುದುಕಿ ಇದ್ದುದನ್ನು ಮರೆತೇ ಬಿಟ್ಟಿದ್ದ. ಆರೋಗ್ಯಸಾಮಿ ಹೋದರೇನೊ ಚಿಂತೆಯಿಲ್ಲವೆಂದು ನಿರ್ಧರಿಸಿದ್ದ, ಆದರೆ ಮುದುಕಿ ?

ನಂಜೇಗೌಡ ಮಾದೇಗೌಡನಿಗೆ ಪಿಸು ಮಾತಿನಲ್ಲಿ ಏನೋ ಹೇಳುತ್ತಿದ್ದ. ಮುದುಕಿಯ ಧ್ವನಿ ಕೇಳಿಸಿತು. 'ನಂಗೇನಾಗ್ಬೇಕವ್ವ? ಕಣ್ಮುಚ್ಚಿದ್ರೆ ಸಾಕು ಅಂತ ಇದ್ದೆ. ಈಗ ಇದು ಜೇರೆ ಬಂತು.'

ನಿಜ. ಆ ಮುದುಕಿಗೆ ಈ ಆಪತ್ತು ಬಾರದೇ ಇದ್ದಿದ್ದರೆ ಅವಳ ಪ್ರಾಣಕ್ಕೆ ಬೆಲೆ ಇರುತ್ತಿರಲಿಲ್ಲ. ಆದರೆ ಮಕ್ಕಳ ಗತಿ ? ಅವರನ್ನು ನೋಡಿಕೊಳ್ಳುವುದಕ್ಕೆ ಮತ್ತೆ ಯಾರಾದರೂ ಇದ್ದಾರೆಯೋ ಇಲ್ಲವೋ !

ಎರಡನೆಯ ತಿರುವೂ ಸಾಗಿ ಹೋಯಿತು.

ಮಾದೇಗೌಡ ನಂಜೇಗೌಡ ಇಬ್ಬರ ಮುಖದಲ್ಲೂ ಭಯ ಮನೆ ಮಾಡಿತ್ತು. ಏನು ಮಾಡಬೇಕೆಂದು ಇಬ್ಬರಿಗೂ ತೋರದು. ಪಿಸು ಮಾತಿನಲ್ಲಿ ಪರಸ್ಪರ ಸಲಹೆ ಕೇಳಿಕೊಂಡರು. 'ಬಸ್ ನಿಲ್ಲಿಸು ಎಂದು ಹೇಳುವುದೆ ? ನಿಲ್ಲಿಸಿ ಆ ಮೇಲೆ ಮಾಡು ವುದೇನು ? ಅವನು ನಿಲ್ಲಿಸದಿದ್ದರೆ ತಾವೇನು ಮಾಡಲು ಸಾಧ್ಯ ? ಅವನು ಬಸ್ ನಿಲ್ಲಿಸಿದರೆ ಸಾಕು, ನಾವು ಇಷ್ಟು ಜನ ಇದ್ದೇವೆ ಭಯವಿಲ್ಲ. ಆ ಮೇಲೆ ನೋಡಿ ಕೊಳ್ಳೋಣ.' ಎಂದು ಪಿಸುಗುಟ್ಟಿದ ನಂಜೇಗೌಡ. ಮಾದೇಗೌಡ ಸುಮ್ಮನೆ ತಲೆ ಯಲ್ಲಾಡಿಸಿದ. ಚಿನ್ನಪ್ಪ ಬಸ್ ನಿಲ್ಲಿಸದಿದ್ದರೆ ಮಾಡುವುದೇನು ? ಅವನೊಡನೆ ಮಾತನಾಡಿ ಪುಸಲಾಯಿಸಬೇಕೆಂದರೆ ಅದಕ್ಕೂ ಸಮಯವಿಲ್ಲ. ಮಾದೇಗೌಡ ಒಂದು ಸಲ ಹಿಂದಕ್ಕೆ ತಿರುಗಿ ನೋಡಿದ, ಮದುಮಗ ತನ್ನ ತಂಗಿಯೊಡನೆ ಮಾತನಾಡುತ್ತಿದ್ದ. ಅವಳು ಅವನನ್ನು ಹಾಸ್ಯ ಮಾಡುತ್ತಿದ್ದಳೇನೊ, ಅವನೂ ನಗುತ್ತಿದ್ದ. ಮಾದೇಗೌಡರ ಕಣ್ಣಲ್ಲಿ ನೀರು ತುಂಬಿತು, ತಿರುಗಿ ಬಿಟ್ಟರು.

ಎರಡನೆಯ ತಿರುವೂ ಸಾಗಿ ಹೋದದ್ದು ಕೂಡಲೇ ಚಿನ್ನಪ್ಪನ ಗಮನಕ್ಕೆ ಬರಲಿಲ್ಲ. ಸ್ವಭಾವಸಿದ್ಧವಾದ ಕೌಶಲ್ಯದಿಂದ ಬಸ್ಸನ್ನು ಆ ತಿರುವಿನಲ್ಲಿ ನಡೆಸಿದ್ದ. ಅದು ದಾಟಿ ಹೋದ ಮೇಲೆ ಆ ತಿರುವೂ ಹಿಂದುಳಿಯಿತು ಎಂಬುದು ಗೊತ್ತಾಯಿತು. ಮೂರನೆಯ ತಿರುವು ಇನ್ನೆರಡು ಮೈಲಿ.

ಮುದುಕಿಯ ಮಾತು ಸಾಗಿತ್ತು. 'ಒಂದು ಹೆಣ್ಣು, ಒಂದು ಗಂಡು ಮಗು ಐತೆ. ನನಗೂ ಇನ್ಯಾರೂ ಮಕ್ಳಿಲ್ಲ ಕಣವ್ವ. ಗಂಡ ಓದ್ಮೇಲೆ ಏನೇನೋ ಕಷ್ಟ ಅನುಬವ್ಸಿ ಬೆಳಸ್ದೆ ಆ ಉಡ್ಗೀನ. ಆ ಮಕ್ಳುಗೂ ಬೇರೆ ಗತಿ ಇಲ್ಲ'

ಮುದುಕಿಯನ್ನು ಬಸ್ಸಿನಲ್ಲಿ ಕೂಡಿಸಿದ ಆರೋಗ್ಯಸಾಮಿಯನ್ನು ಮನಸ್ಸಿನಲ್ಲೇ ಬೈದುಕೊಂಡ ಚಿನ್ನಪ್ಪ. ಮೂರನೆಯ ತಿರುವು ನಿಧಾನವಾಗಿ ಹತ್ತಿರ ಬರುತ್ತಿತ್ತು

ಕಡೆಗಣ್ಣಿನಿಂದ ಪಕ್ಕದಲ್ಲಿ ಕುಳಿತಿದ್ದ ಅಣ್ಣತಮ್ಮಂದಿರನ್ನು ನೋಡಿದ. ಇಬ್ಬರ ಮುಖವೂ ಬೆವರಿನಲ್ಲಿ ಮಿಂದಂತಿದ್ದುವು. ತನ್ನ ತಾಯಿಯನ್ನು ಜ್ಞಾಪಿಸಿಕೊಂಡ. ಅವಳ ದಾರುಣ ಜೀವನದ ರುದ್ರ ಸನ್ನಿವೇಶಗಳೆಲ್ಲ ಅವನ ಮನಸ್ಸಿನಲ್ಲಿ ಹಾದು ಹೋದುವು. ತಾಯಿ ಎಷ್ಟು ಕಷ್ಟದಿಂದ ತನ್ನನ್ನು ಬೆಳಸಿದಳು! ತೀರ ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡರೂ ತನಗಾಗಿ ಬಾಳಿದಳು—ಈ ಮುದುಕಿ ತನ್ನ ಮಗಳಿಗಾಗಿ ಬಾಳಿದಂತೆ. ಈ ಯೋಚನೆ ಬರುತ್ತಲೇ ಅವನ ಮೈ ನಡುಗಿತು. ಕಷ್ಟದಿಂದ, ಪ್ರೇಮದಿಂದ ಮುದುಕಿ ಬೆಳೆಸಿದ ಮಗಳು ಕಣ್ಮುಚ್ಚಿ ಈಗ ಅವಳ ಅನಾಥ ಮಕ್ಕಳು ಮುದುಕಿಯ ಪಾಲಿಗೆ ಬಂದಿವೆ. ಮುದಕಿಗೇನಾದರೂ ಆದರೆ ಈ ಮಕ್ಕಳ ಗತಿ ಏನು ? ಆದರೆ ಅದಕ್ಕಾಗಿ ತನ್ನ ಸೇಡನ್ನು ತೀರಿಸಿಕೊಳ್ಳದೆ ಬಿಡುವುದೆ? ಮತ್ತೆ ಇಂತಹ ಅವಕಾಶ ಸಿಕ್ಕೀತೇ ?

ಮುದುಕಿ ಹೇಳುತ್ತಿತ್ತು. 'ಕೊಪ್ಪದಿಂದ ಎಂಟು ಮೈಲಿ ಓಗ್ಬೇಕು ಹಳ್ಳಿಗೆ.'

ಹುಂ, ಮುದುಕಿ ಎಷ್ಟು ವಿಶ್ವಾಸದಿಂದ, ಕೊಪ್ಪ ತಲುಪುತ್ತೇನೆ ಎಂಬ ಧೈರ್ಯದಿಂದ ಮಾತಾಡುತ್ತಿದ್ದಾಳೆ! ಹಳ್ಳಿಯಲ್ಲಿ ಅವಳ ಮಗಳ ಗಂಡ ಎಷ್ಟು ಕಾತರದಿಂದ ಕಾಯುತ್ತಿದ್ದಾನೊ—ಮುದುಕಿ ಬಂದರೆ ಮಕ್ಕಳನ್ನು ಅವಳ ಮಡಿಲಲ್ಲಿಟ್ಟು ನಿಶ್ಚಿಂತೆಯಾಗಿ ಕಣ್ಮುಚ್ಚಬಹುದೆಂದು. ಆ ಮಕ್ಕಳು ಅವರಿವರ ಕೈಯಲ್ಲಿ ಸಿಕ್ಕಿ ಎಷ್ಟು ಆತುರದಿಂದ ಅಜ್ಜಿಯ ಬರವನ್ನು ಎದುರುನೋಡುತ್ತಿವೆಯೊ !

ಮತ್ತೆ ಚಿನ್ನಪ್ಪ, ಮಾದೇಗೌಡ ನಂಜೇಗೌಡರನ್ನು ನೋಡಿದ. ಮೂರನೆಯ ತಿರುವು ಹತ್ತಿರ ಬರುತ್ತಿತ್ತು. ಅವರಿಬ್ಬರ ನೋಟ ಅವನ ಮುಖದಲ್ಲಿ ನೆಟ್ಟಿತ್ತು.

ಮೂರನೆಯ ತಿರುವನ್ನೂ ಬಸ್ಸು ಸುರಕ್ಷಿತವಾಗಿ ದಾಟಿತು.

ಚಿನ್ನಪ್ಪನ ಮನಸ್ಸಿನಲ್ಲಿ ಸಾವಿರ ಚೇಳು ಕಡಿಯುತ್ತಿದ್ದುವು. 'ಏನು ಹುಚ್ಚು ಕೆಲಸ ಇದು! ಗುರುತು ಪರಿಚಯವಿಲ್ಲದ ಯಾವುದೋ ಮುದುಕಿಯ ಕತೆ ಕೇಳಿ ಇಂತಹ ಅವಕಾಶ ಕಳೆದುಕೊಳ್ಳುವುದೇ! ಮೂರ್ಖ ನೀನು' ಎಂದು ಕೂಗುತ್ತಿತ್ತು. ಮೈಯ್ಯಲ್ಲಿ ಓಡುತ್ತಿದ್ದ ರಕ್ತ. 'ಹೂಂ, ಕೊಪ್ಪಕ್ಕೆ ಇನ್ನು ಹನ್ನೆರಡು ಮೈಲಿ. ಅಲ್ಲಿಗೆ ಮುಟ್ಟಿದ ಮೇಲೆ ನಿನ್ನ ಗತಿ ಏನು! ಅವರಿಗೆ ಆಗಲೇ ನೀನು ನಿಂಗಮ್ಮನ ಮಗ ಎಂದು ಹೇಳಿದ್ದೀಯೆ, ಕೊಪ್ಪ ತಲುಪಿದ ಮೇಲೆ ಅವರು ನಿನ್ನನ್ನು ಹಾಸ್ಯ ಮಾಡುವುದಿಲ್ಲವೆ ?' ಎಂದು ಕೇಳಿತು ಹೃದಯ. 'ಯಾರು ಏನೇ ಹೇಳಲಿ, ಆ ಮುದುಕಿಯ ಮೊಮ್ಮಕ್ಕಳಿಗೆ ಜೀವದಾನವಾಯಿತು. ನಿನ್ನ ಸೇಡಿಗಿಂತ ಅವುಗಳ ಬಾಳು ದೊಡ್ಡದು' ಎಂದು ಸಮಾಧಾನ ಹೇಳಿತು ಮನಸ್ಸು. 'ಹೂಂ' ಹೌದು ಎಂದುಕೊಂಡ ಚಿನ್ನಪ್ಪ.

'ಥಡ್ '

ಬಸ್ಸಿನ ಹಿಂದಿನ ಚಕ್ರದ ಉಸಿರಡಗಿತ್ತು. ಚಕ್ರ ತಗ್ಗುತ್ತಲೇ ಬಸ್ ನಡುಗಿತು. ಬಸ್ಸಿನಲ್ಲಿ ಕೂತವರೆಲ್ಲ 'ಆಯ್ಯೋ' ಎಂದರು, ಚಿನ್ನಪ್ಪ ಹಲ್ಲು ಕಚ್ಚಿ 'ಬ್ರೇಕ್' ಹಾಕಲು ಯತ್ನಿಸಿದ, ಆಗಲಿಲ್ಲ. ಬಸ್ ರಸ್ತೆಯ ಅಂಚಿನಲ್ಲಿ ಜಾರಿ ಕೆಳ ಗುರುಳಿತು.

* * * * * *

ಎರಡು ದಿನ ಕಳೆದಿತ್ತು. ಪೋಲೀಸ್ ಇನ್ಸ್‌ಪೆಕ್ಟರು, ಬಸ್ ಕಂಪೆನಿ ಮಾಲೀಕರು, ಮಾದೇಗೌಡನ ಮಗ, ಎಲ್ಲ ಮಾತನಾಡುತ್ತ ಕುಳಿತಿದ್ದರು.

'ಸದ್ಯ, ನೀವು ಉಳಿದದ್ದು ನಮಗೆಲ್ಲ ಬಹಳ ಸಂತೋಷ,' ಮಾಲೀಕರೆಂದರು.

'ಬದುಕಿ ಬಾಳಬೇಕಾದವರು ಯಾರೂ ಹೋಗಲಿಲ್ಲ, ಅದೇ ಪುಣ್ಯ. ನಂಜೇಗೌಡರು, ಮಾದೇಗೌಡರು ಇಬ್ಬರಿಗೂ ವಯಸ್ಸಾಗಿತ್ತು, ಮುದುಕಿಯೂ ಇವತ್ತಲ್ಲ ನಾಳೆ ಕಣ್ಮುಚ್ಚುತ್ತಿತ್ತು.' ಇನ್ಸ್‌ಪೆಕ್ಟರ್ ನುಡಿದರು.

'ಡ್ರೈವರ್?' ಮಾದೇಗೌಡನ ಮಗ ಕೇಳಿದ.

'ಅವನಿಗೆ ಅಣ್ಣ ತಮ್ಮ ಯಾರೂ ಇಲ್ಲ. ತಂದೆತಾಯಿಯೂ ಇಲ್ಲ. ಮದುವೆ ಆಗಿರಲಿಲ್ಲ. ನಮ್ಮ ಕಂಪೆನೀಲೆಲ್ಲ ಬಹಳ ಗಟ್ಟಿಗ ಅನ್ನಿಸಿಕೊಂಡಿದ್ದ ಅವನು, ಅದೇ ನನಗೆ ದುಃಖ,' ಮಾಲೀಕರು ಉತ್ತರ ಕೊಟ್ಟರು.

'ಪಾಪ, ಚೆನ್ನಾಗಿಯೇ ಬಸ್ ಬಿಟ್ಟ. ಹಿಂದಿನ ಚಕ್ರ ಕೈಕೊಡದೇ ಇದ್ದಿದ್ದರೆ ಹೋಗ್ತಾ ಇದ್ವಿ ಕೊಪ್ಪಕ್ಕೆ,' ಮಾದೇಗೌಡನ ಮಗ ಹೇಳಿದ.

'ಅಂತೂ ಚಿನ್ನಪ್ಪ ಚಿನ್ನದಂತಹ ಮನುಷ್ಯ,' ಬಸ್ ಮಾಲೀಕರೆಂದರು.

—ಎಲ್. ಎಸ್. ಶೇಷಗಿರಿರಾವ್

# ಯಕ್ಷಪ್ರಶ್ನೆ

ಕತ್ತಲೆ ಕವಿದು ಎರಡು ತಾಸಾಗಿರಬಹುದು ಅಷ್ಟೆ. ವಿಶ್ವನಾಥ ಅಳುಕುತ್ತಲೇ ಬಂದು ಬಾಗಿಲು ಬಡಿದ. ಊರೆಲ್ಲಾ ನಿರ್ಭೀತನಾಗಿ ಅಂಡಲೆಯುವವನಿಗೆ ಮನೆಯೊಳಗೆ ಕಾಲಿಡುವಾಗ ಯಾಕೆ ಹೆದರಿಕೆಯೋ ಕಾರಣ ಅವನಿಗೇ ತಿಳಿಯದಾದರೂ ಆ ಅನುಭವ ಮಾತ್ರ ಅವನಿಗಿಂದೇ ಹೊಸದಲ್ಲ. ಅವನು ಹೆದರುವುದಕ್ಕೇನಿದೆ ? ಮನೆಯನ್ನು ಹೊಗುತ್ತಲೇ ಗದರಿಕೆಯನ್ನು ಎದುರಿಸಬೇಕಲ್ಲ ಎನ್ನುವುದಕ್ಕೆ ಅವನೇನೂ ಹುಡುಗನಲ್ಲ. ಹಾಗೆ ಅವನನ್ನು ಹೆದರಿಸುವುದಕ್ಕೆ ಅವನಿಗೆ ಹಿರಿಯ ಗಂಡು ಮನೆಯಲ್ಲಿ ಯಾರಿದ್ದರಲ್ಲವೆ? ಅವನನ್ನು ಬಿಟ್ಟರೆ ಇದ್ದವಳು ಅನಸೂಯಾ ಒಬ್ಬಳೆ. ಆ ಹೆಣ್ಣು ಯಾವುದಕ್ಕೂ ಅವನನ್ನು ಈತನಕ ವಿಚಾರಿಸಿದವಳಲ್ಲ. ಹಾಗೆಲ್ಲ ಅವಳು ವಿಚಾರಿಸಬಹುದಾದ ಮನೋವೃತ್ತಿಯವಳೂ ಅಲ್ಲ. ಅವನು ಮನೆಗೆ ಬಂದಾಗಲೆಲ್ಲ ಹೆತ್ತ ತಾಯಿಯಾದವಳು ತನ್ನ ಮಗನನ್ನು ಹೇಗೆ ಕಾಣಬಹುದೋ ಅದೇ ರೀತಿಯಲ್ಲಿ ಅವನನ್ನು ಕಂಡಿದ್ದಾಳೆ, ಕಾಣುತ್ತಿದ್ದಾಳೆ. ಅದನ್ನು ಅವನೂ ಬಲ್ಲ. ಮಲತಾಯಿಯಾಗಿಯೂ ಅವಳು ತೋರುತ್ತಿದ್ದ ವಾತ್ಸಲ್ಯ ಅವನನ್ನು ಹಣ್ಣಾಗಿಸುತ್ತಿತ್ತು. ಆ ಮಮತೆ ಅವನಿಗೆ ಬೇಡವಾಗಿತ್ತೆಂದಲ್ಲ. ಆದರೆ ಅದಕ್ಕೆ ಸರಿಯಾದ ಗೌರವದಿಂದ ನಡೆದುಕೊಳ್ಳಬಹುದಾದ ನಿಗ್ರಹ ಅವನ ದುರ್ಬಲ ಮನಸ್ಸಿಗೆ ಇರಲಿಲ್ಲ. ಅಂದರೆ ಅವಳಿಗೆ ಎದುರು ಆಡುತ್ತಿದ್ದನೆಂದಾಗಲಿ ವಿರೋಧವಾಗಿ ವರ್ತಿಸುತ್ತಿದ್ದನೆಂದಾಗಲೀ ಅಲ್ಲ. ಅವಳ ನಯಭಾವ ತಾನೂ ಒಗ್ಗಿಸಿಕೊಳ್ಳಬೇಕು ಎಂದು ಬಯಸಿದಷ್ಟೂ ಅವನು ವಿಫಲನಾಗುತ್ತಿದ್ದ, ಅದರಿಂದಲೇ ಅವನಿಗೆ ಮನೆಗೆ ಬರುವಾಗಲೆಲ್ಲ ಹೆದರಿಕೆ, ಊರಿಗೆಲ್ಲ ಪುಂಡು--ಪೋಕರಿಯಾಗಿದ್ದ ಮಗ ಗೌರವವಿಟ್ಟ ತನ್ನ ತಾಯೆದುರು ಬಂದು ನಿಲ್ಲುವುದಕ್ಕೆ ಅಳುಕುವಂತೆ.

ತನ್ನನ್ನು ಕಂಡರೆ ವಿಶ್ವನಾಥನಿಗೆ ಏನೋ ಹೆದರಿಕೆಯೆಂದು ಅನಸೂಯಾ ತಿಳಿದವಳಲ್ಲವಾದರೂ ತನ್ನಲ್ಲಿ ಅವನಿಗೆ ಆದರವಿಲ್ಲದಿಲ್ಲ ಎಂದು ಅವಳು ಅರಿಯದೇ ಇಲ್ಲ. ಮನೆ ಬೆಳಗುವುದಕ್ಕೆಂದು ಇದ್ದ ಒಂದೇ ಒಂದು ಗಂಡುಪಿಳ್ಳೆ, ಮನೆಯೇ ಮರೆತು ಹೋದವನಂತೆ ಸದಾ ಹೊರಗೇ ಅಲೆಯುತ್ತಿರುತ್ತಾನಲ್ಲ ಎಂಬುದೇ ಅವನಿಗಾಗಿ ಅವಳಿಗಿದ್ದ ಕೊರಗು. ಅವನು ಎಂದೇ ಬರಲಿ, ಎಷ್ಟು ಹೊತ್ತೇ ಆಗಿರಲಿ 'ವಿಶು, ಚಿಕ್ಕಿ ಇನ್ನೂ ಬದುಕಿದ್ದಾಳೆ ಎಂಬುದನ್ನು ನೀನು ಮರೆತಿಲ್ಲವಲ್ಲ' ಎಂದು ಮಿದುವಾಗಿಯೇ ಅವಳು ಎಂದಾದರೂ ಅವನಲ್ಲಿ ಹೇಳುವುದುಂಟು. ಆಗೆಲ್ಲ ಅವನು

ಕೇವಲ ವಿನೀತನಂತೆ ತಲೆ ತಗ್ಗಿಸಿಬಿಡುತ್ತಾನೆ ಅಷ್ಟೆ. ಆದರೆ ಹಾಗೆ ಮನೆಗೆ ಬಾರದೇ ಇರುವುದಕ್ಕೆ 'ನಿನಗೇನು ಅಂತಹ ಕಾರಭಾರ ?' ಎಂದು ಅವಳು ಎಂದೂ ಅವನನ್ನು ವಿಚಾರಿಸಿದವಳಲ್ಲ. ಹಾಗೇನಾದರೂ ಕೇಳಿಬಿಟ್ಟರೆ ಎಂದು ಅವನಿಗೇ ಹೆದರಿಕೆ. ಒಮ್ಮೆ ಕೇಳಿಯೇಬಿಟ್ಟಳಾದರೆ ಏನಾದರೂ ಹಾರಿಕೆಯ ಉತ್ತರ ಕೊಟ್ಟುಬಿಟ್ಟರಾಯಿತು ಎಂದು ಅವನು ತನ್ನಲ್ಲೇ ಯೋಚಿಸುವನಾದರೂ, ಆ ಸಮಯ ಸುಳ್ಳು ಹೇಳಬೇಕಾಗುತ್ತದಲ್ಲ ಎಂದು ಅವನ ವಿವೇಕ ಕಚ್ಚುತ್ತಿರುವುದು. ಆ ಪ್ರಸಂಗ ಅವನಿಗೆ ಬೇಡವಾಗಿತ್ತು. ಅಷ್ಟೇ ಅವಳಿಗಾದರೂ ಅದು ಬೇಕಾಗಿದ್ದರಲ್ಲವೆ ?

ಹಾಗೆ ಅವನು ಮನೆಯಿಂದ ಯಾಕೆ ದೂರವಾಗಿರುತ್ತಾನೆ ಎಂದು ಅವಳಿಗೆ ತಿಳಿದದ್ದು ಊರ ಜನ ಅವನ ಬಗ್ಗೆ ಹಗುರಾಗಿ ಆಡಿಕೊಳ್ಳುವುದಕ್ಕೆ ಆರಂಭಿಸಿದಾಗಲೇ. ಮೊದಲು ಅವಳಿಗೆ ನಂಬಿಕೆಯಾಗಲೇಯಿಲ್ಲ. ಆದರೆ ಆ ಮಾತು ನಿತ್ಯದ್ದಾಗುತ್ತ ಬಂದಷ್ಟೇ ದಿನಕಳೆದಂತೆ ಅವನು ಮನೆಯಿಂದ ಹೆಚ್ಚು ಹೆಚ್ಚು ದೂರವಾಗಿರುತ್ತಿರುವುದನ್ನು ಕಂಡಾಗ ಇದ್ದರೂ ಇರಬಹುದು ಎಂದು ಅವಳು ಭಾವಿಸಲೇಬೇಕಾಯಿತು.

ವಿನೋದಕ್ಕಾದರೂ ವಿಶ್ವನಾಥನ ಮದುವೆಯ ಮಾತೇನಾದರೂ ಬಂದರೆ ಊರ ಜನ 'ಇಂಥವನಿಗೆ ಹೆಣ್ಣು ಕೊಡುವುದಕ್ಕಿಂತ ಆ ಹೆಣ್ಣಿನ ಕೊರಳಿಗೆ ಕಲ್ಲು ಕಟ್ಟಿ ಕೆರೆಯೋ ಬಾವಿಯೋ ಕಾಣಿಸುವುದು ಒಳಿತು' ಎಂದು ಆಡಿಕೊಳ್ಳುತ್ತಾರೆಂದು ಕೇಳಿದಾಗ ಇಲ್ಲಿಗೆ ಈ ಮನೆತನ ನಿಂತು ಹೋಗಬೇಕೇ ಎಂದು ವ್ಯಥೆಯಿಂದ ಒಂದು ಬಾರಿ ಅವಳು ತುಟಿ ಮೀರಿ ಆಡಲೇಬೇಕಾಯಿತು, 'ವಿಶು, ಈ ಮನೆ ನಿನ್ನಿಂದಲೇ ಬೆಳಗಬೇಕೆಂಬ ಯೋಚನೆಯೇ ನಿನಗೆ ಇಲ್ಲವೆ ?' ಎಂದು ಅಂದರೆ 'ನಾನು ಮದುವೆಯಾಗಬೇಕೆಂದು ನೀನು ಹೇಳುವುದಲ್ಲವೆ?'ಎಂದು ಗ್ರಹಿಸಿಯೇ ಅವನು ಅಂದಾಗ 'ನೀನು ಮದುವೆಯಾಗಬೇಕೆಂದುಕೊಂಡಿರುವುದು ಪ್ರಾಯ ಸಂದಮೇಲೇ?' ಎಂದು ತಾಳ್ಮೆ ತಪ್ಪಿ ಅಲ್ಲವಾದರೂ ಆ ಮಾತು ಅವಳ ಬಾಯಿಂದ ನುಸುಳಿ ಹೋಗಿತ್ತು. ಮದುವೆಯಹೆಣ್ಣು ಅವನಿಗೆ ಬೇಡವಾಗಿರದಿದ್ದರೂ ಜನರ ಬಾಯಿ ಮಾತಾಗಿದ್ದ ಆ ಮದುವೆಯ ಮಾತು ಅವನಿಗೆ ಬೇಡವಾಗಿತ್ತು. 'ಚಿಕ್ಕಿ, ಇದೊಂದು ವಿಚಾರವಾಗಿ ನೀನು ನನ್ನನ್ನು ಮತ್ತೆ ಕೇಳಬಾರದು' ಎಂದು ಅವನು ನಿರ್ದಾಕ್ಷಿಣ್ಯದ ಉತ್ತರ ಕೊಟ್ಟಮೇಲೆ ತಾನು ಈ ಮಾತು ಎತ್ತಿದ್ದೇ ತಪ್ಪಾಯಿತೇನೋ ಎಂದು ಕೊಂಡಳಾದರೂ ಜನ ಇವನ ಬಗ್ಗೆ ಆಡಿಕೊಳ್ಳುವ ಮಾತಿನಲ್ಲಿ ನಂಬತಕ್ಕದ್ದೂ ಸಾಕಷ್ಟು ಇದೆ ಎಂದು ಅವಳು ಅಂದುಕೊಳ್ಳಲೇಬೇಕಾಯಿತು. ನಂಬದೇ ಇರುವುದಕ್ಕೆ ಯಾವ ವೈರಾಗ್ಯ ಅವನಲ್ಲಿ ಕಾಣುತ್ತಿದೆ ? ಹರಯದ ಗಂಡಿಗೆ ಮದುವೆಯೇನಾದರೂ ಅಪ್ರಿಯವಾದ ವಿಚಾರವಾಗುತ್ತದೆಯೆ ? ಹೊರಗಡೆ ಹತ್ತು ಬಗೆಯ

ಊಟದ ಸವಿ ಕಂಡವನಿಗೆ ಮನೆಯ ಊಟ ಹೇಗಿದ್ದರೂ ಸಪ್ಪೆ! ಆದರೆ ಈ ತೃಷೆಗೆ ತೃಪ್ತಿ ಎಂದಾದರೂ ಉಂಟೆ? ಎಂದು ಚಿಂತಿಸುತ್ತಿದ್ದಂತೆಯೇ ಅಧೀರಳಾಗಿ 'ವಿಶು, ಈ ಕುಲದ ರಕ್ತ ನಿನ್ನೊಂದಿಗೆ ಬತ್ತಿಹೋಗಬಾರದು ಎಂದು ಹೆಣ್ಣಾದ ನನಗಿಂತಲೂ ಹೆಚ್ಚು ಅರಿತಿರಬೇಕಾಗಿದ್ದವನು ನೀನೇ. ಮೀಸೆ ಬಂದ ಗಂಡಸಿಗೆ ಇದು ಹೇಳಿ ತಿಳಿಸಿಕೊಡಬೇಕಾದ ಮಾತೇ ಅಲ್ಲ. ಆದರೂ ಆಡಿಬಿಟ್ಟೆ. ತಪ್ಪಾಗಿ ಕಂಡರೆ ಮನ್ನಿಸಿ ಬಿಡು' ಎಂದು ತಾನಾಗಿಯೇ ಎತ್ತಿದ್ದ ಮಾತಿಗೆ ಅವಳು ಮುಗಿತಾಯ ಮಾಡುತ್ತಲೇ, ಕೇಳಿಯೂ ಕೇಳದವನಂತೆ ಮೂಕನಹಾಗೆ ಅವನು ಮನೆಯಿಂದ ಹೊರಬಿದ್ದು ನಡೆದಿದ್ದ.

ಈ ಮಾತಿಗೀಗ ಐದು ವರ್ಷಗಳೇ ಸಂದಿವೆಯಾದರೂ 'ಈ ಮಾಣಿಗೆ ಸರಿಯಾದ ಬುದ್ಧಿ ಕೊಟ್ಟು ಈ ಮನೆಯನ್ನು ಉಳಿಸು ದೇವರೇ' ಎಂದು ಅನಸೂಯಾ ಭಗವಂತನನ್ನು ಬೇಡಿಕೊಳ್ಳುತ್ತಲೇ ಇದ್ದಾಳೆ. ಮತ್ತೆ ಅವನ ಇಷ್ಟಕ್ಕೆ ವಿರುದ್ಧವಾಗಿ ಏನಾದರೂ ಆಡಿ, ಎಷ್ಟಾದರೂ ಇವಳು ಮಲತಾಯಿಯಲ್ಲವೆ, ಎಂದು ಅವನು ಅಂದುಕೊಳ್ಳುವಂತಾಗಬಾರದು ಎಂದು ತನ್ನ ಭಾವನೆಗಳನ್ನೆಲ್ಲ ತನ್ನಲ್ಲೆ ತಡೆಹಿಡಿದು ಸುಮ್ಮನಾಗುತ್ತಿದ್ದಳಾದರೂ 'ಮೊದಲು ಎಷ್ಟು ಒಳ್ಳೆಯವನಾಗಿದ್ದ ಮಾಣಿ ಹೀಗೆ ಹೇಗಾದ?' ಎಂದು ಅವಳು ಯೋಚಿಸಿದಷ್ಟೂ ಉತ್ತರ ಅವಳಿಗೆ ನಿಲುಕದಾಗಿತ್ತು. ಅವನೀ ಚರಿತ್ರಹೀನ ಬದುಕಿಗೆ ನಾಂದಿ ಹಾಡಿದವರು ಯಾರು ಎಂದು ಅವಳೆಂತು ಊಹಿಸಬೇಕು?

* * * * * *

ವಿಶ್ವನಾಥ ಸ್ವಭಾವದಿಂದ ಹುಟ್ಟಾ ಕೆಡುಕನೇನೂ ಅಲ್ಲ. ಹೆತ್ತವರ ಮುದ್ದಿನಲ್ಲಿ ಹಾಯಾಗಿ ಬೆಳೆದವ. ಹತ್ತು ತುಂಬುವುದರಲ್ಲಿದ್ದಾಗ ತಾಯಿ ತೀರಿಕೊಂಡ ಮೇಲೆ ತಂದೆ ಸುಬ್ಬಣ್ಣನೇ ಅವನಿಗೆ ಸರ್ವಸ್ವನಾದ.

ಸುಬ್ಬಣ್ಣನೆಂದರೆ ಊರ ಜನಕ್ಕಷ್ಟೇ ಏನು, ಸುತ್ತುಮುತ್ತಿನ ಊರಿನವರೂ ಅವನನ್ನು ಬಲ್ಲರು. ಹಾಸ್ಯದಲ್ಲಿ ಸುಬ್ಬಣ್ಣನನ್ನು ಬಿಟ್ಟರೆ ಮತ್ತೆ ಬೇರೆ ಜನರೇ ಇಲ್ಲ ಎನ್ನುವಷ್ಟರಮಟ್ಟಿಗಿನ ಪ್ರಖ್ಯಾತಿ ಅವನದು. ಬಯಲಾಟದಲ್ಲಿ ಕೋಡಂಗಿಯಿಂದ ಹಿಡಿದು ಪ್ರಧಾನ ಪಾತ್ರದವರೆಗೂ ಕಟ್ಟಿ ಮೆರೆಯುವ ಸುಬ್ಬಣ್ಣ ಎಲ್ಲರಿಗೂ ಪರಿಚಿತ. ಮಕ್ಕಳಿಂದ ಹಿಡಿದು ಮುದುಕರಿಗೆಲ್ಲ ಅವನು ಸುಬ್ಬಣ್ಣನೇ ಆಗಿದ್ದ. ಅವನಾದರೂ ಅಷ್ಟೇ, ಆ 'ಸುಬ್ಬಣ್ಣ' ಎನ್ನುವ ಕರೆಯಲ್ಲೇ ಆ ಜನರ ವಿಶ್ವಾಸ ಕಾಣುತ್ತಿದ್ದ. ಆ ಸಲಿಗೆಯ ಕರೆಯಿಂದಲೇ ಅವನಿಗೆ ತೃಪ್ತಿ. ಅದರಲ್ಲಿದ್ದ ಆತ್ಮೀಯತೆ ಅವನಿಗೆ ಪ್ರಿಯವಾಗಿದ್ದಷ್ಟು 'ಸುಬ್ಬಣ್ಣನವರೆ' ಎಂದು ಕರೆದರೆ ಅವನಿಗೆ ಆಗುತ್ತಿರಲಿಲ್ಲ. ಹಾಗೇ

ನಾದರೂ ಹೊಸಬರಾದವರು ಗೌರವಕ್ಕಾಗಿ ಕರೆದರೂ 'ನಾನು ನಿಮ್ಮವನೇ ಎಂದು ತಿಳಿದು—ಸುಬ್ಬಣ್ಣ—ಎಂದೇ ಕರೆದರೆ ಸಾಕು' ಎಂದು ಆ ಹೊಸಬರಿಗೂ ಅವನು ಬಹು ದಿನಗಳ ಬಳಕೆಯುವರಷ್ಟು ಹತ್ತಿರದವನಾಗಿಬಿಡುತ್ತಿದ್ದ.

ಮಳೆಗಾಲ ಮುಗಿದ ಮೇಲೆ ಮತ್ತೆ ಮಳೆ ಹಿಡಿಯುವವರೆಗೆ ಯಾವ ಮೇಳ ದವರು ಕರೆದರೂ ಸುಬ್ಬಣ್ಣ ಸಿದ್ಧನೇ. ಎಲ್ಲಿಗೆ ಬೇಕಾದರೂ ಹೊರಟನೇ. ಕೊರತೆ ಬಿದ್ದ ಯಾವುದೇ ಪಾತ್ರವನ್ನಾದರೂ ತುಂಬಬಲ್ಲ ಸುಬ್ಬಣ್ಣನನ್ನು ಎಲ್ಲ ಮೇಳದ ವರೂ ಆಮಂತ್ರಿಸುವವರೇ. ಕನ್ನಡ ಜಿಲ್ಲೆಯಲ್ಲಿ ಹಳ್ಳಿಗಳೆಷ್ಟೋ ಮೇಳಗಳಾದರೂ ಸುಮಾರಾಗಿ ಅಷ್ಟೇ. ಯಕ್ಷಗಾನ ಇಲ್ಲವೆ ತಾಳ ಮದ್ದಲೆ, ಅದೇ ಹಳ್ಳಿಗರ ಮಾತಿ ನಲ್ಲಿ ಬಯಲಾಟ, ಅವರ ಕಲಾಜೀವನದ ಪ್ರತೀಕ. ಆದರೆ ಆ ಕಲೆಯ ನಯಭಾವ ವನ್ನು ತನ್ನ ದೈನಂದಿನ ಜೀವನದಲ್ಲೂ ಸುಬ್ಬಣ್ಣನಂತೆ ಪಳಗಿಸಿಕೊಂಡವರು ಸಿಕ್ಕು ವುದು ಅಪರೂಪ. ಬಯಲಾಟ ಮತ್ತು ಸುಬ್ಬಣ್ಣ ಇವೆರಡರಲ್ಲಿ ಒಂದು ಬಿಟ್ಟು ಮತ್ತೊಂದಿಲ್ಲ ಎನ್ನುವಷ್ಟು ಅವನು ಓಡಾಡಿದ ಕ್ಷೇತ್ರದಲ್ಲೆಲ್ಲ ಕೇಳಿಬರುತ್ತಿರುವ ಜನರ ಬಾಯಿ ಮಾತು.

ಮೇಳದಲ್ಲಿ ಭಾಗವತ ಅಜಾರಿ ಎಂದಾದರೆ ಸುಬ್ಬಣ್ಣ ಅದಕ್ಕೂ ಸಿದ್ಧನೇ. ಅವನ ಕಂಠದಲ್ಲಿ ಕೋಮಲತೆ ಇಲ್ಲದಿದ್ದರೂ ಅದು ಶ್ರಾವ್ಯವಾಗಿತ್ತು. ಶೃತಿ-ತಾಳ ಸರಿ ಯಾಗಿ ಇದ್ದಮೇಲೆ ಹಾಡಿಕೆ ಶ್ರಾವ್ಯವಾಗಿರದೆ ಏನು ? ಹಾಗೇ ಮೃದಂಗ ಬಾರಿ ಸುವುದಕ್ಕೆ ಜನ ಇಲ್ಲ ಎಂದಾದರೆ ಸುಬ್ಬಣ್ಣ ಅದಕ್ಕೂ ತಯಾರು. ಯಕ್ಷಗಾನದ ಅಭಿ ಮಾನಿಗಳಾದವರು 'ಎಲ್ಲಾ ಹಳೆಯ ಕೃತಿಗಳೇ ಆದವು. ಹೊಸದೇನಾದರೂ ಇದ್ದರೆ ನೋಡಬಹುದಾಗಿತ್ತಲ್ಲ' ಎಂದರೆ, ಸುಬ್ಬಣ್ಣನ ಬಗಲು ಬರಿದಾಗಿದ್ದರಲ್ಲವೆ ? ಅವನೇ ರಚಿಸಿದ ನಾಲ್ಕಾರು ಕೃತಿಗಳು ಅವನ ಹಸಿಬೆಯಲ್ಲಿ ಇದ್ದೇಇವೆ. ಅವನ್ನು ತಾನಾಗಿ ಪ್ರದರ್ಶಿಸುವ ಹಟ ಅವನಿಗೇನೂ ಇಲ್ಲ. ಬೇಡಿಕೆ ಬಂದರೆ ಕೊಟ್ಟರಾಯಿತು ಎಂದು ತನ್ನ ರಚನೆಗಳನ್ನು ಬಚ್ಚಿಟ್ಟುಕೊಂಡಿದ್ದನಾತ. ಇಷ್ಟೆಲ್ಲ ಬಂಡವಾಳ ಇರುವ ಆಸಾಮಿ ಹುಡುಕುತ್ತ ಹೋದರೂ ಯಾವ ಮೇಳದಲ್ಲೇ ಆದರೂ ಸಿಕ್ಕುವುದು ಅಪರೂಪ. ಆದರಿಂದಲೇ ಸುಬ್ಬಣ್ಣನಿಗೆ ಜಿಲ್ಲೆಯ ಪ್ರತಿಯೊಂದು ಮೇಳದಲ್ಲಿಯೂ ಒಂದು ಸ್ಥಾನ ಸಿಕ್ಕಿ, ಹಾಗೆ ಅವನು ಯಾವ ಮೇಳಕ್ಕೆ ಹೋದರೂ ಅವನ ಪಾಲಿಗೆ ಹೆಚ್ಚಾಗಿ ಬರುವುದು ಹಾಸ್ಯಗಾರನ ವೇಷವೇ. ಜನರ ಕುಶಾಲಿಗೆ ಅವನ ನಕಲೀ ಪಾರ್ಟೀ ಪಸಂದಾಗುತ್ತದೆ ಎಂದು ಎಲ್ಲ ಮೇಳದವರಿಗೂ ಗೊತ್ತು. ರಂಗಕ್ಕೆ ನಕಲೀ ಸುಬ್ಬಣ್ಣ ಬಂದ ಎಂದರೆ ಪ್ರೇಕ್ಷಕರೆಲ್ಲ ನಗೆಗಡಲಿನಲ್ಲಿ ಮುಳುಗಿಹೋಗುತ್ತಾರೆ. ಆ ನಕ್ಕು-ನಗಿಸುವ ಕಲೆ ಸುಬ್ಬಣ್ಣನಿಗೇ ಮೀಸಲು. ಸುಬ್ಬಣ್ಣನ ನಕಲೀ ಪಾರ್ಟು ಇಲ್ಲದ ಮೇಲೆ ಯಾವ ಆಟವಾದರೂ ಸುಮ್ಮನೆ ಎಂದು ಜನ ಆಡಿಕೊಳ್ಳುತ್ತಿರುವಾಗ

ಸುಬ್ಬಣ್ಣನನ್ನು ಬಿಟ್ಟು ಮತ್ತೆ ಹಾಸ್ಯವೇ ಇಲ್ಲ ಎಂದು ಆ ಮಾತಿನ ಅಭಿಪ್ರಾಯ ವಾಗುತ್ತದೆಯಷ್ಟೆ ? ಸುಬ್ಬಣ್ಣನ ಜನಪ್ರಿಯತೆಗೆ ಇನ್ನೇನು ಬೇಕು ?

ಸ್ವಭಾವತಃ ಸುಬ್ಬಣ್ಣ ಸಮಾಧಾನಿ. ಬದುಕಿನಲ್ಲಿ ಕಷ್ಟ-ಕಾರ್ಪಣ್ಯಗಳನ್ನೇ ಕಾಣದ ಸುಬ್ಬಣ್ಣ ಸದಾ ಸುಖಿಯಾಗಿರುವುದೂ ಸಹಜವೇ. ದುಡ್ಡಿಗಾಗಿ ಎಂದೂ ಅವನು ಬಣ್ಣ ಬಳಿದುಕೊಂಡವನಲ್ಲವಾದರೂ ಬಳಿದುಕೊಂಡು ಬರಿಗೈಯಿಂದ ಎಂದೂ ಬಂದವನಲ್ಲ. ಮನೆಯಲ್ಲಿ ಉಂಡುಡುವುದಕ್ಕೆ ಕಮ್ಮಿಯಾಗಿದ್ದರಲ್ಲವೆ ದುಡ್ಡಿಗಾಗಿ ಅವನು ಮೇಳ ಸೇರಿಕೊಳ್ಳಬೇಕಾದದ್ದು ? ಅಭಿಮಾನಕ್ಕೆ ಅವನನ್ನು ಕರೆಸಿಕೊಂಡ ಮೇಲೆ ಯಾವ ಮೇಳದವರಾದರೂ ಅವನಿಗೆ ಯಥಾ ಯೋಗ್ಯ ಮರ್ಯಾದೆ ಸಲ್ಲಿಸದೆ ಇರುವುದುಂಟೆ ? ಯಕ್ಷಗಾನದ ಅಭಿಮಾನಿಗಳಾದವರು ಮೇಳದವರನ್ನು ಆಮಂತ್ರಿಸಿದಾಗ ಬಯಲಾಟವೇ ಆಗಿದ್ದರೂ ಮೇಳದವರೇನೂ ಪುಕ್ಕಟೆಯಾಗಿ ಕುಣಿಯುವುದಿಲ್ಲ. ಮೇಳದವರೇ ಹರಕೆಯ ಆಟ ಆಡುವುದಾದರೆ ಅಲ್ಲಿ ಕೊಡ-ಕೊಳ್ಳುವ ಮಾತೇ ಇಲ್ಲ. ಏನು ಕೊಟ್ಟರೂ ಸುಬ್ಬಣ್ಣನಿಗೇನೋ ತೃಪ್ತಿಯೇ. ಆದರೆ ಮೇಳದಲ್ಲಿ ಮತ್ತೆ ಯಾರಿಗೂ ಸಿಕ್ಕದ ಮರ್ಯಾದೆ ಅವನಿಗೆ ಸಲ್ಲುತ್ತದೆ. ಸುಬ್ಬಣ್ಣನ ಅಂತರಂಗಕ್ಕೂ ಅದು ಗೊತ್ತು. ಮತ್ತೆ ಅವನು ಅಪೇಕ್ಷಿಸುವುದಕ್ಕೇನಿದೆ ? ಒಟ್ಟಿಗೆ ಸುಬ್ಬಣ್ಣ ತೃಪ್ತ ಜೀವಿ ಎಂದು ಒಂದು ಮಾತಿನಲ್ಲಿ ಹೇಳಿದರೆ ಸಾಕು.

ಸುಬ್ಬಣ್ಣನ ಸುಖಮಯ ಸಂಸಾರದಲ್ಲಿ ಬೀಸಿದ ಮೊದಲನೇ ಬಿರುಗಾಳಿ ಯೆಂದರೆ ಅವನ ಹೆಂಡತಿ ಕಾವೇರಿ ತೀರಿಕೊಂಡದ್ದು. ಕರಿಗತ್ತಲಲ್ಲೂ ಆವಳು ಮನೆಯ ಹತ್ತಿರದ ಕೆರೆಗೆ ಹೋಗಿಬಂದ ದಿನ ಎಷ್ಟಿರಲಿಲ್ಲ ? ಆದರೆ ಅಂದು ಆವಳಿಗೆ ಮೃತ್ಯು ಕಾದುಕೊಂಡಿತ್ತು. ಆ ಹಗಲಿನಲ್ಲಿಯೇ ಗ್ರಹಿಸದೆ ಹಾವಸೆ ಬೆಳೆದ ಕಲ್ಲಿನ ಮೇಲೆ ಕಾಲಿಟ್ಟ ಪ್ರಮಾದಕ್ಕೆ ಕಾಲು ಜಾರಿ ತಳ ಕಂಡವಳನ್ನು ಎತ್ತಿದ್ದು ಹೆಣವಾಗಿಯೇ.

ಸುಬ್ಬಣ್ಣನಿಗಾಗ ನಲವತ್ತು ವರುಷ. ಅವನ ಮಟ್ಟಿಗೆ ಮತ್ತೆ ಮದುವೆ ಒಂದು ಅವಶ್ಯಕತೆಯೇನೂ ಆಗಿರಲಿಲ್ಲ. ಎಷ್ಟಾದರೂ ಸುಬ್ಬಣ್ಣ ರಸಿಕನಲ್ಲವೆ ? ಏನನ್ನೂ ಸುಬ್ಬಣ್ಣ ಎಂದೂ ಅಪೇಕ್ಷಿಸಿದವನಲ್ಲ. ಅವನ ಮಟ್ಟಿಗೆ ಲಭ್ಯವಾದವೆಲ್ಲ ಅಕಲ್ಪಿತವೆ. ತನ್ನ ಅನುಭವದ ಮೊತ್ತವಾಗಿ ಅವನು ಹೇಳುತ್ತಿದ್ದ ಮಾತೆಂದರೆ-ಹೆಣ್ಣಿನ ಬದುಕು, ಹೆಣ್ಣಿನ ಹೃದಯ, ಹೆಣ್ಣಿನ ಪ್ರೇಮ—ಈ ಮೂರೂ ಪ್ರಪಂಚದಲ್ಲಿ ಅಪೂರ್ವವಾದ ಲಭ್ಯ ವಸ್ತುಗಳು ಎಂದು.

ಮನುಷ್ಯನಿಗೆ ಆಹಾರ-ನಿದ್ರೆ ಹೇಗೆ ಬೆಳೆಸಿಕೊಂಡು ಬಂದ ಪ್ರವೃತ್ತಿಗಳೋ ಹಾಗೇ ಮೈಥುನವೂ ಹೌದು ಎಂದು ಸುಬ್ಬಣ್ಣನಿಗೆ ಸರಿಯಾಗಿ ತಿಳಿದದ್ದು ಕಾವೇರಿ

ಸತ್ತಮೇಲೆಯೇ. ಅದೂ ಅವಳು ಮಳೆಗಾಲದಲ್ಲೇ ತೀರಿಕೊಂಡಿರದಿದ್ದರೆ ಈ ತಿಳು ವಳಿಕೆ ಅವನಿಗೆ ಬರುತ್ತಿರಲಿಲ್ಲವೋ ಏನೊ. ಅದು ಅವನು ಮನೆಯಲ್ಲೇ ಕುಳ್ಳಿರ ಬೇಕಾದ ಕಾಲ. ಅದರಿಂದ ಅನುಕೂಲಕ್ಕಾಗಿ ಮನೆಯಲ್ಲಿ ಹೆಂಡತಿ ಎಂಬವಳೊಬ್ಬ ಪ್ರಾಣಿ ಇರಬೇಕು ಎಂದು ಅವನು ಭಾವಿಸುವದಕ್ಕೆ ಬಹಳ ದಿನ ಬೇಕಾಗಲಿಲ್ಲ. ಈ ವಿಚಾರ ಹೇಗೆ ಅವನನ್ನು ಮತ್ತೆ ಮದುವೆಗೆ ಒತ್ತಾಯಿಸುತ್ತಿತ್ತೋ ಅಷ್ಟೇ ತನ್ನ ಮಗ ವಿಶ್ವನಾಥನ ದೇಖರೇಖೆಯ ವಿಚಾರವೂ ಬೆರೆಯದೇ ಇಲ್ಲ. 'ನಾನು ಮೇಳ ದವರ ಹಿಂದೆ ಹೋದರೆ ಇಲ್ಲಿ ಈ ಮಾಣಿಗೆ ಯಾರು ದಿಕ್ಕು ? ಈ ಪೋರನನ್ನು ಕಟ್ಟಿ ಕೊಂಡು ನಾನು ಊರೂರು ಅಲೆದಾಯಿತು. ಈ ವಯಸ್ಸಿಗೆ ಇವನು ನನ್ನ ಹಾಗೆ ತಿರುಗಪ್ಪನಾದರೆ ನಾಲ್ಕು ಅಕ್ಷರಗಳನ್ನಾದರೂ ಕಲಿತಹಾಗೇ ! ಮಳೆಗಾಲವೆಂದು ನಾನೀಗ ಮನೆಯಲ್ಲಿ ಕುಳಿತಿದ್ದೇನೆಯೇ ಹೊರತು ಹೆಂಗಸರಂತೆ ವರ್ಷವೆಲ್ಲಾ ಮನೆ ಯಲ್ಲೇ ಕುಳಿತು ಕಳೆಯುವುದು ನನ್ನ ಜಾಯಮಾನಕ್ಕೇ ಬಂದದ್ದಲ್ಲ' ಎಂದೆಲ್ಲ ದೀರ್ಘ ವಿಚಾರಗಳಿಂದಾಗಿ ತಾನೀಗ ಮತ್ತೆ ಮದುವೆಯಾಗುವುದು ಅನಿವಾರ್ಯವೆ ಸರಿ ಎಂಬ ತೀರ್ಮಾನಕ್ಕೆ ಬರಲು ಅವನಿಗೆ ತಡವಾಗಲಿಲ್ಲ.

ಗಂಡಿಗೆ ನಲವತ್ತು ಯಾವ ಲೆಕ್ಕ ? ಪಂಚಕನ್ನೆಯರನ್ನು ಹೆತ್ತ ಪರಮೇ ಶ್ವರ ಪಂಡಿತರು ತಮ್ಮ ಹಿರಿಯ ಮಗಳಾದ ಅನಸೂಯಾಳ ಲಗ್ನಕ್ಕಾಗಿ ವರ ಶೋಧನೆ ಮಾಡಿ ಸೋತುಹೋಗಿದ್ದ ಕಾಲವದು. ಅವಳ ಮದುವೆಯಾಗದಿದ್ದಕ್ಕಾಗಿ ಸೋದರ ಸಂಬಂಧ ಗೊತ್ತಾಗಿದ್ದರೂ ಅವಳೊತ್ತಿನವಳ ಮದುವೆಯನ್ನು ಸಂಪ್ರದಾಯ ಪ್ರಿಯ ರಾದ ಪಂಡಿತರು ಮಾಡುವಹಾಗಿರಲಿಲ್ಲ. ಆದರೆ ಅನಸೂಯಾ ಇನ್ನೂ ಕನ್ನೆಯಾ ಗಿಯೇ ಉಳಿದಿರುವುದಕ್ಕೆ ಅವಳು ಕುಂಟಿಯೆಂದಾಗಲಿ ಕುರುಡಿಯೆಂದಾಗಲಿ ಅಲ್ಲ ; ಅವಳು ಜನಿಸಿದ್ದು ಮೂಲಾನಕ್ಷತ್ರದಲ್ಲಿ ಎಂಬುದಕ್ಕಾಗಿ. ಮೂಲ ಆಳುವುದ ಕ್ಕಾಗಲಿ ಮೂಲೆ ಹಿಡಿದು ಅಳುವುದಕ್ಕಾಗಲಿ ಹುಟ್ಟಿದ ಹೆಣ್ಣು ಅವಳು ಎಂದೆ ಆ ನಕ್ಷತ್ರ ಸಾರುತ್ತಿರುವಾಗ ಮದುವೆಗೆ ಮಾಡಿಸಿಕೊಂಡು ಹೋಗುವ ಜನ ಸಾಮಾ ನ್ಯಕ್ಕೆ ಒಪ್ಪುವುದುಂಟೆ ? ಆ ದೋಷ ಮರೆಸುವುದಕ್ಕೆ ಆ ತಂದೆ ಹೇಳಿಕೊಳ್ಳುವ ಕುಳವಾರೂ ಅಲ್ಲ–ಸ್ಥಿತಿಯಿಂದ. ಹೀಗೆ ಹೆತ್ತವರಿಂದ ಹಿಡಿದು ಊರಿಗೆಲ್ಲ ಅಶುಭ ದವಳಾಗಿ, ಅಸಡ್ಡೆಯವಳಾಗಿ ಬೆಳದದ್ದಕ್ಕೋ ಏನೋ ; ಹೇಳಿಕೊಳ್ಳುವ ಸೌಂದರ್ಯ ವಿಲ್ಲದಿದ್ದರೂ ಸ್ತ್ರೀ ಸಹಜವಾದ ನಯ–ವಿನಯ ಅನಸೂಯಾಳ ಸೌಕುಮಾರ್ಯಕ್ಕೆ ಒಂದು ಶೋಭೆಯಾಗಿತ್ತು. ಆದರ ಅನುಭವ ಮೊದಲಾಗಿ ಕಂಡುಬಂದದ್ದು ಸುಬ್ಬಣ್ಣ ನಿಗೇ–ಅವಳನ್ನು ಮನೆತುಂಬಿಸಿಕೊಂಡಮೇಲೆ.

ವಿಧುರನಾದ ಅವನು ತನ್ನ ಆಯುಸ್ಸು ಗಟ್ಟಿಯೆಂದೇ ಭಾವಿಸಿದಹಾಗಿತ್ತು. ತಾನು ತಿಳಿದಮಟ್ಟಿಗೆ ಎರಡನೆ ಲಗ್ನಕ್ಕೆ ತನಗೆ ಹೆಣ್ಣು ಕೊಡುವುದಾದರೆ-ಅದೂ

ಮೊದಲಿನವಳಲ್ಲಿ ಒಂದು ಮಾಣಿ ಬೇರೆ ಇರುವಾಗ–ಈ ಪಂಡಿತರೇ ಸರಿ ಎಂದು ಸುಬ್ಬಣ್ಣ ಲೆಕ್ಕ ಹಾಕಿದ್ದು ತಪ್ಪಾಗಲಿಲ್ಲ. ಅನಸೂಯಾಳ ನಷ್ಟ ಜಾತಕದ ವಿಚಾರ ಸಾಕಷ್ಟು ಕೇಳಿಬಲ್ಲವನಾಗಿದ್ದರೂ ಮತ್ತೆ ಎಲ್ಲಿಯಾದರೂ ಹೆಣ್ಣು ಕೇಳುವುದಕ್ಕೆ ಹೋಗಿ ಎರಡನೇ ಲಗ್ನಕ್ಕೆ ಇಲ್ಲ ಎಂದು ಅನ್ನಿಸಿಕೊಳ್ಳುವ ಪ್ರಸಂಗವನ್ನು ಎದುರಿಸುವುದಕ್ಕಿಂತ ಸಮ್ಮಂಧ ಕೂಡುವುದಾದರೆ ಇಲ್ಲೇ ಸರಿ ಎಂದು ಅವನು ಪಂಡಿತರಲ್ಲಿ ಪ್ರಸ್ತಾಪಿಸಿದ್ದೂ ಆಯಿತು. ಕಾದಾಗಲೇ ಬೆಸೆದುಕೊಳ್ಳಬೇಕು ಎಂದು ಬಲ್ಲ ಪಂಡಿತರು ಜಾತಕ ಫಲದಲ್ಲಿ ಪೂರಾ ನಂಬಿಕೆಯಿದ್ದವರಾದದ್ದರಿಂದ ಸುಬ್ಬಣ್ಣನ ಮದುವೆಯ ಆತುರ ಕಂಡು ಒಪ್ಪಿಗೆ ಕೊಟ್ಟವರಂತೆ ತೋರಿಸಿಕೊಂಡರೂ ತಮ್ಮ ವ್ಯಾವಹಾರಿಕ ಬುದ್ಧಿಯನ್ನು ಸ್ವಲ್ಪ ಚಲಾಯಿಸದೇ ಇಲ್ಲ. ಭವಿಷ್ಯದಲ್ಲಿ ಮಗಳ ಅಶನ ವಸನಕ್ಕೆ ಅಸಹಾಯತೆ ಉಂಟಾಗಬಾರದೆಂದು ಮೂರು ಮೂಡೆ ಗದ್ದೆ ಅನಸೂಯಾಳ ಹೆಸರಿಗೆ ಅವರು ಬರೆಸಿಕೊಂಡಿದ್ದಾಯಿತು. 'ಇವಳೇನು ಬೇರೆಯವಳೇ ? ಹೇಗೂ ನನ್ನ ಹೆಂಡತಿಯೇ ಅಲ್ಲವೆ ?' ಎಂದು ಸುಬ್ಬಣ್ಣನೂ ಒಪ್ಪಿ ನಡೆದಿದ್ದ. ಮೊದಲು ಇದು ಅನಸೂಯಾಳಿಗೆ ತಿಳಿದಿರದಿದ್ದರೂ ತನ್ನ ಕನ್ಯಾಸೆರೆ ಬಿಡಿಸಿದ ಒಂದು ಋಣಕ್ಕಾಗಿ ತಾನೆಷ್ಟು ಕೃತಜ್ಞಳು ಎಂದು ಅವಳು ಸೇವೆಯಿಂದ ಸುಬ್ಬಣ್ಣನಿಗೆ ವ್ಯಕ್ತ ಮಾಡುತ್ತಿದ್ದಳು. ಅದೇ ಋಣಭಾರಕ್ಕಾಗಿಯೋ ಏನೋ, ವಿಶ್ವನಾಥನನ್ನವಳು ಎಂದೂ ಮಲತಾಯಿಯಾಗಿ ನೋಡಿದವಳಲ್ಲ. ಇದನ್ನೆಲ್ಲ ಕಾಣುವಾಗ ಸುಬ್ಬಣ್ಣ 'ಇವಳು ಅಡ್ಡಿಯಿಲ್ಲ' ಎಂದು ಸಂತೋಷಗೊಳ್ಳದಿಲ್ಲ.

ಸಾಮಾನ್ಯವಾಗಿ ಪ್ರತಿಯೊಂದು ಹೆಣ್ಣು ತಾಯ್ತನಕ್ಕಾಗಿ ಹಂಬಲಿಸುವಂತೆ ಅನಸೂಯಾಳೂ ಹಂಬಲಿಸದಿಲ್ಲ. ಆದರೆ ಅವಳಿಗೇನು ಗೊತ್ತು ? ಹತ್ತು ಜನ ಕಾಲು ತುಳಿಯುವ ಹಾದಿಯಲ್ಲಿ ಹುಲ್ಲು ಹುಟ್ಟುವುದುಂಟೆ ಎಂದು ? ಸುಬ್ಬಣ್ಣನ ಜೀವನದ ರಹಸ್ಯ ಅವಳು ಅರಿತವಳಲ್ಲ. ಅದು ಅವನಿಗಷ್ಟೇ ತಿಳಿದ ಗುಟ್ಟು. 'ಮಕ್ಕಳಾಗುವುದಕ್ಕೂ ಪೂರ್ವಾರ್ಜಿತ ವಿಶೇಷತೆ ಬೇಕು. ನಾನು ಪಡೆದು ಬಂದಿದ್ದರೆ ಆಗಬಾರದೆಂದಿದೆಯೆ ? ಇಲ್ಲದಿದ್ದರೇನು–ವಿಶು, ನನಗೆ ಬೇರೆಯೆ ? ಅವರ ಮಗ ನನಗೂ ಮಗನೇ' ಎಂದು ತನ್ನಲ್ಲೇ ತನ್ನ ಹೆಣ್ಣು ಹೃದಯಕ್ಕೆ ಅವಳು ಹೇಳಿಕೊಳ್ಳುತ್ತಿದ್ದ ಸಮಾಧಾನ. ಇದೇಬಗೆಯಾದ ಹೃದಯ ಮಂಥನ ಸುಬ್ಬಣ್ಣನಲ್ಲಿ ತಾನಾಗಿ ಉಂಟಾಗುವುದಿಲ್ಲ. ಕುಲದೀಪಕನಾಗಿ ವಿಶ್ವನಾಥ ಅವನ ಕಣ್ಣೆದುರು ಇರದಿರುತ್ತಿದ್ದರೆ 'ಅನಸೂಯಾ ಬಂಜೆಯೆ ?' ಎಂಬ ವಿಚಾರಕ್ಕೆ ಅವನೇ ಮೊದಲಿಗೆ ಬರುತ್ತಿದ್ದನೋ ಏನೋ ! ಅವಳನ್ನು ಮದುವೆಯಾದಮೇಲೆ ಅವಳನ್ನು ಮದುವೆಯಾಗುವುದಕ್ಕೆ ಅವನಿಗೆ ಕಾರಣವಾಗಿದ್ದ ಸಮಸ್ಯೆ ಅಂತೂ ಬಗೆಹರಿದು ಹೋಗಿತ್ತಾದದ್ದರಿಂದ ತನ್ನ ಬದುಕಿನ ಎಲ್ಲಾ ಸಮಸ್ಯೆಗಳೇ ಪರಿಹಾರವಾದಷ್ಟು ಹಾಯಾದ ರೀತಿಯಲ್ಲಿ

ಅವನೀಗ ಇದ್ದುಬಿಟ್ಟಿದ್ದ. ಅನಸೂಯಾ ಮನೆ ತುಂಬಿಸಿದ ಮೇಲೆ ಈ ಎಂಟು ಮಳೆಗಾಲ ಹೇಗೆ ಕಳೆದುಹೋದವೋ ಎಂಬುದರ ಲೆಕ್ಕ ಅವನಿಗೆ ಹತ್ತಲೇ ಇಲ್ಲ.

ವಿಶ್ವನಾಥನಿಗಾಗಲೇ ಊರಿನ ಶಾಲೆಯಲ್ಲಿ ದಿನ ತೆಗೆದು ಮುಗಿದು ಹೋಗಿತ್ತು. ಈಗ ಮನೆಯಲ್ಲಿ ಸುಖವಾಗಿ ಉಂಡು, ಹೊರಗೆ ಅಲೆಯುವದೇ ಅವನ ನಿತ್ಯದ ಕೆಲಸವಾಗಿತ್ತು. ಮಗನ ಭವಿಷ್ಯದ ಬಗ್ಗೆ ಸುಬ್ಬಣ್ಣ ಅಷ್ಟು ಯೋಚಿಸಿದವನೇ ಅಲ್ಲ. ಮೈಮೇಲೆ ಬಿಟ್ಟಿ ಬಿದ್ದಾಗ ತಾನಾಗಿ ತನ್ನ ದಾರಿಕಂಡುಕೊಳ್ಳುತ್ತಾನೆ ಎಂದೇ ಅವನು ಭಾವಿಸಿದ್ದ.

ಈಚಿಗೆ ಕೆಲವು ದಿನಗಳಿಂದ ಸಣ್ಣ ಜ್ವರ ಅನಸೂಯಾಳನ್ನು ಪೀಡಿಸುತ್ತಿತ್ತು. ಅದರಿಂದ ಅವಳ ತಾಯಿ ಅನುಪಾನಕ್ಕೆ ಇಲ್ಲೇ ಸರಿ ಎಂದು ನಾಲ್ಕು ದಿನಗಳ ಮಟ್ಟಿಗೆ ತಮ್ಮಲ್ಲಿಗೆ ಅವಳನ್ನು ಕರಿಸಿಕೊಂಡಳು. ಅದೇ ಮರುದಿನ ಸುಬ್ಬಣ್ಣನಿಗೆ ಗೇರುಸೊಪ್ಪೆಗೆ ಹೊರಡಬೇಕಾಗಿಬಂತು. 'ಮಾಣಿ, ಮನೆಯಲ್ಲಿ ನೀನು ಒಬ್ಬನೇ ಕುಳಿತು ಮಾಡುವದಾದರೂ ಏನು ? ನನ್ನೊಂದಿಗೆ ಬಂದುಬಿಡು' ಎಂದು ಮಗನೊಂದಿಗೇ ಹೊರಟನವ—ಈ ಸಲದ ದಂಡಯಾತ್ರೆಗೆ. 'ಇವನೂ ನನ್ನಂತೆ ಬಣ್ಣ ಹಚ್ಚಿಕೊಳ್ಳುವದನ್ನು ಅಭ್ಯಾಸಮಾಡಿಕೊಳ್ಳಬಾರದೇಕೆ ? ' ಎಂದು ಈಗಲೇ ಮಗನ ವಿಚಾರವಾಗಿ ಅವನು ಮೊದಲಬಾರಿ ಯೋಚಿಸಿದ್ದಾಗಿತ್ತು. ವಿಶ್ವನಾಥ ನಿರಾತಂಕವಾಗಿ ಬೆಳೆದ ಆಸಾಮಿ. ಏನನ್ನೂ ಅಪೇಕ್ಷೆ-ಎಂಬುದಾಗಿ ಬೆಳಸಿಕೊಂಡು ಬಂದವನೇ ಅಲ್ಲ. ತಂದೆ ಹೇಳಿದ್ದಕ್ಕೆ ಅಸ್ತು ಎಂದುಕೊಂಡು ಅನಸೂಯಾಳ ಆರೈಕೆಯಲ್ಲಿ ಸುಖವಸ್ತುವಾಗಿ ಬೆಳೆದ ವ್ಯಕ್ತಿ. ಮೊಗದಲ್ಲಿ ಅದೇ ಮೀಸೆ ಮೊಳಕೆಯೊಡೆದಿತ್ತಾದರೂ ಮನೆಯಲ್ಲಿ ಅವನಿನ್ನೂ ಹುಡುಗನೇ ಆಗಿದ್ದ.

ಗೇರುಸೊಪ್ಪೆಗೆ ಪ್ರಯಾಣ ಬೆಳೆಸಿದ ಸುಬ್ಬಣ್ಣ ಮಗನೊಂದಿಗೆ ಹೊನ್ನಾವರಕ್ಕೆ ಬರುವಷ್ಟಕ್ಕೆ ಕತ್ತಲಾಗಿತ್ತು. ಆಗಲೇ ಗೇರುಸೊಪ್ಪೆಗೆ ಹೋಗುವ ದೋಣಿಗಳೆಲ್ಲಾ ಹೋಗಿಬಿಟ್ಟಿದ್ದವು. ಹೊಳೆಗೀಗ ಇಳಿತದ ಹೊತ್ತಾಗಿತ್ತು. ಗಾಳಿಯೂ ಪ್ರವಾಹದ ವಿರುದ್ಧ ಪ್ರಯಾಣಕ್ಕೆ ಸಾಕಷ್ಟು ಅನುಕೂಲವಿಲ್ಲದಿರುವಾಗ ಕಾಸು ಹೆಚ್ಚು ಕೊಟ್ಟರೆ ಕೋಲುದೋಣಿ ಸಿಗಬಹುದಾಗಿತ್ತಾದರೂ ರಾತ್ರಿಯ ಹೊತ್ತಿನಲ್ಲಿ ನೀರಮೇಲೆ ತೂಕಡಿಸುತ್ತಾ ಪ್ರಯಾಣ ಬೆಳೆಸುವುದಕ್ಕಿಂತ ಈ ರಾತ್ರಿ ಇಲ್ಲೇ ತಂಗಿ ಹೊತ್ತಾರೆಗೆ ಪ್ರಯಾಣ ಬೆಳೆಸಿದರಾಯಿತು ಎಂದುಕೊಂಡು ಸುಬ್ಬಣ್ಣ ತನ್ನ ಪರಿಚಯದವನಾದ ಮೃದಂಗದ ನಾರಾಯಣನ ಮನೆಯ ದಿಕ್ಕು ಹಿಡಿದ, ರಾತ್ರಿಯ ಠಿಕಾಣಿಗೆಂದು. ಅವರಿಬ್ಬರದೂ ಹತ್ತಾರು ವರ್ಷಗಳಿಂದ ನಡೆದುಬಂದ ಸ್ನೇಹ, ಮೇಳದಲ್ಲೇ ಆದದ್ದು. ನಾರಾಯಣನದು ಮೃದಂಗದಲ್ಲಿ ಎತ್ತಿದ ಕೈ. ಹುಟ್ಟನಿಂದ ಅವನು ಬಾಂದಿಯುವನಾಗಿದ್ದರೂ ಅವನ ಕೈಚಳಕ ಅವನಿಗೆ ಹತ್ತು ಸಮಸ್ತರೊಂದಿಗೆ ಬೆರೆಯುವುದಕ್ಕೆ

ಅನುಕೂಲಮಾಡಿಕೊಟ್ಟಿತ್ತು. ಸ್ವಭಾವದಿಂದಲಾದರೂ ಅವನು ಸುಬ್ಬಣ್ಣನಷ್ಟೇ ಸಾಮಾಜಿಕ-ಪ್ರಿಯ, ಸಮಾಧಾನಿ.

ಸುಬ್ಬಣ್ಣ ಹೊರಬಾಗಿಲಲ್ಲಿ ನಿಂತು 'ನಾರಾಯಣಽಽ' ಎಂದು ಕರೆದಾಗ ಇಕ್ಕಿದ್ದ ಬಾಗಿಲನ್ನು ತೆರೆದವಳು ಅವನ ತಂಗಿ ಸುಶೀಲಾ. ಸುಬ್ಬಣ್ಣ ಈ ಹಿಂದೆ ಅಲ್ಲಿಗೆ ನಾಲ್ಕಾರು ಬಾರಿ ಬಂದು ಹೋದವನಾದದ್ದರಿಂದ ಪರಸ್ಪರರಿಗೆ ಪರಿಚಯ ಬೇಕಾದಷ್ಟಾಗೆ ಇದ್ದಿತು. ಅನಿರೀಕ್ಷಿತವಾಗಿ ಬಂದ ಸುಬ್ಬಣ್ಣನನ್ನು ಕಂಡು, 'ಬನ್ನಿ ಹಾಸೇಗಾರ್ರೆ, ಗೇರುಸೊಪ್ಪೆಗೆ ಪ್ರಯಾಣವೋ ?' ಎನ್ನುತ್ತ ಅವಳು ಜಗುಲಿಯಲ್ಲಿ ಚಾಪೆ ಹಾಸಿದಳು.

'ಓ ನಿನಗೆ ತಿಳಿದು ಹೋಯಿತಲ್ಲ ! ಅಂದ ಮೇಲೆ ನಾರಾಯಣನಿಗೂ ಆಮಂತ್ರಣವಿದ್ದಿರಲೇಬೇಕು. ಇಷ್ಟರಲ್ಲೇ ಅವನು ಹೋಗಿಬಿಟ್ಟಿದ್ದಾನೋ ಮತ್ತೆ ?'

'ಇಲ್ಲ, ಅಲ್ಲಿಗೆ ಕರೆಯೇನೋ ಬಂದಿತ್ತು. ಆದರೆ ಬಾಡದ ಮೇಳದ ತಿಮ್ಮಣ್ಣ ಹೆಗಡೇರು ಇಲ್ಲಿಗೆ ಬಂದವರು ನಿನ್ನೆಯೇ ಅವನನ್ನು ತಮ್ಮೂರಿಗೆ ಕರೆದುಕೊಂಡು ಹೋಗಿಬಿಟ್ಟಿದ್ದಾರೆ. ಇಲ್ಲವಾಗಿದ್ದರೆ ನಿಮ್ಮನ್ನು ಕಂಡಮೇಲೆ ಅವನೂ ನಿಮ್ಮೊಟ್ಟಿಗೇ ಗೇರುಸೊಪ್ಪೆಗೆ ಹೊರಡುವದು ಖಂಡಿತವಾಗಿತ್ತು'

'ಹೌದು-ಹೌದು, ಅಲ್ಲೂ ಇಂದಿನಿಂದ ಆಟ ಸುರು. ನನಗೂ ಆಮಂತ್ರಣ ವೇನೋ ಬಂದಿತ್ತು.'

'ಮತ್ತೆ ನಿಮಗೆ ಗೋಕರ್ಣದಿಂದ ಬಾಡ ಹತ್ತಿರವಾಗಿದ್ದರೂ ಗೇರುಸೊಪ್ಪೆಗೇ ಹೊರಟದ್ದೀರಲ್ಲ ?'

'ಈ ಆಮಂತ್ರಣ ನನಗೆ ಮೊದಲೇ ಬಂದದ್ದು. ಅಲ್ಲದೆ ಇಡಗುಂಜೀ ಮೇಳ ದವರ ಕರೆ ಬಂದಾಗ ಮತ್ತೆ ಯಾವ ಮೇಳದವರ ಕರೆ ಬಂದರೂ ನಾನು ಹೋಗುವವ ನಲ್ಲ. ಇಡಗುಂಜೀ ಮಹಾಗಣಪತಿ ನನ್ನ ಆರಾಧ್ಯ-ಕುಲದೇವರು. ಅದರಿಂದ ಆ ಮೇಳದಲ್ಲಿ ಬಣ್ಣ ಹಚ್ಚಿಕೊಳ್ಳುವದೆಂದರೆ ಆ ದೇವರ ಸೇವೆ ಮಾಡಿದಂತೆಯೇ, ಎಂದು ನನ್ನ ಭಾವನೆ'

'ಸರಿಯಾದ ಮಾತು. ಇಡಗುಂಜೀ ಮೇಳದ ಮುಂದೆ ಮತ್ತೆ ಯಾವ ಮೇಳವೂ ಇಲ್ಲ' ಎಂದು ತನ್ನ ಶಿಫಾರಸನ್ನು ಅವಳು ಕೊಟ್ಟೇ ಬಿಟ್ಟಳು. ಆದು ಅವನಿಗೆ ಅಪ್ರಿಯವಾಗಿದ್ದರಷ್ಟೆ ? ವಿಶ್ವನಾಥ ಅವರಿಬ್ಬರ ಮಾತನ್ನೂ ಆಲಿಸುತ್ತ ಸುಮ್ಮನೇ ಕುಳಿತಿದ್ದ. ಅವಳ ಲಕ್ಷ್ಯ ತಾನಾಗಿ ಅವನ ಕಡೆ ಬಿದ್ದಿತೀಗ. 'ಇದೇನು ಮರಿಯನ್ನೂ ತಯಾರು ಮಾಡುತ್ತಿದ್ದೀರಾ ?'

'ನೀನೂ ಅಡ್ಡಿಯಿಲ್ಲ. ಸರಿಯಾಗಿ ಊಹಿಸಿದೆ' ಎಂದು ಸುಬ್ಬಣ್ಣ ಮೆಲು ನಗೆ ನಕ್ಕ.

'ಅಂಗೈ ನೋಡುವುದಕ್ಕೆ ಕನ್ನಡಿ ಬೇಕೆ? ಮೊಕ ನೋಡಿದರೆ ಕಾಣುವದಿಲ್ಲವೆ? ಥೇಟು ನೀವೇ...........'

ಆ ಮಾತಿಗೆ ಇಬ್ಬರೂ ದೊಡ್ಡದಾಗಿ ನಕ್ಕಾಗ ವಿಶ್ವನಾಥನಿಗೂ ನಗೆ ಬಾರದಿಲ್ಲ. ಆ ನಗೆಯನ್ನೇ ಆಲಿಸಿ ಬಂದಂತೆ ಒಳಗಿನಿಂದ ಕಮಲಾಕ್ಷಿ ಅಲ್ಲಿ ಹಾಜರಾಗಿದ್ದಳು. ಅವಳನ್ನು ನೋಡಿ ಸುಬ್ಬಣ್ಣ 'ನಿನ್ನ ಮಗಳಲ್ಲವೆ ? ಎಷ್ಟು ಬೆಳೆದುಬಿಟ್ಟಿದ್ದಾಳೀಗ ! ' ಎಂದ.

'ಹೆಣ್ಣುಮಕ್ಕಳಿಗೇನು ? ಬಾಳೆಯ ಸುಳಿಯ ಹಾಗೆ ನೋಡ ನೋಡುತ್ತಲೆ; ಬೆಳೆದುಬಿಡುತ್ತಾರೆ' ಎಂದಳು ಸುಶೀಲಾ. ನಗುತ್ತಲೇ ಮತ್ತೆ 'ಅಲ್ಲ, ನಿಮಗೇನು ಹಸಿವು-ತೃಷೆಯೆ ಎಂದು ಕೇಳುವದನ್ನು ಬಿಟ್ಟು ಬಂದಹಾಗೇ ನಾನು ಹರಟೆಗೆ ಕುಳಿತು ಬಿಟ್ಟಿದ್ದೇನೆ. ಕಮಲಾಕ್ಷಿ, ಇವರಿಗೆ ಕಾಲು!ತೊಳೆಯುವಷ್ಟು ನೀರು ಕೊಡು ಮೊದಲು. ಇದನ್ನೂ ನಾನು ನಿನಗೆ ಹೇಳಬೇಕೆ ? ' ಎಂದವಳು ಅನ್ನುವಷ್ಟಕ್ಕೆ ಕಮಲಾಕ್ಷಿ ಎರಡು ತಂಬಿಗೆ ನೀರು ತಂದು ಅಲ್ಲಿ ಮಡಗಾಗಿತ್ತು. ಆ ತಂದೆ, ಮಗ ಕೈ ಕಾಲು ತೊಳೆದು ಬರುತ್ತಲೇ 'ನಿಮಗೀಗ ಅಡುಗೆಗೆ ಬೇಕಾದ ಎಲ್ಲಾ ತಯಾರಿ ಮಾಡಿಕೊಡು ತ್ತೇನೆ. ಕರೆದ ಹಾಗೆ ಬ್ರಾಹ್ಮಣ ಬಾಗಿಲಿಗೆ ಬಂದಿದ್ದೀರಿ, ದೇವರೇ ಬಂದ ಹಾಗೆ. ಯಾವುದಕ್ಕೂ ದಾಕ್ಷಿಣ್ಯ ಇಟ್ಟುಕೊಳ್ಳದೆ ನಿಮಗೇನು ಆಗಬೇಕೊ ತಿಳಿಸಿ' ಎಂದಳು ಸುಶೀಲಾ ಸೌಜನ್ಯದಿಂದ.

'ಈಗ ಅಡಿಗೆ—ಊಟ ಏನೂ ಬೇಡ. ಹಸಿಬೆಯಲ್ಲಿ ಅವಲಕ್ಕಿಯ ಗಂಟನ್ನು ಸೇರಿಸಿ ತಂದಾಗಿದೆ. ಅದಕ್ಕಷ್ಟು ಕಾಯಿ ಹೆರಿಸಿ, ಉಪ್ಪು-ಖಾರ ಹಚ್ಚಿಕೊಟ್ಟು ಬಿಡು. ಅಂದರೆ ಎಲ್ಲಾ ಆಯಿತು' ಎಂದ ಸುಬ್ಬಣ್ಣ.

'ಮತ್ತೆ ನಾನೇನು ಹೇಳುವದು? ನಾನು ಮಾಡಿದ್ದು ನಿಮಗೆ ಬಡಿಸುವಂತಿಲ್ಲ.'

'ಅವಲಕ್ಕಿ ಅನ್ನದಷ್ಟೇ ದಡವು. ಪ್ರಯಾಣದಲ್ಲಿ ನನ್ನ ಅಭ್ಯಾಸ ರಾತ್ರೆಯ ಮಟ್ಟಿಗೆ ಹೀಗೆಯೇ.'

ಅವಳಿಗೀಗ ಒತ್ತಾಯಿಸುವುದಕ್ಕೆ ಏನೂ ಉಳಿದಿರಲಿಲ್ಲ, 'ಸರಿ, ಇಂದು ನಿಮ್ಮ ಮಾತೇ ನಡೆಯಲಿ. ಆದರೆ ನಾಳೆ ನಮ್ಮಲ್ಲಿಂದ ಎಡೆ ಎಂಜಲು ಮಾಡಿಯೇ ಹೊರಡಬೇಕು. ನನಗಾಗಿ ಇಷ್ಟಾದರೂ ತ್ರಾಸು ನೀವು ತೆಗೆದುಕೊಳ್ಳಲೇಬೇಕು. ಹೇಗೂ ಗೇರುಸೊಪ್ಪೆಗೆ ನಾಳೆ ಕತ್ತಲಾಗುವಷ್ಟಕ್ಕೆ ಮುಟ್ಟಿದರಾಯಿತಲ್ಲವೆ ? ಒಂಬತ್ತು

ತಾಸಿಗೆ ಇಲ್ಲಿಂದ ಹೊರಡುವ ಹಾಯದೋಣಿ, ಅದಕ್ಕೂ ಒಂದು ತಾಸು ಮೊದಲೇ ಅಲ್ಲಿಗೆ ಮುಟ್ಟುತ್ತದೆ. ತಪ್ಪುವದಿಲ್ಲವಷ್ಟೆ?' ಈ ವಿಶ್ವಾಸದ ಯಾಚನೆಗೆ ಸುಬ್ಬಣ್ಣ ಆಗಲಿ ಎಂದು ಒಪ್ಪಿಕೊಳ್ಳಲೇಬೇಕಾಯಿತು.

ಆ ತಂದೆ ಮಗ ಇಬ್ಬರೂ ಗಡದ್ದಾಗಿ ಅವಲಕ್ಕಿ ಮೆದ್ದು ಹೊಟ್ಟೆ ತುಂಬ ನೀರು ಕುಡಿದರು. ಸುಬ್ಬಣ್ಣ ಢರ್ರೆಂದು ತೇಗುತ್ತ ಅಲ್ಲೇ ಚಾಪೆಯಮೇಲೆ ಕಾಲು ಚಾಚಿದ, ಒಮ್ಮೆಲೇ ಅವನಿಗೆ ನಿದ್ದೆಬಿದ್ದುಹೋಯಿತು. ಅವನ ಮಗ್ಗುಲಲ್ಲೇ ವಿಶ್ವನಾಥನೂ ಕಣ್ಣುಮುಚ್ಚಿದ.

ಸರಿರಾತ್ರೆ ಸರಿದು ಹೋಗುವವರೆಗೂ ಸುಶೀಲಾ ಎಚ್ಚರವಾಗಿಯೇ ಇದ್ದಳು. ಅವರು ಬರುವದಾಗಿದ್ದರೆ ಇಷ್ಟುಹೊತ್ತಿಗಾಗಲೇ ಬರಬೇಕಾಗಿತ್ತು ಎಂದುಕೊಂಡಳು. ಅವಳ ಆ ಅವರು ಅವಳನ್ನು ಮದುವೆಯಾದವರಲ್ಲವಾದರೂ ಅವಳ ಮಟ್ಟಿಗೆ ಅವರು ಅದಕ್ಕೆ ಕಡಿಮೆಯಲ್ಲ. ಅವಳ ಜೀವನದಲ್ಲಿ ಅಪ್ಪಣ್ಣ ಕಮ್ತಿಯವರು ಪ್ರವೇಶಿಸಿದಾಗಲೆ ಅವಳ ಬದುಕು ಒಂದು ನೆಲೆಗೆ ನಿಂತದ್ದು. ಅದುವರೆಗಿನ ಸೂಳೆ ಎಂಬ ನಾಮಧೇಯಕ್ಕೆ, ಅಂದಿನಿಂದ ಅಪ್ಪಣ್ಣ ಕಮ್ತಿಯವರು ಇಟ್ಟುಕೊಂಡವಳು ಎಂಬ ಬದಲು ನಾಮಾಂಕಿತ ಬಂತು. ಈ ಇಪ್ಪತ್ತು ವರ್ಷಗಳಿಂದಲೂ ಮದುವೆಯಾದ ಹೆಂಡತಿ ಗಂಡನನ್ನು ಯಾವ ಶ್ರದ್ಧೆಯಿಂದ ಕಾಣುತ್ತಾಳೆಯೋ ಅದೇ ರೀತಿ ಅವಳು ಕಮ್ತಿಯವರೊಂದಿಗೆ ನಡೆದುಕೊಂಡು ಬಂದಿದ್ದಾಳೆ. ಇದು ಈ ಜನ್ಮದ ನಂಟಲ್ಲ ಎನ್ನುವಷ್ಟು ಭ್ರಮೆ ಕಮ್ತಿಯವರಿಗೇ ಇರುವಾಗ ಮತ್ತೆ ವಿವರಣೆ ಯಾಕೆ? ಗಂಡುಮಗುವನ್ನು ಹೆತ್ತು ಮನೆಗೆ ಸಂಭ್ರಮಪನ್ನಿತ್ತರೂ ಆ ಮೊದಲ ಬಾಣಂತಿತನದಲ್ಲೇ ಅವರ ಹೆಂಡತಿಗೆ ಕ್ಷಯ ಅಂಟಿಕೊಳ್ಳದಿದ್ದರೆ ಕಮ್ತಿಯವರಿಗೂ ಸುಶೀಲಾಳಿಗೂ ಗಂಟು ಬೀಳುತ್ತಿರಲಿಲ್ಲವೋ ಏನೋ. ಒಟ್ಟಿಗೆ ಋಣಾನುಬಂಧ ಎನ್ನುವದೇ ಲೇಸು. ಆಗಿನ್ನೂ ಕಮ್ತಿಯವರಿಗೆ ರಕ್ತದ ಬಿಸಿ ಏರುತ್ತಿದ್ದ ಕಾಲ. ಯೌವನದ ಜಾಡ್ಯಕ್ಕೆ ಆ ಮದುವೆಯ ಮದ್ದು ಅವರ ಮಟ್ಟಿಗೆ ನಾಟಲಿಲ್ಲವೆಂದಮೇಲೆ ಮತ್ತೆ ಅವರೇನು ಮಾಡಬೇಕು? ಅಲ್ಲದೆ ದೊಡ್ಡಸ್ತಿಕೆಗೆ, ಹೆಂಡತಿಯಿದ್ದರೂ ಉಪಪತ್ನಿಯೊಬ್ಬಳನ್ನು ಇಟ್ಟುಕೊಳ್ಳವದೂ ಒಂದು ಶೋಭೆ ಎಂದು ಭಾವಿಸುತ್ತಿದ್ದ ಕಾಲ ಅದು. ಕಮ್ತಿಯಂಥವರು ಸಹಜವಾಗಿ ಮಾಡಬಹುದಾದ ಪರಂಪರೆ ಅದು ಎಂದ ಮೇಲೆ ಈ ಕುರಿತು ಆಕ್ಷೇಪದ ಮಾತೇ ಇಲ್ಲ. ತನ್ನನ್ನು ಪ್ರೀತಿಯಿಂದ ಕಾಣುವ ಗಂಡನ್ನು ಕುರಿತು ಯಾವ ಹೆಣ್ಣು ಯೋಚಿಸುವದಿಲ್ಲ? ಮತ್ತೂ ಸ್ವಲ್ಪಹೊತ್ತು ಸುಶೀಲಾ ಹಾಗೆ ನಿರೀಕ್ಷಿಸಿದಳಾದರೂ ಅವಳ ಅವರೇನೂ ಬರಲಿಲ್ಲ. ಇಷ್ಟು ರಾತ್ರಿಯಲ್ಲಿ ಇನ್ನೇನು ಬರುತ್ತಾರೆ ಎಂದುಕೊಂಡು ಹೊರಬಾಗಿಲನ್ನಿಕ್ಕಿ ಮರಳುತ್ತಿದ್ದಂತೆ ಅವಳ ಲಕ್ಷ್ಯ ಆ ಗೊರಕೆಯ ಸದ್ದಿ

ನಿಂದಾಗಿ ಅಲ್ಲೇ ಹಾಯಾಗಿ ನಿದ್ದೆಹೋಗಿದ್ದ ಸುಬ್ಬಣ್ಣನತ್ತ ಹೊರಳಿತು. ಕಮ್ಮಿಯವರದೇ ವಯಸ್ಸಿಗನಾದರೂ ಆ ವಯಸ್ಸನ್ನು ಮರೆಸುವಷ್ಟು ಸುಬ್ಬಣ್ಣನ ಶರೀರ ಸುದೃಢವಾಗಿತ್ತು. ಕೂದಲಾದರೂ ಅಷ್ಟೆ; ಕಮ್ಮಿಯವರಂತೆ ತನ್ನ ಕಪ್ಪನ್ನು ಇನ್ನೂ ಕಳೆದುಕೊಂಡಿರಲಿಲ್ಲ. ಹಸುಮಗುವಿನಂತೆ ನಿರಾಲೋಚನೆಯಲ್ಲಿ ಹಾಯಾಗಿ ಮಲಗಿದ್ದ ಅವನ ಮೊಗದಲ್ಲಿ ಸೌಮ್ಯತೆಯಿದ್ದಿತು. 'ಹಾಸೇಗಾರ್ರು ಎಷ್ಟು ಚೆಂದಾಗಿ ಮಲಗಿದ್ದಾರೆ!' ಎಂದು ಅವನಿಗೆ ಹತ್ತಿರದಲ್ಲೇ ನಿಂತು ಒಂದು ಕ್ಷಣ ಅವನ ಮೊಗವನ್ನೆ ನಿಟ್ಟಿಸತೊಡಗಿದಳು, ಮಂತ್ರಮುಗ್ಧಳಂತೆ. ಅವಳಿಗೇನಾಯಿತೋ ತಿಳಿಯದು. ರಾಧೆ ತನ್ನ ಹೃದಯದಲ್ಲಿ ತುಂಬಿಕೊಂಡಿದ್ದ ಕೃಷ್ಣ, ಪ್ರತ್ಯಕ್ಷ ಎದುರು ನಿಂತಾಗಿನ ಅವಸ್ಥೆ ಅವಳದಾಗಿತ್ತೀಗ. ಅದೇ ನಯ, ಅದೇ ಸ್ಮಿತ ಅವಳನ್ನು ಭಾವುಕಳನ್ನಾಗಿಸಿತ್ತು. ಆ ಹೃದಯದ ಕಾತರವೆಲ್ಲವೂ ಅವಳ ಬಾಯಿಂದ ಹಗುರಾಗಿ ಹೊರಬಿದ್ದ 'ಹಾಸೆಗಾರ್ರೆ' ಎಂಬ ಒಂದೇ ಒಂದು ಪದದಲ್ಲಿ ಅಡಗಿತ್ತು. ಆ ವಿಸ್ಮೃತಿಯಲ್ಲಿ ಅವಳ ತುಟಿ ಅವಳಿಗರಿಯದಂತೆಯೇ ಅವನ ಕೆನ್ನೆಯನ್ನು ಸವರಿದಾಗ 'ಆ' ಎಂದು ಬೆಚ್ಚಿಬಿದ್ದವನಂತೆ ಸುಬ್ಬಣ್ಣ ಎಚ್ಚರಗೊಂಡಿದ್ದ. ಆ ದನಿಯ ರಭಸಕ್ಕೆ ಪಕ್ಕದಲ್ಲೇ ಮಲಗಿದ್ದ ವಿಶ್ವನಾಥನಿಗೂ ಎಚ್ಚರವಾಗಿಬಿಟ್ಟಿತ್ತು. ಎದುರಿನ ಕಿಡಕಿಯಿಂದ ಬೀದಿಯ ಮುನಸಿಪಾಲ್ಟಿಯ ದೀಪದ ಬೆಳಕು ಕುರುಡಾಗಿ ಒಳಗೆ ಬೀಳುತ್ತಿತ್ತು. ಆ ಮಬ್ಬುಗತ್ತಲಲ್ಲೆ ಕಣ್ಣುಬಿಟ್ಟಾಗ ಕಂಡ ದೃಶ್ಯ ಅದು. ವರೆಗೆಂದೂ ಅನ್ನಿಸದ ಒಂದು ಅನಿಸಿಕೆಯನ್ನು ಅವನಿಗೆ ಹುಟ್ಟಿಸಿಕೊಟ್ಟಿತು. ಅವನ ದೇಹ ಮಿಸುಕಾಡುತ್ತಿರಲಿಲ್ಲವಾದರೂ ನೋಟ ಜಾಗ್ರತಗೊಂಡಿತ್ತು. ಆಗಲೇ ಅವನಿಗೆ ಕೇಳಿಸಿದ್ದು 'ಇಲ್ಲಿ ಇದೇನು ನಡೆಸಿದ್ದಿಯೋ ಸುಶೀಲಾ ? ಎದೆಯ ಎತ್ತರಕ್ಕೆ ಬಂದ ಮಗ ಮಗ್ಗುಲಲ್ಲಿ ಮಲಗಿದ್ದಾನೆ. ಇಲ್ಲಿ ಇದು ಸರಿಯಲ್ಲ' ಎಂದ ಸುಬ್ಬಣ್ಣನ ದನಿ. ಆ ಮೇಲೆ ಇಬ್ಬರೂ ಒಳಸೇರಿದ್ದನ್ನು ಅವನು ಗಮನಿಸಿದ್ದ.

ಜಗುಲಿಯ ಮೇಲೆ ಒಬ್ಬನೇ ಮಲಗಿದ್ದ ವಿಶ್ವನಾಥ ಈಗ ಪೂರಾ ಎಚ್ಚೆತ್ತಿದ್ದ. ಎಂದಿಲ್ಲದ ಒಂದು ಜಿಜ್ಞಾಸೆ ತಾನೇ ತಾನಾಗಿ ಅವನಲ್ಲೀಗ ಉದ್ಭವಿಸಿತ್ತು. ಬಾಲಿಶ ಪ್ರಣಯದ ಭಾವುಕತೆಯನ್ನು ಅವನು ಅದೇ ಕಂಡ ದೃಶ್ಯ ಕೆಣಕಿಸುತ್ತಿತ್ತು. ಮೊಗದಲ್ಲಿ ಇನ್ನೂ ಮೀಸೆ ಬಲಿಯಲು ಹವಣಿಸುತ್ತಿದ್ದ ವಯಸ್ಸು ಅದು. ಬಯಕೆ ಹಣ್ಣಾಗಿರದಿದ್ದರೂ ಮೊಳಕೆಯೊಡೆಯುವ ಕಾಲ. ಕಣ್ಣಾರೆ ಕಂಡ ಕೃತಿಯಲ್ಲಿ ಕುತೂಹಲ ಕೆರಳದಿದ್ದೀತೆ? ತಲೆಯಲ್ಲಿ ಅದೇ ವಿಚಾರ ತುಂಬಿಕೊಂಡಿದ್ದ ಅವನಿಗೆ ಮತ್ತೆ ಎಷ್ಟು ಹೊತ್ತಿಗೆ ನಿದ್ರೆ ಬಿದ್ದಿತ್ತೋ ತಿಳಿಯದು. ಎಚ್ಚರವಾದದ್ದು, ಸುಬ್ಬಣ್ಣ 'ಮಾಣಿ' ಎನ್ನುತ್ತ ಅವನು ಹೊದ್ದ ಮುಸುಕು ತೆರೆದಾಗಲೇ. ಆಗ ಹೊತ್ತು ಮೂಡಿ ಮಾರು ಮೇಲಕ್ಕೆ ಬಂದು, ಬಂಗಾರದ ಬಿಸಿಲು ಜಗಲಿಯ ಒಳಗೆಲ್ಲ ನುಗ್ಗಿ ಬಂದಿತ್ತು.

ಬಾಗಿಲಿಗೆ ಬಂದ ಬ್ರಾಹ್ಮಣ ಹಸಿದ ಹೊಟ್ಟೆಯಲ್ಲಿ ಇಲ್ಲಿಂದ ಹೋಗಕೂಡದು ಎಂದು ಸುಶೀಲಾ ಮತ್ತೆ ಮತ್ತೆ ಹೇಳಿದ್ದಕ್ಕೆ ಸುಬ್ಬಣ್ಣ 'ಇಲ್ಲ'ಎಂದು ಹೇಳುವದಾದರೂ ಹೇಗೆ? ಅವನು ಮಿಂದುಬರುವಷ್ಟಕ್ಕೆ ಜಗುಲಿಯಲ್ಲೇ ಒಂದು ಒಲೆಗೆ ಸುಶೀಲಾ ಉರಿ ಹಚ್ಚಿ ಕೊಟ್ಟಳು. ಅವನು ಅನ್ನಕ್ಕೆ ಎಸರಿಡುವಷ್ಟಕ್ಕೆ ಕಮ್ತಿಯವರ ಭೃತ್ಯ ಹನುಮಂತ, ಅವರ ಆದೇಶದಂತೆ ಅಲ್ಲಿಗೆ ಬಂದಿದ್ದ, ಹಿಂದಿನ ರಾತ್ರೆ ಅಂಗಡಿಯನ್ನು ಮುಚ್ಚಿ ಅವಸರದಿಂದ ಅವರು ಮನೆಗೆ ನಡೆದಿದ್ದಾಗ ಕತ್ತಲಲ್ಲಿ ಅಕಸ್ಮಾತ್ತಾಗಿ ಎಡವಿ ಬಿದ್ದು ಎಡಗೈ ಮುರಿದುಕೊಂಡ ವಿಚಾರವನ್ನು ಸುಶೀಲಾಳಿಗೆ ತಿಳಿಸುವದಕ್ಕೆ. ಅವನು ಕಮ್ತಿಯವರ ಮನೆ ಆಳು. ಕಮ್ತಿಯವರದು ಸುಶೀಲಾಳೊಂದಿಗೆ ಇದ್ದದ್ದು ಕದ್ದು ಮುಚ್ಚಾಟವೇನು ಆಗಿರಲಿಲ್ಲ. ದಿನಬೆಳಗಾದರೆ ಆ ಹನುಮಂತನೆ ಸುಶೀಲಾಳ ಮನೆಗೆ ಕಮ್ತಿಯವರು ಕೊಡಿಸಿದ ಸಾಮಾನುಗಳನ್ನೆಲ್ಲ ತಂದು ಮುಟ್ಟಿಸುತ್ತಿದ್ದವ. ಆದರೆ ಇಂದವನು ಬರಿಗೈಯಿಂದ ಬಂದಿದ್ದ, ಅವಳ ಪಾಲಿಗೆ ಅಶುಭವನ್ನಷ್ಟೇ ಹೊತ್ತು. ಕಸುಬಿನಿಂದ ಅವಳು ಸೂಳೆಯೆಂಬುದೇನೋ ನಿಜ. ಈ ಇಪ್ಪತ್ತು ವರ್ಷಗಳಿಂದ ಕಮ್ತಿಯವರ ಅನ್ನಕ್ಕವಳು ಎರಡು ಬಗೆದವಳಲ್ಲ. ಹಿಂದಿನ ರಾತ್ರೆಯ ಘಟನೆ ಅವಳಿಗೂ ಅಕಲ್ಪಿತವಾಗಿ, ಆದರೆ ಅವಳ ಆತ್ಮತೃಪ್ತಿಗಾಗಿ ನಡೆದು ಹೋಯಿತು. ಸುಬ್ಬಣನ ಜೀವನದಲ್ಲಿ ಇಂಥ ಘಟನೆ ಸಹಜ. ಮತ್ತೆ ಅವಳು ಸೂಳೆ. ಆದರೆ ಇದೊಂದು ಘಟನೆ ಅವಳ ಮಟ್ಟಿಗೆ ವ್ಯಾಪಾರವಾಗಿರಲಿಲ್ಲ. ಅಂಥವಳಿಗೆ ಈ ಬಗ್ಗೆ ಮನಸ್ಸಿನಲ್ಲಿ ತುನಿಸು ಉಂಟಾಗುವದಂತೂ ಅಸಹಜ. ಇಷ್ಟಕ್ಕೂ ತನ್ನ ಆಗಿನ ಭಾವನೆಗಳನ್ನು ಅರಿಯಬಹುದಾದ ಸಂಸ್ಕಾರ ಅವಳು ಪಡೆದಿದ್ದಳಲ್ಲವೇ? ಕಮ್ತಿಯವರಲ್ಲಿ ಅವಳಿಗಿದ್ದ ಆಕರ್ಷಣೆ ಏನಿದ್ದರೂ ಅವರ ಹಣದ್ದೇ ಆಗಿತ್ತೇ ಹೊರತು ದೇಹದ್ದಾಗಿರಲಿಲ್ಲ. ಇಲ್ಲವಾಗಿದ್ದರೆ ಅವಳ ಸುಪ್ತ ಮನಸ್ಸಿನ ಕೊರಗು ಇಷ್ಟು ದಿನಗಳ ಮೇಲೆ ಈ ಬಗೆಯಲ್ಲಿ ತೃಪ್ತಿಪಡೆಯುವುದಾದರೂ ಏನಿತ್ತು ? ಆದರೂ ಇಷ್ಟರಿಂದ ಅವಳು ಕಮ್ತಿಯವರನ್ನು ಮರೆತಳು ಎಂದು ಹೇಳಲು ಸಾಧ್ಯವೆ ? ಎಷ್ಟಾದರೂ ಇಪ್ಪತ್ತು ವರ್ಷಗಳ ಒಡನಾಟ ! ಒಂದು ವ್ಯಕ್ತಿಯ ಜೀವನದಲ್ಲಿ ಅದು ಬೇಕಾದಷ್ಟಾಯಿತು. ಅದರಿಂದಲೇ ಅವರು ಅಪಘಾತಕ್ಕೆ ಬಲಿಯಾದರೆಂದು ಕೇಳಿ ಅವಳ ಅಂತರಂಗಕ್ಕಾದ ನೋವು ಅಷ್ಟಿಷ್ಟಲ್ಲ. ಅದನ್ನು ಊಹಿಸಿಯೇ ಸುಬ್ಬಣ್ಣ 'ನಡೆ ಸುಶೀಲಾ, ನಾನೂ ಬರುತ್ತೇನೆ. ಕಮ್ತಿಯವರನ್ನೊಮ್ಮೆ ನೋಡಿಕೊಂಡು ಬಂದ ಹಾಗೂ ಆಯಿತು. ಮಾಣಿ, ಅನ್ನ ಬೆಂದಮೇಲೆ ಏನಾದರೂ ಒಂದು ಪದಾರ್ಥ ನಿನಗೆ ತಿಳಿದಹಾಗೆ ಮಾಡಿಟ್ಟಿರು' ಎಂದು ಮಗನಿಗೆ ವಿಧಿಸಿ ಹೊರಟೇಬಿಟ್ಟ.

ಈಗ ನಾಲ್ಕು ವರ್ಷಗಳ ಹಿಂದೆ ಹೊನ್ನಾವರದಲ್ಲೇ ಬೈಲಾಟ ನಡೆದಾಗ ಸುಬ್ಬಣ್ಣನ ಹಾಸ್ಯಕ್ಕೆ ಮೆಚ್ಚಿದ್ದ ಕಮ್ತಿಯವರು ಅವನಿಗೊಂದು ಜರೀ ಶಲ್ಲೆಯನ್ನು ಉಡುಗೊರೆಯಾಗಿ ಕೊಟ್ಟಿದ್ದರು. ಅಲ್ಲದೆ ಹೊನ್ನಾವರದಲ್ಲಿ ಉಳಿಯಲೇ ಬೇಕಾಗಿ

ಬಂದಾಗಲೆಲ್ಲ ಒಂದುಬಾರಿಯಾದರೂ ಮೃದಂಗದ ನಾರಾಯಣನ ಆಗ್ರಹಕ್ಕೆ ಕಟ್ಟು ಬಿದ್ದು ಇಲ್ಲವೆ ಅವನನ್ನು ಕಾಣುವದಕ್ಕೆಂದೇ ಸುಬ್ಬಣ್ಣ ಅವನ ಮನೆಗೆ-ಅಂದರೆ ಅವನ ತಂಗಿ ಸುಶೀಲಾಳ ಬಿಡಾರ ಎಂದೇ ಹೇಳಬೇಕಾಗುತ್ತದೆ, ಯಾಕಂದರೆ ನಾರಾಯಣ ಸಂಸಾರಿಗನಲ್ಲ—ಬಂದಾಗ ಕಮ್ತಿಯರ ದರ್ಶನ ಎಲ್ಲಾದರೂ ಆಗುತ್ತಿದ್ದುದು ಉಂಟು. ಇಷ್ಟು ಪರಿಚಯವಿದ್ದಮೇಲೆ ಸಾಲದೆ ? ಸುಬ್ಬಣ್ಣನ ಹಿಂದೆಯೇ ಹೊರ ಬೀಳುತ್ತಿದ್ದಂತೆ ಸುಶೀಲಾ ಮಗಳನ್ನು ಕರೆದು 'ಈ ಮರಿ ಹಾಸೇಗಾರ್ರಿಗೆ ಅಡಿಗೆಗೆ ಬೇಕಾದದ್ದನ್ನು ಒದಗಿಸಿಕೊಟ್ಟು ನೆರವಾಗು' ಎಂದು ಆದೇಶಿಸಲು ಮರೆಯಲಿಲ್ಲ. ಅವರಿಬ್ಬರನ್ನೂ ಹಿಂಬಾಲಿಸಿ ಹನುಮಂತನೂ ಹೊರಟಿದ್ದ.

ಅನ್ನ ಆಗುವಷ್ಟಕ್ಕೆ ಬೇಳೆಯಾದರೂ ಬೆಂದರೆ ಅನುಕೂಲವೆಂದು ಕಮಲಾಕ್ಷಿ ಅಲ್ಲೇ ಇನ್ನೊಂದು ಒಲೆ ಉರಿಸಿಕೊಟ್ಟಳು. ಬೇಳೆ ಬೆಂದ ಬಳಿಕ ಅದಕ್ಕಿಷ್ಟು ಬದನೇಕಾಯಿ ಕೊಚ್ಚಿಹಾಕಿ ವಿಶ್ವನಾಥ ಒಂದು ಹುಳಿ ಕಾಸಿದ. ಮಸಾಲೆ ಅರೆದು ಕೊಟ್ಟವಳು ಕಮಲಾಕ್ಷಿಯೇ. ಅವರಿಬ್ಬರ ಸಾಮೀಪ್ಯಕ್ಕೆ ಈ ಅಡುಗೆ ಒಂದು ನಿಮಿತ್ತ. ಇಷ್ಟಕ್ಕೆ ಪರಿಚಯ ಸಲಿಗೆಯ ಬಯಕೆಯಿಂದ ಇಬ್ಬರಲ್ಲೂ ಮುಂದುವರಿಯಲು ಹವಣಿಸುತ್ತಿತ್ತು. ಮನೆಯಲ್ಲಿ ಇಬ್ಬರೇ ಇಬ್ಬರು. ಹಿಂದಿನ ರಾತ್ರೆಯಿಂದ ವಿಶ್ವನಾಥನ ತಲೆಯಲ್ಲಿ ಒಂದೇ ಒಂದು ವಿಚಾರ ಮರುಕಳಿಸುತ್ತಿತ್ತು. ಕಮಲಾಕ್ಷಿಯಾದರೂ ಹೆಚ್ಚುಕಡಿಮೆ ಅವನ ವಯಸ್ಸಿಗಳೇ. ಗಂಡಿನ ಬಯಕೆ ಅವಳಲ್ಲಿ ಎಂದೋ ಜಾಗ್ರತಗೊಂಡಿತ್ತಾದರೂ ಅದೃಷ್ಟ ಅವಳ ಪಾಲಿಗೆ ಎಷ್ಟು ಕ್ರೂರವಾಗಿತ್ತು!

ನೀತಿ ಬಿಟ್ಟವಳೆಂಬ ಸೂಳೆಗಾದರೂ ಒಂದು ನಿಯತ್ತು ಇದೆ. ಹೋಮದ ಚೆಕ್ಕೆ ಸುಡದೆ ಅವಳು ಕಸುಬಿಗಿಳಿಯುವಂತಿಲ್ಲ. ಹೋಮದ ಹೊಗೆಯಿಂದಲೇ ಅವಳ ಕಸುಬಿನ ನಾಂದಿಯಾಗಬೇಕು. ಆ ದಿನ ಊರಿನವರಾದ ತನ್ನ ಜಾತಿಯವರನ್ನೆಲ್ಲ ಕರೆದು ಉಪಚಾರದ ಉಣಿಸಿಕ್ಕಿ ನಾನಿನ್ನು ನಿಮ್ಮೆಲ್ಲರ ಅನುಮತಿಯಂತೆ ಕಸುಬುಗಾರ್ತಿ ಎಂದು ಪ್ರಚುರಪಡಿಸುವ ರೀತಿಯನ್ನಾಚರಿಸದೆ ಅಂತರಂಗದ ವ್ಯಾಪಾರದಿಂದ ಗರ್ಭಿಣಿಯಾದರೆ ಹೊಟ್ಟೆ ಬಂದವಳು ಎಂದು ಅವಳ ಜಾತಿಯವರೇ ಅವಳ ಮೋರೆಯಮೇಲೆ ಉಗಿಯುತ್ತಾರೆ. ತನ್ನದೇ ಆದ ಕಟ್ಟು ನಿಟ್ಟು ಯಾವ ಜಾತಿಯಲ್ಲಿಲ್ಲ? ಹೋಮದ ಚೆಕ್ಕೆ ಸುಡುವಾಗ ಒಂದು ತೆಂಗಿನಕಾಯೇ ಗಂಡಾಗಿ ಆವಾಹನೆಗೊಂಡಿರುತ್ತದೆಯಾದರೂ ಗರ್ಭಾಧಾನಕ್ಕೆ ಗಂಡೊಂದು ಒಲಿದು ಬರಬೇಕಲ್ಲವೇ? ಬರೇ ಹೋಮದ ಚೆಕ್ಕೆ ಸುಡಿಸುವದಾದರೆ ಊರಲ್ಲಿ ದಕ್ಷಿಣೆಯಭಟ್ಟರಿಗೇನು ಕಮ್ಮಿಯೆ? ಸೂಳೆಯ ಬದುಕಿನಲ್ಲಿ ಈ ದಿನದ ವಿಶೇಷತೆ ಹೆಚ್ಚು. ಸಾಮಾನ್ಯವಾಗಿ ಗಂಡು ಸೂಳೆಗೆ ಮಳ್ಳುಬೀಳುವದು ಅವಳ ಗುಣ ನೋಡಲ್ಲ-ರೂಪಕ್ಕೆ! ಹೊರತು ಬರೇ ಸೂಳೆಯಾಗಿದ್ದ ಮಟ್ಟಿಗೆ ಯಾರು ನೋಡಬೇಕು? ಇಂಥ ಹೆಣ್ಣಿನ ಕೌಮಾರ್ಯವನ್ನು

ಮೊದಲು ಸೂರೆಗೊಳ್ಳಬಯಸುವ ಗಂಡೇ ಅಂದಿನ ಎಲ್ಲ ವೆಚ್ಚವಹಿಸಬೇಕಾದದ್ದು ವೈವಾಟ. ಅವನು ಅವಳ ಕೌಮಾರ್ಯಕ್ಕೆ ಬೆಲೆ ಕಟ್ಟಿ ಮುಂದೆ ಬರಬೇಕೇಹೊರತು ಲೆಕ್ಕಾಚಾರವಾಗಿ ಬರುವ ಅಂದಿನ ಖರ್ಚು ನೋಡಿ ಅಲ್ಲ. ಬಹಿರಂಗದ ಯಾವುದೇ ಕಾರ್ಯಭಾಗದಲ್ಲೂ ಅವನು ಉಪಸ್ಥಿತನಾಗಿರಬೇಕೆಂಬ ನಿಯಮವೂ ಇಲ್ಲ ಒತ್ತಾಯವೂ ಇಲ್ಲ, ಆ ದಿನ ರಾತ್ರಿಯ ಮಟ್ಟಿಗೆ ಅವಳ ಮನೆಗೆ ಬಂದು ಹೋದ ರಾಯಿತು. ನೈತಿಕ ಧೈರ್ಯವಿಲ್ಲದಿದ್ದಲ್ಲಿ ಕದ್ದು ಮುಚ್ಚಿಯಾದರೂ ಸರಿ.

ಕುಂದಿಲ್ಲದ ಕೌಮಾರ್ಯವಾಗಿದ್ದರೂ ಕಮಲಾಕ್ಷಿಯ ಅದೃಷ್ಟಕ್ಕೆ ಅವಳ ರೂಪ ಯಾವ ಗಂಡನ್ನೂ ಹುಚ್ಚಾಗಿಸಲು ಈತನಕ ಶಕ್ತವಾಗಿರಲಿಲ್ಲ. ಬರೇ ರೂಪದಲ್ಲಷ್ಟೇ ಅಲ್ಲ, ಬಣ್ಣದಲ್ಲೂ ಅವಳು ಕಮ್ತಿಯವರದೇ ತದ್ರೂಪು, ತೊಳೆದಿಟ್ಟ ಯಜ್ಞೇಶ್ವರ. ಅವರಂತೆಯೇ ಮೈತುಂಬ ರೋಮ. ಆ ಉಡಿಗೆ ತೊಡಿಗೆ ಅವಳಿಗೂ ಒಂದು ಹೆಣ್ಣಿನ ರೂಪದ ಆಭಾಸ ತಂದುಕೊಡಬೇಕೇ ಹೊರತು, ಮಾತು ನಡಿಗೆ ಪೂರಾ ನೂರಕ್ಕೆ ನೂರು ಗಂಡು. ಸ್ವಲ್ಪವಾದರೂ ತನ್ನ ತಾಯ ಅಂಶವೇ ಇಲ್ಲದೆ ಜನಿಸಿದ್ದ ಮಗಳು ಅವಳು. ಇಂಥ ಮಗಳಿಗಾಗಿಯೇ ಸುಶೀಲಾ ಕೊರಗುವದು ಇವಳ ಭವಿಷ್ಯ ಹೇಗೋ ಎಂದು. ಇದೇನು ಹೆಣ್ಣೆ ಎಂದು ಮೂಗುಮುರಿವವರೆಷ್ಟೊ ! ಆದರೂ ಕಮಲಾಕ್ಷಿ ಇದ್ದುದರಲ್ಲೇ ಕಳೆ ತಂದುಕೊಳ್ಳಲು ಪ್ರಯತ್ನಿಸದಿಲ್ಲ. ತನ್ನ ಒರಟಾದ ಗೇಣುದ್ದದ ಕೂದಲನ್ನೇ ಎಳೆದು ಎರಡು ಜಡೆಯಾಗಿ ಹೆಣೆದು ಇಳಿಬಿಟ್ಟಿರುತ್ತಾಳೆ. ಗೋಡೆಗೆ ಸುಣ್ಣ ಬಳಿದಂತೆ ಮೋರೆಗೆಲ್ಲಾ ದಪ್ಪಗೆ ಪೌಡರು ಮೆತ್ತಿಕೊಂಡು ಹಣೆಗೆ ಚಿಕ್ಕ ಕುಂಕುಮದ ಬೊಟ್ಟಿಟ್ಟು ರತಿಯಾಗಲು ಪ್ರಯತ್ನಿಸುತ್ತಾಳಾದರೂ ಕಾಣಿಸಿಕೊಂಡ ಮನ್ಮಥನು ಮಾತ್ರ ಯಾವನೂ ಇಲ್ಲ. ಅಷ್ಟೊಂದು ಬೆಲೆತೆರುವುದಕ್ಕೆ ಇವಳು ತಕ್ಕವಳಲ್ಲ ಎಂದಿದ್ದರೂ ಇರಬಹುದು.

ಕಾಮಕ್ಕೆ ಕಣ್ಣಿಲ್ಲ ಎನ್ನುವದು ನಿಜವಾದ ಮಾತು. ಇಲ್ಲವಾಗಿದ್ದರೆ ವಿಶ್ವನಾಥ ಹಾಗೇಕೆ ಅವಳನ್ನು ಕಣ್ಣರಳಿಸಿ ನೋಡುತ್ತಿದ್ದ ? ಸಾವಿರಾಪ್ಯ ಸೌಂದರ್ಯವನ್ನು ಮರೆಸಿದ್ದಿರಲೂ ಸಾಕು. ಅಸ್ಪುಟಸನಿಹದಲ್ಲಿ ಸಿಕ್ಕ ಗಂಡು ಅವಳ ಪಾಲಿಗಂತೂ ಪೂರಾ ಕಾಮಣ್ಣನೇ ಆಗಿದ್ದ. ಪರಸ್ಪರ ಅಂತರಂಗದ ಪರಿಚಯ ಇಬ್ಬರಿಗೂ ಈಗ ಆಗಿತ್ತಾದರೂ ಒಂದು ಅವ್ಯಕ್ತಭೀತಿ ಅವರನ್ನು ತಡೆದಿತ್ತು. ಹಿಂದಿನ ರಾತ್ರಿ ತಾನು ಕಂಡಂತೆ ಹೆಣ್ಣೇ ಮುಂದಾಗಿರಬೇಕು, ಎಂದು ವಿಶ್ವನಾಥ ಭಾವಿಸಿದಹಾಗಿತ್ತು. ಆದರೆ ಅವಳೋ ಹೆಣ್ಣು. ಗಂಡಸಾಗಿದ್ದರೂ ಇಷ್ಟು ನಾಚಿಕೆಯೇ ಎಂದು ಸೂಚಿಸುವ ಕಣ್ಣುಗಳಿಂದ ಕಮಲಾಕ್ಷಿ ಒಂದು ಆಹ್ವಾನಕೊಟ್ಟರೂ, ಅವನಿಂದ ಬಂದ ನಿಶ್ಚೇಷ್ಟಿತತೆಯನ್ನು ಕಂಡು ಒಂದು ಕ್ಷಣ ಹಿಂದೆ ಮುಂದೆ ನೋಡಿದರೂ ಹರಯದ ಒಂದು ಅಪೇಕ್ಷೆ ಇನ್ನು ನೀನಾದರೂ ಮುಂದಾಗು ಎಂದು ಅವಳನ್ನು ಪ್ರಚೋದಿಸುತ್ತಿತ್ತು. ಹಾಗೇ ಸ್ವಲ್ಪ

ಲಜ್ಜೆಯನ್ನು ಹತ್ತಿಕ್ಕಿ ಅವನ ಹತ್ತಿರ ಸರಿದು 'ಬನ್ನಿ, ನಾ-ನು- ನಿ-ಮ್ಮ-ವ-ಳೇ' ಎಂದು ಪ್ರಣಯದ ಪ್ರಥಮ ಹೆಜ್ಜೆಯಲ್ಲಿ ಮಾತನಾಡುವಾಗ ಅವಳಿಗೆ ಸಾಕಾಗಿ ಹೋಯಿತು. ಇಷ್ಟು ಮಾತಿಗೆ ಅವಳ ನಾಲಿಗೆ ತೊದಲಿದ್ದೆಷ್ಟು! ಒಂದು ಗಂಡಿಗೆ ಒಂದು ಹೆಣ್ಣನ್ನು, ಒಂದು ಹೆಣ್ಣಿಗೆ ಒಂದು ಗಂಡನ್ನು ಪ್ರಣಯಾಕಾಂಕ್ಷೆಯಿಂದ ಮಾತನಾಡಿಸುವದು ಎಷ್ಟೊಂದು ಕಷ್ಟದ ವಿಚಾರ ಎಂದು ಇಬ್ಬರಿಗೂ ಅನ್ನಿಸಿದ್ದು ಈಗಲೇ. ಅವನಿನ್ನೂ ತನ್ನನ್ನು ನೋಡುವುದಕ್ಕಿಂತಲೂ ಹೆಚ್ಚಿನ ಪ್ರೋತ್ಸಾಹ ತೋರದಿರುವದನ್ನು ಕಂಡಾಗ ಸೂ ಅಂದಮೇಲೆ ಸೂರು ಹಿಡಿಯುವುದಕ್ಕೇನು ಎಂದು ಮುಂದಿನ ಹೆಜ್ಜೆಯನ್ನಾದರೂ ತಾನೇ ಇಡಬೇಕಾಯಿತೆಂಬುದನ್ನು ಅರಿತು ಕೊಂಡಳು. ಆದರಿಂದ ಅವಳೇ ಈಗ ಗಂಡಾಗಿ ವರ್ತಿಸಬೇಕಾಯಿತು. ತುರ್ತದ ಮಟ್ಟಿಗೆ ಅವನು ಹೆಣ್ಣಾದ. ಅವಳಂಥ ಹೆಣ್ಣಲ್ಲದೆ ಇನ್ನಾರಿಂದ ಇದು ಸಾಧ್ಯ ?

ಅಂದು ಕಂಡ ರತಿ ರಹಸ್ಯ ಮತ್ತೆ ಮತ್ತೆ ಅವನ ಬಯಕೆಯನ್ನು ಕೆರಳಿಸುತ್ತಿರುವಾಗಲೇ ಅನುಕೂಲವಾಗಿ ಇಪ್ಪತ್ತರ ಮೊದಲೇ ಅವನಿಗೆ ಹೆಗ್ಗಡೆತನವೂ ಬಂತು. ಗೇರುಸೊಪ್ಪೆಯಿಂದ ಮನೆಗೆ ಮರಳಿದ ಮರುದಿನ ರಾತ್ರಿ ಕತ್ತಲಲ್ಲಿ ಕಾಣದೆ ನಾಗರ ಹಾವೊಂದನ್ನು ತುಳಿದ ಸುಬ್ಬಣ್ಣ ಅಪಮೃತ್ಯುವಿಗೆ ತುತ್ತಾಗಿದ್ದ. ಅನಸೂಯಾಳ ಮಟ್ಟಿಗೆ ಜ್ಯೋತಿಷ್ಯ ಅಂದು ನಿಜವಾಗಿತ್ತು.

ಮೊದಲೇ ಹೆಂಡ ಕುಡಿದ ಕಪಿ, ಹರಯಸ್ವಾತಂತ್ರ್ಯ, ಎರಡೂ ಕೂಡಿದ ಮೇಲೆ ಕೇಳಬೇಕೆ ? ಯಜಮಾನನ ಪಟ್ಟ ಬಂದ ಮೊದಲ ಕೆಲದಿನ ಊರಲ್ಲಿ ರಂಗನಾಗಿ ಕಂಡರೂ ಪರಊರಿಗೆ ಹೋಗಿ ಮಂಗನಾಗಿ ಮೆರೆದು ಬರುತ್ತಿದ್ದ ವಿಶ್ವನಾಥ. ಆ ಮೇಲೆ ಕ್ರಮವಾಗಿ ಊರಲ್ಲಿ ಸುದ್ದಿ ಹಬ್ಬಿತ್ತು. ಆದರೆ ವಿವೇಕ ಯಾರು ಹೇಳಬೇಕು? ಅದು ಹೇಳಿ ಬರುವದೂ ಅಲ್ಲ. ಹೊಸದಾಗಿ ಅವನೇನೂ ಸಂಪಾದಿಸಬೇಕಾಗಿರದಿದ್ದರೂ ಇದ್ದುದನ್ನು ಸರಿಯಾಗಿ ಕಾದುಕೊಂಡಿದ್ದರೆ ಹಾಯಾಗಿ ದಿನದೂಡಬಹುದಾಗಿತ್ತು. ಆದರೆ ಮೈಸುಖಕ್ಕೆ ಮರುಳಾದ ವಿಶ್ವನಾಥನಿಗೆ ತನ್ನ ಇತಿಮಿತಿಗಳ ವಿವೇಚನೆ ಇದ್ದರಲ್ಲವೇ ? ಬೇಡುವ ಬಯಕೆಯ ದಾಸನಾಗಿ ಎಲ್ಲೆಲ್ಲಿ ಅಲೆದನೋ ಅದರ ಲೆಕ್ಕ ಅವನಿಗೇ ಇಲ್ಲ ಈ ರೀತಿ ಕಳೆದ ಎಂಟು ವರುಷಗಳ ಜೀವನಕ್ಕೆ ಗುರುತಾಗಿದ್ದುದು ಅವನ ಮೈ, ಸುಟ್ಟಬದನೇ ಕಾಯಂತೆ ಆ ದೇಹ ಕಂದಿ-ಕುಂದಿತ್ತು. ಆದರೂ ಅವನದು ತೀರದ ದಾಹ. ಬೆಂಕಿಗೆ ತುಪ್ಪ ಸುರಿದರೆ ಅದರ ಉರಿ ಕಡಿಮೆಯಾಗುವುದೆ ?

ಮನೆಯಲ್ಲಿದ್ದ ಬೆಲೆ ಬಾಳುವ ಸಾಮಾನುಗಳೆಲ್ಲ ಒಂದೊಂದಾಗಿ ಮಂಗ ಮಾಯವಾಗುವುದು ಅನಸೂಯಾಳಿಗೆ ಕಾಣುತ್ತಿತ್ತಾದರೂ ಅವಳು ಏನನ್ನೂ ಹೇಳುತ್ತಿರಲಿಲ್ಲ. ಒಂದು ಮನೆ ನಿಲ್ಲಲಿ ಎಂದು ಅವಳು ಅವನಿಗೆ ಪ್ರಿಯವಾಗಬಹುದೆಂದು

ಕೊಂಡಿದ್ದ ಮದುವೆಯ ಮಾತು ಆಡಿ ಅಪ್ರಿಯಳಾಗಿದ್ದಳು. 'ಇದ್ದದ್ದನ್ನೆಲ್ಲ ಕಳೆದು ಕೊಂಡು ಸಾಲಮಾಡಿಕೊಂಡರೂ ಅವನಿಗೇ, ಮೂಲ ಉಳಿಸಿಕೊಂಡರೂ ಅವನಿಗೇ. ನಾನು ಯಾವ ರಾಜ್ಯ ಆಳಬೇಕಾಗಿದೆ ? ' ಎಂದು ಅವಳು ಸಮಾಧಾನ ತಂದು ಕೊಂಡರೂ ಅದು ನಿಲ್ಲುತ್ತಿರಲಿಲ್ಲ. ಆದರೆ ಅವಳೇನು ಮಾಡಬಲ್ಲಳು ? 'ಇದೂ ನನ್ನದೇ ಪ್ರಾರಬ್ಧವಾಗಿರಬಹುದೇ ? ' ಎಂದು ಒಂದು ಮನಸ್ಸು ಅವಳನ್ನು ಕಾಡು ವದೂ ಉಂಟು. 'ಭೂಮಿಗೆ ಭಾರ, ಕೂಳಿಗೆ ದಂಡ ಎನ್ನುವಂತೆ ಬದುಕಿದ್ದು ನಾನ್ನು ಇನ್ನೂ ಏನೇನು ಕಾಣಬೇಕಾಗಿದೆಯೋ ? ' ಎಂದು ತನ್ನ ಜನ್ಮವನ್ನೇ, ಶಪಿಸಿ ಕೊಳ್ಳುತ್ತ ಮನೆ ಮೂಳಿಯಾಗಿ ದಿನ ಕಳೆಯುವದೇ ಅವಳ ಕರ್ಮ ಎಂಬಂತಾಗಿದೆ.

* * * *

ಅನಸೂಯಾಳ ಸುಪ್ತ-ಜಾಗೃತ ಮನಸ್ಸಿನ ಎರಡೂ ಅವಸ್ಥೆಗಳನ್ನು ಹಿಂಡಿ ಕಾಡುತ್ತಿದ್ದ ದಾರುಣ ವ್ಯಥೆ ಇಷ್ಟೆಲ್ಲ ಇರುವಾಗ, ಇವನು ಬಂದಾನು, ಬರುತ್ತಾನೆ ಎಂಬುದರ ಲೆಕ್ಕವೇ ಇಲ್ಲದಿದ್ದಾಗ, ವಿಶ್ವನಾಥ ಬಂದು ಬಾಗಿಲು ಬಡಿದರೆ ಅವಳಿಗೆ ಕೇಳಿಸುವುದು ಸಾಧ್ಯವೂ ಇಲ್ಲ, ಸಹಜವೂ ಇಲ್ಲ.

ಹಾಗೇ ಅವನು ಹೊರಬಾಗಿಲಲ್ಲಿ ನಿಂತೇ ಇದ್ದ. ನಿಂತು ಬೇಸತ್ತೋ, ಕಾಲು ಸೋತೊ, ಅವನು ಮತ್ತೊಮ್ಮೆ ಬಾಗಿಲು ಬಡಿದು 'ಚಿಕ್ಕೀ' ಎಂದು ಸ್ವಲ್ಪ ಕೊರಳು ಬಿಚ್ಚಿದಾಗ 'ಯಾರು ? ವಿಶುವೇನೋ? ಬಂದೆ' ಎಂದು ಆ ದನಿಯಿಂದಲೇ ಊಹಿಸಿ ನಿದ್ದೆಯಿಂದ ಎಚ್ಚತ್ತವಳಂತೆ ತನ್ನ ಭಾವಸಮಾಧಿಯಿಂದ ಇಳಿದು ಬಂದು ಬಾಗಿಲು ತೆಗೆಯುತ್ತಲೇ ಹೊರಗಿನ ಕತ್ತಲು ತಾನೇತಾನಾಗಿ ಒಳನುಗ್ಗಿ ಅಲ್ಲಿಯ ಕತ್ತಲಿನಲ್ಲಿ ಕೂಡಿತ್ತು. ಒಳಗೆ ಕಾಲಿಡುತ್ತಿದ್ದಂತೆಯೇ ಅವನು 'ಏನು, ಮಲಗಿದ್ದೆಯಾ ಚಿಕ್ಕಿ ? ಮೈಯಲ್ಲಿ ಸರಿಯಿಲ್ಲವೆ ? ' ಎಂದು ವಿನೀತನಾಗಿ ಅವಳನ್ನು ಪ್ರಶ್ನಿಸಿದ್ದ. 'ನನ ಗೇನು ಧಾಡಿ ಬಡಿದಿದೆ ? ಇದ್ದೇನೆ ಕಲ್ಲು ಗುಂಡಿನ ಹಾಗೆ' ಎಂದು ಬೇಸರದಿಂದಲೇ ಅನ್ನುತ್ತ ಅವಳು ಆ ಕತ್ತಲಲ್ಲೆ ಅರಸಿ ಕಂದೀಲು ಹಚ್ಚಿದಳು. ಆ ಬೆಳಕಿಗೆ ಕತ್ತಲು ಸನಿಹದಲ್ಲಿ ಕಾಣುವ ಮಟ್ಟಿಗೆ ಹರಿಯಿತಾದರೂ ಅವಳ ಮನದ ಕತ್ತಲು ಕಡಿಮೆ ಯಾದರಲ್ಲವೇ ? ಹಿಟ್ಟು ಅವಲಕ್ಕಿಗಳ ಮೂಲಕ್ಕೆ ಹುಟ್ಟಿದ್ದೇನೆ ಎಂದುಕೊಂಡ ಅವ ಳಿಗೆ ರಾತ್ರಿಯ ಅಡುಗೆಯೇನೂ ಇರಲಿಲ್ಲವಾದ್ದರಿಂದ ತೆಪ್ಪಗೆ ಇದ್ದಳು. ಈಗ ವಿಶ್ವ ನಾಥ ಬಂದದ್ದಕ್ಕಾಗಿ ಅವಳು ಒಲೆಗೆ ಉರಿ ಹಚ್ಚಬೇಕಾಗಿ ಬಂತು.

ವಿಶ್ವನಾಥ ಊಟ ಮುಗಿಸಿ ನಡುಮನೆಯಲ್ಲಿ ಹಾಸಿಗೆ ಹಿಡಿದ. ಎಲ್ಲಾ ಕೆಲಸ ಮುಗಿದ ಮೇಲೆ ಅನಸೂಯಾ ಜಗುಲಿಯ ನೆಲಕ್ಕೆ ತಲೆಕೊಟ್ಟಳು. ಆಗಲೇ ರಾತ್ರಿ ಸುಮಾರಾಗಿಬಿಟ್ಟಿತ್ತು. ಆದರಿಂದ ಅವಳಿಗೆ ನಿದ್ದೆ ಹತ್ತುವದಕ್ಕೆ ತಡವಾಗಲಿಲ್ಲ.

ಆದರೆ ವಿಶ್ವನಾಥನಿಗೆ ಇನ್ನೂ ಕಣ್ಣು ಮುಚ್ಚಿರಲಿಲ್ಲ. ಯೋಚನೆ ಅವನ ತಲೆಯನ್ನು ಬಿಟ್ಟಿದ್ದರಲ್ಲವೆ ನಿದ್ದೆ ಬರಬೇಕಾದದ್ದು ? ಇಂಥ ಹೊತ್ತಿಗೇ ಅವನು ಮನೆಗೆ ಕಾಲಿಡುವದು. ಕೈ ಬರಿದಾದಾಗಲೇ ಅವನಿಗೆ ಮನೆಯ ನೆನಪು. ಮನೆಯಿಂದ ಹೊತ್ತುಕೊಂಡು ಹೋಗಬಹುದಾದ್ದನ್ನೆಲ್ಲ ಇಷ್ಟರಲ್ಲೇ ಒಂದೊಂದಾಗಿ ಸಾಗಿಸಿ ಬಯಕೆಗೆ ಬಳಸಿಕೊಂಡಾಗಿತ್ತು. ಕೂತು ಉಂಡರೆ ಕುಡಿಕೆ ಹೊನ್ನೇ ಸಾಲದಿರುವಾಗ ವ್ಯಸನವೂ ಜೊತೆಗೂಡಿದಮೇಲೆ ಕೇಳುವದೇನು ? ನಾಲ್ಕು ಕಾಸು ಹಡೆಯಬಹುದಾದ ವಸ್ತುವೆಲ್ಲ ಮನೆಯಿಂದ ಕರಗಿಹೋಗಿದ್ದರೂ ಅನಸೂಯಾ ಕಂಡೂ ಕಾಣದವಳಂತೆ ಸುಮ್ಮನೆ ಇದ್ದುಬಿಟ್ಟಿದ್ದಳು. ಮೃಗಜಲದ ಬೆನ್ನು ಹತ್ತಿದಂತೆ ದೈಹಿಕ ದಾಹಕ್ಕೆ ಬಲಿಯಾದ ವಿಶ್ವನಾಥನಿಗೆ ವಿವೇಕವಿದ್ದರಲ್ಲವೆ ? ಬೇಡುವ ಬಯಕೆಯ ದಾಸನಾದವನಿಗೆ ಆರ್ಥಿಕ ಸಮಸ್ಯೆ ಹೆಜ್ಜೆ ಹೆಜ್ಜೆಗೂ ಇದ್ದದ್ದೇ! ಕಾಂಚನಕ್ಕಾಗಿ ಕರೆಯುವ ಕಾಮಿನಿಯರಿಗೆ ಬರಿಗೈಯಿಂದ ಬರುವವರನ್ನು ಉಪಚರಿಸಿ ಬದುಕುವದಕ್ಕೆಲ್ಲಿ ಸಾಧ್ಯ ? ಯಾವುದೇ ಭಾವನೆಯನ್ನು ಬೆಳೆಸುವದಕ್ಕೂ ಅಳಿಸುವದಕ್ಕೂ ಪ್ರತಿಯೊಬ್ಬನ ಬದುಕಿನ ಸಮಸ್ಯೆಯೇ ಮೂಲ. ಅನ್ಯರಿಗಾಗಿ ಕನಿಕರಿಸುವದರಿಂದಲೇ ಯಾವನಾದರೂ ಹೊಟ್ಟೆ ತುಂಬಿಕೊಳ್ಳಬಲ್ಲನೆ ? ವ್ಯಾಪಾರೀ ಮನೋವೃತ್ತಿ ಹಿಡಿದಮೇಲಂತೂ ದುಡ್ಡಿದ್ದವನೇ ದೊಡ್ಡವನಾಗಿ ಕಾಣುತ್ತಾನೆ. ಆದರಿಂದಲೇ ಕಿಸೆ ಬರಿದಾದಾಗ ವಿಶ್ವನಾಥನಿಗೆ ಮನೆಯ ಹಾದಿ ತುಳಿಯಬೇಕಾದದ್ದು ಅನಿವಾರ್ಯವಾಗಿತ್ತು.

ಮಳೆಗಾಲದಲ್ಲಿ ಸೊಕ್ಕಿನಿಂದ ಹರಿಯುವ ಕೊರಕಲ ನೀರಿನಂತೆ ತಾರುಣ್ಯದ ಅಮಲಿನಲ್ಲಿದ್ದಾಗಲೇ ಮನೆಯ ಅಧಿಕಾರ ಸಿಕ್ಕಿದ್ದ ವಿಶ್ವನಾಥ ಎಷ್ಟೊಂದು ಹೂವಿಗೆ ಸೆರೆಯಾದ ಭೃಂಗವೋ ಅದರ ಲೆಕ್ಕ ಅವನಿಗೇ ಇದ್ದರಲ್ಲವೆ ? ಬದುಕಿನಲ್ಲಿ ನಿಜವಾಗಿ ಇದ್ದ ಸುಖವೆಂದರೆ ಇದೇ ಎಂದು ಅವನ ಖಚಿತವಾದ ತಿಳುವಳಿಕೆಯಾಗಿದ್ದಾಗ ಅದು ಸಹಜವೇ. ಆದರೆ ಅದು ತೀರದ ದಾಹ, ಮುಗಿಯದ ಬೇಟೆ. ಆದರೂ ಅವನಿಗೆ ಅದೇ ಸುಖ ಎಂಬ ಅಚಲವಾದ ನಂಬಿಕೆ. ಅ ಕಾಂಚನ ಮೃಗದ ಬೆನ್ನು ಹತ್ತಿ ಅವನು ನಡೆದೇ ಇದ್ದ. ಸುಬ್ಬಣ್ಣ ಸಾಯುತ್ತಲೇ ಅವನಲ್ಲಿ ಆದ ಬದಲಾವಣೆಗಳೆಷ್ಟು ? ಪ್ರಪಂಚವನ್ನೆಲ್ಲ ತನ್ನದೇ ಆದ ರೀತಿಯಲ್ಲಿ ಹೀಗೆ ಮನಸ್ವಿಯಾಗಿ ತುಳಿಯುತ್ತೇನೆಂದು ಅವನೇ ಆ ಮೊದಲು ಯೋಚಿಸಿದವನಲ್ಲ, ಅಂದ ಮೇಲೆ ಅನ್ಯರು ಏನು ಊಹಿಸಬೇಕು ? ಅವನ ಸುಕ್ಕಾದ ಮೋರೆ, ಚಪ್ಪಳಿಸಿದ ಕೆನ್ನೆ, ಗುಳಿಬಿದ್ದ ಕಣ್ಣು, ಎಲುಬಿನ ಗೂಡಿನಂತೆ ಕಾಣುವ ಎದೆ, ಸೋತ ಕೈಕಾಲು, ಆಗಲೇ ಸಾಕಷ್ಟು ನರೆತುಹೋದ ತಲೆಗೂದಲು, ಇವೆಲ್ಲ ಅವನ ವಯಸ್ಸಿಗೂ ಹತ್ತು ವರ್ಷಗಳಿಗಿಂತ ಹೆಚ್ಚು ಹಿರಿದಾಗಿ ಕಾಣುವ ತಾರುಣ್ಯದ ಇಳಿತವನ್ನು ಸೂಚಿಸುತ್ತಿತ್ತು. ಅದರ ಚಿಂತೆ ಅವನಿಗಿದ್ದರಲ್ಲವೆ ? ಹೇಳಕೇಳುವವರಂತೂ ಮೊದಲೇ ಇಲ್ಲ. ಪಂಡಿತ

ರಾದರೂ ಇದ್ದಿದ್ದರೆ ಮಗಳ-ಮನೆಬದುಕು ಹಾಳಾಗುತ್ತದೆ ಎಂಬ ಕಿಚ್ಚಿಗಾಗಿಯಾದರೂ ಹಿರಿಯರಾಗಿ ಅನಸೂಯಾಳ ಪತಿಯಿಂದ ಅವನಿಗೇನಾದರೂ ತಿಳಿಹೇಳುತ್ತಿದ್ದರೇನೊ ? ಆದರೆ ಅವರು ಮಗಳು ವೈಧವ್ಯ ಕಾಣುವ ಮೊದಲೇ ಕಾಲವಾಗಿದ್ದರು, ತಂದೆಯು ಇತಿಕರ್ತವ್ಯ ಮುಗಿಸಿ ಮಗಳಿಗೊಂದು ದಿಕ್ಕು ತೋರಿಸಿ ಹೋದವರಂತೆ. ಮತ್ತೆ ಹತ್ತಿರದವರಾಗಿ ವಿಶ್ವನಾಥನನ್ನು ವಿಚಾರಿಸುವುದಕ್ಕೆ ಯಾರಾದರೂ ಇದ್ದರಲ್ಲವೇ ? ಸಮ್ಮಂಧವಿಲ್ಲದವನ ಸುಖ-ದುಃಖ ಹಚ್ಚಿಕೊಳ್ಳುವವರಾದರೂ ಯಾರು ?

ಎಷ್ಟು ಹೊರಳಾಡಿದರೂ ವಿಶ್ವನಾಥನಿಗೆ ನಿದ್ದೆಬರಲೇ ಇಲ್ಲ. ಆ ತಲೆ ತಿನ್ನುತ್ತಿರುವ ಯೋಚನೆಯಲ್ಲೇ ಅವನು ಫಕ್ಕನೆ ಎದ್ದು ಕುಳಿತಾಗ ಎದುರು ಕೋಣೆಯಿಂದ ಬರುತ್ತಿದ್ದ ಮಿಣುಕು ದೀಪದ ಮಂದ ಪ್ರಕಾಶ ಸಹಜವಾಗಿ ಕಾಣುತ್ತಲೇ ಆ ಬೆಳಕಿನಲ್ಲಿ ಏನೋ ಪರಿಹಾರ ಕಂಡವನಂತೆ ಅದನ್ನೇ ನಿಟ್ಟಿಸತೊಡಗಿದ್ದ. ಅಲ್ಲಿ ಉರಿಯುತ್ತಿದ್ದುದು ದೇವರ ಪೀಠದ ಬದಿಯಲ್ಲಿಟ್ಟ ನಂದಾದೀಪವಾಗಿತ್ತು. ಆ ಬೆಳಕನ್ನೇ ನಿಟ್ಟಿಸುತ್ತಿದ್ದಂತೆ ಕೊನೆಗೊಳ್ಳುತ್ತಿದ್ದ ಯೋಚನೆಯೊಂದಿಗೆ ಅವನು ಎದ್ದು ನಿಂತಾಗಿತ್ತು. 'ಇದು ಸರಿಯಲ್ಲ' ಎಂದು ಅವನ ವಿವೇಕ ಒಂದು ಮೂಲೆಯಿಂದ ಎಚ್ಚರಿಸುತ್ತಿದ್ದರೂ, ಅವನ ಇಚ್ಛಾ ಪ್ರಾರಬ್ಧ ಅವನ ಕಾಲಿಗೆ ಗತಿ ಕೊಟ್ಟಿತ್ತು. ಕೈ ಮುಂದೆ ಚಾಚಿತ್ತಾದರೂ ಅವನ ಹೃದಯದ ತುಂಬೆಲ್ಲ ಏನೋ ಒಂದು ಅಳುಕು. ಆ ಅಧೀರತೆಯಿಂದ ಮೈ ನಡುಗುತ್ತಿತ್ತು. ಆ ಅವಸ್ಥೆಯಲ್ಲೇ ಮುನ್ನುಗ್ಗಿ, ಅವನ ಎತ್ತಿದ ಕೈ ಏನನ್ನೋ ತಡವಿತು. ಆದರೆ ಅದಕ್ಕೆ ಹಿಡಿತದ ಶಕ್ತಿಯೇ ಉಳಿದಿರಲಿಲ್ಲ. ಬಯಸಿದ್ದರ ಜೊತೆಗೆ ಇನ್ನೂ ಏನೇನೋ ಉರುಳಿಸಿ ಇಲ್ಲದ ಅವಾಂತರ ಒದಗಿಬರಬೇಕೆ ?

ಒಳಗಿನ ಸದ್ದಿಗೆ ಎಚ್ಚೆತ್ತ ಅನಸೂಯಾ ಒಂದು ಕ್ಷಣ ಮಲಗಿದಲ್ಲೇ ಕಿವಿಯಾಲಿಸಿದಳು. ಅದು ಒಳಗಿನಿಂದಲೇ ಬರುಪದೆಂದು ಖಚಿತವಾಗಿತ್ತು. 'ಈ ಮಾಣಿಗೇನು ಹುಚ್ಚು ಹಿಡಿದಿದೆಯೇ ? ಮಧ್ಯರಾತ್ರಿ ಮೀರಿದ್ದರೂ ನಿದ್ದೆಮಾಡದೆ ಇವನು ಒಳಗೆ ಏನು ನಡೆಸಿದ್ದಾನೆ ನೋಡುವಾ' ಎಂದುಕೊಂಡು ತಲೆಯ ಮೇಲಡೆಗೆ ಇಟ್ಟುಕೊಂಡಿದ್ದ ಚಿಮಣಿಯನ್ನು ಹೊತ್ತಿಸಿಕೊಂಡು ಅವಳು ಒಳಗೆ ಬಂದಾಗ ವಿಶ್ವನಾಥ ತನ್ನ ಎರಡೂ ಕೈಗಳಿಂದ ಏನನ್ನೋ ಮುಚ್ಚಿಕೊಳ್ಳಲು ಪ್ರಯತ್ನಿಸುತ್ತಿದ್ದ. ಮೊದಲು ಅವಳಿಗೆ ಏನೂ ತಿಳಿದುಬರಲಿಲ್ಲ. ಹಾಗೇ ಸುತ್ತಲೂ ನಿಟ್ಟಿಸಿದಾಗ ಅವಳ ದೃಷ್ಟಿಗೆ ಬಿದ್ದದ್ದು ನೆಲಕ್ಕೆ ಉರುಳಿದ್ದ ದೇವರ ಪೀಠ. 'ಅಯ್ಯೋ ಮಾಣಿ, ನಿನ್ನಾ ಹೊಲೆ ಮೈಲಿಗೆಯಲ್ಲಿ ದೇವರನ್ನು ಮುಟ್ಟಿದೆಯಾ ? ' ಎಂದ ಅವಳ ಪ್ರಶ್ನೆಗೆ ಅವನಲ್ಲಿ ಉತ್ತರವಿದ್ದರಲ್ಲವೇ ? ಆ ದೇವರು ಅವಳ ಪಾಲಿಗೆ ನಿಷ್ಠುರನಾಗಿದ್ದರೂ ಅದೇ ದೇವರಲ್ಲಿ ಅನುಕೂಲವಾದ ಮಟ್ಟಿಗೂ ಅವಳು ಸರಿಯಾಗಿಯೇ ನಡೆದುಕೊಂಡು ಬಂದಿ

ದ್ದಾಳೆ. ಎಷ್ಟಾದರೂ ಸಂಪ್ರದಾಯನಿಷ್ಠ ವಾತಾವರಣದಲ್ಲೆ ಬೆಳೆದುಬಂದವಳು. ಆ ಭಾವುಕತೆ ಸಹಜ. ಮನೆಯ ಮಾಣಿ ದೇವರ ಪೂಜೆಯನ್ನು ಮಾಡುವದಕ್ಕೆ ಮನೆಯಲ್ಲೇ ಇಲ್ಲದಿರುತ್ತಿದ್ದರೂ ನೆರೆಕೆರೆಯ ಯಾರನ್ನಾದರೂ ಕರೆದಾದರೂ ಅವಳು ಪ್ರತಿದಿನವೂ ಆ ದೇವರಿಗೆ ಹೂವು ತಪ್ಪದ ಹಾಗೆ ನೋಡಿಕೊಳ್ಳದಿಲ್ಲ. ಸುಬ್ಬಣ್ಣ ಬದುಕಿ ಇದ್ದಾಗ ಸಲ್ಲುವ ರೀತಿಯಲ್ಲಿ ಧೂಪ, ದೀಪ, ನೈವೇದ್ಯ ಇತ್ಯಾದಿ ಪೂಜೆಪುರಸ್ಕಾರ ಅವಳು ನಡೆಸಲಾರಳಾಗಿದ್ದರೂ ತಪ್ಪದೆ ಅಷ್ಟನ್ನಾದರೂ ನಡೆಸಿಕೊಂಡು ಬಂದಿದ್ದಾಳೆ. ಸುಬ್ಬಣ್ಣ ಗಣಪತಿ-ಉಪಾಸಕನಾಗಿದ್ದ. ಅವನ ಪೂಜೆಯಾದರೂ ಅಷ್ಟೇ ವಿಶೇಷವಾಗಿತ್ತು. 'ಅವರು ಆರಾಧಿಸುತ್ತಿದ್ದ ದೇವರು' ಎಂಬದಕ್ಕಾಗಿ ಆ ಶ್ರದ್ಧೆಯೇ ಒಂದು ನಿಷ್ಠೆಯಾಗಿ ಬೆಳೆದುಬಂದಿರಲಿಕ್ಕೂ ಸಾಕು. ಒಟ್ಟಿಗೆ ಅವಳು ಆ ದೇವರಲ್ಲಿ ಇಟ್ಟಿದ್ದ ಭಕ್ತಿಯೇನೂ ಕಡಿಮೆಯಿಲ್ಲ. ಅದೇ ದೇವರು ಅವಳ ಬದುಕಿನಲ್ಲಿ ಕರುಣೆ ತೋರಿರದಿದ್ದರೂ ವಿಶ್ವನಾಥನಿಗೆ ಚಿಂತಾಮಣಿಯಾಗಿ ಕಾಣಿಸಿಕೊಳ್ಳಬೇಕೆ ? ಅವಳು ಹಾಗೇ ಎದುರು ನಿಂತಿರುವುದನ್ನು ನೋಡಿ ಅವನು ಕಕ್ಕಾವಿಕ್ಕಿಯಾಗಿದ್ದ. ಕಳುವಿಗೆ ಹೊರಟವನು ಸಿಕ್ಕಿಬಿದ್ದಹಾಗೆ ಅವನು ಪೇಚಾಟಕ್ಕೆ ಸಿಲುಕಿದ್ದ. ಆ ರೀತಿಯಲ್ಲೇ ವ್ಯಕ್ತವಾಗುತ್ತಿದ್ದ ಅವನ ಅವಸ್ಥೆಯನ್ನು ಕಂಡು 'ಇಂದು ನನ್ನನ್ನು ನೋಡಿದರೆ ನಿನಗೆ ಹೆದರಿಕೆಯಾಗುತ್ತದೆಯೇ ?' ಎಂದ ಅವಳ ಈ ಪ್ರಶ್ನೆಗೂ ಅವನಿಂದ ಉತ್ತರ ಬರದಿದ್ದರೂ ಅವನ ಕೈ ಏನನ್ನೋ ಮುಚ್ಚಿಹಿಡಿಯುವುದರಲ್ಲೇ ಇತ್ತು. ಅದನ್ನು ನೋಡಿ 'ಅದೇನು ? ನಿನ್ನ ಕೈಗೇನಾದರೂ ಪೆಟ್ಟುತಾಗಿದಿಯೇ ? ' ಎಂದು ಅವಳು ಕೇಳುತ್ತಿದ್ದಂತೆ ಅವನ ಕೈ ಸಡಿಲಿಸಿದ ಹಾಗೆಯೇ ಬಿದ್ದದ್ದು-ಚಿನ್ನದ ಪ್ರತಿಮೆ! ಅದು ಸುಬ್ಬಣ್ಣನ ಆರಾಧ್ಯ ಕುಲ ದೇವತೆ. ಈಗ ಅವಳಿಗೆಲ್ಲವೂ ಅರ್ಥವಾಗಿತ್ತು. ಅವನನ್ನು ನೋಡುವುದಕ್ಕೆ ಅವಳಿಗೆ ಹೇಸಿಗೆ ಹುಟ್ಟಿಬಿಟ್ಟಿತ್ತೀಗ. ಅದೇ ತಿರಸ್ಕಾರದಲ್ಲಿ 'ಥೂ, ಸುಟ್ಟಿತು ನಿನ್ನ ಜನ್ಮ. ನಿನಗೆ ದೇವರೂ ಇಲ್ಲ. ಮುಖ್ಯ ನಿನಗೆ ಬೇಕಾದದ್ದು ಹೆಣ್ಣು ! ನಾನೂ ಒಬ್ಬಳು ಹೆಣ್ಣು ಇದೋ, ನಿನ್ನ ಮುಂದೆಯೇ ನಿಂತಿದ್ದೇನೆ........'ಎಂದು ಎಲ್ಲ ಭಾವನೆಯೇ ಸುಟ್ಟಿಹೋದ ರೀತಿಯಲ್ಲಿ ತಡಬಡಿಸಿ ಆವೇಶದಿಂದ ಹೇಳುತ್ತಿದ್ದಂತೆಯೇ ಹೃದಯದಲ್ಲಿ ಒಮ್ಮೆಲೇ ಹುಟ್ಟಿದ್ದ ಉದ್ವೇಗ-ನೋವು ಅವಳ ಪ್ರಜ್ಞೆಯನ್ನು ತಪ್ಪಿಸಿ ನೆಲಕ್ಕೆ ಉರುಳಿಸಿತು.

ಅವಳಾ ಮಾತಿನಲ್ಲಿ ಯಾವ ಜಾದು ಇದ್ದಿತೋ ? ಕೆನ್ನೆಗೆ ಹೊಡೆದು ಹೇಳಿದ್ದಕ್ಕಿಂತಲೂ ಹೆಚ್ಚಾಗಿ ಅದು ವಿಶ್ವನಾಥನ ಪ್ರಜ್ಞೆಯನ್ನು ಕೆಣಕಿಬಿಟ್ಟಿತ್ತು. ಈ ವರೆಗಿನ ಬದುಕಿನ ಸ್ಮೃತಿಯೆಲ್ಲಾ ಒಂದೊಂದಾಗಿ ಅವನ ಮನದಲ್ಲಿ ಮರುಕಳಿಸತೊಡಗಿತ್ತು. ಒಂದೊಂದೂ 'ಎಂಥ ಭಂಡ ಬಾಳು ನಿನ್ನದು !' ಎಂದು ಅವನ ವಿವೇಕವನ್ನು ತಿವಿಯತೊಡಗಿತ್ತೀಗ. 'ಇಷ್ಟು ದಿನಗಳವರೆಗೆ ಒಂದೇ ಸಮನೆ ಹೆಣ್ಣಿನ ಬೇಟೆ ನಡೆಸಿದರೂ ತೃಪ್ತಿಯನ್ನು ಕಾಣಲಿಲ್ಲ. ಕಾಮ-ಕಾಮಿತಗಳು ಉಪಭೋಗ

ದಿಂದ ಶಮನವಾಗಲು ಸಾಧ್ಯವೆ ?' ಎಂದು ಅವನ ವಿವೇಕ ಅವನನ್ನು ಪ್ರಶ್ನಿಸುತ್ತಿತ್ತೀಗ. 'ಚಿಕ್ಕೀ, ನಾನು ಪಾಪಿ ! ನಿಜವಾಗಿಯೂ ನೀನು ನನ್ನನ್ನು ಕೊಂದರೂ ದೋಷವಿರಲಿಲ್ಲ. ಇಂಥ ಮಾತಿನಿಂದ ನನ್ನನ್ನು ಕೊಲ್ಲಬೇಕೆ ? ಅಯ್ಯೋ, ನನ್ನ ಜನ್ಮವೇ ! ' ಎಂದು ಹಣೆ ಹಣೆ ಬಡಿದುಕೊಂಡ. ತನ್ನೀವರೆಗಿನ ಕೃತಿಗಳಿಗಾಗಿ ಹಳಿದುಕೊಳ್ಳುವದಲ್ಲದೆ ಅವನಿಗೇನೂ ಉಳಿದಿರಲಿಲ್ಲ, ಅಷ್ಟು ಅವನ ವಿವೇಕ ತಿಳಿಯಾಗಿತ್ತೀಗ. ಆದರೆ ಅದು ಆರುವ ದೀಪ ಬೆಳಗುವಂತೆ ಹುಟ್ಟಿದ ವಿವೇಕ !

ಪ್ರಜ್ಞೆಯಿಲ್ಲದೆ ತನ್ನೆದುರು ಆವಳು ಹಾಗೆ ಬಿದ್ದಿದ್ದರೂ ಎಬ್ಬಿಸುವ ಸಾಹಸವನ್ನು ಅವನು ಮಾಡಲಾರನಾಗಿದ್ದ. ಆವಳೆದುರು ನಿಲ್ಲುವಷ್ಟು ನೈತಿಕ ಧೈರ್ಯ ಕೂಡ ಅವನಲ್ಲೀಗ ಉಳಿದಿರಲಿಲ್ಲ

ರಾತ್ರಿ ಸರಿದು ಹೋಗುತ್ತಿದ್ದಂತೆ ತೀಡಿ ಬರುತ್ತಿದ್ದ ತಂಗಾಳಿಗೆ ಅನಸೂಯಾ ತಿಳಿವಿಗೆ ಬಂದಾಗ ಆ ಕುರುಡು ನಂದಾದೀಪದ ಬೆಳಕಿನಲ್ಲಿ ಆವಳು ಕಂಡದು ಅಲ್ಲಿಯೇ ಜಂತಿಗೆ ನೇತಾಡುತ್ತಿದ್ದ ವಿಶ್ವನಾಥನ ಹೆಣವಾಗಿತ್ತು. ಒಂದು ಕ್ಷಣದ ಮಟ್ಟಿಗೆ ಆವಳ ಬುದ್ಧಿ ಮಂಕಾಯಿತು. ಬದುಕನ್ನು ತಾನು ಕಂಡ ರೀತಿಗೆ ರೋಸಿ ಹೋದ ಅವಳ ಮನಸ್ಸು ಈಗ ಯಾವ ಭಾವನೆಯನ್ನೂ ಹೊರಗೆಡುಹದಿರುವಷ್ಟು ನಿಷ್ಠುರಗೊಂಡಿತ್ತು. ಅದೇ ನಿರ್ವಿಕಾರತೆಯಲ್ಲಿ ಕತ್ತಲನ್ನೇ ಭೇದಿಸಲು ಹೊರಟವಳಂತೆ, ಮನದ ಕತ್ತಲಲ್ಲಿ ಮುಗ್ಗರಿಸುತ್ತ ಮನೆಯಿಂದ ಹೊರಬಿದ್ದಳು.

ಬೆಳ್ಳಗೆ ಬೆಳಗಾದಾಗ ಕೆರೆಯಲ್ಲಿ ತೇಲುತ್ತಿದ್ದ ಹೆಣವನ್ನು ಕಂಡು ಯಾರೋ ಬೊಬ್ಬಿರಿದಾಗ ಕೂಡಿದ ಜನ ಎತ್ತಿದ್ದು ಅನಸೂಯಾಳ ಹೆಣವಾಗಿತ್ತು. ಹಾಗೆಯೇ ಹೊತ್ತುಕೊಂಡು ಬಂದರೆ ಆ ಮನೆಯಲ್ಲಿ ಇನ್ನೊಂದು ಶವಸಂಸ್ಕಾರಕ್ಕೆ ಸಿದ್ಧವಾಗಿರುವದನ್ನು ಕಂಡಾಗ, ಆ ಸಮಸ್ತರಿಗೆಲ್ಲ ಒಂದೇ ರಾತ್ರಿಯಲ್ಲಿಆಕಸ್ಮಿಕವಾಗಿ ಈ ರೀತಿ ಎರಡು ಅಪಘಾತ ಆ ಮನೆಯಲ್ಲಿ ನಡೆದು ಹೋದದು ಒಂದು 'ಯಕ್ಷಪ್ರಶ್ನೆ' ಯಾಗಿತ್ತು.

—ಎಲ್. ಡಿ. ಸಭಾಹಿತ

# ಒಂದೇ ದೇಟಿನ ಕಾಯಿಗಳು

ಒಂದೇ ದೇಟಿನ ಕಾಯಿಗಳು
ಎಲ್ಲಾ! ಒಂದೇ ದೇಟಿನ ಮಾವುಗಳು
ಸಂಪ್ರೀತಿಯ ಸುರರು! ರೊಚ್ಚಿನ ರಕ್ಕಸರು!
ಎಲ್ಲಾs! ಎಲ್ಲಾss! ಎಲ್ಲಾsss! ಒಂದೇ ದೇಟಿನ ಕಾಯಿಗಳು"

—ಮಧುರಚೆನ್ನ

## ೧

ನಾಡಗೌಡ ಅಪ್ಪಣ್ಣಪ್ಪ ಎಂಬತ್ತು ವರುಷದ ಪೂರ್ಣ ಜೀವನವನ್ನು ಬಾಳಿ ಮೊನ್ನೆ ಮೊನ್ನೆ ಕಾಲವಶರಾದರು. ಮೊನ್ನೆಯೆಂದರೂ ೫-೬ ವರುಷವಾಗಿರಬೇಕು. ಅವರು 'ಜೀವೇಮ ಶರದಃ ಶತಂ' ಎಂಬ ಮಂತ್ರದ ಗಾಯಿತ್ರಿಯನ್ನು ಬಾಯಲ್ಲಿ ಗುಣಗುಣಿಸುತ್ತಲೇ ಅಖಂಡ ಶತಮಾನದ ಆಯುಷ್ಯವನ್ನು ಬದುಕಿ ಬಾಳುವ ಪಣ ತೊಟ್ಟು ಅವತರಿಸಿರಬೇಕು. ನಮ್ಮೂರಿನ ಇತಿಹಾಸದಲ್ಲೇ ಇಷ್ಟು ದೀರ್ಘಾವಧಿ ಬದುಕಿ ಜೀವನ ಮಾಡಿದವರು ಬೇರೆ ಯಾರೂ ಇರಲಿಲ್ಲ. ಇಂಥ ಐತಿಹಾಸಿಕ ಮಹಾಜೀವಿಯ ಅವಸಾನ ಸಮಾಪ್ತಿಯಾದುದಕ್ಕೆ ಜನ ಹಳಹಳಿಸಿ ಊರಿಗೆ ಊರೇ ನೆರೆದು ಅಂತ್ಯಕ್ರಿಯೆಯಲ್ಲಿ ಭಾಗಿಯಾಗುವ ಪುಣ್ಯಪಡೆಯಿತು. ಅವರು ಗತಿಸಿ ೫-೬ ವರುಷವಾದರೂ ತೀರ ಮೊನ್ನೆ ಮೊನ್ನೆ ಕಣ್ಮರೆಯಾದಂತೆ ಭಾಸವಾಗುತ್ತಿದೆ.

ಅವರಿಗೆ ಮೂರು ಜನ ಮಕ್ಕಳು. ಹಿರಿಯಾಕೆ ಭಾಗವ್ವ, ಅವಳ ಬೆನ್ನ ಮೇಲೆ ರಾಘಣ್ಣ, ಅವನ ತರುವಾಯ ಕಿರಿಯವಳು—ರಿಂದಕ್ಕ. ರಿಂದಕ್ಕ ೫-೬ ತಿಂಗಳ ಕೂಸಿರುವಾಗಲೇ ಅಪ್ಪಣ್ಣಪ್ಪನವರ ಕುಟುಂಬ ಗಂಡನ ಮುಂದೆಯೇ ಕಣ್ಣು ಮುಚ್ಚಿದ ಪುಣ್ಯ ಪಡೆಯಿತು. ತಾಯಿಯಿಲ್ಲದ ತಬ್ಬಲಿಗಳನ್ನು ಅಪ್ಪಣ್ಣಪ್ಪ ಸವತಿಯ ಕೈಗೆ ಕೊಡಬಯಸದೆ, ಹೇಗೋ ದೊಡ್ಡವರನ್ನಾಗಿ ಮಾಡಿ, ಮದುವೆ-ಮುಂಜಿ ಬಗೆಹರಿಸಿದ್ದರು. ಆದರೆ ಅವರ ರತ್ನದ್ವಯ ಹೆಣ್ಣುಸಂತಾನ ತಾಳಿಯ ಪುಣ್ಯಕ್ಕೆ ಮದುವೆಯಾದ ವರುಷೆರಡು ವರುಷದಲ್ಲಿಯೇ ಎರವಾಗಿ, ನಿಸ್ಸಂತಾನವಾಗಿ, "ಓ ಲಕ್ಷ್ಮಣಾ" ಎಂದು ಹಡೆದ ಮನೆಯ ನೆರಳಿಗೆ ಆಶ್ರಯಪಡೆದಿತು. ಅತ್ತ ಪಡೆದ ಗಂಡನ ಸೌಭಾಗ್ಯವಿಲ್ಲ, ಇತ್ತ ಹಡೆದ ತಾಯಿಯ ಆಸರವಿಲ್ಲ. ವಿಧುರನಾದ ಅಪ್ಪಣ್ಣಪ್ಪ ಮಕ್ಕಳ ವಿಧಿಗೆ, ತನ್ನ ದುರ್ದೈವಕ್ಕೆ ನೊಂದು ನಿರ್ಗತಿಕರಾದ ಮಕ್ಕಳಿಗೆ ತಾಯಿ. ತಂದೆ ತಾನೇ ತಾನಾಗಿ ಸಾಕಿ ಸಲಹುತ್ತಿದ್ದ. ಅವನ ಆಸರೆಯ ಆಶೆಯ ಮೇಲೆ ಈ ಜೀವ ಬದುಕಿಕೊಂಡಿದ್ದವು. ಅಲ್ಲದೆ ನಾಡಗೌಡರ ಕುಬೇರ ಸಂಪತ್ತಿನ ತುಂಬಿದ ಬಂಡಿಗೆ ಈ ಎರಡು ಬರಡು ಜೀವನಗಳೇನು ಹೊರದ ಭಾರವೇ?

ಮನೆಯ ಒಳ ಆಡಳಿತವನ್ನು ತಮ್ಮದೇ ಎನ್ನುವ ವಿಶ್ವಾಸದಿಂದ ಸಾಗಿಸುತ್ತಿದ್ದ ಎರಡು ಪುಕ್ಕಟೆ ಗಿರಾಕಿಗಳು ಒಂದು ಹೊತ್ತಿನ ಊಟದ ಋಣದಲ್ಲಿ ಸಿಕ್ಕಿರುವಾಗ

ರಾಘಣ್ಣನ ಹೆಂಡತಿ ಜಾನಕಿಗಾದರೂ ಇವುಗಳಿಂದ ಬೇಸರವೇಕೆನಿಸಬೇಕು? ಬಸಿರು-ಬಾಣಂತಿತನ, ಹಬ್ಬ-ಹರಿದಿನಗಳಲ್ಲಿ ದನದಂತೆ ದೇಹ ತೇಯುವ ಈ ದಿಂಡೆಯರಿರುವಾಗ ಜಾನಕಿಗೆ ನಾಡಗೌಡಿತಿಯೆಂದು ಅಭಿಮಾನದಿಂದ, ದರ್ಪದಿಂದ ಮೂಗು ಮೇಲೆತ್ತಿ ಊರತುಂಬ ಅಲೆಯಲು ಅವಕಾಶದೊರೆಯುತ್ತಿತ್ತು. ಅಪ್ಪಣ್ಣಪ್ಪನ ಜೀವಮಾನದುದ್ದಕ್ಕೂ ಜೋಳದಪಾಳಿಗೆ ಎರಡು ಬಗೆಯದೆ ಈ ಜೀವದ್ವಯಗಳು ಹಗಲಿರುಳೆನ್ನದೆ ದುಡಿಯುತ್ತಿದ್ದವು. ಅವಕ್ಕೇನು ಅರಿವೆ—ಅಂಚಡಿ, ವಸ್ತ್ರ-ಒಡವೆಯ ಆಡಂಬರ ಬೇಕೇ ? ಊಟದಲ್ಲಿ ಸವಿ-ಸಪ್ಪಗಿನ ರುಚಿ ವೈಚಿತ್ರ್ಯ ಬೇಕೇ? ವಿಧಿ ಉಡಿಯಲ್ಲಿ ಕಟ್ಟಿದ ಬೆಂಕಿಯನ್ನು ತಾಳ್ಮೆಯಿಂದ ಧಾರಣಮಾಡಿ, ಬಾಳಿನ ಮುಳ್ಳು ದಾರಿಯನ್ನು ಅವು ತುಳಿಯುತ್ತಲಿದ್ದವು. ಭಾಗವ್ವನಿಗೆ ಒಂದಿಷ್ಟು ಪೋಟಗಿ ಬರುತ್ತಿತ್ತು. ಅಲ್ಲದೆ ಅವಳು ಈ ಮನೆಯಲ್ಲಿ ಹಿರಿಯವಳಾಗಿ, ಜಾನಕಿಯು ಕಿರಿವಯಸ್ಸಿನ ಲಾಭಪಡೆದು, ಅಧಿಕಾರ ಸೂತ್ರ ಆಗೀಗ ಚಲಾಯಿಸಿ ಕಳ್ಳಗಂಟನ್ನೂ ಮಾಡಿಕೊಂಡಿದ್ದಳು.

ಅಪ್ಪಣ್ಣಪ್ಪ ಜೀವಂತನಿರುವ ಮಟ್ಟಿಗೂ ರಾಘಂಣನ ಕೈಯಲ್ಲಿ ಅಧಿಕಾರ ಸೂತ್ರ ಬರದೆ, ಅವನು ಯುವರಾಜ ಪಟ್ಟದಲ್ಲಿ ಎಣ್ಣೆಯ ಗುಂಡಿಯಾಗಿಯೇ ಉಳಿಯಬೇಕಾಯಿತು. ಮನೆಯ ಯಜಮಾನ ಅರುವತ್ತರ ಅಂಗಳ ದಾಟಿದ್ದರೂ ಕಾಕದೃಷ್ಟಿ ಬೀರಿ, ಸರ್ವ 'ದೇಖ-ರಖಿ'ಯನ್ನು ಆಲ್‌ಬೇಲಾಗಿ ಮಾಡುತ್ತಿದ್ದ. ಮಗನಿಗೆ ಮನೆ ನಡೆಯಿಸುವ ಶಕ್ತಿ-ಸಾಮರ್ಥ್ಯ ಬರಬೇಕೆಂದು ಮುದುಕ ಬಯಸುತ್ತಿದ್ದರೂ ಆ ಭಾರವನ್ನು ಸಂಪೂರ್ಣವಾಗಿ ಒಪ್ಪಿಸಲು ಅವನಿಗೆ ಎದೆಯಾಗುತ್ತಿದ್ದಿಲ್ಲ. ಅದು ಅವನ ದುರಾಶೆಯಲ್ಲ. ಸಾಯುವವರೆಗೆ ತಾನೇ ಅಧಿಕಾರ ನಡೆಯಿಸಬೇಕೆಂಬ ಹಂಬಲವೂ ಅಲ್ಲ. ಮಗನ ಮುಂಗೋಪಿ ಬುದ್ಧಿಯ ಪರಿಚಯ ಅವನಿಗೆ ಅವಗತವಿತ್ತು. ತಾಯಿ ಸತ್ತ ಮಗನೆಂದು ಅಚ್ಚೆಯಿಂದ ಬೆಳೆದು, ಓದು-ಬರೆಹಕ್ಕೆ ಪೂಜಿ ಎಳೆದು, ಊರಲ್ಲಿ ಉಂಡಾಡಿಯಾಗಿ ಅಂಡಲೆಯುವ ಬೇಜವಾಬ್ದಾರಿ ಮನುಷ್ಯನಿಗೆ ನಾಡಗೌಡಿಕೆಯ ಹಿರಿಯ ವೈಭವ ಹೇಗೆ ಒಪ್ಪಿಸಬೇಕು ? ಅದನ್ನು ನಿರ್ವಹಿಸುವ ತಾಕತ್ತೂ ಅವನಲ್ಲಿ ಇರಲಿಲ್ಲ.

ಒಂದು ಸಲ ರಾಘಣ್ಣನಿಗೆ ಮುದುಕ ಹೇಳಿದ್ದ—ಮಾವಿನ ತೋಪಿನ ಹೊಲ ಹರಗುವದಾಗಿದ್ದರೆ ನೋಡಿಕೊಂಡು ಬಾ, ಎಂದು. ಪಿತೃವಾಕ್ಯಪರಿಪಾಲನಾಶೀಲನಾದ ಮಗ ಕೂಡಲೇ ಏಳು ಗೇಣಿನ ಕುದುರೆಯ ಸವ್ವಾರನಾಗಿ ಹೊಲಕ್ಕೆ ಹೋದ. ಏಪ್ರಿಲ್ ಮೇ ತಿಂಗಳ ರಣರಣ ಬಿಸಿಲು ಬಡಿಯುವ ದಿನದಲ್ಲಿ ಹೊಲದಲ್ಲಿ ಏನು ಮಣ್ಣು ಬೆಳೆಯಿರಬೇಕು ? ರಾಶಿ ಎಂದೋ ಮುಗಿದುಹೋಗಿತ್ತು. ಅಲ್ಲಲ್ಲಿ ಮಿಡಚಿ-ರವದೆ—ನಟ್ಟಿನ ದೊಡ್ಡ ದೊಡ್ಡ ಘಾಲಿ ಅದರ ವಿನಾ ಬೇರೆ ಏನೂ ಇರಲಿಲ್ಲ

ಹೆಸರಿಗೆ ಮಾವಿನ ತೋಪಿನ ಹೊಲವಾದರೂ ನಲವತ್ತು ಎಕರೆಯ ಆ ಭೂಮಿಯಲ್ಲಿ ಒಂದೆರಡು ಕಡು ಬೇವಿನ ಗಿಡದ ವಿನಾ ಬೇರೊಂದು ಕಂಟಿಯೂ ಇರಲಿಲ್ಲ. ಊರಿನ ಕುರುಬ, ನಿಂಗ ತನ್ನ ಕುರಿಮಂದೆಯನ್ನು ಹೊಲದಲ್ಲಿ ಇದ್ದ ಬಿದ್ದ ರವದೆ ಸೇವನೆಗೆ ಬಿಟ್ಟು ತಾನು ಗಿಡದ ತಂಪಿಗೆ ಗೊಂಗಡಿ ಒಗೆದು ಮಲಗಿದ್ದ. ಕುರುಬನ ಈ ಅನಧಿಕೃತ ಅವ್ಯಾಪಾರ ವ್ಯಾಪಾರದಿಂದ ರಾಘಣ್ಣನ ಸಿಟ್ಟು ಕುದಿಯಿತು, ಯಾರ ಹೊಲ ? ಯಾರಪ್ಪಣೆಯಿಂದ ಇವನಿಲ್ಲಿ ಕುರಿ ಬಿಟ್ಟಿದ್ದಾನೆ? ಇಡಿಯ ಕುರಿಮಂದೆಯನ್ನು ಊರ ಕೊಂಡವಾಡೆಗೆ ತಿರುಗಿಸಿಬಿಟ್ಟ. ನೂರಿನ್ನೂರು ಕುರಿ. ಕುರುಬ ನಿಂಗನಿಗೆ ಅದೇ ಜೀವನಾಧಾರ. ಊರಿನ ನಾಡಗೌಡರೇ ಅವನ ಹೊಟ್ಟೆಗೆ ಹೊಡೆದರೆ ಬೇರೆ ಯಾರು ಬದುಕಿಸಬೇಕು ? ನಿಂಗ ಗ್ರಾಮ ಪಂಚಾನನರಲ್ಲಿ ಮೊರೆಯಿಟ್ಟು ಬೇಡಿಕೊಂಡ. ಕರಣಿಕ-ಪೋಲಿಸ ಗೌಡ ಬಂದು ಅಪ್ಪಣ್ಣಪ್ಪನಿಗೆ ಈ ಮಾತು ತಿಳಿಸಿದರು-ಕುರುಬನಿಗೆ ದಂಡಕಟ್ಟಿದರೆ ಕುರುಬರ ಓಣಿಯೇ ಎದ್ದು ಎರಗೀತು, ಊರಿನ ಶಾಂತಿ ಕದಡೀತು, ಬೆಳೆಯಿಲ್ಲದ ಭೂಮಿಯಲ್ಲಿ ಕುರಿಬಿಟ್ಟದ್ದು ತಪ್ಪಲ್ಲವೆಂದು. ಅಪ್ಪಣ್ಣಪ್ಪ ತಿಳಿದವರು. ಮಗನ ಮೂರ್ಖತನಕ್ಕೆ ಮಂಗಳಾರತಿ ಮಾಡಿ ಕುರಿ ಬಿಡಿಸಿದರು. ಅಂದಿನಿಂದ ರಾಘಣ್ಣನಿಗೆ ಅವರು ಕೆಲಸ ಹೇಳುವದು ನಿಂತು ಹೋಯಿತು. ತಂದೆಯ 'ಅಲಗರ್ಜಿ'ತನ ರಾಘಣ್ಣನನ್ನು ಕೊರೆಯಿತು. ಅವನು ಮನೆಯ ಉಸಾಬರಿಗೆ ಬರದೆ-ಊರಿನ ಆಂಜನೇಯ ಸನ್ನಿಧಿಯಲ್ಲಿ ನೆರೆಯುವ 'ಇಸ್ಪೇಟ-ಕೂಟ'ದಲ್ಲಿಯೇ ಹೊತ್ತುಕಳೆಯತೊಡಗಿದ.

೨

ತಂದೆಯ ನಿರ್ಗಮನದ ದಾರಿಕಾಯುತ್ತಿದ್ದ ರಾಘಣ್ಣ ಅವರ ನಿರ್ವಾಣದನಂತರ ಒಮ್ಮೆ ನಾಡಗೌಡಿಕೆಯ ಪಟ್ಟಕ್ಕೆ ಬಂದು ಅಧಿಕಾರ ಪದದ ಛತ್ರ-ಚಾಮರ ಹಿಡಿಸಿಕೊಂಡ. ತಡೆಗಟ್ಟಿ ನಿಂತ ಮಳೆಗಾಲದ ಹೊಳೆಗೆ ಹುಚ್ಚು ರಭಸ ಬಂದು, ಕಾಡು—ನಾಡನ್ನು ದೋಚಿಕೊಂಡು ಹೋಗುವಂತೆ ಇಷ್ಟು ದೀರ್ಘಾವಧಿಯವರೆಗೂ ಅದುಮಿಹಿಡಿದ ಅವನ ಆಶೆ-ಆಕಾಂಕ್ಷೆ, ಸುಖ-ಸಂಭ್ರಮ ಮೇರೆದಪ್ಪಿ ಹರಿಯತೊಡಗಿತು. ಹುಚ್ಚುಹವ್ಯಾಸ, ಹಿಂದೆ ಕಲ್ಪಿಸಿದ-ಕಟ್ಟಿದ ಮನೋರಥವನ್ನು ಸಾಕಾರವಾಗಿ ಮಾಡಿಕೊಳ್ಳಲು ಉದ್ಯುಕ್ತವಾಯಿತು. ಮನೆಯಲ್ಲಿ ಯಾವುದಕ್ಕೂ ದದಾತಿಯಿಲ್ಲ. ತುಂಬಿದ ವೈಭವವಿತ್ತು. ದನ-ಕರ, ಆಳು-ಕಾಳು ಕೈ ಕಾಲಿಗೊಂದರಂತಿತ್ತು. ಮುದುಕ ಮಾಡಿದ ಥಡೆ ಬಂಗಾರದ ಆಸ್ತಿಯಿತ್ತು. ರಾಘಣ್ಣ ಮನೆಯ ಸ್ವರ್ಗಕ್ಕೆ ಕಿಚ್ಚು ಹಚ್ಚಿ ತ್ರಿಶಂಕುಸ್ವರ್ಗ ಸ್ಥಾಪಿಸಿದ.

ಒಂದು ರೀತಿಯಲ್ಲಿ ನೋಡಿದರೆ ಅವನು ಕಿಡಿಗೇಡಿ, ಧೂರ್ತ, ಲಂಪಟ-ಏನೂ ಅಲ್ಲ. ಶುದ್ಧ ಮೊದ್ದು. ಅವನಿಗಿದೆ-ನನಗೇಕೆ ಬೇಡ! ಅವನು ಹೆಚ್ಚು, ನಾನೇತರಲ್ಲಿ

ಕಡಿಮೆ–ಎನ್ನುವ ಹುಚ್ಚು ಹವ್ಯಾಸ ಮಾತ್ರ ಅವನಲ್ಲಿ ಅತೀತವಾಗಿತ್ತು. ಊರ ಗೌಡರ ಮಗ ಮನೆತನದ ರೂಢಿಯಂತೆ ಪಾತರ ಕಾಶಿಯಲ್ಲಿ ಅನುರಕ್ತ. ಆಕೆ ಅವನ ಜೀವನ ಸಖಿ. ಅವಳ ತಾಯಿ–ಹಿರಿಯ ಗೌಡನ ಗೆಣತಿ! ಜಾಗೀರಿ ಇರುವಂತೆ–ಈ ತಂದೆ—ಮಗನ—ಮೊಮ್ಮಗನ ಪರಂಪರೆಯಲ್ಲಿ—ಪಾತರದವರ ವಂಶಪರಂಪರೆಯೂ ಸಮಾಂತರವಾಗಿ ಜೀವನ ಮಾಡಿಕೊಂಡು ಬರಬೇಕು. ಆ ಕಾಶಿಯಲ್ಲಿ ರಾಘಣ್ಣನ ಪ್ರೀತಿ ಏಕೋ ಅಂಕುರಿಸಿ, ಅವಳ ಸಹವಾಸ ಬಯಸಿತು. ಮನೆಯಲ್ಲಿ ಇವನ ಕೂಡ ೧೦–೧೫ ವರುಷದ ಬಾಳುವೆ ಸಾಗಿಸಿ, ನಾಲ್ಕು ಮಕ್ಕಳ ತಾಯಿಯಾದ ಜಾನಕಿ ಜೀವಂತವಿದ್ದರೂ ರಾಘಣ್ಣನಿಗೆ ಹೊರಗಿನ ಈ ರುಚಿಯನ್ನೂ ನೋಡುವ ತಲಬು ತಲೆದೋರಿತು. ಕಾಶಿ, ತಾನು ನೆಚ್ಚಿಕೊಂಡ ಕಿರಿಯ ಗೌಡನನ್ನು ಬಿಡುವ ವಿಚಾರ ಮಾಡಲಿಲ್ಲ. ರಾಘಣ್ಣನಿಗೆ ಇದು ಊರಿನಮಾಲು ಸಾರ್ವಜನಿಕ ಸೊತ್ತು, ಗೌಡನಿಗೇ ಏಕೆ ಮೀಸಲು? ತಾನು ಗೌಡನಿಗಿಂತ ಯಾತರಲ್ಲಿ ಕಡಿಮೆ? ಅವನನ್ನು ಲಿಲಾವು ಮಾಡಿಸುವ ತ್ರಾಣ ತನ್ನಲ್ಲಿರುವಾಗ ಕಾಶಿ ಅವನನ್ನೇ ಯಾಕೆ ನಂಬಿಕೊಂಡಿರಬೇಕು? ಅವಳಿಗೆ ಮಧ್ಯಸ್ಥರಿಂದ ಹೇಳಿಸಿದ. 'ಉಂಡಮನೆಯ ಅನ್ನಕ್ಕೆ ಎರಡು ಬಗೆಯಲಾರೆ. ವೃತ್ತಿಯಿಂದ ತನ್ನ ಯೋಗ್ಯತೆಯನ್ನು ಅಳೆಯಬಾರದು. ಧರ್ಮ ದೊಡ್ಡದು' ಎಂದು ಕಾಶಿ ಹೇಳಿಕಳಿಸಿದಳು. ಅವಳೂ ಹುಲಿಯ ಹಾಲನ್ನು ಮೆದ್ದವಳು. ಗೌಡ–ಊರ ಹಿರಿಯ–ಮಹಾರಥಿಯಂತೆ ತನಗೆ ಆಧಾರವಾಗಿರುವಾಗ ಅಳ್ಳಿಟ್ಟಿನ ಹಾರುವನಿಗೆ ಬೆದರುವಳೇ ಆಕೆ? ರಾಘಣ್ಣನ ಅಭಿಮಾನ ಮುಕ್ಕಾಗುವ ವೇಳೆ ಬಂದಿತು. ಅವನೂ ರೋಸಿಹೋಗಿ, ಪಟ್ಟಣದಿಂದ ಒಂದು ಕಾಯಂ ಗಿರಾಕಿಯನ್ನೇ ಹಿಡಿದು ತಂದ. ಕಾಶಿಯ ಮುಖದಮೇಲೆ ಹೊಡೆಯುವಂತೆ—ಅವಳ ಮನೆ ಎದುರಿನ 'ದುಮ್ಮಾಜಲೀ ಇಮಲಾ' ಒಂದನ್ನು ಖರೀದಿಗೆ ತೆಗೆದುಕೊಂಡು, ಅಲ್ಲಿ ತನ್ನ ಅರಗಿಳಿಯನ್ನು ಇರಿಸಿ, ಮೀಸೆಯನ್ನು ಹುರಿಮಾಡಿದ. ಎದುರು–ಬದುರು ಮನೆಗಳಲ್ಲಿ ಕಾಶಿ, ರಾಘಣ್ಣನ ಗಿರಾಕಿ ತಾರಾ ಸ್ಪರ್ಧೆಗೆ ನಿಂತಂತೆ ನಿಂತರು. ಊರೆಗೆ ಊರೇ ಈ ಹುಂಜು ಕಾಳೆಗದ ಮೋಜು ನೋಡುತ್ತಿತ್ತು.

ರಾಘಣ್ಣನ ಸರ್ವ ವೇಳೆ ತಾರಾ ನಿವಾಸದಲ್ಲಿಯೇ ಕಳೆಯುತ್ತಿತ್ತು. ತ್ರಿಸುಪರ್ಣದ ಆಟ, ಚಾ-ಪುರಿಯ ಫಳಾರ ಬೆಳಗಿನಿಂದ ಸಂಜೆಯವರೆಗೆ ಅಖಂಡವಾಗಿ ಸಾಗುತ್ತಿತ್ತು. ಹುಣ್ಣಿಮೆಯ ದಿನ ಬಿಸಿಲು ಮಚ್ಚಿಗೆಯ ಮೇಲೆ ಶ್ರೀಖಂಡ-ಪುರಿಯ ಮೇಜವಾನಿ, ತಾರಾಮತಿಯ ಕೋಕಿಲ ಕಂಠದ ಗಾಯನ! ಇಸ್ಪೇಟಿನ ಅಡ್ಡೆ ಬಿದ್ದರೆ ಹಗಲಿರುಳಿನ ಅಂತರ ತಿಳಿಯುತ್ತಿರಲಿಲ್ಲ. ತಾರಾಮತಿ ಈ ಯಜುದಲ್ಲಿ ಪುಣ್ಯಭಾಗಿಯಾಗದಿದ್ದರೂ ತಾಂಬೂಲ–ಪೇಯಗಳ ಸರಬರಾಯಿ ಮಾಡಿ, ಆಟಕ್ಕೆ ರಂಗು ತರುತ್ತಿದ್ದಳು. ತಾರಾಮತಿಯ ತಾಯಿ ೫೦-೫೫ ವರುಷದ ಗಂಗಾ ಇಂಥ ಕಲೆಯಲ್ಲಿ ಪಳಗಿದ ಹೆಣ್ಣು. ಮಗಳಿಗೆ ದಾರಿ ದೀಪವಾಗಿ, ರಾಘಣ್ಣನ

ಕುಬೇರ ಸಂಪತ್ತು ಸರಾಗವಾಗಿ ಹರಿದು ಬಂದು ತನ್ನ ಮಹಲಿನಲ್ಲಿ ವಿಲೀನವಾಗು ವಂತೆ ಮಗಳಿಗೆ ಕಾವಲಿ ತೋಡುವ ಕಲೆಯಲ್ಲಿ ನೆರವಾಗುತ್ತಿದ್ದಳು. ಕಾಶಿಗಿಂತ ತಾರಾಮತಿ ಬೆಡಗಿನಲ್ಲಿ, ಚೆಲುವಿನಲ್ಲಿ, ಗಂಡು ಮೀನವನ್ನು ಬಲೆಗೆಳೆಯುವ ಕಲೆ ಯಲ್ಲಿ ನುರಿತ ಧೀವರೆ. ತಾಯಿಯ ಗರಡಿಯಲ್ಲಿ ಅಖಂಡ ಸಾಧನೆ ಮಾಡಿದ ಸತ್ ಪುತ್ರಿ. ರಾಘಣ್ಣನ ಸವಿ-ರುಚಿ, ಬೇಕು-ಬೇಡುಗಳನ್ನು ಅರಿತು ಆದರಂತೆ ಎಲ್ಲ ವನ್ನೂ ಅಣಿಯಾಗಿಸಿ ಅವನ ಈಪ್ಸಿತ ಪೂರ್ತಿ ಮಾಡಿ ಸನ್ಮಾನಿತೆಯಾಗುತ್ತಿದ್ದಳು. ಏನಾದರೂ 'ಶಾರಿ'ನ ಗಾಳಿ ನೀರು ಕುಡಿದು ಬೆಳೆದು ಬಾಳಿದ ಹೆಣ್ಣು ಆಕೆ. ಕಾಶಿ ಇವಳ ಮುಂದೆ ಯಾವ ಗಿಡದ ತೊಪ್ಪಲು ?

ತ್ರಿಶುಪರ್ಣದ ರಾಜ್ಯದಲ್ಲಿ ರಾಘಣ್ಣನಿಗೆ ಮನೆ-ಮಾರಿನ ಮರೆವಾಯಿತು. ಆಟ ಮುಗಿಸಿ, ಇವನನ್ನು ಸುಲಿದು ಸೂರೆಗೊಂಡು, ಆಟಗಾರರ ಮೇಳ ಹೊರಬಿದ್ದು ಮನೆಯ ದಾರಿಯನ್ನು ಹಿಡಿದಿತೆಂದರೆ-ತಾರಾ ಒಯ್ಯಾರದಿಂದ ಬಾಗಿ ಬಳುಕಿ ರಾಘಣ್ಣನ ಕೊರಳ ಸುತ್ತಲೂ ತನ್ನ ಕರಮಾಲೆ ಹೆಣೆದು ನೇತ್ರ ಪಲ್ಲವಿ-ಕರಪಲ್ಲ ವಿಯ ಸೂತ್ರವಾಡಿಸಿ, ಹುಸಿ ಮುನಿಸಿನ-ನಸುನಗೆಯ ಪುಂಗಿಯೂದಿ, ಬೇಟೆಯನ್ನು ಬಲೆಗೆ ಬೀಳಿಸಿ, ತಾಂಬೂಲ ಸಮರ್ಪಣ ಮಾಡುತ್ತಿರುವಾಗಲೇ ಗೃಧ್ರಗಂಗೆಯ ಅವ ತರಣವಾಗಿ ತಾರೆಯ ಆಶೆ ಆಕಾಂಕ್ಷೆಯ ಬಯಕೆ-ಬೇಡಿಕೆಯ ವಿಸ್ತೃತ ಪುರಾಣ ಪಠಣವಾಗುತ್ತಿತ್ತು. 'ಸೊಟ್ಟ ಗೌಡನ ಕಾಶಿಗೆ ವಂಕಿ ಸರಿಗೆಯ ಸಿಂಗಾರವಿರು ವಾಗ, ಬಂಗಾರ ಡಾಬಿನ ಭಾಗ್ಯವಿರುವಾಗ ತನ್ನ ಕೂಸು-ರಾಘಂಣನಂಥ ಕುಬೇರನ ಆಶ್ರಿತೆಯಾದರೂ ಭಿಕಾರಿಯಂತೆ ಇರಬೇಕಾಗಿದೆ ಇಲ್ಲಿ ಬರದೆ ಶಾರದೂರಿನಲ್ಲಿಯೇ ಅಂಗಡಿ ಹೂಡಿದ್ದರೆ—ದುಮ್ಮಜಲೀ ಇಮಲಾ ಕಟ್ಟಿಸಿ, ಮೋಟಾರ ಕೂಡ ಮಗಳು ಇಡಬಹುದಾಗಿತ್ತು. ಇಲ್ಲಿ ಬಂದು ಏನು ಸೌಭಾಗ್ಯ ಕಾಣುವಂತಾಯಿತು' ಇತ್ಯಾದಿ ಇತ್ಯಾದಿ! ಇದು ನಿತ್ಯದ ಹಾಡು. ನಾಳೆ ಸೂರ್ಯಾಸ್ತದೊಳಗಾಗಿ ನಿನ್ನ ಆಶೆ ಪೂರೈಸುತ್ತೇನೆಂದು ರಾಘಣ್ಣ ಕರ್ಣ-ಭೀಷ್ಮರ ವಾಣಿಯಲ್ಲಿ ಅಭಯ ನೀಡಿದನಂತರ ಅವನಿಗೆ ಬಿಡುಗಡೆ; ಈ ಸಿಂಹ-ಶಾರ್ದೂಲದ ಗಹ್ವರದಿಂದ ಹೊರಬಿದ್ದು ಬರಬೇಕಾ ದರೆ ಅವನಿಗೆ ರಾತ್ರಿಯ ೧೧ ಗಂಟೆ. ಮನೆಗೆ ಬಂದು ಉಂಡು ಅಡ್ಡಾಗಬೇಕಾದರೆ ನಡುರಾತ್ರಿ ಮೀರಿ ಹೋಗುತ್ತಿತ್ತು.

ಒಂದೆರಡು ವರುಷ ಅವನ ಈ ಹೊರಚಟ ಯಾರಿಗೂ ಚಿಟುಕು ಮುಳ್ಳೆನಿಸ ಲಿಲ್ಲ. ನಾಲ್ಕೇ ಬಾಣಂತಿತನದ ಬವಣೆ ಅನುಭವಿಸಿದ ಜಾನಕಿಗೆ ಆ ಘೋರ ದಿವ್ಯ ಮತ್ತೆ ಬೇಡವೆನಿಸಿತ್ತು. ಗಂಡ ಹತ್ತಿರ ಸುಳಿಯುತ್ತಿಲ್ಲ; ಅಷ್ಟೇ ಸುಖವೆಂದು ತೆಪ್ಪ ಗಿದ್ದಳು. ತನ್ನ ಮೈಮೇಲಿನ ವಸ್ತು-ಒಡವೆ ಮಾಯವಾಗುವಾಗ ಒಂದೆರಡು ಸಲ ಎದುರುನುಡಿದು ಪ್ರಸಾದ ಗ್ರಹಿಸಿಯೂ ಇದ್ದಳು. ಗಂಡನ ಅಂದಾದುಂದಿಯ ಕಡೆಗೆ

ಕುರುಡುಗಣ್ಣು ಮಾಡಿ ಕುಳಿತಿದ್ದಳು. ಅಲ್ಲದೆ ಮನೆಮಾರಿನ ಚಿಂತೆ ತೊರೆದ ಗಂಡು ಅತ್ತ ಕಡೆಗೆ ಕಂಣೆತ್ತಿ ನೋಡದಾಗ ಹೊಲ ಮನೆಯ ಭಾರ ತನ್ನ ಮೇಲೆಯೇ ಬಿದ್ದು, ಅನಪೇಕ್ಷಿತ ಅಧಿಕಾರಸೂತ್ರ ಕೈಗೆ ಬಂದು, ಅಕಲ್ಪಿತ ಸುಖ ಕಣ್ಣು ತೆರೆದ ಮದವೂ ಅವಳಿಗೇರಿತ್ತು. ಹರವಿಯ ಪಲ್ಯ, ಹಳೆಜೋಳದ ನುಚ್ಚುಂಡು, ಅಪ್ಪಣ್ಣಪ್ಪನ ಕಾಲಮಾನದಲ್ಲಿ ದಿನಗಳೆದ ಅವಳಿಗೆ ಈಗ 'ಶಿರಾ-ಪುರಿ'ಯ ವ್ಯಾಧಿ ಬಾಧಿಸಿತ್ತು. ಭಾಗವ್ವನ ಸಹಕಾರ–ಪ್ರಚೋದನೆಯಿಂದ ನಾಡಗೌಡಿತಿ ಇರಬೇಕಾದ ರೀತಿಯಲ್ಲಿ ಬಾಳುವ ಸಾಹಸ ಪಡುತ್ತಿದ್ದಳು. ಸಣ್ಣಕ್ಕಿಯ ಅನ್ನ, ಕೇಸರಿಯ ಹಾಲು, ಹಿಡಿದರೆ ತುಪ್ಪ ತೊಟ್ಟಿಕ್ಕುವ ಶಿರಾ ಇಲ್ಲದ ದಿನವಿಲ್ಲದಾಗಿತ್ತು, ರಾಘಣ್ಣನ ಮನೆಯಲ್ಲಿ. ಹೀಗೆ ಈ ಮನೆಯ ಒಳಗೆ, ಹೊರಗೆ ಭಾಗ್ಯಲಕ್ಷ್ಮಿಯ ಹಗಲು ದರೋಡೆ ನಡೆದರೂ ಲಕ್ಷ್ಮಿ ನಿರ್ವಾಹವಿಲ್ಲದೆ ಇನ್ನೂ ಸ್ಥಾವರ ಆಸ್ತಿಯಲ್ಲಿ ಟುಕುಟುಕು ಹಿಡಿದುಕೊಂಡು ಸೆರೆಯಾಗಿದ್ದಳು.

ನಾಡಗೌಡರಿಗೆ ತಲೆತಲಾಂತರದಿಂದ ಬಂದ ಇನಾಮೀ ಜಮೀನು. ಮಾರಲು ಬರುವಂತಿಲ್ಲ. ಒತ್ತೆ ಹಾಕುವದೊಂದೇ ಗತಿ! ಅಡುವಿವ ಅಂತರಾಳದಲ್ಲಿಯೇ ಕೊಳೆಯಬೇಕು. ಅಡವಿಟ್ಟ ವ್ಯಕ್ತಿ ಸತ್ತನೆಂದರೆ, ಅಡವಿನ ಮೇಲಿನ ತಾರಣ ತಾನೇ ತಾನಾಗಿ ಮಾಯವಾಗಿಬಿಡುತ್ತದೆ. ಸಾಲ ಕೊಟ್ಟ ಧನಕ್ಕೋ ಎಷ್ಟು ದಿನ ಹೊಲದ ಫಲ ಉಂಡನೋ ಅಷ್ಟೇ 'ಶಿವಾ' ಎಂದು ಸುಮ್ಮನಿರಬೇಕು. ಅದರಿಂದಾಗಿ-ದೇಸಾಯಿ-ದೇಶಪಾಂಡೆ-ಜಾಗೀರಿ ವತನದಾರರ ಮನೆಯ ವಾಸ್ತವ್ಯವೆಂದರೆ ಲಕ್ಷ್ಮಿಗೆ ಆಜನ್ಮ 'ಕಾಳಾಪಾಣೀ' ಇದ್ದಂತೆ!

೩

ತಾರಾಮತಿಯ ಸಾಜಶೃಂಗಾರಕ್ಕೆ ಒಂದು ಗುಂಜಿತೂಕದ ಬಂಗಾರವನ್ನೂ ಬಿಡದೆ ರಾಘಣ್ಣ ಮನೆಯನ್ನು ಬರಿದು ಮಾಡಿದ. ಶ್ರಾವಣದ ಗೌರಿಯಂತೆ ಅಲಂಕೃತೆಯಾಗುತ್ತಿದ್ದ ಜಾನಕಿ ಈಗ ತಾಳಿಯಲ್ಲಿ ಇದ್ದಷ್ಟು ಬಂಗಾರದ ಮೇಲೆ ಸಮಾಧಾನ ಪಡಬೇಕಾಗಿದೆ. ಮದುವೆಯಲ್ಲಿ ಮಾವ ಉಡಿಸಿದ ತೆನೆ ತಿರುವಿದ ಪೀತಾಂಬರವೂ ತಾರೆಯ ಪೆಟ್ಟಿಗೆಯನ್ನು ಸೇರಿತ್ತು. ಕೈಯಲ್ಲೆರಡು ಗಾಜಿನ ಬಳೆ-ಕೊರಳಲ್ಲೊಂದು ತಾಳಿ-ಹರಿದ ಸೀರೆಗೆ ಹೊಲಿಗೆಯ ಬಂಧನ ಹಾಕಿ-ಮೈ ಮುಚ್ಚಲೆರಡು ಸೀರೆ–ಇಲ್ಲಿಗೆ ಬಂದು ನಿಂತಿತು ಅವಳ ಸ್ಥಿತಿ! ಅವಳೂ ಇದ್ದಾಗ ಸುಖಸಲಿಲದಲ್ಲಿ ಮಿಂದೆದ್ದಿದ್ದಳು. ಈಗ ಆಡಿದರೆ ತನಗೇ ಮಾತು ತಿರುಗೀತೆಂದು ಸುಮ್ಮನಿದ್ದಳು. ಭಾಗವ್ವ, ಅತ್ತೆಯ ಮನೆಯ ಪರಲು ಹರಿದುಕೊಂಡು ಬರುವಾಗ ತಂದ ಅಷ್ಟಿಷ್ಟು ವಸ್ತು ಒಡವೆಯನ್ನು ಜೋಪಾನವಾಗಿ ಕೃಷ್ಣಾಜಿನದ ಪೆಟ್ಟಿಗೆಯಲ್ಲಿರಿಸಿ, ದೊಡ್ಡ ದೇವರ ಬಳಿಯಲ್ಲಿ ದೇವರ

ಮನೆಯಲ್ಲಿ ಇರಿಸಿದ್ದಳು. ವೈಷ್ಣವರ ಮನೆಯ ದೇವರ ಕೋಣೆಯೆಂದರೆ Safe deposit Vault ಇದ್ದಂತೆ ! ಅಲ್ಲಿಗೆ ಸಾರಿ ಕೈಹಚ್ಚುವ ಧೈರ್ಯ ಸಾಕ್ಷಾತ್ ಶ್ರೀಪತಿಗೂ ಅಸಾಧ್ಯ. ರಾಘಣ್ಣನ ಆಶೆಗಣ್ಣಿಗೆ ಈ ಗುಪ್ತ ಧನ ಬಿದ್ದಿರಲಿಲ್ಲ. ಭಾಗವ್ವ ಕೃಷ್ಣಸರ್ಪದಂತೆ ಅದನ್ನು ಕಾಯುತ್ತಿದ್ದಳು. ಎಲ್ಲರಿಗೂ ಆ ಗಂಟಿನ ಗುರುತು ಅರಿವಿದ್ದರೂ ಅದರ ಬಗ್ಗೆ ಚಕಾರ ಶಬ್ದವೆತ್ತಿ ಭಾಗವ್ವನ ಫಣಾ ಪ್ರಹಾರ ತಾಳುವ ಎದೆ ಯಾರಿಗೂ ಇರಲಿಲ್ಲ.

ಈ ಮನೆಯಲ್ಲಿ ಅಗತಿಕ ದುರ್ದೈವಿ ಜೀವನವೆಂದರೆ ರಿಂದಕ್ಕನದೊಂದೇ ! ಆಕೆ ಮಂಗಳಸೂತ್ರದೊಂದಿಗೆ ತನ್ನ ಪಾಲಿನ ಆಸ್ತಿಯನ್ನೂ ಗಂಗಾರ್ಪಣವಾಡಿ ಬಂದಾಕೆ. ತೌರಿಗೆ ತಲೆಭಾರವಾಗಿ ಬಾಳುತ್ತಿದ್ದ ಜೀವನ ಈ ಮನೆಯಲ್ಲಿ ಅದೊಂದೇ ! ತನ್ನ ದುರ್ದೈವ ನ್ಯೂನತೆಯನ್ನು ಅರಿತುಕೊಂಡು ಅವಳು ಯಾರ ಕಾಲಕಸವಾದರೂ ಸರಿ, ಅನ್ನಋಣದ ಮುಕ್ತಿಗಾಗಿ ದುಡಿದು ದೇಹ ಸವೆಸುತ್ತಿದ್ದಳು. ವ್ಯಾಘ್ರ ಜೀವಿಗಳಾದ ಅಕ್ಕ-ಅತ್ತಿಗೆಯರ ಮಾತು-ನಿಂದೆಯ ಶಲ್ಯಕ್ಕೆ ತಲೆಕೊಟ್ಟು ಸಾಗುತ್ತಿದ್ದಳು. ಈ ಮನೆಯ ದುಂದುಗಾರಿಕೆಯಲ್ಲಿ ಎಂದೂ ಭಾಗಿಯಾಗದ ನಿರ್ಭಾಗ್ಯೆ ಅವಳೊಬ್ಬಳೇ.

ಮನೆಯಲ್ಲಿಯ ಕಸ-ಮುಸುರೆ, ಹಿಟ್ಟು-ನುಚ್ಚು, ದನಕರದ ಆರೈಕೆ, ಹಾಲು. ಹೈನ ಎಂದಿನಿಂದಲೂ ರಿಂದಕ್ಕನ ಪಾಲಿಗೇ ! ಅವಳು ಇದನ್ನೆಲ್ಲ ಮುಗಿಸಿ ಒಂದು ತುತ್ತು ಅನ್ನ ಉಂಡು ಏಳಬೇಕಾದರೆ ಮಧ್ಯಾಹ್ನದ ಮೂರು ಗಂಟೆಯಾಗುತ್ತಿತ್ತು. ಒಂದೇ ಹೊತ್ತು ಉಂಡ ಊಟ ಕುಡಿದ ನೀರು ಮರುದಿನ ಮತ್ತೆ ಅಷ್ಟುಹೊತ್ತಿನ ವರೆಗೆ ಜೀವನಾಧಾರ. ಇಷ್ಟು ಮಾಡಿದರೂ ಉಳಿದವರ ಅಂದಾದುಂದಿಯಲ್ಲಿ ಭಾಗಿ ಯಲ್ಲವೆಂಬ ಆರೋಪ, ಬೇಡಿ ಬರದ ಅಭಾಗಿಯೆಂಬ ಅವಹೇಳನೆ ಅವಳಿಗೆ ತಪ್ಪು ತ್ತಿದ್ದಿಲ್ಲ. ಅಕ್ಕಬಿಟ್ಟ ಸೀರೆ, ಅಂಣ ಬಿಟ್ಟ ಧೋತರ, ಅಷ್ಟೇ ಅವಳ ಮೈಮುಚ್ಚಲು ಆಧಾರ. ಗಂಡನ ಸೌಭಾಗ್ಯ, ಅತ್ತೆಯ ಮನೆಯ ಆಶ್ರಯಕ್ಕೆ ಹೊರತಾಗಿ ತೌರಿ ನಲ್ಲಿ ತಂದೆಯನಂತರ ಅಂಣನ ನೆರಳಿಗೆ ನಿಲ್ಲಬೇಕಾದ ಗತಿ ಅವಳಿಗೆ ಬಂದರೂ ಅಂದು ಇಲ್ಲಿ ಬಂದಾಗ ಇದ್ದ ರೀತಿ, ಇಂದಿಗೂ ಹಾಗೇ ಇದೆ. ದೇವರಿಗೇ ತನ್ನ ಸುಖ ಬೇಡವೆನ್ನಿಸಿ ಕಿತ್ತುಕೊಂಡಾಗ ತಾನತ್ತು ಸಂಕಟಪಟ್ಟರೆ ಏನು ಬಂತು ? ತನ್ನ ಹಣೆಯಲ್ಲಿ ಯಾವ ಸುಖವನ್ನೂ ಅವನು ಬರೆಯಲಿಲ್ಲ. ಈಗ ತಾನೇನು ಅದನ್ನು ಗೀಚಿಕೊಳ್ಳಬೇಕಾಗಿದೆ ? ಇಲ್ಲಿಯ ತುತ್ತು ಕವಳದಿಂದ ಪಿಂಡ ಪೋಷಿತವಾಗುತ್ತಿದೆ. ಅದರ ಋಣ ತೀರಿಸಿದರೆ ಸಾಕು, ಮುಕ್ತಿಯಾದಂತೆ—ಎಂಬ ನಿವೃತ್ತಿ ಜೀವನ ನಡೆ ಸಿದ್ದಳು. ಅವಳ ನಿರ್ಗತಿಕ-ಅನಾಥ ಬಾಳಿಗೆ ನೊಂದ ಅಪ್ಪಣ್ಣಪ್ಪ ಸಾಯುವಾಗ ಮಗನಿಂದ ಕೊನೆಯವರೆಗೂ ಆಕೆಯನ್ನು ಸಂಬಾಳಿಸುತ್ತೇನೆಂದು ವಚನ ತೆಗೆದು ಕೊಂಡು ಸತ್ತಿದ್ದ. ರಿಂದಕ್ಕನನ್ನು ಪೋಷಿಸುವ ಭಾರ ತನ್ನ ಮೇಲೆ. ಅದಕ್ಕೆ ತಪ್ಪ

ಲಾರನೆಂದು ರಾಘಣ್ಣ ಹೇಳಿ ನೀರು ಬಿಟ್ಟೊಡನೆ ಅಣ್ಣಪ್ಪನಿಗೆ ಕಾಕಪಿಂಡವಾಯಿತು. ಆ ಮಾತು ಕೊಟ್ಟ ಋಣ ರಿಂದಕ್ಕನನ್ನು ಈ ಮನೆಯಲ್ಲಿ ಜೀತಕ್ಕಿರಿಸಿಕೊಂಡು ಟುಕಾಟುಕು ಜೀವ ಹಿಡಿಯುವಷ್ಟುಗೆ ಅನ್ನದಾನ ಮಾಡುತ್ತಿತ್ತು.

ಉಳಿದವರಂತೆ ರಿಂದವ್ವನಾದರೂ ಹಾಲು ತುಪ್ಪದಲ್ಲಿ ಕೈ ಅದ್ದಿ ಸುರಿದಿದ್ದರೆ ರಾಘಣ್ಣನೇನೂ ಬೇಡವೆನ್ನುತ್ತಿರಲಿಲ್ಲ. ಪ್ರತಿಯಾಗಿ ಅವಳ ಸನ್ಯಸ್ತ ಜೀವನದಿಂದ ಅದೆಷ್ಟೋಸಲ ಅವನು ಕಿಡಿ ಕಿಡಿಯಾಗಿದ್ದಾನೆ. ಒದ್ದೆಯ ಅಂವೆಯನ್ನು ಅಡ್ಡ ಹಚ್ಚಿಕೊಂಡು ಸೀನೀರಿನ ಬಾವಿಯಿಂದ ಅವಳು ಕೊಡ ಹೊತ್ತುಕೊಂಡು ಬಂದಾಗ ನಾಡಗೌಡರ 'ಘರಾಣೇಕ್ಕ ಬಟ್ಟಾ' ತಂದೆ ಎಂದು ಕೂಗಿಕೊಂಡ! ಊರಿನ ನಾಕು ಜನದ ಮುಂದೆ ತನ್ನ ಮಾನವನ್ನು ಮುಕ್ಕಾಗಿಸಿದೆಯೆಂದು ರೋಸಿಕೊಂಡ! ಅವಳ ಹರಕು ವಸನದ ವೈಭವ ನೋಡದೆ ಒಮ್ಮೆ ಕೆಂಪು ಅಲವಾನ ತಂದಾಗ 'ಯಾವ ಸೌಭಾಗ್ಯಕ್ಕೆ ಇದನ್ನು ತಂದೆ, ರಾಘಣ್ಣಾ? ಅವರ ಕೂಡೇ ನನ್ನ ಸುಖ-ಸಮಾಧಾನ ಅಳಿದು ಹೋಗಿದೆ. ಇನ್ನು ಯಾವ ಮುಖದಿಂದ ಈ ವಸ್ತ್ರ ಉಟ್ಟು ಮೆರೆಯಲಿ?' ಎಂದು ಅವಳು ನುಡಿದಾಗ, ಕರಳು ಕಿವುಚಿದರೂ ಬಾಯಿಂದ ಆಡದೆ-'ಮುಕಾಟ್ಲೆ ಉಟಕೋ. ಮನೀ ಮಾನಾ ಮರ್ಯಾದಿ ಅನ್ನೋದೊಂದಿಷ್ಟು ಉಳಿಸು' ಎಂದು ರೇಗಿ ಹೇಳಿದ್ದ. ಅಣ್ಣನ ಮಾತಿಗೆ ತಂಗಿ ಎರಡು ನುಡಿಯದೆ, ಅನ್ನದ ಋಣ ತೀರಿಸುವ ನಿರ್ವ್ಯಾಜ ಬಯಕೆಯಿಂದ ಎಲ್ಲ ಮಾತನ್ನೂ ಶಿರಸಾ ಮಾನ್ಯಮಾಡಿ, ಆ ಮನೆಯಲ್ಲಿ ಕೊನೆಯ ಗಳಿಗೆಯನ್ನು ಎಣಿಸುತ್ತ ದಿನ ಹಾಕುತ್ತಿದ್ದಳು.

೬

ರಾಘಣ್ಣನ ಕೈಯಲ್ಲಿ ಕಾಸು ಕುಣಿಯುವವರೆಗೂ ಅವನು ಮಾಡಿದ್ದೆಲ್ಲ ಒಪ್ಪಾಗಿ ಕಾಣುತ್ತಿತ್ತು. ಊರಲ್ಲಿ ನೂರು ಬಾಯಿ ನಾನಾ ರೀತಿಯಾಗಿ ಮೊರೆಯುತ್ತಿದ್ದರೂ ನಾಲಗೆಯ ಚಾಪಲ್ಯ ತೋರಿಸುತ್ತಿದ್ದರೂ ಅವನೆದುರು 'ಬ್ರ'ಎನ್ನುವ ಎದೆ ಮಾಡುತ್ತಿರಲಿಲ್ಲ. ರಾಘಣ್ಣನ ಎಲ್ಲ ಸ್ಥಾವರ ಮಿಳಕತ್ತು ಈಗಾಗಲೇ ಬೆಳಗಾವಿ ಸಾವುಕಾರರಲ್ಲಿ ಒತ್ತೆ ಬಿದ್ದಿತ್ತು. ಬಡ್ಡಿಯನ್ನೂ ತೆರುವುದಾಗುವದಿಲ್ಲವೆಂದು ಹೊಲ ಉಣ್ಣಲು ಅವರಿಗೇ ಬಿಟ್ಟಿದ್ದ. ಇದ್ದ ಮನೆಯೂ ಅವರಿಗೇ ಅಡುವಾಗಿತ್ತು. ಸಾಲದ ವಾಯಿದೆ ಮುಗಿದು ಮನೆ ಇನ್ನೇನು ಅವರ ಗಂಟಲಲ್ಲಿ ಅನಾಯಾಸವಾಗಿ ಇಳಿದು ಬಿಡುತ್ತದೆ. ರಾಘಣ್ಣನಿಗೆ ನಂತರ ಗಿಡದಡಿಗೆ ಅಸುವನ್ನು ನೀಗುವ ಪ್ರಸಂಗ ಬರುವದರಲ್ಲಿ ಸಂದೇಹವಿಲ್ಲವೆಂದು ಜನ ನುಡಿಯುತ್ತಿತ್ತು. ಮನೆಯಲ್ಲಿಯ ಹೆಂಣು ಪಾಳ್ಯದ ತಿನಿಸು, ಸುಖಲೋಲುಪತೆಯ ಮದ ಇದೀಗ ಏನೂ ಇಲ್ಲದ್ದರಿಂದ ಇಳಿಮುಖವಾಗಿ ಅವಕ್ಕೆ ತಮ್ಮ ಪರಿಸ್ಥಿತಿಯ ಅಲ್ಪಪರಿಚಯವಾಗ ತೊಡಗಿತ್ತು. ಜಾನಕಿ ಸಂತಾನ ನಿಯಂತ್ರಣ ಮಾಡಬೇಕೆಂದು ಹಾಕಿದ್ದ ಬೇತು

ಮೂಲೆಗುಂಪಾಗಿ ಕೈ, ಕಣ್ಣು ತಪ್ಪಿ ಅವಳಿಗೆ ಐದನೆಯ ಬಾಣಂತಿತನ ಇದೀಗ ಪ್ರಾಪ್ತವಾಗಿತ್ತು. ಅವಳು ಹಡೆದ ಕೂಸು ಒಳ್ಳೇ ನಕ್ಷತ್ರದಲ್ಲಿ ಅವತರಿಸಿರಲಿಲ್ಲ ವಂತೆ ! ಶಾಂತಿಯಾಗಬೇಕು. ಶಾಂತಿಯನ್ನು ಯಾರು ಮಾಡಬೇಕು ? ಏತರಿಂದ ಮಾಡುವದು ? ಕುಬೇರನ ಸಂಪತ್ತನ್ನು ಗಳಿಸಿ, ಈ ಮನೆಗೆ ಹೊನ್ನ ಕಲಶವಿಟ್ಟ ಅಪ್ಪಣ್ಣಪ್ಪನ ಶ್ರಾದ್ಧವೇ ಕೈಗಡದ ಸೀದಾದಮೇಲೆ ನಡೆದಾಗ ಇದೀಗ ಕಣ್ಣು ತೆರೆದ ಕುನ್ನಿಯ ಶಾಂತಿಯನ್ನು ಮಾಡಿ, ಅರಿಷ್ಟವನ್ನು ಹೇಗೆ ನೀಗಿಸಿಕೊಳ್ಳಬೇಕು? ಜಾನಕಿ ಇಪ್ಪತ್ತು ದಿನದ ಹಸೀ ಬಾಣಂತಿ ! ಮನೆಯಲ್ಲಿ ರಾಮರಕ್ಷ ! ಕಟ್ಟನೆ ಕಡಿದೇನೆಂದರೆ ಒಂದು ಕಾಳು ಜೋಳವಿಲ್ಲ. ಇದ್ದ 5-6 ಚೀಲ ಹೋದ ತಿಂಗಳವೇ ಇಸ್ಪೇಟಿನ ಆಟಕ್ಕೆ ಹಣದ ಬದಲಿಗೆ ಹಚ್ಚಿ ಕಳೆದುಕೊಂಡದ್ದಾಗಿತ್ತು. ಮೊನ್ನೆಯಂತೂ—ರಾಘಣ್ಣ—ಹೈನದ ಎಮ್ಮೆಯನ್ನೇ ಆಟಕ್ಕೆ ಮೀಸಲು ಮಾಡಿದ್ದ. ದವಸ-ಧಾನ್ಯವಿಲ್ಲದೆ, ಕಲಗಚ್ಚಿದಲ್ಲಿ ಕೂಡ ಮುಸುರೆ ಮಿಶ್ರಿತ ನೀರಿಲ್ಲದೆ, ಹಿಡಿ ಕಣಿಕೆಯ ಮೇಲೆ ಒದುಕುವ ಒಂದು 'ಸುರಭೀ ವೈಷ್ಣವೀ ಮಾತಾ' ದಿನಾಲು ಥಾಲಿ ಹಾಲು ಕೊಡುತ್ತ, ಒಣ ದಂಟು ತಿಂದು ನಿಂತಿತ್ತು. ಅದರ ಅಷ್ಟೇ ಹಾಲನ್ನು ಪೋಲಿಮೆಮಾಡಿ, ಮಕ್ಕಳ ಕಣ್ಣು ಕೈಯಿಂದ ತಪ್ಪಿಸಿ, ರಿಂದಕ್ಕ ಗಿಂಡಿಯಲ್ಲಿಟ್ಟು ಬಾಣಂತಿಯ ಕರುಳು ಶಾಂತಿಗೆ ಹನಿಸುತ್ತಿದ್ದಳು. ಹೆತ್ತಪ್ಪ, ವಾಸನೆಯ ಬೆಜವಾಡದ ಸಣ್ಣಕ್ಕಿಯಲ್ಲಿ ದೇಹಪಿಂಡ ಬೆಳೆಸಿದ ಜಾನಕಿ, ಈಗ ಒಂದು ಹೊತ್ತಿಗೆ ಹಿಡಿ ಅನ್ನಕಾಣಬೇಕಾದರೆ ಸಾಕುಬೇಕಾಯಿತು. ನೆತ್ತಿಗೆ ಎಣ್ಣೆಯಿಲ್ಲ ಹೊಟ್ಟೆಗೆ ತುಂಬ ಸವಿ— ಸಪ್ಪಗಿಲ್ಲ ; ಹೀಗೆ ಏಕೆ ಎಂದು ಕೇಳಿ ನೆರವುಗೈ ಚಾಚುವ, ನಾಲ್ಕು ಸಂತಸದ ನುಡಿಯನ್ನಾಡುವ ಬಂಧು ಬಳಗವೂ ಅವಳಿಗಿಲ್ಲ. ತನ್ನ ಹಿಂದಿನ ದರ್ಪ, ಅಧಿಕಾರ ಮರೆತು-ಇಂದು ಬಂದ ಪರಿಸ್ಥಿತಿಯನ್ನು ನೆನೆದು, ರಿಂದಕ್ಕನ ಮುಂದೆ ಅವಳು ಆಗೀಗ ಮುಳುಮುಳು ಅತ್ತಾಗ, ರಿಂದಕ್ಕನ ಕರುಳು ಕಚ್ಚುತ್ತಿತ್ತು. ಆದರೇನು ? ತಾನೇ ನಿರ್ಗತಿಕಳಾಗಿ ಈ ಮನೆಯ ನೆರಳಿನಾಶ್ರಯಕ್ಕೆ ಬಂದವಳು. ಸಮಾಧಾನಪರವಾದ ನಾಲ್ಕು ಮಾತಿನ ವಿನಾ ಬೇರೆ ಏನು ಮಾಡಬಲ್ಲಳು? ಆ ಒಂದು ಜೀವ ಕೊಡುವ ಸಂತಸ-ಸಮಾಧಾನದ ನೆರವಿನ ಮೇಲೆ ಜಾನಕಿ ಬದುಕಿಕೊಂಡಿದ್ದಳು.

ರಿಂದವ್ವನಿಗೆ ಧೇನಿಸಿ ಧೇನಿಸಿ ವಿಚಾರಿಸಿದಾಗ ಭಾಗವ್ವನ ನೆರವಿನ ಕಿರಣ ಅವಳಿಗೆ ಹೊಳೆಯಿತು. ಭಾಗವ್ವ ಒಂದಿಷ್ಟು ದುಡ್ಡಿದ್ದಾಕೆ. ಈ ಸಮಯದಲ್ಲಿ ನೆರವಾಗದೆ ಬೇರೆ ಯಾವಾಗ ನೆರವಾಗಬೇಕು ? ತನ್ನ ಅಕ್ಕನಿಗೆ ಬೇಡಿಕೊಂಡರೆ ಅವಳ ಆ ಗುಪ್ತ-ಗಂಟಿನಿಂದ ಒಂದಿಷ್ಟು ಬಿಡಿಕಾಸಾದರೂ ಬಿಚ್ಚೀತೆಂದು ಬಗೆದಳು. ಇದೊಂದು ಬಾಣಂತಿತನ ಹೇಗಾದರೂ ಮುಗಿದರೆ ಸಾಕು. ಮುಂದೆ ದೇವರಿದ್ದಾನೆ. ಅಕ್ಕ ಇಲ್ಲವೆನ್ನಲಿಕ್ಕಿಲ್ಲ. ಕೇಳಿಯಾದರೂ ನೋಡೋಣವೆಂದು ಗುಣಿಸಿಕೊಂಡಳು,

ಮರುದಿನ ಆಷಾಢ ಏಕಾದಶಿ. ತನ್ನ ಊಟದ ಚಿಂತೆಯಿಲ್ಲ. ಬಾಣಂತಿಗಿಷ್ಟು ಅನ್ನಮಾಡಿ ಬಡಿಸಿದರೆ ಆಯಿತು. ಅಕ್ಕನಿಗೆ ಹಸಿವು ತಾಳದು. ಆವಳು ಹಣ್ಣು-ಹಾಲು ತೆಗೆದುಕೊಂಡಾಳು. ಬಿಸಿಲೇರುವದರೊಳಗಾಗಿ ಎರಡುಕೊಡ ಸೀನೀರು ತಂದು, ಬಾಣಂತಿಗೆ ಎರೆದು, ಅವಳ ಊಟ ಮುಗಿಸಿಬಿಡೋಣವೆಂದು ಭರಭರನೆ ಹೋಗಿ ನೀರು ತಂದು ಇಟ್ಟಳು. ಅಡಿಗೆಯ ಆಡಂಬರವಿಲ್ಲ. ಇದ್ದಲಿ ಒಲೆ ಹೊತ್ತಿಸಿಚಿಕ್ಕ ಗಿಳಲಿನಲ್ಲಿ ಸೆರೆ ಅಕ್ಕಿ ಹಾಕಿ ಅನ್ನಕ್ಕಿಟ್ಟಳು. ಹಸಿದ ಬೆಕ್ಕಿನಂತೆ ಅರ್ಧೋನ್ಮೀಲಿತನಯನಳಾಗಿ ಅಕ್ಕ ಅಡುಗೆಯ ಮನೆಯಲ್ಲಿ ಅಡ್ಡಾಗಿದ್ದಳು. ಬಾಣಂತಿ ಕೂಸನ್ನು ಮಗ್ಗುಲಲ್ಲಿ ಮಲಗಿಸಿಕೊಂಡು ತನ್ನ ಕತ್ತಲು ಕೋಣೆಯಲ್ಲಿ ಪವಡಿಸಿರಬೇಕು. ಇದೇ ಸಮಯವೆಂದು ರಿಂದಕ್ಕ ಮೆಲ್ಲಗೆ—

'ಭಾಗೂ, ನಿದ್ದಿ ಹತ್ತೇದೇನs ? ಏಕಾದಶಿ ಇಷ್ಟಲಗೂನ ಬಾಧಿಸಿತೇನು ? ಒಂದ ಮಾತ ಕೇಳಬೇಕಂತೀನಿ. ಎಚ್ಚರಿದ್ದೀ ಏನು?'

'ಏನ ನಿನ್ನ ಪುರಾಣಾ ? ಅಶನಯಿಲ್ಲದ ಹೊಟ್ಟಿ-ನಿದ್ದಿ ಯಾಕ ಸುಡುಗಾಡ ಹತ್ತೀತು! ಏನದು ಮಾತು?'

'ಮನೀ ಭವಣೀ ನೋಡತೀದಿ. ಕೂಸು-ಭಾಣಂತೀ ಕೂಳಿಲ್ಲದ ವಿಲಿಪಿಲಿ ಅಂತಾವs. ರಾಘಣ್ಣಂತೂ ತರೂ ಬರೂ ಆಶ್ಯಾ ಮುಗೀತು. ಇದೊಂದು ಬಾಣಂತೆನಾ ಹ್ಯಾಂಗಾರ ಪಾರಗೆಡವು. ಮೊನ್ನೆ ನಿನ್ನ ಪೋಟಗೀ ರೂಪಾಯಿ ಬಂದೂ ಅಲಾ. ಒಂದ ಹತ್ತಿಪ್ಪತ್ತು ರುಪಾಯ್ನರಾ ಕೊಡು. ಕಣ್ಣಲೇ ಪಾಪಾ ನೋಡಬ್ಯಾಡಾ.'

'ಹೂಂ. ತಗೊಂಡೀ ಅವ್ವಾ ರುಪಾಯೀ. ನಿನ್ನ ಅಣ್ಣಾಗೇನ ರಂಡ್ಯಾರ್ನ ಮಾಡಲಿಕ್ಕೆ ನಾ ಹೇಳಿದ್ನೆ ? ಇಂವಾ ಹೊರಗ ಚೈನೀಮಾಡಿ ಮಕ್ಕಳ ಮರೀ ಕೈಯಾಗ ಪರಟೀ ಕೊಡೂದು ಖರೇ ಅಂತ ಎಂದೋ ಗ್ವಾಡೀವ್ಯಾಲ ಸುಣ್ಣದ ಬಟ್ಟ ಇಟ್ಟಿದ್ದೆ. “ಇದು ಪೂರಸೂ ಧಂದೆ ಅಲ್ಲಾ ರಾಘೂ” ಅಂತ ಹೇಳಿದ್ರ- “ನಮ್ಮ ಸುಖಾ ಇವರಿಗೆ ಸಹನಾಗೊಲ್ಲದು” ಅಂತ ಹೇಳಿದಳು, ಒಳಗ ಮಲಗಿದ ಆ ಚದರೀ. ಈಗ ಉಣ ತಾಳ ಸುಖಾ ಎರಡೂ ಕೈಲೇ ಬಳಕೊಂಡು. ಘಳಸೂ ಘಸ್ತರಸೂ ಚಿಂತಿ ಇದ್ರ ತಿಳೀತಿತ್ತು ನಿಮ್ಮ ಅಣ್ಣಗ. ಮರಾಮರಾ ಮರಗಿ, ದುಡದು ಸಾಯೂ ತನಕಾ ಮುದುಕ ಘಳಿಸಿದ ದುಡ್ಡಿಗೆ ಹೆಗ್ಗಣ ಹತ್ತಿಧಾಂಗ ಹತ್ತಿ ಮನೀ ಕೆದರಿ ಒಗದಾ. ಈಗ ಭೋಗಸನ್ನು. ನಾಳೆ ಮನೀನೂ ಲೀಲಾವಿಗೆ ಬಂದ್ರ ಹಾದೀ ಹೆಣಾ ಆಗ ಬಾರದು ಅಂತ ನಾಕ ದುಡ್ಡ ಇಟಗೊಂಡೀನಿ. ಅದನ್ನೂ ಈಡ ಮಾಡ್ಲೇನು ನಿಮಗ ?'

'ಭಾಗೂ. ಮೆಲ್ಲಗ ಮಾತಾಡು. ಕರಳಿಗೆ ಒಂದು ತುತ್ತ ಕೂಳಿಲ್ಲದs ಬಾಣಂತಿ ಒಳಗ ಮಲಗ್ಯಾಳ. ಮೊದಲೇ ಸಂಕಟ ಇಟ್ಟದs. ಮ್ಯಾಲ ಬರೀ ಕೊಡಬ್ಯಾಡಾ.'

'ಹೌದs, ನನ್ನ ಮಾತು ಈಗ ಬರೀ ಆದೂ ಏನ ನಿಮಗ. ಆ ಬೋಕಾಣೇನ ಅಲ್ಲs ರಾಘೂನ್ನ ಅಡ್ಡ ಹಾದೀ ಹಿಡಿಸಿದಾಕಿ. ತಾನs ಸಡ್ಲ ಬಿಟ್ಟದ್ದಕ. ಈಗ ಭೋಗಸ್ತಾಳ. ತಾಳಿ ಒಂದ ಉಳದ್ವದ. ಅದರಾಗಿನ ಚೂರ ಭಂಗಾರೂ ಈಡ ಮಾಡನ್ನು ಅವಗs. ಮುದುಕ ಸತ್ತು ನಾಕ ವರ್ಷದಾಗ ಮನೀ ಅನ್ನೂದು ಜಲದೊಳದ ಹೋತು.'

'ವೈಂಸs, ನನ್ನ ತಾಳೀ ಮಾತು ತಗೀ ಬ್ಯಾಡ್ರಿ, ನಾ ಏನ ನಿಮಗ ದುಡ್ಡು ಬೇಡಲಿಕ್ಕೆ ಬಂದಿದ್ದಿಲ್ಲಾ. ಭೋಗದಾಗ ಇದ್ದದ್ದನ್ನ ಅನಭೋಗಸ್ತೀನಿ. ಇರೂ ತನಕಾ ನೀವೂ ಏನ ಈ ಮನ್ಯಾಗ ಸುಖಬಟ್ಟದ್ದು ಸುಳ್ಳ ಅಲ್ಲಾ. ಅತ್ತೀ ಮನೀ ಆಧಾರಿದ್ರ ಇಲ್ಯಾಕ ಬಂದ ಸೇರತಿದ್ರಿ ? ನಿಮ್ಮ ಖುದ್ದರಗೇಡಿ ಸ್ವಭಾವ ಎಲ್ಲ್ಯಾರೆ ನಿಮ್ಮನ್ನ ನಿಂದರಿಸಿ ಕುಡತ್ತಿತ್ತs! ಈ ಮನೀ ಅಂತ ಇಷ್ಟದಿನಾ ಆರೇ ನಿಂತಿರಿ, ಕಣ್ಲೆ ನೋಡಲಿಕ್ಕೆ ಆಗದಿದ್ದರ ಝಾಡಿಸಿಕೊಂಡು ಹೋಗಬೇಕಾಗಿತ್ತು–ಯಾರ ಅಡ್ಡ ನಿಂತ ನಿಮ್ಮನ್ನು ತರಬಿದ್ರೂ ?'

ಅಡುಗೆಯ ಮನೆಯ ಬಾಗಿಲಿಗೆ ಬಂದು ಜಾನಕಿ ಗರ್ಜಿಸಿದಳು. ತನ್ನ ಮನೆ ತನ್ನ ಸೌಭಾಗ್ಯ, ನಿಂದಿಸಿದ್ದಕ್ಕೆ ಅವಳ ಕೋಪ ನೆತ್ತಿಗೇರಿತ್ತು. ಎಲ್ಲಕ್ಕೂ ದದಾತಿಯಾದಾಗ ಸಿಟ್ಟಿಗೆ ನೆರೆ ಬರುತ್ತದೆ. ರಿಂದಕ್ಕ ಚಟ್ಟನೆದ್ದು ಜಾನಕಿಯನ್ನು ಬಾಣಂತಿ ಕೋಣೆಗೆ ಕರೆದೊಯ್ದಳು. ಅವಳನ್ನು ಹೊರಸಿನಮೇಲೆ ಕುಳ್ಳಿರಿಸಿ ಬಾಗಿಲು ಮುಂದೆ ಮಾಡಿಬಿಟ್ಟಳು. ಆದರೇನು ? ಭಾಗವ್ವನ ಅಭಿಮಾನವನ್ನು ಜಾನಕಿ ತಿವಿದಿದ್ದಳು. ಆ ಗಾಯದ ನೆತ್ತರ ಇನ್ನೂ ಪುಟಿಯುತ್ತಿತ್ತು. ಅಡುಗೆಯ ಮನೆಯ ಛಾವಣಿ ಹಾರುವಂತೆ ಅವಳು ಅಲ್ಲಿಂದಲೇ ಕೂಗಿದಳು—

'ಇದನೋಡ ಜಾನಕೀ, ಹೆಂಗ ಹರದವರಿಗೆ ನಿಂಗದ ಪರಿವಿ ಏನೂ ಅಂತs ನಾ ಏನ ಈ ಮನೀ ಕೂಳಿಗೆ ಬಂದ ಬೀಳಲಿಲ್ಲಾ. ನಿನ್ನ ಗಂಡಾ ಇರೂ ಅಂತ ಅಂಗಲಾಚಿ ಬೇಡಿಕೊಂಡಲ್ಲೇ ನಿಂತೆ ! ನಾಕ ವರಷರೇ ಈ ಮನಿ ನೋಡಕೊಂಡೆ. ಅದೂ ಇರದಿದ್ರ ಎಂದೋ ಹಾಳಾಗಿ ಹೋಗುತ್ತಿತ್ತು. ಅಕಡೆ ರಾಘ್ಯಾ ತಾರೀ ಮನೀ, ಇಕಡೆ ನೀ ತೌರಮನೀ ತುಂಬಿದ್ರಂತೇ ಹಿಂಥಾ ಪರಿಸ್ಥಿತಿ ಬಂತೂ. ನಿಮ್ಮ ಅಪ್ಪಾ ಅಣ್ಣ ತಿಂದ ಕೂತ್ರಲಾ ಈಗ ಬರಬೇಕಾಗಿತ್ತ ನಿನ್ನ ಬದಕಿಸಲಿಕ್ಕೆ?'

ಜಾನಕಿಯ ತಾಳ್ಮೆಯೂ ಮೀರಿತು. ತನ್ನ ತೌರು ಮನೆಯ ವಿನಾಕಾರಣ ನಿಂದೆ ಅವಳಿಗೆ ತಡೆಯಲಿಲ್ಲ. ಬಾಣಂತಿ ಕೋಣೆಯ ಬಾಗಿಲನ್ನು ಧಡಾರನೇ ತೆಗೆದು ಎದ್ದವಳೇ,

'ನನ್ನ ತೌರಮನೀ ನಿಂದಾ ಮಾಡಬ್ಯಾಡಾ. ನೀ ಕೂಳಿಗೆ ಬಿದ್ದಾಕಿ. ನಿನಗ ಯಾಕ ನನ್ನ ಮನೀ ಉಸಾಬರೀ. ನೀ ಹತ್ತೀ ಹೆಗ್ಗಣಧಾಂಗ ತೌರಮನೀಗೆ. ನನ್ನ ಮನೀ ನಾನು, ನನ್ನ ಗಂಡ ಊಟಮಾಡತೇವು. ನೀ ಯಾರs ಚದರಿ ಕೇಳಾಕಿ?'

ಇಂಥ ದಿವ್ಯ ವಿಶೇಷಣಗಳ ಮಾಲೆ ಕೊರಳಲ್ಲಿ ಬಿದ್ದುದನ್ನು ಕಂಡು ಭಾಗವ್ವ ಕಾಲಪ್ಪಳಿಸುತ್ತ—

'ಇಗಾ ಹೊಂಟೆ ನಡದೆ, ಮಟಮಟಾ ಮಧ್ಯಾಹ್ನದಾಗ, ಹನೀ ನೀರಿಗೆ ಎರವ ಮಾಡೀ ನನ್ನs. ಅದರ ಪಾಪ ಹತ್ತದs ಹೋಗಲಿಕ್ಕಿಲ್ಲಾ. ಹೆಣ್ಣಿನ ಶಾಪ ಅದ ಅದು. ನಿನ್ನ ಮಕ್ಕಳ ಮರೀನ್ನ ವಿಲಿವಿಲಿ ಅನಸದ ಬಿಡೂದಿಲ್ಲಾ. ಇರೂ ಇನ್ನ ಈ ಸ್ಮಶಾನದಾಗ ನೀನs.'

ಎಂದು ದೇವರ ಮನೆಗೆ ಹೋಗಿ, ಮೈಲಿಗೆಯಲ್ಲಿಯೇ ದೊಡ್ಡ ದೇವರ ಪೆಟ್ಟಿಗೆಯ ಹತ್ತಿರವಿದ್ದ ತನ್ನ ಗಂಟನ್ನು ತೆಗೆದುಕೊಂಡು,ಅತ್ತಿತ್ತ ನೋಡಿ 'ಉಫ್' ಎಂದು ದೇವರ ಮುಂದಿನ ನಂದಾದೀಪವನ್ನು ಆರಿಸಿ, ಹೊರಗೆ ಬಂದು, ಕೋಲಿಗಿದ್ದ ತನ್ನ ಸೀರೆಯನ್ನು ಎಳೆದುಕೊಂಡು, ಮಣ್ಣು ತೂರುವಂತೆ ಕೈಮಾಡಿ ಬಿರಬಿರನೆ ನಡೆದುಬಿಟ್ಟಳು. ಪಾಪ ! ಆರಿದ ದೀಪ ಅಳು ಮುಖದಿಂದ ಧೂಪ ಧೂಮವನ್ನು ದೇವರ ಕೋಣೆಯಲ್ಲಿ ಉಸುರಿ ತಣ್ಣಗಾಯಿತು. ನಂದಿದ ದೀಪವನ್ನು ಕಂಡು ರಿಂದಕ್ಕ ಕಳವಳಗೊಂಡು ಧಾವಿಸಿ ಬಂದು, ಕಡ್ಡೀಗೀಚಿ, ದೀಪಹಚ್ಚಿದಳು. ರಿಂದಕ್ಕನಿಗೆ ಭಾಗವ್ವನ ಶಾಪವಾಣಿ ಭಯಂಕರವೆನಿಸಲಿಲ್ಲ. ಆದರೆ ಮನೆಯ ಮಾಂಗಲ್ಯದ ಕುರುಹಾದ ನಂದಾದೀಪವಾರಿಸಿದ ಅವಳ ಕೃತಿ–ಅಶುಭ ಕೃತಿ–ಕರಾಳವೆನ್ನಿಸಿತು. ತಾನು ಯಾವ ಮುಖದಿಂದ ಅವಳ ನೆರವು ಕೇಳಿ ಈ ಕಾಂಡ ರಚಿಸಿದ ಪಾಪ ಕಟ್ಟಿಕೊಂಡೆನೆಂಬ ನೋವು ತಿವಿಯತೊಡಗಿತು. ಸೋತ ದೇಹವನ್ನು, ನೊಂದ ಮನಸ್ಸನ್ನು ಎತ್ತಲಾರದೆ ಎತ್ತಿಕೊಂಡು ಬಂದು, ಮತ್ತೆ ಒಲೆಯ ಮುಂದೆ ಸ್ಥಾನಾಪನ್ನಳಾದಳು. ಆ ವಿಷಣ್ಣ ಜೀವಕ್ಕೆ ಏನೂ ಬೇಡವಾಗಿತ್ತು. ಆರಿದ ಒಲೆ ಅತ್ತಿಗೆಯ ನೆನಪು ಕೊಟ್ಟಿತು. ಮತ್ತೆ ಒಲೆಹೊತ್ತಿಸಿ ಝುಣಕವನ್ನು ಮಾಡಿ ಇಳಿಸಿದಳು. ಅವರ ಕದನ–ಕೋಲಾಹಲ ನಡೆದಾಗಲೇ ಅನ್ನ ಬೆಂದಿತ್ತು. ಅತ್ತಿಗೆಗೆ ಮೈಗೆ ನೀರು ಹಣಿಸಿ ಊಟದ ಶಾಸ್ತ್ರ ಮುಗಿಸಬೇಕೆಂದು ಬಾಣಂತಿಯ ಕೋಣೆಗೆ ನಡೆದಳು.

ರಿಂದಕ್ಕ ಒಳಗೆ ಬಂದಾಗ ಜಾನಕಿ ಅಳುತ್ತ ಕುಳಿತಿದ್ದಳು. ಭಾಗವ್ವ ತುಂಬಿದ ಮನೆಯಲ್ಲಿನ ದೀಪವಾರಿಸಿ ಹೋದದ್ದನ್ನು ಅವಳೂ ಕಣ್ಣಾರೆ ಕಂಡಿದ್ದಳು. ಯಾವ ಮಾಯೆಯಿಂದ ಈ ಅರಿಷ್ಟ ಮನೆಯನ್ನು ಸೇರಿ ಇಂಥ ಪ್ರಕಾಂಡ ಮಾಡಿಹೋಯಿ ತೆಂದು ಅವಳಿಗೂ ಚುಚ್ಚುತ್ತಿತ್ತು. ಅದೇ ಎದ್ದು ಅಳುತ್ತಿದ್ದ ಕೂಸನ್ನು ಅಕ್ಕಸ ದಿಂದ ಎತ್ತಿಕೊಂಡು,

'ನಿನ ಸುಡ್ಲೀ ಯಾಕ ಬಂದಿ ಭೂಮಿಗೆ ಭಾರ ಆಗಿ. ಇಲ್ಲೇನ ಸುಖಾ ಭೋಗಸೂದಿತ್ತು ನಿನಗ? ಹನೀ ಹಾಲಿಲ್ಲದ ತೊಗಲನರೇ ಹೀರಿ ಬದಕೇನಂತೀ ಯಲಾ. ನನ್ನ ಜೀವಾನರೇ ಹೀರಿಬಿಡು' ಎಂದು ತಿವಿದಾಡಿದಳು.

ಈ ಅಭದ್ರ ನುಡಿಯನ್ನು ಕೇಳಲಾರದೆ ರಿಂದವ್ವ,

'ಜಾನಕೀ, ಯಾರ ಸಿಟ್ಟ ಯಾರ ಮ್ಯಾಲ ಹಾಕತೀ? ಪಾಪದ ಕೂಸೇನ ಮಾಡೀತು? ಎಲ್ಲಾ ನಮ್ಮ ಪ್ರಾರಬ್ಧ. ಬಿಸಿಲಿನ ವ್ಯಾಳ್ಯಾದಾಗ ತಲೀ ಕೆಡಿಸಿಕೋ ಬ್ಯಾಡಾ. ನನಗೇನ ದೇವರ ಬುದ್ದೀ ಕೊಟ್ಟ ನೋಡು, ಭಾಗೂನ್ನ ರೊಕಾ ಕೇಳಲಿಕ್ಕೆ. ನಾನs ಸುಮ್ಮನಿದ್ರ ಈ ರಣಕತ್ಲಾ ಎಲ್ಲೆ ಆಗ್ತಿತ್ತು? ಏಳು, ಕೂಸು ಮಲಗಿತ ಕಾಣಸ್ತದ. ಮೈಗೆ ಹಾಕತೀನಿ. ಒಂದಿಷ್ಟ ಉಂಡ ಮಲಗಿದರ ಥಣ್ಣಗ ಅನಿಸೀತು. ರಾಘಣ್ಣಾನ ಹಾದಿ ಯಾತರದು? ಅವಾ ಬರೂದು ಒಂದಸೋ ಎರಡೋ.'

'ಅವರ ಯಾವಾಗ ಬಂದ ಸುಖಾ ನನಗ ಅಷ್ಟರಾಗ ಅದs. ಅವರ ಜೋಡಿ ಕೂಡಿ ೧೫ ವರುಷಾ ಸುಖಾ ಭೋಗಿಸಿದ್ದs ಸಾಕಲಾ. ಇನ್ನ ಮುಂದ ಏನ ಬಳಕೊಂಬೂದು ಉಳದದs. ನನ್ನ ಹಸಿವಿ-ನೀರಡಿಕಿ ಎಲ್ಲಾ ಆಟ್ಟಸೇದ ವೈಂಸs. ಏನಾರೆ ಆಗಿ ಸಾವ ಬಂದ್ರ ಸಾಕೂ ಅಂತೇನಿ. ಮುತ್ತೈದಿ ಸಾವ ಸತ್ತ ಪುಣ್ಯಾ ಬಂದೀತು.'

'ಒಳತ್ತನ್ನು. ಯಾಕ ಅರಿಷ್ಟ ನುಡೀತೀದಿ. ತುಂಬಿದ ಮನ್ಯಾಗ ನೀನs ಅಪಶಕುನ ನುಡದರ ಮಕ್ಕಳೂ-ಮರಿ ಯಾರ ಮೋತೀ ನೋಡಿ ಬದಕಬೇಕು? ಈಗ ಕೂಳ ಖೊಬ್ಬರ್ಯಾಗಿ ತಿರಗತಾವs. ಏಳು. ಎರಕೋ ಅಂತೀ. ಕೂಸ ಮಲಗಿತ ಕಾಣಸ್ತದ.'

ಜಾನಕಿ ತೊಡೆಯ ಮೇಲಿನ ಕೂಸನ್ನು ಮೆಲ್ಲನೆತ್ತಿ ಹೊರಸಿನ ಮೇಲೆ ಮಲ ಗಿಸಿ, ಅದರ ಮೈಮೇಲೆ ದುಪ್ಪಟಿ ಹೊಚ್ಚಿ ಬಚ್ಚಲು ಮನೆಗೆ ನಡೆದಳು. ಬಾಣಂತಿಗೆ ಮೈತುಂಬ-ತಲೆತುಂಬ ಎಣ್ಣೆ ಹಚ್ಚಿ ಹೂಸಬೇಕು. ಎಲ್ಲಕ್ಕೂ ಎರವಾದ ಈ ಮನೆ ಯಲ್ಲಿ ಬಟ್ಟಲು ತುಂಬ ಎಣ್ಣೆ ಎಲ್ಲಿಂದ ಬರಬೇಕು? ಇದ್ದುದಷ್ಟನ್ನು ಹಚ್ಚಿ ಬೆಳಗಿ

ನಲ್ಲಿಯೇ ಕೂಸನ್ನು ಎರದಾಗಿತ್ತು. ಉಗುರುಬೆಚ್ಚಗಿನ ನೀರಿನಲ್ಲಿಯೇ ಮೈ ತೊಳೆದುಕೊಳ್ಳುವ ವಿಧಾನಕ್ಕೆ ಈಗ ಎರೆದುಕೊಳ್ಳುವ ದೊಡ್ಡ ಹೆಸರು ನಿಂತಿತ್ತು ಈ ಮನೆಯಲ್ಲಿ. ಜಾನಕಿ ಮೂಕಳಾಗಿ ನೀರು ಹಣಿಸಿಕೊಳ್ಳುತ್ತಲಿದ್ದಳು. ಹಿರಿಯ ಅತ್ತಿಗೆ ದೀಪವಾರಿಸಿ ಹೋದ ಶಲ್ಯ ಆವಳನ್ನು ತೀವ್ರವಾಗಿ ತಿವಿಯುತ್ತಿತ್ತು. ಅದರ ನೆನಪು ಉಮ್ಮಳಿಸಿ ಬಂದು ಮತ್ತೆ ಮೂಕ ಶೋಕ ಶುರುವಾಯಿತು. ಮಣೆಯ ಮೇಲೆ ಶಿಲಾವತ್ತಾಗಿ ಕುಳಿತವಳು ನಡುವೆಯೇ ಜಾಗ್ರತಳಾಗಿ....

'ವೈಂಸs. ನನ್ನ ಹಣ್ಯಾಗ ಇನ್ನೂ ಏನೇನ ಬರದದೋ ಏನೋ! ಮುಂಜಾನೆದ್ದು ಯಾರ ಮಾರೀ ನೋಡಿದೆನೋ ಇಂದs. ಅವರು ನಂದಾದೀಪಾ ಆರಿಸಿ ಹೋದರಲಾ. ನನಗs ನಾಕ ಬೈಕೊಂಡಿದ್ದರ ತಾಳಕೋತಿದ್ದೆ. ಅವರು, ಮನೀ-ಮಕ್ಕಳು ಏನ ಪಾಪಾ ಮಾಡಿದ್ದರು? ತಮ್ಮ ತಮ್ಮನ ಮನೀ ಹಾಳಾದರ ಇವರಿಗೆ ಸಂಕಟ ಅನಿಸಲಿಕ್ಕಿಲ್ಲೇನು? ಅವರ ಬಾಯ್ಗೆ ಹತ್ತೂ ಬುದ್ಧೀ ದೇವರು ಯಾಕ ಕೊಟ್ಟಾs ಅಂತೀನಿ.'

'ಜಾನಕೀ, ಅವರವರ ಪಾಪ ಅವರವರ ಸುತ್ತ. ಅಕೀ ದೀಪಾ ಆರಿಸಿದಳಂತ ನಿನಗೇನು ಕೆಡಕ ಆಗೂದು ಅಷ್ಟರಾಗ ಅದs. ಈಗೇನ ಆಕೀಗೆ ದೇವರ ಕಲ್ಯಾಣ ಮಾಡಿದ್ದಾ? ನಿನಗ ಮರಾಮರಾ ಅನಿಸಿ ಅಕೀ ಪಡೂ ಸುಖಾನೂ ಅಷ್ಟರಾಗ ಅದs. ರಾಘಣ್ಣ ಒಂದಿಷ್ಟ ಅಳತ್ಯಾಗ ಇದ್ರ ಇದೆಲ್ಲಾ ಎಲ್ಲೆ ಆಗುತ್ತಿತ್ತು. ಕಟ್ನೆ ಕಡದೇ ನಂದ್ರೆ ಒಂದ ಕಾಳ ಜ್ವಾಳ ಇಲ್ಲ ಮನ್ಯಾಗ. ನಾಳೇ ಏನೂ ಅಂತ ನನಗ ಚಿಂತಿ. ಭಾಗೂ ಏನಾರs ನೆರವಾದಾಳಂತ ಮಾಡಿದ್ದರ ಹೀಂಗ ಮಾಡಿ ಹೋದ್ಲು. ಇದಕ ಗತಿ ಏನೂ ಅಂತ.'

'ಸಾವs ಗತೀ. ಹಿಂದಿನ ಜನ್ಮದ ಪಾಪಾ–ಅನುಭೋಗಸ್ತೇವು. ಅಪ್ಪರೆ ಜೀವಂತ ಇದ್ರ ಝುಲ್ಲ ಇರಲಿಲ್ಲ. ನಾಕೂ ಕಡಿಂದೂ ನಾ ನಿರಾಧಾರ. ವೈಂಸs, ಮನೀ ಬರಕೊಟ್ಟ ಮೂರ ವರಸ ಆತ ಕಾಣಸ್ತದ. ನಾಳೆ ಅದೂ ಕೈಬಿಟ್ಟರ ಯಾಗಿಡದ ಬುಡಕ ಬಿದ್ದ ಸಾಯುಬೇಕಾಗತದೋ ಏನೋ?'

'ಕಾರಹುಣ್ಣಿವಿಗೆ ಮೂರ ವರಸಾತು. ಭಾಗೂಗೇನೋ ಇದರ ದಶಿಂದ ಗೊತ್ತಿತ್ತು ಕಾಣ್ತದ. ಜಪ್ತಿ ಬರತದ, ಜಪ್ತಿ ಬರತದ—ಅಂತ ಹಾಡೇ ಹಾಡತಿದ್ಲು. ಅಕೀ ಮಾತೇನು ಥಾಕಯಿಲ್ಲದ್ದು. ಒಂದ ಖರೇ ಇದ್ರ ಹತ್ತು ಸುಳ್ಳು. ನಾ ಲಕ್ಷ್ಯಾನs ಕೊಟ್ಟದ್ದಿಲ್ಲಾ.'

'ಊರ ಕಾರಭಾರ ಅಕೀದು. ಇದ್ರೂ ಇದ್ದೀತು. ಏನ ನೇಮಾ! ಕಾಡೂ ಕಾಲಾ, ನಮಗ. ಇಂಥಾ ಮಾತು ಸುಳ್ಳ ಆಗ್ಘಾಂಗಿಲ್ಲಾ.'

ಮೈ ಒರಸಿಕೊಂಡು ಜಾನಕಿ ತನ್ನ ಕೋಣೆಯಲ್ಲಿ ಹೋಗಿ-ಕುಂಕುಮದ ಬೊಟ್ಟಿಟ್ಟುಕೊಂಡು ಊಟಕ್ಕೆಂದು ಅಲ್ಲಿ ಹಾಕಿದ ಮಣೆಯಮೇಲೆ ಕುಳಿತಳು. ಬಿಸಿಯಿರಲೆಂದು ಅಗ್ಗಿಷ್ಟಿಕೆಯಲ್ಲಿ ಇಟ್ಟ ತಂಬಿಗೆಯಿಂದ ನೀರು ಬಾಗಿಸಿಕೊಂಡಳು. ರಿಂದವ್ವ ಚಿಕ್ಕ ಗಿಂಡಿಯಲ್ಲಿ ಮಾಡಿದ ಅನ್ನ ಝುಣಕ ತಂದಿಟ್ಟು, ಅಂಗೈಯಗಲದ ತಾಟನಲ್ಲಿ ಒಂದು ಬದಿಗೆ ಉಪ್ಪು ಮೆಂತೆದ ಹಿಟ್ಟನ್ನು ಬಡಿಸಿ ತಂದಳು. ಗಿಂಡಿಯಲ್ಲಿ ಕಾಸಿದ ಆಕಳ ಹಾಲಿಗೆ ಕಾಗದದಷ್ಟು ತೆಳುವಾದ ಹಳದಿಯ ಕೆನೆ ಬಂದಿತ್ತು. ಅದನ್ನೇ ತೆಗೆದು ತಾಟನಲ್ಲಿ ಬಡಿಸಿದಳು. ಕಾಸಿದ ತುಪ್ಪದ ವಿನಾ ತುತ್ತಿಡದ ಜಾನಕಿ ಆಕಳ ಹಾಲಿನ ಕೆನೆಯೊಡನೆ ಐದು ತುತ್ತು ಅನ್ನ ಉಂಣುವ ದಿನ ಬಂದಿತ್ತು. ಅದರ ನೆನಪಾಗಿ ಅವಳ ದುಃಖ ಚಿಮ್ಮಿಬಂದಿತು. ಅನ್ನ ಕಲಸುವದನ್ನು ಬಿಟ್ಟು ಅವಳು ಮುಳು ಮುಳು ಅಳುವದನ್ನು ಕಂಡು ರಿಂದವ್ವ—

'ಜಾನಕೀ, ಅನ್ನ ಮೊದಲೇ ಆರಿ ಗುಗ್ಗರಿ ಆಗೇದ. ಏನು ಅತ್ತು ಏನ ಫಲಾ. ಹಿಂದಿನದೆಲ್ಲಾ ಬರೇ ನೆನಪಾ. ಅಳಬ್ಯಾಡಾ. ಉಣ್ಣು ತಾಯೀ. ಬಿಸಿ ಹಾಲ ಅವ. ಅದನ ಕಲಿಸಿಕೊಂಡು ಮುದ್ದೀಮಾಡಕೋ. ಸಾರ ಮಾಡಬೇಕಂದ್ರ ಬ್ಯಾಳಿ ಸುದ್ದೇ ಇರಲಿಲ್ಲ. ನೆರಿಮನ್ಯಾಗಿಂದ ಒಂದಿಷ್ಟ ತಂದೇನಂದ್ರ ಹೋಗಿ ಬೇಡ್ಲಿಕ್ಕೆ ಮಾರಿ ಇಲ್ಲಧಾಂಗ ಆಗೇದ. ಅವರ ಹಿಂದಿನ ಕಡಾನs ಕೊಡೂದದ.'

'ಮಂದೀ ಕಡಾ ನಾವ್ ಮುಂದಿನ ಜಲ್ಮದಾಗs ಮುಟ್ಟಸೂದು. ಏನ ತಿಂದ್ರೂ ಅಷ್ಟs ಅಲಾ. ಕಲ್ಲತಿಂದೂ ಬದಕೇನ ಅಂತದ ಜೀವಾ. ಅನ್ನಾ ಕಾಲ ಕಸಾ ಮಾಡಿದ್ದಕ್ಕ ಈಗ ಅನ್ನಾನ್ನಗತಿಕರಾದೇವು. ವೈಂಸs, ಅನ್ನ ಅಂದರ ವಿಷಾ ಆಗೇದ. ಗಂಟಲದಾಗs ಇಳೀವಲ್ಲದು. ಸಾಕ ನನಗs ಈಗ ಉಂಡದ್ದs. ಒಂದಿಷ್ಟ ಉಳದಿದ್ರ ಅವರಿಗಿಟ್ಟ ಬಿಡ್ರಿ. ಹುಡುಗೂರ ಊಟ ಆತೇನು?'

'ಅವೇನು ಮುಂಜಾನೇ ದಶಮೀ ತಿಂದಾವ. ಶಾಮಾ–ಶಾರೀ ಏಕಾದಶೀ ಮಾಡತೀವಂತ ಹಟ ಹಿಡಿದ ಕೂತಾರs. ಏನ ಸೇಂಗಾ–ಸಾಬೂದಾಣಿ ಅದನs ಮನ್ಯಾಗ ಫಳಾರ ಮಾಡ್ಲಿಕ್ಕೆ.'

'ಏಕಾದಶೀ ಏನ, ಜನ್ಮಕ್ಕs ಹತ್ತೇದಲಾ. ಇವರೇನ ಹೊಸದಾಗಿ ಮಾಡಬೇಕಾಗೇದ.'

ಗಟಗಟನೆ ಒಂದೆರಡು ಥಾಲಿ ನೀರು ಕುಡಿದು ಜಾನಕಿ ಉಣ್ಣದೆ ಹಾಗೇ ಕುಳಿತಳು.

೫೪

ನೂರುವರುಷ ಆಯುಷ್ಯ ಪಡೆದವರಂತೆ ನೆನೆಸುತ್ತಿರುವಾಗಲೇ ಅವಳ ಮಕ್ಕಳು ಒಳಗೆ ಓಡುತ್ತ ಬಂದರು. ಇನ್ನೂ ಏದುತ್ತಿದ್ದ ಶಾಮು ಹೇಳಿದ:

'ಅವ್ವಾ, ಅವ್ವಾ, ಹೊರಗ ಯಾರೋ ಕಚೇರೀ ಅವರೂ ಅಂತ, ಅಪ್ಪನ್ನ ಕೇಳಕೋತ ಬಂದಾರ. ಆರೇಳು ಮಂದಿ ಇದ್ದಾರ.'

ರಿಂದವ್ವ ಗಾಬರಿಯಾಗಿ ಹೊರಗೆದ್ದು ಬಂದು ನೋಡಿದರೆ ಊರಿನ ಗೌಡರ, ವಾಲೀಕಾರರು, ಇಬ್ಬರು ಯಾರೋ ಅಪರಿಚಿತರು, ಪಟ್ಟೇವಾಲಾ, ಸಿಪಾಯಿಯಂತಹ ಇನ್ನೊಬ್ಬ ಇಷ್ಟು ಜನ ಮನೆಯ ಅಂಗಳದಲ್ಲಿ ನೆರೆದಿದ್ದರು. ರಿಂದವ್ವ ಹೊರಗೆ ಬಂದುದನ್ನು ಕಂಡು ಗೌಡರು,

'ರಿಂದವ್ವಕ್ಕಾ, ರಾಘಣ್ಣ ಇಲ್ಲ ಏನ ಮನ್ಯಾಗ ? ಇವರು ಬೆಳಗಾವೀ ಸಾವ ಕಾರ್ರು. ಬೇಲೀಫನ್ನ ಕರಕೊಂಡ ಬಂದಾರ. ಮನೀ ವತ್ತೀ ಮುದ್ದತ ಮುಗದು ಕಚೇರಿ ಹುಕುಂ ಆಗ್ಯೆತಿ, ಇವರು ಮನೀ ಕಬಜಾ ತಗೋಬೇಕಂತ. ರಾಘಣ್ಣನ್ನ ಕರೀಲಿಕ್ಕೆ ವಾಲೀಕಾರನ್ನ ಕಳಿಸೀನಿ.'

'ಅಯ್ಯಯ್ಯ ಶಿವಪ್ಪಾ. ಇಲ್ಲಿಗೂ ಬಂತ್ಯs ಸ್ಥಿತಿ ! ರಾಘಣ್ಣನ ಹ್ಯಾಂಣ್ತಿ ಹಸೀ ಬಾಣಂತಿ ! ನೀವs ಊರಾವ್ರು ಕೂಡಿ ನಮ್ಮನ್ನ ಅಡವೀಪಾಲ ಮಾಡತೀರೇನು ? ರಾಘಣ್ಣ ಬಂದೇನ ಮಾಡಾಂವಾ ? ನೀ ಹಿರೇ ಮನಸ್ಯಾ ಇದ್ದೀ. ನೀನs ಬಗೀಹರಸಬೇಕಾದ ಮಾತು ಇದು.'

'ನಾ ಏನ ಮಾಡ್ಲೆವಾ ? ಸರಕಾರೀ ಹುಕುಂ ಹಾಂಗ ಅದs. ಇಂದs ಮನೀ ಖಾಲೀ ಆಗಬೇಕು. ದನಾ-ಕರಾ ಎಲ್ಲಾ ಬಂದೂ ಜಪ್ತ್ಯಾಗ. ಖುದ್ದ ಸಾವ ಕಾರ್ರs ಬಂದಾರ ಬೇಲಿಫನ್ನ ಕರಕೊಂಡು.'

'ಶಿವಪ್ಪಾ, ಅಪ್ಪ ಇದ್ದಾಗಿಂದೂ ನಿನಗ ಈ ಮನೀ ವಹಿವಾಟ. ಇಲ್ಲೆ, ನಿನಗ ಅರೀದ್ದ ಏನದs. ರಾಘಣ್ಣನ ಮೋತೀ ನೋಡಬ್ಯಾಡ. ಅವನ ಕೂಸಕುನ್ನಿ ಹಸೀಬಾಣಂತಿ ಹೇಣ್ತಿ, ಅವರ ಕಡೆ ನೋಡಿ ಸಂಬಾಳಸು. ಅಜ್ಜ ಅರತಲೀ-ಮುತ್ತ್ಯಾ ಮೂರತಲೀ ಮನೆತನಕ್ಕ ನಡಕೊಂಡ ಬಂದ ಮನೀ ಇದು. ಇದನ್ನ ಹ್ಯಾಂಗ ಬಿಡೂಣು. ಬೇಕಾರ ಆ ತಾರಿ ಇದ್ದ ಮನೀನೂ ನಮ್ಮದs. ಅದನ್ನ ಜಪ್ತೀಮಾಡ್ರಿ ಬೇಕಾರ.'

'ರಿಂದವ್ವಕ್ಕಾ ಏನ ಹುಚ್ಚಿ ಅದೀ ನೀ ! ತಾರಿ ಇದ್ದ ಮನೀ ಎಂದೋ ಅಕೀ ಹೆಸರ್ಲೆ ಮಾಡ್ಯಾನ ರಾಘಣ್ಣಾ. ಹೆಣ್ಮಗಳು ನೀ, ನಿನಗ ಅವನ ಕಂತ್ರಾಟ ಏನ ತಿಳೀಬೇಕು ?'

'ನನಗ ತಿಳಿಲೀ ಬಿಡ್ಲಿ. ನಾ ಏನ ಈ ಮನ್ಯಾಗಿಂದ ಜಪ್ಪಂದರೂ ಕಾಲ ಕಿತ್ತಾಕ್ಯಲ್ಲ. ಜೀವ ಇರೂ ತನಕಾ ಇಕಡೀ ಕಡ್ಡಿ ಅಕಡೆ ಆಗಿಗೊಡ್ಲಿಕ್ಕಿಲ್ಲ.'

'ನೋಡ್ರೆವಾ, ನಾವ್ ಮನೀ ತಾಬೇಕ್ಕ ತಗೊಂಡು ಕೀಲೀ ಹಾಕೊಂದು ಹೋಗಾವ್ರು. ಭಡಾಭಡಾ ಹೊರಬೀಳ್ರಿ. ಹಾಕ್ಯಾಡಕೋತ ನಿಂತ್ರ ಏನ ಆಗ ಬೇಕಾಗೇದ—'

ಸಾವುಕಾರರು ನಡುವೆ ಬಾಯಿ ಹಾಕಿದರು.

'ನಾ ಏನ ಹೋಗಾಕ್ಯಲ್ಲ. ಬಾಯಿಬಿಟ್ಟ ಹೇಳತೀನಿ, ಹಸೀ ಬಾಣಂತಿ ಇದ್ದಮನೀ ಅಂತ. ನಿಮಗೂ ಮಕ್ಕಳ ಮರೀ ಇದ್ದಾವಾದೀತು. ತಿಳಿದಾವ್ರಿದ್ದೀರಿ. ನಿಮಗ ಇನಾ ಏನ ಹೇಳೂದೂ ?'

'ಏ ಬುಡ್ಡೀ ಕ್ಯಾ ವಟವಟ ಲಗೇಜಿ, ಸಾವಕಾರ. ಅಂದರ್ ವುಸನೇಕಾ ಕ್ಯಾ ಡರ್ ಹೈ-ಚಲೋತೋ' ಎಂದ ಬೇಲೀಫ.

'ಏ ಸಾಬಾ, ನಿನ್ನ ಮಾತು ನನಗೂ ತಿಳೀತಾವ. ನೀ ಒಳಗ ಬರೂದಾದ್ರ ನನ್ನ ಹೆಣದ ಮ್ಯಾಲಿಂದ ಹಾದ ಬರಬೇಕಾದೀತು ನೋಡು.'

ಎಂದು ಹೇಳುತ್ತ ರಿಂದವ್ವ ತಲೆಬಾಗಿಲಿನ ಹೊಸ್ತಿಲದ ಮೇಲೆ ದ್ವಾರ ದೇವತೆ ಯಂತೆ ಗಟ್ಟಿಯಾಗಿ ನಿಂತು ಬಿಟ್ಟಳು. ಗೌಡರು, ಸಾವುಕಾರರು, ಇದರಿಂದ ಒಂದಿಷ್ಟು ಬೆದರಿದರು. ಒಳನುಗ್ಗಿ ಬರುವ ಧೈರ್ಯ ಅವರಿಗಾಗಲಿಲ್ಲ. ಗೌಡರು ಇದ್ದೂರವರು. ರಿಂದವ್ವನನ್ನು ಬಲ್ಲವರು. ಈ ಮನೆಯ ಮಂಗಳಕ್ಕಾಗಿ ಅವಳು ದೇಹ ತೇಯುತ್ತಿದ್ದ ಬಗೆಯನ್ನೂ ಅರಿತವರು. ಆ ಮನೆಯ ಮೇಲಿನ ಅಭಿಮಾನ ದಿಂದ ಅವಳು ತಮ್ಮ ದಾರಿಗಡ್ಡಾಗುವದನ್ನು ಕಂಡು ಅವರಿಗೆ ಆಶ್ಚರ್ಯವೆನಿಸಲಿಲ್ಲ.

ಸರಕಾರೀ ಹುಕುಂ ಬಜಾಯಿಸುವ ಭಾರ, ಸಾವುಕಾರರು ಕೆಲಸ ಮಾಡಿಸಿ ಕೊಟ್ಟರೆ ಕೊಡಮಾಡಿದ್ದ ಕಾಂಚಾಣ ಇವೆರಡರ ಸೆಳೆತ ಅವರನ್ನು ಎಳೆಯುತ್ತಿತ್ತು. ಆದರೂ ಹೆಂಗಸಿನ ಮೇಲೆ ಕೈ ಎತ್ತಲು ವಾಲೀಕಾರರಿಗೆ ಹುಕುಂ ಕೊಡುವಷ್ಟು ಧೈರ್ಯ ಅವರಲ್ಲಿ ಅಂಕುರಿಸಲಿಲ್ಲ. ದಾರಿಗಾಣದೆ, ಸಾವುಕಾರರ ಮುಖವನ್ನು

ಗೌಡರು, ಗೌಡರ ಮುಖವನ್ನು ಸಾವುಕಾರರು ನೋಡುತ್ತ ಸ್ತಬ್ಧವಾಗಿ ನಿಂತು ಬಿಟ್ಟರು. ಕೋರ್ಟಿನ ಹುಕುಂ ಬಜಾಯಿಸ ಬಂದಾಗಲೇ ಬೇಲೀಫನ ಕೈ ಬೆಚ್ಚಗಾಗಿತ್ತು. ಆ ಋಣ ತೀರಿಸುವ ಷಣದಿಂದ ಅವನೇ ಧೈರ್ಯವಾಗಿ ಮುನ್ನುಗ್ಗಿ ಬಂದು, ವಜ್ರ ಕಠಿಣಳಾಗಿ ನಿಂತ ರಿಂದವ್ವನನ್ನು ರಟ್ಟೆಹಿಡಿದು ಬದಿಗೆ ಜಗ್ಗಿ ನೂಗಿಸಿದ. ಆ ನೂಕಾಟಕ್ಕೆ ಜೋಲಿ ಹೋಗಿ, ತಲೆಬಾಗಿಲಿಗೆ ಕೂಡಿಸಿದ ಹಿತ್ತಾಳಿಯ ಅಣಸಿಗೆ ರಿಂದವ್ವನ ಹಣೆ ಬಡೆದು ಬಳಬಳನೆ ನೆತ್ತರು ಸುರಿಯತೊಡಗಿತು. ಕಣ್ಣಿಗೆ ಕತ್ತಲೆ ಬಂದು ರಿಂದಕ್ಕ ಅಲ್ಲೇ ಧೊಪ್ಪನೆ ಕುಸಿದು ಬಿದ್ದುಬಿಟ್ಟಳು. ನಡುಮನೆಯಲ್ಲಿ ನಿಂತು ಈ ಪ್ರಕಾಂಡ ನೋಡುತ್ತಿದ್ದ ಜಾನಕಿ 'ವೈನಿಸs' ಎಂದು ಕೂಗಿ ಓಡಿಬಂದು ಬಿದ್ದ ಅತ್ತಿಗೆಯ ತಲೆಯನ್ನು ತೊಡೆಯಮೇಲಿರಿಸಿಕೊಂಡು ಸೀರೆಯ ಸೆರಗಿನಿಂದ ಗಾಯವನ್ನು ಒತ್ತಿ, ರಕ್ತಸ್ರಾವವನ್ನು ಅದುಮಿ ಹಿಡಿಯಲು ಯತ್ನಿಸತೊಡಗಿದಳು. ಒದ್ದೆಯ ಅರಿವೆಯನ್ನು ತಂದು ಗೌಡ ಜಾನಕಿಯ ಕೈಯಲ್ಲಿ ಕೊಟ್ಟು, ಗಾಯವನ್ನು ಒತ್ತಿ ಹಿಡಿಯ ಹೇಳಿದ. ಉಳಿದವರು ಸುತ್ತು ನೆರೆದು ಈ ನೋಟ ನೋಡುತ್ತಿದ್ದರು. ಆಯಾಸದಿಂದ ಕಣ್ಣು ಬಿಟ್ಟು ರಿಂದವ್ವ—

'ಜಾನಕೀ, ಋಣಾ ಮುಗೀತವಾ ಈ ಮನೀದು. ಆಷಾಡ ಏಕಾದಶೀ ವೈಕುಂಠದ ಕರೀ ಬಂತು. ರಾಘಣ್ಣ ಬರಲಿಲ್ಲ.'

ಎಂದು ಕೇಳಿದಳು. ಅವಳ ಮುಖದ ಮೇಲೆ ಜಾನಕಿಯ ಎರಡು ಬಿಸಿ ಕಂಬನಿ ಉದುರಿ ಕೊನೆಯ ತರ್ಪಣ ಕೊಟ್ಟವು. ರಿಂದವ್ವನ ಗೋಣು ಹೊರಳಿ ಬದಿಗಾಗುತ್ತಿದ್ದಾಗ ರಾಘಣ್ಣ ತಲೆಯ ಮೇಲಿನ ಮುಂಡಾಸವನ್ನು ಬಗಲಲ್ಲಿರಿಸಿಕೊಂಡು ವಾಲೀಕಾರನನ್ನು ಮುಂದೆ ಮಾಡಿಕೊಂಡು, ಅಧೋವದನನಾಗಿ ಅಂಗಳದಲ್ಲಿ ನಡೆದು ಬರುತ್ತಿದ್ದ.

ರಿಂದವ್ವ ಅವನನ್ನು ಒಮ್ಮೆ ಕಂಡು ಕಣ್ಮುಚ್ಚಿದಳು.

—ರಾಮಚಂದ್ರ ಕೊಟ್ಟಲಗಿ.

# ಜಾಗೀರಿಯ ದಿಂಬು

ಕೇಶಪ್ಪನಿಗೆ ನಿದ್ರೆಯೇ ಬಂದಿಲ್ಲ. ರಾತ್ರಿ ಎರಡು ಗಂಟೆಯಾಗಿದೆ. ತನ್ನ ಜೀವನದ ಈ ಸಂಧ್ಯಾಕಾಲದಲ್ಲಿ ಹಿಂದಿನ ಘಟನೆಗಳು ಒಂದೊಂದಾಗಿ ಚಿತ್ರಭಿತ್ತಿಯ ಮೇಲೆ ಚಿತ್ರಿತವಾಗಿ ಸರಿಯುತ್ತಿವೆ.

ಕೊಪ್ಪದ ಜಾಗೀರಿಯಲ್ಲಿ ಬಂದು ಊಳಿಗಕ್ಕೆ ನಿಂತಾಗ ಮೈಮೇಲೆ ಚಿಂದಿ ಬಟ್ಟೆ. ಮನೆಯಲ್ಲಿ ಗಡಿಗೆ-ಮಡಕೆಗಳೇ ಪಾತ್ರೆ-ಪಡಗ. ದಿಕ್ಕಿಲ್ಲದೆ ದೇಸೂರನ್ನು ಬಿಟ್ಟುಬಂದು ಜಾಗೀರದಾರರಲ್ಲಿ ಕಮತದ ಮೇಲ್ವಿಚಾರಕನೆಂದು ನಿಂತದ್ದು, ಅದೇ ವರುಷ ಮಳೆ-ಗಾಳಿಗಳ ಅನುಕೂಲದಿಂದ ಫಸಲು ಚೆನ್ನಾಗಿ ಬಂದದ್ದು, ಜಾಗೀರಿಯ ಕಣಜಗಳೆಲ್ಲ ತುಂಬಿ ತನ್ನ ಮೇಲ್ವಿಚಾರಣೆಯ ತಾರೀಫು ನಡೆದದ್ದು, ಜಾಗೀರದಾರರಿಂದ ಭಲೆ ಎನ್ನಿಸಿಕೊಂಡು ಹತ್ತು ಎಕರೆ ಜಮೀನು ಉಂಬಳಿಯಾಗಿ ಪಡೆದದ್ದು-ಒಂದೊಂದಾಗಿ ಕಣ್ಣುಮುಂದೆ ಸರಿದವು.

* * * *

ಹರೆಯದ ಜಾಗೀರದಾರ ಬಾಬಾಸಾಹೇಬ ಗರಡಿಯಾಳು. ತನ್ನ ಪ್ರಾಯದ ಕೇಶಪ್ಪನಿಗೆ ಚೆನ್ನಾಗಿ ತಿನ್ನಿಸಿ, ತಾನೂ ತಿಂದು ದಿನವೂ ಅವನೊಡನೆ ಗರಡಿಸಾಧನೆ ಮಾಡುವರು. ಇಬ್ಬರೂ ಒಳ್ಳೇ ಜೋಡಿಯಾಗಿ ಮೆರೆಯುವರು. ಬರಬರುತ್ತ ಕೇಶಪ್ಪ ಜಾಗೀರದಾರರಲ್ಲಿಯೇ ಇರತೊಡಗಿದ. ಅವರ ಮನೆಯ ಒಳ-ಹೊರಗಿನ ಕಾರಭಾರವೂ ಇವನಿಂದಲೇ ನಡೆಯಲಾರಂಭಿಸಿತು. ಕೇಶಪ್ಪನ ಹೆಂಡತಿ ಕಮಲವ್ವ ತನ್ನ ಚಿಂದಿ ಬಟ್ಟೆಯನ್ನು ಕಟ್ಟಿಟ್ಟು ರೇಶ್ಮೆ ಅಂಚಿನ ಸೀರೆ ಉಟ್ಟಳು. ಗಂಡನ ಗೌರವದ ಗುರುತೆಂದು ಹಣೆತುಂಬ ಕುಂಕುಮ ಇಟ್ಟುಕೊಂಡ ಆ ಮುತ್ತೈದೆ ಗೌರಿಯಂತೇ ಕಂಡಳು.

ದೇಸೂರಿಂದ ಬರುವಾಗ ಇಬ್ಬರೇ ಮಕ್ಕಳು. ಕೊಪ್ಪಕ್ಕೆ ಬಂದ ಮರು ವರುಷ ಕಮಲವ್ವ ಒಂದು ಗಂಡು, ಒಂದು ಹೆಣ್ಣು-ಹೀಗೆ ಅವಳಿ ಮಕ್ಕಳನ್ನು ಹೆತ್ತಳು. ದೇಸೂರಿನಲ್ಲಿ ಎರಡೂ ಹೆರಿಗೆಯ ಕಾಲಕ್ಕೆ ಹೊಟ್ಟೆತುಂಬ ನುಚ್ಚಿಗೂ ಗತಿ ಇದ್ದಿಲ್ಲ. ಇಲ್ಲೀಗ ಹಾಲು-ತುಪ್ಪದಲ್ಲಿ ಕೈತೊಳೆದಳು. ಜಾಗೀರದಾರತಿ ಮಾಯಿಸಾಹೇಬ ಸ್ವಂತ ನಿಂತು ಇವಳ ಬಾಣಂತಿತನ ಮಾಡಿಸಿದಳು.

* * * *

ಪ್ಲೇಗು ಬಂದು ಏಕಾಏಕಿ ಬಾಬಾಸಾಹೇಬ ಹೊರಟು ಹೋದರು, ಜೀವ

ಬಿಡುವಾಗ ಕೇಶಪ್ಪನನ್ನು ನೆನಸಿದರು. ಅವನು ಜಾಗೀರಿ ಕೆಲಸದ ಮೇಲೆಯೇ ತಾಲೂಕಿಗೆ ಹೋಗಿದ್ದ. ಮಕ್ಕಳಿಲ್ಲದ ಮಾಯಿಸಾಹೇಬ ಗತಿಯೇನೆಂದು ಗೋಳಿಟ್ಟಳು. ಕೇಶಪ್ಪ ತಾನೂ ಮತ್ತೆ ಗತಿಗೇಡಿಯಾದೆನೆಂದು ಕೊರಗಿದ.

ಕೇಶಪ್ಪನೇ ಮಾಯಿಗೆ ಧೈರ್ಯ ಹೇಳಬೇಕಾಯಿತು.

'ಬಾಬಾಸಾಹೇಬರ ತುತ್ತು ಅನ್ನ ನನ್ನ ಹೊಟ್ಟೆ ಸೇರಿದೆ. ನಿಮ್ಮ ಐದು ಬೆರಳು ನನಗೆ ಅಮೃತ ನೀಡಿವೆ. ನನ್ನ ಸೇವೆಯನ್ನು ಸ್ವೀಕರಿಸಬೇಕು.'

—ಎಂದು ಕೇಳಿಕೊಂಡ.

ಮಾಯಿಯ ತವರುಮನೆಯಿಂದ ಮಲ ಅಣ್ಣ ಬಂದಿದ್ದ. ಮಾಯಿಯನ್ನು ತನ್ನಲ್ಲಿಗೇ ಕರೆದ. ಮಾಯಿ ಹೋಗಲಿಲ್ಲ.

ಬಾಬಾಸಾಹೇಬರ ಸೋದರಮಾವ ಬಂದು, ತಾನೇ ನಿಂತು ಎಲ್ಲ ವ್ಯವಸ್ಥೆ ನೋಡುತ್ತೇನೆಂದ. ಮಾಯಿ ಮಾತಾಡಲಿಲ್ಲ. ಬಂದ ಇತರ ಆಪ್ತವರ್ಗ ಯಾವ ನಂಬಿಗೆಯನ್ನೂ ಕಾಣದೆ ಕಾಲಹಾಕಿದರು. ಕೇಶಪ್ಪ ಹೊಲ-ಮನೆ ನೋಡುತ್ತಲೇ ಇದ್ದ. ಅದೇ ಆಳು-ಕಾಳು; ಅದೇ ಕರಣಿಕವರ್ಗ. ಕೆಲಸ ಎಂದಿನಂತೆ ನಡೆದಿತ್ತು.

ಮಾಯಿಯ ಅಣ್ಣ ಕ್ರುದ್ಧನಾಗಿ ಹೊರಟು ಹೋದ. ಬಾಬಾಸಾಹೇಬರ ಸೋದರಮಾವ ಕೃಷ್ಣಶಾಸ್ತ್ರಿಗೆ ಇನ್ನೂ ಆಸೆಯಿತ್ತು. ಬಾಬಾ ಸಣ್ಣವನಿದ್ದಾಗ ಅವನು ಇಲ್ಲೇ ನಿಂತು ಹೊಲ-ಮನೆ ನೋಡಿಕೊಂಡಿದ್ದ. ತಾಯಿ-ತಂದೆ ಇಲ್ಲದ ಬಾಬಾಸಾಹೇಬನಿಗೆ ಅವನೇ ನೆರೆಯಾಗಿದ್ದ. ಅಲ್ಪವಯಿ ಸಂರಕ್ಷಣದಾರನೆಂದು ಸರಕಾರ ಇವನನ್ನೇ ಗೊತ್ತುಮಾಡಿ ಜಾಗೀರಿಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡಿತ್ತು. ಬಾಬಾಸಾಹೇಬ ವಯಸ್ಸಿಗೆ ಬಂದಾಗ ಕೃಷ್ಣಶಾಸ್ತ್ರಿ ಈ ಮಾಯಿಯನ್ನು ವಧುವಾಗಿ ಆರಿಸಿ ಮದುವೆ ಮಾಡಿದ್ದ. ಜಾಗೀರಿ ಬಾಬಾಸಾಹೇಬನ ವಶಕ್ಕೆ ಬಂದಾಗ ಅವರ ತಾಯಿಯ ಮೈಮೇಲಿದ್ದ ಬಂಗಾರ, ವಸ್ತ್ರ-ಒಡವೆ, ಮನೆಯ ಪಾತ್ರೆ-ಪರಡಿಗಳನ್ನೆಲ್ಲ ಕೃಷ್ಣಶಾಸ್ತ್ರಿ ತನ್ನ ಮನೆಗೆ ಸಾಗಿಸಿದ್ದ. ಶಾಸ್ತ್ರಿಯೇ ಅವಳ ಅಣ್ಣ.

ಬಾಬಾಸಾಹೇಬನ ಕೈಗೆ ಬಂದದ್ದು ಬರೀ ಹೊಲ ; ಬರೀ ಮನೆ. ಸರಕಾರದಲ್ಲಿದ್ದ ಹತ್ತು ಸಾವಿರ ರೂಪಾಯಿ ಇನ್ನೂ ಕನ್ನಡಿಯ ಗಂಟಾಗಿತ್ತು. ಶಾಸ್ತ್ರಿ ಐದು ಸಾವಿರ ಮದುವೆಯ ಸಾಲ ಹೇರಿದ್ದ. ಮಾಯಿ ತನ್ನ ಮನೆಯಿಂದ ತಂದ ಪಂಥೀರು ಬಂಗಾರ ಮಾತ್ರ ಅವಳ ಮೈಮೇಲಿತ್ತು.

ಜಾಗೀರಿ ವಾಡೆ ಸುತ್ತಲೂ ಬಿದ್ದಿತ್ತು. ಕೊಟ್ಟಿಗೆಯಲ್ಲಿ ಬರೀ ಮುದುಕ ದನಗಳು. ಕಮತಿಗರು ಇಲಿಯಾಗಿ ಹೆಗ್ಗಣವಾಗಿ ಮನೆ ಕೆದರಿದ್ದರು.

ಕೃಷ್ಣಶಾಸ್ತ್ರಿ ನೋಡಿಕೊಂಡದ್ದು ಹೀಗೆ. ಜಾಗೀರಿಯ ಗೌರವ ಮಾತ್ರ ಅವನಿಂದ ಅಳಿಸುವದಾಗದೆ ಉಳಿದಿತ್ತು.

ಆಗಲೇ ಕೇಶಪ್ಪ ದೇಸೂರಿನಿಂದ ಬಂದದ್ದು ; ಕಮತಿಗರ ಮೇಲ್ವಿಚಾರಕನಾಗಿ ನಿಂತದ್ದು. ಬೆಳೆ ಬರುತ್ತಲೇ ಇತ್ತು. ಮನೆ ದುರಸ್ತಾಯಿತು. ಮುಂಚಿನ ಪಾತ್ರೆ-ಪಡಗ ಎಲ್ಲಾ ಶಾಸ್ತ್ರಿಯ ಮನೆಯಿಂದ ಹೇರಿಕೊಂಡು ತಂದಾಯಿತು. ಹದಿನಾರೆತ್ತಿನ ಕಮತ ನಡೆಯಿತು. ಹೆಗ್ಗಣ-ಮುಂಗಲಿಗಳೆಲ್ಲ ಓಡಿದವು. ಶಾಸ್ತ್ರಿ ಬಂದು ಹೋಗುವುದನ್ನೂ ನಿಲ್ಲಿಸಿದ್ದ. ಬಾಬಾಸಾಹೇಬರಿಗೆ ಈ ಕೇಶಪ್ಪ ಅಣ್ಣನಂತೆ, ಹಿರಿಯನಂತೆ ಬೆಂಬಲವಾಗಿದ್ದ. ಕೇಶಪ್ಪ ಕೇಶಣ್ಣನಾಗಿಯೇ ಗೌರವ ಪಡೆದ. ಆದರೆ ಬಾಬಾಸಾಹೇಬರೊಡನೆ ಅವನು ಯಜಮಾನನ ಗೌರವದಿಂದಲೇ ನಡೆದ. ಆಳೆಂದೇ ತಿಳಿದ. ಅವರು ಕೈಎತ್ತಿ ಕೊಟ್ಟುದನ್ನು ಪ್ರಸಾದವೆಂದು ಮುಡಿದ. ಹೊರಗೆ ಬಾಬಾಸಾಹೇಬರ ನೆರಳಾಗಿ ಸುಳಿದ. ಮನೆಯಲ್ಲಿ ತುದಿಗಟ್ಟೆಯೇ ತನ್ನ ಸ್ಥಳವೆಂದು ತಿಳಿದ.

ಮಾಯಿಯ ಅಣ್ಣ ಕ್ರುದ್ಧನಾದದ್ದು ತಂಗಿಯ ಮೇಲಾದರೆ, ಶಾಸ್ತ್ರಿ ಜಾಲ ಒಡ್ಡಿದ್ದು ಕೇಶಪ್ಪನ ಬೇಟೆಗಾಗಿ.

ಶಾಸ್ತ್ರಿ ತಾನೇ ಮೇಲ್ವಿಚಾರಕನೆಂಬಂತೆ, ಒಡೆಯನೆಂಬಂತೆ ದಿನದಿನವೂ ಕೇಶಪ್ಪನನ್ನು ಕೆಲಸ-ಕಾರ್ಯಗಳ ಬಗ್ಗೆ ಕೇಳುತ್ತಿದ್ದ ; ಕೇಶಪ್ಪ ಮಾಡಿದ್ದನ್ನು-ಮಾಡಬೇಕೆಂದದ್ದನ್ನು ಹೇಳುತ್ತಲಿದ್ದ.

ಆಗ ಕೇಶಪ್ಪ ಹೊರಗೆ ಬೇರೆಯೇ ಮನೆ ಮಾಡಿಕೊಂಡಿದ್ದ.

ಒಂದು ದಿನ ಸಾಯಂಕಾಲ ಕೇಶಪ್ಪ ಪಡಸಾಲೆಯ ತನ್ನ ಮಾಮೂಲಿಯ ಸ್ಥಳದಲ್ಲಿ ಕುಳಿತು ಎಲೆ-ಅಡಿಕೆ ಮೆಲ್ಲುತ್ತಿದ್ದ. ಅಂದು ಸೋಮವಾರ. ದನಗಳು ಮನೆಯಲ್ಲಿಯೇ ಇದ್ದವು. ಕಮತಿಗರು ಅಂಗಳದಲ್ಲಿ ಕುಳಿತಿದ್ದರು. ಶಾಸ್ತ್ರಿ ಒಳಗಿನಿಂದ ಬಂದು ಯಜಮಾನರ ಸ್ಥಳದಲ್ಲಿ ಕುಳಿತ.

ಯಜಮಾನರು ತೀರಿಕೊಂಡು ಎರಡು ತಿಂಗಳಾಗಿತ್ತು. ಆ ಸ್ಥಳ ಎಂದರೆ ಒಂದು ಗಾದಿ; ಒಂದು ದಿಂಬು. (ಲೋಡು; ತೆಕ್ಕೆ.) ದಿನವೂ ಅದನ್ನು ಕೊಡವಿ ಹಾಸಿ ಇಡಲಾಗುತ್ತಿತ್ತು. ಆದರೆ ಅದರ ಮೇಲೆ ಬೇರೆ ಯಾರೂ ಕುಳಿತಿದ್ದಿಲ್ಲ.

ಶಾಸ್ತ್ರಿ ಬಂದು ನಿಂತು ಇಷ್ಟು ದಿನವಾದರೂ ಆ ಗಾದಿಯ ಬಳಿ ಸುಳಿದಾಡಿದ್ದನಾಗಲಿ, ಅದರ ಮೇಲೆ ಕುಳಿತಿದ್ದಿಲ್ಲ. ಇಂದು ಅವನು ಬಂದು ಅದರಮೇಲೆ ಕೂಡುತ್ತಲೇ ಕೇಶಪ್ಪ ಕಣ್ಣು ಕೆಕ್ಕರಿಸಿ ನೋಡಿ,

'ಶಾಸ್ತ್ರಿಯವರು ಅಲ್ಲಿ ಕೂಡಬಹುದೇ ?' ಎಂದ.

'ಏನು ಮಾತು, ನಾನಿಲ್ಲಿ ಕೂಡಲಾಗದೆ ?' ಶಾಸ್ತ್ರಿ ಉತ್ತರಿಸಿದ.

'ಅದು ಯಜಮಾನರ ಸ್ಥಳ. ಅಲ್ಲಿ ಯಾರು ಕೂಡಬೇಕೆಂದು ಮಾಯಿಯವರೇ ಗೊತ್ತುಮಾಡಬೇಕು.'

'ಅವರೇನು ಮಾಡುತ್ತಾರೆ ? ದುಃಖದಿಂದ ಇನ್ನೂ ಮೇಲೇಳಲಿಲ್ಲ ಅವರು.'

'ಈಗ ಬೇಡವೇ ಬೇಡ. ಅವರು ಎಂದಾದರೆ ಅಂದು ಒಬ್ಬರನ್ನು ಅದರ ಮೇಲೆ ಕೂಡಿಸಲಿ.'

'ನಾನು ಹಿಂದೆ ಇದರ ಮೇಲೆ ಕೂತಿದ್ದೆ. ಇಂದಾದರೂ ಕೂಡಬಲ್ಲೆ.'

'ಆಗ ಯಜಮಾನರಿದ್ದರು; ಅವರ ಪರವಾಗಿ ಕೂತಿರಬಹುದು.'

'ಇಂದೂ ನಾನೇ ಕೂಡುವವ.'

'ಹಾಗೆ ಮಾಯಿ ಹೇಳುವವರೆಗೆ ನೀವು ಇಲ್ಲಿ ಕೂಡಲಾಗದು ಶಾಸ್ತ್ರಿಗಳೆ.'

'ನೀನು ಕೂಡಬೇಕೆನ್ನುತ್ತೀಯೇನು ?'

'ನನ್ನ ಸ್ಥಳವೆಲ್ಲಿಯೆಂದು ನೀವು ನನಗೆ ಹೇಳಬೇಕಾಗಿಲ್ಲ.'

'ನೀನು ಅದಕ್ಕೂ ಇಂದಿನಿಂದ ಎರವಾದಿ.'

'ಶಾಸ್ತ್ರಿಗಳೆ, ಈ ಗೊಂದಲ ಈಗ ಬೇಡ. ಯಜಮಾನರು ತೀರಿ ಇನ್ನೂ ಎರಡು ತಿಂಗಳಾಗಿಲ್ಲ. ಈಗಲೆ ಮಾಯಿ ಸಾಹೇಬರನ್ನು ಗೋಳಾಡಿಸಬೇಡಿರಿ.'

'ಸಾಕು ನಿನ್ನ ಹರಟೆ ! ತೊಲಗಿಲ್ಲಿಂದ !'

'ಶಾಸ್ತ್ರಿಗಳೆ !'

'ಹೊರಡು ಎನ್ನುತ್ತೇನೆ—'

'ಆಯಿತು; ಮಾಯಿಯವರಿಂದ ಒಮ್ಮೆ ಹೇಳಿಸಿಬಿಡಿರಿ.'

'ನಾನು ಹೇಳುತ್ತೇನೆ.'

'ಅದಾಗುವದಿಲ್ಲ ಶಾಸ್ತ್ರಿಗಳೆ; ನೀವು ಅಲ್ಲಿಂದ ಈಗ ಏಳಬೇಕು' ಎನ್ನುತ್ತ ಕೇಶಪ್ಪ! ತನ್ನ ಸ್ಥಳ ಬಿಟ್ಟು ಎದ್ದ. ಕಣ್ಣಲ್ಲಿ ಕಿಡಿ ಹಾರುತ್ತಿತ್ತು. ಎದ್ದವನು ಒಂದೊಂದೇ ಹೆಜ್ಜೆ ಇಡುತ್ತ ಶಾಸ್ತ್ರಿಗಳ ಎದುರು ಬಂದು ನಿಂತ.

'ಹೂ—ಏಳಿರಿ.'

'ಏನು ಹೊಡೆಯುತ್ತೀಯಾ ?'

'ಇಲ್ಲ, ಹೊರಡಿಸುತ್ತೇನೆ.'

ಅಂಗಳದಲ್ಲಿ ಕುಳಿತಿದ್ದ ಕಮತಿಗರು ಎದ್ದು ನಿಂತಿದ್ದರು.

ಬಾಗಿಲಲ್ಲಿ ಮಾಯಿ ಕಾಣಿಸಿಕೊಂಡರು. ಇನ್ನೂ ಮಧ್ಯ ವಯಸ್ಸೂ ಇಲ್ಲ. ಚಿಂತೆಯಿಲ್ಲದೆ ಬೆಳೆದ ಸುಖದ ಮೈ. ಆದರೆ ಹಸಿರು ಹಣೆ. ಬಾಡಿ ಬತ್ತಿದ ಮುಖ. ಒಂದು ಬಿಳಿಯ ದುಪ್ಪಟಿ ಹೊದ್ದುಕೊಂಡು ಬಾಗಿಲಲ್ಲಿ ನಿಂತದ್ದನ್ನು ಮೊದಲು ಕಮತಿಗರು ನೋಡಿದರು. ನೆಲಮುಟ್ಟಿ ಕೈಮುಗಿದರು.

ಕೇಶಪ್ಪ ನೋಡಿದ. ಅಡ್ಡಬಿದ್ದು ಹಿಂದೆ ಸರಿದ.

ಮಾಯಿ ನಿಧಾನವಾಗಿ ಹೇಳಿದರು:

'ಕೇಶಪ್ಪ, ಶಾಸ್ತ್ರಿಯವರಿಗೆ ಹೇಳು : ಯಜಮಾನರನ್ನು ಅವರೇ ಸಂರಕ್ಷಣ ಮಾಡಿದರು ; ನನ್ನನ್ನು ತಂದು ಮದುವೆಯನ್ನೂ ಮಾಡಿದರು. ನನ್ನ ದುರದೃಷ್ಟ— ಇವರನ್ನು ಕಳೆದುಕೊಂಡೆ. ಇನ್ನೂ ನನ್ನೆದೆಯ ಕಿಚ್ಚು ಆರಿಲ್ಲ; ಅದು ಆರುವಂತೆಯೂ ಇಲ್ಲ. ಯಜಮಾನರ ವರ್ಷಾಂತಿಕವಾಗಲಿ. ಈ ಜಾಗೀರಿ ಎಲ್ಲರಿಗೂ ಬೇಕು. ನಾನು ಯಾರಿಗೆ ಬೇಕಾಗಿದ್ದೇನೆ-ಎಂಬುದನ್ನು ಬಲ್ಲೆ ನಾನು. ನನಗೆ ತವರಿಗೆ ಹೋಗುವದೂ ಇಷ್ಟವಿಲ್ಲ. ಇಲ್ಲಿ ನಾನಿದ್ದೂ ಪ್ರಯೋಜನವಿಲ್ಲ. ನಾನು ಕಾಶಿಗೆ ಹೋಗಿ ಅಲ್ಲೇ ಇರುತ್ತೇನೆ. ನನ್ನ ಜೀವಮಾನಕ್ಕೆ ಸಾಲುವಷ್ಟು, ನನ್ನ ಧರ್ಮಕಾರ್ಯ ನಡೆಯುವಷ್ಟು ದೊರೆತರೆ ಸಾಕು ನನಗೆ. ಮುಂದೆ ಯಾರ ಋಣವಿದೆಯೋ ಅವರು ತಿನ್ನಲಿ. ವರ್ಷಾಂತಿಕವಾಗುವವರೆಗೆ ಯಜಮಾನರ ಸ್ಥಳ ತೆರವಾಗಿಯೇ ಇರಲಿ. ಅವರ ಜೀವ ಇಲ್ಲೇ ಇದ್ದು ಅದನ್ನು ನೋಡಿಕೊಳ್ಳಲಿ. ಮುಂದೆ ಈ ಸ್ಥಳವನ್ನಲ್ಲದೆ ಹೋದರೂ ಆ ಗಾದಿ, ದಿಂಬು ನನ್ನ ಜತೆಯಲ್ಲಿ ಒಯ್ಯುತ್ತೇನೆ. ಅವರೆಗೆ ಈಗ ನಡೆದಂತೆಯೇ ನಡೆಯಲಿ-ಎಂದು ನನ್ನ ಆಸೆ. ನೀವೆಲ್ಲ ಕೂಡಿ ನಡಸಿಕೊಟ್ಟರೆ ಅದೇ ನನ್ನ ಪುಣ್ಯ.........'

ಅಂಗಳದಲ್ಲಿದ್ದ ಕಮತಿಗರು, ತುದಿಗಟ್ಟೆಯ ಮೇಲಿದ್ದ ಕೇಶಪ್ಪ ನಿಂತು ಕೇಳುತ್ತ ಕಂಬನಿಗರೆದರು. ಕೃಷ್ಣಶಾಸ್ತ್ರಿ 'ಇದು ತನಗೆ ಮೀರಿದ ಕಾರಸ್ಥಾನವೇ ?' ಎಂದುಕೊಂಡು ಥಿಗ್ಗನೆ ಅಲ್ಲಿಂದೆದ್ದು ಕಾಲಪ್ಪಳಿಸುತ್ತ ಒದರಿದ:

'ನನ್ನ ತಂಗಿಯ ಮನೆ ಉಳಿಸಬೇಕೆಂದೆ; ನನ್ನ ಸಥಿಯೇ ಇಲ್ಲ. ಹಾಳಾಗಿ ಹೋಗಲಿ' ಎನ್ನುತ್ತ ಹೊರಬಿದ್ದು ಹೋದ.

ಮುಂದೆಯೂ ಎಲ್ಲ ಕೆಲಸಕಾರ್ಯ ಮುಂಚಿನಂತೆ ನಡೆದವಾದರೂ ಕೃಷ್ಣ ಶಾಸ್ತ್ರಿಯ ಕಾಲದ ರೈತರು, ಕಮತಿಗರು, ಪ್ರತಿಯೊಂದಕ್ಕೆ ಅಡ್ಡಗಾಲು ಹಾಕಿದರು. ಹೊಲದಲ್ಲಿಯ ರಾಶಿ ಮನೆಗೆ ಸೇರಲಿಲ್ಲ. ಬಣವೆಗಳು ಸುಟ್ಟವು. ಒಂದು ರಾತ್ರಿ ಜಾಗೀರಿ ವಾಡೆ ದರೋಡೆಯಾಯಿತು. ಮಾಯಿ ತವರಿನಿಂದ ತಂದ ಬಂಗಾರವೂ ಕಳ್ಳರ ವಶವಾಯಿತು. ಕೇಶಪ್ಪ ದಿಡ್ಡಿ ಬಾಗಿಲದಿಂದ ಮಾಯಿಯನ್ನು ಪಾರು ಮಾಡದಿದ್ದರೆ ಅವರ ಗತಿ ಏನಾಗುತ್ತಿತ್ತೋ—ಏನೋ !

ಮಾಯಿ ಕೇಶಪ್ಪನಲ್ಲಿಯೇ ನಿಂತು, ಸರಕಾರಕ್ಕೆ ಬರೆದುಕೊಂಡು 'ಮುಂಚಿನಂತೆ ಎಲ್ಲಾ ಆಸ್ತಿ ಸರಕಾರದ ವಹಿವಾಟಿನಲ್ಲಿ ನಡೆಯಲಿ. ನನ್ನ ಖರ್ಚಿಗೆ ಸರಕಾರದಿಂದಲೇ ನನ್ನ ಜೀವಮಾನದವರೆಗೆ ದೊರೆತರೆ ಸಾಕು' ಎಂದು ಬೇಡಿಕೊಂಡಳು.

ಸರಕಾರ ಆ ವ್ಯವಸ್ಥೆಯನ್ನು ಕೂಡಲೆ ಒಪ್ಪಿಕೊಂಡು ಮಾಯಿ ಸಾಹೇಬರಿಗೆ ತಿಂಗಳೊಂದಕ್ಕೆ ಒಂದು ಸಾವಿರ ರೂಪಾಯಿ ಇದ್ದಲ್ಲಿಂದ ಪಡೆಯುವ ಮಾರ್ಗ ಮಾಡಿ ಕೊಟ್ಟಿತು.

ಸರಕಾರದ ರಕ್ಷೆಯಲ್ಲಿಯೇ ಮಾಯಿ ಯಜಮಾನರ ಗಾದಿ-ದಿಂಬು ಪಡೆದುಕೊಂಡು ಕಾಶಿಯಲ್ಲಿ ನೆಲಸಲು ತೆರಳಿದಳು.

ಕೇಶಪ್ಪ ಕಳಿಸಹೋಗಿದ್ದ. ಜತೆಯಲ್ಲಿ ಮಾಯಿಯವರ ಸೇವೆಗೆ ತನ್ನ ಮಗಳ ನ್ನಿರಿಸಿದ. ಹಿರಿಯ ಕಮತಿಗ ಧರ್ಮಣ್ಣ ಯಜಮಾನಿತಿಯ ರಕ್ಷೆಗೆಂದು ತೆರಳಿದ. ಕೇಶಪ್ಪ ತಿರುಗಿ ಬರಲು ಮಾಯಿಯ ನಿರೋಪ ಬೇಡಿದಾಗ ಅವನಿಗೆ ದುಃಖ ತಡೆಯಲಿಲ್ಲ. 'ಅಪ್ಪಣೆಯಾದರೆ ನಿಮ್ಮ ಸೇವೆ ನಾನೇ ಮಾಡಿಕೊಂಡಿರುತ್ತೇನೆ—' ಎಂದು ಅಂದ. ಅದಕ್ಕೆ ಮಾಯಿ,

'ಬೇಡ, ಕೇಶಪ್ಪ. ಮತ್ತೆ ನನಗೆ ಹಿಂದಿನ ಜಾಗೀರಿ ನೆನಪು, ಮೋಹ ನೀನಿದ್ದರೆ ಕಾಡುತ್ತವೆ. ನೀನು ಮಕ್ಕಳೊಂದಿಗೆ ಎಲ್ಲಾದರೂ ದುಡಿದುಕೊಂಡಿರು. ನಿನಗೆ ನಾನು ಆಶ್ರಯ ಕೊಡಲಾರೆ; ನಿನ್ನ ಆಶ್ರಯ ಪಡೆಯಲಾರೆ. ಯಜಮಾನರಿಗೆ ನಾನು ಧರ್ಮಪತ್ನಿಯಾಗಿ ಬಂದೆ. ನೀನು ಅಣ್ಣನಾಗಿ ಅವರನ್ನು ನೋಡಿಕೊಂಡಿ. ನಮ್ಮಿಬ್ಬರದೂ ದುರ್ದೈವ. ಅವರನ್ನು ಉಳಿಸಿಕೊಳ್ಳಲಾರದೆ ಹೋದೆವು. ಅವರಿಗೆ ನನ್ನ ಮೇಲಿರುವಷ್ಟೆ ನಿನ್ನಲ್ಲಿ ಪ್ರೀತಿಯಿತ್ತು, ವಿಶ್ವಾಸವಿತ್ತು. ಅದಕ್ಕಿಂತ ಹೆಚ್ಚಿನ ಅಭಿಮಾನವಿತ್ತು; ಆದರವಿತ್ತು. ಆದ್ದರಿಂದ ಅವರ ಆಸ್ತಿ-ಪಾಸ್ತಿ ಕಾಯ್ದೆಯಿಂದ ನನ್ನವಾಗಿದ್ದರೂ ಕರ್ತವ್ಯದಿಂದ ನೀನೂ ಭಾಗೀದಾರನಾಗಿರುವಿ. ನಮ್ಮ ಬಳಗದವರ ಈರ್ಷೆಯಿಂದ ಅದು ನನಗೂ ನಿನಗೂ ದಕ್ಕುವಂತಿರಲಿಲ್ಲ. ಆದರೆ

ನಮ್ಮಲ್ಲಿಯ ವಿಶ್ವಾಸವನ್ನು ಯಾರು ಅಪಹರಿಸಿಯಾರು ? ನೋಡು, ಈಗ ಯಜಮಾನರ ಗುರುತಾಗಿ ನನ್ನಲ್ಲಿ ಉಳಿದಿರುವುದು ಈ ಗಾದಿ, ಈ ದಿಂಬು ಮಾತ್ರ; ಅದರಲ್ಲಿ ಒಂದು ನನಗಿರಲಿ; ಒಂದನ್ನು ನೀನೊಯ್ಯಬೇಕು. ಗಾದಿಯನ್ನು ಸ್ವತಃ ಅವರೇ ಎಂದು ತಿಳಿದು ನಾನು ಇಟ್ಟುಕೊಳ್ಳುತ್ತೇನೆ. ದಿಂಬು ಅವರ ಆಶ್ರಯವೆಂದು ನಿನ್ನ ತಲೆಗಿರಲಿ' ಎಂದಳು.

ಕೇಶಪ್ಪ ಈ ವಿಶ್ವಾಸವನ್ನು ನಿರಾಕರಿಸಲಿಲ್ಲ. ಮಾಯಿಯ ಮಾತು ಶಿರಸಾ ವಹಿಸಿ ಭರತ ಪಾದುಕೆ ಒಯ್ದಂತೆ ದಿಂಬನ್ನು ಕೊಂಡುಬಂದ.

ಆ ದಿಂಬನ್ನು ಪ್ರಕಟವಾಗಿ ಇರಿಸಿ ಪೂಜಿಸಲಾರ, ಕೇಶಪ್ಪ. ಮತ್ತೆ ಜನರ ಕಣ್ಣು ತಾಗಿ, ಕೃಷ್ಣಶಾಸ್ತ್ರಿಯ ಕಾರಸ್ಥಾನಕ್ಕೆ ತುತ್ತಾಗಬೇಕಾದೀತೆಂದು ಮಾಯಿಯವರ ಹೇಳಿಕೆಯಂತೆ ಅದನ್ನು ದಿಂಬಾಗಿಯೇ ಉಪಯೋಗಿಸಿದ.

* * * *

ಕೇಶಪ್ಪನಿಗೆ ಜಾಗೀರಿ ಊರಲ್ಲಿ ಈಗ ಕೆಲಸ ಉಳಿದಿಲ್ಲ. ಅವನು ಇಲ್ಲಿ ಇರುವನಾದರೆ ಮರ್ಯಾದೆಯೂ ಉಳಿಯುವಂತಿಲ್ಲ. ತನ್ನ ದೇಸೂರಿಗೆ—ಮರಳಿ ಮಣ್ಣಿಗೇ—ಹೊರಟು ಬಂದ. ಜಾಗೀರಿಯಿಂದ ವಿಶ್ವಾಸದಲ್ಲಿ ಗಳಿಸಿದ ಅಲ್ಪ ಅನುಕೂಲದಿಂದ ಕಮತ-ಕಟ್ಟೆ ಮಾಡಿಕೊಂಡು ನಿಂತ.

* * * *

ಯಜಮಾನರ ವರ್ಷಾಂತಿಕಕ್ಕೆ ತಪ್ಪದೇ ಕೇಶಪ್ಪ ಕಾಶಿಗೆ ಹೋಗಿ ಬರುತ್ತಿದ್ದ. ಬೆಳೆದ ಅವನ ಮಗಳಿಗೆ ಮಾಯಿ ಅಲ್ಲಿಯೇ ಮದುವೆ ಮಾಡಿಸಿದ್ದರು. ಧರ್ಮಪ್ಪ ವಿಶ್ವನಾಥನ ಪಾದ ಸೇರಿದ್ದ.

ಮಾಯಿಯವರಲ್ಲಿ ಈಗ ಶಾಲೆಯ ಹತ್ತು ಬಾಲಕರು ವಿದ್ಯಾರ್ಜನೆಗೆಂದು ಇದ್ದಾರೆ. ದಕ್ಷಿಣದ ಯಾತ್ರಿಕರಿಗೆ ಮಾಯಿಯ ಮನೆ ಸದಾಶ್ರಯವಾಗಿದೆ.

* * * *

ಕೇಶಪ್ಪನ ಮಗ ಪ್ರಬುದ್ಧನಾಗಿ ತಂದೆಯ ಶ್ರಮ ಉಳಿಸಿದ್ದಾನೆ. ಆದರೆ ಅವನು ಪೋಲಿ. ಅವನ ಗಳಿಕೆಯ ಮಾರ್ಗ ಸನ್ಮಾರ್ಗವಲ್ಲ.

ಕೇಶಪ್ಪನ ಮಡದಿಗೆ ಅಕಾಲ ವೃದ್ಧಾಪ್ಯ ಬಂದಿದೆ. ಹಿರಿಯ ಮಗನ ನಡತೆಯಿಂದಲೇ ಅವಳು ಮುದುಕಿಯಾಗಿದ್ದಾಳೆ. ಒಮ್ಮೆ ಅದೇ ಮಗನ ಕಾಲೊಧೆತದ

ಪ್ರಸಾದ ಆ ತಾಯಿಗೆ ದೊರೆಯಿತು. ಅವಳು ಕೇಶಪ್ಪನ ಪಾದ ಹಿಡಿದು ಅತ್ತು ಕರೆದಳು. ಮುಂದೆ ಹೃದ್ರೋಗ ಹಚ್ಚಿಕೊಂಡು ಬಹು ಬೇಗ ಕಣ್ಣುಮುಚ್ಚಿದಳು.

* * * *

ಕೇಶಪ್ಪನಿಗೆ ಈಗ ಆತ್ಮೀಯತೆಯುಳಿದದ್ದು ಯಜಮಾನರ ದಿಂಬಿನಲ್ಲಿ ಮಾತ್ರ. ಹೆಂಡತಿ ತೀರಿದ ವರುಷ ಕಾಶಿಗೆ ತನ್ನ ಅವಳಿ ಮಕ್ಕಳೊಡನೆ ಹೋದ.

ಮಾಯಿ ಇರಹೇಳಿದರೆ ಅಲ್ಲೇ ಇರಬೇಕೆಂದ. ಆದರೆ ಅವಳು ಅವನ ಅವಳಿ ಮಕ್ಕಳನ್ನು ತಮ್ಮಲ್ಲಿ ಇರಿಸಿಕೊಂಡು 'ನಿನ್ನ ಮಗನನ್ನು ನೋಡಿಕೊ'—ಎಂದು ಹೇಳಿ ತಿರುಗಿ ಕಳಿಸಿದಳು.

ಮಗನನ್ನು ಇವನು ನೋಡಿಕೊಳ್ಳುವಂತಿಲ್ಲ; ಮಗ ಇವನನ್ನು ನೋಡಿ ಕೊಳ್ಳುವಂತಿಲ್ಲ. ಸೊಸೆ ಗಂಡನ ಸ್ವೈರಾಚಾರಕ್ಕೆ ಬಲಿಯಾಗಿ ಮನೆಮೂಳ ಆಗಿದ್ದಾಳೆ. ಅವಳಿಗೆ ಕೇಶಪ್ಪ ನೆರೆ; ಕೇಶಪ್ಪನಿಗೆ ಅವಳ ಆರೈಕೆಯೇ ಭಾಗ್ಯ.

* * * *

ಕೇಶಪ್ಪನಿಗೆ ಮುಪ್ಪು ಬಂದಿದೆ. ಆ ಸಲದ ಯಜಮಾನರ ವರ್ಷಾಂತಿಕಕ್ಕೆ ಕಾಶಿಗೆ ಹೋಗಬೇಕೆಂದರೆ ಅವನೀಗ ಪರಾಧೀನ. ಬಿದ್ದುಕೊಂಡಲ್ಲಿಯೇ ಕೇಶಪ್ಪ ಚಿಂತಿಸುತ್ತಾನೆ: ನನಗೆ ಕಾಶಿಯಲ್ಲಿ ಸಾವು ಬರಬಾರದೇ—ಎಂದು.

ಅಂದು ಕೇಶಪ್ಪ ಯಜಮಾನರನ್ನು ನೆನೆಸುತ್ತ, ಮಾಯಿಯವರನ್ನು ಹೊಗಳುತ್ತ ಬಿದ್ದಲ್ಲಿಯೇ ಬಿದ್ದಿದ್ದಾನೆ. ಇವನ ಈ ಜಪ ಅವನ ಪ್ರಬುದ್ಧ ಮಗನಿಗೆ ಸಹಿಸಲಿಲ್ಲ. ಜಾಗೀರಿಯ ದಿಂಬಿನ ಮೇಲೊರಗಿದ ತಂದೆಯನ್ನು ಕೆಕ್ಕರಿಸಿ ನೋಡಿ ಮಗ ಕಿರಿಚಿದ:

'ಇನ್ನು ನನ್ನ ಮನೆಯಲ್ಲಿ ನಿನ್ನ ಜಾಗೀರಿಯ ಮಾತು ಬೇಡ.'

ಕೇಶಪ್ಪ 'ಮಗನೇ, ನನಗೆ ಅದೊಂದಾದರೂ ಸ್ವಾತಂತ್ರ್ಯವಿರಲಿ' ಎಂದು ಬೇಡಿಕೊಂಡ.

ಕ್ರುದ್ಧನಾದ ಮಗ ತೂರಿಕೊಂಡು ಬಂದು ತಂದೆಯನ್ನು ದಿಂಬಿನಿಂದ ಎಳೆದು ಹಾಕಿದ. ದಿಂಬನ್ನೇ ಅಪ್ಪಿಕೊಂಡ ಕೇಶಪ್ಪ 'ನನ್ನ ಕೊನೆಗಾಲದಲ್ಲಿ ಈ ದಿಂಬಿನಿಂದ ಅಗಲಿಸಬೇಡ ಮಗನೇ.' ಎಂದು ಬೇಡಿಕೊಂಡ.

'ನಿನ್ನ ದಿಂಬು ಹಾಳಾಗಲಿ' ಎಂದು ಅರಚುತ್ತ ಅದನ್ನು ಕಸಿದು ಚೂರಿಯಿಂದ ಚರ-ಚರ ಹರಿದೊಗೆದ ಮಗ, ದಿಂಬಿನ ಹೊಟ್ಟೆಯಿಂದ ಬಳ ಬಳ ಬೀಳುವ ಚಿನ್ನದ ರಾಣಿ ವರಹಗಳನ್ನು ನೋಡಿ ಆಶ್ಚರ್ಯಗೊಂಡ !

* * * *

ಕೇಶಪ್ಪ ಬಿದ್ದುಕೊಂಡಲ್ಲಿಯೇ ಇದನ್ನೆಲ್ಲ ಚಿತ್ರಿಸಿಕೊಳ್ಳುತ್ತಿದ್ದಾನೆ.

—ದ. ಬಾ. ಕುಲಕರಣಿ

# ನಮ್ಮೂರ ನಾಯಕರು

'ಅಪ್ಪಾ! ಅಪ್ಪಾ! ಅಪ್ಪಾ!'

ಶ್ರಾವಣಮಾಸ. ರಾತ್ರಿ ಸುಮಾರು ಹನ್ನೊಂದು ಗಂಟೆಯಾಗಿರಬಹುದು. ಮುಗಿಲ ತುಂಬ ಮೋಡ ಮುಸುಕಿದೆ. ಮಳೆ ನಿಂತು ಒಂದೆರಡು ಗಳಿಗೆಯಾಗಿರ ಬೇಕು. ಇನ್ನೂ ಬೀದಿಯ ಮೇಲೆ ಅಲ್ಲಲ್ಲಿ ನೀರು ನಿಂತಿದೆ. ಆ ನೀರಿನಲ್ಲಿಯ ಕಪ್ಪೆಗಳು 'ರಾಕ್ ರಾಕ್' ಎಂದು ಒದರಿ, ರಾತ್ರಿಯ ಗಂಭೀರತೆಯನ್ನು ಭೀಕರತೆಗೆ ಮಾರ್ಪಡಿಸುತ್ತಿವೆ. ಅದಕ್ಕೆ ಸುತ್ತಲೂ ಹಬ್ಬಿದ ಕಗ್ಗತ್ತಲೆಯೂ ನೆರವಾಗುತ್ತಲಿದೆ.

ಇಂತಹ ಸಮಯದಲ್ಲಿ, ಒಂದು ಚಿಕ್ಕ ಮನೆಯ ಮುರುಕು ಬಾಗಿಲನ್ನು ತಟ್ಟಿ ತಟ್ಟಿ ಒಬ್ಬ ಯುವಕನು, ಮೇಲೆ ಹೇಳಿದಂತೆ 'ಅಪ್ಪಾ! ಅಪ್ಪಾ! ಅಪ್ಪಾ!' ಎಂದು ಕರೆಯುತ್ತಲಿದ್ದಾನೆ. ಅವನ ವಯಸ್ಸು ಸುಮಾರು ಇಪ್ಪತ್ತಾರು ಇಪ್ಪತ್ತೇಳು ಇರಬಹುದು.

ಸ್ವಲ್ಪ ಹೊತ್ತಿನಲ್ಲಿಯೆ ಬಾಗಿಲು ತೆರೆಯಿತು. ಒಳಗಿನಿಂದ ಒಬ್ಬ ಮುದುಕ ಹೊರಗೆ ಬಂದು ನೋಡಿ 'ಶಿವು ಬಂದ!' ಎಂದು ಉದ್ವೇಗದಿಂದ ಉದ್ಗಾರ ತೆಗೆದು 'ಎಲ್ಲಿ ಹೋಗಿದ್ದೆಪ್ಪಾ ಮಗನs ಇಷ್ಟು ದಿನ?' ಎಂದು ದುಃಖ ಬಿಗಿಹಿಡಿದ ಸ್ವರದಲ್ಲಿ ಕೇಳುತ್ತ ಕೊರಳಿಗೆ ಬಿದ್ದನು. ಇಬ್ಬರೂ ಮನೆಯನ್ನು ಸೇರಿದರು. ಒಳಗಿನ ಮುದುಕಿ–ಶಿವುನ ತಾಯಿ–'ಸುಡಗಾಡ, ಕಡ್ಡೀಪೆಟ್ಟಿಗೆ ಎಲ್ಲಿ ಐತ್ಯೋ!' ಎಂದು ಕತ್ತಲೆಯಲ್ಲಿಯೇ ಕೈಯಾಡಿಸಿ ಹುಡುಕಿದಳು. ಸಿಕ್ಕದಿರಲು ಸ್ವಲ್ಪ ಯೋಚಿಸಿ, ಮಲಗುವಾಗ ತನ್ನ ತಲೆದಿಂಬಿನ ಬುಡದಲ್ಲಿ ಇಟ್ಟುಕೊಂಡುದನ್ನು ನೆನೆದು ಅದನ್ನು ತಕ್ಕೊಂಡಳು. ಒಂದೆರಡು ಕಡ್ಡಿಗಳನ್ನು ಕೆರೆಯಲು ಅವು ಹೊತ್ತಲಿಲ್ಲ. ಆಗ ಮತ್ತೊಂದು ಕಡ್ಡಿಯನ್ನು ಪೆಟ್ಟಿಗೆಯಿಂದ ತೆಗೆದು, ತನ್ನ ಉಟ್ಟ ಸೀರೆಗೆ ತಿಕ್ಕಿ ಸ್ವಲ್ಪ ಬೆಚ್ಚಗೆ ಮಾಡಿ, ಅನಂತರ ಕೆರೆದಳು. ಕಡ್ಡಿ ಹೊತ್ತಿ ಮನೆತುಂಬ ಮಂದ ಪ್ರಕಾಶ ವನ್ನು ಹಬ್ಬಿಸಿತು. ಕೂಡಲೆ ಅವಳು ಒಂದು ಪಣತಿಯೊಳಗಿನ ಬತ್ತಿಗೆ ಹಚ್ಚಿದಳು. ಅದು ಸ್ವಲ್ಪ ಹೊತ್ತು 'ಚಿಟ್ ಚಿಟ್' ಎಂದು, ಬಳಿಕ ಹೊತ್ತಿತು. ಮುದುಕಿ ಅದೇ ಕಡ್ಡಿಯಿಂದ ದೀಪದ ಮಕ್ಕು ಹೊಡೆದು ಬತ್ತಿಯನ್ನು ಸ್ವಲ್ಪ ಚಾಚಲು, ಕಮರು ವಾಸನೆಯನ್ನು ಹರಡುತ್ತ ದೀಪವು ಸಾಧಾರಣ ಥಾಳಾಗಿ ಉರಿಯತೊಡಗಿತು.

ಮುದುಕಿಯ ಕಣ್ಣುಗಳಲ್ಲಿ ನೀರೂರಿದ್ದಿತು. ಸೋತ ಕಣ್ಣಿನಿಂದ ಮಗನ ಕಡೆಗೊಮ್ಮೆ ದೃಷ್ಟಿಯನ್ನು ಬೀರಿದಳು. ಶಿವು, ಅವಳು ಹೊತ್ತುಕೊಳ್ಳುವ ಕವುದೆ

ಯನ್ನು ಸ್ವಲ್ಪ ಸರಿಸಿ, ಹಾಸಿದ್ದ ಚಾಪೆಯ ಮೇಲೆ ಕುಳಿತ....ಕೆಸರಾದ ಕಾಲುಗಳನ್ನು ಹಾಸಿಗೆಯ ಹೊರಕ್ಕೆ ಇಟ್ಟ. ಒಂದೆರಡು ನಿಮಿಷ ಯಾರೂ ಮಾತನಾಡಲಿಲ್ಲ. ಕೊನೆಗೆ ಶಿವಪ್ಪನೇ ಮೌನವನ್ನು ಮುರಿದು 'ತೋರೂ ಎಲ್ಲಿ ಕಾಣಿಸೂದಿಲ್ಲ?' ಎಂದು ಕೇಳಿದ.

ತಾಯಿ ಏನನ್ನೂ ಹೇಳಲಿಲ್ಲ; ಕಣ್ಣೊಳಗಿನ ನೀರನ್ನು ಒರಸಿಕೊಂಡಳು ಮಾತ್ರ. ಶಿವಪ್ಪನ ಎದೆಯು ಜೋರಿನಿಂದ ಹಾರಹತ್ತಿತು; ತುಟಿಗಳು ಒಣಗಿದವು. ಮುಂದೆ ಏನು ಮಾತನಾಡಬೇಕೆಂಬುದೂ ಅವನಿಗೆ ತಿಳಿಯದಾಯಿತು. ಸುಮ್ಮನೆ ಮೂಕನಂತೆ ತಂದೆಯ ಮುಖದ ಕಡೆಗೆ ನೋಡತೊಡಗಿದ. ಆಗ ತಂದೆಯು ಮೆಲ್ಲಗೆ ನುಡಿದ.

'ಗೌಡರ ಮನ್ಯಾಗ ಕೆಲಸಕ್ಕ ಇಟ್ಟೇವಿ. ಹೊಟ್ಟಿ ಅರಿವಿ ನೋಡಿಕೋಡು ತಿಂಗಳಿಗೆ ಮೂರು ರೂಪಾಯಿ ಕೊಡತಾರ....ಅಷ್ಟು ತಂದು ಗಂಜೀ ಕಾಸಿ ಕುಡೀತೀವಿ....ಆಯ್ತು !'

'ಏನು ಮಾಡೂದು ? ಹಸಿವಿಗಾಗಿ ಹೊಟ್ಟೀ ಕರಳು ಬೇಲೀ ಮ್ಯಾಲ ಹಾಕೋದು ! ನಿನ್ನೇ ಹುಡುಗ ಸಿಕ್ಕಿತ್ತು....ಹಳ್ಳದ ಹಾದ್ಯಾಗ !, ಎಂದು ತಾಯಿ ಅಳುದನಿಯಲ್ಲಿ ಮಾತನ್ನು ಮುಂದುವರಿಸಿದಳು. 'ಗೌಡನ ಹರಕ ಅಂಗಿ ಹಾಕ್ಕೊಂಡಿದ್ದ; ಮೈಯೆಲ್ಲ ಕಾಣಿಸತಿತ್ತು....ಚಳಿ ಹತ್ತಿ ಹಲ್ಲಿಗೆ ಹಲ್ಲು ಬಡೀತಿದ್ದು;....ಸೊರಗಿ ಸೊರಗಿ ಕಡ್ಡಿ ಅಗ್ಯಾನ....ಹೊಟ್ಟಗೆ ಚೆಲೂ ನೋಡೂದಿಲ್ಲ ಅಂತ....' ಮಾತಿನ ಮುಗಿತದೊಡನೆ ಅಳತೊಡಗಿದಳು ಮುದುಕಿ.

'ನಾಳೇ ನೌಕರೀ ಬಿಡಿಸಿ ತರತೀನವ್ವಾ ಅವನ್ನ......ಚಿಂತೀ ಮಾಡಬ್ಯಾಡ ನೀ!'

'ಏನ್ ತರತೀಯಪ್ಪ....ಒಂದs ಮಾತು ಬಯ್ದದ್ದಕ್ಕ ನೀನೂ ಆರು ತಿಂಗಳಾತ್ಯು, ಮನೀ ಬಿಟ್ಟು ಹೊಂಟು ಹೋದಿ. ಪತ್ತೇ ಇಲ್ಲ....ಸುದ್ದಿ ಇಲ್ಲ.... ಯಾರೊ ಹೇಳಿದರು......"ಮಿಲಿಟರಿ ಭರತೀ ಆಗ್ಯಾನ" ಅಂತ' ದುಃಖ ಉಕ್ಕಿ ಬರಲು 'ಅಯ್ಯೋ ನನ್ನ ಮಗನ!' ಎಂದು ಶಿವಪ್ಪನನ್ನು ಅಪ್ಪಿಕೊಂಡು ಅಳತೊಡಗಿದಳು.

'ಛೇ ಛೇ......ನಾ ಭರತೀ ಆಗಿಲ್ಲ ಮಿಲ್ಟ್ರೀ ಒಳಗ!'

'ಆಗಿಲ್ಲ....? ಕುಲಕರ್ಣೇರು ಒಯ್ದು ಭರತೀ ಮಾಡಿದ್ದರಂತಲ್ಲಪ್ಪಾ ?' ಅರ್ಧ ಹರ್ಷ, ಅರ್ಧ ಸಂದೇಹ ಬೆರೆತ ಧ್ವನಿಯಲ್ಲಿ ಮುದುಕ ಕೇಳಿದ.

'ಹೌದು, ಆ ದಿವಸ ನಾವು ಮನಿಯೊಳಗ ಸ್ವಲ್ಪ ಜಗಳಾಡಿದ್ದನ್ನು ಯಾರೋ ಕುಲಕರ್ಣೇರಿಗೆ ಹೇಳಿದರಂತ. ಸಂಜಿಗೆ ಕಟ್ಟೀಮ್ಯಾಲ ಕೂತಾಗ ಕರಿಸಿದರು. ಹೀಂಗs ಆ ಮಾತು ಈ ಮಾತು ಕೇಳತಾ ಮಿಲಿಟರಿಗೆ ಭರತೀ ಆಗತೀಯೇನಂತ ಕೇಳಿದರು.... ಚಹಾನೂ ಒಂದು ಕಪ್ಪು ತರಿಸಿಕೊಟ್ಟರು. "ಯಾಕ ಮಕಾ ಬಾಡೇದ? ಮಧ್ಯಾಹ್ನದಾಗ ಉಂಡಿದಿಯೋ ಇಲ್ಲೋ?" ಎಂದು ಕೇಳಿ, ರಾತ್ರಿ ತಮ್ಮ ಮನಿಗೆ ಊಟಕ್ಕೆ ಬರಲಿಕ್ಕೂ ಹೇಳಿದರು. ಅಂದು ಅವರಲ್ಲೇ ಊಟಾ ಮಾಡಿದೆ. ಮನೀಗೇನs ಮಲಗಲಿಕ್ಕೆ ಬರಬೇಕಂದರ ಬಿಡಲಿಲ್ಲ. ಮರುದಿನ ಸೂರ್ಯಾ ಉದಯ ಆಗೂದಕಿಂತಾ ಮುಂಚೆ ಎಬ್ಬಿಸಿ, ಸ್ಟೇಶನಕ್ಕ ಕರಕೊಂಡು ಹೋದರು; ಹೆಸರು ಬರೆದು ಕೊಟ್ಟು ದಂಡಿಗೆ ಭರತೀ ಮಾಡಿಬಿಟ್ಟರು......'

'ಅಂ?' ಎಂದು ಮುದುಕ ಗಾಬರಿಯಾಗಿ ಬಾಯಿ ತೆರದ.

'ಮುಂದ?' ಎಂದಳು ಮುದುಕಿ.

'ಮುಂದೆ ಪುಣೆಗೆ ಒಯ್ದರು.... ಅಲ್ಲಿ ನನ್ನ ಕೈ ಮುರಿದದ್ದನ್ನು ನೋಡಿದರು.... "ಅನ್‌ಫಿಟ್" ಅಂತ ಏನೋ ಹೇಳಿ ಬಿಟ್ಟು ಬಿಟ್ಟರು. ನನ್ನ ಜೊತೆ ಇದ್ದವರನ್ನೆಲ್ಲಾ ಬ್ಯಾರೇ ಕಡೆ ಒಯ್ದು ಬಿಟ್ಟರು. ನಾ ಪುಣೆದಾಗ ಎರಡು ದಿನಾ ತಿರುಗಾಡಿದೆ.... ದೊಡ್ಡ ಊರದು; ಯಾರು ಕೇಳಬೇಕು....? ನನ್ನ ಹತ್ತರ ಗಾಡೀ ಖರ್ಚಿಗೂ ರೊಕ್ಕ ಇರಲಿಲ್ಲ.... ತಿರುಗಿ ಊರಿಗೆ ಬರಬೇಕಂದರ! ಅಲ್ಲೇ ಹೊಟೇಲಿನೊಳಗ ಕೆಲಸಕ್ಕ ನಿಲ್ಲಬೇಕಂತ ಅಲ್ಲಿ ಇಲ್ಲಿ ಅಲೆದಾಡಿ, ಒಂದು ಕೆಲಸಾ ಹಿಡದೆ.... ಗಾಡೀ ಖರ್ಚಿನ ಪೂರ್ತಿ ಪಗಾರ ಕೂಡಿದ ಕೂಡ್ಲೆ ಊರಿಗೆ ಬರಬೇಕಂದರ.... ಮಾಲಕರು ಪಗಾರs ಕೊಡವೊಲ್ಲರು...... ಕೇಳಲಿಕ್ಕೆ ಹೋದರ ಈಗ್ಯಾತಕ್ಕ ಬೇಕು? ಒಮ್ಮೇ ಕೊಡತೀವಂತ! ಅನ್ನೋರು. ಹಾಗೇ ಈ ಆರು ತಿಂಗಳು ಕಳೆದು, ಆ ಮ್ಯಾಲೆ ಪಗಾರ ಕೊಟ್ಟರು. ಈಗ ಊರಿಗೆ ಬಂದು ಹತ್ತಿದೆ!' ಎಂದು ತನ್ನ ಆರು ತಿಂಗಳ ಕತೆಯನ್ನು ಸ್ವಲ್ಪದರಲ್ಲಿ ಹೇಳಿ ಮುಗಿಸಿದ ಶಿವಪ್ಪ.

'ಇಲ್ಲಪ್ಪಾ, ಇನ್ನೂ ಯಾವಾಗ ಹಿಡಿದು ಒಯ್ಯತಾರೊ ಏನೋ ನೇಮನs ಇಲ್ಲ!.... ಮೊನ್ನೆ ಮೂರು ತಿಂಗಳು ತಿರಗಾಡತಿದ್ದ ಪರಮಾನಟ್ಟಿ ಪದಮ್ಯಾನ್ನ ಒಮ್ಮೇಲೇ ಬಂದು ಹಿಡಿದು ಒಯ್ದರು....'

'ಅಂವ ಮಿಲಟರಿಗೆ ಭರತೀ ಆಗ್ಯಾನ!.... ಅವನ ಹಾಂಗ ನಾ ಭರತೀ ಆಗಿಲ್ಲ!' ಸ್ವಲ್ಪ ಸಿಟ್ಟಿನ ಸ್ವರದಿಂದ ಹೇಳಿದ ಶಿವಪ್ಪ.

'ಏನ್ ನಿಂದೂ ನೇಮನs ಹೇಳಲಿಕ್ಕೆ ಬರೂದಿಲ್ಲ ಬಿಡು.... ಮೊದಲ "ಟೇಶನ ಮ್ಯಾಲೆ ಭರತೀ ಮಾಡಿದರು" ಅಂತ ಹೇಳತಿ...... ಮುಂದ.... ಪುಣೇಕ ಒಯ್ದು ಬಿಟ್ಟರೂ ಅಂತೀ!' ಎಂದು ಬೇಸರದಿಂದ ಉಸುರಿದ ಮುದುಕ.

'ಹೌದು, ಕೈ ಮುರಿದವರನ್ನ ಏನ್ ಮಾಡತಾರಲ್ಲೆ ತೊಗೊಂಡು ? ಡಾಕ್ಟರ್ ಪರಿಕ್ಷಾ ಮಾಡ್ತಾರ......ಸ್ವಲ್ಪ ಏನಾದರೂ ಬ್ಯಾನಿ ಇದ್ದರ.... ನೋವು ಇದ್ದರ.... ಡಿಸ್‌ಮಿಸ್ ಮಾಡಿ ಬಿಡತಾರ....ತಿಳೀತೂ....?'

'ಆಗಸರ ಭೀಮನ ಕಣ್ಣು ಒಂದು ಕಾಣಿಸತಿದ್ದಿಲ್ಲ; ಹಾಂಗs ಒಯ್ದಗು......! ಲಷ್ಕರಿನೊಳಗ ಹಾಕಲಿಲ್ಲ......ಸಾಹೇಬರ ಆರವೀ ಒಗೀಲಿಕ್ಕೆ ಹಚ್ಚಿದರು......ಕೈಯೊಳಗ ಸಿಕ್ಕವರನ್ನ ಮನೀಗೆ ಬಿಡತಾರs ಅವರು ? ಹೇಳತೀ ನೀ ಇಲ್ಲದ್ದs ಒಂದು !'

ಆ ದಿನ ಇರುಳೆಲ್ಲ ಆ ಮಾತು ಈ ಮಾತುಗಳಲ್ಲಿಯೆ ಕಳೆಯಿತು. ತಾಯಿಗೆ 'ಎಲ್ಲಿಯೋ ಹೋಗವಲ್ಲನ್ಯಾಕ; ಈಗ ಮಗ ಮನೀಗೆ ಬಂದನಲ್ಲ' ಎಂಬ ಹಿಗ್ಗು. ತಂದೆಗೆ ಮಾತ್ರ 'ಮನಿಗೆ ಬಂದ ಮಗನನ್ನ ಮತ್ತೆ ಹಿಡಿದು ಒಯ್ತಾರೆ !' ಎಂಬ ಚಿಂತೆ. ಇನ್ನೂ ನಸುಕು ಇರುವಾಗಲೇ ಭೀಮಪ್ಪ......ಶಿವಪ್ಪನ ತಂದೆಯ ಹೆಸರು......ಎದ್ದು, ಇದೀಗ ಹೊರಗೆ ಬಂದು, ಕೆಮ್ಮುತ್ತ ಅಂಗಳ ಕಸ ಗುಡಿಸುವುದರಲ್ಲಿದ್ದ. ಮನದಲ್ಲಿ 'ನಾಲ್ಕು ದಿನ ಶಿವಪ್ಪನನ್ನು ಎಲ್ಲಿಯಾದರೂ ಅಡವಿಯಲ್ಲಿ ಇಡಬೇಕು; ಊರ ಜನ ಕೆಟ್ಟ; ಮತ್ತೇನಾದರೂ ಮೇಲಿನವರಿಗೆ ತಿಳಿಸಿದರೆ ಹಿಡಿದು ಒಯ್ದಾರು....'ಎಂದು ಮೊದಲಾಗಿ ಯೋಚಿಸುತ್ತಲಿದ್ದ. ಅಷ್ಟರಲ್ಲಿಯೆ ಕಸ ಒಗೆಯಲಿಕ್ಕೆಂದು ಬಂದ ನೆರೆಮನೆಯ ಹೆಂಗುಸೊಬ್ಬಳು ಕೇಳಿದಳು:

'ಭೀಮಣ್ಣಾ, ರಾತ್ರಿ ಶಿವೂ ಬಂದಾ ?' ಭೀಮಪ್ಪ ಅಂಗಳ ಕಸ ಗುಡಿಸುವುದನ್ನು ಅಷ್ಟಕ್ಕೇ ನಿಲ್ಲಿಸಿ ಉಸುರುಗರೆದನು; 'ಎಲ್ಲಿಂದ ಬರತಾನ ? ಹೋಗಿ ಆರು ತಿಂಗಳಾಯಿತು......ಇನ್ನೂ ಪತ್ತೆನs ಇದ್ದಿಲ್ಲ !' ಎಂದು ಹೇಳಬಾರದೆಂದಿದ್ದ ಸಂಗತಿಯನ್ನು ಅರ್ಧ ಹೇಳಿದಂತೆಯೆ ಮಾಡಿ, ಮಾತನ್ನು ಮುಗಿಸಿದ.

'ಅಲ್ಲ, ರಾತ್ರೀ ಅವನ ಹಾಂಗs ದನಿ ಕೇಳಬಂತು;....ಅದಕ್ಕಂದೆ.'

'ಇಲ್ಲ!......ನಮ್ಮಾಕಿನs......ರಾತ್ರೀ ಮಗನ ನೆನಪು ಮಾಡಿ ಬೆಳ್ಳ ಬೆಳತನಕಾ ಅಳತಿದ್ದಳು !' ಎಂದು ಹೇಳಿ ಕಸಬರಿಗೆಯನ್ನು ತಕ್ಕೊಂಡು ಒಳಕ್ಕೆ ಹೋದ. ಲಗುಬಗೆಯಿಂದ ಶಿವಪ್ಪನನ್ನು ತಟ್ಟಿ ಎಚ್ಚರಿಸಿ, ಕಳ್ಳದನಿಯಿಂದ 'ಶಿವೂ ಬೆಳಗಾಯಿತು.... ಏಳು. ಇನ್ನೂ ಯಾರು ಕೇಳ್ಯಾರೋ....ಇಲ್ಲೋ ; ಅಷ್ಟರೊಳಗs ಹೋಗ ನೀ ! ಸಿದ್ದಪ್ಪನ ತೋಟಕ್ಕ ನಡೀ ! ಹಿಂದಿನಿಂದ ರೊಟ್ಟೀ ತೊಗೊಂಡು ನಾ ಬರತೇನಂತ. ಸಂಜಿಗೆ ಮತ್ತ ಬಂದೀಯಂತ !' ಎಂದು ಹೇಳಿದ.

'ಇಲ್ಲ ; ಯಾರು ಏನ ಮಾಡ್ತಾರಪ್ಪಾ ? ನಾ ಏನು ಭರತೀ ಆಗಿದೀನೇನು ?'

'ಅಲ್ಲೋ ಶಿವೂ, ನಿನಗ ಗೊತ್ತಿಲ್ಲ ; ನಮ್ಮೂರು ಬಹಳ ಕೆಟ್ಟ ! ಮತ್ತ ಎಲ್ಲಿ ಯಾದರೂ ಒಯ್ದ್ಯಾರೂ ಅಂತ ಎದಿ ಹಾರತೈತಿ ನಂದು ! ನಾಕು ದಿನ್ಯಾರೆ ಹೋಗು, ನಾ ಯಾರಿಗಾದರೂ ಹೇಳಿ ವ್ಯವಸ್ಥಾ ಮಾಡೂತನಕಾ !' ಎಂದು ಏನೇನೋ ಸಮಾಧಾನ ಹೇಳಿ, ಕಳುಹಿಬಿಟ್ಟನು.

* * * *

ಶಿವಪ್ಪ ಸಿದ್ದಪ್ಪನ ತೋಟದಲ್ಲಿ ಹೋಗಿ ನಿಂತ. ಸಿದ್ದಪ್ಪ ನಮ್ಮೂರ ದೊಡ್ಡ ರೈತ. ಅವನ ತೋಟ ಊರು ಬಿಟ್ಟು ನಾಲ್ಕು ಮೈಲು ದೂರದಲ್ಲಿದೆ, ಒಂದು ಮೊರಡಿಯ ಇಳುಕಲಲ್ಲಿ. ಅತ್ತ ಊರ ಜನರು ಹೋಗುವುದು ಕಡಿಮೆ. ಅಲ್ಲದೆ ಸಿದ್ದನಿಗೂ ಭೀಮನಿಗೂ ಮೊದಲಿನಿಂದಲೂ ಸ್ವಲ್ಪ ಸಂಬಂಧ. ಸಿದ್ದನೆಂದರೆ ಭೀಮನ ಮನೆಯವರಿಗೆಲ್ಲ ತುಂಬ ವಿಶ್ವಾಸ. ಭೀಮನ ವಿಷಯಕ್ಕೆ ಸಿದ್ದನ ಮನೆಯವರಿಗೂ ಹಾಗೆಯೆ, ಅದಕ್ಕೆ ಸಿದ್ದನಲ್ಲಿ ಭೀಮನು ಕೂಲಿಯ ಆಳಿನಂತೆ ದುಡಿಯದೆ ಮನೆಯವ ನಂತೆ ದುಡಿಯುತ್ತಿದ್ದುದೂ, ಸಿದ್ದನು ಭೀಮ ಬಡವನೆಂದು ಬಗೆದು ತನ್ನ ತೋಟ ದಲ್ಲಿರುವ ಕಾಯಿ ಕಸರುಗಳನ್ನು ಸ್ವಲ್ಪ ಕೊಡುತ್ತಿದ್ದುದೂ ಕಾರಣವಾಗಿದ್ದುವು.

ಶಿವಪ್ಪ ಹಗಲು ತೋಟದಲ್ಲಿ ಇರುತ್ತಿದ್ದ ; ರಾತ್ರಿಯಾಗಲು ಮನೆಗೆ ಮಲ ಗಲು ಬರುತ್ತಿದ್ದ. ಒಂದೊಂದು ದಿನ ತೋಟದಲ್ಲಿಯೇ ಮಲಗಿದರೂ ಮಲಗಿದನೆ. ಆಗ ಸಿದ್ದನಲ್ಲಿಯೆ ಶಿವಪ್ಪನ ಊಟ. ಸಿದ್ದನಿಗಾದರೂ ಅನಾಯಾಸವಾಗಿ ಹೊಟ್ಟೆಗೆ ಹಾಕಿ ದುಡಿಸಿಕೊಳ್ಳಲು ಒಂದು ಆಳು ಸಿಕ್ಕಿತು. 'ಇರುವಷ್ಟು ದಿನ ಇದ್ದು ಬಿಡಲಿ, ತಲೆ ತಪ್ಪಿಸಿಕೊಂಡು ತಿರುಗುವ ಶಿವಪ್ಪ ಕೂಲಿಯನ್ನು ಬೇರೆ ಬೇಡುವದಿಲ್ಲವಲ್ಲ !' ಎಂದು ಸಂತೋಷವಾಗಿದ್ದಿತು. ಒಮ್ಮೆ ಭೀಮನನ್ನು ಕರೆದು, 'ಭೀಮಾ, ಶಿವಪ್ಪನ ವಿಷಯಕ್ಕ ನೀ ಏನೂ ಕಾಳಜೀ ಮಾಡೂ ಜರೂರಿಲ್ಲs......ನಮ್ಮ ತೋಟದ ಕಡೆ ಯಾವ ಮಗಾನೂ ಹಾಯುಹಾಂಗಯಿಲ್ಲ......ಒಮ್ಮೆ ಊರಾಗಿನ ಸುದ್ದಿ ಅಡಗೂ ತನಕಾ......ಕುಶಾಲ......ಹಗಲು ರಾತ್ರಿ ಇರಲಿ....ಇಲ್ಲೇ !' ಎಂದು ಭೀಮನ ಮೇಲೆ ಮಹದುಪಕಾರ ಮಾಡುವವನಂತೆ ಹೇಳಬಿಟ್ಟ.

ಭೀಮಪ್ಪನ ಮುಖ ಈಗ ನಾಲ್ಕಾರು ದಿನಗಳಿಂದ ಸ್ವಲ್ಪ ಕಳೆಗೊಂಡಿದೆ. ಆದರೂ ಅವನ ಮನಸ್ಸಿನಲ್ಲಿ 'ಮಗನನ್ನು ಇನ್ನೂ ಮಿಲಟರಿಯವರು ಬಂದು ಹಿಡಿದು ಒಯ್ದರೆ....?' ಎಂಬ ಚಿಂತೆಯೊಂದು ಮನೆಮಾಡಿಕೊಂಡಿತ್ತು. ಅದು ಸಹಜವಾಗಿ ಊರ ಜನರು 'ಇನ್ನೂ ಎಲ್ಲೆ ಮಗನ ಸುದ್ದಿ ಹತ್ತಲಿಲ್ಲs......ಭೀಮಣ್ಣಾ....' 'ಮೊನ್ನೆ ಯಾರಿಗೋ ಸ್ಟೇಶನ್ ಮ್ಯಾಲೆ ದೊರಕಿದ್ದನಂತ ಅಲ್ಲಾ ?....' ಎಂದು ಮೊದಲಾಗಿ ಕೇಳುವ ವಿವಿಧ ಪ್ರಶ್ನೆಗಳಿಂದ ಚಿಂತೆ ಮತ್ತಿಷ್ಟು ಹೆಚ್ಚುತ್ತಲಿತ್ತು. ದೂರದಲ್ಲಿ

ಯಾರು ಏನು ಮಾತನಾಡಿದರೂ ಅವರು ತನ್ನ ಮಗನ ವಿಷಯಕ್ಕೆ ಮಾತನಾಡುತ್ತಿರುವರೇನೋ ಎಂದು ಬೆದರಿದ ಭೀಮಪ್ಪನ ಮನಸ್ಸಿಗೆ ಭಾಸವಾಗುತ್ತಲಿದ್ದಿತು. ಈಗೀಗ ಜನರು ಅವನ ಕಡೆಗೆ ನೋಡಿದರೆ ಸಾಕು; ಕೇವಲ ಸಂಶಯ ದೃಷ್ಟಿಯಿಂದಲೇ ತನ್ನನ್ನು ನೋಡುವರೆಂದು ತಿಳಿಯುವನಾತ. ಊರಲ್ಲಿ, ರಜೆ ಪಡೆದು ಬಂದ ಮಿಲಟರಿಯಲ್ಲಿ ಸೇರಿದ ತರುಣರು ಡ್ರೆಸ್ಸ ಮಾಡಿಕೊಂಡು ಸಹಜವಾಗಿ ಭೀಮನ ಮನೆಯ ಮುಂದಿನಿಂದ ಹಾಯ್ದರೂ ಸಾಕು; ಇವನ ಎದೆ ದಡ ದಡ ಹೊಡೆದುಕೊಳ್ಳತೊಡಗುವುದು. ಆಕಸ್ಮಾತ್ ಅವರು ಹೊರಳಿ ಇವನ ಮನೆಯ ಕಡೆಗೆ ನೋಡಿದರಂತೂ ತೀರಿಯೆ ಹೋಯಿತು; ಭೀಮನ ಕೈಕಾಲುಗಳೇ ತಣ್ಣಗಾಗುವುವು. ಮೊನ್ನೆ ಒಬ್ಬ....ಮಿಲಿಟರಿಯಲ್ಲಿ ಹೋಗಿ ಬಂದ ಹುಡುಗ.... 'ನಿನ್ನ ಮಗಾ ಈಗೆಲ್ಲಿ ಇದ್ದಾನ? ತಿಂಗಳಾ ರೂಪಾಯಿ ಎಷ್ಟು ಕಳಸ್ತಾನ? ಪತ್ರ ಬರ್‍ತಾವೇನು ಮ್ಯಾಲಿಂದ ಮ್ಯಾಲ?....' ಎಂದು ಸ್ವಾಭಾವಿಕವಾಗಿ ಕೇಳಲು, ಭೀಮನು ಒಮ್ಮೆಲೆ ಅವನ ಪಾದಗಳನ್ನು ಮುಟ್ಟಿ, ಕಣ್ಣೀರು ಸುರಿಸುತ್ತ....'ಯಾರಿಗೂ ಹೇಳಬ್ಯಾಡಪ್ಪಾ; ಬಡವರ ಮ್ಯಾಲೆ ದಯಾಮಾಡು....ನಿಮ್ಮಂತೆ ನಾಲ್ಕು ಮಂದಿ ಇಲ್ಲಿ.... ಮನ್ಯಾಗ!....ಕೈ ಬಾಯಿಗೆ ಬಂದಾಂವ ಒಬ್ಬನss ಮಗಾ....' ಎಂದು ಅಂಗಲಾಚಿ ಬೇಡಿಕೊಂಡ. ಅಷ್ಟಕ್ಕೇ ಹೊರಗೆ ನಗರಗಳಲ್ಲಿ ಅಲೆದಾಡಿ ಬಂದ ಆ ತರುಣ, ಇದರಲ್ಲೇನಾದರೂ ಗುಟ್ಟು ಇದೆ ಎಂದರಿತು, ಭೀಮನನ್ನು ಸ್ವಲ್ಪ ಬೆದರಿಸಿ, ಸ್ವಲ್ಪ ರಮಿಸಿ, ಎಲ್ಲ ಸಂಗತಿಯನ್ನು ಕೇಳಿ ತಿಳಿದುಕೊಂಡೇ ಬಿಟ್ಟ....ಹೀಗೆ ಶಿವಪ್ಪನು ಬಂದ ಸುದ್ದಿಯು ಭೀಮಪ್ಪನಿಂದಲೇ ಊರಲ್ಲಿ ಕೆಲವು ಜನರಿಗೆ ಗೊತ್ತಾಗಿಹೋಯಿತು.

ಭೀಮನಿಗೆ ಮಗನು ಮನೆಗೆ ಬಂದಿರುವನೆಂದು ಅಷ್ಟು ಸಂತಸವಿಲ್ಲ. 'ಇನ್ನು ಮೇಲೆ ಮಗನು ಮಿಲಟರಿಯವರ ಕೈಗೆ ಸಿಕ್ಕದಂತೆ ಉಳಿಸಿಕೊಳ್ಳುವದೆಂತು?' ಎಂಬ ಚಿಂತೆಯು ಹಗಲಿರುಳೂ ಅವನ ಮನಸ್ಸನ್ನು ತಿನ್ನುತ್ತಲಿದ್ದಿತು. ಇಂದು ಭೀಮ ಊಟಮಾಡಿ ಎದ್ದ ಕೂಡಲೆ, ಮಗನ ಚಿಂತೆ ಅವನ ಮನವನ್ನಾವರಿಸಿತು. ಆಗ ಒಮ್ಮೆಲೆ ಅವನಿಗೊಂದು ವಿಚಾರ ಹೊಳೆಯಿತು. 'ಮೂಲೀಮನಿ ಗುಂಡಪ್ಪಂದರ ಊರ ಕಾರಭಾರಿ; ಗೌಡ-ಕುಲಕರ್ಣೇರ ಮನಿಗೂ ಹೋಗಿ ಬರುವ ರೂಢಿಯವನದು! ಯಾವಾಗಲೂ ಗೌಡರ ಹತ್ತಿರಾನss ಬಿದ್ದುಕೊಂಡು ಇರತಾನ......ಊರಾಗಿನ ಮದಿವೀ ಮುಂಜೀ ಹಿಡಕೊಂಡು....ಹೊಲಾ ಮನೀ ಪಾಲುಗಾರಿಕೀ ತನಕಾ ಎಲ್ಲಾ ಕೆಲಸಗಳೂ ಅವನ ಕೈವಾಡ ಇಲ್ಲದ ಆಗೂಹಾಂಗಿಲ್ಲ....ಅಂದಮ್ಯಾಲ, ಅವನ ಕಿಂವೀಮ್ಯಾಲ ಒಂದು ಮಾತು ಹಾಕಿ ಇಡಬೇಕು....ಅಂದರ ಒಳ್ಳೇದಾಗತೈತಿ......' ಎಂದು ವಿಚಾರ ಬರುವುದೇ ತಡ.... ಗುಂಡಪ್ಪನ ಮನೆಯ ಹಾದಿಯನ್ನೇ ಹಿಡಿದ ಭೀಮಪ್ಪ.

* * * *

'ಯಾಕ, ಭೀಮಣ್ಣನ ಸ್ವಾರಿ ಬಹಳ ದಿವಸಕ್ಕ ಬಂತು ?' ಎಂದು ಗುಂಡಪ್ಪ ಕಂಬಳಿ ಹಾಸುತ್ತ ಕೇಳಿದ.

'ಏನೋ ಸುಮ್ಮನ....ಸ್ವಲ್ಪ ಕೆಲಸ ಇತ್ತರೀ....' ಎಂದು ಬಾಯಲ್ಲಿಯೇ ಪುಟಪುಟಿಸಿದ ಭೀಮಪ್ಪ. ಮತ್ತು ಸ್ವಲ್ಪ ತಡೆದು....'ಊಟಕ್ಕ ವ್ಯಾಳೇ ಆಯಿತ್ರೀ ?......' ಎಂದ.

ಗುಂಡಪ್ಪನು ಕಂಬಳಿಯ ಮೇಲೆ ಕುಳಿತು ಎಲೆ ತಿನ್ನುವ ಚೀಲ ಬಿಚ್ಚುತ್ತ ಹೇಳತೊಡಗಿದ:...... 'ಮುಂಜಾನೆ ಸಹಜ ಗೌಡನ ವಾಡೇದ ಕಡೆಗೆ ಹೋದ ನೇನಪ್ಪಾ ! ಎಲ್ಲಿ....ಆ....ಸೂ....ಮಕ್ಕಳ ಕುರುಬರು, ಸತ್ಯಪ್ಪನ ಹತ್ತೀ ಹೆಕ್ಕಲ ದಾಗ....ಕೇಳದs ಕುರೀ ಹಾಯಿಸಿದರಂತ ಬ್ಯಾಸಿಗ್ಯಾಗ !....ಸತ್ಯಪ್ಪ ಸುಮ್ಮನs ಬಿಡೋ ಬಂಟನ ? ಅವರ ಒಂದು ಕುರೀನs ಎಳದು ತಂದಿದ್ದ ಆಗ ಮನಿಗೆ. ಆ ನ್ಯಾಯ ನನ್ನ ತನಕಾ ಬಂತು......ನಾ ಹೇಳಿದ್ದೆ ; "ಎರಡು ದಿವಸ ಹೊಲದಾಗ ಕುರೀ ಕೂಡ್ರಿಸಿ ಕೊಡಿರಿ ; ನಿಮ್ಮ ಕುರಿ ಒಯ್ಯೋಗರಿ ; ನಮಗೇನು ಮಾಡೂದು" ಅಂತ. ಆದರ ಅವರ ಹೇಳತs ಕೇಳತs ಕುರುಬರು ! "ಇಂದs ನಾಳೇ" ಅನ್ನತ, ಈಗ ಹಾರಿಸೇ ಬಿಟ್ಟರು ! ನಿನ್ನೆ ಸತ್ಯಾ ಅಳತs ಮತ್ತ ನನ್ನ ಕಡೆ ಬಂದ. ನನಗೂ ಸಿಟ್ಟು ಬಂತು. ಕುರುಬರು ಸೊಕ್ಕಿಗೆ ಬಂದಾರಂತ ಒಯ್ದು ಗೂಟಕ್ಕ ಹಾಕಿ ಬಿಟ್ಟೆ...... ಒದ್ದಾಡಲಿನ್ನ, ಗೌಡ ಏನೂ ತೊಗೊಳ್ಳದs ಬಿಡತಾನs ? ಕಷ್ಟ ಇಲ್ಲದs ಬ್ಯಾಟಿ ಕೈಯಾಗ ಬಂದೈತಿ....ಮುಂಜಾನೆ ಹಿಡದೂ ಗೌಡನ ಮನ್ಯಾಗ ಅದs....ನ್ಯಾಯ ನಡದಿತ್ತು....ತೀರಿಸಿ ಬರಬೇಕಾದರ ಒಂದಿಷ್ಟು ಊಟಕ್ಕೆ ವ್ಯಾಳೇ ಆಯ್ತು !' ಎಂದು ಊಟಕ್ಕೆ ವೇಳೆಯಾದುದರ ಕಾರಣ ಹೇಳಿದನು ಗುಂಡಪ್ಪ.

'ಈಗೀಗ ಕುರುಬರೂ ಸೊಕ್ಕಿಗೆ ಬಂದಾರರೀ !' ಎಂದು ಗುಂಡಪ್ಪನ ಮನಸ್ಸಿನ ಹೊಲಬನ್ನರಿತೇ ನುಡಿದ ಭೀಮಪ್ಪ.

ಗುಂಡಪ್ಪ ಎಲೆಯಡಿಕೆ ಹಾಕಿಕೊಳ್ಳುತ್ತಾ : 'ಭೀಮಣ್ಣಾ, ಹಲ್ಲು ಅದಾ ವೇನು ? ಮೊದಲ ತಂಬಾಕ ತಿಂತಿದ್ದೆಲ್ಲs ?' ಎಂದ.

ಮಾತು ತೆಗೆಯಲು ಇದೇ ಸಮಯವೆಂದರಿತು ಭೀಮಪ್ಪ 'ತಂಬಾಕ ಹಾಕೋ ತಿದ್ದೆನಪ್ಪಾ ! ಹಿರೀ ಮಗಾ, ಹೋದಾಗಿಂದs ಎಲ್ಲಾನೂ ಬಿಟ್ಟ ಬಿಟ್ಟೆ ! ಈಗ ಹಲ್ಲೂ ಅಗಳಾಡಲಾಕ ಹತ್ಯಾವ....' ಎಂದು ಹೇಳುತ್ತ, ಎದ್ದು ಗುಂಡಪ್ಪನ ಸಮೀ ಪಕ್ಕೆ ಹೋಗಿ, ಅವನ ಪಾದಗಳ ಮೇಲೆ ತಲೆಯಿಟ್ಟುಕೊಂಡು ಕುಳಿತುಬಿಟ್ಟ.

'ಇದೇನಪ್ಪಾ ? ಶಿವ್ಯಾ ಬಂದಾನ ಏನು ? ಎಲ್ಲಿ ನನಗ ಭೇಟ್ಟೇನs ಆಗಿಲ್ಲಲ್ಲಾ ? ಎಲ್ಲಿ ಹೋಗಿದ್ದನಂತ ಇಷ್ಟ ದಿನಾ...?' ಎಂದು ಗುಂಡಪ್ಪ ಕೇಳಿದ.

'ಇಲ್ಲರೀ ; ನಿನ್ನೇ ಬಂದಾನ....ಇನ್ನೂ ತೋಟದೊಳಗs ಇದ್ದಾನ, ನೀವು ಊರಾಗ ಬರಲಿಕ್ಕೆ ಅಪ್ಪಣೀ ಕೊಟ್ಟರ ಬರತಾನ..... ನಿಮ್ಮ ಕಿವಿಗೆ ಹಾಕದ ಹ್ಯಾಂಗ ಬರೋದು ? ನೀವು ಊರಾಗ ತಿರುಗಾಡತೀರಿ......ಗೌಡರ ಮನೀಗೂ ಚಾವಡೀ ಬೀದಿಗೂ ಹಾಯ್ದಾಡತೀರಿ......ಅಪ್ಪಾ......ನಾವೇನು ಕಣ್ಣಿದ್ದೂ ಕುರುಡರ್ಹಾಂಗ ! ಮ್ಯಾಲಿಂದ ಏನಾದರೂ ಸ್ವಲ್ಪ ಬಂದರ ನೋಡಿಕೋರಿ......ಶಿವೂನ್ನ..... ನಿಮ್ಮ ಉಡ್ಯಾಗನs ಹಾಕಿಬಿಟ್ಟೇದೀನಿ....ಇಂದ ಅಂವ ನನ್ನ ಮಗಾ ಅಲ್ಲ ; ನಿಮ್ಮ ಮಗಾನs ಅಂತ ತಿಳಕೋರಿ !' ಎಂದು ಅಂಗಲಾಚಿ ಬೇಡಿದ ಭೀಮಪ್ಪ.

'ಅವನ ಚಿಂತೀ ಬಿಟ್ಟು ಬಿಡು. ಏನು ಬಂದದ್ದು ನೋಡಿಕೊಳ್ಳಾಕ ನಾ ಇದ್ದೀನಿ !' ಎಂದು ಆಶ್ವಾಸನ ಕೊಟ್ಟ ಗುಂಡಪ್ಪ.

* * * *

ಈಗ ಭೀಮಪ್ಪ ನಿಶ್ಚಿಂತನಾದ. ಗುಂಡಪ್ಪನ ಮುಖಾಂತರ ಊರವರನ್ನೇ ಕಟ್ಟಿಕೊಂಡ ಮೇಲೆ ಬೇರೆ ಏನು ಹೆದರಿಕೆ ಅವನಿಗೆ ? ಶಿವಪ್ಪನೂ ಈಗ ಬೇಕಾದಂತೆ ಊರಲ್ಲಿ ತಿರುಗಾಡತೊಡಗಿದ. ದಿನಾಲು ಕೆಲಸಕ್ಕೆ ಹೋಗಿ ಸಂಪಾದಿಸಿ, ತಂದೆ ತಾಯಿಗಳ ಹೊಟ್ಟೆಗೆ ಹಾಕಹತ್ತಿದ. ಇನ್ನೊಂದು ತಿಂಗಳಲ್ಲಿ ಗೌಡರ ಮನೆಯಿಂದ ತನ್ನ ತಮ್ಮನನ್ನು ಕೆಲಸದಿಂದ ಬಿಡಿಸಿ ತಂದು, ಮೊದಲಿನಂತೆ ಸಾಲೆಗೆ ಕಳುಹಬೇಕೆಂಬ ಆಲೋಚನೆಯಲ್ಲಿದ್ದ. ಮೊನ್ನೆ ಹಾದಿಯಲ್ಲಿ ಶಾಲೆಯ ಮಾಸ್ತರರು ದೊರಕಿದಾಗ 'ನಮ್ಮ ಹುಡುಗನಿಗಷ್ಟು ಚೆಲೋ ಪಾಠಾ ಹೇಳಿಕೊಡ್ರೀ' ಅಂತ ಈಗಾಗಲೇ ಸೂಚಿಸಿದ್ದ.

ಭೀಮಣ್ಣಾ ಈಗ ಸಂಜೆಗೆ ಮಗನನ್ನು ಬಿಟ್ಟು ಎಂದು ಊಟ ಮಾಡುವದಿಲ್ಲ. ಮಧ್ಯಾಹ್ನ ಮಾತ್ರ ಕೆಲಸಕ್ಕೆ ಹೋದಾಗ ಶಿವಪ್ಪ ಹೊಲದಲ್ಲಿ ಉಣ್ಣುತ್ತಿದ್ದುದರಿಂದ, ಒಬ್ಬನೇ ಉಣ್ಣುತ್ತಿದ್ದ ; ಸಂಜೆಗೆ ಮಗನು ಕೆಲಸದಿಂದ ಬಂದ ಮೇಲೆ, ಇಬ್ಬರೂ ಕೂಡಿಯೇ ಊಟಕ್ಕೆ ಕೂಡುವರು. ಅದೇ ಕಾಲಕ್ಕೆ ಶಿವಪ್ಪನ ತಾಯಿಯೂ ಅವರ ಜೊತೆಯಲ್ಲಿಯೇ ಊಟಕ್ಕೆ ಕೂಡುವಳು. ಅದೇನು ಈಗಿನ ಹೊಸ ಪದ್ಧತಿಯ ಪರಿಣಾಮವಲ್ಲ. ಹಿಂದು ಮುಂದೆ ಊಟಮಾಡಿದರೆ, ಮೊದಲುಣ್ಣುವವರು ಹೊಟ್ಟೆ ತುಂಬ ತಿಂದರೆ, ಹಿಂದಿನವರಿಗೆ ಉಳಿಯುವದೊ ಇಲ್ಲವೊ ಎಂಬ ಶಂಕೆ ಬೇರೆ ಇರುವುದಲ್ಲ......ಒಮ್ಮೆಲೇ ಕುಳಿತರೆ ಹೆಚ್ಚು ಕಡಿಮೆ ಎಲ್ಲರೂ ಸ್ವಲ್ಪ ಸ್ವಲ್ಪ ಹರಿದು ಹಂಚಿ

ತಿನ್ನಲು ಬರುತ್ತದೆ. ಅಲ್ಲದೆ ಇಂತಹ ದಿವಸಗಳಲ್ಲಿ ದೀಪವನ್ನೂ ಬಹಳ ಹೊತ್ತು ಉರಿಸಬೇಕಾಗುವುದಿಲ್ಲ......ಎಂಬುದೇ ಆದರ ಕಾರಣಗಳು.

ಇಂದು ಆದೇಕೋ ರಾತ್ರಿ ಎಂಟು ಗಂಟೆಯಾದರೂ ಶಿವಪ್ಪ ಕೆಲಸದಿಂದ ಬರಲಿಲ್ಲ. ಭೀಮಪ್ಪ ಗುಬ್ಬಿ ಮರಿಯಂತೆ ದಾರಿ ಕಾಯುತ್ತಲಿದ್ದಾನೆ, ಹೊಟ್ಟೆ ಹಸಿದಿದೆ. ಇನ್ನೂ ಶಿವಪ್ಪನ ಸುಳುವಿಲ್ಲ. ವೇಳೆಯಾಗಿ ಹೋಯಿತು. 'ಯಾಕ ಬರಲಿಲ್ಲೊ ! ಎಲ್ಲಿಯಾದರೂ ಹೋದನೇನು ಮೊದಲಿನಾಂಗ ? ಛೇ, ಎಂದೂ ಹೋಗಲಿಕ್ಕಿಲ್ಲ ! ಆಂದಾದರೂ ಅಂವ ಹೋಗತಕ್ಕವನಲ್ಲ. ಕುಲಕರ್ಣೇರು ಎರಡು ದಿವಸ ಸವಿ ಸವಿ ತಿನ್ನಾಕ ಹಾಕಿ, ಒಯ್ದು ಭರತಿ ಮಾಡಿ ಬಿಟ್ಟರು ! ಅವರೇನೋ ತಮ್ಮ ಸಾವಿಗೆ ಅಂಜತಾರ ; ಯಾರನ್ನರೆ ಬಡವರ ಮಕ್ಕಳ್ಳನ್ನ ಭರತಿ ಮಾಡಿಕೊಟ್ಟು ತಾವು ಸರಕಾರದಾಗ ಮುಂದ ಆಗತಾರ !' ಎಂದು ಏನೇನೋ ವಿಚಾರಗಳೆಲ್ಲ ಭೀಮಪ್ಪನ ಮನಸ್ಸಿನಲ್ಲಿ ಬರತೊಡಗಿದುವು. ಅಷ್ಟರಲ್ಲಿ ಹೊರಗೆ ಯಾರೋ ಬಂದ ಸದ್ದಾಯಿತು. ಶಿವಪ್ಪನೇ ಬಂದನೆಂದು ಮುದುಕನ ಮುಖ ಅರಳಿತು. ಆದರೆ ಬಂದವನು ಶಿವಪ್ಪನಾಗಿರಲಿಲ್ಲ. ಮತ್ತೊಬ್ಬ ಯಾವನೋ ತರುಣನಾಗಿದ್ದ–ಅರ್ಧ ಮರ್ಧ ಮಿಲಟರಿ ಅರಿವೆಗಳೇ ಅವನ ಮೈಮೇಲಿದ್ದುವು. ಭೀಮಪ್ಪ ದಿಟ್ಟಿಸಿ ನೋಡಿದ. ಕತ್ತಲೆಯಲ್ಲಿ ಬಂದವನ ಗುರುತು ಹತ್ತದಾಯಿತು. ಅಷ್ಟರಲ್ಲಿ ಬಂದ ವನೇ ಗದ್ದರಿಸುವ ಧ್ವನಿಯಲ್ಲಿ, 'ಭೀಮ ಇಲ್ಲೇನು ಮನಿಯೊಳಗ ?......' ಎಂದು ಕೇಳಿದ.

'ಯಾಕೋ ಯಪ್ಪಾ ಇದ್ದೀನಿ !....' ನಿಟ್ಟುಸಿರೊಡನೆ ಮಾತು ಬಂತು ಭೀಮನ ಮುಖದಿಂದ.

'ನಡಿ ಅಲ್ಲಿ....ನಿನ್ನ ಮಗಾ....ಮಿಲಿಟರಿಯಿಂದ ಓಡಿಬಂದಾನಂತ ಪೋಲೀಸರು ಹಿಡಿದು ಒಯ್ಯಲಿಕ್ಕೆ ಹತ್ಯಾರ. ಈಗ ಬಂದರ ಭೆಟ್ಟಿ ಆಗತಾನ....ಇಲ್ಲದಿದ್ದರ ಅವನ ಮುಖ....ಮತ್ತೊಮ್ಮೆ ಸಿಗೂಹಾಂಗಿಲ್ಲ......ರಾತ್ರೀ ಮೇಲ್ ಗಾಡಿಗೆ ಒಯ್ಯತಾರ ಅವನ್ನ ! "ನಮ್ಮ ಅಪ್ಪಗಷ್ಟು ತಿಳಿಸು" ಅನ್ನೋಣಾ......ನಾ ಬಂದೆ....' ಎಂದು ಸಿಡಿಲೆರಗಿದಂತೆ ನುಡಿದು ಬಿಟ್ಟ.

'ಈಗ ಎಲ್ಲಿ ಅದಾನೋಪ್ಪಾ !' ನಡಗುವ ದನಿಯಿಂದ ಕೇಳಿದ ಭೀಮಪ್ಪ.

'ಎಲ್ಲಿಯೋ ಕೆಲಸಕ್ಕ ಹೋಗುತ್ತಿದ್ದನಂತ......ಅಲ್ಲೇ ಹೋಗಿ ಹಿಡಿದಾರ...... ಈಗ ಊರ ಹೊರಗ ತೊಗೊಂಡು ಬಂದಾರ......ಸ್ಟೇಶನಕ್ಕ ಒಯ್ಯಬೇಕಂತ....! ಹೋಗಿ ಭೆಟ್ಟಿ ಆಗೋದಿದ್ದರ ಆಗು !' ಎಂದು ಹೇಳಿ, ಹೋಗಿ ಬಿಟ್ಟ ಆತ.

'ಅಯ್ಯೋ ನನ್ನ ಮಗನ....ಮತ್ತ ಒಯ್ಯತಾರಪ್ಪಾ! ಇನ್ನ....ಏನ್ ಮಾಡಲ್ಯೋ ಮಗನ....ಮುಪ್ಪಿನ ಕಾಲದಾಗ ನಮ್ಮನ್ನ ಯಾರ ಜೋಕಿ ಮಾಡುವರೋ....! ಶಿವನs ನಮ್ಮನ್ನ ನೋಡಿಯಾದರೂ ದಯಾ ಬರಬಾರದೇನಪ್ಪಾ ನಿನಗ?' ಎಂದು ಭೀಮಪ್ಪ ಹಲಬುತ್ತ ಎದ್ದು ಹೊರಹೊರಟ.

'ನಾನೂ ಕೈ ತೊಳಕೊಂಡು ಬರತೀನಿ...ಒಂದಿಟ್ಟ ನಿಂದರ್ರಿ!' ಎಂದು ಶಿವಪ್ಪನ ತಾಯಿ ರೊಟ್ಟಿ ಮಾಡುವುದನ್ನು ಬಿಟ್ಟು ಎದ್ದಳು.

* * * *

ಶಿವಪ್ಪನನ್ನು ನಡುವೆ ಕೂಡಿಸಿಕೊಂಡು ಸುತ್ತಲೂ ನಾಲ್ಕಾರು ಜನರು ಕುಳಿತಿದ್ದಾರೆ. ಅವರ ನಡುವೆ ಶಿವಪ್ಪನು ಏನೂ ಚಿಂತೆಯಿಲ್ಲದೆ ಸ್ವಸ್ಥ ಕುಳಿತಿದ್ದಾನೆ. ಅವನಿಗೆ ಇವರೆಲ್ಲಿಯೂ ಒಯ್ಯುವುದಿಲ್ಲವೆಂಬುದು ಮನದಟ್ಟಾಗಿದೆ. ಮಧ್ಯಾಹ್ನದಿಂದಲೂ 'ಆ ಗಾಡಿಗೆ ಒಯ್ಯುತ್ತೇವೆ, ಈ ಗಾಡಿಗೆ ಒಯ್ಯುತ್ತೇವೆ' ಎಂದು ಬೆದರಿಸಿ, ಸ್ಟೇಶನ್ನಿಗೆ ಕರೆದೊಯ್ದರು. ಪೋಲೀಸ್ ಇನಸ್ಪೆಕ್ಟರು ಬರುವರೆಂದು ಅಂಜಿಕೆ ಹಾಕಿದರು, ನಾಲ್ಕು ರೂಪಾಯಿ ಸಿಕ್ಕಬಹುದೆಂದು. ಅದು ಸಾಧ್ಯವಾಗದಿರಲು ಈಗ ನಮ್ಮಪ್ಪನನ್ನು ಕರೆಯಿಸಿ, ಹೇಗಾದರೂ ನಾಲ್ಕು ದುಡ್ಡು ಉಚ್ಚಬೇಕೆಂದು ಮಾಡಿದ್ದಾರೆ ಎಂದು ಏನೇನೋ ಯೋಚಿಸುತ್ತಿರುವಷ್ಟರಲ್ಲಿ ಅವರೊಳಗಿನವನೊಬ್ಬನು:

'ಏ ಶಿವ್ಯಾ....ನಿನಗ ಮಧ್ಯಾಹ್ನದಿಂದೂ ಹೇಳಲಿಕ್ಕೆ ಹತ್ತೇವಿ, ಬುದ್ಧಿ ಬರುವಲ್ದು....ಮಗನs....ನಾವು ನಿನ್ನ ಹಿತಕ್ಕಾಗಿ ಮಾಡಲಿಕ್ಕೆ ಹೋದರ ನಿನಗದರ ಸುದ್ದೀನs ಇಲ್ಲ....! ಸುಮ್ಮನ ಆ ಮೂಲೀಮನೀ ಗುಂಡಪ್ಪನ ಹತ್ತರ ನಿಮ್ಮಪ್ಪಗ ಹೋಗೂ ಅನ್ನು. ಅವನದೂ ಫೌಜದಾರನದೂ ನೆಟ್ಟಗೈತಿ....ಏನಾದರೂ ಮಾಡತಾನ....ಹೋಗಿ ಅವನ ಕಾಲು ಹಿಡಿ ಅನ್ನು....ನಿಮ್ಮಪ್ಪಗ......' ಎಂದು ಬುದ್ಧೀ ಮಾತು ಹೇಳುತ್ತಿದ್ದನು.

ಅಷ್ಟರಲ್ಲಿ ಭೀಮಪ್ಪ ಅಲ್ಲಿಗೆ ಹೋದ. ಭೀಮಪ್ಪ ಬಂದುದನ್ನು ನೋಡಿ ಮತ್ತಿಷ್ಟು ಜೋರಿನಿಂದ—'ನೋಡಿದೀ....ನಿನ್ನ ಮಗನ ಕಾರಭಾರ....? ಮೊದಲ ಭರತೀ ಆಗಬಾರದೂ....ಆದ ಮ್ಯಾಲ....ಹೀಂಗ ತಪ್ಪಸ್ಯಾಡಬಾರದು....ತಪ್ಸಿದರ ಬಿಡ್ತಾರs....?....'

'ನಾ ಭರತೀ ಆಗಿಲ್ಲ; ಸುಮ್ಮನ ನೀವs ಕಾಡಲಿಕ್ಕೆ ಹತ್ತೀರಿ. ಫೌಜದಾರ್ರು ಬರಲಿ, ನಾ ಹೇಳತೀನಿ. ಇಲ್ಲ ಆದರೆ, ನೀವು ಎಲ್ಲಿ ನಡೀ ಅಂತೀರಿ ಅಲ್ಲಿ ನಡೀರಿ....! ಬೇಕಾದಲ್ಲಿ ಬರತೀನಿ.' ನಡುವೆಯೇ ಬಾಯಿಹಾಕಿ ಶಿವಪ್ಪ ಹೇಳಿದ.

'ಇನ್ನೂ ಇವನ ಸೊಕ್ಕು ಮುರದಿಲ್ಲರೊ....? ತೊಗೊಳ್ಳಿರಿ....ನಾಲ್ಕು ಏಟು !' ಎಂದ ಮತ್ತೊಬ್ಬ.

ಇನ್ನೊಬ್ಬ ಶಿವಪ್ಪನನ್ನು ಹೊಡೆಯಲು ಸಿದ್ಧನಾದ. ಅದನ್ನೆಲ್ಲ ಕಂಡು ಭೀಮಪ್ಪನು. 'ಬಿಡರೆಪ್ಪಾ ! ಬಡೀಬ್ಯಾಡ್ರಿ ; ಆ ಅಲ್ಲಡ ಹುಡುಗನ್ನ ಏನ್ ಮಾಡ ತೀರಿ ? ಏನ್ ಹೇಳೋದು ನನಗ ಹೇಳಿರಿ....ಮಾಡ್ತೀನಿ !....ನಾಲ್ಕು ದುಡ್ಡು ಖರ್ಚು ಆದರೂ ಜೀವಾ ಒತ್ತೀ ಇಟ್ಟು ತರತೀನಿ.....' ಎಂದು ಅವರಿಗೆ ನಮಸ್ಕಾರ ಮಾಡಲು ಓಡಾಡ ತೊಡಗಿದ.

ಅವರಲ್ಲಿಯ ಒಬ್ಬ ಧೂರ್ತನು 'ಇಲ್ಲಿ ಬಾ, ಮುದಕಾ' ಎಂದು ಭೀಮಪ್ಪನನ್ನು ದೂರ ಅಡವಿಯಲ್ಲಿ ಕರೆದೊಯ್ದು, ಆವನ ಕಿವಿಯಲ್ಲಿ ಏನೇನೋ ಬಹಳ ಹೊತ್ತಿನವ ರೆಗೆ ಹೇಳಿದ. ಅದಕ್ಕೆಲ್ಲ ಮುದುಕನು ಒಪ್ಪಲು, ಅವರೊಳಗಿನವನೊಬ್ಬ ಮುದುಕನ ಬೆನ್ನು ಹತ್ತಿ ಊರೊಳಗೆ ನಡೆದ. ಹೋಗುವಾಗ....'ಈಗ ಬರತೀನಿ ;....ನಾ ಬರುವವರೆಗೆ ಬಿಟ್ಟೀರಿ ಮತ್ತ ಇವನ್ನ ! ಜಿಗದ ಹೋದಾನು ಎಲ್ಯಾದರೂ ;...... ಪೋಲೀಸರು....ನಮ್ಮನ್ನ ಒಯ್ದು ಕೂಡಿಸ್ಯಾರು......ತುರಂಗದೊಳಗ !....' ಎಂದು ನಸುನಗೆಯೊಡನೆ ಕೂಗಿ ಹೇಳಿದ.

* * * *

ಇಂದು ಮುಂಜಾವಿನಿಂದಲೂ ಗುಂಡಪ್ಪನ ಮನೆಯ ಆಳು ಭೀಮಪ್ಪನ ಕಡೆಗೆ ನಾಲ್ಕಾರು ಸಲ ಬಂದು ಹೋದ. ಮಧ್ಯಾಹ್ನ ನಾಲ್ಕರ ಗಾಡಿಗೆ ಫೌಜದಾರ' ಬರುತ್ತಾನಂತೆ......ಮೊನ್ನೆ ರಾತ್ರಿ ಹೇಳಿದಂತೆ ಇಂದು ಇಪ್ಪತ್ತೈದು ರುಪಾಯಿ ಕೊಟ್ಟು ತೀರಿಸಬೇಕಂತೆ ; ಏನಾದರೂ ಮಾಡಿ ಕೊಟ್ಟುಬಿಡಬೇಕೆಂದರೆ ಹತ್ತಿರ ರೂಪಾಯಿ ಇಲ್ಲ. ಭೀಮ ಯೋಚಿಸತೊಡಗಿದ; ಮನೆಯೊಳಗ ಸಂಜೀ ಕೂಳಿಗೆ ಗತಿಯಿಲ್ಲ. ಇಪ್ಪತ್ತೈದು ರೂಪಾಯಿ ಎಲ್ಲಿಂದ ತರಬೇಕು ? ಕೇಳಲಿಕ್ಕೆ ಹೋದರ ಯಾರೂ ಒಂದ ಕಾಸನ್ನೂ ಕೊಡುವಂತಿಲ್ಲ. ಸಿದ್ದನನ್ನು ಕೇಳಿದರ 'ನಿನ್ನ ಮಗನ್ನ ನನ್ನಲ್ಲಿ ಚಾಕರೀ ಇಟ್ಟರ ಕೊಡತೀನಿ' ಅನ್ನುವ. 'ಆರು ತಿಂಗಳು ಚಾಕರಿಗೆ ಇರು ಏನಾದರೊಮ್ಮೆ ಈ ಕತ್ತರಿಯೊಳಗಿಂದ ಪಾರಾಗೋಣ' ಎಂದು ಹೇಳಿದರ ಶಿವಪ್ಪ 'ನಾ ಮೊದಲ ಭರತೀನs ಆಗಿಲ್ಲ ; ಸುಮ್ಮನs ನಾಲ್ಕು ಮಂದಿ ಬೆದರಿಸಿ ನಿನ್ನ ಕಡಿಂದ ರೂಪಾಯಿ ಎತ್ತಬೇಕಂತ ಮಾಡ್ತಾರ : ನೀ ಅಂಜುಬುರುಕ ಇದ್ದೀದೀ, ಅದಕ್ಕ ಹೀಂಗ ಮಾಡತಾರವರು....ಸ್ಪಷ್ಟ ಹೇಳು, ಕೊಡೂದುಲ್ಲಂತ, ಇದೆಲ್ಲಾ ಆ ಗುಂಡಪ್ಪನ ಆಟ ಐತಿ ! ಊರಾಗ ರಜೇದ ಮೇಲೆ ಬಂದ ನಾಲ್ಕು ಮಿಲಟರೀ ಹುಡುಗರನ್ನ ಕೂಡಿಕೊಂಡು, ಒಬ್ಬ ಪೋಲೀಸನ್ನ ಕಟ್ಟಿಕೊಂಡು, ಈ ಕೆಲಸ ನಡ

ಸ್ಯಾನ' ಅಂತಾನ. ಯಾರ ಆಟ ಇದ್ದರೇನಾಯಿತು......?? ಊರಾಗ ನಾವು ಜನ್ಮಾ ಮಾಡಬೇಕಾಗೇತಿ. ದೊಡ್ಡವರಿಗೆ ವಿರುದ್ಧ ಆದರ ಹ್ಯಾಂಗ ಬಾಳ್ವೇ ಆದೀತು? ಏನಾದರೂ ಮಾಡಿ ಗೌಡನ ಕಿವೀ ಮ್ಯಾಲ ಒಂದು ಮಾತು ಇಡಬೇಕು......ಅವನಾದರೂ ಏನ್ ಅಂತಾನ ಕೇಳೋಣ...... ಎಂದು ವಿಚಾರಿಸುತ್ತಲೇ ಗೌಡರ ಮನೆಗೆ ಹೋದ.

'ನಮಸ್ಕಾರರೀ' ಎಂದ ಭೀಮಪ್ಪ.

ಗೌಡರು ಉಂಡು ಇದೀಗ ಪಡಸಾಲೆಗೆ ಬಂದಿದ್ದರು. ಭೀಮನು ಬಂದುದನ್ನು ಕಂಡೂ ಕಾಣದವರಂತೆ ಇದ್ದರು. ನಮಸ್ಕಾರಕ್ಕೆ ಪ್ರತಿ ನಮಸ್ಕಾರ ಗೌಡರಿಂದ ಸಿಕ್ಕದಿರಲು, ಭೀಮನ ಮುಖ ಇಳಿಯಿತು. ಹಾಗೆಯೇ ಸ್ವಲ್ಪ ಹೊತ್ತು ಕಟ್ಟೆಯ ಮೇಲೆ ಕುಳಿತ. ಸುಮಾರು ಅರ್ಧ ತಾಸು ಕಳೆದಿರಬಹುದು. ಗೌಡರು ಹಾಗೆಯೆ ಅಡ್ಡಾಡುತ್ತಲಿದ್ದಾರೆ. ನಡುವೆ ಒಮ್ಮೆ ಭೀಮನ ಕಡೆಗೆ ದೃಷ್ಟಿಯನ್ನು ಬೀರಿದರಷ್ಟೇ. ಅದೇ ಕಾಲಕ್ಕೆ ಮಾತನ್ನು ತೆಗೆಯಬೇಕೆಂದು ಭೀಮ ಬಾಯಿ ಚಪ್ಪರಿಸಿದನಾದರೂ, ಬಾಗಿಲ ಕಡೆಗೆ ಏನೇನೋ ಕಂಡು ಅಲ್ಲಿಯೆ ಬಿದ್ದ ಗೌಡರ ನಾಯಿಯು 'ಒವ್' ಗುಡುತ್ತ ಓಡಿತು. ಅದಕ್ಕೆಂತಲೇ ಗೌಡರು ಸ್ವಾಭಾವಿಕವಾಗಿ 'ಏನೋ?' ಎಂದು ಕೇಳಿದರು.

ಭೀಮನು ಬಾಗಿಲ ಕಡೆಗೆ ನೋಡಿ—'ಏನಿಲ್ಲರೀ........ಹಾದಿಯಿಂದ ಹೋಗುವ ಎಮ್ಮಾ ಮಣಕಾ ನೋಡಿ........ಓಡಿತು!' ಎಂದು ಹೇಳಿ ಸುಮ್ಮನಾದ. ಮತ್ತೆ ಮೌನ ಆವರಿಸಿತು. ಹತ್ತೆಂಟು ನಿಮಿಷಗಳು ಕಳೆದಿರಬೇಕು. 'ಭೀಮಾ, ಹುಡುಗನ್ನ ಚಾಕರಿಯಿಂದ ಬಿಡಿಸಬೇಕೆಂತ ಮಾಡೀದಿ ಅಂತ........?' ಎಂದು ಗೌಡರು ತಮ್ಮ ಸ್ವಾಭಾವಿಕವಾದ ಚೀರು ದನಿಯಲ್ಲಿ ಆ ಮೌನವನ್ನು ಭೇದಿಸಿದರು. ಮನೆಯಲ್ಲಿ ಹುಡುಗನನ್ನು ಚಾಕರಿಯಿಂದ ಬಿಡಿಸುವುದೆಂದು ನಿಶ್ಚಯವಾಗಿದ್ದಿತಾದರೂ, ಈಗ ಅದರ ಪ್ರಸ್ತಾವನೆ ಮಾಡುವುದು—ಅದೇಕೆ—ಅದನ್ನು ತಿಳಿಸುವುದು ಒಳಿತಲ್ಲವೆಂದು ಭಾವಿಸಿ 'ಇಲ್ಲರೀ........ಇಂತಾ ದಿನದೊಳಗ ಚಾಕರೀ ಬಿಡಿಸಿ ಏನ್ ಮಾಡೂನು?........ಇಲ್ಲಿ ಇದ್ದಾನ ಅಂತ ತುತ್ತು ರೊಟ್ಟೀನರs ಕಾಣತಾನ!' ಎಂದು ನುಡಿದ ಭೀಮಣ್ಣ.

'ಆದೀ, ಮೊನ್ನೆ ನಿನ್ನ ಮಗಾ ಮಾಸ್ತರ ಮುಂದ ಅಂತಿದ್ದನಂತ "ನೌಕರೀ ಬಿಡಿಸಿ ಸಾಲಿಗೆ ಕಳಿಸ್ತೇನಿ" ಅಂತ. ಆದಕ್ಕs........ಕೇಳಿದೆ........'

'ಎಲ್ಲೀದ ಏನರಿ....?' ಕೂತ ಸ್ಥಳದಿಂದ ಎದ್ದು ಗೌಡರ ಸಮೀಪಕ್ಕೆ ಹೋಗುತ್ತ 'ಸಾಲೀ–ಸಮದಾ ನಮ್ಮಂತವರಿಗೆ ಏನ್ ಮಾಡೋದು? ಅವಗs....,

ಮಾಸ್ತರು ಅಂದರು: "ಈಗ ಮೂರ ಎತ್ತೆ ಆಗೇತಿ, ಇನ್ನೊಂದು ಎರಡು ಎತ್ತೆ ಆಗಲಿ, ಅಂದರ ಕಾಗದ ಪತ್ರ ಓದಿಕೊಳ್ಳಲಿಕ್ಕೆ ಬರತೈತಿ" ಅಂತ....'

'ಕೂತ ಹೇಳಲಿಕ್ಕೆ ಮಾಸ್ತರದು ಏನ ಹೋಗತೈತಿ....? ಹೊಟ್ಟೆಗೆ ಏನ ತಿನ್ನ ಅಂತಾರ ಸಾಲಿಗೆ ಕಳಿಸಿ ?' ಎಂದು ಗೌಡರು ನಡುವೆಯೆ ಗುಡುಗಿದರು.

ಭೀಮು ಮನಸ್ಸಿಲ್ಲದಿದ್ದರೂ 'ಹೌದು ಗೌಡರ ! ಅವರಿಗೆ ಏನ ತಿಳೀತೈತಿ....' ಎನ್ನುತ್ತ ಗೌಡರ ಸಮೀಪಕ್ಕೆ ಹೋಗಿ, ಮೊನ್ನೆ ಗುಂಡಪ್ಪನಿಗೆ ಇಪ್ಪತ್ತೈದು ರೂಪಾಯಿಗಳನ್ನು ಕೊಡುವದನ್ನು ಗೊತ್ತುಮಾಡಿ ಮಗನನ್ನು ಬಿಡಿಸಿ ತಂದ ಸಂಗತಿ ಯನ್ನೆಲ್ಲವನ್ನೂ ವಿವರವಾಗಿ ಅಂಜುತ್ತ ಅಂಜುತ್ತ ಹೇಳಿದನು. ಗೌಡರು ಎಲ್ಲ ವನ್ನೂ ಕೇಳಿಕೊಂಡು ಮನದಲ್ಲಿ—'ಈ ಗುಂಡಪ್ಪನೂ ಇಂಥವನೇ ; ನನಗ ಒಂದು ಮಾತನ್ನೂ ತಿಳಿಸಿಲ್ಲ. ನನ್ನ ಕಡೆಗೆ ಬಂದ ಕುಳಗಳಲ್ಲೂ ಪಾಲು ಹೊಡದs ಹೊಡೀ ತಾನ......ಹೀಂಗ ನಡುವನೂ ಸಿಕ್ಕಷ್ಟು ಎತ್ತತಾನ....ಇದರೊಳಗ ಅವನಿಗೆ ಬುದ್ಧೀ ಕಲಿಸಿಬಿಡಬೇಕು......' ಎಂದು ವಿಚಾರಿಸಿ, ಭೀಮನ ಕಡೆಗೆ ಸಿಟ್ಟಿನಿಂದ ನೋಡಿ 'ನಿಮಗ ಅಕಲೇ ಇಲ್ಲ ; ಮಗಾ ಬಂದಾನಂತ ನನಗ ತಿಳಿಸಿ ಹೋದೀ ? ನಿಮ್ಮ ಮೈಯಾಗ ಸೊಕ್ಕ ಐತಿ, ಏನ ಮಾಡೀರಿ ನೀವು......? ಹೋಗಲಿ ಹೋಗು, ಹಿಡಿದು ಒಯ್ಯಲಿ......ಅಂದರ ಅಳತಾ ಕೂಡ್ರತಿ......' ಎಂದು ಭಯಂಕರ ದನಿಯಿಂದ ಗರ್ಜಿಸಿ, ಒಳಕ್ಕೆ ಹೋಗಿ ಬಿಟ್ಟರು ಗೌಡರು.

'ಬಾಬಾ !......ಬಾಬಾ !' ಎಂದು ಕರೆಯುತ್ತ, ಗೌಡರ ಮನೆಯಲ್ಲಿ ಎಲ್ಲಿಯ ವರೆಗೆ ತನಗೆ ಹೋಗಲು ಶಕ್ಯವಿದೆಯೋ ಅಲ್ಲಿಯವರಗೆ ಮುಂದೆ ಹೋಗಿ, ಬಾಯಿ ತೆರೆದ ಭೀಮಪ್ಪ.

'ಹೋಗು ; ಮನೀಗೆ ಒಬ್ಬರು ಪುಂಡರಾಗೀರಿ...... ಊರವರಿಗಂದರ ಕಿಮ್ಮತ್ತ‌ನs ಇಲ್ಲ !' ಎಂದು ನಡುಮನೆಯಿಂದಲೇ ಗೌಡರು ಗುಡುಗಿದರು.

ಭೀಮಪ್ಪನ ಕಿವಿಯಲ್ಲಿ ಕಬ್ಬಿಣ ಕಾಯಿಸಿ ಸುರಿದಂತಾಯಿತು. ಕಣ್ಣಿಗೆ ಕತ್ತಲೆ ಕವಿದು ಅಲ್ಲೇ ಕಟ್ಟೆಯ ಕೆಳಗೆ ಕುಳಿತ. ಅದೆಷ್ಟು ಹೊತ್ತು ಕುಳಿತನೊ ! ಗೌಡರ ಮನೆಯೊಳಗಿನ ಐದಾರು ವರ್ಷದ ಹುಡುಗನು ಆಡುತ್ತ ಆಡುತ್ತ ಬಂದು, ಕಟ್ಟೆಯ ಮೇಲಿರುವ ಜೋಡುಗಳನ್ನು ಒಂದೊಂದಾಗಿ ಭೀಮನ ಬೆನ್ನಿನ ಮೇಲೆ— ಮುಖದ ಮೇಲೆ—ಒಗೆಯ ಹತ್ತಿದನು......ಆಗ ಎದ್ದ ಭೀಮು......ಎದುರಿಗೆ ಗೌಡರ ಅಕ್ಕ ಹುಡುಗನ ಆಟವನ್ನು ನೋಡುತ್ತ ನಿಂತಿದ್ದಾಳೆ !

'ಬಾಬಾಗೋಳು ಏನ ಮಾಡಲಿಕ್ಕ ಹತ್ಯಾರರೀ ?' ಎಂದು ನಮ್ರತೆಯಿಂದ ಮುಖ ಒರಸಿಕೊಳ್ಳುತ್ತ, ಕೇಳಿದ ಭೀಮ.

'ಏನ......ನೀರ ಕುಡೀಲಿಕ್ಕೆ ಹತ್ತೀದಾರ ಏನೋ......! ಮೊದಲs ಒಂದು ಮಾತು ಕಿವೀ ಮ್ಯಾಲ ಹಾಕಿ ಇಡಬೇಕಪ್ಪಾ......ಕುತ್ತಿಗಿಗೆ ಬರೋಣಾ ಬರ್ತೀರಿ...... ಅವರs ಏನ ಮಾಡಬೇಕು ? ಕೈಮೀರಿ ಹೋದ ಮೇಲೆ ? ಇನ್ನ ನೋಡು...... ಫೌಜದಾರರನ್ನ ಕಟ್ಟಿಕೊಳ್ಳಬೇಕು......ಅದೇನು ಖರ್ಚು ಇಲ್ಲದs ಆಗತೈತಿ ? ಖರ್ಚು ಮಾಡೋದು ಮಾಡಿ......ಹನ್ನೆರಡು ಮಂದಿ ಹತ್ತರ......ಬಾಯಿ ತೆರೀಬೇಕು ನಿಮ್ಮ ಸಲುವಾಗಿ ಗೌಡರು!......' ಎಂದು ಗೌಡರ ಉದ್ದೇಶಕ್ಕೆ ಭೂಮಿಯನ್ನು ಹದಗೊಳಿಸಿದಳು, ಅವರ ಹಿರಿಯಕ್ಕ.

'ಅವರೇನು ನಮ್ಮ ಮನಿಯವರs ಅವ್ವಾ, ಏನೂ ಇಲ್ಲದ ಮಾಡಲಾಕ......? ಗೌಡರೊಂದು ನಮ್ಮವರಂದರ....'

'ಅದೇ ; ಏನಾರs ಕೊಡತೀನಂತ......'

ಅಷ್ಟರಲ್ಲಿ ಗೌಡರು ಹೊರಗೆ ಬಂದರು. ಅವರ ಅಕ್ಕನ ಮಾತು ಅಷ್ಟಕ್ಕೇ ನಿಂತಿತು. ಹೆದರಿದವಳಂತೆ ನಟಿಸಿ ನಡುಮನೆಗೆ ಹೋದಳು. ಗೌಡರ ಅಕ್ಕನೇ ಅವರಿಗೆ ಅಷ್ಟು ಹೆದರಿದ ಮೇಲೆ ಭೀಮಪ್ಪನೆಷ್ಟು ಹೆದರಬೇಡ ? ನಡುಗುವ ಕೈಗಳಿಂದ ಗೌಡರ ಕಾಲನ್ನು ಹಿಡಿದ.

'ಈ ಹೊತ್ತು ಫೌಜದಾರ್ರು ಬರಾವರು ಇದ್ದಾರ, ಏನಾರs ಮಾಡೋಣ ; ಹೋಗು, ಹದಿನೈದು ರೂಪಾಯಿ ತಗೊಂಡು ಬಾ......ಕೆಲಸ ಆದರ ನಿನ್ನ ನಸೀಬ....' ಎಂದರು ಗೌಡರು.

'ಕೈ ಜೋಡಸತೀನಿ....ಏನಾದರೂ ಮಾಡಿ ಇದೊಂದು ಕೆಲಸಾ ಮಾಡಲಾಕs ಬೇಕು !'

'ನೋಡೋಣು ಹೋಗು....ಏನ ಆಗತೈತಿ....! ಬರೋಗರ ಅಲ್ಲೀ ತನಕ....'

ಭೀಮ ತಲೆಬಾಗಿಲವರೆಗೆ ಹೋಗಿರಬೇಕು. ಗೌಡರು 'ಭೀಮಾ' ಎಂದು ಕೂಗಿದರು. ಭೀಮ ಗೌಡರ ಸಮೀಪಕ್ಕೆ ಬರಲು 'ನೋಡು, ಆಗೂಹಾಂಗ ಇದ್ದರ ಹೇಳು....ಸಂಜಿಗೆಂದರ ಫೌಜದಾರ ಸಾಹೇಬರು ಬರಾವರು....ಬಂದ ಕೂಡಲೆ ನಿಮ್ಮದs ಪ್ರಕರಣ, ಇಲ್ಲಾದರ ಸುಳ್ಳs ಮಾರೀ ಕೆಡಿಸಿ ಇಟ್ಟೀ ಅವರ ಮುಂದ....'

ದೊಡ್ಡ ಬಾಯಿಃ ಗೌಡರದುಃ. ಹದಿನೈದು ರೂಪಾಯಿಗಳಲ್ಲೇ ಕೆಲಸ ಆಗುವುದು....ಎಂಬ ಉಬ್ಬಿನಲ್ಲಿ, ರೂಪಾಯಿ ಎಲ್ಲಿಂದ ತರುವುದೆಂಬುದನ್ನೂ ವಿಚಾರಿಸದೆ, ಮನೆಯಲ್ಲಿ ಇಟ್ಟು ಬಂದವರಂತೆ ಭೀಮ ತರಲಿಕ್ಕೆ ಹೊರಟಿದ್ದ. ಈಗ ಗೌಡರ ಮಾತಿನಿಂದ ಅವನು ವಿಚಾರಕ್ಕೊಳಗಾದ ; ಬೆಪ್ಪನಂತೆ ಸುಮ್ಮನೆ ನಿಂತು ಬಿಟ್ಟ.

'ಸಣ್ಣ ಹುಡುಗನನ್ನು ಮುಂದಿನ ವರ್ಷ ಒಂದಃ ನಮ್ಮಲ್ಲೇನs ದನಗಳನ್ನು ಕಾಯಲಿಕ್ಕೆ ಇಟ್ಟುಬಿಡು....ನಾ ಎಲ್ಲಾನೂ ನೋಡಿಕೋತೀನಿ!' ಎಂದು ಗೌಡರೇ ಉಪಾಯವನ್ನು ಸೂಚಿಸಿದರು.

'ಹೂಂ ! ಹಾಂಗs ಏನಾರೇ ಮಾಡಿ ಪುಣ್ಯ ಕಟ್ಟಿಕೊಳ್ಳಿರಿ....! ಶಿವ್ಯಾನ ನಿಮ್ಮ ಉಡ್ಯಾಗs ಹಾಕೀದೀನಿ....ಇಂದ ಶಿವ್ಯಾ ನನ್ನ ಮಗಾ ಅಲ್ಲ, ನಿಮ್ಮ ಮಗಾ ಅಂತ ತಿಳಿಕೊಳ್ಳಿರಿ....ನಾನಾರೇ ರೂಪಾಯಿ ಎಲ್ಲಿಂದ ತರಲಿ....? ಏನೋ ಮನೀ ಮ್ಯಾಗ ನಾಲ್ಕು ಪತ್ರೆ (ತಗಡು) ಆದಾವು....ಅವನ್ನs ಎಲ್ಲಿಯಾದರೂ ಒತ್ತಿ ಇಟ್ಟು ತರಬೇಕು ; ಅದರ ಹೊರತಾಗಿ ನಮ್ಮ ಮನಿಯೊಳಗ ಏನ ಐತಿ ?....'

'ಛೀ, ಹಾಂಗೇನೂ ಮಾಡಬ್ಯಾಡ....ಮಳೀ—ಮಳಿಗಾಲ ದಿನಾ. ಮೋಡ ಬ್ಯಾರೆ ದನಿಗುಡತೈತಿ....; ಮಳೀ ಬಂತೂ ಅಂದರ ಎಲ್ಲಿ ಹೋಗಾವರು....? ಇರಲಿಕ್ಕೆ ಮನೀ ಬ್ಯಾಡ ?....' ಎಂದು ಗೌಡರು ದಯೆದೋರಿದರು, ದನ ಕಾಯಲು ಮತ್ತೊಬ್ಬ ಹುಡುಗ ಸಿಕ್ಕುವುದಿಲ್ಲವೆಂದು.

ಭೀಮಪ್ಪನ ಮನಸ್ಸಿನಲ್ಲಿ ಮಗನಿಗೆ ಇನ್ನೊಂದೆರಡು ವರ್ಷ ಓದುಬರೆಹ ಕಲಿಸಬೇಕೆಂದಿದ್ದರೂ ಅನಿವಾರ್ಯವಾಗಿ ಗೌಡರ ಮಾತಿಗೆ ಒಪ್ಪಬೇಕಾಗಿದ್ದಿತು. 'ಹುಡುಗ ಇನ್ನೂ ಒಂದು ವರ್ಷ ಗೌಡರಲ್ಲಿ ದನಕಾಯ್ದರೂ ಅಡ್ಡಿಯಿಲ್ಲ, ಒಮ್ಮೆ ಈ ಸಂಕಟದೊಳಗಿಂದ ಶಿವಪ್ಪನನ್ನು ಗೌಡರು ಉಳಿಸಿದರೆ ಸಾಕು, ಎನ್ನುವಷ್ಟು ಅವನ ಸುತ್ತಲಿನ ಪರಿಸ್ಥಿತಿಯು ಭೀಕರವಾಗಿ ತೋರುತ್ತಿದ್ದಿತು. ಆದರಿಂದ ಗೌಡರು ಶಿವಪ್ಪನನ್ನು ಉಳಿಸುವೆನೆಂದರೆಂಬುದೇ ದೈವಕೃಪೆಯೆಂದು ಭಾವಿಸಿ, ಅವನು ಸಂತೋಷದಿಂದ ಮನೆಗೆ ನಡೆದ.

'ಇನ್ನೇನೂ ಶಿವಪ್ಪನ ವಿಷಯಕ್ಕೆ ಕಾಳಜೀ ಮಾಡಬೇಕಿಲ್ಲ. ಎಲ್ಲಾನೂ ಗೌಡರು ನೋಡಕೋತೀವಿ ಅಂದರು....' ಎಂಬ ಸಂಗತಿಯನ್ನು ಹೆಂಡತಿಗೆ ತಿಳಿಸಬೇಕೆಂಬ ಉತ್ಸಾಹದಲ್ಲಿ, ಸ್ವಲ್ಪ ಲಗುಬಗೆಯಿಂದಲೇ ಮನೆಯ ಕಡೆಗೆ ಸಾಗಿದ್ದ ಭೀಮಪ್ಪ....ಮನೆಯನ್ನು ಸಮೀಪಿಸುವಷ್ಟರಲ್ಲಿ ಅವನ ನಡಿಗೆಯ ವೇಗವನ್ನು ಮತ್ತಿಷ್ಟು ಹೆಚ್ಚಿಸಲಿಕ್ಕೆಂದೋ ಏನೋ....ಜೋರಿನಿಂದ ಮಳೆಯೂ ಬಂದಿತು,

ನಾಲ್ಕು ಹೆಜ್ಜೆ ಓಡಿಹೋಗಿ, ಮನೆಯನ್ನು ಬೇಗ ಸೇರಬೇಕೆಂದರೆ ಭೀಮನು ಕಂಡು ದೇನು ಗೊತ್ತೆ ? ಮನೆಯೊಳಗಿನ ಸಾಮಾನುಗಳೆಲ್ಲ ಮಳೆಯಿಂದ ತೊಯ್ಯುತ್ತಲಿವೆ. ಮುದುಕಿಯು ಕಣ್ಣೀರು ಸುರಿಸುತ್ತ ನೆರೆಹೊರೆಯವರ ಮನೆಯಲ್ಲಿ ಕೆಲವು ಸಾಮಾನು ಗಳನ್ನು ಒಯ್ದು ಇಡುತ್ತಿದ್ದಾಳೆ ! ಅದನ್ನು ಕಂಡು ನಿಲ್ಲಲಾಗದೆ ಭೀಮಪ್ಪ ಅಲ್ಲೇ ನೆಲಕ್ಕೆ ಕುಸಿದು ಬಿದ್ದ....

* * * *

ಇಂದು ಗೌಡರು ಕಟ್ಟಿಸಿದ ಗುಡಿಯಲ್ಲಿ ಮೂರ್ತಿಯನ್ನು ಕೂಡಿಸಬೇಕಾಗಿದೆ. ಜಯಪುರದಿಂದ ಬಿಳಿಯ ಶಿಲೆಯಲ್ಲಿ ಕೆತ್ತಿದ ಸುಂದರ ಮೂರ್ತಿಯನ್ನು ತರಿಸಿದ್ದಾರೆ. ಸುತ್ತಲಿನ ನಾಲ್ಕೆಂಟು ಊರುಗಳಿಂದ ವಾದ್ಯಗಳ ಮೇಳದವರೂ ಗೌಡರ ಆಮಂತ್ರ ಣದ ಪ್ರಕಾರ ಉತ್ಸವಕ್ಕೆ ಬಂದಿದ್ದಾರೆ. ನಮ್ಮೂರ ಜನಕ್ಕೆ ಇದೊಂದು ಹೊಸ ಹಬ್ಬವಾದಂತಿದೆ. ಮುಂಜಾನೆಯಿಂದಲೂ ಗುಡಿಯ ಮುಂದೆ ಜನ ಜಾತ್ರೆಯಂತೆ ನೆರೆದಿದೆ. ಗೌಡರು ವಾದ್ಯಗಳ ಸಂಭ್ರಮದೊಡನೆ ಗುಡಿಗೆ ಬರುತ್ತ, ತಮ್ಮ ಹಸ್ತಕ ನಾದ ಗುಂಡಪ್ಪನ ಕಡೆಗೆ ಹೊರಳಿ: ‘ಎಲ್ಲಿಂದಲೋ ತಗಡು ತಂದು ಮಂಟಪ ಪೂರ್ತಿಮಾಡಿಬಿಟ್ಟಿರುವಿಯಲ್ಲ !’ ಎಂದು ಸ್ವಲ್ಪ ಸಂತಸವ ಸ್ವರದಲ್ಲಿ ಕೇಳಿದರು.

‘ನಿಮ್ಮಂತಾ ಗೌಡರು ಇರೂತನಕಾ....ನಮಗೇನು ಕೊರತಿ ? ಆ ಭೀಮ್ಯಾನ ಕಡಿಂದ ಇಪ್ಪತ್ತೈದು ರೂಪಾಯಿ ಬರಬೇಕಾಗಿದ್ದವು....ನಾಲ್ಕೆಂಟು ದಿನಾ ಕೇಳಿ ದರೂ ಕೊಡಲಿಲ್ಲ. ಸೂ....ಮಗಾ....! ನಿನ್ನೆ ಅವನ ಮನಿಯ ಮ್ಯಾಲಿಂದ ಪತ್ರೇ ತಗಿಸಿ ತರಿಸಿದೆ ; ಗುಡಿಗೂ ನಾಲ್ಕು ಪತ್ರೇ ಕಡಿಮೆ ಬಿದ್ದಂತಿದ್ದವು....’ ಎಂದು ಆತ್ಮೀಯತೆಯಿಂದ ಹೇಳತೊಡಗಿದ ಗುಂಡಪ್ಪ.

‘ಒಳ್ಳೇ ಹಂಚಿಕಿ ನಿಂದೂ....’

‘ಏನಾರೇ ಮಾಡಲಿಕ್ಕೆ ಬೇಕಲ್ಲ ; ಮಂದಿರದ ಕೆಲಸ ಲಗೂನ ಮುಗೀಲಿಕ್ಕೆ ಬೇಕಂತ....ಹಗಲಿರುಳೂ ಚಿಂತಿ ಮಾಡತ್ತಿದ್ದಿರಿ ನೀವು....!

‘ಹೌದು, ಈ ಶ್ರಾವಣ ಮಾಸಕ್ಕೆಂದರೆ ಗುಡೀ ಕೆಲಸ ಮುಗೀಲಿಕ್ಕೇ ಬೇಕಾ ಗಿತ್ತು. ತಾಯಿ ತೀರಿಕೊಂಡು ಒಂದು ವರ್ಷದೊಳಗ ಗುಡೀ ಕಟ್ಟಿಸಿ, ಅವರ ಕೊನೆಯ ಇಚ್ಛೆಯನ್ನು ಪೂರ್ತಿಗೊಳಿಸಬೇಕಾದದ್ದು ನಿಮ್ಮೆಲ್ಲರ ನೆರವಿನಿಂದ.... ಸಾಧ್ಯವಾಯಿತು.’

‘ನಮ್ಮದೇನು ದೊಡ್ಡ ನೆರವು....ಬಿಡ್ರಿ !’

ಹೀಗೆ ಮಾತನಾಡುತ್ತ ತಮ್ಮ ಸಂಗಡಿಗರೊಡನೆ ಗೌಡರು ಆನಂದದಿಂದ ಮಂಟಪವನ್ನು ಪ್ರವೇಶಿಸುತ್ತಿದ್ದರು. ಅಲ್ಲಿಯೆ ಒಂದು ಬದಿಗೆ ಅನಾಥರಿಬ್ಬರು, 'ಅಯ್ಯೋ....! ಅಯ್ಯೋ....! ಇವರು ನಮ್ಮ ಮನಿಯ ಪತ್ರಿಗಳನ್ನೇ ತಂದು.... ಗುಡಿಗೆ ಹಾಕಿದ್ದಾರಲ್ಲ......? ಮಗನನ್ನ ಉಳಿಸಿ ಕೊಡತೀನಂತ ಹೇಳಿ....ಹುಡುಗ ನನ್ನ....ಅತ್ತ....ಚಾಕರಿಗೂ ಇಟ್ಟುಗೊಂಡ....ಗೌಡ....! ಇತ್ತ....ಮನೀಮ್ಯಾಲಿಂದ ಪತ್ರೀನೂ....ಗುಂಡಪ್ಪ ಒಯ್ದನಲ್ಲ....!' ಎಂಬ ಆರ್ತಸ್ವರದಿಂದ ಮರುಗುವ ಕೂಗು, ಆ ಮಹೋತ್ಸವದ ವಾದ್ಯಗಳ ಗೊಂದಲದಲ್ಲಿ ಯಾರಿಗೆ ಕೇಳಿಸೀತು....?

—ಮಿರ್ಜಿ ಅಣ್ಣಾರಾಯರು

# ರಾಮರಾಜ್ಯ

ಶ್ರೀರಾಮಚಂದ್ರದೇವರು ವನವಾಸವನ್ನು ಮುಗಿಸಿ ಅಯೋಧ್ಯೆಗೆ ಬಂದು ಸಿಂಹಾಸನಾರೂಢನಾಗಿ ರಾಜ್ಯವಾಳುವುದಕ್ಕೆ ಸುರುಮಾಡಿದನು.

ಅಧಿಕಾರಸೂತ್ರವು ತನ್ನ ಕೈಗೆ ಬಂದೊಡನೆಯೇ ಸೀತಾಪತಿಯು ತನ್ನೊಡನೆ ಅರಣ್ಯದಲ್ಲಿ ದುರ್ದಿನಗಳನ್ನು ಕಳೆದ, ಲಂಕೆಯನ್ನು ಸುಟ್ಟು ತನ್ನ ಧರ್ಮಪತ್ನಿಯನ್ನು ಬಿಡಿಸಿಕೊಂಡುಬಂದ ಕಪಿಕುಲವನ್ನು ಕರೆದು ಒಂದೊಂದು ಮಂಗನನ್ನು ಒಂದೊಂದು ಹುದ್ದೆಯ ಮೇಲೆ ನೇಮಿಸಿದನು. ಭಕ್ತಶಿಖಾಮಣಿಯಾದ ಹನುಮಂತನಂತೂ ಗಿಡದ ತುತ್ತ ತುದಿಗೆ ಕುಳಿತು ಟುರ್ ಎಂದು ಹುಕುಂ ಬಜಾಯಿಸಹತ್ತಿದನು. ಅವನಿಗೆ 'ಸರ್ವ ಭಾಷಾ ಕೋವಿದ' ಎಂಬ ಬಿರುದು ಸಿಕ್ಕಿತು !

ಅಯೋಧ್ಯೆಯ ಸಭ್ಯ ಪ್ರಜೆಗಳು ಯಾವದಾದರೊಂದು ಕೆಲಸಕ್ಕೆ ಅರ್ಜಿ ಮಾಡಿದರೆ ಶ್ರೀ ರಘುಕುಲತಿಲಕನೇ ಮುಂದೆ ಬಂದು 'ನೀವು ನನ್ನೊಡನೆ ವನವಾಸ ಎಷ್ಟು ದಿನ ಮಾಡಿದ್ದಿರಿ ? ಲಂಕೆಯ ಎಷ್ಟು ಮನೆಗಳನ್ನು ಸುಟ್ಟ ವೀರರು ನೀವು ?' ಎಂದು ಪ್ರಶ್ನಿಸುತ್ತಿದ್ದನು. ಈಗಿನ ಕಾಲದಂತೆ ಜಾತಿ ವಯಸ್ಸು ಮುಂತಾದವುಗಳನ್ನು ಕೇಳುವ ಪದ್ಧತಿ ಆಗ ಚಾಲೂ ಇತ್ತಿಲ್ಲ.

ಇದನ್ನೆಲ್ಲ ಕಂಡು ಲಕ್ಷ್ಮಣನು ಒಂದು ದಿನ ಅಣ್ಣನಲ್ಲಿ ಸವಿನಯ ವಿಜ್ಞಾಪನೆ ಮಾಡಿದನು: 'ರಾಜ್ಯವಾಳುವುದಕ್ಕೂ ನಮ್ಮೊಡನೆ ವನವಾಸ ಲಂಕಾದಹನಗಳನ್ನು ಮಾಡಿದ್ದಕ್ಕೂ ಏನೂ ಸಂಬಂಧವಿಲ್ಲ. ಲಂಕಾದಹನಕ್ಕೆ ರಾಜ್ಯದ ಕಾರಭಾರ ನಡೆಸುವ ಜಾಣ್ಮೆ ಬೇಕಾಗಿದ್ದಿಲ್ಲ.'

ಅದಕ್ಕೆ ಪತಿತಪಾವನನು ತಮ್ಮಾ ನೀನಂದದ್ದು ನಿಜ. ಆದರೆ ನಮ್ಮೊಡನೆ ಅಡವಿಯಲ್ಲಿ ಬಳಲಿ, ಲಂಕಾದಹನದಂಥ ಶೌರ್ಯ ಕಾರ್ಯವೆಸಗಿದ ಈ ಕಪಿಗಳಿಗೆ ದೊಡ್ಡ ದೊಡ್ಡ ಅಧಿಕಾರ ಕೊಡುವದು ನಮ್ಮ ಕರ್ತವ್ಯವಲ್ಲವೇ ?'

ಲಕ್ಷ್ಮಣನು ಕೂಡಲೇ 'ಅಣ್ಣಾ' ನಮ್ಮೊಡನೆ ಕಾಡಿನಲ್ಲಿ ಬಳಲಿ, ಲಂಕೆಯನ್ನು ಸುಟ್ಟು ಹೈರಾಣಾದ ಭಕ್ತಶಿಖಾಮಣಿಗಳನ್ನು ದೊಡ್ಡ ದೊಡ್ಡ ಅಧಿಕಾರಗಳಲ್ಲಿಟ್ಟು ದುಡಿಸುವದು ನ್ಯಾಯವಲ್ಲ. ಹಿಂದೆ ಮಾಡಿದ ಸಾಹಸ ತ್ಯಾಗಗಳಿಗಾಗಿ ಇವರನ್ನು

ಒಂದು ಉಪವನದಲ್ಲಿ ಸುಖವಾಗಿ ಇಡುವುದು ನಮಗೆ ಒಪ್ಪುವ ವಿಷಯ. ದಣಿದು ಸಣ್ಣಾದ ಇವರನ್ನು ಮತ್ತೆ ದುಡಿಸಹತ್ತುವದು ತರವೇ ?' ಅಂದನು.

ಜಾನಕೀಜೀವನನ ತಲೆಯಲ್ಲಿ ಹೊಸ ಬೆಳಕು ಬಿದ್ದಿತು. ಮರುದಿನವೇ ಅವನು ಕಪಿಗಳನ್ನೆಲ್ಲ ಕರೆದು ಅವರಿಗಾಗಿ ತಯಾರಿಸಿದ ಒಂದು 'ಸ್ಪೇಶಲ್' ಉಪವನದಲ್ಲಿ ಅವರಿಗೆ 'ಪೆನ್ಶನ್' ಅನುಗ್ರಹಿಸಿದನು.

ಅಂದಿನಿಂದ ದೊಡ್ಡ ಸಣ್ಣ ಕೆಲಸಗಳಿಗೆಲ್ಲ ಅಯೋಧ್ಯೆಯ ಪ್ರಜೆಗಳೇ ಬಂದರು; ಆ ರಾಜ್ಯವು ರಾಮರಾಜ್ಯವೆಂದು ಪ್ರಸಿದ್ಧಿ ಪಡೆಯಿತು.

# ಅನುಭವಾಮೃತ

ಹೆಂಗಸರು ಎಷ್ಟೇ ಒಳ್ಳೆಯವರಿದ್ದರೂ ಕೆಲವು ವಿಷಯಗಳು ನಾಲಿಗೆಯ ಮೇಲೆ ನಲಿಯತೊಡಗಿದವೆಂದರೆ ಕೊಂಚಮಟ್ಟಿಗಾದರೂ ಅವರು ಚಂಡಿ-ಚಾಮುಂಡಿಯರಾಗುತ್ತಾರೆ.

ಪಂಚಕನ್ಯೆಯರಲ್ಲಿ ಒಬ್ಬಳೆಂದು ಖ್ಯಾತಿಪಡೆದ ಸೀತಾದೇವಿಗೂ ಯಾವ ಕವಿಯಿಂದಲೂ ಹೊಗಳಿಸಿಕೊಳ್ಳದ (ಲಕ್ಷ್ಮಣನ ಮಡದಿ) ಊರ್ಮಿಳೆಗೂ ಹೇಗೋ ಮಾತಿಗೆ ಮಾತು ಹತ್ತಿತು. ಗಂಡಸರೆಲ್ಲ ಬೇಟೆಗೆ ಹೋದ ಸಮಯವಾಗಿತ್ತು.

'ಹದಿನಾಲ್ಕು ವರ್ಷ ನಿಮ್ಮ ಸೇವೆಗೆಂದು ನಿಮ್ಮ ಜತೆಗೆ ಅಡವಿಗೆ ಕಳುಹಿಸಿದ ನನ್ನ ಪತಿಯಿಂದ ಅಗಲಿ ನವೆದದ್ದು ಇಷ್ಟೆಲ್ಲ ಅನ್ನಿಸಿಕೊಳ್ಳಲಿಕ್ಕಾಯಿತೇ ಅಕ್ಕಾ ?'

'ನಮ್ಮ ಸೇವೆಗಾಗಿ ನಿನ್ನ ಪತಿಯನ್ನು ಕಳುಹಿಸಿದೆಯಾ ? ವ್ಹ ! ನನ್ನ ಹಾಗೇ ಹಟ ಹಿಡಿದಿದ್ದರೆ ನೀನೂ ಗಂಡನ ಜತೆಗೇ ಬರುತ್ತಿದ್ದಿಯಲ್ಲ. ನಾವೇ ನಿಮ್ಮ ಸೇವೆ ಮಾಡುತ್ತಿದ್ದೆವು.'

'ಪತಿಯು ಬೇಡವೆಂದರೂ ಕೇಳದೆ ಅವನ ಬೆನ್ನು ಹತ್ತುವ ಹಟಗಾರ್ತಿ ನಾನಲ್ಲ ಅಕ್ಕಾ.'

'ನಾನು ಹಟಗಾರ್ತಿಯೆಂದು ನಿನ್ನ ಅಭಿಪ್ರಾಯವೋ ?! ಒಂದಲ್ಲ ಎರಡಲ್ಲ, ಹದಿನಾಲ್ಕು ವರ್ಷ ನಮ್ಮಿಂದ ದೂರ ಉಳಿಯುವ ಸಂದರ್ಭದಲ್ಲಿ ಗಂಡಸರು ಏನೆಲ್ಲ ಕಾರಭಾರ ಮಾಡಿಯಾರೆಂಬ ಕಲ್ಪನೆ ನಿನಗಿದ್ದರೆ ನೀನೂ ಹಟಮಾರಿಯಾಗುತ್ತಿದ್ದಿ ! ಪಾಪ, ಎಲ್ಲ ಹಲ್ಲೂ ಇನ್ನೂ ಸರಿಯಾಗಿ ಮೊಳೆತಿರದ ನಿನಗೆ ಇದೆಲ್ಲ ಹೇಗೆ ತಿಳಿಯಬೇಕು ? ಶೂರ್ಪನಖಿಯ ಬದಲು ಇನ್ನಾವ ಕಾನ್ ಚೆಲುವೆಯಾದರೂ ನಿನ್ನ ಪತಿಗೆ ಗಂಟು ಬಿದ್ದಿದ್ದರೆ ನಿನ್ನ ಫಜೀತಿಯಾಗುತ್ತಿತ್ತು.'

'ನನ್ನ ಪತಿಯಲ್ಲಿ ನನಗೆ ಪೂರ್ಣ ವಿಶ್ವಾಸವಿದೆ.'

'ಎಲ್ಲರಿಗೂ ಹಾಗೇ. ಆದರೆ ಗಂಡಸಿನ ಒಲವು ಸ್ವಾಭಾವಿಕವಾಗಿ ಬಹುಪತ್ನೀತ್ವದ ಕಡೆಗೆ ಎಂಬುದು ನಿನಗೆಲ್ಲಿ ತಿಳಿಯಬೇಕು ? ನಿಜವಾದ ಪತಿವ್ರತೆಯು

ಇಂಥ ಸೂಕ್ಷ್ಮಗಳನ್ನೆಲ್ಲ ತಿಳಕೊಂಡು ವರ್ತಿಸಬೇಕು. ಸುಮ್ಮನೆ ಬೆಪ್ಪತಕ್ಕಡಿಯಂತೆ ಕುಳಿತು ಗಂಡ ಅಂದುದಕ್ಕೆಲ್ಲ ಹುಂಗುಟ್ಟಿದರಾಗಲಿಲ್ಲ. ದಾಂಪತ್ಯಕ್ಕೆ ಎಳ್ಳಷ್ಟು ಅಡೆ-ತಡೆ ಬರುತ್ತದೆಂದು ಕಂಡುಬಂದರೆ ಪತಿಯ ಮನಸ್ಸಿನ ವಿರುದ್ಧ ನಡೆದಾದರೂ ಇಬ್ಬರ ಒಳಿತನ್ನು ಸಾಧಿಸಬೇಕು. ತನ್ನ ಪತಿಯು ಜಗದ್ವಂದ್ಯನೇ ಇದ್ದರೂ ಇಂಥ ಸಂದರ್ಭದಲ್ಲಿ ಪತಿವ್ರತಾಶಿರೋಮಣಿಯಾದವಳು ಹಿಂಜರಿಯಬೇಕಾಗಿಲ್ಲ. ಗಂಡಸಿನ ಬುದ್ಧಿಗೆ ನಿಲುಕದ ಎಷ್ಟೋ ವಿಷಯಗಳು ಹೆಂಗಸಿನ ಹೃದಯಕ್ಕೆ ಗೋಚರವಾಗುವುದುಂಟು.....'

ಅಕ್ಕನ ಅನುಭವಾಮೃತದಿಂದ ಪುನೀತಳಾದ ಊರ್ಮಿಳೆಯು 'ನಾನು ಅಂದುದಕ್ಕೆ ಕ್ಷಮಿಸವ್ವಾ' ಎಂದು ಸಾಷ್ಟಾಂಗ ಪ್ರಣಾಮಗೈದಳು.

'ಶ್ರೀರಾಮ ಪತ್ನಿಯ ನುಡಿಯಲ್ಲಿ ಕುಂದಿಲ್ಲವೆಂಬುದನ್ನು ನಂಬಿರು' ಅಂದಳು ಸೀತಾದೇವಿ.

# ಗುಪ್ತಚಾರ

ರಾಮಚಂದ್ರದೇವರ ಆಳಿಕೆಯಲ್ಲಿ ಗುಪ್ತಚಾರ ದಲವು ಭದ್ರವಾಗಿತ್ತೆಂದು ಸೀತಾ ಪರಿತ್ಯಾಗದ ಕಾರಣದಿಂದ ಗೊತ್ತಾಗುತ್ತದೆ.

ಒಂದಿರುಳು ಒಬ್ಬ ಗುಪ್ತಚಾರನು ಒಂದು ಬೀದಿಯಲ್ಲಿ ನಡೆದಿದ್ದನು. ನಿಸರ್ಗದ ಕರೆಗೆ ಓಗೊಡಲು ಹೊರಗೆ ಬಂದಿದ್ದ ಒಬ್ಬ ನನ್ನಂಥ ಸಭ್ಯಗೃಹಸ್ಥನು ಅವನನ್ನು ಕಂಡು 'ಯಾರದು ?' ಎಂದು ಕೇಳಿದನು. ರಾಮರಾಜ್ಯದಲ್ಲಿ ಕಳ್ಳರ ಭೀತಿಯಿರದಿದ್ದರೂ ಗುಪ್ತಚಾರರ ಹೆದರಿಕೆಯಿತ್ತು !

ಆ ಸದ್ಗೃಹಸ್ಥನಿಗೆ ಹಲವು ದಿವಸಗಳಿಂದಲೂ ತಲೆಯಲ್ಲಿ ಒಂದು ವಿಚಾರ ಮೂಡಿ ನಾಲಿಗೆಯ ಮೇಲೆ ಬರಲಾರದೆ ಕರಗಿಹೋಗುತ್ತಿತ್ತು. ಈಗ ಅವನು ಇದ್ದುದರಲ್ಲೆ ಧೈರ್ಯಮಾಡಿ ಆ ಗುಪ್ತಚಾರನನ್ನು ಬಳಿಗೆ ಕರೆದನು.

'ಅಲ್ಲಪ್ಪಾ, ರಾಮರಾಜ್ಯದಲ್ಲಿ ಹಗಲುಹೊತ್ತು ಬಾಗಿಲು ತೆರೆದಿಟ್ಟು ಹೋದರೂ ಒಂದು ಚಿಕ್ಕಾಸೂ ಕಳುವಾಗುವುದಿಲ್ಲವೆಂದು ಖ್ಯಾತಿಯಿದೆ. ಮತ್ತೆ ನೀವೇಕೆ ರಾತ್ರಿಯೆಲ್ಲ ಗಸ್ತಿ ತಿರುಗುತ್ತೀರಿ ?'

'ಹಗಲು ಹೊತ್ತು ಆಗಲಿಕ್ಕಿಲ್ಲರಿ. ರಾತ್ರಿಯ ಹೊತ್ತು ಎಷ್ಟೆಂದರೂ........ ಆದರೂ ಶ್ರೀರಾಮದೇವರ ಕಾಲದಲ್ಲಿ ಕಳು ಗಿಳು ಸಾಧ್ಯವೇ ಇಲ್ಲ ಬಿಡಿ.

'ಕಳವುಗಿಳವು ಇಲ್ಲದಿದ್ದರೆ ಮತ್ತೇಕೆ ಈ ಗಸ್ತಿ ಅಂತ ನಾನು ಕೇಳುವದು.'

'ಅದನ್ನೆಲ್ಲ ಕೇಳಬಾರದು ರಾಯರೇ. ಆದರೂ ನಿಮ್ಮ ಹತ್ತರ ಹೇಳದೆಯೇನು ? ಪ್ರಜೆಗಳು ತಮ್ಮ ವಿಷಯವಾಗಿ ಏನು ಮಾತಾಡಿಕೊಳ್ಳುತ್ತಾರೆಂದು ತಿಳಿಯಲು ನಮ್ಮನ್ನು ನೇಮಿಸಿದ್ದಾರೆ.'

'ಅಂದರೆ ಪ್ರಜೆಗಳಲ್ಲಿ ಪ್ರಭುಗಳಿಗೆ ವಿಶ್ವಾಸವಿಲ್ಲವೆಂದಂತಾಯಿತಲ್ಲ !'

'ವಿಶ್ವಾಸವಿದೆ ಆದರೂ....'

'ಹಾಗಾದರೆ ನೀವು ಊರಿನ ಜನರು ಮಾತಾಡಿಕೊಳ್ಳುವುದನ್ನೆಲ್ಲ ದೇವರಿಗೆ ವರದಿ ಮಾಡುತ್ತೀರಿ.'

'ನಾವಿರುವದು ಅದಕ್ಕಾಗಿಯೇ ರಾಯರೇ.'

'ಸೀತಾಮಾತೆಯನ್ನು ಅಷ್ಟುವರ್ಷ ರಾವಣನ ವಶದಲ್ಲಿ ಬಿಟ್ಟಿದ್ದು ನಂತರ ಮತ್ತೆ ಅವರೊಡನೆ....ಊರೆಲ್ಲ ಗುಜುಗುಜು ನಡಿಸುತ್ತಿರುವ ಸಂಗತಿ ನಿಮಗೆ ಗೊತ್ತಿರಬಹುದು.'

'ಗೊತ್ತಿದೆ ರಾಯರೇ. ಕಳೆದ ಇಪ್ಪತ್ತೈದು ದಿನಗಳಿಂದಲೂ ಕೇಳುತ್ತಿದ್ದೇವೆ. ಆದರೆ ಇದನ್ನು ಹೇಗೆ ತಿಳಿಸುವದು ದೇವರಿಗೆ ? ನಿಮ್ಮಂಥ ಸದ್ಗೃಹಸ್ಥರೇ ಹೀಗೆ ಹೇಳುತ್ತಾರೆಂದರೆ ಪ್ರಭುಗಳು ನಂಬಬೇಕಲ್ಲ! ಆದ್ದರಿಂದ—ನಿಮ್ಮ ಹತ್ತರ ಹೇಳದೆಯೇನು ? ಯಾರಾದರೂ ಸಾಮಾನ್ಯರು ಈ ವಿಷಯವನ್ನು ಎತ್ತಲಿ, ಅವರನ್ನೊಯ್ದು ಪ್ರಭುಗಳಿಗೊಪ್ಪಿಸುವ ಎಂದಿದ್ದೇವೆ.'

ಆ ಸದ್ಗೃಹಸ್ಥನ ಸಂಶಯ ನಿವಾರಣೆಯಾಗಿ ಅವನು 'ವಹವ್ವಾ' ಅಂದುಕೊಂಡು ಒಳಗೆ ನಡೆದನು.

ಮಾರನೆಯ ದಿನ ಅಗಸನೊಬ್ಬನು ಇದೇ ವಿಷಯವನ್ನೆತ್ತಿ ನುಡಿಯಲು ಆ ಗುಪ್ತಚಾರನು ಅಗಸನ ಹೆಸರನ್ನೂ ಆ ವಾರ್ತೆಯನ್ನೂ ಶ್ರೀರಾಮಚಂದ್ರದೇವರಿಗೊಯ್ದು ಮುಟ್ಟಿಸಿ ಧನ್ಯನಾದನು.

—ವಿ. ಜಿ. ಭಟ್ಟ

# ಹೊಸ ನೋಟ

ಇಂದು ಡಾಕ್ಟರ್ ಮೇಜರ್ ಬರುವಾ, ಹೊಸದಾಗಿ ಈ ಮಿಲಿಟರೀ ಆಸ್ಪತ್ರೆಗೆ ವರ್ಗವಾಗಿ ಬರುವವರಿದ್ದರು. ಎಲ್ಲ ವಾರ್ಡನ್ಸ್, ಮತ್ತು ಇಬ್ಬರು ಮೂವರು ಚೀನೀ ನರ್ಸುಗಳು ತಮ್ಮ ಹೊಸ ಅಧಿಕಾರಿಯನ್ನು ಸ್ವಾಗತಿಸಲು ಸಿದ್ಧರಾಗಿದ್ದರು. ಅಲ್ಲಿದ್ದ ಮೊದಲಿನ ಡಾಕ್ಟರು ಕೆಲಸದಿಂದ ನಿವೃತ್ತರಾಗಿ ಭಾರತಕ್ಕೆ ಈ ಮೊದಲೇ ಮರಳಿದ್ದರು. ನಾನು ಆಸ್ಪತ್ರೆಯ ಯಾವುದೇ ಅಧಿಕಾರೀ ವರ್ಗದವರಲ್ಲಿ ಸೇರದಿದ್ದರೂ, ಹಳೆಯ ಡಾಕ್ಟರರನ್ನು ಬೀಳ್ಕೊಡುವ ಸಮಾರಂಭಕ್ಕೂ ಹೊಸಬರನ್ನು ಸ್ವಾಗತಿಸುವ ಸಭೆಗೂ 'ಹಾಜರ್' ಇದ್ದೆ. ಮಲಾಯಾದಲ್ಲಿ ಮಲೇರಿಯಾ ಬೇನೆಯಿಂದ ಮೂರು ತಿಂಗಳು ಮಂಚದ ಮೇಲೆ ಬಿದ್ದುದೇ ಇದಕ್ಕೆ ಕಾರಣ.

೧೯೪೫ ರ ಅರ್ಧ ವರುಷ ಸಂದು ಹೋಗಿತ್ತು. ಮಹಾಯುದ್ಧದ ಮುಕ್ತಾಯವಾಗಿತ್ತು. ಜಾವಾದಲ್ಲಿಯ ಗಲಭೆಯೊಂದನ್ನು ಬಿಟ್ಟರೆ ಜಗತ್ತಿನ ಇತರ ಮೂಲೆಗಳಲ್ಲಿ ಶಾಂತಿ ನೆಲಸಿತ್ತು. ಸಮರದ ಕಾಲದಲ್ಲಿ ಎದ್ದ ಉರಿಯಿಂದ ಬಿದ್ದ ಕೆಂಡಗಳನ್ನು ಆರಿಸುವುದಕ್ಕೆ ನಾವು ಮಲಾಯಾ ಸೇರಿದ್ದೆವು. ಯುದ್ಧೋತ್ತರ ಪುನರ್ಘಟನೆಗಾಗಿ ಮಲಾಯಾಕ್ಕೆ ಭಾರತದ ಏಳನೆಯ ಪಡೆಯೊಂದಿಗೆ ನಾನೂ ಹೋಗಿದ್ದೆ. ಯುದ್ಧವೇನೋ ಆಗ ಮುಗಿದು ಹೋಗಿತ್ತು; ಆದರೆ ಪರಿಸ್ಥಿತಿ ಪ್ರತಿಕೂಲವಾಗಿ ಬಿಟ್ಟಿತ್ತು. ಬಾಂಬಿನ ಬೆಂಕಿಯಲ್ಲಿ ಒಂದೆ ಒಂದು ಕ್ಷಣದಲ್ಲಿ ಸಾಯುವುದು ಲೇಸು; ಆದರೆ ಆ ಬೆಂಕಿಯ ಜಳಕ್ಕೆ ಬೆಂದು ಬಳಲಿ ನರಳಿ ಸಾಯುವುದು ಬೇಡವಾಗಿತ್ತು. ಮಲಾಯಾದ ಪರಿಸ್ಥಿತಿ ಹೀಗೇ ಆಗಿತ್ತು; ಮಹಾಯುದ್ಧ ಮುಗಿದನಂತರ ಮಲಾಯಾದಲ್ಲಿ ಮನೆಗೊಬ್ಬ ಕಮ್ಯುನಿಸ್ಟ್, ಮಾರಿಗೊಬ್ಬ ದರೋಡೆಖೋರ. ವಿಶ್ವನಾಟಕದ ರಂಗಭೂಮಿಯಲ್ಲಿ ಅದೇ ಆಗ ಕಾಲಿಡಬೇಕೆಂದು ಹವಣಿಸುತ್ತಿರುವ ಶಾಂತಿದೇವಿಯ ಮುಖಕ್ಕೆ ಈ ಪುಂಡರು ಮಸಿ ಬಳೆಯಲು ಯತ್ನಿಸುತ್ತಿದ್ದರು. ಇಂತಹ ಜನರೊಂದಿಗೆ ದಿನವೂ ನಡೆಯುತ್ತಿರುವ ವ್ಯವಹಾರಕ್ಕೆ ಬೇಸತ್ತು ಹೋಗಿದ್ದೆವು. ಇದಲ್ಲದೆ ನಿಸರ್ಗದ ಪ್ರತಿಕೂಲ ಪರಿಸ್ಥಿತಿಯೂ ನಮ್ಮನ್ನು ಕಾಡುತ್ತಿತ್ತು. ಮಲಾಯಾ ದೇಶದಲ್ಲಿ ಬಿಸಿಲು ಮಳೆಯ ಹೊರತು ಚಳಿಯ ಮಾತೇ ಇರಲಿಲ್ಲ. ದಿನವೂ ಮಳೆ, ದಿನವೂ ಬಿಸಿಲು. ಹನ್ನೆರಡೂ ತಿಂಗಳೂ ಇದೇ ಹಾಡು. ಊರು ಬಿಟ್ಟು ಸ್ವಲ್ಪ ಮುಂದೆ ಸರಿದರೆ, ಕೈಮುಟ್ಟದ ದಟ್ಟ ಕಾಡುಗಳು; ಇನ್ನು ಬೇರೆ ಗಿಡಗಳ ಮಾತೇ

ಬೇಡ. ರಾಜಮಾರ್ಗದಲ್ಲಿ ಹಾಯುವಾಗ, ಎಡಬಲಬದಿಗೆ ಅತಿ ಎತ್ತರ ಕಪ್ಪು ಗೋಡೆಗಳನ್ನು ಕಟ್ಟಿದಂತೆ ಭಾಸವಾಗಿ ಬಿಡುತ್ತಿತ್ತು. ಇಂಥ ಭಯಾನಕ ರುದ್ರ ಅರಣ್ಯಗಳಲ್ಲಿ ಕೂಡ ಒಂದು ಬಗೆಯ ಜನ—ಜನ ಎನ್ನುವುದಕ್ಕಿಂತಲೂ ಜಾನುವಾರು ಗಳೆಂದರೂ ಸರಿಯೆ—ವಾಸಿಸುತ್ತಾರೆ. ಅವರಿಗೆ ಜಾತಿ ಇಲ್ಲ, ದೇವರು ಇಲ್ಲ. ಮೇಲು ಇಲ್ಲ, ಕೀಳು ಇಲ್ಲ. ಎತ್ತರೆತ್ತರವಾದ ಮರಗಳ ಮೇಲೆ ಮನೆ ಕಟ್ಟುತ್ತಾರೆ. ಬಾಣ ಗಳನ್ನು ಊದಿ ಬಿಡುವುದು ಇವರ ಪರಿಪಾಠ. ಬೇಟೆಮಾಡಿ ಹೊಟ್ಟೆ ಹೊರೆದು ಕೊಳ್ಳುವರು. ಇವರನ್ನು ಮಲಾಯಾದ ಜನ '**ಸಕಾಯು**' ಎಂದು ಕರೆಯುತ್ತಾರೆ. ಇಂಥ ಕಾಡು ಜನರ ಜತೆಯಲ್ಲಿ ಜಪಾನಿಗಳು, ಪ್ರಯಾಸಪಟ್ಟು ಸಹವಾಸಮಾಡಿ ಸಾಹಸ ತೋರಿದರು. ಇಂಥ ಜಪಾನಿಗಳಿಗೆ ಎದುರಾಳಿಗಳಾಗಿ ಅವಿಶ್ರಾಂತ ಹೋರಾಡಿದ ಕೆಲವು ಚೀನೀ ಕಮ್ಯುನಿಸ್ಟರು, ತಾವು ಕಲಿತ ವಿದ್ಯೆಯ ಪ್ರಭಾವದ ಪ್ರಯೋಗವನ್ನು ನಮ್ಮ ಮೇಲೆ ಮಾಡತೊಡಗಿದ್ದರು. ಇಷ್ಟು ಇದ್ದರೂ, ಪ್ರತಿ ಭಾರತೀಯನೂ ಇದ್ದಷ್ಟು ದಿನ ಎದೆತಟ್ಟಿಯೇ ನಿಂತುಕೊಂಡಿದ್ದ. ಆದರೂ ನಿಸರ್ಗ ತನ್ನ ಆಟ ತೋರಿಸುತ್ತಿತ್ತು.

ಮಲಾಯಾಕ್ಕೆ ಬಂದ ಮೂರು ಮಾಸಗಳಲ್ಲಿಯೇ ನಮ್ಮಲ್ಲಿ ಅನೇಕರಿಗೆ ಮಲೇರಿಯಾ ಅಂಟಿಕೊಂಡಿತು. ನಾನೂ ಅವರಲ್ಲೊಬ್ಬನಾಗಿದ್ದೆ. ನಾವು ಆಗ ಪಾಳೆಯ ಹಾಕಿದ್ದು ಮಲಾಯದ ಪೂರ್ವ ಭಾಗಕ್ಕೆ, ಚೀನೀ ಸಮುದ್ರದ ದಂಡೆಯ ಮೇಲಿನ ಕ್ವಾಂಟನ್ ನಗರದಲ್ಲಿ. ಕ್ವಾಂಟನ್ ಒಂದು ವಿಚಿತ್ರ ಊರು. ಒಂದು ಬದಿಯಲ್ಲಿ ಸಾಗರ, ಮೂರು ಬದಿಗೆ ಮೂರು ಮಹಾನದಿಗಳು. ಆ ನದಿಗಳು ಸೊರಗಿದ ದಿನಗಳನ್ನೇ ಅಲ್ಲಿಯ ಜನ ಕಂಡಿರಲಿಲ್ಲವಂತೆ. ಸದಾಕಾಲ ತುಂಬಿ ಹರಿಯುತ್ತಿದ್ದವು. ಆದರೂ ಒಂದು ಹೊಳೆಗೂ ಸೇತುವೆ ಕಟ್ಟಿರಲಿಲ್ಲ. ಫೆರಿಯ ಸಹಾಯದಿಂದಲೇ ವ್ಯವಹಾರ ಸಾಗುತ್ತಿತ್ತು. ಒಂದೊಂದು ಸಲ ಫೆರಿಗಳು ಮುಳುಗಿಯೋ ಕೆಟ್ಟೋ ಕಟ್ಟಾದುವು ಎಂದರೆ, ನಮ್ಮ ಕ್ವಾಂಟನ್ ನಗರ ಅಂದಮಾನವಾಗಿ ಬಿಡುತ್ತಿತ್ತು. ಇಂಥ ಊರಲ್ಲಿಯೇ ಮಲೇರಿಯಾ ಅಂಟಿದ್ದು. ಅದೇ ಊರಲ್ಲಿದ್ದ ಮಿಲ್ಟ್ರಿ ಆಸ್ಪತ್ರೆಗೆ ಸೇರಿಕೊಂಡೆವು- ಆಸ್ಪತ್ರೆ ಅಷ್ಟೇನೂ ದೊಡ್ಡ ದಾಗಿರಲಿಲ್ಲ. ಒಬ್ಬನೇ ಒಬ್ಬ ಡಾಕ್ಟರ್ ; ಇಬ್ಬರು ಅಸಿಸ್ಟಂಟ್ ವಾರ್ಡನ್ಸ್, ಐದಾರು ಜನ ಪರಿಚಾರಕರು, ಒಬ್ಬಿಬ್ಬರು ಚೀನೀ ಪರಿಚಾರಿಕೆಯರು (ನರ್ಸ್). ಆಸ್ಪತ್ರೆಯಲ್ಲಿ ಮುವತ್ತೈದು ನಾಲ್ವತ್ತು ಮಂಚಗಳು. ಯಾವಾಗಲೂ ಅವು ಖಾಲಿ ಉಳಿಯುತ್ತಿರಲೇ ಇಲ್ಲ. ಎಲ್ಲರೂ ಭಾರತೀಯ ಸೈನಿಕರೇ. ಅದರಲ್ಲಿಯೂ ಕ್ವಾಂಟನ್ ಪಡೆಗಳಲ್ಲಿ ಹೆಚ್ಚಾಗಿ ಪಂಜಾಬೀ, ಮದ್ರಾಸಿಯರೇ ತುಂಬಿಹೋಗಿದ್ದರು. ನಾನು ಈ ಆಸ್ಪತ್ರೆಯಲ್ಲಿ ಬಿದ್ದುದು ಒಂದೂವರೆ ತಿಂಗಳ ಮೇಲಾಗಿ ಹೋಗಿತ್ತು. ಹಳಬರು ಹೋಗಿ ಹೊಸಬರು ಬರುವ ಹೊತ್ತಾದರೂ ನಾನು ನನ್ನ ಮಂಚ ಬಿಟ್ಟು ಕದಲಲಿಲ್ಲ. ಇಂದೇ ಹೊಸ ಡಾ. ಮೇಜರ್ ಬರುವಾ ಬರುವವರು.

ಆಸ್ಪತ್ರೆಯ ಪರಿಚಾರಕ ತಂದುಕೊಟ್ಟ ಊಟ ಮುಗಿಸಿ, ನಾವೆಲ್ಲ ನಮ್ಮ ಮಂಚದ ಮೇಲೆಯೇ ಕುಳಿತು, ಬರುವಾ ಅವರನ್ನು ಸ್ವಾಗತಿಸಲು ಸಿದ್ಧರಾಗಿದ್ದೆವು. ಗಡಿಯಾರದ ಮುಳ್ಳು ಹತ್ತನ್ನು ಬಿಟ್ಟು ಮುಂದೆ ಸರಿಯ ಹತ್ತಿತು. ಜೀಪ್ ಟ್ರಕ್ ಬಂದ ಸಪ್ಪಳವಾಯಿತು. ಸಪ್ಪಳವಡಗಿದ ಕೆಲ ನಿಮಿಷಗಳಲ್ಲಿ ಮೇಜರ್ ಬರುವಾ ನಮ್ಮ ಹಾಲಿನಲ್ಲಿ ಕಾಲಿಟ್ಟರು. ನಾವೆಲ್ಲರೂ ಕೂತಲ್ಲಿಂದಲೇ ಸ್ವಾಗತಿಸಿದೆವು. ಮೇಜರ್ ಬರುವಾ ಮುದುಕರಿರಬಹುದು ಎಂದು ನಾವೆಲ್ಲ ಲೆಕ್ಕ ಹಾಕಿದ್ದೆವು: ಆದರೆ, ಬರುವಾ ಅವರ ಮುಖದ ಮೇಲಿಂದ ಇಪ್ಪತ್ತು ಮೂವತ್ತರ ಒಳಗಿನವರೆಂಬುದನ್ನು ಕಂಡುಹಿಡಿದೆವು. ಮೇಜರ್ ಬರುವಾ ಗಂಭೀರವದನರಾಗಿಯೇ ಸ್ಮಿತಗೈದರು.

'ಎಲ್ಲಕ್ಕೂ ಹಳೆಯ ರೋಗಿ ಯಾರು ಇಲ್ಲಿ?' ಬರುವಾ ತಮ್ಮ ವಾರ್ಡನ್ನನ್ನು ಕೇಳಿದರು.

ವಾರ್ಡನ್ ನನ್ನ ಕಡೆಗೆ ಬೊಟ್ಟುಮಾಡಿ ತೋರಿಸಿದ. ಬರುವಾ ನನ್ನನ್ನು ಪ್ರಶ್ನಿಸಿದರು:

'ಹೇಗಿದ್ದೀಯಪ್ಪಾ ?'

'ಗುಣವಾಗಿದ್ದೇನೆ ಸಾರ್. ಆಸ್ಪತ್ರೆಯಿಂದ ಬಿಡುಗಡೆಮಾಡಿ ನನ್ನ ಪಾಳೆಯಕ್ಕೆ ಕಳಿಸಿ !' ಬೇಸರ ಬೆರೆತ ಧ್ವನಿಯಲ್ಲಿ ನಾನು ವಿನಂತಿಸಿಕೊಂಡೆ.

'ಪೂರ್ಣ ಗುಣವಾಗದ ಹೊರತು ನೀನು ಹೇಗೆ ಹೋಗಬಲ್ಲೆ ?'

'ಈಗೇನೂ ಕಾಯಿಲೆ ಇಲ್ಲಾ ಸಾರ್, ಪೂರ್ಣವಾಗಿ ಗುಣವಾಗಿದೆ !'

'ಡಾಕ್ಟರು ನಾನೋ ನೀನೋ ?'

'ನೀವು ಸಾರ್ !'

'ಹಾಗಾದರೆ ಗುಣವಾದದ್ದು ಬಿಟ್ಟದ್ದು ನೀನು ಹೇಗೆ ಹೇಳಬಲ್ಲೆ ?'

'ಹೊಸ ವೈದ್ಯನಿಗಿಂದಲೂ ಹಳೆಯ ರೋಗಿಯೇ ಮೇಲು !' ಎಂದು ನಾನು ಇಂಗ್ಲಿಷಿನಲ್ಲಿ ಉತ್ತರಿಸಿದೆ. ನನ್ನ ಉತ್ತರ ಕೇಳಿ, ಡಾಕ್ಟರ್ ಬರುವಾ, ಕ್ಷಣ ಕಾಲ ತಾವು ಎಲ್ಲಿದ್ದೇವೆ ಎಂಬುದನ್ನು ಮರೆತು ಒಮ್ಮೆಲೇ ಗುಡುಗು ಹೊಡೆದಂತೆ ನಕ್ಕುಬಿಟ್ಟರು. ನನ್ನ ಬೆನ್ನಮೇಲೊಮ್ಮೆ ಚಪ್ಪರಿಸಿ ಮುಂದುವರೆದರು. ಎಲ್ಲ ರೋಗಿಗಳನ್ನೊಮ್ಮೆ ವಿಚಾರಿಸಿ, ಅನಂತರ ಬರುವಾ ತಮ್ಮ ರೂಮಿನಲ್ಲಿ ನಡೆದರು.

*    *    *    *

ಮೇಜರ್ ಬರುವಾ ಶುದ್ಧ ಬಂಗಾಲಿ ; ವಯಸ್ಸು ಕೇವಲ ಇಪ್ಪತ್ತೇಳು. ಅದೇ ಮದುವೆಯಾಗಿತ್ತು. ಕಲ್ಕತ್ತೆಯಲ್ಲಿಯೇ ಮನೆ. ಮನೆತನದಿಂದ ಅಷ್ಟೇನೂ

ಸಿರಿವಂತರಾಗಿರಲಿಲ್ಲ. ಮಧ್ಯಮ ತರಗತಿಗೆ ಸೇರಿದ ಜನ. ತನ್ನ ತಾಯಿ, ತಂಗಿ, ಪ್ರೀತಿಯ ಹೆಂಡತಿ ಇವರ ಹೊರತು ತಮಗೆ ಬೇರೆ ಆಸ್ತಿಯೇ ಇಲ್ಲವೆಂದು ಬರುವಾ ಆಗಾಗ ಹೇಳುತ್ತಿದ್ದರು. ಬರುವಾರಿಗೆ ಚೆನ್ನಾಗಿ ಹಿಂದಿಯಲ್ಲಿ ಮಾತಾಡಲು ಬಾರದು. ಆದರೆ ಅವರು ಇಲ್ಲಿಗೆ ಬಂದಾಗಿನಿಂದ, ಅವರ ದೃಷ್ಟಿಗೆ ಒಬ್ಬನೂ ಬಂಗಾಲಿ ಭಾಷೆ ಬಲ್ಲವನು ಬಿದ್ದಿರಲಿಲ್ಲ. ಬಂಗಾಲಿ ಹೋಗಲಿ, ಚೆನ್ನಾಗಿ ಇಂಗ್ಲಿಷ್ ಬಲ್ಲವರೂ ಅವರಿಗೆ ಸಿಕ್ಕುತ್ತಿರಲಿಲ್ಲ. ಆಸ್ಪತ್ರೆಯಲ್ಲಿ ಬಿದ್ದವರೆಲ್ಲ ಅರೆಬರಹಬಲ್ಲ ಸೈನಿಕರು. ಊರು ತನ್ನದಲ್ಲ—ಪರದೇಶ. ಬರುವಾ ಬಾಯಿ ಸತ್ತವರಲ್ಲ. ಅವರಿಗೆ ಹರಟೆ ಬೇಕು. ಮನಸ್ಸನ್ನು ಕೆಲಸದಲ್ಲಿ ತೊಡಗಿಸಬೇಕೆಂದರೆ ಸಾಕಷ್ಟು ಕೆಲಸ ವಿರಲಿಲ್ಲ. ಒಂದೆರಡು ತಿಂಗಳಲ್ಲಿಯೇ ಅವರಿಗೆ ಬೇಜಾರು ಬಂದು ಬಿಟ್ಟಿತು. ಮೂರು ಮೂರು ದಿನಕ್ಕೆ ಅವರ ಪ್ರೀತಿಯ ಹೆಂಡತಿಯಿಂದ ಬಂದ ಕಾಗದಗಳನ್ನು ಅವರು ಇಪ್ಪತ್ತು ಸಲ ಓದುತ್ತಿದ್ದರು; ಆದರೂ ಬೇಸರ ಮಾಯವಾಗುತ್ತಿರಲಿಲ್ಲ. ಅವರ ಮನಸ್ಸು ತಮ್ಮ ವಯಸ್ಸಿನವರ ಗೆಳೆತನ ಬಯಸುತ್ತಿತ್ತು. ಆದರೆ ಗೆಳೆಯರಾಗಲು ಯೋಗ್ಯರಾದವರು ಬೇಕಲ್ಲ....! ಬೇಸರ ಮಾಯಗೊಳಿಸಲು ಮೆಲ್ಲನೆ ಬರುವಾರ ಬಾಯಲ್ಲಿ ಸಿಗರೇಟು ಬಂದಿತ್ತು. ಕೈಯಲ್ಲಿ ಇಸ್ಪೀಟು. ಬರುವ ಬೇಸರ ಇದಕ್ಕೂ ಹೋಗಲಿಲ್ಲ. ಬೀರ್ ಬಾಟಲ್ ಟೇಬಲ ಮೇಲೆ ನಿಲ್ಲತೊಡಗಿದುವು. ಇವೆಲ್ಲವುಗಳಿಂದ ಮನಸ್ಸಿನ ಬೇಜಾರು ಕೊಂಚಕರಗಿದರೂ, ಬಾಯ ಬೇಸರ ಹೇಗೆ ಹೋಗಬೇಕು ? ಒಂದು ದಿನ, ನಾನು ಊಟಮಾಡಿ ಮಧ್ಯಾಹ್ನ ಮಲಗುವ ಹವಣಿಕೆಯಲ್ಲಿದ್ದೆ. ಬರುವಾರ ಸೇವಕ ಬಂದು ನನಗೆ ಹೇಳಿದ:

'ಸಾಹೇಬರು ನಿಮ್ಮನ್ನು ಕರೀತಾರ್ರಿ !' ನಾನು ನನ್ನ ಆಸ್ಪತ್ರೆಯ ಉಡುಪಿನಲ್ಲಿಯೇ ಬರುವಾರ ಕೋಣೆಯಲ್ಲಿ ಕಾಲಿಟ್ಟೆ. ಡಾಕ್ಟರರಿಗೆ ಸೆಲ್ಯೂಟ್ ಕೊಟ್ಟು ನಿಂತುಬಿಟ್ಟೆ. ಬರುವಾ ತಮ್ಮ ಬದಿಯ ಕುರ್ಚಿ ತೋರಿಸಿ ಕುಳಿತುಕೊಳ್ಳಲಿಕ್ಕೆ ಹೇಳಿ—

'ನಿಮಗೆ ಇಸ್ಪೀಟು ಆಟ ಬರುತ್ತೆಯೆ ?' ಎಂದು ಕೇಳಿದರು.

'ಬರುತ್ತೇ ಸಾರ್ !'

'ಸರೀ, ಒಳ್ಳೇದಾಯ್ತು, ಒಂದೆರಡು ಆಟ ಆಡೋಣ! '

ಮುಂದೆ ಆಟವಾಡುತ್ತಿರುವಾಗಲೇ ನಮ್ಮಿಬ್ಬರಲ್ಲಿ ಸಂಭಾಷಣೆಗಳಾದವು. ನಾವಿಬ್ಬರೂ ಇಂಗ್ಲೀಷಿನಲ್ಲಿಯೇ ಮಾತನಾಡುತ್ತಿದ್ದೆವು.

ಆಟ ಮುಗಿದನಂತರ ಡಾ. ಬರುವಾ ಕೇಳಿದರು:

'ನೀವು ಬೀರು ಕುಡಿಯುತ್ತೀರಾ ?'

'ಹೌದು ಇಲ್ಲ' ಎಂದು ಎರಡನ್ನೂ ಹೇಳದೆ, ಅವರು ಕೊಟ್ಟ ಗ್ಲಾಸನ್ನು ತುಟಿಗೆ ಹಚ್ಚಿ ಖಾಲೀ ಮಾಡಿದೆ. ಮುಂದೆ ಅವರು ಕೊಟ್ಟ ಸಿಗರೇಟೂ ನನ್ನ ಬಾಯ ಸೇರಿತ್ತು. ಮತ್ತೆ ಬರುವಾ ಮಾತಿಗೆ ಮೊದಲು ಮಾಡಿದರು :

'ನೋಡಿ, ಇನ್ನು ಇಂಗ್ಲಿಷಿನಲ್ಲಿ ಮಾತನಾಡುವುದು ಬೇಡ ; ಹಿಂದಿಯಲ್ಲಿಯೇ ಮಾತಾಡೋಣ !'

'ಏಕೆ ಸಾರ್ ?'

'ನನಗೆ ಹಿಂದೀ ಕಲಿಯಬೇಕಾಗಿದೆ. ಹರುಕು ಮುರುಕು ಹಿಂದಿಯಲ್ಲಿ ಜನರ ಮುಂದೆ ಮಾತನಾಡಿದರೆ ನಗೆಯಾಡುತ್ತಾರೆ.'

'ನನ್ನ ಮುಂದೆ ನೀವು ಹರುಕು-ಮುರುಕು ಹಿಂದಿಯಲ್ಲಿ ಮಾತಾಡಿದರೆ, ನಾನು ನಗೆಯಾಡೇನೆಂಬ ಭಯ ನಿಮಗಿಲ್ಲವೇ ?'

'ನೀವು ನಗೆಯಾಡಿದರೆ ಪರವಾ ಇಲ್ಲ !'

ಕೆಲ ನಿಮಿಷಗಳಲ್ಲಿಯೇ ನನ್ನ ಬಗ್ಗೆ ಅವರಲ್ಲಿ ಮೂಡಿದ ಆತ್ಮೀಯ ಭಾವನೆ ಈ ಬಗೆಯ ನುಡಿಯನ್ನು ಅವರ ಬಾಯಿಂದ ಆಡಿಸಿತ್ತು.

'ಸರಿ, ಹಾಗೇ ಆಗಲಿ, ಸಾರ್ !' ಎಂದು ಉತ್ತರಿಸಿ, ನಾನು ನಮಸ್ಕರಿಸಿ ಮರಳಿದೆ.

*    *    *    *

ಅನಂತರ ಒಂದು ತಿಂಗಳಲ್ಲಿ ನಮ್ಮ ಪರಿಚಯ ಗಾಢವಾಗಿ ಬಿಟ್ಟಿತು. ಹೆಚ್ಚು ಕಡಿಮೆ ಒಂದೇ ವಯಸ್ಸಿನವರು. ಅಣ್ಣತಮ್ಮಂದಿರಷ್ಟು ಗಾಢಸ್ನೇಹ ನಮ್ಮಿಬ್ಬರಲ್ಲಿ ಬೆಳೆದುಬಿಟ್ಟಿತು. ಆಟ ನೋಟ, ಕೆಲಿತ ಎಲ್ಲವೂ ಕೂಡಿಯೇ ನಡೆಯತೊಡಗಿತು. ಸಮಯ ಸಿಕ್ಕಾಗಲೆಲ್ಲ ಬರುವಾ ನನ್ನ ಮುಂದೆ ತಮ್ಮ ಮನೆಯ ಜನರನ್ನು ಹೊಗಳುತ್ತಿದ್ದರು. ತಾಯಿ ತಮ್ಮನ್ನು ಬಹು ಪ್ರೀತಿಯಿಂದ ಸಾಕಿ ಸಲಹಿದಳಂತೆ. ಚಿಕ್ಕವನಿರುವಾಗಲೆ ತಂದೆ ತೀರಿಹೋಗಿದ್ದರು. ತಾಯಿ ಬೀಸು-ಕುಟ್ಟುಗಳನ್ನು ಮಾಡಿ ತನ್ನನ್ನು ಇಂದಿನ ರೀತಿಯಲ್ಲಿ ತಂದಿದ್ದಾಳೆ. ಅದಕ್ಕಾಗಿ ಅದರ ಋಣವು ತಮ್ಮ ಚಿಕ್ಕ ತಂಗಿ—ಸಬಿತಾಳ ಮದುವೆಯನ್ನು ಸಂಭ್ರಮದಿಂದ ಮಾಡಿದರೂ ಮುಗಿಯಲಾರದು ; ಏಳೇಳು ಜನ್ಮದಲ್ಲಿ ನಾನು ಅವಳ ಮಗನಾಗಿ ಹುಟ್ಟಬೇಕು....ಎಂದು ಬರುವಾ ಹೃದಯದಿಂದಲೇ ಹೇಳುತ್ತಿದ್ದರು. ಇನ್ನು ತಮ್ಮ ಹೆಂಡತಿಯ ಬಗೆಗಂತೂ ಅವರಿಗೆ

ಬಹಳ ಆದರ. ತಮ್ಮ ಮನೆತನದ ಪರಿಸ್ಥಿತಿಯನ್ನೂ ಲೆಕ್ಕಿಸದೆ, ತನ್ನ ನೈಜಪ್ರೇಮ ಕ್ಕಾಗಿ ಎಲ್ಲವನ್ನೂ ತೊರೆದ ತ್ಯಾಗದ ದೇವಿ ರೂಪಾ ಎಂದು ಹೇಳುತ್ತಿದ್ದರು. ಡಾ. ಬರುವಾ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿರುವಾಗಲೇ ಲಗ್ನವಾದರು. ಅಲ್ಲಿಯೇ ಓದುತ್ತಿದ್ದ ರೂಪಕುಮಾರಿ ಅವರನ್ನು ಸ್ವಯಂವರಿಸಿದ್ದಳು. ಬರುವಾ ಸನಾತನಿ ಯಲ್ಲದಿದ್ದರೂ ನಾಸ್ತಿಕರಲ್ಲ. ದಿನವೂ ಮಲಗುವ ಪೂರ್ವದಲ್ಲಿ ದೇವರ ಧ್ಯಾನವನ್ನು ಮಾಡುತ್ತಿದ್ದರೋ ಇಲ್ಲವೋ ಗೊತ್ತಿಲ್ಲ ; ಆದರೆ ತಮ್ಮ ಮನೆಯ ಮೂರೂ ಜನರ ಭಾವಚಿತ್ರಗಳನ್ನು ನೋಡಿದ ಹೊರತು ಕಣ್ಣು ಮುಚ್ಚುತ್ತಿರಲಿಲ್ಲ.

ಒಂದು ದಿನ ಬೆಳುದಿಂಗಳು ಬಿದ್ದಿತ್ತು. ನಾವಿಬ್ಬರೂ ಕಡಲ ತಡಿಯಲ್ಲಿ ಹರಟೆ ಹೊಡೆಯುತ್ತ ಕುಳಿತಿದ್ದೆವು. ಮಾತಿಗೆ ಮಾತು ಹೊರಟು, ವಿಷಯ ಭಾರತದ ರಾಜಕಾರಣದ ಕಡೆಗೆ ಹೊರಳಿತು. ಬರುವಾರಿಗೆ ಮಹಾತ್ಮಾ ಗಾಂಧಿ ಯವರಲ್ಲಿ ನಿಸ್ಸೀಮ ಭಕ್ತಿ ; ಗಾಢವಾದ ನಂಬಿಕೆ. ಆದರೆ ನನಗೇಕೋ ಅವರ ಸೌಮ್ಯರೀತಿ-ನೀತಿಯಲ್ಲಿ ನಂಬಿಕೆ ಇರಲಿಲ್ಲ. ಬರುವಾ ಹೇಳಿದ ಪ್ರತಿ ಮಾತಿಗೂ ನಾನು ವಿರೋಧಿಸತೊಡಗಿದೆ. ಪ್ರತಿಪಕ್ಷ ಎದ್ದಾಗಲೇ ಮೂಲದ ಮಾನ ಹೆಚ್ಚುತ್ತದೆ ಯಲ್ಲವೆ ? ಹಾಗೆಯೆ ನಮ್ಮಿಬ್ಬರ ಹರಟೆಗೆ ಕಳೆಬರುತ್ತಿತ್ತು. ಬರುಬರುತ್ತ ಹರಟೆ ವಿಕೋಪಕ್ಕೆ ಮುಟ್ಟತೊಡಗಿತು. ನಾನು ಬೇಕೆಂತಲೇ ಮತ್ತೆ 'ನೋಡಿ ಸಾರ್, ಗಾಂಧಿಯವರು ಲೋಕಸತ್ತಾತ್ಮಕದ ಸಲುವಾಗಿ ಹೋರಾಡುತ್ತಿದ್ದರೂ ತಮ್ಮ ಸ್ವಾತಂತ್ರ್ಯ ಕಾಯ್ದುಕೊಳ್ಳಬೇಕೆನ್ನುತ್ತಾರೆ. ಅವರ ಅಧಿಕಾರವನ್ನು ದೇವದತ್ತ ದಂತೆ ನಡಿಸಿಕೊಳ್ಳುತ್ತಾರೆ. ತ್ರಿಪುರೀ ಕಾಂಗ್ರೆಸ್ಸಿನ ಮಾತನ್ನೇ ನೋಡಿರಿ! ಜನತೆ ಆರಿಸಿಕೊಟ್ಟ ಪ್ರತಿನಿಧಿ ಸುಭಾಸ ಬಾಬುಗಳನ್ನು ಅಧ್ಯಕ್ಷಪಟ್ಟದಿಂದ ತಳ್ಳುವ ಹಟ ವೇಕೆ ಹಿಡಿದರು ? ಅದನ್ನು ಸಾಧಿಸಿಯೆ ಬಿಟ್ಟರಲ್ಲ !' ನಾನು ಬೇಕೆಂತಲೇ ಈ ಮಾತನ್ನು ಒತ್ತಿ ಹೇಳಿದೆ. ಸುಭಾಸ ಬಂಗಾಲಿ, ಬರುವಾ ಬಂಗಾಲಿ: ಪ್ರಾಂತೀ ಯತೆಯ ಅಭಿಮಾನ ಅವರಲ್ಲಿ ತಲೆಯೆತ್ತಿ, ಅವರ ಮಾತನ್ನು ಬದಲಿಸಬಹುದೇ-- ಎಂದು. ಆದರೆ ಬರುವಾರ ಉತ್ತರ ಕೇಳಿ ಸ್ತಬ್ಧನಾಗಿ ಬಿಟ್ಟೆ.

'ಚಿನ್ನ ಎಂದಿಗಾದರೂ ಚಿನ್ನವೇ. ಆದರೆ ಕಲ್ಲುಗುಡ್ಡದಲ್ಲಿ ಕಾಣಿಸದೇ ಬಿದ್ದಂಥ ವಜ್ರಗಳನ್ನು ಆರಿಸಿ ಮೇಲೆ ತೆಗೆಯಬೇಕಲ್ಲವೇ ? ಸುಭಾಸ ಮುತ್ಸದ್ದಿ ; ಗಾಂಧಿಯವರಿಗೂ ಚೆನ್ನಾಗಿ ಗೊತ್ತಿತ್ತು. ಆದರಂತೇ ಉಳಿದ ಕೆಲವರನ್ನು ಪಳಗಿಸ ಬೇಕಾಗಿತ್ತು. ಅದಕ್ಕೆ ಗಾಂಧೀ ಮಾಡಿದ್ದು ಯೋಗ್ಯ !'

ಮುಂದೆ ಮಾತು ಗಾಂಧಿಯವರ ಪ್ರೊಮುಸ್ಲಿಂ ಪಾಲಿಸಿಯ ಕಡೆಗೆ ಜಾರಿತು. ನಾನು ಅದನ್ನು ತೀವ್ರವಾಗಿ ಖಂಡಿಸತೊಡಗಿದೆ. ಬರುವಾ ತಮ್ಮ ಮತವನ್ನು

ಮಂಡಿಸಿದರು ; 'ಹುಚ್ಚ್ಚ, ನಿಮ್ಮಂಥ ಕಲಿತವರೂ ಗಾಂಧಿಯವರ ಈ ಪಾಲಿಸಿಯನ್ನು ಖಂಡಿಸಬೇಕೇ ? ಜಾತಿ ಬೇರೆಯಾದರೇನು ? ಜನಾಂಗ ಒಂದೇ ಅಲ್ಲವೆ ? ಹಿಂದುಗಳು ಮುಸ್ಲಿಂರನ್ನು ಸೌಮ್ಯರೀತಿಯಲ್ಲಿ ನಡೆಸಿಕೊಳ್ಳಬೇಕು. ಅವರು ಅಲ್ಪಸಂಖ್ಯಾತರು !' ಆದರೆ ಅಂದೇಕೋ ನನ್ನಲ್ಲಿ ಭೂತಸಂಚಾರವಾಯಿತು. ಕೊನೆಯವರೆಗೂ ಅವರ ಮಾತನ್ನು ಮನ್ನಿಸಲಿಲ್ಲ. ಡಾ. ಬರುವಾರವರಿಗೆ ಕೊಂಚ—ಕೊಂಚವೇಕೆ ಹೆಚ್ಚು—ಕೋಪ ಬಂದು ಬಿಟ್ಟಿತು ; ಮಾತನ್ನೇ ನಿಲ್ಲಿಸಿದರು ; ಮುಖ ಗಂಟು ಹಾಕಿದರು. ಚಂದ್ರ ಮೋಡದಲ್ಲಿ ಮರೆಯಾದ. ಸಾಗರದ ತೆರೆಗಳು ಕತ್ತಲೆಯಲ್ಲಿ ಭೋರ್ಗರೆಯುತ್ತಿದ್ದುವು. ಮೊದಲಿದ್ದ ಬೆಳದಿಂಗಳು ಮಾಯವಾಗಿ ಕತ್ತಲೆ ಪಸರಿಸತೊಡಗಿತ್ತು. ಹೆಚ್ಚು ವಾದ ಹಾಕಿದಲ್ಲಿ ನಮ್ಮಿಬ್ಬರ ಸ್ನೇಹಕ್ಕೂ ಕತ್ತಲೇ ಬಿದ್ದೀತು—ಎಂದು ನಾನು ಎದ್ದೆ. ಆಸ್ಪತ್ರೆಯವರೆಗೂ ಇಬ್ಬರೂ ಮಾತಾಡದೆ ಬಂದೆವು. ಮರುದಿನವೇ ನನ್ನದು ಆಸ್ಪತ್ರೆಯಿಂದ ಬಿಡುಗಡೆ ಆಗುವ ದಿನವಿತ್ತು.

* * * *

ಈಗ ಸದ್ಯ ನಾನು ಆಸ್ಪತ್ರೆಯಲ್ಲಿರದಿದ್ದರೂ, ಸಂಜೆ ಊಟವಾದ ನಂತರ ದಿನವೂ ಡಾಕ್ಟರ್ ಬರುವಾರ ಕಡೆಗೆ ಹೋಗಿ ಒಂದೆರಡು ಇಸ್ಪೀಟು ಆಟಗಳನ್ನು ಆಡಿಯೇ ಬರುತ್ತಿದ್ದೆ. ಅವರೂ ನನ್ನನ್ನು ಮೊದಲಿನ ಪ್ರೇಮ ಉತ್ಸಾಹಗಳಿಂದಲೇ ಕಾಣುತ್ತಿದ್ದರು. ಆದರೆ ನಮ್ಮಿಬ್ಬರಲ್ಲಿ ಒಂದು ಒಪ್ಪಂದವಾಗಿತ್ತು, ಯಾರೂ ರಾಜಕಾರಣದ ಮಾತನ್ನೇ ತೆಗೆಯಕೂಡದೆಂದು. ನಮ್ಮಿಬ್ಬರಲ್ಲಿ ಭಿನ್ನ ಮತಗಳೇ ಈ ಒಪ್ಪಂದಕ್ಕೆಕಾರಣವಾಗಿದ್ದುವು. ನನ್ನದು ಕೊಂಚ ಕಿಡಿಗೇಡಿ ಸ್ವಭಾವ, ಆಟ ಮುಗಿಸಿ ಹೊರಬರುವಾಗ:

'ಗಾಂಧೀಕೀ ಜೈ !'

'ಪ್ರೋಮುಸ್ಲಿಂ ಪಾಲಿಸಿಕಿ ಜೈ !' ಎಂದು ಎಂದು ನಗೆಯಾಡಿ ಬಿಡುತ್ತಿದ್ದೆ. ಅದನ್ನು ಕೇಳಿದ ಬರುವಾ ಆಗ ಕೋಪಿಸಿಕೊಂಡರೂ, ಮರುದಿನ ಸಂಜೆ ಮತ್ತೆ ಮೊದಲಿನಂತೆ ನಗುಮೊಗದಿಂದ ನನ್ನನ್ನು ಸ್ವಾಗತಿಸುತ್ತಿದ್ದರು.

* * * *

ದಿನಗಳು ಕಳೆದಂತೆ, ೧೯೪೬ ರ ಹದಿನಾರರ ಉದಯವಾಯಿತು. ಜಿನ್ನಾರು ಕಲ್ಕತ್ತೆಯಲ್ಲಿ ಕ್ರಾಂತಿಯ ಕಹಳೆಯನ್ನು ಊದಿದರು. 'ಡಾಯರೆಕ್ಟ್ ಆಕ್ಶನ್' ತಾನೇತಾನಾಗಿ ತಾಂಡವವಾಡತೊಡಗಿತು. ಸುಂದರ ನಗರ ಸ್ಮಶಾನವಾಗಲು ತೊಡಗಿತು. ನಾವು ಆಗ ಭಾರತದಲ್ಲಿರದಿದ್ದರೂ ಬಾನುಲಿಯ ಮುಖಾಂತರ ಎಲ್ಲವೂ

ತಿಳಿಯುತ್ತಿತ್ತು. ಆದರಿಂದಾಗಿ ನಮ್ಮಿಬ್ಬರ ಆಟ ಕಡಿಮೆಯಾಗತೊಡಗಿತು. ಬಿಡುವು ಸಿಕ್ಕಿದಾಗಲೆಲ್ಲ ರೇಡಿಯೋ ಬಳಿಸಾರಿ, ಕಲ್ಕತ್ತೆ ಸ್ಟೇಶನ್ ತಿರುವಿ ಕೇಳುತ್ತ ಕುಳಿತು ಬಿಡುತ್ತಿದ್ದೆವು. ನನಗಿಂತಲೂ ಹೆಚ್ಚಾಗಿ ಡಾಕ್ಟರ್ ಬರುವಾರ ಎದೆ ಡವಡವ ಬಡಿದುಕೊಳ್ಳುತ್ತಿದ್ದಿತು. ತನ್ನ ಮುಖ್ಯ ಮೂರು ಆಸ್ತಿ ಕಲ್ಕತ್ತೆಯಲ್ಲಿ. ಮೂರು ದಿನಕ್ಕೊಮ್ಮೆ ರೂಪಕುಮಾರಿಯು ಪತ್ರ ಬರುತ್ತಿತ್ತು. ನಡುವೆ ತಡವಾದಾಗ ಬರುವಾರ ಪರಿಸ್ಥಿತಿ ನೋಡಲು ಬಾರದು. ಒಮ್ಮೆ ಪತ್ರ ಬಂದಿತೆಂದರೆ—ಆಕಾಶ ದಾಳಿ ಮುಗಿಯಿತೆಂದರೆ ನೆಲಮನೆಯಿಂದ ಹೊರಬಂದ ಸೈನಿಕನಂತೆ—ಹಾಯಾಗಿ ಉಸಿರಾಡುವರು. ಹೋದ ಜೀವ ಸಿಕ್ಕಂತಾಗುತ್ತಿತ್ತು ಅವರಿಗೆ. ಆವೊತ್ತೊಂದುದಿನ ನಾವು, ಆಟದಲ್ಲಿ ಬಾಟ್ಲಿಯಲ್ಲಿ ತಲ್ಲೀನರಾಗುತ್ತಿದ್ದೆವು.

* * * *

ಅಂದು ಶನಿವಾರ. ನಮ್ಮ ಮಿಲ್ರ್ರಿವರ್ಕ್‌ಶಾಪಿಗೆ ಒಪ್ಪತ್ತೇ ಕೆಲಸ. ಊಟ ಮುಗಿಸಿ ಊರಲ್ಲಿ ನಡೆದೆ. ದಿನವೂ ಸಿಂಗಪೂರ ಎಕ್ಸ್‌ಪ್ರೆಸ್ ಕೊಂಡು ಅದರಲ್ಲಿಯ ತಲೆಬರೆಹಗಳನ್ನಷ್ಟೆ ಓದುವುದು ನನ್ನ ವಾಡಿಕೆ. ಅಂದೂ ವಾಡಿಕೆಯಂತೆ ಕೊಂಡೆ. ದಪ್ಪಕ್ಷರಗಳಲ್ಲಿ ಬರೆದಿತ್ತು: 'ಕಲ್ಕತ್ತೆಯ ಕೊಲೆಯ ಸಂಖ್ಯೆ ೫೦೦೦ ಕ್ಕೆ ಮೇಲ್ಪಟ್ಟದೆ!' ಎಂದು.

ನನ್ನ ರೋಷ ನೂರ್ಮಡಿಯಾಯಿತು; 'ಹೀಗೆಯೆ ಹೋಗಿ ಆ ಗಾಂಧೀ ಭಕ್ತ ಬರುವಾರ ಕಣ್ಣೆದುರಿನಲ್ಲಿ ಇದನ್ನು ತೋರಿಸಿ ಕೇಳೋಣವೇ ?' ಎಂದು ಆಸ್ಪತ್ರೆಯ ಕಡೆಗೆ ಹೊರಳಿದೆ. ಎವೆ ಮುಚ್ಚಿ ಎವೆ ತೆಗೆಯುವ ಮುನ್ನ ಬರುವಾರ ರೂಮಿನ ಬಾಗಿಲಿಗೆ ಬಂದಿದ್ದೆ. ಆದರೆ ?

ಅಲ್ಲಿ ಡಾ. ಬರುವಾ ಎಚ್ಚರದಪ್ಪಿ ಬಿದ್ದು ಬಿಟ್ಟಿದ್ದಾರೆ. ಎಲ್ಲರೂ ಶುಶ್ರೂಷೆಯನ್ನು ನಡೆಯಿಸಿದ್ದಾರೆ. ನಾನು ದಂಗುಬಡೆದು ನಿಂತು ಬಿಟ್ಟೆದ್ದೆ. ಕಾರಣ ಕೇಳಿದೆ. ಅಲ್ಲಿದ್ದವರಿಗೆ ಅಷ್ಟು ತಿಳಿಯದು. ಆದರೆ ಬರುವಾರ ಕೈಯಿಂದ ಕಳಚಿ ಬಿದ್ದ ತಂತಿಯ ಫಾರ್ಮು ನೆಲದ ಮೇಲೆ ಹಾರಾಡುತ್ತಿತ್ತು. ಅದನ್ನೆತ್ತಿ ಓದಿದೆ:

'Your mother, Sabita, Roopa murdered. House burnt. Come soon.'

'ನಿಮ್ಮ ತಾಯಿ, ಸಬಿತಾ, ರೂಪಾ ಕೊಲ್ಲಲ್ಪಟ್ಟಿದ್ದಾರೆ. ಮನೆ ಸುಟ್ಟಿದೆ. ಬನ್ನಿ !' ಎಂದು ಅವರ ಕಲ್ಕತ್ತೆಯ ಗೆಳೆಯನೊಬ್ಬ ಬರುವಾರಿಗೆ ತಾರು ಕಳಿಸಿದ್ದ. ಆಗ ಬರುವಾರ ಈ ಸ್ಥಿತಿಯ ಕಾರಣ ತಿಳಿಯಿತು: ಮನಕ್ಕೇನೋ ವ್ಯಸನವಾಯಿತು.

ಆದರೆ ಕಣ್ಣೊಳಗಿಂದ ನೀರೆ ಬರಲಿಲ್ಲ. ಮೈಯೊಳಗಿನ ರಕ್ತ ಮಾತ್ರ ಕುದಿಯುತ್ತಿತ್ತು. ಪ್ರತಿ ರಕ್ತದ ಕಣ ಕೂಗುತ್ತಿತ್ತು: 'ಸೇಡು' ಎಂದು. ಕೆಲಹೊತ್ತಿನ ನಂತರ ಬರುವಾ ಮೂರ್ಛೆ ತಿಳಿದೆದ್ದರು. ಪೂರ್ಣ ರಸಾತಳಕ್ಕೇ ಇಳಿದಿದ್ದರು. ಆದರೆ ನಾನು ಅವರನ್ನು ಸಮಾಧಾನ ಪಡಿಸುವುದನ್ನು ಬಿಟ್ಟು, 'ಹಾವಿಗೆ ಹಾಲೆರೆದವನ ಸಂಗದ ಫಲವಿದು !' ಎಂದು ತೀಕ್ಷ್ಣಬಾಣ ಬಿಟ್ಟೆ. ನನ್ನ ಮನಸ್ಸೇ ಸ್ತಿಮಿತದಲ್ಲಿರಲಿಲ್ಲ. ಬರುವಾ ನಿಸ್ಸಹಾಯಕರಾಗಿ ನರಳುತ್ತ ನನ್ನನ್ನಪ್ಪಿ, ಹಸುಗೂಸಿನಂತೆ ಬಿಕ್ಕಿ ಬಿಕ್ಕಿ ಅಳತೊಡಗಿದರು.

* * * *

ಒಂದೆರಡು ವಾರ ನಮ್ಮಿಬ್ಬರ ಮುಖದಲ್ಲಿ ಹುಚ್ಚುಕಳೆ ಮೂಡಿತ್ತು. ಬರುವಾರವರಿಗೆ ರಜೆ ಸಿಗುವಂತಿದ್ದರೂ ಭಾರತಕ್ಕೆ ಅವರು ಹೋಗಬಯಸಲಿಲ್ಲ. ಅಂದಿನಿಂದ ಬರುವಾರ ದೈನಂದಿನ ಕೆಲಸದಲ್ಲಿ ಬದಲಾವಣೆಯಾಗಿ ಬಿಟ್ಟಿತು. ಬೀರ ಬಾಟಲ್, ಸಿಗರೇಟ್ ಇಸ್ಪೀಟ್ ಇದರ ಹೊರತು ಮತ್ತೇನನ್ನು ಅವರೂ ಮುಟ್ಟುತ್ತಿರಲೇ ಇಲ್ಲ. ಅವರಿಗೆ ಹರಟೆಯೂ ಬೇಡವಾಗತೊಡಗಿತು. ರಾಜಕಾರಣದ ಮಾತಂತೂ ದೂರವೇ ಉಳಿಯಿತು. ನಾನು ಅಂಜಂಜುತ್ತ ಗಾಂಧಿಯವರ ಬಗ್ಗೆ ಮಾತೆತ್ತಿದರೆ, ಅವರು ಪ್ರತ್ಯುತ್ತರವನ್ನೇ ಕೊಡುತ್ತಿರಲಿಲ್ಲ. ಮನೆಯ ಮೂರು ಜನರ ದುರ್ಮರಣ ಇವರ ಮತವನ್ನು ಬದಲಾಯಿಸಲಿಲ್ಲವೇ ?—ಎಂದು ನನಗೇ ಆಶ್ಚರ್ಯವಾಗುತ್ತಿತ್ತು. 'ಶಾಂತಿಯ ಸೇವಕ' ಎಂದು ಸುಮ್ಮನಾಗುತ್ತಿದ್ದೆ.

* * * *

ಅಂದು ರಾತ್ರಿ ಹತ್ತು ಹೊಡೆದು ಹೋಗಿತ್ತು. ಮರುದಿನ ರವಿವಾರವಿದ್ದುದರಿಂದ ಬೀರ ಸೇವಿಸಿ ಮನದಣಿಯೆ ಇಸ್ಪೀಟಿಗೆ ಕುಳಿತುಕೊಂಡೆವು. ಆಟ ಒಳ್ಳೇ ಭರಕ್ಕೆ ಬಂದಿತ್ತು. ಒಕ್ಕೈ ಕೋಟಿಗೆ ನಾನು ಕೈಹಾಕಿದ್ದೆ. ರಾಜಾ, ರಾಣಿ, ಗುಲಾಮ, ಒಂದು ಚಿಲ್ಲರೇ ಎಲೆ ನನ್ನಲ್ಲಿ. ಒಂದು ಎಕ್ಕಾ ಅವರ ಬಳಿಯಲ್ಲಿ ಬಂದಿರಲಿಕ್ಕಿಲ್ಲವೆಂದು ನಾನು ಧೈರ್ಯವಾಗಿಯೇ ಕೋಟ್ ಹೇಳಿದ್ದೆ. ಆಟಕ್ಕೆ ಎಲೆಗಳನ್ನು ಹಾಕುವುದೇ ತಡವಾಗಿತ್ತು. ನಡುವೆಯೇ ಬೆಲ್ಲಿನ ಸಪ್ಪಳವಾಯಿತು. ಅಸಿಸ್ಟಂಟ್ ವಾರ್ಡನ್ ಲಗುಬಗೆಯಿಂದಲೇ ಓಡಿ ಬಂದು:

'ಡಾಕ್ಟರ್ ಸಾಹೇಬ್ ಗನ್‌ಶಾಟ್ ಕೇಸ್ ಬಂದಿದೆ; ಲಗೂನೇ ಬನ್ನಿ !' ಎಂದ.

ನಾನಂಜಿದೆ. ಯುದ್ಧ ಮುಗಿದನಂತರ ಗುಂಡುಬಡಿದ ಗಾಯಾಳು ಇರುತ್ತಿರಲಿಲ್ಲ. ಇದೇನೋ ಹೊಸದು—ಎನ್ನುತ್ತಿರುವಷ್ಟರಲ್ಲಿ, ಡಾಕ್ಟರರು ಆಟ ಬಿಟ್ಟಿದ್ದರು.

'ಈ ಆಟ ಮುಗಿಸಿ ಹೋಗಿರಿ' ನಾನೆಂದೆ.

'ಆಗದು, ಮೊದಲು ಕರ್ತವ್ಯ!' ಎಂದು ಬರುವಾ ಉಪಕರಣ ಜೋಡಿಸ ತೊಡಗಿದರು. ಅಷ್ಟರಲ್ಲಿ ಕೇಸ್‌ಫಾರ್ಮನ್ನು ವಾರ್ಡನ್‌ನಿಗೆ ತುಂಬಲು ಹೇಳಿದರು. ವಾರ್ಡನ್ ತನ್ನ ಕೆಲಸ ಮುಗಿಸಿ ಆಪರೇಶನ್ ರೂಮಿನತ್ತ ಮರಳಿದರು. ಡಾ. ಬರುವಾರ ಮೊದಲಿನ ಕೆಲಸದಲ್ಲಿಯ ಉತ್ಸಾಹ ಕುಂದಿಹೋಯಿತು. ಮುಖದ ಮೇಲಿನ ಭಾವ ಉಗ್ರತೆಯನ್ನು ತಾಳಹತ್ತಿತು. ನಾನೆದ್ದು ಕೇಸ್ ಫಾರ್ಮನ್ನು ಓದಿದೆ:

'ಮೇಜರ್ ಅಕ್ರಮ ಖಾನ್, ತಾನೇ ತನ್ನ ಬಂದೂಕಿನಿಂದ ಹೊಡೆದು ಕೊಂಡಿದ್ದಾನೆ. ಗುಂಡು ಭುಜಕ್ಕೆ ತರೆದು ಹೋಗಿದೆ ಅಷ್ಟೆ!' ಎಂದಿತ್ತು. ಬರುವಾ ಹೇಳತೊಡಗಿದರು:

'ಚೆನ್ನಾದ ವೇಳೆ ಸಿಕ್ಕಿದೆ!'

'ಏಕೆ ಸಾರ್?'

'ಸೇಡಿಗೆ! ನನ್ನ ಕೊಲೆಗೊಂಡ ಬಳಗಕ್ಕೆ ಶಾಂತಿ ನೀಡಬೇಕು!'

'ಅಂದರೆ?'

'ಸಿಕ್ಕ ಬೇಟೆಯ ಕೊಲೆ!'

ನನ್ನ ಎದೆ ಅಳುಕಿತು. ಬರುವಾರ ಆಗಿನ ಭಾವಭಂಗಿ ಯಾವ ಕೊಲೆಗಡಕನಿಗೂ ಕಡಿಮೆಯಾಗಿರಲಿಲ್ಲ. ರೌದ್ರತೆ ತಾಂಡವವಾಡುತ್ತಿತ್ತು. ಆಲ್ಲಿ ನನ್ನ ಮನಸ್ಸು ಅವರ ಈ ಕೃತಿಗೆ ಸಮ್ಮತಿಸುತ್ತಿದ್ದಿಲ್ಲ. ನಾನು ಮತ್ತೆ ಹೇಳಿದೆ:

'ನಿಮ್ಮ ಜನರನ್ನು ಈ ಅಕ್ರಮ ಖಾನ ಕೊಲ್ಲಲಿಲ್ಲವಲ್ಲ!'

'ಈ ಹಾವು ಕಚ್ಚದಿದ್ದರೇನಾಯಿತು? ಕಚ್ಚಿದ್ದು ಹಾವೇ ಅಲ್ಲವೆ?'

ಇಷ್ಟನ್ನು ಹೇಳಿ ಬರುವಾ ಕೆಲಸದಲ್ಲಿ ತೊಡಗಿದರು. ಉಪಕರಣಗಳು ಸಜ್ಜಾಗತೊಡಗಿದ್ದುವು. ಇಂಜೆಕ್ಶನ್ ಟ್ಯೂಬಿನಲ್ಲಿ ವಿಷ ಸೇರಿಕೊಂಡಿತು.

ಡಾಕ್ಟರ್ ಮೇಜರ್ ಬರುವಾ ಸಜ್ಜಾಗಿ, ಆಪರೇಶನ್ ರೂಮಿನತ್ತಸಾಗಿದರು. ನನಗೇನು ಮಾಡಬೇಕೋ ತಿಳಿಯದಾಯಿತು. ಅವರನ್ನು ಆತಂಕಿಸಬೇಕೆಂದರೆ ಧೈರ್ಯ ಸಾಲದು; ಬಿಡಿಸಬೇಕೆಂದರೆ ಮನಸ್ಸು ಒಪ್ಪದು. ಗತಿಗಾಣದಂತೆ ಅವರ 'ಪರವಾನಿಗಿ' ಪಡೆದು, ಆಪರೇಶನ್ ರೂಮಿನಲ್ಲಿ ಸೇರಿಕೊಂಡೆ.

—ಗಾಯಾಳು ಅಕ್ರಮಖಾನ್ ಮಂಚದ ಮೇಲೆ ಬಿದ್ದಿದ್ದ, ನರಳುತ್ತಿದ್ದ, ಕಿರಿಚಿಕೊಳ್ಳುತ್ತಿದ್ದ. ಅವನ ಆ ಕೂಗು ಕೊಲೆಗಡಕರ ಎದೆಯನ್ನೂ ಕೊರೆದು

ಬಿಡುತ್ತಿತ್ತು. ಆದರೂ ಬರುವಾ ಸ್ಥಿತಪ್ರಜ್ಞನಂತೆ ಕೆಲಸ ಮಾಡುತ್ತಿದ್ದರು. ನಡು ನಡುವೆ ಅಕ್ರಮು ಬಡಬಡಿಸುತ್ತಿದ್ದ: 'ಡಾ–ಕ್ಟ–ರ ಸಾ-ಬ್ ಗುರಿs ಎದೆಗೆ ಇ–ಟ್ಟೆ-ದ್ದೆ. ತಪ್ಪಿ ಭುಜಕ್ಕೆ ತಗಲಿತು!'

'ಅಲ್ಲೇ ಸಾಯಲಿಲ್ಲೇಕೆ?' ಎನ್ನುವ ಅರ್ಥ ಡಾಕ್ಟರರ ಮುಖದ ಮೇಲೆ ಮೂಡಿತ್ತು. ಆಪರೇಶನ್ನಿನ ನಿಮಿತ್ತಕ್ಕಾಗಿ ಮೇಜರ್ ಅಕ್ರಮುನ ಬಟ್ಟೆಗಳನ್ನು ತೆಗೆಯಲು ಬರುವಾ ಆಜ್ಞಾಪಿಸಿದರು. ನರ್ಸ್ ಆ ಕೆಲಸವನ್ನು ತ್ವರಿತವಾಗಿಯೇ ಪೂರೈಸಿದರು. ಕಿಸೆಯಲ್ಲಿದ್ದ ಕಾಗದಗಳನ್ನು ಒತ್ತಟ್ಟಿಗೆ ಕಟ್ಟತೊಡಗಿದರು. ಅದರಲ್ಲಿ ನನಗೆ ಕಂಡದ್ದು ಒಂದು ತಂತಿಯ ಫಾರ್ಮು. 'ಡಾಕ್ಟರ್ ತಂತಿಯ ಫಾರ್ಮು!' ನಾನು ಒದರಿದೆ. 'ಹಾಂ' ಎಂದು ಡಾಕ್ಟರು ನಡುಗಿದರು. ಒಂದು ತಂತಿಯ ಫಾರ್ಮೇ ಬರುವಾರ ನೋಟ ಬದಲಿಸಿತ್ತು. ಅದಕ್ಕಾಗಿಯೇ ಅವರು ಅಂಜಿದ್ದು. ನಾನೆತ್ತಿ ಅದನ್ನು ಘಟ್ಟಿಸಿ ಓದಿದೆ: 'All at home murdered (ಮನೆಯ ಜನರೆಲ್ಲರದೂ ಕೊಲೆಯಾಗಿದೆ)' ಎಂದು ಜಲಂದರದಿಂದ ಮೇಜರ್ ಅಕ್ರಮುನಿಗೆ ತಾರು ಬಂದಿತ್ತು. ಅದರ ಜತೆಯಲ್ಲಿಯೇ ಮೇಜರು ತನ್ನ ಕೈಯಿಂದ ಬರೆದ ಚೀಟಿಯಿತ್ತು. ಅದನ್ನು ಓದಿಯೇಬಿಟ್ಟೆ:

'ನನ್ನ ಮನೆಯ ಜನ ಹೋದ ಮೇಲೆ ನಾನಿದ್ದರೇನು ಇಲ್ಲವಾದರೇನು? ಅಲ್ಲಾನ ಇಚ್ಛೆ. ನಾನು ಅವರನ್ನು ಸೇರಬಯಸುತ್ತೇನೆ. ನಾನು ಯಾರ ಮೇಲಿನ ಸಿಟ್ಟಿನಿಂದ ಸಾಯುತ್ತಿಲ್ಲ. ಸ್ವಖುಷಿಯಿಂದಲೆ ಗುಂಡು ಹಾಕಿಕೊಂಡು ಸಾಯುತ್ತಿದ್ದೇನೆ.

ಇತಿ

ಅಕ್ರಮ್'

ಕೊನೆಯ ವಾಕ್ಯ ಮುಗಿಯುವುದಕ್ಕೂ ಬರುವಾರ ಕೈಯಲ್ಲಿಯ ಇಂಜೆಕ್ಶನ್ ಟ್ಯೂಬು ಕೆಳಫರಸಿಯ ಮೇಲೆ ಬಿದ್ದು ಒಡೆಯುವುದಕ್ಕೂ ಒಂದುಗೂಡಿತು. ಎಲ್ಲರೂ ಬರುವಾರ ಮುಖದ ಕಡೆಗೆ ನೋಡತೊಡಗಿದರು.

ಅವರ ಕಣ್ಣಲ್ಲಿ ನೀರು ಧಾರೆಯಾಗಿ ಹರಿಯತೊಡಗಿತು. ಒಂದೇ ಸಮನೇ ಅಳಲಿಕ್ಕೆ ಪ್ರಾರಂಭಿಸಿದರು. ಬಹುಶಃ ಅವರ ಜನರ ನೆನಪಾಗಿರಬೇಕು. ಮೇಜರ್ ಅಕ್ರಮ್ ಮೂರ್ಛೆಬೀಳಹತ್ತಿದ್ದ. ಬರುವಾ ಕಣ್ಣೊರಸಿಕೊಂಡು ಕೆಲಸಮಾಡತೊಡಗಿದರು. ಮೊದಲಿನ ಉಪಕರಣಗಳು ಬದಲಾಗಿದ್ದುವು. ನೋಟವೇ ಬದಲಾದನಂತರ?

ಮೂರು ತಾಸಿನವರೆಗೆ ತುಂಬಾ ಪರಿಶ್ರಮ ಪಟ್ಟು ಬರುವಾ ಆಪರೇಶನ್ ಮಾಡಿದರು. ಅದು ಯಶಸ್ವಿಯಾಯಿತೆಂದು ಬೇರೆ ಹೇಳಬೇಕಾಗಿಲ್ಲ. ಆಪರೇಶನ್ ಮುಗಿದ ನಂತರ ನಾನು ಅವರ ಕೈಯನ್ನು ಕುಲುಕಿಸಿದೆ;

'ಗಾಂಧೀಜಿಕಿ ಜೈ !' ಎಂದು ಮನಃಪೂರ್ವಕವಾಗಿ ಹೇಳಿದೆ. ಅದಕ್ಕುತ್ತರ ವಾಗಿ,

'ಅಹಿಂಸಾ ಜಿಂದಾಬಾದ್' ಎಂದು ಬರುವಾ ವಿಜಯಧ್ವನಿಯಲ್ಲಿ ಗುಡುಗಿದರು. ಅವರ ಕಣ್ಣಲ್ಲಿಯ ಬಣ್ಣವೇ ಬದಲಾಗಿತ್ತು. ಹೊಸನೀರು ಬಂದು ಹಳೆಯ ನೀರನ್ನು ಕೊಚ್ಚಿಕೊಂಡು ಹೋಗಿತ್ತು. ಡಾ. ಬರುವಾರಲ್ಲಿ ಹೊಸ ನೋಟ ಮೂಡಿತ್ತು ; ಆ ನೋಟ ನೋಡಿದ ನನ್ನ ದೃಷ್ಟಿಯೂ ಬದಲಾಯಿತು.

* * * *

ಮೂರು ತಿಂಗಳ ನಂತರ ಮೇಜರ್ ಅಕ್ರಮ್, ನಮ್ಮ ಕಂಪನಿಯಲ್ಲಿ ಮೂರನೆಯ ಮೆಂಬರಾಗಿಬಿಟ್ಟರು.

—ನೆಂ. ಮು. ಜೋಶಿ

# ಪವಾಡ ಪುರುಷ

ಮಹಾತ್ಮನೂ ಪೂಜ್ಯಪಾದನೂ ಆದ ಭಿಕ್ಸು ಸರ್ವಾರ್ಥಸಿದ್ಧಿಯು ರುಗ್ಣ ಶಯ್ಯೆಯಲ್ಲಿ ಶಾಂತನಾಗಿ ಒರಗಿದ್ದನು. ಆತನ ನಿರ್ವಾಣಕಾಲ ಸನ್ನಿಹಿತವಾಗಿತ್ತು. ನಾಲ್ಕು ಸುತ್ತಲೂ ಅನುರುದ್ಧ, ವಾಚ್ಛ, ಶಾರ್ಙರವ, ಸಾರಿಪುತ್ತ, ಬಾಗುರಾಯಣ ಮೊದಲಾದ ಶಿಷ್ಯರು ಮ್ಲಾನವದನರಾಗಿ ಶೋಕ ಭಕ್ತಿಗಳಿಂದ ಗದ್ಗದವಾದ ಕಂಠ ಗಳಿಂದ 'ಓಂ ಮಣಿ ಪದ್ಮೇ ಹೂಂ' ಎಂದು ಮಂತ್ರೋಚ್ಚರಿಸುತ್ತಿದ್ದರು. ಮುಮೂರ್ಷುವಿನ ಪಾದಮೂಲದಲ್ಲಿ ಕೌಶಾಂಬಿಯ ರಾಜನಾದ ಶಾಂತವರ್ಮನೇ ಕೈಜೋಡಿಸಿ, ದುಃಖವಿಹ್ವಲನಾಗಿ ಕಣ್ಣೀರುದುಂಬಿ ಕುಳಿತಿದ್ದನು. ನೆರೆಹೊರೆಯ ವಿಹಾರಗಳ ಭಿಕ್ಕುಗಳೂ, ಕ್ಷಪಣಕರೂ, ನಗರಶ್ರೇಷ್ಠಿಗಳೂ, ಅನೇಕ ಪುರವಾಸಿಗಳೂ ತಮಗೆ ಪಿತೃಸಮಾನನಾದ ಈ ಬೌದ್ಧ ಭಿಕ್ಕುವಿನ ಅಂತಿಮ ದರ್ಶನವನ್ನು ಪಡೆದು ಬೀಳ್ಕೊಡುವುದಕ್ಕಾಗಿ ನೆರೆದಿದ್ದರು. ಪರರಾಯರ ರಾಯಭಾರಿಗಳಾದ ಶ್ಯಾಮ ದೇಶದ* ವಿಪುಲ ಸಂಗ್ರಾಮ, ಯವದೇಶದ* ಶಸ್ತ್ರ ಅವಿಜಯ, ಮಲಯಪತಿ ಮಲಯಷೇಣನ ತಮ್ಮ ರಾಜಮುದ್ರ, ಸಿಂಹಳದ ರಾಜಪುತ್ರ ಅಭಯ ವಿಕ್ರಮ ಮತ್ತು ಭಿಕ್ಕು ಶ್ರೇಷ್ಠನಾದ ಅಮರರಾಹುಳ, ಗಾಂಧಾರದ* ಯವನನಾದ* ಶಿಲಾಕ್ಷ, ಕುಃಸ್ತ ನದ* ಹೂಣ ವಣಿಕ್ ಶ್ರೇಷ್ಠನಾದ ದೀರ್ಘಶ್ಮಶ್ರು, ಭಿಕ್ಷುಣಿಯರ ವಿಹಾರದ ಅಧ್ಯಕ್ಷೆ ಅಪರಾಜಿತೆ, ಮೊದಲಾದ ಪ್ರತಿಷ್ಠಿತರೂ ತಲೆವಾಗಿ ನೀರವವಾಗಿ ಕುಳಿತಿದ್ದರು.

ಈ ತೆರನ ಮರಣ ಮರಣವಲ್ಲ. ಇದು ಮಹೋತ್ಸವ. ಇಂತಹ ಮೃತ್ಯುವು ಜೀವನ ನಾಟಕದ ಮಂಗಳ. ಆಯುಸ್ಸು ತುಂಬಿ ಸಾಯುವುದರಲ್ಲಿ ಏನೂ ವಿಶೇಷ ವಿಲ್ಲ. ನರಕೀಟಗಳೂ ಕ್ರಿಮಿಕೀಟಗಳೂ ಹೀಗೆಯೇ ಸಾಯುವುವು. ಆದರೆ ಶ್ರೇಯಸ್ಸು ತುಂಬಿ ಅನಂತರ ಸಾಯುವುದು ವಿರಳ. ಕೀರ್ತಿಪುಂಜನಾಗಿ, ಸೂರ್ಯನು ಪಶ್ಚಿಮ ದಿಗಂತದಲ್ಲಿ ಅಮೋಘ ಕಾಂತಿಯಿಂದ ಶೋಭಿತನಾಗಿ ಕಣ್ಮರೆಯಾಗುವಂತೆ ಕಣ್ಮರೆ ಯಾಗುವುದು ಎಲ್ಲರ ಭಾಗ್ಯವಲ್ಲ. ಇದು ಪೂಜ್ಯನಾದ ಸರ್ವಾರ್ಥಸಿದ್ಧಿಗೆ ಲಭಿಸಿ ದ್ದಿತು. ಸಹಸ್ರಾರು ಜನರಿಂದ 'ತಂದೆ' ಎಂದೆನಿಸಿಕೊಂಡು, ಸ್ತುತ್ಯನಾಗಿ, ಪ್ರಾತಃ ಸ್ಮರಣೀಯನಾಗಿ, 'ತ್ರಿಪಿಟಕಾಚಾರ್ಯ' 'ಅಹಿಂಸಾಧರ್ಮ ಪ್ರದೀಪ' ಎಂದು

---

* ಶ್ಯಾಮ= ಸಯಾಮ; ಯವ= ಜಾವ; ಗಾಂಧಾರ= ಕಂದಹಾರ್; ಕುಃಸ್ತನ= ಖೋಟಾನ್; ಯವನ= ಗ್ರೀಕ್.

ಖ್ಯಾತಿ ಪಡೆದು, ರಾಜರಾಜರುಗಳಿಂದಲೂ, ಜನಸ್ತೋಮದಿಂದಲೂ ವಂದಿತನಾಗಿ, ನಗರದಲ್ಲೆಲ್ಲ ತನ್ನ ವರ್ಚಸ್ಸನ್ನೂ ಸಾತ್ವಿಕ ಅಧಿಕಾರವನ್ನೂ ಸ್ಥಾಪಿಸುವುದು ಎಲ್ಲ ಭಿಕ್ಕುಗಳಿಂದ, ಕ್ಷಪಣಕರಿಂದ, ಸನ್ಯಾಸಿಗಳಿಂದ ಆಗುವ ಮಾತೆ ? ಚಿಕ್ಕ ಪ್ರಾಯದವನಾದ ರಾಜಾ ಶಾಂತವರ್ಮನಿಗೆ ತಾನು ಗುರುವಾಗಿದ್ದುದು ಮಾತ್ರವಲ್ಲ, ತಂದೆಯಂತೆ ಆತನನ್ನು ನೋಡಿಕೊಂಡು, ರಾಜ್ಯಭಾರದ ಸೂತ್ರಗಳನ್ನೂ ತನ್ನ ಕೈಯಲ್ಲಿ ಇಟ್ಟುಕೊಂಡು, ಹುಡುಗನಾದ ರಾಜನಿಗೆ ಶಾಸನದ ಅನುಭವವನ್ನು ಕೊಟ್ಟು, ಜನರಿಗೆ ಶಾಂತಿ, ಸುಭಿಕ್ಷೆ, ನ್ಯಾಯಗಳ ಅಮೂಲ್ಯ ವರಗಳನ್ನು ಕೊಟ್ಟು ಪಾಲಿಸಿದವನು ಸರ್ವಾರ್ಥಸಿದ್ಧಿ.

ಈ ಪುಣ್ಯ ಪುರುಷನ ಅಹಿಂಸಾಧರ್ಮ ನಿಷ್ಠೆಯು ಅಸದೃಶವಾದುದು. ಇವನ ಸಾತ್ವಿಕ ವರ್ಚಸ್ಸಿನಿಂದ ಇಡಿಯ ಕೌಶಾಂಬಿಯಲ್ಲೇ ಹಿಂಸೆ, ಪಾಶವೀಯತೆ, ಕ್ರೌರ್ಯ ನರಬಲಿ, ಪಶುಬಲಿಗಳಿಗೆ ಉಳಿಗಾಲವಿರದೆ, ಹೇಳ ಹೆಸರಿಲ್ಲದಂತಾಗಿತ್ತು-ಅವುಗಳು ಉಳಿದಿದ್ದರೆ, ಗೌಪ್ಯವಾಗಿ, ರಹಸ್ಯದ, ಕತ್ತಲಿನ ಸೆರಗಿನೊಳಗೆ-ಬಹಿರಂಗವಾಗಿಯಲ್ಲ. ಈ ನಾಗರಿಕರ ಪ್ರಾಣಿದಯೆಯನ್ನು ಕಂಡೊಬ್ಬ ಚೀಣಾ ದೇಶದ ಯಾತ್ರಿಕನು ಹೀಗೆ ತನ್ನ ಪುಸ್ತಕದಲ್ಲಿ ಉಲ್ಲೇಖಿಸಿದ್ದನು. : 'ಕೌಶಾಂಬಿ ಪಟ್ಟಣದ ಜನರು ಪ್ರಾಣಿ ಪಕ್ಷಿಗಳನ್ನು ಸರ್ವಥಾ ಹಿಂಸಿಸುವುದಿಲ್ಲ. ನಗರದ ವೀಥಿಗಳಲ್ಲೂ, ಕೇರಿಗಳಲ್ಲೂ ಎಲ್ಲೆಲ್ಲೂ ವಿಧ ವಿಧದ ಪಕ್ಷಿಗಳು ಸ್ವಚ್ಛಂದವಾಗಿ ಹಾರುತ್ತಿವೆ. ಅವಕ್ಕೆ ಮನುಷ್ಯರ ಭಯವೇ ಇಲ್ಲ. ಅದರ ಬದಲು ಸಲುಗೆ, ಚೆಲ್ಲಾಟ ! ಎಷ್ಟೋ ಬಾರಿ ಜನರಿಗೆ ಕೀಟಲೆಗೊಟ್ಟು ತುಂಟತನ ಮಾಡುವುದೂ ಇದೆ. ಆದರೆ ಜನರು ಇವೆಲ್ಲವನ್ನೂ ಅತಿ ದಯೆಯಿಂದ ಪ್ರೇಮದಿಂದ ಕಾಣುತ್ತಾರೆ. ಆ ಕೊಬ್ಬಿದ ಪಾರಿವಾಳಗಳನ್ನು ಕಂಡು ನನಗೆ ಬಾಯಲ್ಲಿ ನೀರೂರಿತು......ಈ ವಿಚಿತ್ರ ಪ್ರಾಣಿದಯೆಗೆ ಕಾರಣನು ಸಬ್ಬತ್ತಸಿದ್ಧಿ ಎಂಬೊಬ್ಬ ಸನ್ಯಾಸಿಯು. ಈತನ ಮಾತನ್ನು ಈ ಊರಲ್ಲಿ ಯಾರೂ ಒಂದಕ್ಷರಕ್ಕೂ ಮೀರುವುದಿಲ್ಲ. ಈತನು ಎಳೆದ ಗೆರೆಯನ್ನು ಯಾರೂ ಉಲ್ಲಂಘಿಸುವುದಿಲ್ಲ. ಇದೊಂದು ವಿಚಿತ್ರ, ಏಕೆಂದರೆ ಈತನು ಬರಿಯ ಭಿಕ್ಷು. ಈತನು ಮಾಂಸಾಹಾರವನ್ನು ಪೂರ್ಣ ವರ್ಜಿಸಿದ್ದಾನೆ ಮಾತ್ರವಲ್ಲ, ವಿಷಸರ್ಪಗಳನ್ನೂ ವೃಶ್ಚಿಕಗಳನ್ನೂ ಹೊಡೆಯಬಾರದೆಂದೂ ಕೊಲ್ಲಬಾರದೆಂದೂ ನಿಯಮಿಸಿದ್ದಾನೆ. ಆದುದರಿಂದ ಇಲ್ಲಿಯ ಜನರು ಈ ದುಷ್ಟ ಪ್ರಾಣಿಗಳನ್ನು ಬಲೆಗಳಲ್ಲಿ ಹಿಡಿದು ಕಾಡಿಗೆ ಕೊಂಡು ಹೋಗಿ ಬಿಡುತ್ತಾರೆ. ಇದು ಶುದ್ಧ ಮೂಢತನ ಎಂದು ನನ್ನ ಅಭಿಮತ. ಈ ನಗರದ ಜನರು ಚೀಣದೇಶದ ಜನರಷ್ಟು ವಿವೇಕಿಗಳಲ್ಲವೆಂದು ಇದರಿಂದ ಸಿದ್ಧವಾಗುತ್ತದೆ.'

ಇದಲ್ಲದೆ ಚೆಂಗಲ್ವರಾಯನೆಂಬ ದಕ್ಷಿಣ ದೇಶದೊಬ್ಬ ಕವಿಯು ಉತ್ತರಾಪಥದ ನಗರಗಳನ್ನು ಸಂದರ್ಶಿಸಿ ಹೀಗೆ ಮುತ್ತಿನಂಥ ಮಾತುಗಳನ್ನು ಬರೆದಿದ್ದಾನೆ. 'ಬಯಿ

ಲಾಡಂಬರಕ್ಕೇನೋ ಪಾಟಲೀಪುತ್ರ ದೊಡ್ಡದು. ಬಹಿರಂಗದ ವೈಭವಕ್ಕೆ, ಶೋಭೆಗೆ ಇದೊಂದು ಅಮರಾವತಿಯೇ ಸರಿ. ಆದರೆ ಪಾಟಲೀಪುತ್ರದಲ್ಲಿ ಪಟ್ಟಣಸೆಟ್ಟಿಯಾಗಿರುವುದಕ್ಕಿಂತ ಕೌಶಾಂಬಿಯಲ್ಲಿ ಒಕ್ಕಲಿಗನಾಗಿರುವುದೇ ಲೇಸು. ಇಲ್ಲಿ ನೆಲೆಸಿರುವ ಸುಭಿಕ್ಷೆ ಸಮೃದ್ಧಿ ಸರ್ವಾಭ್ಯುದಯ, ನಾನೆಲ್ಲಿಯೂ ಕಂಡಿಲ್ಲ. ಗರಡಿಮನೆಯ ಕ್ಷತ್ರಿಯನಾಗಲಿ, ಎಲೆಮನೆಯ ಬ್ರಾಹ್ಮಣನಾಗಲಿ, ಗೊಂಡಾರಣ್ಯದ ಕಿರಾತನೇ ಆಗಲಿ, ಈ ದೇಶದಲ್ಲಿ ತಮ್ಮ ಕುಲಸಹಜವಾದ ಧರ್ಮವನ್ನು ಅನುಸರಿಸಿ, ಸುಖನಾಗಿ ಸಂಪನ್ನರಾಗಿ ಇರುವರು. ಭಿಕ್ಕುಗಳು ಅನೇಕರಿರುವ ಈ ಊರಲ್ಲಿ ಭಿಕ್ಷುಕನೊಬ್ಬನನ್ನೂ ನಾನು ಕಾಣಲಿಲ್ಲ. ರಾಜಗುರುವಾದ ಸರ್ವಾರ್ಥಸಿದ್ಧಿಯಿಂದ ಈ ದೇಶಕ್ಕೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಲ್ಲವೂ ಸಿದ್ಧಿಸಿವೆ. ಎಂತಹ ಕಾಡುದಾರಿಯಲ್ಲಿಯೇ ಇರಲಿ, ಜಕ್ಕಜವ್ವನಗಿತ್ತಿಯಾದ ಮುಗುದೆಯಾಗಲಿ, ಜರ್ಜರಿಾದ ಹಣ್ಣುಮುದುಕಿಯಾಗಲಿ, ತನ್ನ ಮಾನಧನವನ್ನಾಗಲಿ ಇಲ್ಲವೆ ನಾಣ್ಯ ತುಂಬಿದ ಕೊಡವನ್ನಾಗಲಿ, ನಿರ್ಭಯವಾಗಿ ಏಕಾಕಿನಿಯಾಗಿ ಒಯ್ದು ನಡೆಯಬಹುದು ಎಂದು ಈ ಊರಲ್ಲಿ ಪ್ರತೀತಿ ಇದೆ. ಬೇರಾವ ಊರಲ್ಲಿ ಇಂಥ ರಾಮರಾಜ್ಯವಿರಬಹುದು !'

ಇಂಥ ಅಸಮಾನವಾದ ಸುಧರ್ಮ ಸುಭಿಕ್ಷೆಗಳಿಗೆ ಕಾರಣಭೂತನಾದ ಸನ್ಯಾಸಿ ಸಾಮಾನ್ಯ ಭಿಕ್ಕುವಲ್ಲ. ಗಂಭೀರವಾದ ಮೂರ್ತಿ, ಉನ್ನತವಾದ ಶರೀರ ; ವಿಶಾಲವಾದ ವಕ್ಷ, ಆಜಾನುಬಾಹು ; ತೇಜಃಪುಂಜವಾದ ಮುಖ ಮುದ್ರೆ. ಈತನ ಚರಿತ್ರೆಯೂ ಸಾಮಾನ್ಯವಲ್ಲ. ಈತನು ಉಜ್ಜಯಿನಿಯ ರಾಜಮನೆತನಕ್ಕೆ ಸೇರಿದ ಶ್ರೇಷ್ಠ ಕ್ಷತ್ರಿಯ ವಂಶದವನು. ಸನ್ಯಾಸ ಪೂರ್ವದಲ್ಲಿ ಈತನ ಹೆಸರು 'ಪ್ರಚಂಡಬಾಹು' ಎಂದಿದ್ದಿತ್ತು. ಗೃಹಸ್ಥ ಜೀವನದ ಕಾಲದಲ್ಲಿ ಈತ ಉಜ್ಜಯಿನಿಯ ಅರಸನ ದಳಪತಿಗಳಲ್ಲೊಬ್ಬನಾಗಿದ್ದನು. ಆನೆಯಂತಹ ಬಲ, ಸಿಂಹದಂತಹ ಪರಾಕ್ರಮವುಳ್ಳವನೆಂದೂ, ಚತುರೋಪಾಯಗಳಲ್ಲಿ ಚಾಣಕ್ಯ ಸಮನೆಂದೂ ಈತನಿಗೆ ಹೆಸರಾಗಿದ್ದಿತ್ತು. ತನ್ನ ರಾಜನ ಆಣತಿಯ ಮೇರೆಗೆ ಕಾಮರೂಪ * ದೇಶದ ಮೇಲೆ ದಂಡಯಾತ್ರೆ ನಡೆಸಿ ಕಾಮರೂಪಾಧಿಪತಿಯಿಂದ ಕಪ್ಪವನ್ನು ಸೆಳೆದಾತನು ಇವನೇ. ಈ ಭುಜಬಲಿಯಾದ ವೀರನು ತನಗೆ ಯಶಸ್ಕರವಾದ ಯೋದ್ಧೃವೃತ್ತಿಯನ್ನು ತ್ಯಜಿಸಿ, ರಾಜನ ಅನುನಯ ವಿನಯಗಳನ್ನೂ ಪರಿಗಣಿಸದೆ, ಸನ್ಯಾಸಿಯಾಗಿ ಬೌದ್ಧ ದೀಕ್ಷೆಯನ್ನು ಸ್ವೀಕರಿಸಿದುದು ಆಶ್ಚರ್ಯವೇ. ಮಕುಟವನ್ನು ಹೊರುವ ಯೋಗ್ಯತೆಯುಳ್ಳಾತನು ಶಿರಸ್ಸನ್ನು ಮುಂಡನಮಾಡಿಸಿ, ಅರಿಭಯಂಕರವಾದ ಖಡ್ಗವನ್ನು ತೊರೆದು, ಭಿಕ್ಷಾಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡುದು ಅತಿ ವಿಲಕ್ಷಣವೇ

* ಕಾಮರೂಪ= ಇಂದಿನ ಅಸ್ಸಾಮ.

೫೦. ಧರ್ಮದ ತೇಜದ ಎದುರು ರಜೋಬಲವೂ ಶರಣಾಯಿತು. ಈತನ ಸಿಂಹ ಹೃದಯವೂ ಬುದ್ಧ ಸಂದೇಶದ ಅಮೃತದಿಂದ ಸೇಚಿತವಾಯಿತು. ಶತ್ರುಭಯಂಕರ ನಾಗಿದ್ದ ಪ್ರಚಂಡಬಾಹು ದೀಕ್ಷಾಬದ್ಧನಾಗಿ, ಧರ್ಮಕಿಂಕರನಾಗಿ, ಸರ್ವಾರ್ಥ ಸಿದ್ಧಿಯಾದನು.

ಈತನಿಗೆ ದೀಕ್ಷೆಕೊಟ್ಟ ಗುರುವೂ ಸಾಮಾನ್ಯನಲ್ಲ ; ಚರಿತ್ರ ಪುರುಷನೇ ಆದ ಸುಬದ್ಧನೆಂಬ ಭಿಕ್ಕು. ಶಾಕ್ಯ ಮುನಿಯ * ಕೊನೆಯ ಶಿಷ್ಯನಿವ. ಚುಂಡನಿತ್ತ ಭೋಜನವನ್ನು ಸ್ವೀಕರಿಸಿ, ತಥಾಗತನು ಹಠಾತ್ ವ್ಯಾಧಿಗ್ರಸ್ತನಾದನಷ್ಟೆ. ಮಹಾ ಪರಿನಿರ್ವಾಣ ಮಹೋತ್ಸವ ಕಾಲ ಸನ್ನಿಹಿತವಾಗಿದೆ ಎಂದು ತಿಳಿದ ಭಗವಂತನು ಕುಶಿನಾರದ ಶಾಲವನದಲ್ಲಿ ಶಿಷ್ಯರೊಡಗೂಡಿ ಒರಗಿದ್ದನು. ಆಗ ಭೂಯಾಟನೆ ಮಾಡುತ್ತಿದ್ದ ಸುಬದ್ಧನೆಂಬೊಬ್ಬ ಉದಾಸೀನನು† ಕರ್ಮಧರ್ಮಸಂಯೋಗ ದಿಂದ ಅಲ್ಲಿಗೆ ಬಂದು, ತಥಾಗತನಿಂದ ಕೊನೆಯ ಉಪದೇಶವನ್ನು ಪಡೆದು ಪುಲಕಿತ ನಾಗಿ, ಪುನೀತನಾಗಿ, ಭಗವಂತನ ಅಂತಿಮ ಶಿಷ್ಯನಾದನು. ಈ ಚರಮ ಶಿಷ್ಯ ನಿಂದ ದೀಕ್ಷೆ ಪಡೆದವನೇ ಸರ್ವಾರ್ಥಸಿದ್ಧಿ. ಬೋಧಿವೃಕ್ಷದಡಿಯಲ್ಲಿ ಉದ್ಭೂತ ವಾದ ಜ್ಯೋತಿಯ ಕಿಡಿಯೇ ಸರ್ವಾರ್ಥಸಿದ್ಧಿಯ ಹೃದಯವನ್ನು ಪ್ರಜ್ವಲಿತವಾಗಿ ಸಿತು

ಈತನ ಕೀರ್ತಿ ಪ್ರಭೆ ಆರ್ಯಾವರ್ತದೊಳಗೆ ಮಾತ್ರವಲ್ಲ, ದೇಶಾಂತರಗಳೊ ಳಗೂ ವ್ಯಾಪಿಸಿತ್ತು. ಕೀರ್ತಿ ಜ್ಯೋತಿಯನ್ನು ಪೆಟ್ಟಿಗೆಯೊಳಗೆ ಮುಚ್ಚಿಡಲಾಗುತ್ತ ದೆಯೇ ? ಈ ವಿಭೂತಿ ಪುರುಷನ ಸಾತ್ವಿಕ ತೇಜ ಮತ್ತು ಧರ್ಮನಿಷ್ಠೆಯ ಸೌರಭ ಗಳಿಂದ ಆಕರ್ಷಿತರಾಗಿ ಹೊರ ದೇಶದ ರಾಯರುಗಳೂ ಭಿಕ್ಕುಗಳೂ ಕೌಶಾಂಬಿಗೆ ತೀರ್ಥಯಾತ್ರೆಗೆಂಬಂತೆ ಬಂದು ಹೋಗುತ್ತಿದ್ದರು. ಕಾಂಭೋಜಾಧಿಪ ನರೋತ್ತಮ ಸಿಂಹವರ್ಮನೂ ಸುವರ್ಣಕ್ಷೇತ್ರದಿಂದ§ ಸುವರ್ಣಭೌಮನೂ, ಸಿಂಹಳ ದೇಶದ ವಿಜಯತುಂಗನೂ, ಬಂದು ಈ ಪುಣ್ಯಪುರುಷನನ್ನು ಕಂಡು ಉಪದೇಶವನ್ನು ಪಡೆದು ಧನ್ಯರಾದರು. ಶ್ಯಾಮದೇಶಾಧಿಪತಿ ಆನಂದ ಅತುಲದತ್ತನು ಆಗ ಸ್ವದೇಶ ರಕ್ಷಣೆ ಗೋಸ್ಕರ ಚೀಣಪತಿಯ ಅಪರಿಮಿತವಾದ ಪ್ರಚಂಡ ಸೇನೆಗೆದುರಾಗಿ ಹೋರಾಡುತ್ತಿ ದ್ದುದರಿಂದ, ತನಗೇ ಸ್ವತಃ ಬರಲಾಗದಿದ್ದರೂ ತನ್ನ ಪರವಾಗಿ ಸಚಿವನಾದ ಖರ್ವ ಕುಂಜರನನ್ನು ಅನರ್ಘ್ಯವಾದ ಕಾಣಿಕೆಗಳೊಡನೆ ಕಳುಹಿಸಿದ್ದನು.

* * * *

---

* ತಥಾಗತ ಭಗವಾನ್ ಬುದ್ಧ, ಶಾಕ್ಯಮುನಿ.

† ಸನ್ಯಾಸಿ.

§ ಸುವರ್ಣಕ್ಷೇತ್ರ= ಹಿಂದೂ- ಚೀಣ.

ಕೌಶಾಂಬಿಯ ಸ್ಥಿತಿ ಎಲ್ಲ ಕಾಲದಲ್ಲೂ ಇಷ್ಟೇ ಉಚ್ಛ್ರಾಯವಾಗಿತ್ತೆಂದು ತಿಳಿಯಲಾಗದು. ಒಂದು ಕಾಲಕ್ಕೆ ಇದೇ ಕೌಶಾಂಬಿಯ ಭಾಗ್ಯ ಕೆಟ್ಟು ಅಧರ್ಮ ತುಂಬಿ ಇದು ಅತಿ ಹೇಯ ಸ್ಥಿತಿಯಲ್ಲಿ ಇದ್ದುದುಂಟು. ರಸ ವಿರಸವಾಗಿ, ಧರ್ಮಕ್ಕೆ ಗ್ಲಾನಿಬಂದು ಪ್ರಜೆಗಳಲ್ಲಿ ಕ್ಷೋಭೆಯೂ ಅಶಾಂತಿಯೂ ಉಂಟಾಗಿ ಪುರಲಕ್ಷ್ಮಿ ಮುಖ ಮುಚ್ಚಿಕೊಂಡು ಮೊರೆಯಿಟ್ಟು ಅಳುತ್ತಿದ್ದ ಕಾಲವೂ ಇತ್ತು. ಹಿಂದಿನ ರಾಜನಾದ ಶೋಣಿತಕೇತುವು ಅತ್ಯಾಚಾರಿಯೂ ನಿರಂಕುಶನೂ ಅನೀತಿಪರನೂ ಆಗಿದ್ದುದು ಮಾತ್ರವಲ್ಲದೆ, ಹೂಣ, ತಿಬ್ಬತ * ದೇಶಗಳ ತಾಂತ್ರಿಕ ಕಾಪಾಲಿಕರ ಧರ್ಮಗಳಲ್ಲಿ ಮನಸ್ಸುಳ್ಳವನಾಗಿ ಸದ್ಧರ್ಮ ಘಾತಕನಾಗಿದ್ದುದರಿಂದ ಬುದ್ಧಧರ್ಮ ಕುಂಠಿತವಾಗಿ, ಕ್ಷೀಣವಾಗಿ, ಇಂದೋ ನಾಳೆಯೋ ಎಂಬಂತೆ ಇದ್ದುದೂ ಉಂಟು.

ಬಾಲರಾಜ ಶಾಂತವರ್ಮನ ಪಿತಾಮಹನಾದ ಉಗ್ರಸೇನನು ಬೌದ್ಧಧರ್ಮವನ್ನವಲಂಬಿಸಿ ಧಮ್ಮಮಿತ್ರನೆಂಬ ಹೆಸರನ್ನಿಟ್ಟುಕೊಂಡು ಚಿರಕಾಲ ರಾಜ್ಯವನ್ನಾಳಿದ್ದನು. ಧಮ್ಮಮಿತ್ರನೆಂಬ ಹೆಸರು ಅನ್ವರ್ಥವೇ ಆಯಿತು. ದೇಶಕ್ಕೆ ಕ್ಷೇಮ, ಧರ್ಮಕ್ಕೆ ಅಭ್ಯುದಯಗಳುಂಟಾದುವು. ವಿಹಾರಗಳು, ಸಂಘಗಳು, ವಿದ್ಯಾಲಯಗಳು ರಂಜಿಸಿದುವು. ಆದರೆ ಧಮ್ಮಮಿತ್ರನ ಅನಂತರ, ಮನುಷ್ಯಸ್ತ್ರೀಯ ಹೊಟ್ಟೆಯಲ್ಲಿ ಕಾಳಸರ್ಪ ಜನಿಸಿದಂತೆ, ಶೋಣಿತಕೇತುವು ರಾಜನಾದನು. ಅವನು ರುದ್ರದಮನನೆಂಬ ಹೆಸರನ್ನಿಟ್ಟುಕೊಂಡು ಪಟ್ಟವೇರಿದನು. ಈ ಹೆಸರೂ ಅನ್ವರ್ಥವೇ ಆಯಿತು. ತಂದೆ ಜೀವಿಸಿರುವಾಗಲೂ ಈತನ ನೀಚ ಪ್ರವೃತ್ತಿಗಳಿಂದ, ದಸ್ಯುಧರ್ಮಗಳ ಮೇಲಿನ ಈತನ ಆಸಕ್ತಿಯಿಂದ, ತಂದೆಗೂ ಮಗನಿಗೂ ವೈಮನಸ್ಯವೇ ಇದ್ದಿತ್ತು. ತಂದೆ ಸತ್ತು ತಾನು ಅರಸಾದ ಮೇಲಂತೂ, ಸರಿ ! ಮುಚ್ಚಿಟ್ಟ ಬೆಂಕಿಗೆ ಸ್ವಚ್ಛಂದವಾದ ಗಾಳಿ ತಗಲಿ ಕಾಳ್ಗಿಚ್ಚಾಗಿ ಪರಿಣಮಿಸಿದಂತಾಯಿತು.

ಸರಿ, ಧರ್ಮಕ್ಕೆ ಉಳಿಗಾಲವಿಲ್ಲವೆಂಬಂತಾಯಿತು. ರುದ್ರದಮನನ ಅಚ್ಚುಮೆಚ್ಚಿನ ಮಿತ್ರರಾದ ಕೆಲಮಂದಿ ಹೂಣ ರಾಜಪುತ್ರರೂ ತಿಬ್ಬತದ ದುಷ್ಟಾಚಾರಿಗಳಾದ ಕಾಪಾಲಿಕ ತಾಂತ್ರಿಕರೂ ಸೇರಿಕೊಂಡು ಬೋಧಿಸಿದುದರಿಂದ ರಾಜ್ಯದಲ್ಲಿ ಪಶುಬಲಿ, ನರಬಲಿಗಳಿಗೆ ಮೊದಲಾಯಿತು. ಕ್ರೂರ ಮೃಗದ ಸಂಗಡವೇ ಅನುವರ್ತಿಗಳಾಗಿ ನರಿಗಳೂ ರಣಹದ್ದುಗಳೂ ಇರುವಂತೆ, ದುರ್ಮಾರ್ಗರ ಜಾತ್ರೆಯೇ ಸೇರಿತು. ಇವರ ಪ್ರೇರಣೆಯಿಂದ ರುದ್ರದಮನನ ಆಮೋದ-ಪ್ರಮೋದಗಳೇನು ಗೊತ್ತೆ ? ಹೂಣರಾಜ ಮಿಹಿರಗುಳನನ್ನೇ ಅನುಕರಿಸಿ, ಆನೆಗಳನ್ನು ಕೈಕಾಲು ಕಟ್ಟಿ, ಉನ್ನತವಾದ ಗಿರಿಗಳಿಂದ ಕೆಳನೂಕಿ ಅವುಗಳು ಉರುಳುತ್ತಾ ಘೀಳಿಡುತ್ತಾ ಪಡುವ ಅವರ್ಣನೀಯವಾದ ಸಂಕಟವನ್ನು ನೋಡಿದರೆ ಈ ಪಾಖಂಡಿಗಳಿಗೆ ಕಣ್ಣಿಗೆ ಹಬ್ಬ

---

* ಟಿಬೇಟು.

ವಾಗುತ್ತಿತ್ತು. ರಾಜನು ಮಹೋಲ್ಲಾಸದಿಂದ ಚಿತ್ರಹಿಂಸೆ, ಆನೆಯ ಕಾಲಿಗೆ ಕಟ್ಟಿಸಿ ಕೊಲ್ಲುವುದು, ಕಾಡುಕುದುರೆಗಳಿಗೆ ಕಟ್ಟಿಸಿ ಜೀವಜ್ಜೀವ ಸೀಳಿಸುವುದು, ಚರ್ಮ ಸುಲಿಯುವುದು, ಕಣ್ಣು ಕೀಳಿಸುವುದು ಇತ್ಯಾದಿ ಭಯಾನಕ ಕೃತ್ಯಗಳನ್ನೇ ಉತ್ಸವವೆಂದು ಪರಿಗಣಿಸುತ್ತಿದ್ದನೋ ಏನೋ ! ಬುದ್ಧವಿಚಾರಗಳಿಗೆ ಧರ್ಮಭೀರು ವಾದ ಧಮ್ಮಮಿತ್ರನು ಉಂಬಳಿಬಿಟ್ಟ ಆಸ್ತಿಪಾಸ್ತಿಗಳನ್ನೆಲ್ಲ ಸೂರೆಮಾಡಿದನು. ವಿದ್ಯಾಲಯಗಳು ಕುದುರೆಗಳ ಲಾಯಗಳಾದುವು. ಗೋಶಾಲೆ, ಪಶುಚಿಕಿತ್ಸಾ ಲಯ, ವೈದ್ಯಾಲಯಗಳನ್ನು ಕೇಳುವವರಿಲ್ಲದಂತಾಯಿತು.

ವಿಹಾರಗಳೆಷ್ಟೋ ನೆಲಸಮವಾದುವು. ಆದರೆ ಸರ್ವಾಥ ಸಿದ್ಧಿಯು ಅತಿ ಪ್ರತಿಷ್ಠಿತನು. ಅದಲ್ಲದೆ, ಆತನು ಬಲಿಷ್ಠನಾದ ಉಜ್ಜಯಿನಿಯ ರಾಜನ ಹಳೆಯ ಮಿತ್ರನು ಮತ್ತು ಜ್ಞಾತಿಯು ಸಹ. ಮಾತ್ರವಲ್ಲದೆ ಆತನ ಕುಲದವರಾದ ಉಜ್ಜಯಿ ನಿಯ ಸಾಳುಂಕ್ಯ ಕ್ಷತ್ರಿಯರು ಪ್ರಬಲರಾಗಿದ್ದರು. ಇವೆಲ್ಲವನ್ನು ಕಂಡು ಸರ್ವಾರ್ಥ ಸಿದ್ಧಿಯ ವಿಹಾರದ ಗೋಜಿಗೆ ಹೋಗಲು ಮಾತ್ರ ಆಳುವ ದುರ್ಮಾರ್ಗರಿಗೆ ಧೈರ್ಯ ಬರಲಿಲ್ಲ. 'ಬೂದಿ ಮುಚ್ಚಿದ ಕೆಂಡವನ್ನು ಕೆದಕಿ ಕೈಸುಡಿಸಿಕೊಳ್ಳಲೇಕೆ ?' ಎಂಬ ಜಾಗರೂಕತೆ. ಅವಿವೇಕಿಗಳಾದ 'ವಿಪರೀತ ಬುದ್ಧಿಯ' ಪಾಪಿಗಳಿಗೂ ಕೆಲವು ವಿಷಯಗಳಲ್ಲಿ ವಿವೇಕ ಇದ್ದೇ ಇರುತ್ತದೆ.

ಅರಸು ಬರಿಯ ಧರ್ಮಲಂಡನೇ ಆಗಿದ್ದರೆ ಅಷ್ಟು ಕ್ಷೋಭೆಯಾಗುತ್ತಿರಲಿಲ್ಲ. ಆದರೆ, ಈತನು ಪ್ರಜಾಪೀಡಕನೂ ಅಹುದು. ಯಾವೊಬ್ಬ ಯುವಾಸ್ತ್ರೀಯ ಮಾನ, ಗರತಿಯ ಪಾತಿವ್ರತ್ಯ, ಸೆಟ್ಟಿಯ ಹಣಕಾಸು, ಒಕ್ಕಲಿಗನ ಗೋಧಾನ್ಯ—ಯಾವುದೂ ಈ ಮದಾಂಧನ ಲೋಭ ಲಾಲಸೆಗಳಿಂದ ಉಳಿಯುವುದು ದುಷ್ಕರವಾಯಿತು. ಜನರು ಗೋಳಿಟ್ಟರು. ಬೋಧಿಸತ್ವನಿಗೆ * ಮೊರೆಯಿಟ್ಟರು. ಹಿಂದಕ್ಕೆ ನಂದನ ವನವಾಗಿದ್ದ ಕೌಶಾಂಬಿಯಲ್ಲಿ ಹಾಹಾಕಾರ ಆರ್ತನಾದಗಳು ತುಂಬಿದುವು.

ಇನ್ನು ಕೆಲವರು—ಅಥವಾ ಹಲವರೋ—'ಈ ಹಿರಣ್ಯಕಶಿಪುವಿನ ರಾಜ್ಯದಲ್ಲಿ ಪರಕ್ಕಂತೂ ಸೊನ್ನೆಯಾಯಿತು. ಕೊನೆಗೆ ಇಹವನ್ನಾದರೂ ಉಳಿಸೋಣ' ಎಂಬ ಜಾಣತನದಿಂದ ಈ ನೀಚರನ್ನೇ ಓಲೈಸಿ ತಾಂತ್ರಿಕ, ಕಾಪಾಲಿಕರ ದುಷ್ಟಾಚಾರ ಗಳನ್ನು ಅವಲಂಬಿಸಿ ನರಬಲಿ ವೊದಲಾದ ಹೇಯ ಕರ್ಮಗಳನ್ನು ತಾವು ಉಲ್ಲಾಸ ದಿಂದ ಮಾಡತೊಡಗಿದರು. ಕಟುಕರವರೊಡನೆ ನೆಂಟತನ ಮಾಡಿದರೆ ಗೋಮಾಂಸ ತಿನ್ನದೆ ಇರಲಾಗುತ್ತದೆಯೇ ? ಅಂತೂ ಇಂತೂ ಘೋರವಾದ ಧರ್ಮಗ್ಲಾನಿ

* ತಥಾಗತ ಬುದ್ಧನ ಅವತಾರ.

ಯುಂಟಾಯಿತು. ಸಜ್ಜನರ ಆರ್ತನಾದ ಗಗನಕ್ಕೇರಿತು. ಖೂಳರಿಗೆ, ನೀಚರಿಗೆ, ಹೋಳಿಯ ಹಬ್ಬವಾಯಿತು.

ಒಂದು ದಿನ ಭಿಕ್ಷುಣಿಯರ ವಿಹಾರದ ಅಧ್ಯಕ್ಷೆಯಾದ ಅಪರಾಜಿತೆಯು ಸರ್ವಾರ್ಥಸಿದ್ಧಿಯಲ್ಲಿ ಗೋಳಿಟ್ಟಳು. 'ವಿಹಾರಗಳಲ್ಲಿ ಪಶುಬಲಿಯನ್ನು ಮಾಡಬೇಕೆಂದು ಕಟ್ಟಾಜ್ಞೆಯಂತೆ. ಅವಲೋಕಿತೇಶ್ವರನೇ* ! ಎಷ್ಟೆಂದು ನಾವು ಸಹಿಸಬೇಕು ?' ಎಂದು ಅತ್ತಳಂತೆ. ಬುದ್ಧಕಿಂಕರನಾದ, ಅಹಿಂಸಾಧರ್ಮದೀಕ್ಷಾಬದ್ಧನಾದ, ವಿನಯಾನುಸಾರಿಯಾದ† ಭಿಕ್ಕು ಏನು ತಾನೆ ಮಾಡಿಯಾನು ? ಹಿಂದಕ್ಕಾಗಿರುತ್ತಿದ್ದರೆ, ತಾನು ಗೃಹಸ್ಥಜೀವನದಲ್ಲಿರುವ ಕಾಲವಾಗಿರುತ್ತಿದ್ದರೆ, ಈ ದುಷ್ಟ ಪ್ರಾಣಿಗಳನ್ನು ನಿಪಾತಗೊಳಿಸುವುದೇನು ಮಹಾ ಕೆಲಸವಾಗಿರುತ್ತಿರಲಿಲ್ಲ. ತನ್ನ ಬಾಹುಬಲ-ಪರಾಕ್ರಮ, ಉಜ್ಜಯಿನಿಯರಸನ ಸಹಾಯ-ಸಹಾನುಭೂತಿ, ಸಾಳುಂಕ್ಯ ಕ್ಷತ್ರಿಯರ ಕೆಚ್ಚೆದೆಗಳಿಂದ ಈ ನೀಚರನ್ನು ನಿರ್ನಾಮ ಮಾಡಬಹುದಿತ್ತು. ಆದರೆ ಈಗಲೋ, ತಾನು ಕೇಸರ ವಸ್ತ್ರ ಧರಿಸಿದ ಭಿಕ್ಕು : ಖಡ್ಗವನ್ನು ವರ್ಜಿಸಿದ್ದಾನೆ; ತಾನೇನು ಮಾಡಬಲ್ಲನು ?

* * * *

ಈ ಭೀಕರ ಕಾಲದಲ್ಲಿ ಒಂದು ದಿನ ಅತ್ಯಾಶ್ಚರ್ಯಕರವಾದ, ಮತ್ತು ಯಾರಿಂದಲೂ ನಂಬಲಸಾಧ್ಯವಾದ ಒಂದು ವಿಚಿತ್ರವಾರ್ತೆ ಊರಲ್ಲಿ ತುಂಬಿ, ಜನ ಅವಾಕ್ಕಾದರು. ಭಿಕ್ಕು ಸರ್ವಾರ್ಥಸಿದ್ಧಿಯು, ಮಹಾರಾಜ ರುದ್ರದಮನನನ್ನು ವಿಹಾರಕ್ಕೆ ಆಹ್ವಾನಿಸಿರುವನಂತೆ ! ಧರ್ಮೋಪದೇಶವನ್ನು ಕೇಳಬೇಕೆಂದು ಆತನ ಆಗ್ರಹವಂತೆ. ಇಲ್ಲವೆ ಧರ್ಮ ವಾಗ್ವಾದವನ್ನು ಮಾಡುವರಂತೆ. ಇದೇನು ಅಸಂಭವನೀಯವಾದ ಪ್ರಸಂಗ ! ಎಲ್ಲಾದರೂ ಉಂಟೇ ? ಇಷ್ಟು ಮಾತ್ರವೇ ? ಆಶ್ಚರ್ಯದ ಮೇಲೆ ಆಶ್ಚರ್ಯ ! ಪಾಪ ಭಾಂಡಾರನಾದ, ಕಲುಷಿತನಾದ, ಆ ರುದ್ರದಮನನು ಈ ಆಹ್ವಾನವನ್ನು ಸ್ವೀಕರಿಸಿರುವನಂತೆ ! ಇದೇನದ್ಭುತ ? ಈ ರಕ್ಕಸನಿಗೆ ಧರ್ಮೋಪದೇಶವೆ ? ಎಲ್ಲರಿಗೂ ಹೇಳಲಾರದಷ್ಟು ಆಶ್ಚರ್ಯವೇ ಹೊರತು ಆಶೆಯ ಚಿಹ್ನವೂ ಇರಲಿಲ್ಲ. 'ಇದರಿಂದ ಏನು ಫಲನಾದೀತು ? ಇದೇನು ಮರುಳು ? ಈ ಮದಾಂಧನು ಬುದ್ಧವಾಣಿಯನ್ನು ಕೇಳಿಯಾನೆ ? ಗೋರ್ಕಲ್ಲ ಮೇಲೆ ಮಳೆ ಸುರಿದರೆ ಏನು ಸಾರ್ಥಕವಾದೀತು ? ಈ ದುರ್ಮಾರ್ಗನ ಪಾಷಾಣ ಹೃದಯದ ಮೇಲೆ ಬುದ್ಧ ಸಂದೇಶದ ಅಮೃತವರ್ಷಗೈಯುವುದು ನಿರರ್ಥಕ. ಈ ಕಾರ್ಕೋಟಕ

---

* ಅಮಿತಾಭ ಮತ್ತು ಅವಲೋಕಿತೇಶ್ವರ ಇವು ಭಗವಾನ್ ಬುದ್ಧನ ಎರಡು ರೂಪಗಳು.

† ವಿನಯ= ಭಿಕ್ಕುಗಳ ನಿಯಮಾವಳಿಯ ಶಾಸ್ತ್ರ.

ನಿಗೆ ಬುದ್ಧಿ ಹೇಳಿ, ಧರ್ಮೋಪದೇಶವನ್ನಿತ್ತು, ಆತನ ವಿಷಭರಿತ ಹೃದಯವನ್ನು ತೊಳೆಯುವುದುಂಟೇ ? ಹಾವಿಗೆ ಹಾಲೆರೆದು ಏನು ಫಲ ? ಇನ್ನು ಈ ದುಷ್ಟನ ಗೋಜಿಗೆ ಹೋಗಿ ಈ ಬಡ ಸನ್ಯಾಸಿಯೇ ಕೈ ಸುಡಿಸಿಕೊಳ್ಳದಿದ್ದರೆ ಸಾಕು. ಆತನ ಜೀವಕ್ಕೇ ಸಂಚಕಾರ ಬಾರದಿದ್ದರೆ ದೊಡ್ಡದು. ಕಂಡೂ ಕಂಡೂ ಹಾವಿನ ಹುತ್ತಕ್ಕೆ ಕೈಹಾಕಿ ಕೆದಕುವುದುಂಟೇ ? ವೈನತೇಯನನ್ನೇ ವಿಗಡಿಸಿದ ವಿಷ ಹಾವಾಡಿಗರಿಗೆ ಸದರವಾಯಿತೆ ? ಇದೇನು ತ್ರಿಪಿಟಕ, ನಿಕಾಯ, ಮಿಳಿಂದಪ್ರಶ್ನಾದಿಗಳನ್ನು ಓದಿ ಅರಗಿಸಿದಂತೆಯೇ ? ಈ ಬೈರಾಗಿಗೆ ಭ್ರಾಂತಿ !' ಎಂದು ಹಲವರೆಂದರು.

ಕೆಲವರು 'ನಮಗೇನು ಗೊತ್ತು, ಈ ಭಿಕ್ಕುವಿನ ಮಹಿಮೆ ? ಆತ ಸಾಮಾನ್ಯ ನಲ್ಲ ! ತಥಾಗತನ ಧರ್ಮವಾಣಿ ಪಾಷಾಣವನ್ನೂ ಭೇದಿಸಲಾರದೇ ? ವಿಷಸರ್ಪವೂ ವೀಣಾಗಾನಕ್ಕೆ ಮರುಳಾಗಿ ತಲೆಯಾಡಿಸಿ ಮಂತ್ರ ಮುಗ್ಧವಾಗುವುದಿಲ್ಲವೇ ? ಸೃಷ್ಟಿ ಯಲ್ಲಿ ಎಷ್ಟು ಚಮತ್ಕಾರಗಳಿಲ್ಲ ! ತಿಳಿಯದೆ ಏನೇನೋ ಹೇಳಬಾರದು. ಔಷಧ ವಿಲ್ಲದ ರೋಗವುಂಟೇ ?' ಎಂದರು.

ಜನರು ಏನೇನೋ ಗುಜು ಗುಜು ಎಂದೆನ್ನುತ್ತಿರುವಂತೆಯೇ ಅಸಂಭವ ನೀಯವಾದುದು ಸಂಭವಿಸಿತು. ಅತಿ ಕಠಿನ ಲೋಹವೇ ಆದರೂ ಅಗ್ನಿಯ ಜ್ವಾಲೆಗೆ ಭಸ್ಮೀಭೂತವಾಗದೇ ? ಸಾತ್ವಿಕ ತೇಜದ ಸಾತ್ವಿಕ ಶಕ್ತಿಯ ಎದುರು ಪಾಪ ಕೋಟಿಗಳು ಸೂರ್ಯನೆದುರಿನ ಅಂಧಕಾರದಂತಲ್ಲವೇ ? ಸತ್ವಬಲಕ್ಕೆ ವಿಜಯವಾ ಯಿತು. ತಥಾಗತನ ಧರ್ಮಪ್ರಭೆ ಅಧರ್ಮತಮಸ್ಸನ್ನು ಉಚ್ಚಾಟನೆಗೊಳಿಸಿತು. ಘೋರ ಪಾಪಿಯೂ, ತಾಮಸಿಯೂ ಆದಾತನ ಮೃಗತೃಷ್ಣೆಯಿಂದ ತುಂಬಿದ ಹೃದ ಯವು ಧರ್ಮಾಗ್ನಿಯಲ್ಲಿ ಜ್ವಲಿತವಾಗಿ ಶುದ್ಧವಾಗಿ ವಿಭೂತಿಯಾಯಿತು. ಧರ್ಮಕ್ಕೆ ವಿಜಯವಾಯಿತು. ಅಧರ್ಮವು ಪರಾಭೂತವಾಯಿತು. ಇದೊಂದು ಪವಾಡವೇ ಸರಿ. ಈ ಪವಾಡ ನಡೆದ ಆ ಕ್ಷಣವು ಕೌಶಾಂಬಿಯ ಇತಿಹಾಸದಲ್ಲಿ ಅನರ್ಘ್ಯವಾ ದುದು—ಚಿರಸ್ಮರಣೀಯವಾದುದು. ಯಾವ ಮುಹೂರ್ತದಲ್ಲಿ ಈ ಅನಿರ್ವಚ ನೀಯವಾದ ಪವಾಡ ನಡೆಯಿತೋ ಆ ಮುಹೂರ್ತಾನಂತರ ಶೋಣಿತ ಕೇತುವಿನ ಮುಖವನ್ನು ಯಾರೂ ಕಾಣಲಿಲ್ಲ. ಜನ್ಮವಿಡೀ ಪಾಪ ಸಂಚಯಿಸಿದ ಈ ಪಾಖಂಡಿಯು ಪಶ್ಚಾತ್ತಾಪದಿಂದ ದಗ್ಧನಾಗಿ ಪ್ರಾಯಶ್ಚಿತ್ತೇಚ್ಛುವಾಗಿ ಸಂಸಾರ ವನ್ನೇ ತ್ಯಜಿಸಿ, ಸನ್ಯಾಸಿಯಾಗಿ ತನ್ನ ಶೇಷಾಯುಷ್ಯವನ್ನಿಡೀ ಅಜ್ಞಾತವಾಸದಲ್ಲಿ ಕಳೆದನು. ಘೋರವಾದ ಆತ್ಮಲಾಂಛನ, ತನ್ನ ಪಾಪಕರ್ಮಗಳ ಸ್ಮರಣೆ, ಆತನ ಜೀವವನ್ನು ಕಚ್ಚಿ ಹಿಂಸಿಸುತ್ತಿರಲು, ತನ್ನಿಂದ ಬಾಧಿತರಾಗಿ, ಪೀಡಿತರಾಗಿ ಅವರ್ಣ ನೀಯವಾದ ಕಷ್ಟಗಳನ್ನು ಅನುಭವಿಸಿದ ಜನರಿಗೆ ಹೇಗೆ ಮೋರೆ ತೋರಿಸಿಯಾನು ? ಪ್ರಾಯಶಃ ಪ್ರಾಯಶ್ಚಿತ್ತಾದಿಗಳನ್ನುಗೈಯುತ್ತಾ ಹಿಮವತ್ಪರ್ವತದ ಜನಶೂನ್ಯ ಶ್ರೇಣಿಗಳಲ್ಲೋ ವಿಜನ ಪ್ರದೇಶಗಳಲ್ಲೋ ಇದ್ದು ಅದೃಶ್ಯನಾಗಿರಬೇಕು. ಅದು

ಹೇಗೆಯೋ ಇರಲಿ. ಪಶ್ಚಾತ್ತಾಪದ ಹೋಮಕುಂಡದಲ್ಲಿ ಆತನ ಪಾಪಸಂಚಯ ಭಸ್ಮವಾದ ಆ ಪುಣ್ಯಕ್ಷಣಾನಂತರ ಆತನನ್ನು ಯಾರೂ ಕಂಡುದಿಲ್ಲ. ಗಂಡಕೀ ತೀರದಲ್ಲಿ ಪ್ರಾಯಶ್ಚಿತ್ತಾರ್ಥವಾಗಿ ಸಾಧನೆಗಳನ್ನು ಮಾಡುತ್ತಿದ್ದನೆಂದೋ, ಮಾನಸ ಸರೋವರದ ತಟದಲ್ಲಿ ತಾಪಸನಾಗಿ ಇರುವನೆಂದೋ, ನರ್ಮದಾ ತೀರದಲ್ಲಿ ಅನುಷ್ಠಾನಗಳನ್ನು ನಡೆಸುತ್ತಿರುವನೆಂದೋ ಚಿತ್ರಕೂಟದಲ್ಲಿ ಮುನಿಯಾಗಿರುವನೆಂದೋ ಜನಜನಿತವಾದ ವದಂತಿಗಳೇನೋ ಇದ್ದುವು. ಕೆಲವರೊಂದಾಡಿದರೆ, ಇತರರು ಬೇರೆಯ ಕಥೆಯನ್ನೇ ಹೇಳುವರು. ಆದರೆ, ಆತನನ್ನು ಕಣ್ಣಾರೆ ಕಂಡವರಿಲ್ಲ.

ಈ ಅದ್ಭುತ ಪವಾಡವಾದ ಅನಂತರ ಕೌಶಾಂಬಿಗೆ ಅಭ್ಯುದಯದ ಕಾಲ ಬಂದಿತು. ಸಂಸಾರ ತ್ಯಾಗದ ಮುನ್ನ ರುದ್ರದಮನನೆಂಬ ಶೋಣಿತಕೇತು ಬೇಡಿಕೊಂಡ ಅಂತಿಮ ಅಪೇಕ್ಷೆಯಂತೆ, ಆತನ ಮಗನಾದ ಆಹವಕೇತುವನ್ನು ಆತನಿಗೆ ಶಾಂತವರ್ಮನೆಂಬ ಹೆಸರನ್ನಿಟ್ಟು ಪಟ್ಟಕ್ಕೇರಿಸಿದರು. ಶಾಂತವರ್ಮನಿನ್ನೂ ಬರಿಯ ಹಸುಳೆಯೂದುದರಿಂದ ಜ್ಞಾನಿಯಾದ ಸರ್ವಾರ್ಥಸಿದ್ಧಿಯೇ ಗತ್ಯಂತರವಿಲ್ಲದೆ ಮಗುವಿನ ರಕ್ಷಕನಾಗಿ ರಾಜ್ಯಭಾರದ ಸೂತ್ರಗಳನ್ನು ತನ್ನ ಕೈಯಲ್ಲಿಟ್ಟುಕೊಳ್ಳಬೇಕಾಯಿತು.

ಈತನ ಶಾಸನ ಕಾಲದಲ್ಲಿ ಕೌಶಾಂಬಿಯು ಉನ್ನತಿಯ ಪರಾಕಾಷ್ಠೆಯನ್ನೇರಿತು. ಶಾಂತವರ್ಮನ ಹೆಸರಿಗೆ ಅನ್ವರ್ಥವಾಗಿ ಶಾಂತಿಸಾಮ್ರಾಜ್ಯ ನೆಲಸಿತು. ಶಾಂತಿಯೊಡನೆ, ಸದ್ಧರ್ಮ, ಸುಭಿಕ್ಷೆ ಸಮೃದ್ಧಿಗಳು ಬಂದು ನೆರೆದವು. ಇವರು ನಾಲ್ವರು ಸಿರಿಗಳೂ ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಅಕ್ಕ ತಂಗಿಯರಲ್ಲವೇ ? ಇದೇ ಕಾಲದಲ್ಲಿ ದಕ್ಷಿಣದೇಶದ ಚೆಂಗಲ್ವರಾಯನು ಬಂದು ಸಂದರ್ಶಿಸಿ ಬಾಯಿತುಂಬಾ ಹೊಗಳಿದುದು, ಚೀಣದ ಯಾತ್ರಿಕನೂ ತನ್ನ ಸ್ವಾರಸ್ಯವಾದ ವರ್ಣನೆಯನ್ನು ಬರೆದುದು.

ಈ ಕಾಲದಲ್ಲಿ ಅನೇಕಾನೇಕ ವಿಹಾರಗಳು, ಬುದ್ಧಾಲಯಗಳು, ತಕ್ಷಶಿಲಾ ನಲಂದಗಳಂತಹ ವಿದ್ಯಾಮಂದಿರಗಳು, ಧರ್ಮಲಿಪಿರಂಜಿತವಾದ ಶಿಲಾಸ್ತಂಭಗಳು ನಿರ್ಮಿತವಾದುವು. ಈ ವಿದ್ಯಾಪೀಠಗಳ ಕೀರ್ತಿಲತೆ ಪಸರಿಸಿ ಗಾಂಧಾರ, ಕಾಂಭೋಜ, ಮೊದಲಾದ ದೂರದ ಪರದೇಶಗಳಿಂದಲೂ ಕರ್ನಾಟ, ಕುಂತಳ, ತೌಳವ, ಮೊದಲಾದ ಪರರಾಜ್ಯಗಳಿಂದಲೂ ಕೆಲವು ವಿದ್ಯಾರ್ಥಿಗಳೂ ಸ್ನಾತಕರೂ ಬರುತ್ತಿದ್ದುದುಂಟು. ನೆರೆಹೊರೆಯ ಮಗಧ, ಮಾಳವ, ಗುರ್ಜರ ದೇಶಗಳಿಗಂತೂ ಇದು ವಿದ್ಯಾಕೇಂದ್ರವಾಯಿತು.

ಆದರೆ ಬರಿಯ ಧಾರ್ಮಿಕ ಕಾರ್ಯಗಳಿಂದಲೇ ಜನಸಮುದಾಯದಿಂದ ಇವನು 'ತಂದೆ' ಎಂದೆನಿಸಿಕೊಳ್ಳಲಿಲ್ಲ. ಬರಿಯ ಆತ್ಮ ಮೇಧಸ್ಸುಗಳನ್ನು ಪೋಷಿಸಿದರೆ ಸಾಕೆ? ಉದರಕ್ಕೂ ದೇಹಕ್ಕೂ ಪೋಷಣೆ ಬೇಡವೆ? ಆಧ್ಯಾತ್ಮದಿಂದ, ತ್ರಿಪಿಟಕ ಜಾತಕಾದಿಗಳಿಂದ, ಜನರ ಹೊಟ್ಟೆ ತುಂಬೀತೇ? ಜಠರಾಗ್ನಿಗೆ ತರ್ಪಣ ಈಯಬೇಡವೇ? ಅನ್ನ ಬ್ರಹ್ಮದ ದೇಗುಲದಲ್ಲೂ ನೈವೇದ್ಯಾರ್ಪಣೆಯಾಗಬೇಕು. ಈ ದಕ್ಷನಾದ ಭಿಕ್ಕುವು ನೀರಾವರಿ ಕಾಲುವೆಗಳನ್ನೂ, ಸರೋವರಗಳನ್ನೂ ತೋಡಿಸಿ ಅವುಗಳ ಮೂಲಕ ಬೇಸಾಯಕ್ಕೆ ಪುಷ್ಕಳ ನೀರು ದೊರೆಯುವಂತೆ ಮಾಡಿ ಕೃಷಿಯ ಉತ್ಕರ್ಷೆಯಾಗುವಂತೆಯೂ ದೇಶದಲ್ಲಿ ಸಮೃದ್ಧಿ ಸಂಪತ್ತುಗಳು ತುಂಬುವಂತೆಯೂ ಮಾಡಿದನು*. ಇದನ್ನು ಕಂಡೇ ಚೆಂಗಲ್ವರಾಯನು ಹಾಗೆಂದುದು.

ಬರಿಯ ಸಮೃದ್ಧಿ ಸಾಕೆ? ರಾಜನೀತಿ ಬೇಡವೆ? ದೇಶವನ್ನು ಬಲವಾಗಿರಿಸಿ ತನ್ನ ವರ್ಚಸ್ಸಿನಿಂದ, ಸ್ನೇಹಾಚಾರದಿಂದ, ನೆರೆಹೊರೆಯ ಉಜ್ಜಯಿನಿ ಮೊದಲಾದ ದೇಶಾಧಿಪತಿಗಳ ಮೈತ್ರಿಯನ್ನು ಪಡೆದು ಶತ್ರುಗಳನ್ನು ದಂಡಬಲದಿಂದಲೋ ಕೂಟನೀತಿಯಿಂದಲೋ ಚದರಿಸಿ ಪರರಾಜರು ಕೌಶಾಂಬಿ ರಾಜ್ಯದಲ್ಲಿ ಪದಾರ್ಪಣ ಮಾಡಲು ಹೆದರುವಂತೆ ಮಾಡಿದನು. ಅನುನಯ ವಿನಯಗಳಿಂದ ಮಿತ್ರರನ್ನೊಲಿಸಿ, ಭೇದದಂಡಾಟೋಪಗಳಿಂದ ಶತ್ರುಗಳನ್ನು ಬೆದರಿಸಿ, ಪ್ರಜೆಗಳನ್ನು ಮಕ್ಕಳಂತೆ ಪಾಲಿಸಿ, ಕೀರ್ತಿಪುಂಜನಾದ ಸರ್ವಾರ್ಥಸಿದ್ಧಿ ಇಂದು ಕೀರ್ತಿಶರೀರಿಯಾಗುವುದರಲ್ಲಿದ್ದನು.

* * * *

ಪೂಜ್ಯಪಾದನೂ ಅರ್ಹತನೂ ಅಹಿಂಸಾಧರ್ಮ ಪ್ರದೀಪನೂ ಆದ ಸರ್ವಾರ್ಥಸಿದ್ಧಿಯು ಕಣ್ತೆರೆದು, ನೆರೆದಿದ್ದ ಭದ್ರ ಗಣದೆಡೆಗೆ ತಿರುಗಿ, 'ಮಹಾರಾಜ, ಪೌರರೆ, ರಾಯಭಾರಿಗಳೆ, ಪೂಜ್ಯ ಕ್ಷಪಣಕ-ಭಿಕ್ಕು-ವೃಂದ, ಪ್ರಿಯ ಶಿಷ್ಯರೆ, ನೀವುಗಳು ಇನ್ನು ಸ್ವಸ್ಥಾನಕ್ಕೆ ತೆರಳಿರಿ. ನನ್ನ ಪ್ರಯಾಣ ಕಾಲಕ್ಕೆ ಇನ್ನು ವಿಳಂಬವಿಲ್ಲ. ನನ್ನ ಪ್ರಸ್ಥಾನದ ಮುನ್ನವೇ ಮಾಡಬೇಕಾದ ಕರ್ತವ್ಯಗಳಿರುವುವು. ಆದುದರಿಂದ, ಈ ಬುದ್ಧಕಿಂಕರನನ್ನು ಕ್ಷಮಿಸೋಣಾಗಲಿ. ಮಹಾರಾಜ, ಆಯುಷ್ಮಂತನೆ, ಇದುವರೆಗೆ ರಾಜ್ಯಭಾರದ ನೀತಿಯನ್ನು ನನಗೆ ತಿಳಿದಷ್ಟು ಅವಲೋಕಿತೇಶ್ವರನ ಅನುಗ್ರಹದಿಂದ, ನಿನಗೆ ಅರುಹಿದೆ; ನಿನ್ನ ರಾಜಕಾರ್ಯಕ್ಕೆ ಯತ್ಕಿಂಚಿತ್ತು ನೆರವಾದೆ. ಇನ್ನು ಮುಂದೆ ನನ್ನನ್ನು ಕ್ಷಮಿಸಬೇಕು. ಬೇರೆಯ ಆದೇಶ ನನ್ನನ್ನು ಕರೆಯು

* ಇಂದಿಗೂ ಈ ಮಹಾ ಪುರುಷನು ಕಟ್ಟಿಸಿದ ಕೆಲವು ಕೆರೆಗಳು ಉಳಿದಿವೆ. ಇವನ್ನು ಇಂದಿಗೂ 'ಬಿಕ್ಕೂಕಾ ತಾಲಾಬ್' ಎಂದೇ ಅಲ್ಲಿನ ಜನರು ಕರೆಯುವರು. ಈತನು ನೆಡಿಸಿದ ಕಾಡುಗಳಿಗೆ ಇಂದಿಗೂ ಸಿದ್ಧಾರನ' [ಸಿದ್ಧಾರಣ್ಯ ?] ಎಂಬ ಹೆಸರುಳಿದಿದೆ.

ತ್ತಿದೆ. ಅದನ್ನು ನಿರಾಕರಿಸಲಾರೆನು. ನನ್ನ ಪಟ್ಟಶಿಷ್ಯನೂ ನಾಳೆಗೆ ವಿಹಾರದ ಅಧ್ಯಕ್ಷನೂ ಆಗತಕ್ಕ ಶಾರ್ಙರವನು ವಿವೇಕಿಯೂ, ಅಭಿಜ್ಞನು, ಧರ್ಮ ಪರಾಯಣನು. ನಿನಗೆ ಸನ್ಮಾರ್ಗವನ್ನು ನಿರ್ದೇಶಿಸುವನು........ಪೌರರೆ, ಶಿಷ್ಯರೆ, ಇನ್ನು ಈ ಬುದ್ಧ ಚರಣದಾಸನಾದ ನನ್ನ ಮುಖದಿಂದ ತಮಗೆ ಉಪದೇಶ ದೊರೆಯದು. ಆದುದರಿಂದ, ಕೊನೆಯ ಬಾರಿ ಮನಸ್ಸಿಟ್ಟು ಕೇಳೋಣಾಗಲಿ:—

'ಜೀವನವೆಂಬ ಗದ್ದೆಯನ್ನು ಕರ್ತವ್ಯವೆಂಬ ನೇಗಿಲಿಂದ ಉಳಬೇಕು. ಬೆಳೆದು ಬಂದ ಪೈರನ್ನು ನಿಷ್ಕಾಮವೆಂಬ ಕುಡುಗೋಲಿಂದ ಕೊಯ್ಯಬೇಕು. ಬಂದ ಕಾಳನ್ನು ಸೇವೆ ಎಂಬ ಒನಕೆಯಿಂದ ಕುಟ್ಟಬೇಕು. ದಾನವೆಂಬ ಗೆರಸೆಯಿಂದ ಗೆರಸಿ, ಸ್ವಾರ್ಥವೆಂಬ ಜಳ್ಳು ಉಮಿಹೊಟ್ಟುಗಳನ್ನು ಕಳೆಯಬೇಕು ; ಎಂದರೆ ಕಣಜ ತುಂಬುವುದು. ಶಿಷ್ಯರೆ, ವಿನಯಾನುಸಾರವಾಗಿ ಧರ್ಮಾನುಷ್ಠಾನಗಳನ್ನು ಮಾಡುತ್ತಿರುವುದು ಮಾತ್ರವಲ್ಲದೆ, ಲೋಕಕಲ್ಯಾಣಕ್ಕಾಗಿ ನೇಮದಿಂದ ಜೀವವನ್ನು ಸವೆಯಿರಿ. ಇನ್ನು ಮುಂದಕ್ಕೆ ಶಾರ್ಙರವನು ನಿಮ್ಮ ಅಧ್ಯಕ್ಷನು. ಅಮಿತಾಭನ ದಯೆಯಿಂದ ನಿಮಗೆ ಅರ್ಹತ್ ಪದವಿಯು ಲಭಿಸಲಿ. ಓಂ ನಮೋ ಭಗವತೇ ಬುದ್ಧಾಯ' ಎಂದು ಬೀಳ್ಕೊಟ್ಟನು. ಮಹಾರಾಜನಾದ ಶಾಂತವರ್ಮನೂ ಪೌರರೂ ಶಿಷ್ಯ ಸಂದೋಹವೂ ಕಂಬನಿದುಂಬಿ ಸಾಷ್ಟಾಂಗ ಪೊಡಮಟ್ಟು ಈ ವಿಭೂತಿಯ ಚರಣಧೂಳಿಯನ್ನು ಶಿರಸಾವಹಿಸಿ ಸ್ವಸ್ಥಾನಗಳಿಗೆ ತೆರಳಿದರು.

ಶಾರ್ಙರವನೂ ತಲೆವಾಗಿ ದುಃಖಭರನಮಿತನಾಗಿ ವಿಹಾರದೆಡೆ ನಡೆಯುತ್ತಿದ್ದನು. ಆಗ, ಸರ್ವಾರ್ಥಸಿದ್ಧಿಯು, 'ಶಾರ್ಙರವ !' ಎಂದು ಕರೆದುದನ್ನು ಕೇಳಿ ಹಿಂದೆ ಬಂದನು. ಮುಮೂರ್ಷುವಾದ ಗುರು ಮತ್ತು ಜ್ಯೇಷ್ಠ ಶಿಷ್ಯ—ಇವರಿಬ್ಬರೇ ಆ ಪ್ರಾಂಗಣದಲ್ಲಿ.

'ಶಾರ್ಙರವ, ನೀನು ನಾಳೆ ನನ್ನ ಸ್ಥಾನದಲ್ಲಿ ಇರತಕ್ಕವನು. ನನ್ನ ಹೆಜ್ಜೆಗಳಲ್ಲಿ ನಡೆಯತಕ್ಕವನು. ಆದುದರಿಂದ ನಿನಗೆ ಒಂದು ಪ್ರಶ್ನೆಯನ್ನು ಕೇಳಬೇಕಾಗಿದೆ. ನನ್ನ ಜೀವನದಲ್ಲಿ ನಿನಗೇನಾದರೂ ಸಂದಿಗ್ಧತೆ, ಸಂದೇಹಾಸ್ಪದ ವಿಚಾರ ಕಂಡಿದೆಯೇ ? ಮುಚ್ಚುಮರೆಯಿಲ್ಲದೆ ಹೇಳು.'

'ಸ್ವಾಮಿನ್, ಎಂಥ ಪ್ರಶ್ನೆಯನ್ನು ಕೇಳಿದಿರಿ ? ಹಿಮ ಕರಗಿ ಉದ್ಭವಿಸಿದ ಧವಲ ಗಂಗೆಯೋಪಾದಿ ಅಕಲಂಕವಾದ ತಮ್ಮ ಪವಿತ್ರ ಜೀವನಧಾರೆಯಲ್ಲಿ ಸಂಶಯದ ಅನೈರ್ಮಲ್ಯವೆಲ್ಲಿರಬೇಕು ? ರವಿತೇಜದಿಂದ ಉಜ್ವಲವಾದ ಆಕಾಶ.......' ಗುರುವಿನ ಮುಖದಲ್ಲೊಂದು ವಿಲಕ್ಷಣವಾದ ನಗೆಯ ರೇಖೆ ಕ್ಷಣಾರ್ಧ ಕಾಲ ಮಿಂಚಿತು.

'ಸಾಕು ಶಾರ್ಙ್ಗರವ. ಇಂತಹ ಮಾತುಗಳನ್ನು ನಾನು ಬಹುವಾಗಿ ಕೇಳಿರುವೆನು. ಶೂನ್ಯಾಭಿಮುಖನಾದ* ಮುಮೂರ್ಷುವಿಗೆ ಉಪಮಾಲಂಕಾರಗಳೇತಕ್ಕೆ? ನನಗಿನ್ನು ಹೆಚ್ಚು ಕಾಲವಿಲ್ಲ. ಬರಿಯ ಬಯಲಾಡಂಬರಕ್ಕೆ ವೇಳೆಯಿಲ್ಲ. ಪ್ರಾಣವಾಯು ಊರ್ಧ್ವಾಭಿಮುಖವಾಗಿದೆ. ಆದುದರಿಂದ, ಚುಟುಕಿನಲ್ಲಿ ನಿನಗೆ ಹೇಳುವೆನು.

'ಅಜ್ಞಾನಿಗಳಾದ ಜನಸಾಮಾನ್ಯರಿಗೆ ಸತ್ಯವನ್ನು ಹೇಳಿ ಏನು ಸಾರ್ಥಕ? ಕ್ಷುದ್ರ ಜನಜಂಗುಳಿ ಸತ್ಯದ ಆಘಾತವನ್ನು ಸಹಿಸಬಲ್ಲುದೇ? ಆದರೆ ನೀನು ಹಾಗಲ್ಲ. ನಿನಗೆ ಸಂಸ್ಕಾರವಾಗಿದೆ. ನಿನ್ನ ಜೀವ ಪಕ್ವವಾಗಿದೆ. ನಿನಗೆ ಹೇಳುವುದು ನ್ಯಾಯ. ಆದುದರಿಂದ ಹೇಳುವೆನು, ಕೇಳು. ಪ್ರಜಾಕಂಟಕನಾದ ಶೋಣಿತಕೇತು ಧರ್ಮೋಪದೇಶಕ್ಕಾಗಿ, ಧರ್ಮ ವಾಗ್ವಾದಕ್ಕಾಗಿ ಇಲ್ಲಿಗೆ ಬರಲಿಲ್ಲ, ಮಾಂಸೇಚ್ಛುವಾದ ಕ್ರೂರವ್ಯಾಘ್ರ ಫಲಪುಷ್ಪಗಳ ಆಸೆಗೆ ಬಂದೀತೇ? ಆತನನ್ನು ಇಲ್ಲಿಗೆ ಎಳೆದುದು ಬುದ್ಧವಾಣಿಯಲ್ಲ—ಆತನ ಸ್ವಭಾವ ಸಹಜವಾದ ನೀಚ ವ್ಯಾಮೋಹ, ಕಾಮತೃಷೆ. ವಿಹಾರದ ಅಧ್ಯಕ್ಷೆ ಅಪರಾಜಿತೆ ನನ್ನ ಬಳಿ ಪಶುಬಲಿಗಾಗಿ ರಾಜಾಜ್ಞೆಯಾಯಿತೆಂದು ಮೊರೆಯಿಟ್ಟುದಲ್ಲ; ಆಕೆ ನನ್ನಲ್ಲಿ ಗೋಳಿಟ್ಟುದೇನೆಂದರೆ, ಆ ಮದಾಂಧ ರುದ್ರದಮನನ ಪಾಪದೃಷ್ಟಿ ಆಕೆಯ ಮೇಲೂ ಬಿದ್ದಿದೆ ಎಂದು; ಆಕೆ ಸನ್ಯಾಸಿನಿ, ಪವಿತ್ರಳು, ಎಂಬುದನ್ನೂ ಲೆಕ್ಕಿಸದೆ, ಆ ಕಾಮಾಂಧನು ಆಕೆಯನ್ನೇ ಕಾಡಹತ್ತಿರುವನೆಂದು. ಇದು ಭೀಕರ ಸನ್ನಿವೇಶ. ನಾನಾಗ ಶೋಣಿತಕೇತುವಿಗೊಂದು ಪತ್ರವನ್ನು ಬರೆದುಕಳುಹಿಸಿದೆನು. ಆತನ ಪ್ರವೃತ್ತಿಗೆ ಸರಿಯಾಗಿ, ಆತನ ಮರ್ಮಕ್ಕೆ ನಾಟುವಂತಹ ಪತ್ರವನ್ನು ಬರೆಯಲು ಬಹು ಕಷ್ಟವಾಯಿತು. ನಾನು ಬೌದ್ಧ ಸನ್ಯಾಸಿ ಎಂಬುದನ್ನೂ ಒಂದು ಕ್ಷಣ ಮರೆಯಿಸಬೇಕಾಯಿತು. ವಿಚಾರಿಸಲು ಹೆಚ್ಚು ಕಾಲವಿರಲಿಲ್ಲ. ಆ ಕಾಮೋದ್ರಿಕ್ತ ಪಶು ಆಗಲೇ ಅಪರಾಜಿತೆಯನ್ನು ಕಾಡಲು ತೊಡಗಿತ್ತು. ನಾನು ಬರೆದುದು ಇಷ್ಟೆ—

ಮಹಾರಾಜ,

ಪೂಜ್ಯಳಾದ ಅಪರಾಜಿತೆಯು ನನ್ನಲ್ಲಿ ಬಂದು ನಿನ್ನ ಕಲುಷಿತ ಕಾಮಪ್ರೇರಿತ ಆದೇಶವನ್ನು ಹೇಳಿ, ಗೋಳಿಟ್ಟಿರುವಳು. ಆಕೆಯ ಮೇಲಿನ ನಿನ್ನ ಮೃಗಲಾಲಸೆ ತಿಳಿಯಿತು. ನಿನಗೆ ಉಪದೇಶಮಾಡಲು ನಾನು ಹೊರಟಿಲ್ಲ. ನಿನ್ನ ವರ್ತನೆಯನ್ನು ತಿದ್ದುವ ಆಸೆ ನನಗಿಲ್ಲ. ನೀನು ಸ್ವೇಚ್ಛಾಚಾರಿ. ದೇವರಿಗೆ ಹೆದರದಾತನ್ನ ಮಾತನ್ನು ಮನ್ನಿಸುವುದುಂಟೆ? ನಾನು ಬರೆಯುತ್ತಿರುವುದು ಧರ್ಮದ

* ಬೌದ್ಧರು ಶೂನ್ಯವಾದಿಗಳು.

ಮಾತನ್ನಲ್ಲ. ನೀನು ಕ್ಷತ್ರಿಯನೆಂದು ನೆನವರಿಸಿ ಬರೆಯುತ್ತಿರುವೆನು. ನಾನು ಧರ್ಮಕಿಂಕರ, ತಥಾಗತಪಾದರೇಣು. ನೀನು ಧರ್ಮಘಾತಕ, ನೀತಿಬಾಹಿರ. ನಾನು ಭಿಕ್ಷು, ನೀನು ತಾಮಸಿ. ನಾನು ಸನ್ಯಾಸಿ ; ನೀನು ಲಾಲಸಿ. ಆದರೆ ನಾವಿಬ್ಬರೂ ಒಂದೇ ಕ್ಷತ್ರಿಯ ಜಾತಿಯಲ್ಲಿ ಹುಟ್ಟಿದವರು. ನಾನೂ ಕ್ಷತ್ರಿಯ ; ನೀನೂ ಕ್ಷತ್ರಿಯನು. ನಮ್ಮಿಬ್ಬರ ಧಮನಿಗಳಲ್ಲೂ, ಏನೇ ಆಗಲಿ, ಕ್ಷತ್ರಿಯ ರಕ್ತವೇ ಹರಿಯುತ್ತಿದೆ. ಇದನ್ನು ನೀನೂ ಮರೆಯಲಾರೆ ; ನಾನೂ ಮರೆಯಲಾರೆ. ಮರೆಯುವುದಾದರೂ ಹೇಗೆ ? ರಕ್ತವೆಂದರೇನು ನೀರೇ ? ನಾನು ಭಿಕ್ಷುವೇದೂ, ನೀನು ರಾಜನೆಂದು, ನಾನು ಹೇಳುತ್ತಿಲ್ಲ. ನಾನು ಭಿಕ್ಷು, ಸನ್ಯಾಸಿ ಎಂಬುದನ್ನು ಈ ಕ್ಷಣದ ಮಟ್ಟಿಗೆ ಮರೆತುಬಿಡು ; ನಾನೂ ಮರೆಯುವೆನು. ನಾನು ಕ್ಷತ್ರಿಯ ನೆಂದು, ನೀನೂ ಕ್ಷತ್ರಿಯನೆಂದು ನಿನಗೀ ಮಾತನ್ನು ಹೇಳುತ್ತೇನೆ. ಕ್ಷತ್ರಿಯ ನಾಗಿ ಹುಟ್ಟಿ ಕ್ಷತ್ರಿಯ ಕುಲದ ಮೂಗನ್ನು ಕೊಯ್ಯುವೆಯಾ ? ಅಪರಾಜಿತೆ ಭಿಕ್ಷುಣಿ ಹೌದು. ಆದರೆ ಆಕೆ ಕ್ಷತ್ರಿಯಳೆಂದು ಮರೆಯಬೇಡ. ಉತ್ತಮಕುಲಸಂಭೂತೆ ಯಾಗಿ ಕ್ಷತ್ರಿಯರಲ್ಲಿ ಶ್ರೇಷ್ಠವಾದ ಕುಲದಲ್ಲಿ ಹುಟ್ಟಿದವಳು ಆಕೆ. ಆಕೆಯನ್ನು ಬಹಿರಂಗವಾಗಿ ಎಲ್ಲರಿಗೂ ತಿಳಿಯುವಂತೆ ಅವಮಾನಿಸಿದರೆ, ಕ್ಷತ್ರಿಯಜಾತಿಗೆ, ಕ್ಷತ್ರಿಯ ಸಮುದಾಯಕ್ಕೆ ಏನು ಮಾನವುಳಿದೀತು ? ನೀನು ಹುಟ್ಟಿದ ಜಾತಿ ಯನ್ನು ಮರೆಯುವೆಯಾ ? ಹುಟ್ಟಿದ ಮನೆಯನ್ನೇ ಸೂಳೆಗೇರಿಯಾಗಿ ಮಾಡು ವೆಯಾ ? ಎಲ್ಲರಿಗೂ ತಿಳಿಯುವಂತೆ ಈ ಕ್ಷತ್ರಿಯಕುಲಸಂಜಾತೆಯ ಸ್ತ್ರೀತ್ವವನ್ನು ಹರಿಸಿದರೆ ಲೋಗರು ಕೇಕೆ ಹಾಕಿ ನಗರೇ ? ಬ್ರಾಹ್ಮಣ ವೈಶ್ಯ ಶೂದ್ರಾದಿಗಳೇ ಏಕೆ, ದಸ್ಯುಗಳೂ, ಕ್ಷತ್ರಿಯರ ಕುಲದೆಡೆಗೆ ಬೆರಳುತೋರಿಸಿ ಮೂದಲಿಸಿ ನಗರೇ ? "ಕ್ಷತ್ರಿಯರ ಹೆಣ್ಣು ಇಷ್ಟೇಯೇ ? ಕ್ಷತ್ರಿಯರ ಹೆಣ್ಣೇನೂ ಕೈಗೆಟಕದ ಹಣ್ಣಲ್ಲ" ಎಂದು ಬೀದಿಯಲ್ಲೇ ಅಣಕಿಸರೆ ? "ಕ್ಷತ್ರಿಯ ರಮಣಿಯರ ಮಾನವೂ ಬೀದಿಯ ಎಂಜಲುಕುಪ್ಪೆಯೇ" ಎನರೇ ? .......ಆದುದರಿಂದ ನಿನ್ನ ಮೃಗತೃಷ್ಣೆ ಗೌಪ್ಯವಾಗಿ, ರಹಸ್ಯವಾಗಿ ಈಡೇರಲಿ. ನಿನ್ನ ತಾಮಸೇಚ್ಛೆಯನ್ನು ನೀನು ಬಿಡಲಾರೆ. ನಿನ್ನ ಪಾಪ ವೃತ್ತಿ ನಿನಗಿಂತ ಪ್ರಬಲವಾದುದು. ನೀನದರ ದಾಸ, ಸೆರೆಯಾಳು. ಆದುದ ರಿಂದ, ನೆಪಕ್ಕೆ ಜನಜಂಗುಳಿಯ ಕಣ್ಣಿಗೆ ಮಣ್ಣೆರಚಲು, "ಧರ್ಮೋಪದೇಶಕ್ಕೆ ಹೋಗುವೆನು" ಎಂದು ಊರಲ್ಲೆಲ್ಲಾ ಸಾರಿ ಇಲ್ಲಿಗೆ ಬಾ. ಒಬ್ಬಂಟಿಗನಾಗಿ ಬಾ. ಬೇರಾವ ಪ್ರಾಣಿಗೂ ನಿನ್ನ ಉದ್ದೇಶ ತಿಳಿಯದಿರಲಿ. ನಿನ್ನ ಪರಿಚರರಿಗೆ ಇದರ ಗಂಧವೂ ತಿಳಿದರೆ, ಅವರು ಮುಂದೆ ಕ್ಷತ್ರಿಯ ಸ್ತ್ರೀಯರನ್ನು ಗೌರವಿಸಿಯಾರೆ ? ಕ್ಷತ್ರಿಯರಿಗೆ ಬಾಗಿ ನಡೆದಾರೆ ? ನಮ್ಮ ಕುಲದ ಮಾನ ಹೋದರೆ, ಕ್ಷತ್ರಿಯರ ಪ್ರಭುತ್ವವೆಲ್ಲಿ ಉಳಿದೀತು ? ಏನು ಪ್ರಮಾದವಾದೀತು ಎಂದು ವಿಚಾರಿಸು. ಆದುದರಿಂದ ಧರ್ಮೋಪದೇಶದ ನೆಪಮಾಡಿ ಒಬ್ಬಂಟಿಗನಾಗಿ ನನ್ನಲ್ಲಿಗೆ ಬಾ.

ಪೂಜ್ಯಳೂ ನಿಸ್ಸಹಾಯಳೂ ಆದ ಅಪರಾಜಿತೆಯನ್ನು ನಿನಗೆ ಬಲಿಕೊಡಲೆಂದು ಇಲ್ಲಿಗೇ ಕರೆತಂದಿರಿಸುವೆನು. ನಿನ್ನ ದುಷ್ಟಾಭೀಷ್ಟ ನೆರವೇರುವುದು. ಈ ಹೇಯವಾದ ಯುಕ್ತಿಯನ್ನು ಸೂಚಿಸಿ ನಾನು ಪಾಪಿಯಾಗಿರುವೆನು. ಆದರೂ ಹುಟ್ಟಿದ ಕುಲವಾದ ಕ್ಷತ್ರಿಯ ವಂಶದ ಮೇಲಿನ ಮಮತೆ ನನ್ನನ್ನು ಬಲವಂತಪಡಿಸುತ್ತಿದೆ.........

'ನನ್ನ ಎಣಿಕೆ ತಪ್ಪಾಗಲಿಲ್ಲ. ವಿಷಸರ್ಪನಿಗೇ ಆದರೂ ತನ್ನ ಹುತ್ತದ ಮೇಲೆ ಅಭಿಮಾನವಿಲ್ಲವೇ ? ನಾನು ಹೇಳಿದಂತೆ ಶೋಣಿತಕೇತು ಒಬ್ಬಂಟಿಗನಾಗಿ ಧರ್ಮೋಪದೇಶಕ್ಕೆಂದು ಸಾರಿ ಇಲ್ಲಿಗೆ ಬಂದನು. ಕಾಮದ ಮಂಕಿನಿಂದ ಬುದ್ಧಿ ಭ್ರಂಶವೂ ಆಗಿತ್ತು.

'ಇನ್ನು ಹೆಚ್ಚೇನನ್ನೂ ಹೇಳಲು ಉಳಿದಿಲ್ಲ....ನನ್ನ ಪ್ರಾಣವಾಯು ನಾಭಿಯಲ್ಲಿ ಬಂದು ನಿಂತಿದೆ. ಇನ್ನು ಹೊತ್ತಿಲ್ಲ...........ಏಕಾಕಿಯಾಗಿ ಬಂದ ಆ ದುರಾತ್ಮನನ್ನು ಇದೇ ನನ್ನೀ ಕೈಗಳಿಂದ ನಾನು ಕತ್ತುಹಿಸುಕಿ ಕೊಂದೆನು. ಪಾಪಭೋಗದಿಂದ ಶಿಥಿಲವಾಗಿದ್ದ ಆ ದೇಹ ನನ್ನ ಕೈಗಳಲ್ಲಿ ಸುಲಭವಾಗಿಯೇ ಮುರಿಯಿತು....'

ಶಿಷ್ಯ ಅವಾಕ್ಕಾಗಿ, ಸ್ತಂಭೀಭೂತನಾಗಿ ನಿಂತಿದ್ದನು.

'ಒಂದು ಕ್ಷಣ ಕೇಳು..........ಅತಿ ಗಹನವಾದುದನ್ನು ಹೇಳುತ್ತೇನೆ........... ಪ್ರಾಣವಾಯು ಕಂಠಗತವಾಗಿದೆ...........ನಾನೀ ಕಥೆಯನ್ನು ನಿನಗೆ ಹೇಳಿದುದು ಪಶ್ಚಾತ್ತಾಪದಿಂದಲ್ಲ. ಆತ್ಮಲಾಂಛನದಿಂದಲ್ಲ. ಸರ್ವಥಾ ಅಲ್ಲ............ನಿನಗೆ ಕರ್ತವ್ಯಜ್ಞಾನಕ್ಕಾಗಿರಲಿ ಎಂದು ಹೇಳಿದ್ದೇನೆ. ನೀನು ನನ್ನ ಉತ್ತರಾಧಿಕಾರಿ. ನಾಳೆ ಸಂಘದ, ಧರ್ಮದ ಭಾರವನ್ನು ಹೊರತಕ್ಕವನು. ನಿನಗೆ ಕರ್ತವ್ಯಜ್ಞಾನಕ್ಕಿರಲಿ ಎಂದು ಹೇಳಿದೆ. ತಿಳಿದಿರಲಿ........ಮುಗಿಯಿತು........ಓಂ ಮಣಿ ಪದ್ಮೇ ಹೂಂ...... ಓಂ ನಮೋ ಭಗವತೇ ಬುದ್ಧಾಯ.' ಎಂದೆನ್ನುತ್ತಿರುವಾಗಲೇ ಪ್ರಾಣವಾಯುವು ನೆತ್ತಿಯನ್ನು ಭೇದಿಸಿ ಶೂನ್ಯಾಭಿಮುಖವಾಗಿ ಧಾವಿಸಿತು. ಪೂಜ್ಯಪಾದನೂ ಅಹಿಂಸಾಧರ್ಮ ಪ್ರದೀಪನೂ ಪನಾಡ ಪುರುಷನೂ ಆದ ಭಿಕ್ಕು ಸರ್ವಾರ್ಥಸಿದ್ಧಿ ನಿರ್ವಾಣವನ್ನೈದಿದನು.

—ಬಾಗಲೋಡಿ ದೇವರಾಯ

# ದುಃಖಸೇತು

ಶಾಲೆಯಲ್ಲಿ ಚರಿತ್ರೆ ಹೇಳುವ ಮೇಷ್ಟ್ರು; ಆದ್ದರಿಂದ ಚರಿತ್ರೆಯ ಪುಸ್ತಕಗಳನ್ನೇ ನಾನು ಹೆಚ್ಚು ಓದುತ್ತಿದ್ದೆ. ಅಂದು ಭಾನುವಾರ. ಬೆಳಿಗ್ಗೆ ಒಂಬತ್ತು ಗಂಟೆಯ ಸಮಯ. ಲಲಿತ, ನನ್ನ ಮೂರು ವರ್ಷದ ಮಗುವಿಗೆ ಸ್ನಾನಮಾಡಿಸಿ ಟವಲಿನಿಂದ ಮೈಯೊರಸುತ್ತಿದ್ದಳು. ನನ್ನ ಹಿರಿಯ ಮಗಳು–ಆರು ವರ್ಷದ ಕುಮುದ–ಪಕ್ಕದ ಮನೆಯಲ್ಲಿದ್ದಳೊ, ಏನೊ. ಫತ್ತೆಪುರ್ ಸಿಕ್ರಿಯ ವಿಷಯವಾಗಿ ಬರೆದ ಒಂದು ಪುಸ್ತಕವನ್ನು ನಾನು ಓದುತ್ತಿದ್ದೆ. ಲಲಿತೆಯನ್ನು ಗೆಲ್ಲುವುದಕ್ಕೆ ಅಲ್ಲೊಂದು ಆಯುಧ ಸಿಕ್ಕಿತು. ಪ್ರಯೋಗದಲ್ಲಿ ಗೆದ್ದ ವಿಜ್ಞಾನಿಯಂತೆ 'ಲಲಿತಾ, ಲಲಿತಾ ! ಬೇಗ್ಬಾ ಇಲ್ಲಿ !' ಎಂದು ಕೂಗಿದೆ.

ಪಡಸಾಲೆಯಲ್ಲಿದ್ದ ಲಲಿತ, ಮಗುವನ್ನಲ್ಲಿಯೆ ಬಿಟ್ಟು ಗಾಬರಿಯಿಂದ ನನ ಕೋಣೆಗೆ ಬಂದಳು.

'ಏನದು, ಹಾಗ್ ಕೂಗ್‌ಕೊಂಡಿರಿ ?'

'ಏನೂ ಇಲ್ಲ. ಇಲ್ಲೊಂದು ವಿಷಯ ಸಿಕ್ಕಿತು. ಮುತ್ತಿನಂಥ ಮಾತು ಲಲಿತ ! ನಮ್ಮಂಥ ಮನುಷ್ಯರದಲ್ಲ, ಮತ್ತೆ. ದೇವರು ಹೇಳಿರೋದು; ಯೇಸು ಕ್ರಿಸ್ತ ಹೇಳಿರೋದು. ಕೇಳು, ಓದ್ತೀನಿ. ಮೊದಲು ಇಂಗ್ಲೀಷ್‌ನಲ್ಲಿ; ಆಮೇಲದ ರರ್ಥ.

'So said Jesus upon whom be peace:
The World is a Bridge; Pass over It;
But Build No House upon It'

ಹೀಗಂದ್ರೇನು ಗೊತ್ತ ? ಯೇಸುಕ್ರಿಸ್ತ ಹೇಳ್ತಾನೆ : ಈ ಪ್ರಪಂಚ ಒಂದು ಸೇತುವೆಯಂತೆ; ಇದನ್ನು ನಾವು ದಾಟಬೇಕಂತೆ; ಆದರೆ ಇಲ್ಲೇ ಮನೆ ಕಟ್ಟಿ ಬಿಡಬಾರದಂತೆ !–ಗೊತ್ತಾಯ್ತು ? ನಾನದಕ್ಕೇ ಹೇಳೋದು, ಮನೆ ತೊಗೊಳ್ಳೋದು ಬ್ಯಾಡಾಂತ......ನೀ ಹೇಳೋದ್ ನಿಜ; ಇದು ಪ್ರೈವೇಟ್ ಹೈಸ್ಕೂಲು. ನನಗೇನ್ ಇಲ್ಲಿಂದ ವರ್ಗವಾಗೊಲ್ಲ. ಆದರೇ......ನಮಗ್ಯಾತಕ್ಕೆ, ಲಲಿತ, ಮನೆ ?'

'ಅಯ್ಯೊ, ಹಾಗಂದ್ರೇನು ! ಸಂಸಾರ ಅಂದ್ಮೇಲೊಂದ್ಮನೆ ಬ್ಯಾಡ್ವೆ ? ಮದುವೆ ಮಾಡಿನೋಡು, ಮನೆ ಕಟ್ಟಿನೋಡೂಂತ ಗಾದೆ. ಮದುವೆ ಮಾಡೋಕೆ ಕುಮುದ ಇದಾಳೆ. ಆಮೇಲೆ ಮರಿ ಬೇರೆ ತಯಾರಾಗ್ತಾಳೆ....ಆದರೆ ಮನೆ ?'

'ಈಗ, ಯೇಸುಕ್ರಿಸ್ತ ಹೇಳಿದ್ಕೇಳಲಿಲ್ಲವೆ ? ಇದು ಬರೀ ಒಂದು ಬ್ರಿಡ್ಜ್ ಇದ್ದಾಗ್ಗೆ; ನಿಮ್ಮೂರು ಸೇತುವೆ ಇಲ್ಲವೆ ?—ಹಾಗೆ. ನಾವು ಈ ದಡದಿಂದ ಆ ದಡಕ್ಕೆ ನಡೀಬೇಕು; ಅಷ್ಟಕ್ಕಾತ್ರ ಇದು ಇರೋದು. ಇಲ್ಲೀ ಬಿಡಾರ ಊರಿ ಬಿಡಬಾರದು ; ಸೇತುವೆ ಮೇಲ್ ಮನೆ ಕಟ್ತಾರೆಯೆ ಯಾರಾದ್ರು ?.... ಅವಕ್ಕೋಸ್ಕರವೇ ಲಲಿತ, ನಾ ಹೇಳೋದು. ಇರೋತನಕ ಚೆನ್ನಾಗಿ ತಿಂದು ಬಿಡೋಣ. ಸಾಯುವಾಗ, ಸುಖವಾಗಿ ಸತ್ತು ಬಿಡೋಣ............'

'ಅಯ್ಯೊ, ಹೋಗೀಂದ್ರೆ. ಮಾತೆತ್ತಿದ್ರೆ ಸಾಯೋಮಾತು......ನಾ ಹೇಳೋದು ನಿಮಗರ್ಥವಾಗೋದೇ ಇಲ್ಲ. ಮುಂದೆ ಯುದ್ಧ ಷುರುವಾಗ್ಬಿಡುತ್ತೆ, ಸಾಮಾನಿನ ಧಾರಣೆ ಎಲ್ಲ ಏರಿಬಿಡುತ್ತೆ ಅಂತಾರೆ ಜನ. ಈಗ, ಕೊನೇಪಕ್ಷ ಒಂದು ಸೈಟಾದರೂ ತೊಗೊಂಡಿದ್ದರೆ ನಿಧಾನವಾಗಿ ಕಟ್ಟಿಸ್ಕೋಬಹುದು. ಗುಡೀ ಬೀದೀಲಿ ಎಂಥ ದೊಡ್ಡ ಮನೆ ! ಮೂರ್ಸಾವಿರದ್ರೂಪಾಯಿಗ್ ತೊಗೊಂಡ್ರು, ಆ ಅಂಗಡಿ ಶೆಟ್ಟರು. ಅದ್ಯಾಕೆ ! ನಿನ್ನೆ ಪಕ್ಕದ್ಮನೆ, ನಂಜಮ್ನೋರ್ ಹೇಳಿದರು: ಅವರ ತಮ್ಮನ ಮನೇನೆ ಖರೀದಿಗಿದೆಯಂತೆ. ನಲ್ಲಿ ದೀಪ-ಎಲ್ಲ ಇದೆಯಂತೆ-ಎಕ್ಸ್‌ಟೆನ್‌ಷನ್‌ನಲ್ಲಿ......ಅಲ್ಲೆ, ಇನ್ನೊಂದ್ಮನೇಗೂ ಬೋರ್ಡ್ ಹಾಕಿದೆಯಂತೆ..........'

'ಹೋ ಹೋ ಹೋ........ಸ್ವಲ್ಪ ನಿಲ್ಲು, ನೋಡ್ದ್ಯಾ ಆಗಲೆ ಅಡ್ವಟೈಸ್‌ಮೆಂಟ್ ಷುರುಮಾಡ್ಬಿಟ್ಟೆ.'

'ಅಯ್ಯೋ ನೀವ್ ಹೀಗೆ. ಯಾವಾಗಲೂ ಹುಡ್ಗಾಟಾಂದ್ರೆ....ನಮ್ದೂಂತ ಒಂದ್ಮನೆ ಮಾಡ್ಕೊಂಡ್ರೆ ಎಷ್ಟ್ ಅನುಕೂಲವಿದೆ....ನಿಮಗರ್ಥವಾಗೋದೇ ಇಲ್ಲ ನಾ ಹೇಳೋದು.'

'ಅಯ್ಯೋ ಲಲಿತ, ಯೇಸುಕ್ರಿಸ್ತನೇ ಹೇಳಿದರೂ ನೀನ್ಕೇಳೊಲ್ವಲ್ಲ. ನಿನಗೆ "ಅದು" ಅರ್ಥವಾಗೊಲ್ವಲ್ಲ !'

'ಈ ಪ್ರಪಂಚ ಸೇತುವೆ ಅಂದ್ಕೊಳ್ಳೋರು ಏಸುಕ್ರಿಸ್ತನಂಥೋರು. ನಮಗಿದು ಭೂಮೀನೇ........'

ಲಲಿತ ಇನ್ನೂ ಏನೋ ಹೇಳುವುದರಲ್ಲಿದ್ದಳು. ಆದರೆ ಪಡಸಾಲೆಯಲ್ಲಿ ಕುಮುದಳ ಧ್ವನಿ ಕೇಳಿಸಿತು:

'ಅಯ್ಯೋ ! ಥೂ ನಾಚಿಕೇನೇ ಇಲ್ಲ ?! ಮರಿ ಬರೀ ಬತ್ಲೆ ಇದೆ ಥೂ ! ನಾ ನೋಡಲ್ಲಪ್ಪ ನಂಗ್ ನಾಚಿಕೆ !'

ಲಲಿತ ಮಕ್ಕಳ ಮಾತು ಕೇಳೋಣ, ಎಂದು ಪಡಸಾಲೆಗೆ ಹೋದಳು.. ನಾನೂ ಅವಳ ಹಿಂದೆಯೆ ಹೋದೆ. ಮರಿ ಬರಿಯ ಮೈಯಲ್ಲಿ ನಿಂತಿದ್ದಳು. ಅವಳಮ್ಮ ಅವಳ ಮೈಯೊರಸಲು ತಂದಿದ್ದ ಟವಲು ನೆಲದ ಮೇಲೆ ಬಿದ್ದಿತ್ತು. ನಮ್ಮ ಕುಮುದ ಮೊಳಕಾಲಮೇಲಿದ್ದ ತನ್ನ ಲಂಗದ ಮುಂದಿನ ಭಾಗವನ್ನೆಲ್ಲ ಎತ್ತಿ ಅದರಲ್ಲಿ ತನ್ನ ಮುಖ ಮುಚ್ಚಿಕೊಂಡಿದ್ದಳು.

ಕುಮುದ ಮತ್ತೆ 'ಥೂ ನಂಗ್ ನಾಚಿಕೆ !' ಎಂದು ಮುಖ ಮುಚ್ಚಿಕೊಂಡೇ ಹೇಳಿತು.

ನಾನು 'ಅಯ್ಯೊ ಕುಮುದಾ, ಥೂ ! ನಿಂಗ್ ನಾಚ್ಕೇನೇ ಇಲ್ವೆ ? ನಿಕ್ಕರ್ ಕೂಡ ಹಾಕ್ಕೊಂಡಿಲ್ಲ, ಲಂಗಾನೆಲ್ಲ ಎತ್ಕೊಂಡ್ಬಿಟ್ಟಿದೀಯೆ ಥೂ, ಥೂ, ಥೂ !' ಎಂದು ಗೊಳ್ಳನೆ ನಕ್ಕುಬಿಟ್ಟೆ. ಲಲಿತ ಕೂಡ ನನ್ನ ಜೊತೆಯಲ್ಲಿಯೆ ನಕ್ಕುಬಿಟ್ಟಳು. ಕುಮುದ ತನ್ನ ಮೈನೋಡಿಕೊಂಡಳು. ಅವಳ ಮುಖ ಪೆಚ್ಚಾಯಿತು. ಮರಿ ಎಳನಗು ನಕ್ಕಿತು. ಲಲಿತ ಓಡಿ ಹೋಗಿ ಮರಿಯನ್ನೆತ್ತಿಕೊಂಡಳು. ಕುಮುದ ಮುನಿಸಿಕೊಂಡು ಮೂಲೆಗೆ ಹೋಗಿ, ಗೋಡೆಯ ಕಡೆ ಮುಖಮಾಡಿಕೊಂಡು ನಿಂತಳು. ಆಗಲೇ ಕಣ್ಣು ತುಂಬ ನೀರು ಬಂದಿತ್ತು. ಎರಡು ಕೈಗಳಿಂದಲೂ ಬಲವಾಗಿ ಮುಖ ಮುಚ್ಚಿಕೊಂಡಿದ್ದಳು ; ತಡೆಯಲಾರದೆ ಓಡಿ ಹೋಗಿ ನಾನು ಅವಳನ್ನೆತ್ತಿಕೊಂಡೆ ; ತಕ್ಷಣವೆ ಗಟ್ಟಿಯಾಗಿ ಅತ್ತುಬಿಟ್ಟಳು ; ಅವಳನ್ನು ಸಮಾಧಾನ ಮಾಡಲು ಬಹಳ ಹೊತ್ತು ಹಿಡಿಯಿತು.

'ಇವೊತ್ತು ಸಂಜೆ ವಾಕಿಂಗ್ ಕರ್ಕೊಂಡ್ ಹೋಗ್ತೀನಿ ಕುಮುದ. ವಾಕಿಂಗ್ !........ವಾಕಿಂಗ್ ಇವೊತ್ತು. ನಾನು, ನೀನು, ಅಮ್ಮ, ಮರಿ !....'

'ಮರಿ ಏನ್ಬೇಡ.'

'ಹಾಗಾದ್ರೆ ಮರೀನೆಲ್ಬಿಡೋಣ ?'

'ಮನೇಲ್ ಇರ್ಲಿ.'

'ಅವಳು ಅಮ್ಮನ್ಬಿಟ್ಟಿರೊಲ್ವಲ್ಲ ?'

'ಅಮ್ಮಾನು ಇಲ್ಲೇ ಇರ್ಲಿ.'

'ನೋ ನೋ ನೊನೊ ! ನಿಮ್ಮಮ್ಮ ನನ್ಜೊತೆ ಇರ್ಬೇಕು.'

'ಹಾಗಾದ್ರೆ.........'

'ಹಾಗಾದ್ರೆ ನಾನೂ ಬ್ಯಾಡ, ಅಲ್ವಾ ?'

'ಊಹ್ನೂ....ನೀನ್ಬರ್ಬೇಕು.'

'ಅಮ್ಮ ಬರದ ಹೊರತು ನಾನ್ಬರೊಲ್ಲ. ಅಮ್ಮ ಬಂದರೆ ಮರಿ ಬಿಡೊಲ್ಲ. ಅದ್ರಿಂದ ಎಲ್ಲರೂ ವಾಕಿಂಗ್ !'

'ಇಲ್ಲ....ಮರಿ ಬ್ಯಾಡಾ ಅಣ್ಣಾ....'

ಮರಿಗೆ ಇದನ್ನು ಕೇಳಿ ತುಂಬ ದುಃಖ ಬಂದಿತ್ತು. ಆಗತಾನೆ ಅವಳ ತಾಯಿ ಹಾಕಿದ್ದ ಲಂಗದಲ್ಲಿ ಕಣ್ಣೊರಸಿಕೊಳ್ಳುತ್ತಾ 'ಹ್ಞೂ, ನಾನೂ ಬರ್ತೀನಿ....ಅಮಾ ನೋಡೇೀ' ಎಂದು ರಾಗ ಎಳೆದು, ತಾಯಿಯ ಮೊಳಕಾಲಿಗೆ ತಬ್ಬಿಕೊಂಡಳು.

ಲಲಿತ ಅವಳನೆತ್ತಿಕೊಂಡು 'ಅಯ್ಯೋ ಮರಿ ! ನಿನ್ಬಿಟ್ ಎಲ್ಹೋಗ್ತೀನೇ ? ಹುಚ್ಚಿ ! ಅವಳಂದ್ ಮಾತ್ರಕ್ಕೆ ನಿನ್ಬಿಟ್ ಹೋಗ್ತಾರೇನೆ !....ಅಯ್ಯೋ ನನ್ನ್ ಮರೀ' ಎಂದು, ಮರಿಯ ಗಲ್ಲದ ಮೇಲಿಳಿಯುತ್ತಿದ್ದ ಕಂಬನಿಯ ಹನಿಯನ್ನೊರಸಿ ಅಲ್ಲೊಂದು ಮುತ್ತಿಟ್ಟಳು.

೨

ಊಟವಾದಾಗ ಮಧ್ಯಾಹ್ನ ಹನ್ನೆರಡು ಗಂಟೆ. ಲಲಿತ ಪಡಸಾಲೆಯಲ್ಲಿ ಚಾಪೆಯ ಮೇಲೆ ಮಲಗಿದ್ದಳು. ನಾನೂ ಅಲ್ಲಿಯೆ ಇದ್ದ ಮಂಚದ ಮೇಲೆ ಬಿದ್ದು ಕೊಂಡು ಆ ತಿಂಗಳ 'ಜೀವನ' ಓದುತ್ತಿದ್ದೆ. ಕುಮುದ ಬೆಂಕಿಯ ಪೊಟ್ಟಣಗಳ ನ್ನೆಲ್ಲ ಒಂದಕ್ಕೊಂದು ಕೂಡಿಸಿ ರೈಲುಮಾಡಿ 'ಜುಗುಜುಗು' ಎನ್ನುತ್ತಾ ಅವರಮ್ಮನ ಹತ್ತಿರ ಆಡುತ್ತಿದ್ದಳು. ಲಲಿತೆಗೆ ನಿದ್ದೆ ಬಂದಿರಲಿಲ್ಲ. ಮಗಳ ಆಟವನ್ನೇ ನೋಡುತ್ತ ಸುಮ್ಮನೆ ಮಲಗಿದ್ದಳು. ಮರಿ, ಮುರಿದುಹೋದ, ಒಂದು ಸೀಮೆ ಸುಣ್ಣದ ಪೆಟ್ಟಿಗೆಯನ್ನಿಟ್ಟುಕೊಂಡು ಏನೋ ಯೋಚಿಸುತ್ತಿದ್ದಳು. ಕುಮುದ ಅದನ್ನೇ ಎರಡು ಮೂರು ಬಾರಿ ನೋಡಿದಳು. ಅವಳಿಗೆ ಏನೋ ಹೊಳೆಯಿತು.

'ಮರಿ, ಆ ಪೆಟ್ಟಿಗೆ ಕೊಟ್ಟರೆ ನಿನ್ನ ರೈಲಾಟಕ್ ಸೇರ್ಸ್ಕೊಳ್ತೀನಿ......... ಕೊಡ್ತೀಯಾ ?' ಎಂದು ವಿನಯದಿಂದ ಕೇಳಿದಳು.

ಮರಿ 'ಉಹ್ಞೂ' ಎಂದು ಮುಖ ಸೊಟ್ಟಮಾಡಿತು.

ಕುಮುದ ಸ್ವಲ್ಪ ಹೊತ್ತು ಸುಮ್ಮನಿದ್ದಳು.

ಆದರೆ ಮತ್ತೆ ಮರಿಯನ್ನು ಕೇಳಬೇಕೆನ್ನಿಸಿತು.

'ಮರಿ, ಅದ್ಕೊಟ್ರೆ ಒಂದ್ ಬೆಂಕಿಪೊಟ್ಣ ಕೊಡ್ತೀನಿ....ಕೊಡ್ತೀಯಾ ?.... ನಿನ್ನ ಆಟಕ್ಕೂ ಸೇರಿಸ್ಕೊಳ್ತೀನಿ, ಆಯ್ತಾ ?' ಎಂದು ಅಂಗಲಾಚಿ ನುಡಿದಳು.

ಮರಿಗೆ ಆಸೆಯಾಯಿತೋ, ಏನೊ. ಸಂಧಾನಕ್ಕೆ ಒಪ್ಪಿಕೊಂಡಿತು. ಅದು ಆ ಸೀಮೆಸುಣ್ಣದ ಮರದ ಮುರುಕು ಪೆಟ್ಟಿಗೆಯುನ್ನು ಕೊಟ್ಟು ಒಂದು ಬೆಂಕಿ ಪೊಟ್ಟಣವನ್ನು ತೆಗೆದುಕೊಂಡಿತು. ಕುಮುದ ದೊಡ್ಡ ಕೆಲಸಮಾಡಿ ಗೆದ್ದಂತೆ ಆನಂದದಿಂದ ಆ ಮರದ ಪೆಟ್ಟಿಗೆಯುನ್ನು ಮಗುಚಿ ಹಾಕಿದಳು. ಅದರ ಅಕ್ಕ ಪಕ್ಕದ ಉದ್ದನೆಯ ಹಲಗೆಗಳು ಹೋಗಿರಲಿಲ್ಲ. ಲೇಬಲ್ ಹಚ್ಚಿದ್ದ, ಆ ಕಡೆ ಮತ್ತು ಈ ಕಡೆಯ ಪುಟ್ಟ ಪುಟ್ಟ ಹಲಗೆಗಳು ಅದಕ್ಕಿರಲಿಲ್ಲ. ಪೆಟ್ಟಿಗೆಯುನ್ನು ಮಗುಚಿ ಹಾಕಿದ ಕೂಡಲೆ ಕುಮುದ,

'ಇದು ಸೇತುವೆ !' ಎಂದಳು.

ಲಲಿತ ಏಕೋ, ನನ್ನ ಮುಖ ನೋಡಿದಳು ; ನಾನೂ ಥಟ್ಟನೆ ಆಗ ಅವಳ ಮುಖ ನೋಡಿದೆ. ಬೆಂಕಿಪೊಟ್ಟಣದ ರೈಲು-ಕುಮುದ ಎಕ್ಸ್‌ಪ್ರೆಸ್—ಈ ಕಡೆ ಯಿಂದ ಆ ಪೆಟ್ಟಿಗೆಯ ಒಳಗೆ ಹೊರಟು, ಆ ಕಡೆ ಹೊರಗೆ ಬಂತು. ಕುಮುದ 'ಜುಗು ಜುಗು' ಎನ್ನುತ್ತಿದ್ದಳು. ಮರಿ ಸುಮ್ಮನೆ ನೋಡುತ್ತ ಕುಳಿತಿತ್ತು.

'ಕುಮ್ಮೀ ನಾನು ?' ಎಂದಳು. ತಾನೂ ಒಮ್ಮೆ ರೈಲು ನಡೆಸಬೇಕೆಂದು ಮರಿಗೆ ಆಸೆ. ಆದರೆ ಕುಮುದ ಅಷ್ಟು ಸ್ವಾತಂತ್ರ್ಯ ಕೊಡುವಳೆ !

'ನೀನು ಸೇತುವೆ ನೋಡ್ಕೊಳ್ಳೋನು ! ಆ್ಞ ?' ಎಂದಳು.

ಇಬ್ಬರ ರೈಲು-ಸೇತುವೆ ಆಟ ನಡೆಯುತ್ತಿತ್ತು. ಲಲಿತೆಗೆ ನಿದ್ದೆ ಬಂದಿತ್ತು. ಏನೇನೋ ಮಾತನಾಡುತ್ತ ಎರಡೂ ಬಹಳ ಹೊತ್ತು ಆಡುತ್ತಿದ್ದುವು. ಮರಿಗೆ ನಿದ್ದೆ ಬಂತೊ, ಏನೋ. ಸೇತುವೆ ನೋಡುವ ಕೆಲಸ ಬಿಟ್ಟು, ಹೋಗಿ ತಾಯಿಯ ಮಗ್ಗುಲಲ್ಲಿ ಮಲಗಿಬಿಟ್ಟಿತು. ಕುಮುದ ಒಬ್ಬಳೇ ಮೂರು ಗಂಟೆಯವರೆಗೂ ಆಡುತ್ತಿದ್ದು ಆಮೇಲೆ ಪಕ್ಕದ ಮನೆಗೆ ಹೊರಟುಬಿಟ್ಟಳು. ನನಗೂ ಹಾಗೆಯೇ ಜಂಪು ಹಿಡಿಯಿತು........

೩

ಕಣ್ಣು ಬಿಟ್ಟು, ಕೈ ನೋಡಿಕೊಂಡೆ ; ಆಗಲೇ ನಾಲ್ಕೂವರೆ ! 'ಜೀವನ' ನನ್ನ ಎದೆಯ ಮೇಲೆ ಬಿದ್ದಿತ್ತು. ಲಲಿತ ಇನ್ನೂ ಕಣ್ಣು ಮುಚ್ಚಿ ಮಲಗಿದ್ದಳು.

'ಲಲಿತಾ ! ಲಲಿತಾ ! ನಾಲ್ಕೂವರೆ !..........ಏಳು, ಕಾಫೀಗಿಡು........ ಲಲಿತಾ ! ಲಲಿತಾ ! ಗಂಟೆ ನಾಲ್ಕೂವರೆ !' ಎಂದು ಎಬ್ಬಿಸಿದೆ.

ಲಲಿತ ಎದ್ದಳು.

'ಎಷ್ಟು ಗಂಟೆ ?'

'ನಾಲ್ಕೂವರೆ'

'ಅಬ್ಬ ! ಎಷ್ಟು ಹೊತ್ತು ನಿದ್ದೆ ಮಾಡ್ಬಿಟ್ಟೆ !....ಬೇಗ ಕಾಫಿ ಉಪ್ಪಿಟ್ಟು ಮಾಡ್ಬಿಡ್ತೀನಿ. ಆಮೇಲೆ ಐದು ನಿಮಿಷದಲ್ಲಿ ಜಡೆ ಹಾಕ್ಕೊಂಡ್ಬಿಡ್ತೀನಿ........ ಹೊರಟ್ಬಿಡೋಣ' ಎನ್ನುತ್ತಾ ಮೇಜಿನ ಮೇಲಿದ್ದ ಬೆಂಕಿಪೊಟ್ಟಣವನ್ನೆತ್ತಿಕೊಂಡು ಅಡುಗೆಮನೆಗೆ ಹೋದಳು.

ಪ್ರತಿ ಭಾನುವಾರವೂ ಸಂಜೆ ನಾನು ಲಲಿತ ಮಕ್ಕಳೊಡನೆ ಎಲ್ಲಿಯಾದರೂ ಓಡಾಡಿ ಬರುತ್ತಿದ್ದೆವು. ಒಂದೊಂದು ವಾರ ಸಿನಿಮ. ಒಂದೊಂದು ವಾರ ಪೇಟೆ. ಇಲ್ಲದಿದ್ದರೆ ಊರ ಹೊರಗೆ ಸುಮ್ಮನೆ ಒಂದು ಸುತ್ತು ಹಾಕಿಕೊಂಡು ದೀಪ ಹಚ್ಚು ವುದರೊಳಗಾಗಿ ಮನೆ ಸೇರುವುದು. ಇದು ಪ್ರತಿ ಭಾನುವಾರದ ನಮ್ಮ ಕಾರ್ಯ ಕ್ರಮ.

ಅಂದು ಊಟಕ್ಕೆ ಕುಳಿತಾಗ, ನಾನು ಕುಮುದಳಿಗೆ ಹೇಳಿದ 'ವಾಕಿಂಗ್' ವಿಷಯ ಜ್ಞಾಪಕಕ್ಕೆ ಬಂತು.

ಲಲಿತ 'ವಾಕಿಂಗ್ ಬೇಡ ಇವೊತ್ತು. ಪೇಟೆಗೆ ಹೋಗಿ ಸೀರೆ ತರೋಣ' ಎಂದಳು.

'ಇವೊತ್ತು ಭಾನುವಾರ. ಕೃಷ್ಣಾಜಿ ಅಂಗಡಿ ಬಾಗಿಲು ತೆಗೆದಿರೋದಿಲ್ಲ ; ನಾಳೆ ಹೋಗೋಣ. ಇವೊತ್ತು ಸುಮ್ಮನೆ ಊರಹೊರಗೆ ಸ್ವಲ್ಪ ದೂರ ಹೋಗೋಣ' ಎಂದು ನಾನಂದೆ. ಸಂಜೆ, ಊರ ಹೊರಗಿನ ಕೆರೆಯ ಕಡೆ ವಾಕಿಂಗ್ ಹೋಗು ವುದು, ಎಂದು ನಿಶ್ಚಯವಾಯಿತು.

ಲಲಿತ ಬೇಗ ಕಾಫಿ ತಿಂಡಿ ಮಾಡಿದಳು. ಮರಿ ಅಷ್ಟು ಹೊತ್ತಿಗೆ ನಿದ್ದೆ ಯಿಂದೆದ್ದಳು. ಕಾಫಿಯ ಹೊತ್ತು, ಒಗ್ಗರಣೆಯ ವಾಸನೆ ಎರಡೂ ಕುಮುದಳಿಗೆ ಗೊತ್ತಾಗಿರಬೇಕು. ಆದ್ದರಿಂದಲೇ ಅವಳೂ ಹೊತ್ತಿಗೆ ಸರಿಯಾಗಿ ಬಂದು ಬಿಟ್ಟಳು. ಎಲ್ಲರ ಫಲಾಹಾರ ಮುಗಿಯಿತು.

ಲಲಿತ ಮಕ್ಕಳಿಗೆ ಜಡೆ ಹಾಕಿ ಹೂ ಮುಡಿಸಿದಳು. ಅವುಗಳಿಗೆ ಬಟ್ಟೆಹಾಕುವ ಕೆಲಸ ನನ್ನದಾಯಿತು. ಕುಮುದ, ಮರಿ—ಇಬ್ಬರಿಗೂ ಮಲ್ಲಿನ ತುಂಬು ನರಿಗೆಯ ಒಂದೇ ಮಾದರಿಯ ಲಂಗಗಳನ್ನು ತೊಡಿಸಿದೆ. ಎರಡು ಹಕ್ಕಿಗಳೂ ನೋಡುವುದಕ್ಕೆ ಬಲು ಮುದ್ದಾದುವು.

ಲಲಿತ, ತನ್ನ ನೀಳವಾದ ಕೂದಲಿಗೆ 'ಜ್ಯಾಸ್ಮಿನ್' ಕೊಬ್ಬರಿಯೆಣ್ಣೆ ಹಚ್ಚಿ, ದಂತದ ಬಾಚಣಿಗೆಯಿಂದ ಅದನ್ನು ಬಾಚುತ್ತಿದ್ದಳು. ಹೊಳೆಯುತ್ತಿದ್ದ ಅವಳ ಕಪ್ಪುಕೂದಲನ್ನು ಹಿಂಡಿ ಹಿಡಿದಿದ್ದ ಎಣ್ಣೆಗೆಂಪಿನ ಅವಳ ತುಂಬುಕೈ ತುಂಬ ಚೆಲುವಾಗಿತ್ತು. ಕೈಯೊಳಗಿನ ಹರಳಿನ ಉಂಗುರ ನನ್ನನ್ನೇ ನೋಡುತ್ತಿತ್ತು. ಬಾಚಣಿಗೆ ಹಿಡಿದ ಬಲಗೈಯಿನ ಆಟಕ್ಕೆ ಸರಿಯಾಗಿ, ಆ ಕೈಯೊಳಗಿನ ಬಣ್ಣಬಣ್ಣದ ಬಳೆಗಳ ಸಾಲು ಗುಲುಕು ಗುಲುಕು ತಾಳ ಹಾಕುತ್ತಿದ್ದುವು. ಹಣಿಗೆಗೆ ಒಂದೆರಡು ಸಿಕ್ಕು ಸಿಕ್ಕಾಗ ಲಲಿತೆಯ ಮುಖ ಸೊಟ್ಟ ಆಯಿತು. ಆದರೆ ಅದರಲ್ಲೊಂದು ಚೆಲುವಿತ್ತು....ಬಾಚಿ ಜಡೆ ಹೆಣೆದುಕೊಂಡಳು.

'ನೀವು ರಿಬ್ಬನ್ ಚೆನ್ನಾಗ್ ಕಟ್ತೀರೀಂದ್ರೆ....ಸ್ವಲ್ಪ ಕಟ್ಟಿ.'

'ಓಹೋ ಅದಕ್ಕೇನು !' ಎನ್ನುತ್ತಾ ಜರಿಯ ಗೀರು ಗೀರು ತುಂಬಿದ ಗಿಣಿಹಸುರಿನ ರಿಬ್ಬನ್ನನ್ನು ಕೈಗೆ ತೆಗೆದುಕೊಂಡು ಜಡೆಗೆ ಹಾಕುವುದರಲ್ಲಿದ್ದೆ ; ಸ್ವಲ್ಪ ಕೀಟಲೆ ಮಾಡೋಣ ಎನ್ನಿಸಿತು.

'ಅಯ್ಯೊ, ಏನು ಹೆಂಗಸರೋ ! ನಾವು ಬೂಟ್ಸ್‌ಗೆ ಹಾಕೋ ಗಂಟನ್ನು ಜಡೇಗ್ ಹಾಕ್ಕೊಳ್ತಾರೆ ! ನಮ್ ಕಾಲಿಂದು ಇವರ್ತಲೇಗೆ !' ಎಂದು ಸ್ವಗತ ಕೂಗಿಕೊಂಡೆ.

'ಹಾಗಾದ್ರೆ ನಿಮ್ ಗಂಟೇನ್ ಬ್ಯಾಡ....ಇಲ್ಕೊಡಿ....ನನಗ್ ಹ್ಯಾಗ್ ಬರುತ್ತೋ ಹಾಗ್ ಹಾಕ್ಕೊಳ್ತೀನಿ' ಎಂದು ಸಿಡುಕಿನಿಂದ ಹೇಳಿದಳು.

'ಇಲ್ಲ ಕಣೆ....ಇಲ್ಲ....ಇಲ್ಲ. ಹೆಂಗಸು ಜಡೇ ತುದೀಗ್ ಹಾಕ್ಕೊಳ್ಳೋ ರಿಬ್ಬನ್‌ನ ಗಂಡಸ್ರು ಕುತ್ತಿಗೇಗ್ ಕಟ್ಕೊಳ್ತಾರೆ !....ಈಗ್ ಸರಿಯಾ ನಾ ಹೇಳೋದು ?' ಎನ್ನುತ್ತಾ ರಿಬ್ಬನ್ ಹಾಕಿದ ಜಡೆಯನ್ನು ಅವಳ ಭುಜದ ಮೇಲಿಂದ ಅವಳ ಮುಂದೆ ಬಿಟ್ಟೆ. ಎದುರಿಗಿದ್ದ ಕನ್ನಡಿಯಲ್ಲಿ ಅವಳ ಮುಖ ನೋಡಿದೆ. ಆ ಮುಖದಲ್ಲಿ ಅರೆನಗು ಮೂಡಿತ್ತು ; ಕಣ್ಣು ಜಡೆಯ ರಿಬ್ಬನ್ನನ್ನೇ ನೋಡುತ್ತಿತ್ತು. ನಾನು ಈ ಕಡೆ ಬಂದು ಬಿಟ್ಟೆ.

ಬೆಳಗ್ಗೆ ಹಾಲಿನವಳು ತಂದುಕೊಟ್ಟಿದ್ದ ಮಲ್ಲಿಗೆ ಮೊಗ್ಗಿನಲ್ಲಿ ನೂರು ದಂಡೆ ಮಾಡಿದ್ದಳು. ಪುಟ್ಟ ಪುಟ್ಟ ಎರಡನ್ನೂ ಮಕ್ಕಳಿಗೆ ಮುಡಿಸಿದ್ದಳು. ಅವಳ ಜಡೆಗೆ ಮಲ್ಲಿಗೆ ಮೊಗ್ಗಿನ ದಂಡೆಯನ್ನು ಮುಡಿಸುವ ಕೆಲಸ ನನಗೆ ಬಿತ್ತು. ಅವಳ ಕೂದಲಿಗೆ, ಪುಟ್ಟ ಪುಟ್ಟ ದುಂಡು ಮಲ್ಲಿಗೆಯ ಆ ದಂಡೆ ಬಲು ಸೊಗಸಾಗಿ ಒಪ್ಪಿತು. ಮತ್ತೊಮ್ಮೆ ಮುಖ ತೊಳೆದುಕೊಂಡು ಕುಂಕುಮ ಹಚ್ಚಿಕೊಂಡರೆ, ಅವಳ ಅಲಂಕಾರ ಮುಕ್ತಾಯವಾದಂತೆ

ಕೈ ನೋಡಿಕೊಂಡೆ. ಗಂಟೆ ಐದೂಮುಕ್ಕಾಲು. 'ಲಲಿತಾ, ಆರು ಗಂಟೆಗೆ ಸರಿಯಾಗಿ ಹೊರಟ್ಬಿಡ್ಬೇಕು. ಬಹಳ ಹೊತ್ತಾಗ್ಹೋಯ್ತು' ಎಂದೆ.

ಅವಳು ಕುಂಕುಮ ಹಚ್ಚಿಕೊಳ್ಳುತ್ತಿದ್ದಳು. ಕಲಸಿದ ಕರಿಗೆಂಪಿನ ಕುಂಕುಮದ ಬೊಟ್ಟು, ಆ ಕಪ್ಪು ಹುಬ್ಬಿನ ನಡುವೆ ನಿಂತು ನೋಡಿತು. ನನಗೇಕೋ ಅದು ಸರಿ ಬೀಳಲಿಲ್ಲ.

'ಲಲಿತಾ, ಹಾಗಲ್ಲ ಕುಂಕುಮ ಹಚ್ಕೊಳ್ಳೋದು....ದಿನವೂ ಹೀಗೇ......ಇನ್ನು ಸ್ವಲ್ಪ ಮೇಲೆ....ಹುಬ್ಬಿನ ನಡುವೆ ಇಟ್ಕೊಂಡ್ಬಿಟ್ಟಿದೀಯೆ !? ಕುಂಕುಮ ಇರೋದು ಹಣೇಗಲ್ವೆ ?' ಎಂದೆ.

ಅವಳು ಅದನ್ನಳಿಸಿ ಹಣೆಯ ಮೇಲಿಟ್ಟುಕೊಳ್ಳಲು ಬಹಳ ಪ್ರಯತ್ನ ಪಟ್ಟಳು. ಮೂರು ನಾಲ್ಕು ಬಾರಿ ಇಟ್ಟು ಇಟ್ಟು ಅಳಿಸಿದಳು....

'ಓ ಽ ಽ; ಇನ್ನು ಇವೊತ್ತು ಇಲ್ಲೇ ಕತ್ತಲಾಗ್ಹೋಗುತ್ತೆ !'

'ಹಾಗಾದ್ರೆ ನೀವೇ ಇಡ್ಬನ್ನಿ....ಅದ್ಹೇಗೊ ನಂಗ್ಬರೊಲ್ಲ.'

'ಹ್ಞಾ........ಅದೂ ಆಗಲಿ....ಅಪ್ಪಣೆ' ಎನ್ನುತ್ತ ಕುಂಕುಮದ ಭರಣಿಯನ್ನು ತೆಗೆದುಕೊಂಡೆ. ನನ್ನ ಬೆರಳಿನ ತುದಿಯಲ್ಲಿ ಕುಂಕುಮದ ಪುಟ್ಟ ಬೊಟ್ಟುಮಾಡಿಕೊಂಡು ಅವಳ ಹಣೆಯ ಮೇಲಿಡುವಾಗ ಅವಳ ನಾಸಿಕ ನನ್ನ ಅಂಗೈಗೆ ಮುತ್ತು ಕೊಟ್ಟಿತು ; ನನ್ನ ಅಂಗೈ ಅವಳ ತುಟಿಗೆ ಮುತ್ತನೊತ್ತಿತು. ನನ್ನ ಕೈಯೊಳಗಿನ ತುದಿಬೆರಳುಗಳೆರಡೂ ಅವಳ ತುಂಬುಗಲ್ಲಗಳನ್ನಪ್ಪಿ ನಿಂತಿದ್ದುವು. ಆ ಚೆಲುವಾದ ಮುಖಕ್ಕೆ ನಾನಿಟ್ಟ ಕುಂಕುಮದ ಬೊಟ್ಟು, ಅವಳ ಶೃಂಗಾರಕ್ಕೆ ಮುಕ್ತಾಯ ಕೊಟ್ಟಿತು ; ಅವಳ ಚೆಲುವಿಗೆ ಮಂಗಳ ಹಾಡಿತು. ಆಮೇಲೆ, ಅವಳು ಕರಿಯಂಚಿನ ತೆಳುವಾದ ಬಿಳಿಸೀರೆಯನ್ನುಟ್ಟು, ತುಂಬುನೆರಿಗೆಯ ಮಲ್ಲಿನ ಬಿಳಿಕುಪ್ಪಸವನ್ನು ತೊಟ್ಟಳು.

ನನ್ನ ಲಲಿತ, ತುಟಿಗೆ ರಂಗು ಹಾಕುವುದಿಲ್ಲ ; ಮುಖಕ್ಕೆ ಹಿಟ್ಟು ಹೊಡೆಯುವುದಿಲ್ಲ ; ಗಲ್ಲಕ್ಕೆ ಬಣ್ಣ ತೋರಿಸುವುದಿಲ್ಲ. ಎಲ್ಲ ದೇವರು ಕೊಟ್ಟಿದ್ದಾನೆ. ಅವಳು ಚೆಲುವೆ. ನನಗಂತೂ ತುಂಬ ಚೆಲುವೆ.

ಸರಿ. ಆರು ಗಂಟೆ ಐದು ನಿಮಿಷಕ್ಕೆ ಬಾಗಿಲಿಗೆ ಬೀಗ ಬಿತ್ತು. ಇಬ್ಬರೂ ಮಕ್ಕಳೊಡನೆ ಊರ ಹೊರಗೆ ಹೊರಟೆವು. ಆರೂವರೆಯ ಹೊತ್ತಿಗೆ ನಾವು ಹೊಂಗೆಯ ಮರದ ರಸ್ತೆಗೆ ಬಂದೆವು.

ಗಾಳಿ ತಣ್ಣಗೆ ಬೀಸುತ್ತಿತ್ತು. ರಸ್ತೆಯ ಅಕ್ಕಪಕ್ಕದಲ್ಲಿ, ಹಚ್ಚನೆಯ ಚಿಗುರೆಲೆ ತುಂಬಿದ ದಟ್ಟವಾದ ಹೊಂಗೆಮರಗಳ ಸಾಲು ; ಮರದ ನೆಳಲು ಬಿಳಿ ಹೂವಿನ ಸುಪ್ಪತ್ತಿಗೆ ಹಾಸಿಕೊಂಡು 'ಬಾ, ಕುಳಿತುಕೊ' ಎಂದು ಕರೆಯುತ್ತಿತ್ತು. ಕುಮುದ ಓಡಿ ಹೋಗಿ ಒಂದೆರಡು ಹೂ ತಂದಳು. 'ಅಮ್ಮ, ಎಷ್ಟು ಪುಟ್ಟ ಪುಟ್ಟ ಹೂವು !' ಎಂದು ಮರಿ ಆಶ್ಚರ್ಯಪಟ್ಟಿತು.

ಕುಮುದ 'ಅಮ್ಮ ರೈಲು !' ಎಂದಳು. ಆಗ ಶಿವನೂರಿನ ರೈಲು ಬರುವ ಹೊತ್ತಾಗಿತ್ತು ; ಅದು ಎಲ್ಲೊ 'ಕೂ' ಎಂದು ಕೂಗುತ್ತಿತ್ತು. ಸ್ವಲ್ಪ ಹೊತ್ತಿನಲ್ಲಿಯೆ ಅದರ ಮುಖ ಕಾಣಿಸಿತು. ನಮಗೆ ಹತ್ತಿರದಲ್ಲಿಯೆ ಆ ರೈಲು, ಆ ಕಡೆ ಹೊರಟು ಹೋಯಿತು. ಅದನ್ನು ನೋಡಿ ಮರಿ, ಕುಮುದ ಇಬ್ಬರಿಗೂ ಬಹಳ ಆನಂದ. ಅವರು ಮಧ್ಯಾಹ್ನ ಆಡುತ್ತಿದ್ದ ರೈಲಾಟ ನನಗೆ ನೆನಪಾಯಿತು ; ಸೀಮೆ ಸುಣ್ಣದ ಪೆಟ್ಟಿಗೆಯ ಸೇತುವೆ ಜ್ಞಾಪಕಕ್ಕೆ ಬಂತು. ಆಗ ನನಗೊಂದು ವಿಷಯ ಹೊಳೆಯಿತು.

ನಾವು ಆಗಲೇ ಕೆರೆಯ ಹತ್ತಿರ ಬಂದಿದ್ದೆವು.

'ಲಲಿತ, ನೀನು ನೋಡ್ಬೇಕೂ ನೋಡ್ಬೇಕೂಂತಿದ್ದೆಯಲ್ಲ, ಅದಿಲ್ಲೇ ಇದೆ' ಎಂದೆ.

'ಏನು ! ಯಾವುದೂಂದ್ರೆ ?......ನನಗೆ ನೆನಪೇ ಇಲ್ಲ !'

'ಗುಡ್ಡ......'

'ಓ ಽ, ನಾಲೇನ !'

'ಹ್ನು, ಅದೇ, ಇಲ್ಲೇ-ಈ ಕೆರೆ ಪಕ್ಕದಲ್ಲೇ. ಆ ಕಡೆ ಗುಡ್ಡ ಕಾಣಲ್ವೆ ? ಅದೇ ! ಆ ಗುಡ್ಡದಲ್ಲೆ, ನೀರು ಹಾಯ್ಸೋಕೆ ಸುರಂಗ ಮಾಡಿರೋದು: ಮೊನ್ನೆ, ನಮ್ಮ ಸ್ಕೂಲ್‌ನಲ್ಲಿದಾರಲ್ಲ, ರಾಮಯ್ಯನೋರು......ಅವರು ಅವರ್ಹೆಂಡ್ತಿ ಎಲ್ಲ ಬಂದಿ

ದ್ರಂತೆ. ಈವಾಗೇನ್ ನೀರ್ ಬಿಡೋದಿಲ್ವಂತೆ, ನಿಲ್ಲಿಸ್ಬಿಟ್ಟಿದಾಗಂತೆ. ಗುಡ್ಡದೊಳಗ ಹೋಗೋಕೆ ಬಹಳ ಚೆನ್ನಾಗಿರುತ್ತೇಂತ ಹೇಳಿದರು. ಎರಡು ಫರ್ಲಾಂಗಿದೆ. ಆದ್ರೂ ಮೇಲ್ಗಡೆಯಿಂದ ಗಾಳಿ ಬೆಳಕು ಬರೋಹಾಗ್ಮಾಡಿರೋದ್ರಿಂದ ಸುಖವಾಗಿ ಹೋಗಿ, ಆ ಕಡೆ ಬಂದ್ಬಿಡಬಹುದಂತೆ.'

'ಈಗ ಹೊತ್ತಾಗಲಿಲ್ಲವೆ ?'

'ಏನಿಲ್ಲ. ಇನ್ನೂ ಏಳು ಗಂಟೆ. ಏಳೂವರೆಗೆ ಆ ಕಡೆ ಬಂದ್ಬಿಡಬಹ್ದು. ಸೂರ್ಯ ಮುಳುಗೋದು ಏಳೂವರೆಗೆ'

ಸೂರ್ಯ ಇನ್ನೂ ದೂರದ ಬೆಟ್ಟದ ಮೇಲೆ, ಅದಕ್ಕೆ ದೂರದಲ್ಲಿಯೇ ನಿಂತಿದ್ದ. ಹೊಂಬಿಸಲು ಬಯಲಿನಲ್ಲೆಲ್ಲ ಹರಡಿತ್ತು. ಆಕಾಶದಲ್ಲಿ ಇನ್ನೂ ಕೆಂಪಿನ ಸುಳಿವೇ ಇರಲಿಲ್ಲ. ಸೂರ್ಯ ಬೆಟ್ಟದ ಶಿಖರಕ್ಕೆ ಮುತ್ತಿಕ್ಕಿದಾಗ ಬಾನು ಕೆಂಪಗಾದೀತು. ಅದಕ್ಕೆ ಇನ್ನೂ ಕಾಲುಗಂಟೆಯಾದರೂ ಬೇಕು. ಸರಿ, ಗುಡ್ಡದೊಳಗೆ ಹೋಗುವ ನಿಶ್ಚಯ ಮಾಡಿದೆವು. ಗುಡ್ಡದ ಬಾಯಿಯಲ್ಲಿಳಿಯುವುದಕ್ಕೆ ಮೊದಲು ಲಲಿತ, ನಾನು ಇಬ್ಬರೂ ಕೆರೆಯನ್ನು ನೋಡಿದೆವು. ಕೆರೆಯ ತುಂಬ ನೀರು ತುಂಬಿತ್ತು ; ಅಂದು ನಮ್ಮೂರ ಕೆರೆ ಸರೋವರದಂತಿತ್ತು. ಬಿಳಿಹಕ್ಕಿಗಳು ಬೆಸ್ತರವನ ಕೆಲಸ ಮಾಡಿ ಸಾಕಾಗಿ ಕರಿ ಗುಡ್ಡದ ಹಿನ್ನೆಲೆಯ ಮೇಲೆ ಬಿಳಿಯ ಚಿತ್ತಾರ ಬರದಂತೆ, ಸಾಲು ಸಾಲಾಗಿ, ಬಳ್ಳಿ ಬಳ್ಳಿಯಾಗಿ ಹಾರಾಡಿದುವು ; ಎಲ್ಲಿಗೋ ಹೋದುವು ; ಬೆಳ್ಳಿಯ ಬಳ್ಳಿ ! ಮಿಂಚಿನ ಬಳ್ಳಿ ! ಕೆಲವು ಹಕ್ಕಿಗಳು ಇನ್ನೂ ಕೆಲಸ ಬಿಟ್ಟು ಮೇಲೆದ್ದಿರಲಿಲ್ಲ. ತುಳುಕು ಪುಳುಕು ಶಬ್ದಮಾಡುತ್ತ ನೀರಿನ ಮೇಲ್ಮೈಯನ್ನು ಕುಲುಕಿ ತೇಲಿಸುತ್ತಿದ್ದುವು. ನೀರಿನ ಮೇಲೆ ಬಿದ್ದ ಸಂಜೆಬಿಸಿಲು ನಮ್ಮೂರಿನ ಕೆರೆಯನ್ನು ಹೊಳೆಯುವ ಹೊನ್ನಿನ ಕೆರೆಯನ್ನಾಗಿ ಮಾಡಿತ್ತು. ಆ ಸೌಂದರ್ಯವನ್ನು ನೋಡಿ ಗುಡ್ಡದ ಬಸಿರಿನೊಳಗೆ ಹೋದೆವು. ಕುಮುದ ಮುಂದೆ ಮುಂದೆ ನಡೆಯುತ್ತಿದ್ದಳು. ನನ್ನ ಹಿಂದೆ ಲಲಿತ ಮಗುವನ್ನೆತ್ತಿಕೊಂಡು ಬಂದಳು. ಒಳಗೆ ಹೆಚ್ಚು ಕತ್ತಲಿರಲಿಲ್ಲ. ಮೇಲೆ ಅಲ್ಲಲ್ಲಿ ಗವಾಕ್ಷಿಗಳಿದ್ದುವು. ಗಾಳಿಯೂ ಹೆಚ್ಚು ಬಿಸಿಯಾಗಿರಲಿಲ್ಲ. ಬೇಗ ಬೇಗ ನಡೆಯುತ್ತಿದ್ದೆವು. ಆದರೆ ಲಲಿತ ನನ್ನ ಜೊತೆಯಲ್ಲಿ ಕಾಲು ಹಾಕಲಾರಳು. ಅವಳು ಹಿಂದೆ ಉಳಿಯುತ್ತಿದ್ದಳು. ಅರ್ಧದಾರಿ ಬಂದಿದ್ದೆವು. 'ಇನ್ನೇನು ಮುಗಿಯಿತು' ಎಂದು ನಾನಂದೆ.

ಲಲಿತ 'ನೀವು ಬೆಳಗ್ಗೆ, ಈ ಪ್ರಪಂಚ ಒಂದು ಸೇತುವೆ: ಆದರ ಮೇಲೆ ನಾವು ಹೋಗ್ತಿದೇವೆ, ಅಂದರಲ್ಲ ! ಈಗ ಪ್ರಪಂಚ ಮೇಲೆ ; ನಾವು, ಅದರ ಕೆಳಗೆ ಹೋಗ್ತಿದೇವೆ' ಎನ್ನುತ್ತಾ ನಕ್ಕಳು. ನನಗೂ ನಗು ಬಂತು.

'ಹೌದು ಲಲಿತ, ಸೇತುವೆ ಕೆಳಗೆ ಹೋಗ್ತಾ ಇದೇವೆ—ಕುಮುದನ್ ರೈಲು ಹೋದ್ಹಾಗೆ!' ಎಂದೆ.

ಲಲಿತೆಗೂ ನನಗೂ ಅರೇ ಮಾರು ದೂರ ಇತ್ತು. ಗುಡ್ಡದ ತುದಿ ನಮಗೆ ಐವತ್ತು ಅರವತ್ತು ಗಜ ದೂರದಲ್ಲಿತ್ತು. ಹಿಂದೆ ಏನೋ ಸಪ್ಪಳವಾಯಿತು. ಹಿಂದಿರುಗಿ ನೋಡಿದೆ. ಲಲಿತ ಕಪ್ಪಗೆ ನೆರಳಾಗಿ ನನ್ನ ಹಿಂದೆ ಬರುತ್ತಿದ್ದಳು. ಅವಳ ಹಿಂದೆ ಬಹು ದೂರದಲ್ಲಿ ಕೆರೆಯ ತೂಬು ಕಾಣುತ್ತಿತ್ತು. ಅಲ್ಲಿ ಏನೋ ಹೊಳೆಯಿತು. ನಿಂತು ನೋಡಿದೆ....ನೀರು ಬರುತ್ತಿತ್ತು! ಈ ಕಡೆಯೆ! ನೀರು!

'ಲಲಿತಾ, ನೀರು! ಬೇಗ ಬಾ, ಓಡಿ ಬಾ, ಬೇಗ ಹೊರಟ್ಹೋಗೋಣ....' ಎಂದು ಅವಳಿಗಾಗಿ ನಿಂತೆ....ಅವಳು ನಡುಗುತ್ತ, ಮಾತಾಡದೆ ಮರಿಯನ್ನು ನನ್ನ ಕೈಗೆ ಕೊಟ್ಟು, ಸೀರೆಯ ನೆರಿಗೆಯನ್ನು ಮೇಲಕ್ಕೆ ಕಟ್ಟಿಕೊಂಡು ಓಡಲು ಮೊದಲು ಮಾಡಿದಳು. ನಾನು ಹೆಗಲ ಮೇಲೆ ಮರಿಯನ್ನು ಹಾಕಿಕೊಂಡು, ಬಲಗೈಯಲ್ಲಿ ಕುಮುದೆಯ ರಟ್ಟೆಹಿಡಿದೆತ್ತಿಕೊಂಡು ಲಲಿತೆಗಿಂತ ಮುಂದೆ ಓಡಿದೆ; ಅವಳಿಗೆ ಬಹಳ ದೂರವಾದೆ. ಮಕ್ಕಳನ್ನೆತ್ತಿ ಮೇಲೆ ಹಾಕಿ, ಲಲಿತೆಯನ್ನೆತ್ತಿಕೊಂಡು ಓಡಿಬಂದು ಬಿಡೋಣ ಎಂದುಕೊಂಡು ಹಾಗೆ ಮಾಡಿದೆ. ನೀರಿನ ಸಪ್ಪಳ ಜೋರಾಯಿತು. ಬೇಗ ಹೊರಗೆ ಬಂದೆ. ಎರಡು ಮಕ್ಕಳನ್ನೂ ದಡಕ್ಕೆ ಹಾಕಿ ಮತ್ತೆ ಗುಡ್ಡದೊಳಗೆ ಹಾರಿದೆ....ದೂರದಲ್ಲಿ ಬೆಳಕು ಕಾಣಿಸಿತು. ಅದು ಗುಡ್ಡದ ಆ ಬಾಯಿ. ಒಳಗೆ ಲಲಿತ ಕಾಣಿಸಲೇ ಇಲ್ಲ! ಆ ಕಡೆಯಿಂದ ನೀರು, ಗುಂಡು ಹೊಡೆದಂತೆ 'ಧಡಿಲ್' ಎಂದು ನನ್ನನ್ನಪ್ಪಳಿಸಿತು. ದಡಕ್ಕೆ ಹಾರುವ ಪ್ರಯತ್ನ ಮಾಡಿದೆ. ಕೈಗೆ ಏನೋ ಸಿಕ್ಕಿತು; ಅದನ್ನು ಬಲವಾಗಿ ಹಿಡಿದುಕೊಂಡೆ....

ಕಣ್ಣುಬಿಟ್ಟು ನೋಡಿದೆ. ನನ್ನ ತಲೆ ಗಿರ್ರನೆ ತಿರುಗುತ್ತಿತ್ತು; ನೀರು ನನ್ನನ್ನೊಮ್ಮೆ ಮುಳುಗಿಸಿ, ಮುಂದೆ ಹೋಗಿತ್ತು. ನಾನು ಬಲವಾಗಿ ಹಿಡಿದಿದ್ದ ಈಚಲು ಎಲೆ ನನ್ನ ಅಂಗೈಯನ್ನು ಕೊಯ್ದುಬಿಟ್ಟಿತ್ತು; ಮೈಯೆಲ್ಲ ರಕ್ತವಾಗಿತ್ತು. ಆದರೂ ಆ ಪುಟ್ಟ ಈಚಲು ಗಿಡ ನನ್ನನ್ನುಳಿಸಿಬಿಟ್ಟಿತ್ತು. ದಡದ ಮೇಲೆ ನೋಡಿದೆ; ಮೇಲೆ ಬಂದೆ. ಕುಮುದ, ಮರಿ—ಇಬ್ಬರೂ ಚಿಟ್ಟನೆ ಚೀರಿ ಅಳುತ್ತಿದ್ದರು.

'ಲಲಿತ? ಅಯ್ಯೋ, ಲಲಿತ ಎಲ್ಲಿ?' ನೀರು ಅವಳನ್ನು ಕೊಚ್ಚಿಕೊಂಡು ಹೋಯಿತು! ನನ್ನ ತಲೆ ಕೆಟ್ಟುಹೋಯಿತು. ನನಗೆ ಆಗ ಏನೂ ತೋಚಲಿಲ್ಲ.

ಕುಮುದ 'ಅಯ್ಯೋ, ಅಮ್ಮ! ಅಮ್ಮಾ! ಅಮ್ಮ ಎಲ್ಲಣ್ಣಾ?' ಎಂದು ಕೇಳಿದಳು,

ಮಿಂಚಿನಂತೆ ಹೋಗುತ್ತಿದ್ದ ಪ್ರವಾಹವನ್ನೇ ನೋಡುತ್ತ 'ಅಮ್ಮ ಸತ್ತು ಹೋದಳು ! ಅವಳು ಇನ್ನು ಬರೋದಿಲ್ಲ' ಎಂದೆ.

ಆಗ ನನಗೆ ತೋರಿದ್ದೊಂದೇ ಉಪಾಯ.

ಇಬ್ಬರು ಹುಡುಗರನ್ನೂ ದಡದ ಮೇಲೆ ನಿಲ್ಲಿಸಿಕೊಂಡೆ. ಇಬ್ಬರನ್ನೂ ನೀರಿಗೆ ಹಾಕಿ ನಾನೂ ಬಿದ್ದುಬಿಡೋಣ ಎಂದು ನಿಶ್ಚಯಿಸಿಕೊಂಡೆ.

ಕುಮುದೆಗೆ ಈ ವಿಷಯ ತಿಳಿಯಲಿಲ್ಲ.

'ಅಣ್ಣಾ, ಅಮ್ಮ ಸತ್ತುಹೋಗ್ಬಿಟ್ಟಳು. ನೀನೂ ಹೋಗ್ಬಿಟ್ಟದ್ರೆ ನಮುಗ ನ್ನಾನೇ ಹಾಕೋರಿರ್ತ್ತಿರ್ಲಿಲ್ಲ' ಎಂದಳು.

ಆ ಮಾತು ಕೇಳಿ ನನ್ನ ಮನಸ್ಸು ಬದಲಾಯಿಸಿತು. ಎರಡು ಮಕ್ಕಳನ್ನೂ ಅಪ್ಪಿಕೊಂಡು ದಡದ ಮೇಲೆ ಸುಮ್ಮನೆ ಕುಳಿತುಬಿಟ್ಟೆ. ಆಗ ಕತ್ತಲು ಕವಿಯು ತ್ತಿತ್ತು.

'ಲಲಿತಾ ಹೋಗ್ಬಿಟ್ಟಳು. ನನ್ನ ಹೆಂಡತಿ ! ನನ್ನ ಲಲಿತಾ ಹೋಗ್ಬಿಟ್ಟಳು! ಲಲಿತಾ ! ಅಯ್ಯೋ' ಎಂದು ಕೂಗಿಕೊಂಡೆ.

'ತೂಬು ಒಡೆದುಹೋಯ್ತು ! ಅಯ್ಯೋ ತೂಬು ಒಡೆದುಹೋಯ್ತು !' ಎಂದು ಜನ ಓಡಿಬಂತು.

ಅವರಿಗೆ ಎಲ್ಲ ತಿಳಿಯಿತು. ಪ್ರವಾಹ ಬಹಳ ದೂರ ಹೋಗಿಬಿಟ್ಟಿತ್ತು. ತುಂಬಿದ ಕೆರೆ ತನ್ನ ನೀರನ್ನೆಲ್ಲ ಲಲಿತೆಯ ಸಾವಿಗೆ ಬಿಟ್ಟಿತ್ತು ; ಪ್ರವಾಹ ಅವಳನ್ನೆತ್ತಿ ಕೊಂಡು ನಡೆದುಬಿಟ್ಟಿತ್ತು...........ಎಷ್ಟು ಹುಡುಕಿದರೂ ಹೆಣ ಸಿಕ್ಕಲೇ ಇಲ್ಲ. ಮೂರು ದಿನ ಆಯಿತು ; ನಾಲ್ಕು ದಿನ ಆಯಿತು; ಸಿಕ್ಕಲೇ ಇಲ್ಲ. ನಾವು ಮೂವರೇ ಮನೆಯಲ್ಲುಳಿದೆವು. ನಮ್ಮ ಚಿಕ್ಕಮ್ಮನಿಗೆ ತಂತಿಕೊಟ್ಟು ಕರೆಸಿದೆ. ಅವಳು ಹೊಟ್ಟೆ ಹೊಟ್ಟೆ ಬಡಿದುಕೊಂಡು ಅತ್ತಳು.

ಪೋಲೀಸಿನವರು ನನ್ನ ಹೇಳಿಕೆ ತೆಗೆದುಕೊಳ್ಳುತ್ತ ನನಗೆ ಏನೇನೋ ಪ್ರಶ್ನೆ ಹಾಕಿದರು : 'ಮನೆಯೊಳಗೆ ಆಗಾಗ ಜಗಳ ಆಡುತ್ತಿದ್ದಿರಾ ? ಅವೊತ್ತು ಏನಾ ದರೂ ಮನಸ್ತಾಪ ಉಂಟಾಗಿತ್ತೆ ? ನೀವೇನಾದರೂ ಅಂದಿದ್ದಿರಾ ?....ನೀವೆಷ್ಟು ದೂರ ಇದ್ದಿರಿ ? ಅವರೆಷ್ಟು ದೂರ ಇದ್ದರು ?......ಅವರೇಕೆ ಅಷ್ಟು ದೂರ ಇದ್ದರು

ಬೇಗ ಹೋಗಿ ಅವರನ್ನೇಕೆ ತರಲಾಗಲಿಲ್ಲ? ನೀವು ಮುಂಚೆ ಬಂದುಬಿಟ್ಟಿರಿ, ಅಲ್ಲವೆ?' ಇವೇ ಅವರ ಪ್ರಶ್ನೆಗಳು. ನನಗೆ ತಡೆಯಲಾಗಲಿಲ್ಲ.

'ನೀವು ನನ್ನನ್ನೇನೂ ಕೇಳಬೇಡಿ' ಎಂದು ಗದರಿಸಿಬಿಟ್ಟೆ. ನನ್ನ ಸಂಕಟ ಈ ಬೀದಿಯ ಜನಕ್ಕೇನು ಗೊತ್ತು? ಕೇಳಬಾರದ ಪ್ರಶ್ನೆಗಳನ್ನೆಲ್ಲ ಕೇಳುತ್ತಾರೆ. 'ಅಯ್ಯೋ ಲಲಿತಾ!' ಎಂದುಕೊಂಡು ಮಂಕನಂತೆ ಸುಮ್ಮನೆ ಕುಳಿತುಬಿಟ್ಟೆ. ನಮ್ಮ ಚಿಕ್ಕಮ್ಮ, ಪೋಲೀಸಿನವರನ್ನು ಕುರಿತು 'ಅವನನ್ನೇನೂ ಕೇಳಬೇಡಿರಪ್ಪಾ, ಸ್ವಲ್ಪ ಸುಮ್ನಿರಿ' ಎಂದಳು........

ಭಾನುವಾರ. ಲಲಿತ ಹೋಗಿ ಒಂದು ವಾರವಾಯಿತು. ಅವಳ ದೇಹ ಸಿಕ್ಕಲೇ ಇಲ್ಲ. ರಾತ್ರಿ ಹನ್ನೊಂದು ಗಂಟೆಯ ಸಮಯ. ಗೋಡೆಗೆ ಒರಗಿ ಕೊಂಡು, ಎರಡು ಕೈಗಳಲ್ಲಿಯೂ ಆ ನನ್ನ ಭಾರವಾದ ತಲೆಯನ್ನಿಟ್ಟುಕೊಂಡು ಸುಮ್ಮನೆ ಕುಳಿತಿದ್ದೆ. ನಮಗೆಲ್ಲ ಸೂತಕ. ಚಿಕ್ಕಮ್ಮ ಮರಿಯನ್ನು ಮಲಗಿಸಿ ಕೊಂಡು ಚಾಪೆಯ ಮೇಲೆ ಮಲಗಿದ್ದಳು. ಕುಮುದ ದೊಡ್ಡ ಜಮಖಾನೆಯ ಒಂದು ಅಂಚಿನಲ್ಲಿ ಬಿದ್ದುಕೊಂಡಿದ್ದಳು.

ನನ್ನ ತಲೆಯಲ್ಲಿ ಏನೇನೋ ಚಿತ್ರಗಳು ಬಂದುವು: ಅಂದು ಮಧ್ಯಾಹ್ನ ಲಲಿತ ಜಡೆ ಹಾಕಿಕೊಂಡಾಗ, ಆ ಜಡೆಗೆ ನಾನೇ ರಿಬ್ಬನ್ ಹಾಕಿದೆ. ಆ ತಲೆಗೆ ನಾನೇ ಮಲ್ಲಿಗೆದಂಡೆ ಮುಡಿಸಿದೆ. ಆ ಮುದ್ದು ಹಣೆಗೆ ನಾನೇ ಕುಂಕುಮ ಇಟ್ಟೆ. ಹೆಂಡ ತಿಯ ಹೆಣಕ್ಕೆ ಗಂಡ ಕುಂಕುಮ ಇಡಬೇಕಂತೆ! 'ಹೆಣ ಸಿಕ್ಕುವುದಿಲ್ಲ; ಈಗಲೇ ಇಟ್ಟುಬಿಡು' ಎಂದ ದೇವರು. ಅಯ್ಯೊ, ಲಲಿತ! ಅವೊತ್ತೇ ನನ್ನಿಂದ ಎಲ್ಲವನ್ನೂ ಮಾಡಿಸಿಕೊಂಡು ತೃಪ್ತಿ ಪಟ್ಟೆಯಾ?....ಅಯ್ಯೊ! ನೀನು 'ಬೇಡ' ಎಂದರೂ ನಾನೇ ಕೆರೆಯ ಕಡೆ ವಾಕಿಂಗ್ ಕರೆದುಕೊಂಡು ಹೋದೆ. ನೀನು 'ಈಗ ಹೊತ್ತಾಗ ಲಿಲ್ಲವೆ?' ಎಂದರೂ 'ಇಲ್ಲ' ಎಂದು ನಾನೇ ನಿನ್ನನ್ನು ಗುಡ್ಡದ ಬಾಯೊಳಗಿಟ್ಟೆ. ಕೊನೆಗೆ ನನ್ನನ್ನು ಬಿಟ್ಟು, ಈ ಎಳೆಮಕ್ಕಳನ್ನು ಬಿಟ್ಟು ನೀನು ಹೋಗೇ ಬಿಟ್ಟೆ! 'ಮರಿಯನ್ನು ಬಿಟ್ಟು ನಾನೆಲ್ಲಿ ಹೋಗಲಿ' ಎನ್ನುತ್ತಿದ್ದೆ. ಈಗ ಎಲ್ಲಿಗೆ ಹೋದೆ? ಮಕ್ಕಳು ತಬ್ಬಲಿಯಾದರಲ್ಲ?....ಅಯ್ಯೊ ಲಲಿತಾ, ಮಗುವನ್ನು ನನಗೆ ಕೊಟ್ಟ ಕೂಡಲೆ ನಿನಗೆ ಜ್ಞಾನ ತಪ್ಪಿತೆ?........ನಾನು ನಿನ್ನನ್ನು ಬಿಟ್ಟು ಓಡಿಬಿಟ್ಟೆ, ಎಂದು ಎದೆಗುಂದಿ ಹೋದೆಯಾ?....ಅಯ್ಯೊ, ನನಗೊಂದೂ ತಿಳಿಯದು. ನನ್ನ ಕತ್ತಿಗೆ ಈ ಎಳೆಯ ಬತ್ತಿಗಳನ್ನು ಕಟ್ಟಿ ಈ ದುಃಖಜೀವನದಲ್ಲಿ ನನ್ನನ್ನು ಮುಳುಗಿಸಿ ಬಿಟ್ಟೆ.

ಅವೊತ್ತು ಬೆಳಗ್ಗೆ ನಾನು ಈ ಪ್ರಪಂಚವನ್ನು 'ಸೇತುವೆ' ಎಂದೆ. 'ಯೇಸು ಕ್ರಿಸ್ತ ಹೇಳಿದಾನೆ' ಎಂದು ಓದಿ ಹೇಳಿದೆ. ಅವೊತ್ತೇ ಕುಮುದ ಸೇತುವೆ–

ರೈಲಾಟ ಆಡಿದಳು. ಗುಡ್ಡದೊಳಕ್ಕೆ ಹೋಗುತ್ತಿದ್ದಾಗ ಲಲಿತ 'ಸೇತುವೆಯ ಕೆಳಗೆ ನಾವು, ನಮ್ಮ ಮೇಲೆ ಸೇತುವೆಯಂತಿರುವ ಈ ಪ್ರಪಂಚ' ಎಂದು ನಕ್ಕಳು.... ಒಳಗೆ ಹೋದವರು ನಾಲ್ವರು; ಹೊರಗೆ ಬಂದವರು ಮೂವರೇ !........ನಿಜ, ಲಲಿತ. ಇದು ಸೇತುವೆ ! ನಾನು ಇಲ್ಲಿದ್ದೇನೆ; ನೀನು ಇದರ ಕೆಳಗಿದ್ದೀಯೇ; ಆದರೆ, ಇದು ನನಗೆ 'ದುಃಖಸೇತು !'

—ರಾ. ವೆಂ. ಶ್ರೀನಿವಾಸ

# ಆವೇ ಮರೀಯಾ

ಪಾರ್ಕಿನ ಬೆಂಚನ್ನು ಬಿಟ್ಟೇಳುವ ಹೊತ್ತಿಗೆ ಅವನ ಮನಸ್ಸು ನಿರ್ಧಾರಕ್ಕೆ ಬಂದಿತ್ತು. ಹೊರಬರುವ ಮುನ್ನ ಮೂಲೆಯ ಮರವನ್ನು ದೃಷ್ಟಿಸಿದ. ತನ್ನ ಹೊಸ ಹಸಿರು ವಸ್ತ್ರವನ್ನು ರಾತ್ರಿಗೆ ದಾನಮಾಡಿ ಅದರ ಒರಟು ಕಪ್ಪು ಬಟ್ಟೆಯನ್ನು ಉಟ್ಟು ನಿಂತಿತ್ತು ಮರ. ಗೇಟನ್ನು ದಾಟಿ ಮನೆಯ ದಾರಿ ಹಿಡಿದ.

ಎರಡು ತಿಂಗಳುಗಳಿಂದ ಅವನ ಮನಸ್ಸಿನಲ್ಲಿ ಅಶಾಂತಿ. ಬೇಡದ ಒಡನಾಡಿಯನ್ನು ಹೊರದೂಡಲು ಪ್ರಯತ್ನಿಸಿ ವಿಫಲನಾಗಿದ್ದ. ಇಂದು, ಇದೀಗ ಮಾರ್ಗ ಹೊಳೆದಿತ್ತು.

'ಮನೆ ಸೇರಿದೊಡನೆಯೇ ತಾಯಿಗೆ ಹೇಳಿಬಿಡಬೇಕು: "ಅಮ್ಮ ನಾನು ಮದುವೆಯಾಗುವುದಿಲ್ಲ." ಅವಳಿಗೆ ಉಂಟಾಗುವ ನೋವು, ನಿರಾಶೆಗಳನ್ನು ಲಕ್ಷಿಸದೆಯೆ ಹೇಳಿಬಿಡಬೇಕು: "ಅಮ್ಮ ನಾನು ಮದುವೆಯಾಗುವುದಿಲ್ಲ."......ಇನ್ನು ಮುಂದೆ ಮರಿಯಾಳಿಂದ ದೂರವಿರಬೇಕು. ಪ್ರತಿದಿನ ಸಂಜೆ, ಕಚೇರಿ ಮುಗಿದ ಕೂಡಲೆ ಅವಳೆಡೆ ಹೋಗುವುದನ್ನು ಬಿಡಬೇಕು. ಅವಳ ನೊಂದ ಧ್ವನಿ ಫೋನ್ ತಂತಿಯನ್ನು ಹತ್ತಿ ಬಂದಾಗ ನಿರಾಸಕ್ತಿಯ ಧ್ವನಿಯಲ್ಲಿ ಉತ್ತರಿಸಬೇಕು. ಇದರ ಅರ್ಥ ಆ ಸೂಕ್ಷ್ಮ ಹೃದಯಿಗೆ ಬೇಗ ತಿಳಿಯುತ್ತದೆ. ಮುಂದೆ ಅವಳ ನೋವು ಅವಳಲ್ಲಿಯೇ ಉಳಿಯುತ್ತದೆ. ಧ್ವನಿಯ ಮೂಲಕ ಹೊರಬಂದು ಟೆಲಿಫೋನ್ ತಂತಿಯುದ್ದ ಹರಿದು, ನನ್ನನ್ನು ಸೇರುವುದಿಲ್ಲ ; ಸೇರಿ ನನ್ನ ಎದೆ ತಂತಿಗಳನ್ನು ಮೀಟುವುದಿಲ್ಲ ; ಮೀಟಿ, ತಂತಿಗಳ ಮೇಲೆ ಮಲಗಿದ್ದ ಶೋಕಗೀತೆಯನ್ನು ಹೊರಗೆಳೆಯುವುದಿಲ್ಲ......ಇನ್ನು ನಾನು ? ವೀಣೆಗಾಗಿ ಹಂಬಲಿಸುವುದನ್ನು ಬಿಡಬೇಕು. ಹಾಡಿಗಾಗಿ ಹಾತೊರೆಯುವುದನ್ನು ನಿಲ್ಲಿಸಬೇಕು. ವೀಣೆಯ ತಂತಿ ಸವೆಯುತ್ತದೆ, ಹಾಡು ಹಳೆಯದಾಗುತ್ತದೆ, ಎಂಬುದನ್ನು ನೆನಪಿನಲ್ಲಿಟ್ಟುಕೊಂಡಿರಬೇಕು.

*            *            *            *

ಅವನಿಗೆ ಮರಿಯಾಳ ಪರಿಚಯವಾಗಿ ಆರು ತಿಂಗಳಾಗಿದ್ದವು. ಪತ್ರಿಕಾ ಸಮ್ಮೇಲನ ಒಂದರಲ್ಲಿ ಅವಳನ್ನು ಮೊದಲು ಕಂಡಿದ್ದ. ಅದು ಅವಳ ಕೆಲಸದಲ್ಲಿ ಮೊದಲನೆಯ ಮುಖ್ಯ ಸಂದರ್ಶನವಾಗಿತ್ತು. ಸಹೋದ್ಯೋಗಿಗಳು ಹೊಸ ಮುಖ

ವನ್ನು ಸ್ವಾಗತಿಸಿದ್ದರು. ಮುಖ ಚೆಲುವಾಗಿದ್ದದ್ದರಿಂದ ಸ್ವಾಗತ ಉತ್ಸುಕಿತವಾಗಿತ್ತು. ಘಾಬರಿಯಿಂದ ಬೆವತಿದ್ದ ಮುಖ ಅಂದು ತಿರುಗಿದುದು ಅವನೆಡೆಗೆ. ಇನ್ನೂ ಅವನೆಡೆಗೆ ತಿರುಗಿತ್ತು—ಈಗ ಘಾಬರಿ ಇಲ್ಲದಿದ್ದರೂ.

ಆಕರ್ಷಣೆ ಒಲವಿಗೆ ತಿರುಗಲು ಬಹು ಕಾಲ ಹಿಡಿದಿರಲಿಲ್ಲ. ಜೊತೆಗೆ ಕೆಲಸ ಮಾಡುತ್ತಿದ್ದ ಹುಡುಗಿಯರ ಬಗೆಗೆ ಅವನು ತಳೆದಿದ್ದ ತಿರಸ್ಕಾರ ಭಾವನೆಯನ್ನು ಅವರಿಂದ ಬಹು ಭಿನ್ನವಾದ ಆವಳ ಸ್ವಭಾವದ ಪರಿಚಯು ಆಗುತ್ತ ಬಂದಂತೆ, ಆವಳ ಬಗೆಗೂ ತಳೆಯುವುದು ಅಸಾಧ್ಯವಾಯಿತು. ಒಲವು ಬೆಳೆದಂತೆ ಸಹವಾಸದ ಅಗತ್ಯ ಹೆಚ್ಚಾಗ ತೊಡಗಿತು. ಕೂಡುವ ಬಯಕೆ, ಕೂಡಿರುವ ಬಯಕೆ ತೀಕ್ಷ್ಣವಾಗ ತೊಡಗಿತು.

ಮದುವೆಗೆ ಹೊರಗಿನ ಅಡ್ಡಿಗಳೇನೂ ಇರಲಿಲ್ಲ. ತಾಯಿ ತಂದೆ—ಅದರಲ್ಲೂ ತಾಯಿ–ಅವನನ್ನು ಮದುವೆಯಾಗೆಂದು ವರ್ಷಗಳಿಂದ ಹೇಳುತ್ತಿದ್ದರು. ಮೆಚ್ಚಿದ ಹೆಣ್ಣನ್ನು ಮದುವೆಯಾಗುವ ಸ್ವಾತಂತ್ರ್ಯ ಅವನಿಗಿತ್ತು. ಹೆಂಡತಿಯನ್ನು ಸಾಕುವಷ್ಟು ಸಂಬಳ ದೊರಕುತ್ತಿತ್ತು. ಮತ್ತೆ ಮರಿಯಾ? 'ಮಿಸ್ಟರ್ ರಾಡರಿಗ್ಸ್,' 'ಟೋನಿ'ಗೆ ದಾರಿ ಮಾಡಿಕೊಟ್ಟು ಬಹಳ ದಿನಗಳಾಗಿದ್ದುವು. 'ಟೋನಿ'ಯನ್ನು ತುಂಬಿದ್ದ ಮಾರ್ದವ ಸಂದೇಹವನ್ನು ದೂರ ಮಾಡುತ್ತಿತ್ತು.

ಹೊರಗಿನ ಅಡ್ಡಿಗಳೇನೂ ಇರಲಿಲ್ಲ. ಆಡ್ಡಿಗಳೆಲ್ಲವೂ ಅವನಿಂದಲೇ ಬಂದವುಗಳಾಗಿದ್ದವು. ಅಪೇಕ್ಷೆಯೂ ಅವನದೇ, ಅಡ್ಡಿಯೂ ಅವನದೇ.

ಅವನ ಮನೆಯು, ಇತರ ಮನೆಗಳ ಸಂಸಾರಗಳನ್ನು ಪರಿಶೀಲಿಸಿದ ಅವನಿಗೆ ಮದುವೆಯ ಬಗ್ಗೆ ಜಿಗುಪ್ಸೆಯಿತ್ತು, ತಿರಸ್ಕಾರವಿತ್ತು. ದಾಂಪತ್ಯ ಸುಖದ ಅಶಾಶ್ವತೆಯನ್ನು ಕಂಡು ಮದುವೆಯ ಬಗೆಗೆ ಅನಾದರ, ಅನಾಸಕ್ತಿಗಳನ್ನು ತಾಳಿದ್ದ.

ಮನೆಯಲ್ಲಿ ವಯಸ್ಸಾದ ತಂದೆ, ತಾಯಿ. ಇಬ್ಬರ ನಡುವಿನ ಸಂಬಂಧ ಔದಾಸೀನ್ಯ. ಅವನಿಗೆ ನೆನಪು ಇದ್ದಾಗಿನಿಂದ ಹೀಗೆಯೇ. ತಂದೆಯ ದಿನಗಳನ್ನು ಕಚೇರಿ, ಕ್ಲಬ್ಬುಗಳು ತುಂಬುತ್ತಿದ್ದವು. ತಾಯಿಯ ದಿನದ ಬಹು ಭಾಗವನ್ನು ಅಡಿಗೆಮನೆ ಎಳೆಯುತ್ತಿತ್ತು. ಮಗಳ ಮದುವೆಯಾದಾಗಿನಿಂದ ಆಕೆಗೆ ಬಹಳ ಬೇಸರವಾಗಿತ್ತು. ಮನೆಯಲ್ಲಿ ಇನ್ನೊಂದು ಹೆಣ್ಣು ಜೀವಕ್ಕಾಗಿ ಆಕೆ ಹಂಬಲಿಸುತ್ತಿದ್ದಳು.

ಅವನ ತಂಗಿ: ಅವಳು ಟೈಪಿಸ್ಟ್ ಆಗಿದ್ದ ಕಚೇರಿಯಲ್ಲಿಯೇ ಕೆಲಸ ಮಾಡುತ್ತಿದ್ದವನೊಬ್ಬನನ್ನು ಪ್ರೇಮಿಸಿದ್ದಳು; ಮದುವೆಯಾಗಿದ್ದಳು. 'ನನಗಿನ್ನೂ ಬಹಳ

ಚಿಕ್ಕವಯಸ್ಸು. ಇನ್ನೊಂದೆರಡು ವರ್ಷ ತಡಿ,' ಎಂದು ಬುದ್ಧಿವಾದ ಹೇಳಿದ ತಂದೆ ತಾಯಿಯರ ಮಾತನ್ನು ಕೇಳದೆ ಮದುವೆಯಾಗಿದ್ದಳು; ಸಂಸಾರ ಹೂಡಿದ್ದಳು. ತೌರಿನಲ್ಲಿ ನೆಲೆಸಿದ್ದ ಬಡತನವನ್ನು ತನ್ನ ಮನೆಗೂ ಒಯ್ದಿದ್ದಳು.

ಮದುವೆಯಾದ ಹೊಸದರಲ್ಲಿ ಬಡತನವನ್ನು ಮರೆಯುವಷ್ಟು ಆನಂದ ಅವಳ ಮನೆಯನ್ನು ತುಂಬಿದ್ದಿತು. ಕಾಲ ಆನಂದವನ್ನು ಹೊರದೂಡಿತ್ತು. ಮಕ್ಕಳು, ಖಾಯಿಲೆ, ಅವಳ ಅತ್ತೆ ಮಾವನ ಸಾವು ; ಮಕ್ಕಳು, ಖಾಯಿಲೆ ; ಮಕ್ಕಳು, ಖಾಯಿಲೆ.

ಈಗ ಅವರಿಬ್ಬರೂ ಯಂತ್ರದ ಗೊಂಬೆಗಳು. ಉಲ್ಲಾಸವನ್ನರಿಯದ, ಬೇಸರ ಮುಖದ ಯಂತ್ರಗಳು. ಸಣ್ಣ ಮನೆ ತಿಪ್ಪೆ. ಮನೆತುಂಬಿದ ಮಕ್ಕಳು, ತಿಪ್ಪೆಯ ಮಕ್ಕಳು. ಐದು ವರ್ಷಗಳ ಹಿಂದಿನ ಹಕ್ಕಿ ಮರಿ ಈಗ ಹೊಟ್ಟೆಗೆ ಸಾಲದ ಕಾಗೆ ; ರೇಗಿದಾಗ— ಹೊಟ್ಟೆಗೆ ಸಾಲದವರಿಗೆ ರೇಗು ಹೆಚ್ಚು—ರಣಹದ್ದು. ಅಣ್ಣನಿಗಿಂತ ನಾಲ್ಕು ವರ್ಷ ಚಿಕ್ಕವಳಾದರೂ ಅವನಿಗಿಂತ ವಯಸ್ಸಾದವಳಂತೆ ಕಾಣುತ್ತಿದ್ದಳು. ಮುಖದ ಮೇಲೆ ಸುಕ್ಕಿನ ಬಲೆ, ಕತ್ತಿನ ಸುತ್ತ ಕಾಗೆಯ ಕಾಲಿನ ಸರ. ತಾಯಿ ಅಣ್ಣ ಇಬ್ಬರ ಮನಸ್ಸನ್ನೂ ಉಲ್ಲಾಸಗೊಳಿಸುತ್ತಿದ್ದ ನಗುಮುಖದ ಹುಡುಗಿ ಈಗ ಹುಬ್ಬುಗಂಟಿನ, ಬಿಗಿಬಾಯಿಯ ಹೆಂಗಸು.

ಅವನ ವಿವಾಹಿತ ಸಹೋದ್ಯೋಗಿಗಳ ಮನೆಗಳಲ್ಲೂ ಇದೇ ವಿಷಮ ಪರಿಸ್ಥಿತಿ. ಮನೆ ಹೆಂಗಸರ ಮಾತಿನ ಮುಖ್ಯ ವಿಷಯ ಹಣದ ಅಸಹಕಾರ: ಯಾವುದಕ್ಕೂ ಬೆಲೆ ಇಲ್ಲದ ಈ ಕಾಲದಲ್ಲಿ ಎಲ್ಲದಕ್ಕೂ ಬೆಲೆ ಹೆಚ್ಚು. ಅವರ ಮಾತಿನಿಂದ ಬೇಸರ ಅನಿವಾರ್ಯ. ಬೇಸರದ ಹಿಂದೆಯೇ ಹರಿದು ಬರುತ್ತಿದ್ದ ಕನಿಕರದ ನೋವಿನಿಂದ ತಪ್ಪಿಸಿಕೊಳ್ಳಲು ಅವನು ಸಾಧ್ಯವಾದಷ್ಟೂ ಅವರ ಮನೆಗಳಿಗೆ ಹೋಗುತ್ತಿರಲಿಲ್ಲ. ಕಚೇರಿಯಲ್ಲಿ ಉಲ್ಲಾಸಭರಿತರಾಗಿದ್ದ ಯುವಕರಿಗೆ ಮನೆಯ ಹೊಸಿಲು ದಾಟಿದ ಕೂಡಲೆ ರೇಗು, ಅವಮಾನ. ಅವಮಾನದಿಂದಾಗಿ ರೇಗು ; ರೇಗಿನಿಂದಾಗಿ ಅವಮಾನ. ಮಧ್ಯವಯಸ್ಸಿನವರ ಕಚೇರಿಯ ನಗುಮುಖಗಳು ಮನೆಯಲ್ಲಿ ಚಿಂತಾಕ್ರಾಂತ, ಹತಾಶೆಯಿಂದ ಬಿಗಿ.

ಪ್ರತಿ ಮನೆಯಲ್ಲಿಯೂ ಇದೇ ಚಿತ್ರ.

ಚಿತ್ರದ ಸಾಲುಗಳನ್ನು ನೋಡಿಯೂ ಮತ್ತೆ ತಾವೂ ಒಂದು ಅಂತಹದೇ ಚಿತ್ರವನ್ನು ಬರೆಯಲು ತೊಡಗುವ ಮೂರ್ಖರಲ್ಲಿ ತಾನೂ ಒಬ್ಬನಾಗಬಾರದೆಂದು ಅವನು ನಿರ್ಧರಿಸಿದ್ದ.

ಆದರೆ ಒಲವು ? ಆದರೆ ಹೆಣ್ಣು ? ಆದರೆ ಸಹವಾಸದ ಬಯಕೆ ?

ದೇವಕಣಿಗಲೆ ಮೊಗ್ಗು ಉಗುರು ; ಹೊಸ ನಿಂಬೆ ಹೂ ಉಸಿರು ; 'ಟೋನಿ,' 'ಟೋನಿ'!

ನಿರ್ಧಾರವನ್ನು ಮೊಗ್ಗು ಉಗುರು ಕಿತ್ತು ಬಿಸಾಡಿತ್ತು ; ಹೂ ಉಸಿರು ದೂರ ಹಾರಿಸಿತ್ತು.

ತಿಂಗಳ ಮೊದಲಿನಲ್ಲಿ ಸಂಬಳದ ಜೊತೆಗೆ ಸಿಕ್ಕಿದ್ದ ಉಚಿತಾರ್ಥದಲ್ಲಿ ಒಂದು ಉಂಗುರವನ್ನು ಕೊಂಡಿದ್ದ. ಮರಿಯಾಳ ಬಳಿ ಹೋಗಿ ಪ್ರಶ್ನೆ ಹಾಕುವುದು ; ನಿರೀಕ್ಷಿತ ಉತ್ತರ ಬಂದ ಕೂಡಲೆ ಉಂಗುರವನ್ನು ಅವಳ ಬೆರಳಿಗೆ ಸುತ್ತುವುದು ; ತೋಳನ್ನು ಸೊಂಟಕ್ಕೆ ಸುತ್ತುವುದು....ಏನೇನೋ ಕನಸುಗಳನ್ನು ಕಟ್ಟಿದ್ದ. ತಿಂಗಳಿನ ಮೊದಲ ವಾರದ ಕನಸುಗಳು ; ಒಲವಿನ ಮೊದಲ ತಿಂಗಳ ಕನಸುಗಳು.

ಈಗ ತಿಂಗಳ ಕೊನೆಯ ವಾರ. ಕನಸುಗಳು ಕನಸುಗಳಾಗೇ ಉಳಿದಿದ್ದವು. ಉಂಗುರ ಇನ್ನೂ ಶರಾಯಿ ಜೇಬಿನಲ್ಲಿಯೇ ಇದ್ದಿತು.

ಕನಸನ್ನು ನನಸಾಗಿಸಬಾರದು ಎಂದುಕೊಂಡಿದ್ದ, ಸ್ನೇಹಿತನೊಬ್ಬನ ಜೀವನದ ಬಗ್ಗೆ ತಿಳಿದಾಗ. ನಾಲ್ಕು ವರ್ಷಗಳ ಕೆಳಗೆ ಮದುವೆಯಾದ ಆತ ಬೇರೆ ಊರಿನಲ್ಲಿ ಹೊಸ ಕೆಲಸ ಹಿಡಿದಿದ್ದ. ಕಳೆದ ವಾರ ಬೊಂಬಾಯಿಗೆ ಬಂದಾಗ ಹಳೆಯ ಸಹೋದ್ಯೋಗಿಗಳನ್ನು ನೋಡಲು ಕಚೇರಿಗೆ ಬಂದಿದ್ದ. ಸ್ನೇಹಿತರಿಗೆ ಮೊದಲು ಅವನ ಗುರುತೇ ಸಿಕ್ಕಲಿಲ್ಲ. ಅವರಿಗೆ ಪರಿಚಯವಿರದ ಸಿರಿವಂತಿಕೆ ಅವನ ವೇಷ ಭೂಷಣಗಳಲ್ಲಿ, ಮಾತಿನಲ್ಲಿ, ನಡೆವಳಿಕೆಯಲ್ಲಿ ಸುವ್ಯಕ್ತವಾಗಿತ್ತು. ಗೆಳೆಯರನ್ನು ಮುತ್ತಿದ ಅಸೂಯೆ ಇವನನ್ನೂ ಆವರಿಸಿತ್ತು—ಗೆಳೆಯನ ಅಂತರಂಗದ ಮಾತುಗಳನ್ನು ಕೇಳುವತನಕ.

ತನ್ನ ದಾಂಪತ್ಯ ವಿರಸವನ್ನು ಗೆಳೆಯ ಇವನಿಗೆ ತಿಳಿಯಪಡಿಸಿದ್ದ. ಪರಸ್ಪರ ಪ್ರೇಮಿಸಿ ಮದುವೆಯಾದ ಗಂಡಹೆಂಡಿರ ನಡುವೆ ಈಗ ಒಂದು ತೆರೆ ಬಂದು ನಿಂತಿತ್ತು. ಮಕ್ಕಳನ್ನು ಬಹಳವಾಗಿ ಬಯಸುತ್ತಿದ್ದ ಅವರಿಗೆ ಮದುವೆಯಾಗಿ ನಾಲ್ಕು ವರ್ಷಗಳಾದರೂ ಮಕ್ಕಳಿರಲಿಲ್ಲ. ಹಾಸ್ಯ ಚಿಂತೆಗೆ ದಾರಿ ಮಾಡಿತ್ತು. ಮೂಕ ಆಪಾದನೆಗಳು ಕಾರಣವಿಲ್ಲದ ಸಿಟ್ಟಿನಲ್ಲಿ ರೂಪಗೊಂಡಿದ್ದವು.

ಅಂದೇ ಸಂಜೆ ತಂಗಿಯ ಮನೆಗೆ ಹೋಗಿದ್ದ. ಮಕ್ಕಳ ಅಳು ಇವನನ್ನು ಸ್ವಾಗತಿಸಿತ್ತು. ಜಗಳವಾಡಿ ಅಳುತ್ತಿದ್ದ ಮಗು ; ರೇಗಿದ ತಾಯಿಯ ಕೈಯಿಂದ

ಏಟು ತಿಂದು ಅಳುತ್ತಿದ್ದ ಮಗು ; ಬೇಡಿದ ತಿಂಡಿ ಸಿಕ್ಕದೆ ಅಳುತ್ತಿದ್ದ ಮಗು ; ಜ್ವರದಿಂದ ಬಳಲಿ ಅಳುತ್ತಿದ್ದ ಕೈ ಮಗು. ಈ ಶೋಕಮೇಳ ಅವನನ್ನು ಕಲಕಿತ್ತು. ಕಲಕಿದ ಫಲವಾಗಿ ಮೇಲೆದ್ದ ಅಶಾಂತಿ ಅಲೆ ಮುಖದ ಮೇಲೆ ದಟ್ಟವಾಗಿ ಹರಡಿತ್ತು. ಅಣ್ಣನಿಗೆ ಆವ ಬೇಸರದ ಅರಿವಾಗಿ, ತಂಗಿಯು ಕಣ್ಣು ತುಂಬಿ ಬಂದಿತ್ತು.

ಹಣವಂತ ಗೆಳೆಯನಿಗೆ ಮಕ್ಕಳಿಲ್ಲದ ಚಿಂತೆ ; ಹಣ ಸಾಲದ ತಂಗಿಗೆ ಮಕ್ಕಳು ಹೆಚ್ಚಾದ ಚಿಂತೆ.

ಮನೆಯಲ್ಲಿ ತಂದೆಯ ಗ್ರಾಫ್ ಕಾಗದದ ಮುಖ; ತಾಯಿಯ ಜೋತು ಬಿದ್ದ, ಸೋತು ಬಿದ್ದ ದೇಹ.

ಮರಿಯಾಳ ಜೊತೆಯಲ್ಲಿ ಕಳೆಯಬೇಕಾಗಿದ್ದ ಸಾಯಂಕಾಲವನ್ನು ತನ್ನ ಕೋಣೆಯ ಏಕಾಂತತೆಯಲ್ಲಿ ಕಳೆಯಲು ಯತ್ನಿಸಿದ. ಮಕ್ಕಳ ಅಳು, ತುಂಬಿ ಹರಿದ ಕಣ್ಣು, ಸೋತ, ಸಾಯುತ್ತಲಿದ್ದ ಮುಖ, ಮೈ ಇವುಗಳ ಪ್ರತಿಧ್ವನಿ ಅವನನ್ನು ಎಬ್ಬಿಸಿ ಆಚೆಗೆ ಕಳುಹಿಸಿದ್ದವು. ಗುರಿಯಿಲ್ಲದೆ ನಡೆದಿದ್ದ ಕಾಲುಗಳನ್ನು ಕಚೇರಿಯ ಬಳಿಯ ಪಾರ್ಕಿನ ಕಡೆ ತಿರುಗಿಸಿದ್ದ.

ಅಂದಿನಿಂದ ದಿನವೂ ಸಂಜೆ ಪಾರ್ಕಿಗೆ ಬಂದು ಕುಳಿತುಕೊಳ್ಳುವ ರೂಢಿಯಾಗಿದ್ದಿತು. ಅಲ್ಲಿಗೆ ಅವನನ್ನು ಎಳೆದು ತರುತ್ತಿದ್ದ ಸೂಜಿಗಲ್ಲು ಮೂಲೆಯೊಂದರಲ್ಲಿ ಬೆಳೆದು ನಿಂತಿದ್ದ ಒಂದು ಮರ. ಕಚೇರಿಯಲ್ಲಿ ಅವನು ಕುಳಿತುಕೊಳ್ಳುತ್ತಿದ್ದ ಸ್ಥಳದಿಂದ ಸ್ಪಷ್ಟವಾಗಿ ಕಾಣುತ್ತಿತ್ತು. ಅನೇಕ ಬಾರಿ ಟೈಪ್ ಮಾಡುವುದನ್ನು ನಿಲ್ಲಿಸಿ ಅದನ್ನು ನೋಡುತ್ತ ಕುಳಿತಿರುತ್ತಿದ್ದ. ಚೆನ್ನಾಗಿ ಪರಿಚಯವಾಗಿದ್ದ ಅದರ ಸೌಂದರ್ಯದ ಪ್ರಕಾರಗಳು ಈಗ ಅವನಿಗೆ ಸಾಂಕೇತಿಕವಾಗಿ ಕಾಣಿಸತೊಡಗಿದ್ದವು.

ತಿಂಗಳ ಕಾಲ ಒಣ ಕಂದು ಬಣ್ಣದ ಕೈಗಳನ್ನು ಚಾಚಿ ನಿಂತಿತ್ತು ಮರ, ಬಟ್ಟೆ ಹರಿದ ಕೊಡೆಯಂತೆ. ಹೇಮಂತ ಬಿರಿಸಿದ ಕೈಗಳಿಗೆ ಚೈತ್ರ ಕೊಬ್ಬರಿ ಎಣ್ಣೆ ಸವರಿತ್ತು ; ಬಳೆಗಾರ ವಸಂತ ಕೆಂಪು ಬಳೆಗಳನ್ನು ತೊಡಿಸಿದ್ದ....ಕೊಂಬೆ ಕೊಂಬೆಯೂ ಕೆಂಪು ಹೂಗಳನ್ನು ಹೊರಚೆಲ್ಲಿತ್ತು. ಕೆಂಪು ಮಾಸುವ ಹೊತ್ತಿಗೆ ವೈಶಾಖ ಮರದ ಮೇಲೆ ಹಸಿರಿನ ಮಳೆ ಕರೆದಿತ್ತು. ಈಗ ಮರದ ತುಂಬ ಹೊಳಪಿನ, ಹುರುಪಿನ ಎಳೆಹಸಿರು ಎಲೆಗಳು. ಬಿಸಿಲಿನಲ್ಲಿ ಮರದ ತಲೆ ನೊರೆ, ನೊರೆ: ಹಸಿರು ಛಾಯೆ ಕೂಡಿಟ್ಟ ಉದ್ದದ ಗಾಜಿನ ಲೋಟದಲ್ಲಿ ಶ್ಯಾಂಪೇನ್. ಇನ್ನೆರಡು ತಿಂಗಳುಗಳಲ್ಲಿ ಎಲೆಗಳ ಬಣ್ಣ, ಗಾತ್ರ ಎರಡೂ ಥಪ್ಪನಾಗಿರುತ್ತವೆ; ರೋಗಿ ಕುಡಿಯದ ಗಂಜಿ.

ವಸಂತದಲ್ಲಿ ಹೇಮಂತದ ನೆನಪಾಗಿ ಅವನ ಮೈ ನಡುಗಿತ್ತು. ಉಂಗುರ ಸಂಕೋಲೆಯಾಗಿ ಮಾರ್ಪಟ್ಟಿರಲಿಲ್ಲವಾದ್ದರಿಂದ ಮನಸ್ಸಿಗೆ ಹಗುರವೆನಿಸಿತ್ತು. ವಿಚಾರ ಲೋಕದಿಂದ ಭೂಮಿಗಿಳಿದವನು ಸುತ್ತಲೂ ಕಣ್ಣು ಹೊರಳಿಸಿದ್ದ. ಕತ್ತಲೆ ಬೆಳೆಯುತ್ತ ಬಂದದ್ದರಿಂದ ಪಾರ್ಕಿನಲ್ಲಿ ಬಹಳ ಜನರಿರಲಿಲ್ಲ, ಚೆಂಡಾಟ ಆಡುತ್ತಿದ್ದ ಹುಡುಗರು ಮನೆಗೆ ಹೋಗಿ ಬಹಳ ಕಾಲವಾಗಿತ್ತು. ಸೂಸುತ್ತಿದ್ದ ಕಾರಂಜಿಯ ಬಳಿ, ಹುಲ್ಲಿನ ಮೇಲೆ ಕುಳಿತು ಸರಸಸಲ್ಲಾಪ ನಡೆಸುತ್ತಿದ್ದ ನವ ದಂಪತಿಗಳು ಸಲ್ಲಾಪವನ್ನು ಮನೆಯಲ್ಲಿ ಮುಂದುವರೆಸೋಣ ಎಂದು ತೀರ್ಮಾನಿಸಿ ಮೇಲೇಳುತ್ತಿದ್ದರು. ಅವನು ಬರುವ ಹೊತ್ತಿಗಾಗಲೆ ಒಂದು ಬೆಂಚಿನ ಮೇಲೆ ಕುಳಿತಿದ್ದ ಮುದುಕರು ಮಾತ್ರ ಇನ್ನೂ ಕುಳಿತಿದ್ದರು.

ಇಬ್ಬರು ಮುದುಕರು: ಧೋತ್ರ, ಶರ್ಟು, ಕನ್ನಡಕ, ಒಳಗೆ ಎಳೆದ ಬಾಯಿ; ಬೋಳುತಲೆ, ಹಿಂದಲೆಯಲ್ಲಿ ಅರ್ಧ ಚಂದ್ರಾಕಾರದ ಒಂದು ಸಾಲು ಬಿಳಿಕೂದಲು. ಬೆಂಚಿನ ಪಕ್ಕದಲ್ಲಿ, ಅರೆ ಒಣಗಿದ ಹುಲ್ಲಿನ ಮೇಲೆ ಹಳೆಯ ಚಪ್ಪಲಿಗಳು, ಮಲಗಿದ ಮುದಿ ಊರುಗೋಲು.

'ನನಗೇಕೆ ಈ ಪಾಡು ? ಮರಿಯಾಳಿಗೇಕೆ ಈ ಪಾಡು ?'

ಚಿತ್ರದಿಂದ ಚಿತ್ರಕ್ಕೆ ಹರಿದ ಮನಸ್ಸು ಮತ್ತೆ ಪಾರ್ಕಿಗೆ ಬರುವ ಹೊತ್ತಿಗೆ ಪಾರ್ಕು ಖಾಲಿಯಾಗಿತ್ತು. ಹೊಟ್ಟೆ ಅಡಿಗೆಮನೆಯ ಧ್ಯಾನ ಮಾಡುತ್ತಿತ್ತು. ಮನೆಗೆ ಹೋಗಲು ಎದ್ದು ನಿಂತ. ಪಾದದ ಬಳಿ ಪೂಜೆಗಾಗಿ ಸುರಿದ ಹೂಗಳಂತೆ ರಾಶಿ ಶಿಗರೇಟು ತುಣುಕುಗಳು ಬಿದ್ದಿದ್ದವು. ಸತ್ತ ಬಿಳಿ ಪತಂಗಗಳಂತೆ ಕಾಣುತ್ತಿದ್ದ ಅವುಗಳನ್ನು ಬದಿಗೆ ಸರಿಸಿ ಮುಂದೆ ನಡೆದಿದ್ದ.

* * * *

ನೆಮ್ಮದಿಯನ್ನು ಮರಳಿ ಪಡೆದ ಮನಸ್ಸು ರಾತ್ರಿಯ ತಂಪನ್ನು ಗುರುತಿಸಿತು. ಮನೆಗೆ ನಡೆದೇ ಹೋಗಲು ನಿರ್ಧರಿಸಿದ.

ರಸ್ತೆ ರಸ್ತೆಯನ್ನು ಬೀಳ್ಕೊಟ್ಟಿತು. ದಾರಿಯಲ್ಲಿ ಜನ ಸಂಚಾರ ಕಡಿಮೆಯಾದಂತೆ ಕತ್ತಲೆ ಹೆಚ್ಚಾಗುತ್ತಿತ್ತು.... ವೇಗವಾಗಿ ಹೆಜ್ಜೆ ಹಾಕುತ್ತಿದ್ದ ಕಾಲುಗಳು ಒಂದು ಕಟ್ಟಡದ ಮುಂದೆ ಕ್ಷಣಕಾಲ ನಿಂತವು. ಕಣ್ಣುಗಳು ಮಹಡಿಯನ್ನೇರಿದವು, ಒಂದು ಕೋಣೆಯನ್ನು ಹುಡುಕಿದವು.

ಕೆಲಸ ಮಾಡುತ್ತಿದ್ದ ಹುಡುಗಿಯರನೇಕರು ವಾಸಿಸುತ್ತಿದ್ದ ಕಟ್ಟಡ ಅದು. ಕೋಣೆಗಳ ಸಾಲು ಒಂದರ ಮೇಲೊಂದು: ರೈಲಿನ ಮೇಲೆ ರೈಲು, ಬೆಳಕನ್ನು

ಹೊರಚೆಲ್ಲುತ್ತಿದ್ದ ಕಿಟಕಿಗಳು ಅಲ್ಲೊಂದು, ಇಲ್ಲೊಂದು ; ಮೇಲೆಸೆದ ಮುಸುಕಿನ ರಂಧ್ರಗಳಿಂದ ಹೊರಚಿಮ್ಮುತ್ತಿದ್ದ ಅಜೇಯ ಜ್ವಾಲೆ, ಸುಪರಿಚಿತವಾದ ಕೋಣೆಯಲ್ಲಿ ದೀಪವಿತ್ತು.

'ಏನು ಮಾಡುತ್ತಿರಬಹುದು ಮರಿಯಾ ? ಏನನ್ನಾದರೂ ಓದುತ್ತಿರಬಹುದೆ ? ಅಥವಾ ?....ಹೌದು. ಚಿಂತಾಮಗ್ನಳಾಗಿರಬೇಕು. ಮೂರು ವಾರಗಳಿಂದ ಅವಳನ್ನು ನೋಡಲು ಹೋಗಿಲ್ಲ. ಫೋನ್ ಕೂಡ ಮಾಡಿಲ್ಲ !'

ಹೊರಚಿಮ್ಮಲು ಹೋರಾಡುತ್ತಿದ್ದ ಕನಿಕರ, ಪ್ರೇಮಗಳನ್ನು ಪ್ರಯಾಸದಿಂದ ಒತ್ತಿ ಮುಂದೆ ಸಾಗಿದ. ನಿಧಾನ ಮಾಡಿದರೆ ಕಾಲುಗಳು ನಿರ್ಣಯಕ್ಕೆ ವಿರುದ್ಧವಾಗಿ ಹಿಂತಿರುಗುವುವು ಎಂಬ ಸಂಶಯದಿಂದ ಮೊದಲಿಗಿಂತ ವೇಗವಾಗಿ ನಡೆಯತೊಡಗಿದ.

ಬಹುಕಾಲ ದೃಷ್ಟಿಸಿದ್ದರಿಂದ ದೀಪದ ಪ್ರತಿಬಿಂಬ ಇನ್ನೂ ಕಣ್ಣನ್ನು ಬೀಳ್ಕೊಟ್ಟಿರಲಿಲ್ಲ.

ಕತ್ತಲೆಯ ದಪ್ಪ, ಮೃದು ಪದರಗಳಲ್ಲಿ ದೃಷ್ಟಿಯನ್ನು ಹುದುಗಿಸಿ ಮುಂದೆ ನಡೆದ. ರಾತ್ರಿಯ ತಂಪನ್ನು ಬಾಚಿ, ಬಾಚಿ ತನ್ನಲ್ಲಿ ಅಡಗಿಸಿಡಲು ಪ್ರಯತ್ನಿಸುತ್ತ ಸಾಗಿದ.

ರಸ್ತೆಯ ವಂಕಿಯನ್ನು ಸಮೀಪಿಸಿದಾಗ ಕೇಳಿಬಂತು ಘಂಟಾನಾದ. ತಂಪಿನಲ್ಲಿ ತೇಲಿಬಿಟ್ಟ ಮನಸ್ಸು ಹಿಂತಿರುಗಿತು. ಅಗ್ನಿಶಮನ ಯಂತ್ರವೇನೋ ಎಂದುಕೊಂಡ. ಆದರೆ ಗಂಟೆಯ ಧ್ವನಿ ಯಂತ್ರದ ಗಂಟೆಯ ಧ್ವನಿಯಂತಿರಲಿಲ್ಲ. ಅಷ್ಟು ತ್ವರೆ, ಏರು, ಅನಾಸಕ್ತಿ ಇರಲಿಲ್ಲ. ಆಳವಾದ, ನಿಧಾನವಾದ, ಸ್ನೇಹಮಯ ಧ್ವನಿಯಾಗಿತ್ತು. ಅಂಜಿಯುವನ ಕರೆಗೂ, ಗೆಳೆಯನ ಕರೆಗೂ ಇರುವಷ್ಟು ವ್ಯತ್ಯಾಸವಿತ್ತು. ವಂಕಿಯನ್ನು ದಾಟಿದಾಗ ತಿಳಿಯಿತು ಗಂಟೆಯ ಮೂಲ.

ಎರಡು ಕತ್ತಲು ದಾರಿಗಳಿಗೆ ಬೆಸಗೆ ಹಾಕಿತ್ತು ಬೆಳಕು ತುಂಬಿದ ಚರ್ಚು. ಬೊಂಬಾಯಿನಲ್ಲೆಲ್ಲ ಅದು ಪುರಾತನ, ಅತಿ ಸುಂದರ, ಅತಿ ಪ್ರಖ್ಯಾತವಾದುದು. ಅದರ ಎರಡು ದೊಡ್ಡ ಗಂಟೆಗಳು ಆಹ್ವಾನ, ಬಿನ್ನಹಗಳನ್ನು ಬಿತ್ತರಿಸುತ್ತಿದ್ದವು. ಚರ್ಚಿನ ಮುಂದೆ ಸ್ಥಾಪಿತವಾಗಿತ್ತು ಕಾರುಗಳ ಸಾಲು. ಅವುಗಳ ಮಧ್ಯದಲ್ಲಿ ತೂರಿ ಚರ್ಚನ್ನು ಪ್ರವೇಶಿಸುತ್ತಿತ್ತು ಜನರ ಸಾಲು.

ಇದ್ದಕ್ಕಿದ್ದಂತೆ ಘಂಟಾನಾದ ನಿಂತಿತು. ಅದರ ಪ್ರತಿಧ್ವನಿಯಂತಿದ್ದ ಬೇರೊಂದು ನಾದ ಚರ್ಚಿನ ಬಾಗಿಲುಗಳಿಂದ ಹೊರಹರಿಯಿತು. ಗಂಟೆಯ ನುಡಿ

ಗಳ ನಡುವೆ ಅಲ್ಪವಿರಾಮವಿರುತ್ತಿತ್ತು ; ಹೊಸದಾಗಿ ಕೇಳಿಬಂದ ನಾದ ತಡೆಯಿಲ್ಲದೆ ಹರಿಯುವ ಹೊಳೆ. ಗಂಟೆಯ ಮಿಡಿತ ಚರ್ಚಿನ ಗೋಪುರದಿಂದ ವೃತ್ತಾಕಾರವಾಗಿ ಕೆಳಗಿಳಿಯುತ್ತಿತ್ತು ; ಹೊಸ ಧ್ವನಿ ದಟ್ಟಧೂಮದ ರೂಪದಲ್ಲಿ ಆಕಾಶದೆಡೆ ಸಾಗುತ್ತಿತು......ಚರ್ಚಿನಿಂದ ಹೊರಹೊಮ್ಮಿತ್ತು ಆರ್ಗನ್ ವಾದ್ಯದ ಹೊನ್ನು ನಾದ.

ಆಗ ಅವನಿಗೆ ನೆನಪಾಯಿತು: ಈಸ್ಟರ್ ಹಬ್ಬಕ್ಕಾಗಿ ನಡುರಾತ್ರಿ ಆರಾಧನೆ !

ವಾದ್ಯದ ಧ್ವನಿಯಲ್ಲಿನ ಗಾಂಭೀರ್ಯ, ಮಾರ್ದವ ಏನೇನೋ ನೆನಪುಗಳನ್ನು ಕರೆದು ಮನಸ್ಸನ್ನು ಚುಚ್ಚಿತು. ನೆನಪು ಬಳ್ಳಿ ಬಲಗೊಂಡು ನೇಣಾಗಿ ಪರಿಣಮಿಸುವ ಮೊದಲೇ ಅಲ್ಲಿಂದ ಕಾಲ್ತೆಗೆಯಬೇಕೆಂದು ಮುನ್ನಡೆಯುವುದರಲ್ಲಿದ್ದ. ನಾದದ ಹೊನ್ನು ಹೊಳೆ ಅಡ್ಡ ಬಂತು. ಅದರಲ್ಲಿನ ಗಾಂಭೀರ್ಯ, ಮಾರ್ದವಗಳು ಅವನನ್ನು ಹಿಂದೆಳೆದವು.

ಮೆಟ್ಟಿಲನ್ನು ಹತ್ತಿ, ಪವಿತ್ರ ಜಲವನ್ನು ಸ್ವೀಕರಿಸಿ ಒಳಗೆ ಹೋದ. ಕತ್ತಲೆಯನ್ನು ತುಂಬಿಕೊಂಡಿದ್ದ ಕಣ್ಣುಗಳು ದೀಪದ ಬೆಳಕು, ವಾದ್ಯದ ಧ್ವನಿಯ ಬೆಳಕು ಇವುಗಳ ಜೋಡಿ ಪ್ರಕಾಶವನ್ನು ಕಂಡು ಬೆಚ್ಚಿದವು. ಒಂದು ಬಾಗಿಲಿನ ಬದಿಗೆ, ಬೆಳಕು ಹೆಚ್ಚಿಲ್ಲದ, ಜನ ಹೆಚ್ಚಿಲ್ಲದ ಮೂಲೆಯೊಂದರಲ್ಲಿ ಕುಳಿತ.

ಅವನು ಚರ್ಚನ್ನು ಪ್ರವೇಶಿಸಿ ವರ್ಷಗಳಾಗಿದ್ದವು. ತಂಗಿಯ ಮದುವೆಯ ದಿನ ತಾಯಿ, ತಂದೆಯರೊಡನೆ ಹೋಗಿದ್ದ. ವಿವಾಹ ಜರುಗಿದುದು ಒಂದು ಸಣ್ಣ, ಬಡ ಚರ್ಚಿನಲ್ಲಿ. ಮತ್ತೆ ಚರ್ಚಿನ ಬಳಿ ಬಂದುದು ವಾರದ ಹಿಂದೆ. ಇದೇ ಚರ್ಚಿನಲ್ಲಿ ಭಾರಿ ಮದುವೆಯೊಂದು ಜರುಗಿತ್ತು. ಬೊಂಬಾಯಿನಲ್ಲಿ ನೆಲೆಸಿದ್ದ ಇಬ್ಬರು ಹಣವಂತ ಆಂಗ್ಲರ ಮನೆತನಗಳು ಮದುವೆಯಿಂದ ಒಂದಾಗಿದ್ದುವು. ಅವನು ಸಮಾರಂಭಕ್ಕೆ ಪತ್ರಿಕಾ ಪ್ರತಿನಿಧಿಯಾಗಿ ಬಂದಿದ್ದ. ತಡವಾಗಿ ಬಂದದ್ದರಿಂದ ಒಳಗೆ ಹೋಗಲಾಗಿರಲಿಲ್ಲ. ಹೊರಗೇ ನಿಂತು ಛಾಯಾ ಚಿತ್ರಗಳನ್ನು ತೆಗೆದಿದ್ದ. ಸಮಾರಂಭದ ವಿಜೃಂಭಣೆ, ಮನೆಯವರ ಉಲ್ಲಾಸ, ಪ್ರೇಕ್ಷಕರ ಬೆರಗು ಇವುಗಳನ್ನು ಕಂಡು ತಿರಸ್ಕಾರದ ನಗೆ ನಕ್ಕಿದ್ದ.

ಅವನು ಕುಳಿತ ಕೂಡಲೆ ಮೇಳ-ಗೀತ ಪ್ರಾರಂಭವಾಯಿತು. ಗಾಯಕ ವೃಂದ ಪವಿತ್ರ ಗೀತಗಳ ಪಠನವನ್ನು 'ರೆಕ್ವಿಎಂ' ಇಂದ ಆರಂಭಿಸಿತು. ಕ್ರಿಸ್ತನ ಕಡೆ ಉಸಿರಿನ ಹಿಂದೆಯೇ ಧಾವಿಸಿ ಬಂದ ಕತ್ತಲೆಯ ವಿಷಯವಾಗಿ ವೃಂದ ಹಾಡಿತು. ಶಿಕ್ಷಿಸಿದವರ ಅಜ್ಞಾನದ ಬಗೆಗೆ ಕ್ರಿಸ್ತನ ಮರುಕದ ಮಾತುಗಳು, ಅವುಗಳನ್ನು ಕೇಳಿ

ಅವಮಾನಿತರಾದ ಕ್ರೂರಿಗಳು, ಶಿಲುಬೆಯನ್ನು ಸುತ್ತುಗಟ್ಟಿದ ಕ್ರಿಸ್ತನ ಹಿಂಬಾಲಕರ ಶೋಕಗೀತೆ–ಎಲ್ಲವನ್ನೂ ಕುರಿತು ಹಾಡಿತು.

ಹಿಂಬದಿಯಲ್ಲಿ ಹುಡುಗಿಯರ, ಸಣ್ಣ ಹುಡುಗರ ಏರು ಧ್ವನಿಗಳು, ಮುಂದೆ ದೊಡ್ಡ ಗಂಡಸರ ಆಳವಾದ ಧ್ವನಿಗಳು ; ಏರು ಧ್ವನಿಯ ಪಿಟೀಲು, ಆಳ ಧ್ವನಿಯ ಆರ್ಗನ್. 'ಅಲೆಗಳು'–ಆ ಜಪಾನೀ ಜಲವರ್ಣದ ಚಿತ್ರದ ನೆನಪಾಯಿತು ಅವ ನಿಗೆ. ಹಿನ್ನೆಲೆಯಲ್ಲಿ ಮುಗಿಲೆತ್ತರದ ತೆಳು, ಚಂಚಲ ಅಲೆಗಳು ; ಮುಂದೆ ಗಂಭೀರ ವಾದ, ತಗ್ಗಾದ, ದಪ್ಪ ಅಲೆಗಳು.

'ರೆಕ್ವಿಎಂ,' 'ಗ್ಲೋರಿಯಾ' ಕ್ಕೆ ಎಡೆಮಾಡಿಕೊಟ್ಟಿತು. ಏರು ಧ್ವನಿಗಳ ಕಣ್ಣೀರನ್ನು ಒರಸುತ್ತ ಬಂತು ಒಂದು ಗಂಡು ಧ್ವನಿ, ಹಿನ್ನೆಲೆಯಿಂದ. ಸಮಾಧಿ ಒಡೆದು ಮೇಲೆದ್ದ ಕ್ರಿಸ್ತ ಭಕ್ತ ವೃಂದವನ್ನು ಸಂತೈಸಿ, ಹಾರೈಸಿ ಸ್ವರ್ಗದತ್ತ ಸಾಗಿದ. ಮಿಂಚು ಆರತಿ ಬೆಳಗಿತು. ಮಳೆ ಮಂಗಲ ಗಾನ ಹಾಡಿತು. ಗುಡುಗು ಜಯ ಭೇರಿ ಬಾರಿಸಿತು. ಭಕ್ತರ ಶೋಕ ಆನಂದೋತ್ಸಾಹಗಳಿಗೆ ತಿರುಗಿತು. ಪುನರ್ಜನ್ಮ ಪಡೆದ ಜೀವಗಳೆಲ್ಲವೂ ಕೃತಜ್ಞತೆಯ ನರ್ತನದಲ್ಲಿ ಭಾಗವಹಿಸಿದವು.

ಶಿಲಾಪೀಠ ಒಂದರ ಪಾದದ ಬಳಿ ನಿಂತಿದ್ದ ಯುವತಿಯೊಬ್ಬಳು ಪೀಠದತ್ತ ನಡೆದಳು. ಪೀಠಕ್ಕೆ ಕರೆದೊಯ್ಯುವ ದಾರಿ ಬಳಸು: ಶಿಲೆಯ ಸುತ್ತ, ಸುತ್ತ, ಕೊರೆದ ಮೆಟ್ಟಲುಗಳು. ನಿಧಾನವಾಗಿ ಹತ್ತ ತೊಡಗಿದಳು ಶ್ವೇತವಸ್ತ್ರಧಾರಿಣಿ ; ಶಿಲೆಯ ಸುತ್ತ, ಸುತ್ತ ಮೃದು ಬಿಳಿ ಬೆಳಕು ಸರಿಯತೊಡಗಿತು. ನರ್ತನದ ಸಂಗೀತ ಮರೆಯಾಯಿತು. ಕೈಮುಗಿದು ನಡೆಯತೊಡಗಿದ್ದ ಬಾಲೆ ಹಾಡತೊಡ ಗಿದಳು: 'ಆವೇ ಮರೀಯಾ....ಆವೇ ಮರೀಯಾ......'

ವರ್ತುಲ ವರ್ತುಲವಾಗಿ ಹರಿದು ಬಂದ ಗಾನವೆಳೆ ನೇರವಾಗಿ ಅವನನ್ನು ಸೇರಿತು. ಮೇಳದ ಸಂತಸದಲ್ಲಿ ಮೈಮರೆತಿದ್ದವನನ್ನು ಕಂಠದ ತೀಕ್ಷ್ಣತೆ ಎಚ್ಚರಿ ಸಿತು. ನರ್ತಿಸುತ್ತಿದ್ದ ಜನ, ಸುತ್ತುವರಿಯುತ್ತಿದ್ದ ತರುಣಿ ಎಲ್ಲರೂ ಮರೆಯಾ ದರು....'ಆವೇ ಮರೀಯಾ' ಮುಂದುವರಿಯುತ್ತಿತ್ತು. ಗಾಯಕಿ ಪಟ್ಟಣದಲ್ಲಿ ಪ್ರಸಿದ್ಧಳಾಗಿದ್ದ, ಮನ್ನಣೆಗೆ ಪಾತ್ರಳಾಗಿದ್ದ ಸೊಪ್ರಾನೊ....ಮತ್ತದೇ ಹೆಸರು, ಮತ್ತದೇ ಮಾರ್ದವ ! ಗಾಯಕಿಯ ಧ್ವನಿಯನ್ನು ಹಿಂದೂಡಿ ಬಂತು ಕರೆ: 'ಟೋನಿ ....ಟೋನಿ !' ಅಲೆಗಳು ತೊಳೆದಿದ್ದ ಎದೆ ಹಲಗೆಯ ಮೇಲೆ ಕರೆ ಕೊರೆಯಿತು.

'ಟೋನಿ....ಟೋನಿ !' ಆ ಸಾಲಿನ ಕೆಳಗೆ ಅವನಿಗರಿವಿಲ್ಲದಂತೆಯೇ ಬಯಕೆ ಬರೆಯಿತು: 'ಮರಿಯಾ-ಮರಿಯಾ !'—ನರ್ತಕರು ಜೊತೆಗಾತಿಯರತ್ತ ಸರಿಯುತ್ತ

ಉಸುರಿದರು: 'ಒಲವು ಸೊಗಸು !' ತೇಜಃಪುಂಜದ ಮೇಲೇರುತ್ತಿದ್ದ ಕ್ರಿಸ್ತನ ಶಾಂತ-ನಗೆ ನುಡಿಯಿತು: 'ಜೀವನ ಸೊಗಸು !'

ಮೂರು ವಾರಗಳಿಂದ ಅಶಾಂತಿಗೆ ಕಾರಣವಾಗಿದ್ದ ಚಿಂತೆ, ಅದಕ್ಕೆ ಹೊಳೆದ ಪರಿಹಾರ, ಎಲ್ಲ ಅನವಶ್ಯಕ, ತಪ್ಪು ಎನಿಸಿತು ಅವನಿಗೆ. ಮೆಲ್ಬಾ ಮನೆಬಿಡುವ ಮುನ್ನ ಹಾಡಿ ನೆರೆ ಹೊರೆಯವರ ಮನತಣಿಸಿದ ಹಾಡು, ಮೆನ್ಯೂಹಿನ್ ಪಿಟೀಲು ತಂತಿಗಳಿಂದ ಹೊರ ಹೊಮ್ಮಿಸಿ ಜನರ ಮನ ಸೆಳೆದ ಹಾಡು ಅವನ ನಿರ್ಧಾರವನ್ನು ಕ್ಷಣ ಕಾಲದಲ್ಲಿ ಹೇಳ ಹೆಸರಿಲ್ಲದಂತೆ ಮಾಡಿತು.

ಯುವತಿ ಪೀಠದ ಬಳಿ ಸೇರಿದಳು. ಪೀಠದ ಮೇಲಿನ ಶಿಲುಬೆಗೆ ಮಣಿದು ಜನರತ್ತ ತಿರುಗಿದಳು. ತನ್ನ ಎರಡು ಕೈಗಳನ್ನೂ ಅವರೆಡೆಗೆ ಹಾರೈಕೆಯಲ್ಲಿ ಚಾಚಿದಳು. ಸ್ಫೂರ್ತಿಗೊಂಡ ಜನ ಮತ್ತೆ ಹಾಡಲು ಪ್ರಾರಂಭಿಸಿದರು: 'ಕೋರ್ ಆವೋರಿ !' ಸಾಮಾನ್ಯ ಆನಂದಕೂಟಗಳ ಮೇಳಗಳಲ್ಲಿರುವ ಬಿರುಸು ಅದರಲ್ಲಿರಲಿಲ್ಲ. ಧ್ವನಿಗಳಲ್ಲಿನ ಮಾಧುರ್ಯ, ಸೂಕ್ಷ್ಮತೆ ಶ್ರಾವಕರ ಮೇಲೆ ಮೊಲ್ಲೆದಳ ಸುರಿಯುತ್ತಿದ್ದವು. ಹೂದಳದ ಸ್ಪರ್ಶಕ್ಕೆ ಮೃದುವಾಯಿತು ಅವನ ಮೈ, ಮನಸ್ಸು.

ಮೇಳದವರು ಕಡೆಯದಾಗಿ 'ಕ್ರೀಡೊ'ವನ್ನು ಹಾಡಲಾರಂಭಿಸಿದರು. ಮೊಲ್ಲೆದಳ ಮೃದು ಮಾಡಿದ ಮೈ ಮನಗಳನ್ನು ಸವರಿತು ನವಿಲುಗರಿ ಬೀಸಣಿಗೆ ಗಾಳಿ: ದೇವತೆಗಳ ರೆಕ್ಕೆ ಸ್ಪರ್ಶ. ಮೇಳ ಕಡೆಯ ಸಾಲನ್ನು ಒಂದು ಕಂಠದಿಂದ ಹಾಡಿತು; 'ಆಮೆನ್....ಆಮೆನ್ !' ತಗ್ಗು ದನಿಯಲ್ಲಿ ತೇಲಿ ಬಂತು ವಿಶ್ವಾಸ ತುಂಬಿದ ಆಶೀರ್ವಾದ ; ತಲೆ ತಡವಿತು ಕೈ. ಇನಿಯಳ ಬೆಂಕಿ ಸ್ಪರ್ಶವಲ್ಲ ; ಶಾಂತಿ ಲೇಪಿಸಿದ, ಶಾಂತಿ ಲೇಪಿಸುವ ವೃದ್ಧ ಕೈ-ತಾಯಿಯದು, ತಂದೆಯದು, ಅಜ್ಜಿಯದು, ಅಜ್ಜನದು. ಬಯಕೆ ಬಸಿಯುವ ಕೈಯಲ್ಲ ; ಸಮಾಧಾನ ತುಂಬುವ, ಬಯಕೆಗಳೇನೂ ಇಲ್ಲದ ಕೈ ; ಒಂದೇ ಬಯಕೆ ; ಹಾರೈಕೆ. ಪವಿತ್ರಾತ್ಮ ಸಂತನ ಸ್ಪರ್ಶ, ದೋಷಾತೀತ ಪೋಪನ ಸ್ಪರ್ಶ....ಮೃದು ಮೈ, ಈಗ ತಂಪಾಗಿತ್ತು.

ಗಾನ ಮಂತ್ರದಲ್ಲಿ ಕೊನೆಗಂಡಿತು. ನಾಟಕಗಳಲ್ಲಿನಂತೆ, ಸಂಗೀತ ರಚನೆಗಳಲ್ಲಿನಂತೆ, ಆಪೆರಾಗಳಲ್ಲಿನಂತೆ ಪರಾಕಾಷ್ಠೆಗೇರಲಿಲ್ಲ. ಉದ್ದೇಶಪೂರ್ವಕವಾಗಿಯೇ ಆ ರೀತಿ ಅಂತ್ಯವಾಗಿತ್ತು. ಪರಾಕಾಷ್ಠೆಗೇರಿದ ಪಾದದ ಮರುಹೆಜ್ಜೆ ಕೆಳಗಿಳಿತ, ಹಠಾತ್ತಾದ, ಕ್ಷಿಪ್ರವಾದ ಅಧಃಪತನವಾಗಿರಬಹುದು ಅಥವಾ ನಿಧಾನದ, ಅನುಕ್ರಮವಾದ ಕೆಳಗಿಳಿಯುವಿಕೆ ಇರಬಹುದು. ಯೌವನದೊಲವು !....ಆದರೆ ಈ ಶಾಂತ, ದೀರ್ಘಪ್ರೇಮದಲ್ಲಿ ಬಿರುಕಿಲ್ಲ, ತಡೆಯಿಲ್ಲ. ಮಧ್ಯವಯಸ್ಸಿನ ಪ್ರೇಮ!...... ಥಿಸಿಯಸ್, ಹಿಪ್ಪೊಲೈಟಾರ ನಿಶ್ಚಿತ ಪ್ರೇಮ ಮತ್ತು ಮಿಕ್ಕ ಮೂರು ಜೋಡಿಗಳ

ಚಂಚಲ ಪ್ರೇಮ......ಸಾತ್ವಿಕ ಪ್ರೇಮ, ರಾಜಸಿಕ ಪ್ರೇಮ....ಅಸ್ಥಿರತೆ ಇಲ್ಲ, ಸಂದೇಹ ಸಂಶಯಗಳಿಲ್ಲ. ನಿಸ್ಸಂದೇಹವಾದ ನಂಬಿಕೆ ಇದೆ, ಶ್ರದ್ಧೆ ಇದೆ, ಶಾಂತಿ ಇದೆ.

ಇದರ ಅರಿವಾದವನು ಅಂದುಕೊಂಡ; 'ದುಃಖಕ್ಕೆ, ಕಷ್ಟಕ್ಕೆ, ಪ್ರೇಮದ ಸಾವಿಗೆ ಕಾರಣ ಕಾಲ ಎಂದುಕೊಂಡಿದ್ದೆನಲ್ಲ. ಎಂತಹ ಮೂರ್ಖ ನಾನು !'

ಮೇಳದವರು ತಮ್ಮ ಸ್ಥಳಗಳಲ್ಲಿ ಕುಳಿತೊಡನೆಯೆ, ಯಾರಿಗೂ ಅರಿವಾಗದಂತೆ, ಪಕ್ಕದಲ್ಲಿದ್ದ ಬಾಗಿಲಿನ ಮೂಲಕ ಆಚೆಗೆ ಬಂದ. ನಡೆದು ಬಂದ ಹಾದಿಯನ್ನೇ ಮತ್ತೆ ಹಿಡಿದ.

ದಾರಿ ವೇಗವಾಗಿ ಓಡಿತು. ಮರಿಯಾಳಿದ್ದ ಕಟ್ಟಡದ ಬಳಿ ನಿಂತಿತು. ಅವಳ ಕೋಣೆಯಲ್ಲಿನ್ನೂ ಬೆಳಕು ತುಂಬಿತ್ತು. ಮೆಟ್ಟಿಲಿನ ಬಳಿ ಅಡ್ಡವಾಗಿ ಬಂದ ಕಾವಲುಗಾರನ ಕೈಗೆ ನಾಣ್ಯವೊಂದನ್ನು ಅವುಕಿ ಮೇಲೋಡಿದ. ಕೋಣೆಯ ಬಾಗಿಲನ್ನು ಬಡಿದ.

'ಯಾರದು ?'

ಧ್ವನಿಯಲ್ಲಿ ಮೂರು ವಾರದ ಆತಂಕ, ಆಕಾಂಕ್ಷೆಗಳು ತುಂಬಿದ್ದವು.

'ನಾನು, ಟೋನಿ....ಬಂದಿದ್ದೇನೆ. ಬಾಗಿಲು ತೆಗೆ!'

—ರಾಜಲಕ್ಷ್ಮಿ ಎನ್. ರಾವ್

# ಭೂಮಿ ಕಂಪಿಸಲಿಲ್ಲ

'ಸುನಂದ, ಸಿದ್ಧ ಮಾಡ್ಕೋ ಅಮ್ಮ ಜಾಗ್ರತೆ'

'ಆಗೋಲ್ಲಮ್ಮ, ಆಗಲ್ಲ, ಸಿದ್ಧಾನೂ ಆಗಲ್ಲ, ಮದುವೆನೂ ಆಗೋಲ್ಲ'

'ಹಾಗೆಂದ್ರೇನೆ, ತಾಯಿ, ಹೆಣ್ಣಾಗಿ ಹುಟ್ಟಿ ?'

'ಅದೇ ಅಮ್ಮ ನಾನು ಹೇಳ್ತಾ ಇರೋದು, ಹೆಣ್ಣಾಗಿ ಹುಟ್ಟಿ, ಮದುವೆ ಆಗದೇ ಇರೋದು ಹೇಗೇ ಅನ್ನೋದನ್ನ ತೋರಿಸಿಕೊಡ್ತೀನಿ.'

'ಥೂ ಹುಚ್ಚಿ ಯಾರಾದ್ರೂ ಕೇಳಿದ್ರೆ ಏನಂದಾರು ?'

'ಗಂಡು ಬೀರಿ, ಅವೆುಜಾನ್, ಬೀದಿರಾಣಿ......'

'ಏನೇ ಇದು ಇಷ್ಟು ಹಟಮಾಡ್ತಿಯಲ್ಲೇ, ತಾಯಿ, ಕಾಲೇಜು ಮೆಟ್ಟಲು ಹತ್ತಿ ವಿದ್ಯಾವಂತೆ ಬೇರೆಯಾಗಿದ್ದಿ.'

'ಕಾಲೇಜಿನಲ್ಲಿ ಏನು ಕಲಿತೆನೋ ಇಲ್ಲವೋ ಗೊತ್ತಿಲ್ಲಮ್ಮ, ಆದರೆ ಇದುವರೆಗಿನ ಜೀವನ ನನಗೆ ಇದನ್ನು ಹೇಳಿ ಕೊಟ್ಟದೆ.'

'ಏನೇ ಇದು ಜೀವನ, ಅನುಭವ, ಏನೋ ಮಹಾ ತಿಳಿದವರ ಹಾಗೇ ಆಡ್ತಿದ್ದೀಯಲ್ಲೇ, ಇನ್ನೂ ಪ್ರಪಂಚಾನೇ ಸರಿಯಾಗಿ ಗೊತ್ತಿಲ್ಲ......ಏಳಮ್ಮಾ ಏಳು, ಹಾಗೆಲ್ಲಾ ಹಟಮಾಡಬಾರ್ದು, ನಗುನಗುತ್ತಾ ಇರು ನನ್ನ ತಾಯಿ, ನಿನ್ನ ಕೈ ಹಿಡಿಯೋ ಪುಣ್ಯಾತ್ಮ ಇದ್ದೇ ಇದ್ದಾನೆ. ದೇವರಿಗೆ ಕಣ್ಣಿಲ್ಲವೇ ?'

* * *

ಒಬ್ಬ ಪುಣ್ಯಾತ್ಮ! ದೇವರಿಗೆ ಕಣ್ಣು! ಹ....ಹ....ಹ....ಹ...ಹ....ಹ ಇವೆರಡೂ ಜಗತ್ತಿನಲ್ಲಿ ಇದ್ದಿದ್ರೆ, ಏಕಿಷ್ಟು ಕಷ್ಟ ? ಹೋಗಲಿ ಅಮ್ಮನ ಸಮಾಧಾನ ಕ್ಕೋಸ್ಕರವಾದರೂ ಒಂದಿಷ್ಟು ಕನ್ನಡಿ ಮುಂದೆ ನಿಲ್ಲೋಣ.

ಥತ್, ಈ ಕನ್ನಡಿಯೇ ನನ್ನ ಮುಖ ಚೆನ್ನಾಗಿ ತೋರಿಸೋದೇ ? ಅಥವಾ ನನ್ನ ಮುಖ ನನ್ನ ಒಬ್ಬಳ ಕಣ್ಣಿಗೇ ಅಂದವೇ ? ಈ ನೀಳ ಮೂಗು, ಸಣ್ಣಹಲ್ಲು, ಈ ಗಲ್ಲ ಯಾರಿಗಿದೆ ? ಥತ್ ಏನೇನೋ ಯೋಚನೆ.

ಇವನೊಬ್ಬ ಹೊಸಬ. ನೂರು ಪ್ಲಸ್ ಮತ್ತೊಂದು. ಹೂಂ......ಆಸಾಮಿ ಹೇಗಿರುತ್ತಾನೋ ನೋಡಬೇಕು. ಹ....ಹ....ಹ....ಹ....ಹ, ಇವರುಗಳು ನನ್ನ ಪರೀಕ್ಷೆ ಮಾಡಲು ಬರ್‍ತಾರಂತೆ. ಆದರೆ ನಿಜವಾಗಿ ಪರೀಕ್ಷೆ ಮಾಡೋದು ನಾನೇನೆ!

ಹಿಂದಿನದೆಲ್ಲಾ ಎಷ್ಟು ಚೆನ್ನಾಗಿ ಜ್ಞಾಪಕವಿದೆ! ಆ ದಪ್ಪಗಿನ ಕುಳ್ಳಗಿನ ಆಸಾಮಿ ನನ್ನನ್ನು ನೋಡಿ ಬಾಯಿ ಬಾಯಿ ಬಿಡುತ್ತಿದ್ದ. ನನ್ನ ಡಬ್ಬಲ್ ವಯಸ್ಸೇ ಇರ್ಬೇಕು. ಆದರೆ ನಾನು ಬಾಯಿ ಮುಚ್ಚಿ ಮುಖ ತಿರುಗಿಸಿದೆ. ವಹವ್ವಾ! ಇನ್ನೊಬ್ಬ ದಿಲೀಪ್‌ಕುಮಾರ್ ಕ್ರಾಪ್, ಕಡ್ಡೀ ಮೀಸೆ, ಥೇಟ್ ಜಾಕಿ. ಆದರೆ ಅವನಿಗೆ ಎಂ.ಬಿ.ಬಿ.ಎಸ್., ಓದಿಸುವ ಮಾವನೇ ಬೇಕಂತೆ. 'ಎಂ.ಬಿ.ಬಿ.ಎಸ್. ಓದಿಸ್ತೀರಾ? ಬಿ.ಇ.ಗೆ., ಸೀಟು ಕೊಡಿಸ್ತೀರಾ? ಮೂರು ಸಾವಿರ ಮೊದಲು ನಗದು ಕೊಡಿ; ಆಮೇಲೆ ಎರಡೂ ಖರ್ಚುಹಾಕಿ ಮದುವೆಮಾಡಿಕೊಡಿ. ಪೋಸ್ಟಲ್ ಡಿಪಾರ್ಟ್‌ಮೆಂಟಿನಲ್ಲಿ ಅಪಾಯಿಂಟ್‌ಮೆಂಟ್ ಕೊಡಿಸ್ತೀರಾ?' 'ನಿಮ್ಮ ಹು ಡು ಗಿ ತುಂಬಾ ಓದಿದ್ದಾಳೆ, ನಮಗೆ ಎಸ್.ಎಸ್.ಎಲ್.ಸಿ. ಮಾಡಿದ ಹುಡುಗಿ ಸಾಕು' 'ಈ ಕಾಲೇಜಿನ ರಾಣಿ ಕಾಫಿ ಮಾಡ್ತಾಳೆಯೇ ?' 'ಎಲ್ಲಿ ಸ್ವಲ್ಪ ದೀಪದ ಹತ್ತಿರ ಬಾಮ್ಮಾ' 'ನಮ್ಮ ಹುಡುಗನ ಬಣ್ಣಕ್ಕೆ ಸ್ವಲ್ಪ ಕಪ್ಪೇ' 'ನಮ್ಮ ಹುಡುಗ ಸ್ವಲ್ಪ ಕುಳ್ಳ, ನಿಮ್ಮ ಹುಡುಗಿ ಸ್ವಲ್ಪ ಎತ್ತರ, ನಮಗೆ ಸ್ವಲ್ಪ ಮಟ್ಟಸವಾಗಿರುವ ಹುಡುಗಿ ಸಾಕು.' 'ನಮ್ಮ ಹುಡುಗಿಗೆ ಒಂದು ಗಂಡು ಹುಡುಕಿಕೊಟ್ಟರೆ, ನಿಮ್ಮ ಹುಡುಗೀನ ತಂದು ಕೊಳ್ತೀವಿ.' 'ನನ್ನ ತಂಗೀಗೆ ಮದುವೆ ಆದ ಹೊರತು ನಾನು ಮದುವೆ ಆಗೋಲ್ಲ.' 'ನನಗೆ ಕೆಲಸ ಸಿಗೋತನಕ ಮದುವೆ ಬೇಡ.' 'ಕ್ಷಮಿಸಿ ನಾನು ಈ ಜೀವನದಲ್ಲಿ ಬ್ರಹ್ಮಚಾರಿ ಯಾಗಿಯೇ ಇರಬೇಕೆಂದು ಮಾಡಿದ್ದೇನೆ. ಆದರೆ ನನ್ನ ತಂದೆ ತಾಯಿಗಳ ಬಲ ವಂತಕ್ಕೆ ನಿಮ್ಮ ಹುಡುಗಿ ನೋಡಲು ಬಂದಿದ್ದೆ ಅಷ್ಟೆ.' 'ನನಗೆ ಬರೋ ಸಂಬಳ ಸಾಲದು. ಆದ್ದರಿಂದ ನಾನು ಮದುವೆಯಾಗುವವಳೂ ಸಂಪಾದನೆ ಮಾಡುವವ ಳಾಗಬೇಕು.' 'ನನಗೆ love at first sight ಏ ಆಗ್ಬೇಕು, ಅದೂನೂ love marriage' 'ನನಗೆ ಕುರ್ಗಿನೋ, ಕಾಶ್ಮೀರಿಯೋ, ಕಾಮರೂಪ ದೇಶದ ಹುಡುಗೀನೇ ಆಗ್ಬೇಕು'

ವಹವ್ವಾ! ಇವರುಗಳು ನನ್ನ ನೋಡೋಕೆ ಬರ್‍ತಾರಂತೆ. ಅವರನ್ನೇ ಮೊದಲು ಚೆನ್ನಾಗಿ ನೋಡಿಕೊಂಡು, ಆಮೇಲೆ ನನ್ನ ನೋಡೋಕೆ ಬರಲಿ.

* * *

'ಸುನೂ, ಜಾಗ್ರತೆ ಏಳಮ್ಮ, ಆಗಲೇ ನಾಲ್ಕು ಗಂಟೆ ಆಯ್ತು'

'ಆಗೋಯ್ತಮ್ಮ ತಲೆ ಬಾಚಿಕೊಂಡಿದ್ದು. ಇನ್ನೇನು ಸ್ವಲ್ಪ ಹೊತ್ತಿಗೆ ರೆಡಿಯಾಗಿಬಿಡ್ತೀನಿ'

* * *

ತಲೆ ಮೇಕಪ್ ಆಯ್ತು. ಇನ್ನು ಡ್ರೆಸ್ ಯಾವ ಸೀರೆ ಉಡಲಿ ? ಹೂ.... ಯಾವುದೋ ಸೀರೆ ಉಟ್ಕೊಂಡರಾಯಿತು. ಯಾವೋನೋ ಹೊಸಬನಿಗೋಸ್ಕರ ಸೀರೆ select ಮಾಡಬೇಕೆ ? ಎಲ್ಲಾ ಗಂಡಸರಂತೆ ಇವನೂ ಒಬ್ಬ. ಆದರೆ ಅಮ್ಮ ಬಯ್ತಾಳಲ್ಲ ? ಥತ್, ಈ ಅಮ್ಮನ ಕಾಟ ಬೇರೆ ! ನನ್ನ ಹೀಗೆ ಗೋಳು ಹೊಯ್ದುಕೊಳ್ಳುವ ಬದಲು ಹುಟ್ಟಿಸಲೇ ಬಾರದಾಗಿತ್ತು.

ಈ ಹಸಿರು ಸಿಲ್ಕ್ ಸೀರೆ, yes ಇದೇ ಸರಿ. ಇದಕ್ಕೂ ಒಂದು ಇತಿಹಾಸ. ಈ ಸೀರೆ ಹರಿಯುವತನಕ ಅದನ್ನು ಮರೆಯುವ ಹಾಗೇ ಇಲ್ಲ. ನಮ್ಮಪ್ಪ ತಂದ ಸೀರೆ ನಾನುಟ್ಟಕೊಂಡು ಹೋಗುತ್ತಿದ್ದರೆ, ಇವರಿಗೆಲ್ಲಾ ಏನಂತೆ ? ಪಕ್ಕದ ಮನೆಯಾಕೆ, 'ಇಷ್ಟು ವಯಸ್ಸಾದ್ರೂ ನಾಚಿಕೆ ಬೇಡವೇ ಅಂದ್ರೆ ; ಗಂಡಸ್ರೆಲ್ಲಾ ತಿರುಗಾಡ್ತಿರ್ತಾರೆ ಅನ್ನೋ ಹೆದರಿಕೆ ಇಲ್ಲದೆ ಹೀಗೆ ಎದೆ ಎತ್ಕೊಂಡು ತಿರುಗಾಡ್ತಿದಾಳೆ' ಅನ್ನೋದೆ ? ಇಲ್ಲ ಇವಳ ಗಂಡ ನೋಡ್ತಾನೆ ಅಂತ, ತಲೆಮುಸ್ಕೊಂಡ್ ತಿರುಗಲಿ ?

ಒಂದೇ ಎರಡೇ ಇಂಥ ಮಾತು—

'ಒಳ್ಳೇ ಕುದುರೆ ಹಾಗೆ ಹೇಗೆ ಬೆಳ್ದಿದ್ದಾಳೆ ನೋಡಿ ; ಏನ್ರಮ್ಮ ಕಾಲ ಎಷ್ಟು ಕೆಟ್ಹೋಯ್ತು! ಆದಕ್ಕೇ ಕಲಿಕಾಲ ಎನ್ನೋದು. ನಮ್ಮ ಕಾಲದಲ್ಲಿ ಎಂಟು ವರ್ಷದ ಮೇಲೆ, ಮನೇಲಿ ಇಟ್ಕೊಳ್ಳೋದೂ ಅಂದ್ರೇನು ? ("ಇಟ್ಕೊಳ್ಳದಿದ್ದರೆ ಬಸಿರಲ್ಲಿದ್ದಾಗಲೇ ಮದುವೆ ಮಾಡಿಬಿಡಲಿ, ನನ್ನ ವಿಷಯ ಇವರಿಗ್ಯಾಕೆ") ನೋಡ್ರಿ ಮೈನೆರೆದು ಆಗಲೇ ಎಂಟು ವರ್ಷ ಆಯ್ತಂತೆ, ಅವಳ ವಯಸ್ಸಿನಲ್ಲಿ ನನಗೆ ನಾಲ್ಕು ಮಕ್ಕಳು ಕಣ್ರಿ. ಏನ್ರೀ ಈ ಪ್ರಪಂಚದಲ್ಲಿ ಗಂಡುಗಳಿಗೆ ಗತಿಯೋ ಇಲ್ವೆ ? ಅವಳಿಗೆ ತಾನೇ ಮಹಾ ಸುಂದರಿ ಅಂತ ಜಂಭವಂತೆ ರೀ, ಮೊನ್ನೆ ಒಂದು ವರ ಬಂದಿತ್ತಂತೆ ರೀ, ಚೆನ್ನಾಗಿಲ್ಲ ಅಂತ ಇವಳೇ ಒಪ್ಪಲಿಲ್ಲವಂತೆ ರೀ, ಈವಾಗ ನಮ್ಮನ್ನೆಲ್ಲಾ ನಮ್ಮ ಒಪ್ಪಿಗೆ ತೊಗೊಂಡೇ ಮಾಡಿದ್ರೇನ್ ರೀ, ನಾವು ಮಕ್ಕಳು ಮರಿ ಇಟ್ಕೊಂಡು ಸುಖವಾಗಿಲ್ವೇನ್ ರೀ, ಇವಳಿಗೆ ಗ್ರಾಜುಯೇಟ್ ಗಂಡನೇ ಆಗ್ಬೇಕಂತೆ, ಹುಡುಗನೂ ಚೆನ್ನಾಗಿರಬೇಕಂತೆ, ಎಲ್ಲಾ ಚೆನ್ನಾಗಿರೋನು ಈ ರತೀಸೇ ಹುಡುಕಿಕೊಂಡು ಬರ್ತಾನೆಯೋ ? ಇನ್ನೊಂದು ವಿಷಯ ಕಣಂತ್ರಮ್ಮ. ಯಾವೋನ ಜೊತೇಲೋ ಸಿನಿಮಾಕ್ಕೆ ಆಗಾಗ್ಗೆ ಹೋಗ್ತಿದ್ಲಂತೆ. ಅವನ ಜೊತೇಲಿ ಓಡಿ ಹೋಗಬೇಕು ಅಂತ ಸಹ ಮಾಡಿದ್ಲಂತೆ, ಹಾಗಂತ ಮನೇಲಿ ಕಾಗದ ಸಹ ಬರೆದಿಟ್ಟು

ಹೋಗಿದ್ಲಂತೆ. ಆದರೆ ಈ ಪ್ರಾರಬ್ಧನ ಯಾರು ಕಟ್ಕೊಕೋತಾರೆ ಹೇಳಿ ? ಅವನು ಎಲ್ಲಾ ಅನುಭವಿಸಿ ಓಡಿದ. ಏನೋ ಇವಳ ಅದೃಷ್ಟ ಚೆನ್ನಾಗಿತ್ತು......ಬನ್ನಿ ಅಮ್ಮ ಹೋಗೋಣ. ನಮಗೆ ಯಾಕೆ ? ಮಾಡಿದವರ ಪಾಪ ಆಡಿದವರ ಬಾಯಲ್ಲಿ ಅಂತ, ಬನ್ನಿ ಪುರಾಣಕ್ಕಾದರೂ ಹೋಗೋಣ, ಕಂಡೋರ ಮನೆ ಸುದ್ದಿ ನಮಗೆ ಯಾಕೆ ?'

* * *

'ಇನ್ನೂ ಆಗಿಲ್ವೇ ತಾಯಿ, ೪॥ ಗಂಟೆಗೆ ಸರಿಯಾಗಿ ಬಂದ್ಬಿಡ್ತಾರಂತೆ'

'ನೋಡಮ್ಮ, ಸೀರೆ ಸಹ ಉಟ್ಕೊಂಡು ಆಗೋಯ್ತು. ಇನ್ನು ಮುಖಕ್ಕೆ ಸ್ವಲ್ಪ coating ಕೊಟ್ಬಟ್ರೆ ರೆಡಿ'

'ಸರಿ, ಜಾಗ್ರತೆ ಸಿದ್ಧವಾಗಿ ಬಿಡು. ನಾನು ಒಳಗಡೆ ಸ್ವಲ್ಪ ಸಿದ್ಧಮಾಡೋದು ಇದೆ. ನಿಧಾನ ಮಾತ್ರ ಮಾಡ್ಬೇಡ. ಸಧ್ಯ ಈ ಸಾರಿ ಬಂದೋರಾದರೂ ದೇವರ ದಯದಿಂದ ಒಪ್ಪಿಬಿಟ್ರೆ !'

* * *

ಒಪ್ಪೋದು, ವ್ಹಾ ಅಂಗಡಿ ಸಾಮಾನು ! ನಾನು ಮಾಲು, ಗಂಡು ಗಿರಾಕಿ, ಅಪ್ಪ ಅಮ್ಮ ಪ್ರೊಪ್ರೈಟರ್ಸ್! ಹ್ಞೂ ನಡೀಲಿ, ಈ ಪ್ರಾಣೀನೂ ಬಂದು ಈ ಮಾಲನ್ನು ನೋಡಿಕೊಂಡು ಹೋಗಲಿ. ನೂರು ಪ್ಲಸ್ ಬಂದು. ಕರೆದಾಗ ಹೋಗಿ ಕೂತ್ಕೊಳ್ಳೋದು, ಕೇಳಿದ್ದಕ್ಕೆ ಉತ್ತರ ಕಕ್ಕೋದು, ಹಾಡು ಅಂದ್ರೆ ಕಿರ್ಕ್ಲೋದು, ಆಮೇಲೆ ಮಾಲಿನ ಬಗ್ಗೆ ಮಾತುಕತೆ.

* * *

'ಸುನೂ, ಬಂದ್ಬಿಟ್ರು ಕಣೇ'

'ನಂದೂ ಆಗೋಯ್ತಮ್ಮ. ನೀನ್ ಕರದೇಟಿಗೇ ಹಾಜರ್.' ಇದೇ ಕೊನೇ Interviev ಇನ್ನೆಂದೂ ಈ ಪ್ರದರ್ಶನಕ್ಕೆ ಹೋಗುವುದಿಲ್ಲ. ಇವನಿಗೇನು ಬೇಕೋ ನೋಡೋಣ, ೪೦೦೦ ರೂಪಾಯಿಯೋ, ಬಿ. ಇ. ಸೀಟೋ, ಪೀಚು ಹುಡುಗಿಯೋ!

* * *

'ಹೀಗೆ ಬಾಮ್ಮ, ನಾಚಿಕೆ ಪಟ್ಕೋಬೇಡ'

('ನಾಚಿಕೆ ಯಾವೊತ್ತೋ ಹೊಡೆದೋಡಿಸಿ ಬಿಟ್ಟಿದ್ದೀನಿ. ಜೋಯಿಸ್ರೆ, ಹೇಗಿದ್ರೂ ನಾನು ಗಂಡುಬೀರಿ. ಆದ್ರೂ ಬೇಕಲ್ಲ show')

'ತಲೆ ಎತ್ತಮ್ಮ, ವರ, ವರನಕಡೆಯವರು ಎಲ್ಲಾ ನೋಡಲಿ'

('ಅಷ್ಟು ಜನ ಯಾಕೆ, ಎಲ್ಲಾ ನೋಡಲಿ, ಈ ದುನಿಯಾದಲ್ಲಿರುವ ವರಗಳು ಎನಿಸಿಕೊಂಡಿರುವವರೆಲ್ಲಾ ನೋಡಲಿ')

('ಅರೆ ಇವನು ತಲೆ ತಗ್ಗಿಸಿ ಬಿಟ್ಟಿದ್ದಾನಲ್ಲ, ವಿಚಿತ್ರಪ್ರಾಣೀನೇ ಇರಬೇಕು. ಬಂದೋರೆಲ್ಲಾ, ನನ್ನ ಮೈ ತಿನ್ನೋರ್ಹಾಗೆ ನೋಡುತ್ತಿದ್ದರು. ಮುಖ, ಎದೆ, ಏನೇನೋ. ಆದರೆ ಈ ಗುಗ್ಗೂ ಎಲ್ಲೋ ಕುಮಾಲಯದಿಂದಲೇ ಬಂದಿರಬೇಕು. ನೋಡಿಕೊಂಡು ಬಿಡಪ್ಪ, ಒಂದುಗಳಿಗೆ, ಬಿಟ್ಟಿ Exhibition. ಆದರಲ್ಲಿ ಸೀನೇ ಮುಖ್ಯಉದ್ಘಾಟನೆ ಮಾಡುವ ಮಂತ್ರಿಗಳಿದ್ದ ಹಾಗೆ.')

'ಅಳಿಯದೇವರು ದಯವಿಟ್ಟು ತಮ್ಮ ಒಪ್ಪಿಗೆ ತಿಳಿಸಬೇಕು.'

'ನಾನು ಅವರ ಹತ್ತಿರ ಸ್ವಲ್ಪ ಪ್ರೈವೇಟಾಗಿ ಮಾತನಾಡಬೇಕಲ್ಲ.'

('ಆ ! ಪ್ರೈವೇಟ್, ಖಂಡಿತ ವಿಚಿತ್ರಪ್ರಾಣಿ. ಈ ದುನಿಯಾದ್ದಂತೂ ಖಂಡಿತಾ ಅಲ್ಲ. ಅಪ್ಪ ಅಮ್ಮ ಜೋಯಿಸ್ರು ಎಲ್ಲಾ ಗಾಬರಿಯಾಗಿ ಬಿಟ್ಟಿದ್ದಾರಲ್ಲಾ! ಮದುವೆಗೆ ಮುಂಚೆ ಏನು ಇವನ ತಲೆ ಪ್ರೈವೇಟ್, ಯಾವಾಗಲೂ ಅವ್ರಮೇಲೆ ಪ್ರೈವೇಟ್ ಇರೋದು ಹೂಂ-ಈ ಪ್ರಾಣೀದೂ ಒಂದು ವಿಚಿತ್ರ ಇಚ್ಛೆ ನಡೆದು ಹೋಗಲಿ')

* * *

'ಕೂತ್ಕೊಳ್ಳಿ ಆ ಕುರ್ಚಿ ಮೇಲೆ.'

('ಆ ! ನಮ್ಮ ಮನೆಯಲ್ಲೇ ನನಗೇ ಸ್ವಾಗತ, ಅದೂ ಹೊರಗಿನವನೊಬ್ಬನೀದ. ಇವೂ ಒಂದು ವಿಚಿತ್ರ. ಏನು ಕೇಳ್ತಾನೋ ಪ್ರಾಣಿ, ನೋಡ್ಬೇಕು.')

'ಅಲ್ಲಿ ಎಲ್ಲರ ಎದುರಿಗೆ ನಿಮ್ಮ ಒಪ್ಪಿಗೆಯನ್ನು ಸುಲಭವಾಗಿ ಕೊಡುವುದಕ್ಕೆ ಆಗುವುದಿಲ್ಲವೆಂದು ಇಲ್ಲಿ ಕೇಳ್ತಾ ಇದ್ದೇನೆ !'

('ಅರೆ, ಒಪ್ಪಿಗೆ, ಅದರಲ್ಲೂ ನನ್ನ ಒಪ್ಪಿಗೆ!')

'ಮುಂದೆ ನಾವಿಬ್ಬರೂ ಬಾಳಬೇಕಾದವರು, ಅದರಿಂದ ನಿಮ್ಮ ಇಷ್ಟ ತಿಳಿಯಲು ಕೇಳಿದೆ. ಏನೂ ಭಾವಿಸಬೇಡಿ.'

('ನನ್ನ ಇಷ್ಟಕ್ಕೆ ಇಷ್ಟೊಂದು ಪ್ರಾಮುಖ್ಯತೆ! ಖಂಡಿತ ಈತ ಈ ಲೋಕದವನಲ್ಲ............ಅರೆ ! ಇದೇನು ನನಗೆ ಮಾತನಾಡುವುದಕ್ಕೆ ಆಗ್ತಾ ಇಲ್ಲವಲ್ಲ! ಸುಮ್ಮನೆ ಕುಳಿತು ಬಿಟ್ಟಿದ್ದೀನಲ್ಲ!')

'ನೀವು ನನ್ನ ಪ್ರಶ್ನೆಗೆ ಉತ್ತರನೇ ಹೇಳದೇ ಸುಮ್ಮನಿದೀರಲ್ಲ ? ಜಾಸ್ತಿ ಹೊತ್ತಾದರೆ ಹೊರಗಡೆ ಇರುವವರೆಲ್ಲಾ ಏನಾದ್ರೂ ತಪ್ಪು ತಿಳಿದುಕೊಂಡಾರು.'

('ಹೌದು. ಏನಾದ್ರೂ ತಿಳಿದುಕೊಳ್ಳಬಹುದು. ಆದರೂ ನನಗೆ ಬಾಯಿ ಬಿಡುವುದಕ್ಕೇ ಆಗ್ತಾ ಇಲ್ಲವಲ್ಲ. ಆಗಲಿ ಕಷ್ಟಪಟ್ಟು ಕೇಳಿಯೇ ಬಿಡ್ತೀನಿ.')

'ನಿಮಗೆ ನಾಲ್ಕು ಸಾವಿರ ರೂಪಾಯಿ ವರದಕ್ಷಿಣೆ ಬೇಡವೆ ?'

'......................................'

'ಬಿ. ಇ. ಗೆ ಸೀಟು ಕೊಡಿಸೋ ಮಾವ ಬೇಡವೇ ನಿಮಗೆ ?'

'..........................'

'ನಮ್ಮ ಕೇರಿಯೋರು ನನ್ನ ವಿಷಯವಾಗಿ ಏನನ್ನೂ ನಿಮಗೆ ಹೇಳಲಿಲ್ಲವೆ?'

('ಅರೆ ! ಇದೇನು ಗಂಟಲು ಕಟ್ಟುತ್ತಿದೆ. ನೀರು ಕಣ್ಣಿನಿಂದ ಘಳಘಳನೆ ಉದುರುತ್ತಿದೆಯಲ್ಲ. ಆದರಲ್ಲೂ ಹೊಸಬನೆದುರಿಗೆ weakness. ಆತ ಇದೂ ಒಂದು trick ಅಂತ ತಿಳಿದುಕೊಂಡು ಬಿಡಲಿ.')

'ಅವರಿವರ ವಿಷಯ ನನಗೆ ಬೇಡ. ನನ್ನ ಕಾಲ ಮೇಲೆ ನಿಂತೇ ನನ್ನ ಮುಂದಲ ಜೀವನ ನಡೆಸಬೇಕೆಂದಿದ್ದೇನೆ. ಯಾರು ಏನಾದರೂ ಅಂದುಕೊಳ್ಳಲಿ, ನಿಮ್ಮನ್ನು ನೋಡಿದಾಕ್ಷಣ ನನ್ನ ಮನಸ್ಸಿಗೆ ಒಪ್ಪಿಗೆಯಾಯಿತು. ಇನ್ನು ನಾನು ಪರೀಕ್ಷೆಯಲ್ಲಿ ಪಾಸಾಗಿದ್ದೇನೋ, ಇಲ್ಲವೋ, ನೀವು ಉತ್ತರ ಹೇಳಬೇಕು.'

('ನಿಜವೇ ಈ ಮಾತು? "ನಾನು ನಿಮ್ಮನ್ನು ಪಾಸು ಮಾಡುವುದು" ನಿಜವಲ್ಲ; ಖಂಡಿತ ನಿಜವಲ್ಲ ! ಆದರೆ ನಿಜ......ಈ ಜ......ಗ.....ತ್ತು ನಿಜ,......ಈ ರೂಮು ನಿಜ, ಅವರೂ ನಿಜ,......ಅವರ ಮಾತೂ.....ನಿಜ, ಅರೆ ! ನನ್ನ ತೂಕವೇ ತಪ್ಪುತ್ತಿದೆಯಲ್ಲ ! ಕಣ್ಣು ಕತ್ತಲಾಗುತ್ತಿದೆಯಲ್ಲಾ !')

('ಘಳ್.....ಘಳಾರ್.....ಅಬ್ಬ ಎಂತಹ ಮಿಂಚು ! ಘಡ್......ಘಡಾರ್ ಸಿಡಿಲಿನ ಘೋರ ಶಬ್ದ ! ಇದೇನು ಭೂಮಿ ನಡುಗುತ್ತಿದೆಯಲ್ಲ.....ಭೂಮಿಯ ಕಂಪನ !')

('ಭೂಕಂಪ ...ಗುಡುಗು.....ಸಿಡಿಲು.....ಮಿಂಚು...ಇದೇನು ಪುನಃ ಈ ರೂಮು ಕಾಣಿಸುತ್ತಿದೆಯಲ್ಲಾ, ಅವರು.....ಅವರೂ ನಿಜ, ಅವರ ಮಾತೂ ನಿಜ.')

('ನಿಜ.....ನಿಜ......ಎಲ್ಲವೂ ನಿಜ.')

—'ಶ್ರೀಕಾಂತ'

# ತಾಯಿ

'ರಾತ್ರಿ ಆಯ್ತು ಅಂದ್ರೆ ದುಷ್ಟ ಮೃಗಗಳ ಸಂಚಾರ....ಆದ್ರೂನು ಆ ಕ್ರೂರಿ ತಾಯಿ, ಮಗು ಇಡೀ ರೊಟ್ಟಿ ಬೇಕೂಂತ ಹಠ ಮಾಡ್ತದೆ ಅಂತ ಸಿಟ್ಟುಮಾಡಿ ಕೊಂಡು ಆ ಪುಟ್ಟ ಮಗೂನ ಅಂಗೃಕ್ಕೆ ದಬ್ಬಿ, ಅಗ್ಳಿ ಹಾಕ್ಕೊಂಡು ಬಂದು ಮತ್ತೆ ರೊಟ್ಟೀ ತಟ್ಟಕ್ಕೇ......'

'ಅವ್ವ....ಕಥೆ ಹೇಳೋ ಹೊತ್ಗೆ ಅದ್ಯಾಕೆ ಹಾಗೆ ಅಳ್ತೀಯವ್ವ......'

'ಇಲ್ಲ ಮಗ....ಅಳ್ತ ಇಲ್ಲ ಮಗಾ....'

ಪಕ್ಕದಲ್ಲಿ ಮಲಗಿದ್ದ ಮಗ ಶೀನು ಏನು ಹೇಳಿದರೂ ಕೇಳಲೊಲ್ಲ. ತಾಯಿಯ ಉತ್ತರಕ್ಕಾಗಿ ಒಂದೇಸಮನೆ ಪಟ್ಟು ಹಿಡಿದಿದ್ದಾನೆ. ಏನು ಮಾಡಿದರೂ ನಿದ್ದೆ ಹೋಗಲೊಲ್ಲನು. ಕಥೆ ಹೇಳಿ ಹೇಗೆ ತಾನೇ ಸಂತೈಸಿಯಾಳು ಅಬ್ಬಕ್ಕ ?......

'ಇಕೋ ರಾತ್ರಿ ಮಸ್ತಾಯ್ತು......ಕಥೆ ಕೇಳ್ತ ನಿದ್ದೆ ಮಾಡು ಮಗ—ಆ ಮೇಲೆ ಆ ಕೂಸಿಗೆ ಬಾಳ ಭಯ ಆಗಿ......'

—ಇಲ್ಲ ಏನಾರೂ ಶೀನು ಕೇಳನು. ಸೀರೆಯ ಅಂಚಿನಿಂದ ಅಬ್ಬಕ್ಕ ಕಣ್ಣೊ ರಸಿಕೊಂಡು ಮಗನ ಬೆವರು ಸವರುತ್ತ ಪುಸಲಾಯಿಸುವ ಧ್ವನಿಯಲ್ಲಿ....

'ಮಾತಾಡಬೇಡ ಮಗಾ....ತೊಟ್ಟಿಲಲ್ಲಿ ಮಲಗಿದ ಕೂಸೆದ್ದೀತು....ಈಗ ಕಥೇ ಕೇಳು....ಹೇಳ್ತೀನಿ......ಆ ಕೂಸು ಅಷ್ಟು ಗಟ್ಟಿಯಾಗಿ ಅತ್ತರೂ ಆ ಪಾಪಿ ತಾಯಿ....'

'ಊಹು....ನಂಗೆ ಕಥೇ ಬೇಡ......ಬೆಳಗ್ನಿಂದ ಯಾಕೆ ಒಂದೇ ಸವ್ನೆ ಹಾಗೆ ಅಳ್ತಾ ಇದಿ ಹೇಳು......'

--ಎಂಟು ವರ್ಷವಾಗಿದ್ದರೂ ಬಲು ಬುದ್ಧಿ ಈ ಹಸುಳೆಗೆ ! ತಾಯಿಯೆಂದರೆ ಪ್ರಾಣ.......

ಯಾರಿಗಾದರೂ ಎದೆ ತೋಡಿ ತೋರಿಸದೆ ನಿರ್ವಾಹವಿಲ್ಲ....ಅಷ್ಟು ನೋಯು ತ್ತಿದೆ ಅಬ್ಬಕ್ಕನ ಹೆತ್ತ ಕರುಳು. ಶೀನುವಿಗಾದರೂ ಹೇಳಬಾರದೇಕೆ ?....

....ಹೇಳಬಹುದು....ಆದರೆ ಹೇಗೆ ?....

'ನಿಂಗೊಂದು ಹಿರೀ ಅಣ್ಣ ಇತ್ತು ಮಗಾ....ಇವತ್ತು ಅದ್ರ ಹುಟ್ಟಿದ ಹಬ್ಬ.......'

'ಈಗೆಲ್ಲಿದಾನವ್ವ, ಅಣ್ಣ....?'

ಏನೆಂದು ತಾನೆ ಉತ್ತರ ಹೇಳಿಯಾಳು ಅಬ್ಬಕ್ಕ ? ಯೋಚಿಸಿದಂತೆಲ್ಲಾ 'ಅಮಾಸೆ'ಯ ಕತ್ತಲೇ ಅವಳ ಎದೆ ತುಂಬಿ ಕಪ್ಪು ಹೊಯ್ಯುತ್ತದೆ.....

ಅಣ್ಣ ಎಲ್ಲಿ ಹೋದನೆಂದು ಹೇಳಿಯಾಳು ? ದಂಡು ಸೇರಿದನೆ ? ಎಲ್ಲೋ ದೂರದಲ್ಲಿ ಹೋಟೆಲು ಸೇರಿದನೆ ? ಗಿರಣಿ ಸೇರಿದನೆ ? ಪೇಟೆಯಲ್ಲಿ ಕಂಡಕಂಡವರ ಸಾಮಾನು ಹೊತ್ತು ಕೂಲಿ ಮಾಡುವನೆ ? ದಿಕ್ಕಿರದ ಪರದೇಶಿಯಂತೆ ಪ್ರಾಣ ಬಿಟ್ಟನೆ ? ತಾಯಿಯನ್ನು ತೊರೆದ ಆ ಮಗುವಿಗೆ ಸುಖವೆ, ದುಃಖವೆ ? ಏನು ? ಏನುತಾನೇ ಹೇಳಿಯಾಳು....?

ಅವನನ್ನು ನೋಡದೆ ಎಂಟು ಹತ್ತು ವರ್ಷವಾದರೂ ಈಗಲೂ ತಾಯಿ ಮಗನನ್ನು ಗುರುತಿಸಬಲ್ಲಳು !

ಹೆಸರು ಚೆಲುವನೆಂದು....ಹೆಸರಿನಂತೆಯೇ ನೋಡುವರ ದೃಷ್ಟಿ ತಗಲುವಂತಹ ಚೆಲುವನವನು !

ನಸುಗಪ್ಪಿನ ಎತ್ತರದ ಆಳು. ಕೋಲುಮುಖ. ಬೇವಿನೆಸಳಂತಹ ಕುಡಿ ಹುಬ್ಬು. ಹಚ್ಚಿ ಹೊಯ್ದ ಎತ್ತರದ ಹಣೆ. ತುದಿಯಲ್ಲಿ ಬಾಗಿದ ಮೂಗು. ಶಿವನ ಕೈಯಲಗು ಹೊಳೆದಂತಹ ನೋಟದ ಆ ಚಿಕ್ಕ ದುಂಡು ಕಣ್ಣುಗಳು. ಸ್ವಲ್ಪ ಗಾಂಭೀರ್ಯದಿಂದ ತುಸು ಗರ್ವದಿಂದ ಬಿಗಿದ ಮುದ್ರೆಯ ಆ ದಪ್ಪ ತುಟಿಗಳು. ಒರಟು ಗುಂಗುರು ಕೂದಲಿನ ಆ ಹಿರಿದಾದ ತಲೆ, ನಿದ್ದೆಯಿಂದ ಈಗತಾನೇ ಎದ್ದು ಬಂದಂತೆ ಆ ನಿಧಾನವಾದ ನಡಿಗೆ....

ಎಲ್ಲವೂ ಕಣ್ಣಿಗೆ ಕಟ್ಟಿದಂತಿದೆ ಅಬ್ಬಕ್ಕನಿಗೆ. ಹತ್ತು ಹನ್ನೆರಡು ವರ್ಷ ಕಣ್ಣು ಗೊಂಬೆಯಂತೆ ಸಾಕಿದ ಚೆಲುವನ ರೂಪವನ್ನು ಹೇಗೆ ತಾನೆ ಮರೆತಾಳು ಅವಳು ?

'ಅಣ್ಣ ಎಲ್ಲಿದಾನೆ ಹೇಳವ್ವ....'

'ನಿನ್ನ ಅವ್ವನ ಮೇಲೆ ಸಿಟ್ಟುಮಾಡಿ ದೂರ ಹೊಂಟ್ಹೋದ'

ಇದಕ್ಕಿಂತ ಅಬ್ಬಕ್ಕ ಹೇಳಲಾರಳು. ಹೇಳಿದರೂ ಹೇಗೆ ತಿಳಿದೀತು ಈ ಮಗುವಿಗೆ ?

'ಹೋಗೋದು ಬ್ಯಾಡಾಂತ ನೀಯಾಕೆ ಹೇಳ್ಲಿಲ್ಲವ್ವ ?'

ಚೂರಿಯಂತೆ ನೆಡುತ್ತದೆ ಈ ಮಾತು, ಅಬ್ಬಕ್ಕನ ಎದೆಯಲ್ಲಿ. ಅವನು ಹಾಗೆ ಹಟ ತೊಟ್ಟು ಹೊರಟೇ ಬಿಡುತ್ತಾನೆ ಎಂದು ತೋರಿದ್ದರೆ ಅವಳು ಸೆರಗೊಡ್ಡಿ ಬೇಡಿ ಕೊಳ್ಳುತ್ತಿರಲಿಲ್ಲವೆ ? ಏನೋ ಹಾಳು ಸಿಟ್ಟಿನ ಭರದಲ್ಲಿ ಅವಳು ನಾಲ್ಕು ಬಿರುನುಡಿ ಯಾಡಿದ್ದು ನಿಜ. ಅಷ್ಟಕ್ಕೇನೆ ಅವ....

'ಅಪ್ಪಯ್ಯ ಯಾಕೆ ಬ್ಯಾಡ ಅನ್ಲಿಲ್ಲವ್ವ....'

—ಶೀನು ಈ ಮಾತು ಆಡಿದ ಬಳಿಕ ಇನ್ನು ಹೇಳದೆ ವಿಧಿಯಿಲ್ಲ....ಎಷ್ಟು ದಿನವೆಂತ ಈ ಮಗುವಿನಿಂದ ಬಚ್ಚಿಡುವುದು ಸಾಧ್ಯ ?

'ನಿನ್ನಪ್ಪಯ್ಯ ಬೇರೆ, ಅಣ್ಣಪ್ಪಯ್ಯ ಬೇರೆ, ಮಗ. ಅಣ್ಣಪ್ಪಯ್ಯ ಸತ್ತೋದ್ರ ಮೇಲೆ....'

....ಬೇರೆ ಕೂಡಿಕೆ ಮಾಡಿಕೊಂಡಳು ಅಬ್ಬಕ್ಕ......ಅವನ ಅಪ್ಪಯ್ಯ ಅವನು ಹುಟ್ಟುವಾಗಲೇ ತೀರಿಕೊಂಡರು....ಆ ಮೇಲೆ ಹದಿಮೂರು ವರ್ಷವೂ ಎಂತೆಂತಲೂ ಕೂಲಿನಾಲಿ ಮಾಡಿ ಒಬ್ಬಂಟಿಯಾಗಿ ಚೆಲುವನನ್ನು ಸಾಕಿದ ಮೇಲೆ ಈ ಕೂಡಿಕೆ ಯಾದದ್ದು......ಆ ವಿಷಯದಲ್ಲೇ ಅವಳಿಗೂ ಮಗನಿಗೂ ವೈಮನಸ್ಯ ತಲೆದೋರಿ....

ಇವೆಲ್ಲವನ್ನೂ ಹೇಳಿದರೆ ಆ ಮಗು ಶೀನುವಿಗೆ ಹೇಗೆ ತಿಳಿದೀತು ?....ಎಂತಲೇ ಏನೂ ಅರ್ಥವಾಗದೆ ಮಗು ಮಾತನಾಡದೆ ಕಣ್ಣನ್ನು ಪಿಳಿಪಿಳಿ ಬಿಡುತ್ತ ಸುಮ್ಮನಾಗಿದೆ....

ಆಮೇಲೆ....ಒಂಟಿಯಾಗಿ ಬಾಳಲಾರದೆ ಆ ಹೊಸ ಮೋಹಕ್ಕೆ ಸಿಲುಕಿ....

ಅಯ್ಯೋ ! ಹಾಗೆ ತಾನು ಮಾಡಬಾರದಿತ್ತೋ ಏನೋ !......

ಆದರೆ ಅವಳ ಜಾತಿಯಲ್ಲದು ಆಗುವುದಿಲ್ಲವೆ ? ಸೀತು ಮಾಡಿಕೊಂಡಿಲ್ಲವೆ ? ಅಕ್ಕುವಿಗೆ ಮೂರು ಕೂಡಿಕೆಯಾಗಿಲ್ಲವೆ ? ಐದು ಮಕ್ಕಳ ತಾಯಿ ಮೀಟ ಮೊನ್ನೆ ತಾನೆ ಆಗಲಿಲ್ಲವೆ ? ಹೀಗಿದ್ದಾಗ ತನ್ನದು ತಪ್ಪೆ ?....

ಆದರೆ ಹದಿಮೂರು ವರ್ಷ ಪ್ರಾಯಕ್ಕೆ ಬಂದ ಪ್ರೀತಿಯ ಮಗ ಹೇಳಿದರೂ ಕೇಳದೆ ಆದದ್ದು ?

ಹಾಗಾದರೆ ಚೆಲುವ ಕಂಡ ಕಂಡವರ ಚಾಡಿಗೆ ಒಲಿದು ತನ್ನೆದುರು ನಿಲ್ಲುವುದೆ? ಅದು ಸರಿಯೆ ? ಕೈಯಾರೆ ಸಾಕಿದ ತಾಯಿಯ ಎದುರು ಕೈಯೆತ್ತಿ ನಿಲ್ಲುವುದೆ ?

ತಾಯಿ ಏನೋ ಕೋಪದ ಭರದಲ್ಲಿ ಏನಾದರೂ ಅಂದರೆ ಮನೆ ಬಿಟ್ಟು ಹೊರಟು ಹೋಗುವುದೆ ? ಮಗನಾದವನಿಗೆ ಹೇಳಿಸಿದ ವರ್ತನೆಯೆ ಅದು ?....

ಅಯ್ಯೋ ತಾಯಿಯನ್ನರಿಯದ ಚೆಲುವ ! ಅವ್ವನ ಒಲವಿನ ಆಳವನ್ನರಿಯದ ಹಸುಳೆ ! ಪ್ರಾಯ ಬಂತೆಂದು ಹೊತ್ತು ಹೆತ್ತವಳನ್ನೂ ತೊರೆದು....

........ಎಂಟೊಂಬತ್ತು ವರ್ಷವಾಯಿತು. ಒಮ್ಮೆಯೂ ಇತ್ತ ಮುಖ ಹಾಕಿಲ್ಲ. ಕಣ್ಣಿನಲ್ಲಿ ಎಣ್ಣೆಯಿಟ್ಟು ಹಾದಿಕಾಯುವ ತಾಯಿಗೊಂದು ಕಾಗದ ಬರೆದಿಲ್ಲ !

ತಾಯಿಯ ಮುಖವನ್ನು ಒಮ್ಮೆಯಾದರೂ ನೋಡುವ ಆಸೆ ಇಲ್ಲದೆ ಹೋಯಿತೆ ಮಗುವಿಗೆ ?....

'ಅವ್ವ......ಘಟ್ಟದ ಕೆಳಗಿನಿಂದ ಅಪ್ಪಯ್ಯ ಎಂದು ಬರ್‍ತಾರವ್ವ ?....ಅವ್ರು ಬಂದ್ರೆ ನಿಂಗೆ ಹಿಂಗೆ ಅಳೋಕೆ ಬಿಡಲ್ಲ ?....

—ಎಷ್ಟು ಮುದ್ದಾಗಿ ಮಾತಾಡತ್ತೆ ಈ ಹಸುಳೆ ಶೀನು ! ಅದು ಹೇಳುವುದೂ ಸುಳ್ಳಲ್ಲ........ತನ್ನನೊಲಿದು ಕೈಹಿಡಿದವನು ಅಂಥವನೆ. ಎಂದೂ ಕಂಬನಿ ಕರೆಯಲು ಬಿಡುವವನಲ್ಲ....ಇಲ್ಲದಿದ್ದರೆ ತಾನು ಅವನ ಕೈಹಿಡಿಯುತ್ತಿದ್ದಳೆ ?

ಅವನ ಆ ತೀಡಿದ ಮೀಸೆ. ಕವಳ ಜಗಿದು ಕೆಂಪಾದ ಸದಾ ಮುಗುಳು ನಗುವ ಆ ತುಟಿಗಳು. ಎಲೆವಸ್ತ್ರದ ಮುಂಡಾಸಿನಿಂದ ಇಣುಕಿ ನೋಡುವ ಆ ನೀಳವಾದ ಕೂದಲು. ಆ ಹೊಳೆಯುವ ದೊಡ್ಡ ದೊಡ್ಡ ಒಂಟಗಳು. ಕೂಲಿ ಆಳುಗಳ ಜೊತೆ ಅವನು ಸೇರೆಗಾರಿಕೆ ನಡೆಸುವ ಆ ಠೀವಿ !

ದೇವರಂತಹ ಮನುಷ್ಯ....

ಅವಳ ಅವ್ವ ಬತ್ತ ಕುಟ್ಟುವಾಗ ಹಾಡುತ್ತಿದ್ದ ಆ ಪದದಲ್ಲಿ ವರ್ಣಿಸಿದಂತೆಯೇ

ಹಾಸಿಗೆಯ ಹಾಸೆಂದ

ಮಲ್ಲಿಗೆಯ ಮುಡಿಯೆಂದ

ಬ್ಯಾಸೆತ್ತರ ಮಡದಿ ಮಲಗೆಂದ

'ಬ್ಯಾಸೆತ್ತರ ಮಡದಿ ಮಲಗೆಂದ ನನ ನೋಡಿ....'

ತೌರೂರನ್ನೇ ಏಕೆ ? ಪ್ರಪಂಚವನ್ನೇ ಮರೆ ಎಂದ ರಸಿಕ ಅವನು......ಹೌದು ! ತುಂಬು ಜವ್ವನದ ತನಗೆ ಆಗ ಎಲ್ಲವೂ ಮರೆತದ್ದು ಆಶ್ಚರ್ಯವಲ್ಲ ! ಆ ಮೋಹ

ದಲ್ಲಿ ಮಗನ ಮೇಲಿನ ವಾತ್ಸಲ್ಯವೂ ಕ್ಷಣಕಾಲ ಮರೆಯಿತೋ ಏನೋ ? ಅದಕ್ಕೇ ಅಲ್ಲವೇ ಎಂದೂ ದುಡುಕದವಳು ಅಂದು ದುಡುಕ್ಕಿದ್ದು. ಪ್ರೀತಿಯ ಮಗನನ್ನೂ ಜರಿದು ದೂರಿದ್ದು. ತನ್ನ ಸುಖಕ್ಕೆ ಅಡ್ಡಿಯಾದ ಚೆಲುವನನ್ನು ಧಿಕ್ಕರಿಸಿ ನಡೆದದ್ದು !......

ಅಯ್ಯೋ ! ತಾನು ಪಾಪಿಯಲ್ಲವೆ ? ಅದು ಎಂತಹ ಮೋಹ ? ಯಾವ ತಾಯಿಯು ಕರುಳೂ ಹಾಗೆ ಮಾಡಲಿಕ್ಕಿಲ್ಲ. ಆಗ ನಾಲ್ಕು ಜನ ಆಡಿಕೊಂಡಂತೆ ತಾನು ಸೂಳೆಗಿಂತಲೂ ಅತ್ತತ್ತವಾಗಿ ನಡೆಯಲಿಲ್ಲವೆ ?......

ತನ್ನನ್ನೊಲಿದವನು ಸಾಭ್ಯಸ್ಥ. ಆದರೆ ಆ ಹಾಳು ಮೋಹದ ದೆಸೆಯಿಂದಲೇ ಈಗ ಕೈತಪ್ಪಿ ಹೋದನಲ್ಲವೆ ಮಗ ?....

ಎಲ್ಲಿ ಹೋಗುತ್ತ ಯಾವ ಹುಲಿಯ ಬಾಯಿಗೆ ತುತ್ತಾದನೊ ! ಯಾವ ಕಳ ಕಾಕರ ಕೈಗೆ ಸಿಕ್ಕನೊ !....ಯಾವ ನದಿಗೆ ದುಃಖ ತಡೆಯಲಾರದೆ ಹಾರಿಕೊಂಡನೊ !....ಎಲ್ಲಿ ಒಬ್ಬಂಟಿಗನಾಗಿ ಹಸಿದು ಒದ್ದಾಡಿದನೊ !....ತಾಯಿ ಇದ್ದೂ ಇಲ್ಲದ ಪರದೇಸಿಗೆ ಏನಾಯಿತೊ !....

ಇವತ್ತು ಅವನ ಹುಟ್ಟಿದ ಹಬ್ಬ ! ಈಗ ಒಡನೆ ಇದ್ದಿದ್ದರೆ ಆವನಿಗೆ ವರ್ಷ ಇಪ್ಪತ್ತೆರಡು ! ಸೊಸೆಯನ್ನು ಮನೆಗೆ ತಂದು ಮೊಮ್ಮಗನನ್ನು ಆಡಿಸುವ ಪುಣ್ಯ ನನಗೆಲ್ಲಿ ? ತಾನು ತಾಯಿಯೇ ?....ಅಲ್ಲ ರಾಕ್ಷಸಿ ! ಪಿಶಾಚಿ ! ಕಡು ಪಾಪಿ !....

'ಅವ್ವ ಆಳಬೇಡಾಂದ್ರೆ ಕೇಳಲ್ವೇನವ್ವ ?....'

'ನಿಂಗೆ ಇನ್ನೂ ನಿದ್ದೇನೇ ಹತ್ತಿಲ್ವಾ ಮಗಾ ?'

'ನೀನಳ್ತಾ ಇದ್ರೆ ನಾನು ನಿದ್ದೇನೇ ಮಾಡಲ್ಲ'

'ಅಳ್ತಾ ಇಲ್ಲ ಕೀನು....ನಿದ್ದೆ ಮಾಡು....'

'ನಿನ್ನ ಬಿಟ್ಟು ಹೋಗಿದ್ದು ಅಣ್ಣಂದೇ ತಪ್ಪು....ನೀನ್ಯಾಕೆ ಅಳಬೇಕವ್ವ ?.... ಹೋಗ್ಲಿ ಬಿಡು, ಆ ಕಥೆ ಮುಂದೇನಾಯ್ತು ಹೇಳು....ಆ ಮಗು ಅಳ್ತಾ ಇದ್ದಾಗ....'

'....ಅಳ್ತಾ ಇದ್ರೂನೂ ನನ್ನಂಥಾ ಕ್ರೂರಿ ತಾಯಿಗೆ ಕರುಣೇನೇ ಬರ್ಲಿಲ್ಲ.... ಆಗ ಬಿದ್ರ ಹಿಂಡ್ಲ ಬುಡ್ದಲ್ಲಿ ಸಟ ಸಟಾಂತ ಶಬ್ದ ಆದ್ಹಂಗೆ ಕೇಳಿಸ್ತು ! ಏನೂಂತ ಹೆದ್ರಿಕೇಂದ ಮಗು ಪುಟ್ಟ ಕಣ್ಣನ್ನು ದೊಡ್ಡಕ್ಕೆ ಅರಳಿಸಿ ನೋಡ್ದಾಗ ಒಂದು ಹೆಬ್ಬುಲಿ !

'ಕೂಸು ಗಡಗಡ ನಡಗ್ತ ಅದ್ರ ಪುಟ್ಟಕೈಯಿಂದ ಬಾಗ್ಲನ್ನ ದಡ ದಹ ಬಡೀತ ಪೊಟ್ಟು ಪೊಟ್ಟು ಮಾತ್ನಲ್ಲೀ....

"ಅರ್ಧ ರೊಟ್ಟಿ ಸಾಕವ್ವ—ಬಾಗ್ಲು ತೆಗ್ಯವ್ವ ಕಣ್ಣು ಪಿಳಿಪಿಳಿ ಪಿಳೀ—ಬಾಲ ಪಟಪಟಾ...." ಅಂತ ಬೇಡಿಕೊಳ್ಳಕ್ಕೆ ಶುರು ಮಾಡ್ತು.

'ಹುಲೀಂತ ಹೇಳಕ್ಕೆ ಪಾಪದ್ದಕ್ಕೆ ಬಾಯಿ ಬರಲ್ಲ. ಆ ನನ್ನಂಥ ಕ್ರೂರಿ ತಾಯಿಗೆ ಕೂಸು ಕಿರುಚಿಕೋತಿದೇಂತ ಎಗ್ರೂ ಇಲ್ಲ—

"ಅರ್ಧ ರೊಟ್ಟಿ ಸಾಕವ್ವ—ಬಾಗ್ಲು ತೆಗ್ಯವ್ವ—ಕಣ್ಣು ಪಿಳಿಪಿಳೀ—ಬಾಲ ಪಟ ಪಟಾ...."

'ಹಾಗೇನೇ ಅಳು ನಿಂತಿತು. ಹಠಾನ ಇನ್ನಾರೂ ಸಿಲ್ಲಿಸ್ತಲ್ಲಾಂತ ರೊಟ್ಟಿ ತಿಂತಾ ಕೂತಿದ್ದ ತಾಯಿ ಹೊರ್ಗೆ ಬಂದು ಬಾಗ್ಲು ತೆಗ್ದು ನೋಡಿದ್ಲು....

'ಎಲ್ಲಿದೆ ಹಸುಗೂಸು ?....ಹುಲಿಯ ಬಾಯಿಯ ಪಾಲು !'

......ನೀಚ ತಾಯಿಯ ದೆಸೆಯಿಂದ, ಪಾಪಿ ತಾಯಿಯ ದೆಸೆಯಿಂದ, ದುಷ್ಟೆ ತಾಯಿಯ ದೆಸೆಯಿಂದ, ಮಗ—ಕೈಗೆ ಬಂದ ಮಗ ಹುಲಿಯ ಬಾಯಿಗೆ ತುತ್ತು !

ಹುಲಿಯ ಬಾಯಿಗೋ ?

ಯಾವ ಅಡವಿಯ ಪಾಲಿಗೋ ?

ಯಾವ ನದಿಯ ಮಡಿಲಿಗೋ ?

ಎಲ್ಲೋ ! ಏನೋ !! ಎಂತೋ !!!

'ಅಯ್ಯೋ....ಅಮ್ಮ....ನನ್ನಮ್ಮ....'

ಬಂದಾನೋ ?....

ಬಾರನೋ ??....

ಆ ತನ್ನ ಹಿರಿಯ ಮಗ, ತನ್ನ ಕಣ್ಣಿನ ಗೊಂಬೆಯಾಗಿದ್ದ ಆ ಚೆಲುವ, ತಾನೇ ಕೈಯಾರೆ ಮನೆ ಬಿಟ್ಟು ಓಡಿಸಿದ ಆ ಹಸುಳೆ, ಆ ಮುದ್ದು ಮಗ—

ಬಂದಾನೋ ?...

ಬಾರನೋ ??....

ದಾರಿ ಕಾದು ಕಾದು ಬೇಸತ್ತಿದ್ದಾಳೆ ಅಬ್ಬಕ್ಕ....ತನ್ನ ಹಟ್ಟಿಯ ಹೊರಗೆ, ಹಾವಿನಂತೆ ಸುರಳಿ ಸುರಳಿಯಾಗಿ ಸುತ್ತಿ ಬೆಟ್ಟಗುಡ್ಡಗಳ ಕಾಡುಮೇಡುಗಳ ನಡುವೆ ಬಳಸಿ ಎಲ್ಲಿಗೋ, ದೂರ, ದೂ....ರ....ತನ್ನ ಮಗನನ್ನು ಒಯ್ದ ದಾರಿಯನ್ನು ಕಾಯ್ದು ಕಾಯ್ದು ಕಣ್ಣೀರೆರೆದು ಹಂಬಲಿಸಿದ್ದಾಳೆ....

ಬಂದಾನೋ ?....

ಬಾರನೋ ??....

ಬಂದರೆ ತಿನ್ನಲು ಮಾಡಿಟ್ಟ ಹಲಸಿನ ಹಣ್ಣಿನ ಚಿಟ್ಟು ಕೊಡುತ್ತಾಳೆ....ಉಡಲು ಒಳ್ಳೆಯ ವಸ್ತ್ರ ತಂದು ಕೊಡುತ್ತಾಳೆ....ತನ್ನದೆಂದು ಕೂಡಿಟ್ಟ ಆ ಬೆಳ್ಳಿಯ ಮುನ್ನೂರು ರೂಪಾಯಿಗಳನ್ನು ಖರ್ಚುಮಾಡಿ ಮದುವೆ ಮಾಡಿಸುತ್ತಾಳೆ....ಅವನು ಮನೆಯಲ್ಲೇ ಕೂತು ತಿಂದರೂ ಸರಿಯೆ, ತನ್ನ ಗಂಡನಿಂದ ಒಂದು ಬಿರು ನುಡಿಯೂ ಬರದಂತೆ ನೋಡಿಕೊಳ್ಳುತ್ತಾಳೆ....ಆದರೆ ಚೆಲುವ....

ಬಂದಾನೋ ?........

ಬಾರನೋ ??....

ಆ ತನ್ನ ಮುದ್ದು ಹಸುಳೆ....

ಬಂದಾನೋ ? .... ಬಾರನೋ ??....ಬಂ....ದಾ....ನೋ ಬಾ ......ರ .... ನೋ ??....ಬಂದಾ......???

....ಏನಿದು ಹೊರಗೆ ಶಬ್ದ ??

'ಅವ್ವ....ಅವ್ವಾ......ಅವ್ವಾ....'

'ಯಾರ ಧ್ವನಿ ?....

'ಮಧ್ಯಾಹ್ನದ ರಣರಣ ಬಿಸಿಲಿಗೆ ದಣಿದ ಧ್ವನಿ !....ಮೃದುವಾದ ಪ್ರೇಮ ಮಯವಾದ ಬಳಲಿದ 'ಅವ್ವಾ' ಎನ್ನುವ ಧ್ವನಿ !....

'ಅಯ್ಯೋ ಬಾಗಿಲು ತೆರೆಯುವದರೊಳಗೆ ಏಕೆ ಹೀಗೆ ಎಡೆ ...

....'ಆಹ್ ! ನೀ ಬಂದೆಯಾ ಕಂದ....ಈಸು ದಿನದ ಮೇಲಾದರೂ ಬಂದೆಯಾ ಮಗುವೆ.....ನಿನ್ನ ಅವ್ವನ ತಪ್ಪನ್ನು ಕ್ಷಮಿಸಿದೆಯಾ ಚೆಲುವ....

ಕೂತುಕೋ ಮಗನೆ....ಎಷ್ಟು ಬಡವಾಗಿದೆ ನಿನ್ನ ದೇಹ !....

ನೀರಡಿಸಿ ಬಂದೆಯಾ ?....ಹಸಿದು ಬಂದೆಯಾ ?........ಎಲ್ಲಿ ಎಲ್ಲಿ ಪರದೇಸಿ ಯಂತೆ ಅಲೆಯಿತು ನನ್ನ ಕಂದ ?........ನನ್ನ ಮುದ್ದು ಚೆಲುವ ?......

‘ಎಣ್ಣೆ ಹಚ್ಚಿ ಮೀಯಿಸುವೆ ಮಗನೆ, ನನ್ನ ಬಿಟ್ಟು ಎಲ್ಲಿಗೂ ಹೋಗಬೇಡ.... ತಾಯಿಯ ಹೆತ್ತ ಕರುಳಿಗೆ ಬೆಂಕಿಯಿಕ್ಕಬೇಡ, ಕಂಡೆಯಾ ?.... ನಿನ್ನ ತೊರೆದು ನಾನಿನ್ನು ಈ ಜೀವ ತೇಯಲಾರೆ....

‘ಅಯ್ಯೋ !.... ಅಯ್ಯೋ !....

‘ಇದೇನು ಕಂದಾ ? ಮತ್ತೆಲ್ಲಿಗೆ ಹೊರಟು ನಿಂತಿ ?.... ಅವ್ವನನ್ನು ಯಾಕಾರೂ ತೊರೆಯುವೆ ಮಗನೇ ? ಅದೇಕೆ ಹಾಗೆ ದೂರ ದೂರ ಮಂಜಿನಂತೆ ಕರಗಿ ಕರಗಿ ಮಾಯವಾಗುತ್ತಿದ್ದೀಯ, ಚೆಲುವಾ ? ನಾ ನಿನಗೆ ಬ್ಯಾಡವೇ ???....

‘ಯಾಕೆ ಹಾಗೆ ನಿನ್ನ ಕಣ್ಣಲ್ಲಿ ತಿರಸ್ಕಾರ ?...... ಬೇಡ.... ಹಾಗೆ ದುರುಗುಟ್ಟಿ ನೋಡಬೇಡ ಮಗನೆ.... ನಿನಗಾಗಿ ಅವರನ್ನು, ನನ್ನ ಪ್ರಾಣವಾದ ಅವರನ್ನು ಬೇಕಾದರೂ ತೊರೆಯುವೆ ಚೆಲುವ...... ಆದರೆ ಇವು.... ಈ ಎರಡು ಹಸುಳೆಗಳೂ ನನ್ನ ಹೊಟ್ಟೆಯಲ್ಲಿ ಹುಟ್ಟಿದವು.... ನಿನ್ನಂತೆಯೇ ನನ್ನ ಮಕ್ಕಳು...... ನಿನ್ನ ತಮ್ಮಂದಿರು, ಚೆಲುವಾ.... ನಿನ್ನನ್ನು ಅಣ್ಣನೆಂದು ಪ್ರೀತಿಸುತ್ತಾರೆ ಕಂದಾ.... ತುಂಬ ತುಂಬ ಪ್ರೀತಿಸುತ್ತಾರೆ ಚೆಲುವಾ.... ಇವುಗಳನ್ನು ಖಂಡಿತ ತೊರೆಯಲಾರೆ ಮಗನೇ...... ನನಗಾಗಿ.... ನಿನ್ನ ದಮ್ಮಯ್ಯ !....

‘ನನಗಾಗಿ ನಿಲ್ಲು.... ನಿಲ್ಲು ಕಂದಾ...... ನನ್ನಾಣೆ ನಿಲ್ಲು.... ನಿಲ್ಲು.... ಚೆಲುವಾ!...... ಚೆ.... ಲು....’

‘ಅವ್ವಾ.... ಅವ್ವಾ...... ಅವ್ವಾ.... ಇದ್ಯಾಕವ್ವ ನಿದ್ದೇಲಿ ಹಿಂಗೆ ಹಂಬಲಿಸ್ತಿ.... ನಿನಗೇನಾಯ್ತವ್ವ......’

ಪಕ್ಕದಲ್ಲಿ ಆಗತಾನೆ ಜೊಂಪುಹತ್ತಿ ಮಲಗಿದ್ದ ಎಂಟು ವರ್ಷದ ಹಸುಳೆ ಶೀನು ಧಿಗ್ಗನೆದ್ದು ಅಬ್ಬಕ್ಕನ ಮೈಯಲುಗಿಸಿ ಕರೆಯುತ್ತದೆ.... ತೊಟ್ಟಿಲಿನಲ್ಲಿನ ಹಸುಗೂಸು ತಾಯಿಯ ಹಾಲಿಗಾಗಿ ಹಂಬಲಿಸಿ ಅಳುತ್ತದೆ......

ಅಬ್ಬಕ್ಕ ಉಕ್ಕಿಹರಿಯುವ ಕಣ್ಣೀರನ್ನು ಸೀರೆಯ ಸೆರಗಿನಿಂದ ಒರಸಿಕೊಳ್ಳಲು ಯತ್ನಿಸುತ್ತ ಮಗುವಿಗೆ ಮೊಲೆಯುಣಿಸುತ್ತಾಳೆ....

ಆ ನೀರವ, ಗಂಭೀರ ಕತ್ತಲಿನಲ್ಲಿ.... ದುಃಖತಪ್ತ ಎದೆಯಿಂದ ಹಾಲು ಹರಿಯುತ್ತದೆ, ಸಿಹಿಯಾದ ಹಾಲು !

ಆದರೆ ತಾಯಿಯ ಕಣ್ಣಿನಿಂದ ನೀರೂ ಸುರಿಯುತ್ತದೆ, ಉಪ್ಪಾದ ನೀರು !

ಅನಂತವಾಗಿ !........

—ಯು. ಆರ್. ಅನಂತಮೂರ್ತಿ

# ಸೆರಗಿನ ಕೆಂಡ

'ಯಾಕೆ ? ಏನಾಗುತ್ತೆಯೆ ?'

ಆತಂಕ ತುಂಬಿದ ಧ್ವನಿ ಭಾರವಾಗಿತ್ತು.

'ಯಾಕಮ್ಮ ? ಹೀಗಾಡುತ್ತೀ ?'

ಕಣ್ಣೀರಿನಲ್ಲಿ ನೆನೆದ ಮಾತು ನೆಲಕ್ಕುದುರಿತು.

'ಅಜ್ಜಿ, ಅಜ್ಜಿ....!'

ತಾಯ ಆತಂಕವನ್ನು ಅನುಕಂಪದ ಬಲದಿಂದ ಅರ್ಥಮಾಡಿಕೊಂಡ ಮಗು ತಾನೂ ಕೂಗಿತು....

ಏನಾಗಿದೆ ಇವರಿಗೆ—ಗಂಡನಿಗೆ, ಮಗಳಿಗೆ, ಮೊಮ್ಮಗುವಿಗೆ ? ಯಾಕೆ ಹೀಗೆ—ಕಂಡೂ ಕಂಡು—ಕೇಳುತ್ತಾರೆ ? ಅಥವಾ ತನ್ನೆದುರಿಗೇ ನಡೆಯುತ್ತಿರುವ, ತನಗೆ ಸುಸ್ಪಷ್ಟವಾದ ಈ ವಿಚಿತ್ರ ವಿದ್ಯಮಾನ ಇವರಿಗೆ ಗೊತ್ತಾಗುತ್ತಲೇ ಇಲ್ಲವೆ !

'ಸಮುದ್ರದ ನೀರನ್ನೆಲ್ಲ ಒಂದೇ ಒಂದು ಗುಟುಕಿಗೆ ಆ ಅಗಸ್ತ್ಯ ಮಹರ್ಷಿ ಕುಡಿಯಲಿಲ್ಲವೆ ಸೀತ ?'

ಹರಿಕಥೆಯ ದಾಸರು ಎಷ್ಟು ಸಾರವತ್ತಾಗಿ ಹೇಳಿದ್ದರು, ಅಗಸ್ತ್ಯ ಕಡಲ ನೀರನ್ನು ಏಕಾಪೋಶನೆ ತೆಗೆದುಕೊಂಡ ಆ ಭಾಗವನ್ನು ! ಅದರ ನೆನಪು ಅವಳಲ್ಲಿ ಮರುಕಳಿಸಿ ಆಡಿದ್ದಳು ಆ ಮಾತನ್ನು. ಅವಳಿಗೇ ನಗು ಬಂತು ; ಹೇಗೆ ತಾನೇ ಅರ್ಥವಾಗಬೇಕು ಇವರಿಗೆ ? ತಾನು ವಿವರಣೆ ಕೊಡಬೇಡವೆ ?

'ಹಾಗೇ ಸೀತ, ನೋಡು, ನೀರು ಹೇಗೆ ಬತ್ತುತ್ತಾ ಇದೆ—ಯಾರೂ ಅದನ್ನು ಕುಡಿಯದಿದ್ದರೂ....'

'ಅಮ್ಮ, ಮಾತನಾಡಬೇಡಮ್ಮ. ಈಗ ಮಲಗಿಕೋ, ಸರಿಯಾಗುತ್ತೆ.'

'ಸೀತ, ನಿಂಬೆಹಣ್ಣು ಮನೆಯಲ್ಲಿದ್ದರೆ, ಒಂದು ಲೋಟ ಪಾನಕಮಾಡಿ ತಂದು ಕೊಡಮ್ಮ.' ಮಗಳಿಗೆ ತಂದೆ ಸೂಚಿಸಿದ.

ಸರಿಯಾಗುತ್ತೆ ! ಸರಿಯಾಗುತ್ತೆಯೆ ? ಒಂದು ಲೋಟ ಪಾನಕ ತಂದು ಸುರಿದರೆ ಬತ್ತಿದ ಈ ಕಡಲು ಮತ್ತೆ ತುಂಬುತ್ತದೆಯೆ ? ಇವರಿಗೆ ಹುಚ್ಚು !

ಅವರ ದಡ್ಡತನವನ್ನು ಕಂಡು ಅವಳಿಗೆ ನಗು ಉಕ್ಕಿ, ಉಕ್ಕಿ ಬಂತು, ನಕ್ಕಳು....

ಒಂದು ಗಂಟೆಯಾಗಿತ್ತು ಕಡಲು ಬರಿದಾಗುವುದಕ್ಕೆ ಆರಂಭವಾಗಿ. ನೀರು ತಂದ ನದಿಗಳು ನೀರನ್ನು ಹಿಂದೆ ತೆಗೆದುಕೊಂಡು ಹೋಗತೊಡಗಿದ್ದು ಆಗ. ಸಮುದ್ರದ ಕಡೆಗೆ ಹರಿದ ನೀರು ಇದ್ದಕ್ಕಿದ್ದಂತೆ ಸಮುದ್ರದಿಂದ ಪರ್ವತದ ಕಡೆಗೆ ಹರಿಯಲಾರಂಭಿಸಿದ್ದು ಆಗ ! ಸಂತೆಗೆ ಬಂದ ಸಾಮಾನು ವ್ಯಾಪಾರವಾಗದೆ ಹಿಂದಿರುಗುವ ಹಾಗೆ, ಎನಿಸಿತ್ತು ಅವಳಿಗೆ....

ಗಂಟೆಯ ಹಿಂದಿನ ಆ ಗಳಿಗೆ..

ಹರಿಕಥೆ ಮುಗಿದಿತ್ತು ಆಗ ತಾನೆ. ತಾನೂ ಮನೆಯ ಕಡೆಗೆ ಹೊರಟಿದ್ದಳು. ಪಕ್ಕಕ್ಕೆ ಬರುತ್ತಿದ್ದ ಹೆಂಗಸು ತನ್ನನ್ನೇ ದುರುಗುಟ್ಟಿಕೊಂಡು ನೋಡಿ ಕೊನೆಗೆ ಕೇಳಿದ್ದಳು:

'ಏನೇ ಮೀನ, ಗುರುತು ಸಿಗಲಿಲ್ಲವೇನೇ ? ನಾನು ಕಣೆ, ಸರಸ್ವತಿ.....'

ತಾನು ತಕ್ಷಣ ಉತ್ತರಕೊಟ್ಟಿದ್ದಳು:

'ನೀವು ಯಾರೋ ಗೊತ್ತೇ ಇಲ್ಲವಲ್ಲಮ್ಮ! ನನ್ನ ಹೆಸರು ಲಲಿತಮ್ಮ.'

'ಕ್ಷಮಿಸಿ, ಲಲಿತಮ್ಮ. ಇದೇನಮ್ಮ ವಿಚಿತ್ರ, ನನಗೆ ಐವತ್ತಕ್ಕೆ ಅರುಳು ಮರುಳು ಬಂದಿದೆಯೋ ಏನೋ ! ಹರಿಕಥೆ ನಡೆಯುತ್ತಿದ್ದಾಗಲೇ ನಿಮ್ಮನ್ನು ನೋಡಿದೆ ; ನಮ್ಮೂರಿನ ಮೀನಾಕ್ಷಿಯೇ ಎನಿಸಿತು....ಏನೂ ತಿಳಿದುಕೊಳ್ಳಬೇಡಿ, ಲಲಿತಮ್ಮ !'

'ಛೆ, ಅದಕ್ಕೇನಮ್ಮ ! ಮೀನಾಕ್ಷಿ ಅಂದರಲ್ಲ, ಯಾರು ಅದು ?'

ಅಯ್ಯೋ, ಅಯ್ಯೋ ! ಕೇಳಬಾರದಾಗಿತ್ತು....ಕೇಳಿದ್ದಳು.

'ನನ್ನ ಜತೆಗೇ ಬೆಳೆದವಳಮ್ಮ. ಮದುವೆಯೂ ಆಗಿತ್ತು—ನಮ್ಮೂರ ಅಮಲ್ದಾರರ ಮಗನಿಗೇ ಕೊಟ್ಟು. ಅದೇನು ಬಂತೋ, ಏನೋ, ಇದ್ದಕ್ಕಿದ್ದ ಹಾಗೇ ಯಾವನ ಜತೆಗೋ ಓಡಿಹೋಗಿ ಬಿಟ್ಟಳಮ್ಮ. ಬೆಂಗಳೂರಿನಲ್ಲಿದಾಳೆ ಅವನ ಜತೆಗೆ ಅಂತ ಯಾರೋ ಅಂದರು—ಹದಿನೈದು ವರ್ಷದ ಕೆಳಗೆ ಅನ್ನಿ. ಎಷ್ಟು ನಿಜವೋ, ಎಷ್ಟು ಸುಳ್ಳೋ ಆ ಪರಮಾತ್ಮನಿಗೇ ಗೊತ್ತು. ಬದುಕಿದಾಳೋ ಅಥವಾ ಅವನನ್ನು

ಬಿಟ್ಟು ಇನ್ನು ಯಾರ ಜತೆಗಾದರೂ ಓಡಿಹೋದಳೋ ಕಂಡವರು ಯಾರಮ್ಮ ?.... ಋಷಿ ಪತ್ನಿ ಕಳೆ ಇರುವ ನಿಮ್ಮನ್ನ ಆ ಹಾಳು ರಂಡೆ ಅಂತಂದುಕೊಂಡನಲ್ಲಮ್ಮ ಒಂದು ಗಳಿಗೆ ! ಏನೂ ತಿಳಿದುಕೊಳ್ಳಬೇಡಿ, ಲಲಿತಮ್ಮ !'

ತಾನು ಉತ್ತರ ಕೊಟ್ಟಳೆ ? ಸುಮ್ಮನಿದ್ದಳೆ ?

'ಬರ್‍ತೀರಿ ತಾನೆ, ನಾಳೆ ?' ಸರಸ್ವತಮ್ಮ ಮೂಲೆ ತಿರುಗಿದರು.

........ಆ ಗಳಿಗೆಯಲ್ಲಿ ಆರಂಭವಾಗಿತ್ತು ಕಡಲು ಬರಿದಾಗುವದಕ್ಕೆ. ಹೆಮ್ಮರದ ಎಲೆ ಉದುರಿ, ಕೊಂಬೆಗಳು ಕಿರಿದಾಗಿ, ಮರ ಮೊಳಕೆ ಯಾಗುವುದಕ್ಕೆ, ಕೊನೆಗೆ ಬೀಜವಾಗುವುದಕ್ಕೆ. ರಸ್ತೆಯ ಹೊದಿಕೆ-ಡಾಮರ ಕಳಚಿ ಚೂಪುಕಲ್ಲು ಕಾಲಿಗೆ ಮುಳ್ಳಾಗುವುದಕ್ಕೆ. ಮೋಟಾರು ಗಾಡಿ ಓಡಾಡಿದಾಗ ಎದ್ದ ಧೂಳು ಕಣಕಣವಾಗಿ ಆಕಾಶದೆಡೆಗೆ ನೆಗೆಯುವುದಕ್ಕೆ. ಬಾನೆತ್ತರದ ತಾರಸಿ ಮನೆಗಳು ಚಳಿಗೇನೋ ಎನ್ನುವಂತೆ ಸಂಕುಚಿತವಾಗಿ ಹೆಂಚಿನ ಹೊದಿಕೆಯೊಳಗೆ ತಲೆ ಮರೆಸಿಕೊಳ್ಳುವುದಕ್ಕೆ....

ಆಗ ಆರಂಭವಾದ ಕಡಲ ಅಲೆಮಲೆಯಾಟ ! ನೂರು ಅಲೆಗಳು ಒಮ್ಮೆಗೇ ನದಿ-ಸಮುದ್ರಗಳ ಸಂಗಮದೆಡೆಗೆ ನುಗ್ಗುವದಕ್ಕೆ ಮೊದಲಾದದ್ದು ಆಗ ! ಒಂದು ಗಂಟೆಯ ಹಿಂದೆ....

ನೀರು ಇನ್ನೂ ಹರಿದಿದೆ. ಇವರಿಗೆ ಕಾಣದೇನು ?

'ಪಾನಕ ತಗೊಳ್ಳಮ್ಮ !'

ಮಗಳಿಗೆ, ಗಂಡನಿಗೆ ಹುಚ್ಚು. ಅನುಮಾನವೇ ಇಲ್ಲ. ಈ ಒಂದು ಪ್ರಯತ್ನ ವನ್ನು ತಾನು ಮಾಡುವದರಿಂದ ಅವರ ಮನಸ್ಸಿಗೆ ಸಮಾಧಾನ ಬರುವದಾದರೆ ತಾನೇಕೆ ಹಟತೊಟ್ಟು ಒಲ್ಲೆ ಎನ್ನಬೇಕು ?

ಲೋಟವನ್ನು ಕೈಗೆ ತೆಗೆದುಕೊಂಡು ನಿಧಾನವಾಗಿ ನೆಲಕ್ಕೆ ಬಗ್ಗಿಸಿದಳು. ಪಾನಕ ನೆಲದ ಮೇಲೆ ಹರಿಯತೊಡಗಿತು. ಅವಳಿಗೆ ಗೊತ್ತಿತ್ತು, ಇಷ್ಟು ಸ್ವಲ್ಪದ ರಿಂದ ಅಂತಹ ಅಗಾಧ ಸಮುದ್ರದ ಮಡಿಲನ್ನು ತುಂಬುವುದು ಸಾಧ್ಯವಿಲ್ಲವೆಂದು. ಆದರೂ........

'ನಾನು ಹೇಳಲಿಲ್ಲವೆ, ಅಮ್ಮ, ಆಗೋಲ್ಲ ಅಂತ !' ತನ್ನ ಮನಸ್ಸಿನ ಯೋಚ ನೆಗೆ ನುಡಿ ಕಾಣಿಸಿದಳು.

'ಅಮ್ಮ ! ಅಮ್ಮ !'

ಮಗಳು ಕಿರುಚಿದಳು. ತಾನೇನು ಮಾಡಬಾರದ್ದು ಮಾಡಿದ್ದು ? ಮಗಳೇಕೆ ಅಷ್ಟು ಗಾಬರಿಯಾಗಬೇಕು ?

'ಅಜ್ಜಿ, ಅಜ್ಜಿ !'

ತಾಯಿ ಅತ್ತುದನ್ನು ಕಂಡು ಮಗುವೂ ದನಿಗೂಡಿಸಿತು.

ಅವಳಿಗೆ ಕನಿಕರ ಉಕ್ಕಿ ಬಂತು. ಎಷ್ಟು ಅತ್ತರೆ ತಾನೇ ಏನು ಉಪಯೋಗ ? ಹತ್ತು ಹನಿ ಕಣ್ಣೀರಿನಿಂದ ಬತ್ತಿದ ಕಡಲ ಒಡಲು ತುಂಬುವದಾದರೂ ಸಾಧ್ಯವೆ ?

ಅವಳಿಗೆ ಮಂಪರು ಬಂತು. ಕಣ್ಣು ಮುಚ್ಚಿಕೊಂಡಂತೆ ಕಡಲ ಆರ್ಭಟ ಕಡಿಮೆಯಾದಂತೆ ತೋರಿತು. ನೀರು ನಿಧಾನವಾಗಿ, ಗಂಭೀರವಾಗಿ ಹರಿಯತೊಡಗಿತು. ಕಡಲ ಆಳ ಹೆಚ್ಚಿದಂತೆ, ನೀರು ಇಳಿದಂತೆ, ಅದುವರೆಗೂ ತಲೆಮರೆಸಿಕೊಂಡಿದ್ದ ನಡುಗಡ್ಡೆಯೊಂದು ಹಾವಿನ ಹೆಡೆಯಂತೆ, ನೆಲಬಿಟ್ಟು ಮೇಲೇಳುವ ಮೊಳಕೆಯಂತೆ ಎದ್ದು ನಿಂತಿತು......

ಮೊದಲು ಕಣ್ಮರೆಯಾದದ್ದು ಮಗಳ ಈಚಿನ ತೊಟ್ಟಿಲ ಕೂಸು. ಎರಡು ತಿಂಗಳ ಮಗು. ಅದರ ಬೆನ್ನಿಗೇ ಐದು ವರ್ಷದ ಮೊಮ್ಮಗು. ಮೊಮ್ಮಗುವಿನ ಹಿಂದೆ ತನ್ನ ಮಗಳು, ಸೀತ........ಇದೇನಿದು, ಸೀತ, ಹುಡುಗಾಟ ? ನಡುಗಡ್ಡೆಯಿಂದ ಕಡಲ ದಂಡೆಯ ಕಡೆಗೆ ಈಸತೊಡಗಿದ ಮಗಳು ಸೀರೆ ಎಸೆದು ಲಂಗ ತೊಟ್ಟಳು ; ಹುಡುಗಿಯಾದಳು. ಇನ್ನೊಮ್ಮೆ ದಿಟ್ಟಿಸಿದಾಗ ಮಗಳು ಕಡಲ ದಂಡೆಯನ್ನು ಸೇರಿ ಅಂಬೆಗಾಲಿಡುತ್ತಿದ್ದಳು. ನೀರಿನ ಮೇಲೆ ಈಸಾಡಿದ ಮಗಳ ಮೈ, ಈಗ, ಮಗುವಿನ ಮೈಯಾಗಿ ನೆಲದ ಮೇಲೆ ಕಾಲು ಬಡೆಯುತ್ತಿತ್ತು. ಗಳಿಗೆಯಾದಮೇಲೆ ಅದೂ ಕಾಣದಾಯಿತು—ದೂರದ, ಬಹು ದೂರದ ಕಡಲ ದಂಡೆಯನ್ನು ತಟ್ಟನಿಂತ ಮಬ್ಬಿನಲ್ಲಿ....ತಾನು ಗಡ್ಡೆಯ ಮೇಲೆ !

*          *          *          *

[ಕಡಲ ನಡುವಿನ ಗಡ್ಡೆನೆಲ. ಲಾಂದ್ರದ ದೀಪವೊಂದು ಬೀಸುಗಾಳಿಯ ಜೋಗುಳಕ್ಕೆ ಮಾರುಹೋಗಿ, ಬೆಳೆದು ನಿಂತ ವೈಯಾರಿ ಭತ್ತದ ತೆನೆಯಂತೆ, ತಲೆ ತೂಗುತ್ತಿದೆ. ಅದರ ಮಂದ ಪ್ರಕಾಶದಲ್ಲಿ ಹದಿನೇಳು ಹದಿನೆಂಟು ವರ್ಷದ ಮೀನಾಕ್ಷಿ ಹತ್ತಿ ಬಿಡಿಸುತ್ತ ತನಗೆ ತಾನೇ ಹಾಡಿಕೊಳ್ಳುತ್ತಿದ್ದಾಳೆ.

ಮನೆಯ ಹೆಬ್ಬಾಗಿಲು ತೆರೆದ ಸದ್ದು. ಮೀನಾಕ್ಷಿಯ ಮನಸ್ಸಿನಲ್ಲಿ ಮೂಡಿದ ಕುತೂಹಲ ಕಣ್ಣಿನಲ್ಲಿ ಮನೆ ಮಾಡುತ್ತದೆ. ಬಾಗಿಲನ್ನು ತಟ್ಟಿಕೊಂಡು ಒಳಕ್ಕೆ ಬಂದವನು ಇಪ್ಪತ್ತೊಮ್ಮರು ವಯಸ್ಸಿನ ಯುವಕನೊಬ್ಬ. ನಗರದ ನಾಗರಿಕತೆಗೆ ಅನು

ಕಾದ ಉಡಿಗೆ, ತೊಡಿಗೆ. ಗುಂಗುರು ಕೂದಲ ಕೆಳಗೆ ಸುಂದರವಾದೊಂದು ಮೊಗ ಮಾಟ. ಹೊಳೆವ ಕಣ್ಣಿನಲ್ಲಿ, ನಿರೀಕ್ಷೆ, ಆತುರ, ಕಾತರ....]

ಮೀನಾಕ್ಷಿ: (ಎದ್ದವಳೇ) ಚಂದ್ರು !

ಚಂದ್ರು : ಮೀನ....ಮೀನ !

ಮೀನ : ಯಾಕೆ ಬಂದೆ, ಚಂದ್ರು, ಯಾರಾದರೂ ಕಂಡರೆ ?

ಚಂದ್ರು : ಕಂಡರೆ ಕಂಡರು. ನನ್ನ ಕಾಗದ ಬಂತು ತಾನೆ ?

ಮೀನ : ಬಂತು. ಬಂದರೂ ನೀನು ಬರುತ್ತಿ ಅಂತಂದುಕೊಂಡಿರಲಿಲ್ಲ....

ಚಂದ್ರು : ಯಾಕೆ, ನಾನು ಬರುವುದು ನಿನಗೆ ಇಷ್ಟವಿರಲಿಲ್ಲವೇನೋ ?

ಮೀನ : ಏನು ಮಾತು ಅಂತಾಡುತ್ತಿ, ಚಂದ್ರು, ನನ್ನ ಮನಸ್ಸು ನಿನಗೆ ಗೊತ್ತಿದ್ದೂ....ಅದಕ್ಕಲ್ಲ ನಾನು ಹೇಳಿದ್ದು. ಆದರೂ ನೀನು ಕಾಗದ ಬರೆಯಬಾರದಾಗಿತ್ತು, ನೀನು ಈಗ ಬರಬಾರದಾಗಿತ್ತು....

ಚಂದ್ರು : ನೀನೂ ಅಷ್ಟೆ, ಮದುವೆ ಆಗಬಾರದಾಗಿತ್ತು....

ಮೀನ : ಆಗಬಾರದಾಗಿತ್ತು, ನಿಜ. ಈಗ ಆಗಿಹೋಗಿದೆಯಲ್ಲ, ಚಂದ್ರು ?

ಚಂದ್ರು : ಕಾಗದದಲ್ಲೇ ಬರೆದಿದ್ದೇನೆ. ಈಗಲೂ ಹೇಳುತ್ತೇನೆ, ಕೇಳು, ಮೀನ. ನಿನ್ನ ಬಿಟ್ಟು ನನಗೆ ಇರುವುದು ಸಾಧ್ಯವಿಲ್ಲ. ಅದು ನಿನಗೆ ಗೊತ್ತಲ್ಲವೆ, ಚಿನ್ನ ? ನನ್ನ ಬಿಟ್ಟು, ನನ್ನ ಮರೆತು ಇರುವುದು ನಿನಗೆ ಸಾಧ್ಯವಿಲ್ಲ. ನನಗೆ ಗೊತ್ತು ಅದು. ಎಷ್ಟು ದಿವಸ ಅಂತ ಈ ಆತ್ಮವಂಚನೆ ? ಬೇಡ, ಮೀನ, ಬೇಡ ! ಬಂದು ಬಿಡು ನನ್ನ ಜತೆಗೆ....

ಮೀನ : ನಿನ್ನ ದಮ್ಮಯ್ಯ, ಚಂದ್ರು, ಬೇಡ....ಬಲವಂತಮಾಡಬೇಡ....

ಚಂದ್ರು : ನನ್ನ ಮಾತು ಕೇಳು, ಮೀನ. ಅರ್ಥಮಾಡಿಕೋ....ನಿನಗೆ ಇಲ್ಲಿ ಸುಖವಿಲ್ಲ. ನನಗೂ ಇಲ್ಲ. ನಾನೂ ಈ ಎರಡು ವರ್ಷಗಳಲ್ಲಿ ಬೇಕಾದ ಹಾಗೆ ಸಂಪಾದಿಸಿ ಮನುಷ್ಯ ಅಂತನ್ನಿಸಿಕೊಂಡಿದೀನಿ. ಬಡವ ಅಂತಲ್ಲವೆ, ನಿಮ್ಮ ತಂದೆ ನಿನ್ನನ್ನು ನನಗೆ ಕೊಡದೆ ಬೇರೆಯ ಕಡೆ ಮದುವೆಮಾಡಿದ್ದು ? ವ್ಯಾಪಾರ ನನಗೆ ಹೇಳಿ ಮಾಡಿಸಿದ ಹಾಗೆ ನಡೆಯಿತು. ದೂರ ಎಲ್ಲಾದರೂ, ಯಾರೂ ಗುರುತು ಕಂಡವರು ಕಾಣದ ಕಡೆ ಹೋಗಿ ಸಂಸಾರ ಮಾಡಿಕೊಂಡು ಇರೋಣ, ಮೀನ....

ಮೀನ : ಚಂದ್ರು, ಚಂದ್ರು....ನನಗೆ ಹೆದರಿಕೆಯಾಗುತ್ತೆ....ದಮ್ಮಯ್ಯ, ಆಸೆ ತೋರಿಸಬೇಡ, ಮರುಳು ಮಾಡಬೇಡ....

ಚಂದ್ರು : ಮರೆತೆಯಾ ಮೀನ ? ಇದಕ್ಕೆ ಒಂದು ವರ್ಷಕ್ಕೆ ಹಿಂದೆ ನಾನು ಬಂದಾಗ ನೀನೇ ಹೇಳಲಿಲ್ಲವೆ, ಹೀಗೆ ಮಾಡೋಣ ಅಂತ....? ಇಷ್ಟಕ್ಕೂ ಏನು ಹೆದರಿಕೆ, ಚಿನ್ನ, ನಿನಗೆ ನಾನು, ನನಗೆ ನೀನು ಬೆಂಬಲವಾಗಿರುವತನಕ ?

ಮೀನ : ನನಗೆ ಹೆದರಿಕೆ....ನನಗೆ ಹೆದರಿಕೆ....

ಚಂದ್ರು : ಯಾರ ಹೆದರಿಕೆ ನಮಗೆ ? ಸಮಾಜದ್ದೆ ? ಈ ಸಮಾಜಕ್ಕೆ ದೂರ ವಾಗಿ, ಕಲಕತ್ತದಲ್ಲೋ, ಬೊಂಬಾಯಿನಲ್ಲೋ ಇರೋಣ, ಮೀನ. ನೆರೆಹೊರೆ ಯವರಿಗೆ ನಾವು ಗಂಡ, ಹೆಂಡತಿ ಅನ್ನುವ ಹಾಗೇ ಇರುವಾಗ ಅನುಮಾನವೇ ಬರುವುದಿಲ್ಲ, ಅಲ್ಲವೆ ? ದೇವರದ್ದೇ ? ದೇವರು ನಮಗೆ ಇದುವರೆಗೆ ಮಾಡಿರುವದೇ ಸಾಲದೆ ? ಅವನಿಗೆ ಹೆದರಿ ನಡಗಲೂ ಬೇಕೆ ?

ಮೀನ : ಇವೆಲ್ಲ—ಇದುವರೆಗೆ ಆಗಿರುವದೆಲ್ಲ—ಮ ರೆ ಯು ವು ದು ಹೇಗೆ ಚಂದ್ರು ?

ಚಂದು : ಒಂದು ಗಳಿಗೆ ನಿಜವೇ ಅಂತನ್ನುವ ಹಾಗೇ ಇರುವ ಕನಸು ಮರೆಯಲಿಲ್ಲವೆ. ಚಿನ್ನ ! ಇದುವರಿಗನದೂ ಕೆಟ್ಟ ಕನಸು. ಆದಷ್ಟು ಬೇಗ ಮರೆ ತರೇ ಒಳ್ಳೆಯದು.

ಮೀನ : ಬಂದು ಬಿಡಲೆ, ಧೈರ್ಯಮಾಡಿ ?

ಚಂದ್ರು : ಬಂದು ಬಿಡು, ಬಂದು ಬಿಡು !....ಮನೆಯವರೆಲ್ಲ ಎಲ್ಲಿ, ನಿಮ್ಮ ಅತ್ತೆ, ಮಾವ, ಗಂಡ ?

ಮೀನ : ಯಾರೂ ಊರಲಿಲ್ಲ. ತುಮಕೂರಿಗೆ ಹೋಗಿದಾರೆ. ನಮ್ಮ ಚಿಕ್ಕ ಮಾವನ ಮಗನ ಮದುವೆ, ನಾಳೆ...

ಚಂದ್ರು : ಮತ್ತೆ, ನೀನು ?

ಮೀನ : ನಿನ್ನ ಕಾಗದ ಬಂತು. ಏನೋ ಕಾರಣ ಹೇಳಿ ತಪ್ಪಿಸಿಕೊಂಡೆ....

ಚಂದ್ರು : ಏನು ಕಾರಣ ?

ಮೀನ : ನಿನಗೆ ಯಾಕೆ, ಅದು ? ಹೆಂಗಸರಿಗೆ ಸಾವಿರ ಕಾರಣ ಸಿಗುತ್ತೆ.... ಮನಸ್ಸೊಂದು ಇಲ್ಲದೆ ಹೋದರೆ.

ಚಂದ್ರು : (ಮುಗುಳು ನಗುತ್ತ) ಬಿಡು. ಗೊತ್ತಾಯಿತು....ಒಬ್ಬಳೇ ಇದೀಯಾ, ಹಾಗಾದರೆ ? ನಿನ್ನ, ಒಬ್ಬಳನ್ನೇ, ಇಲ್ಲಿ ಬಿಟ್ಟು ಹೋದರೆ ?

ಮೀನ : ಇಲ್ಲ. ಅಡಿಗೆಯಾಕೆ ಇದ್ದೇ ಇದ್ದಾರಲ್ಲ....!

ಚಂದ್ರು : ಎಲ್ಲಿ, ಮತ್ತೆ, ಕಾಣುವುದಿಲ್ಲ ?

ಮೀನ : ಪುರಾಣ ಕೇಳಿಕೊಂಡು ಬರಲೆ, ಎಂದರು. ನಾನು ಬೇಡ ಅನ್ನಲಿಲ್ಲ.

ಚಂದ್ರು : ಒಳ್ಳೆಯದೇ ಆಗಿದೆ ಇದುವರೆಗೂ. ಮೀನ........ನಾನು ನಾಳೆ ಒಂದು ಗಂಟೆಗೆ ಬರುತ್ತೇನೆ. ನೀನು ಸಿದ್ಧವಾಗಿರು. ಬೆಂಗಳೂರಿನ ಗಾಡಿ ಎರಡು ಗಂಟೆಗೆ. ಹೊರಟೇ ಬಿಡೋಣ....ಹೊರಟಾಗ ಯಾರಾದರೂ ಏನಾದರೂ ಕೇಳಿದರೆ....?

ಮೀನ : ಏನೋ ಒಂದು ಹೇಳಿದರಾಯಿತು. ಅದೇನು ಮಹಾ ವಿಷಯ !

[ಬಾಗಿಲಲ್ಲಿ 'ಮೀನಾಕ್ಷಿ' ಎಂಬ ಕೂಗು. 'ಬಾರೆ ಸರಸ್ವತಿ' ಮೀನಾಕ್ಷಿಯ ಉತ್ತರ.]

ಚಂದ್ರು : (ಗಾಬರಿಯಲ್ಲಿ) ಯಾರು ಮೀನ ?

ಮೀನ : ಶೂ....ಬಾರೇ ಒಳಗೆ.

ಸರಸ್ವತಿ : (ಒಳಗೆ ಬರುತ್ತ....ಚಂದ್ರುವನ್ನು ನೋಡಿ) ನಾನಾಮೇಲೆ ಬರ್ತೀನೆಯೆ....

ಮೀನ : ಪರವಾಗಿಲ್ಲ ಬಾರೆ. ನಮ್ಮ ಚಿಕ್ಕ ಮಾವನ ಎರಡನೆಯ ಮಗ ಕಣೆ. ನಾಳೆಯಾದರೂ ನಾನು ಹೊರಟು ಬರಲಿ ಅಂತ ಕರೆದುಕೊಂಡು ಬರುವದಕ್ಕೆ ಇವರನ್ನು ಕಳುಹಿಸಿದ್ದಾರೆ....

ಚಂದ್ರು : ನಾನು ಬರಲೆ ಹಾಗಾದರೆ ? ಎರಡು ಗಂಟೆಗೆ ರೈಲು....

ಮೀನ : ಒಂದು ಗಂಟೆಯ ಹೊತ್ತಿಗೇ ಸಿದ್ಧವಾಗಿರುತ್ತೇನೆ....

ಚಂದ್ರು : ಸರಿ. ಬರುತ್ತ ಗಾಡಿ ತಂದೇ ಬಿಡ್ತೇನೆ....

[ನಡುಗಡ್ಡೆ ನೀರಿನಲ್ಲಿ ನಿಂತ ಕಲ್ಲು ಸಕ್ಕರೆಯಾಯಿತು....]

* * * *

ಎದ್ದವಳೇ ಎದುರು ಕುಳಿತು ಅವಳು ನಿದ್ದೆ ಮಾಡುವದನ್ನೇ ನೋಡುತ್ತ

ಕುಳಿತಿದ್ದ ಗಂಡನ ಬಳಿಗೆ ನಡೆದು ಅವನ ತಲೆಗೂದಲನ್ನು ನೇವರಿಸುವಂತೆ ಕೈ ಆಡಿಸಿದಳು....

'ಏನೂ ಭಯವಿಲ್ಲ ಅಲ್ಲವೆ, ಚಂದ್ರು ನಿನಗೆ ನಾನು, ನನಗೆ ನೀನು ಇರುವಾಗ ?'

'ಯಾಕೆದ್ದೆ, ಲಲಿತ ? ಮಲಗಿಕೊ......' ಗಂಡ ಹೇಳಿದ.

'ನನ್ನ ಹೆಸರೂ ನಿನಗ ಮರೆತುಹೋಯಿತೆ, ಆಗಲೆ ?' ಅವಳ ಧ್ವನಿಯಲ್ಲಿ ಹೆದರಿಕೆ ಒಡೆದು ಮೂಡಿತ್ತು. 'ನನ್ನ ಹೆಸರು ಮೀನ, ಅಲ್ಲವೆ, ಚಂದ್ರು ?'

ಅವಳಿಗೆ ಅಳು ಬಂತು. ಚಂದ್ರುವೂ ತನ್ನನ್ನು ಮರೆತಿದ್ದಾನೆ. ಇದು ಏನು ಅನ್ಯಾಯ !

ಮಗಳು ಕೇಳಿದಳು.

'ಏನಣ್ಣ ಇದು, ಅಮ್ಮನ ಮಾತು ? ಮೀನ ಯಾರಣ್ಣ ?'

ತಂದೆ ಏನೊಂದೂ ಉತ್ತರಕೊಡದೆ ಎದ್ದು ಹೋದ.

ಯಾರಿದು ಇಂತಹ ಪ್ರಶ್ನೆ ಕೇಳಿದವರು ? ಮೀನಾಕ್ಷಿಯ ಗುರುತಿರದವರು ?

ಅವಳು ಮಗಳ ಕಡೆಗೆ ನೋಡಿದಳು. ಬೇಗ ಗುರುತು ಹತ್ತಲಿಲ್ಲ.

'ಯಾಕಮ್ಮ, ಹೀಗೆ ನೋಡುತ್ತಿ ?'

'ಅಜ್ಜಿ, ಅಜ್ಜಿ !'

ಅವಳಿಗೆ ಅವರ ಗುರುತು ಹತ್ತಿತು.

'ಸೀತ, ಸ್ವಲ್ಪ ಪಾನಕಮಾಡಿ ಕೊಡಮ್ಮ. ಏಕೋ ತಲೆ ತಿರುಗಿದ ಹಾಗೆ ಆಗುತ್ತೆ.'

'ಕೊಟ್ಟದ್ದನ್ನು ಚೆಲ್ಲಿಬಿಟ್ಟೆ ?' ಮೊಮ್ಮಗು ಕೇಳಿತು.

'ಬಾರೇ ಸುಮ್ಮನೆ !' ಸೀತ ಮಗುವನ್ನು ಗದರಿಸಿಕೊಂಡಿದ್ದೇ ಅಲ್ಲದೆ ಕೈ ಹಿಡಿದು ಎಳೆದುಕೊಂಡು ಹೋದಳು.

ಅವಳು ಮಂಚದ ಮೇಲೆ, ಸುರುಳಿ ಸುತ್ತಿದ ಹಾಸಿಗೆಯನ್ನೊರಗಿ ಕುಳಿತುಕೊಂಡಳು......

* * * *

[ಚಂದ್ರಶೇಖರಯ್ಯನವರ ಮನೆಯ ಒಂದು ಕೋಣೆ. ಮಂಚದ ಮೇಲೆ

ಲಲಿತಮ್ಮ, ಹಾಸಿಗೆಯನ್ನೊರಗಿ ಕುಳಿತುಕೊಂಡಿದ್ದಾಳೆ. ಬಾಗಿಲು ಕುಟ್ಟಿದ ಸದ್ದಾಗಲು ಲಲಿತಮ್ಮ ಏಳುವದಲ್ಲಿರುವಾಗಲೇ 'ಒಳಗೆ ಬರಲೆ?' ಎಂಬ ಪ್ರಶ್ನೆ ಕೇಳಿ ಬರುತ್ತದೆ.]

ಲಲಿತ : ಯಾರು ?

ಧ್ವನಿ : ನಾನು....ಮೀನ....

ಲಲಿತ : ಯಾರು ?

ಧ್ವನಿ : ನಾನು....ಅದೇ, ನೀನು....ಮೀನ, ಮೀನಾಕ್ಷಿ....

ಲಲಿತ : ಬಾ. ಏನು ಬಂದೆ ?

ಮೀನ : (ಹತ್ತಿರಕ್ಕೆ ಬಂದು) ಅದೇ ನಿನ್ನ ವಿಷಯ......ಅಲ್ಲ, ನೀನು ಮೂವತ್ತು ವರುಷಗಳ ಕೆಳಗೆ ಮಾಡಿದ್ದು ಸರಿಯೇ ಅಂತ ?

ಲಲಿತ : ತಪ್ಪೇ ?

ಮೀನ : ಛೆ, ನಾನು ಹಾಗೆಂದೆನೆ ? ನಿನ್ನ ಕೇಳಿದೆ, ಅಷ್ಟೆ.

ಲಲಿತ : ನನಗೆ ಗೊತ್ತು ತಪ್ಪಲ್ಲ ಅಂತ !

ಮೀನ : ಓ......ನನಗೆ ಗೊತ್ತಿರಲಿಲ್ಲ, ನೀನು ತಪ್ಪಲ್ಲ ಅಂತಂದುಕೊಂಡಿದೀ ಅಂತ !....ಸೀತಳಿಗೆ ಮದುವೆಯಾದ ದಿನ, ಅವಳನ್ನು ಧಾರೆಯೆರೆದು ಕೊಟ್ಟಾಗ ನೀನು ಥರಥರ ನಡುಗುತ್ತಿದ್ದೆ, ಅಲ್ಲವೆ ?

ಲಲಿತ : ಇರಬಹುದು. ಅದಕ್ಕೆ ?

ಮೀನ : ತಪ್ಪಲ್ಲ ಅಂತಂದುಕೊಂಡಿದ್ದವಳಿಗೆ ಯಾಕೆ ಅಷ್ಟು ಹೆದರಿಕೆ ಅಂತ ! ಹೋಗಲಿ, ಸೀತಳ ಗಂಡ ಕಾಗದ ಬರೆದೇ ಇಲ್ಲ ತಾನೆ ? ಪಾಪ, ನಿನಗೆ ಅದೇ ಯೋಚನೆ ಅಲ್ಲವೆ ಈಚೆಗೆ ? ಎಲ್ಲಿ ಅವರ ಮನೆಯವರಿಗೆ ನಿನ್ನ ವಿಷಯ ತಿಳಿದು ಬಿಟ್ಟದೆಯೊ, ಮತ್ತೆ ಬಾಣಂತನ ಆದಮೇಲೆ ಸೀತನ್ನ ಕರೆಸಿಕೊಳ್ಳುತ್ತಾರೋ ಇಲ್ಲವೋ ಅಂತಲ್ಲವೆ ನಿನಗೆ ಆತಂಕ ? ಮಾಡಿದ್ದು ತಪ್ಪಲ್ಲ....ಆದರೂ ಇಷ್ಟು ಹೆದರಿಕೆಯೆ ?

ಲಲಿತ : ಹೆದರಿಕೆ ನನಗೋಸ್ಕರ ಅಲ್ಲ....ಅವಳಿಗೋಸ್ಕರ, ಅವಳ ಮಕ್ಕಳಿಗೋಸ್ಕರ....

ಮೀನ : ಹಾಗಾದರೆ ನಿನ್ನ ವಿಷಯಕ್ಕೇ, ನಿನಗೆ ಹೆದರಿಕೆಯೇ ಇಲ್ಲ ಅನ್ನು!

ಲಲಿತ : ಇಲ್ಲ !

ಮಿಾನ : ಇಲ್ಲವೆ ? ಈಚೆಗೆ ಮನೆಯಲ್ಲಿ ಪೂಜೆ, ಪುನಸ್ಕಾರ ಎಲ್ಲ ಜೋರಾಗಿದೆ ಅಲ್ಲವೆ ? ದಿನ ಸಂಜೆ ಹರಿಕಥೆ, ಪುರಾಣಗಳಿಗೆ ಬೇರೆ ಹೋಗುತ್ತಿ, ಅಲ್ಲವೆ ?........ ನಿನಗೆ ನಿದ್ದೆ ಬಂದು ಎಷ್ಟು ದಿನವಾಯಿತೋ ?

ಲಲಿತ : ನನ್ನ ವಿಷಯ ನನಗಿಂತ ಚೆನ್ನಾಗಿ, ಹೆಚ್ಚಾಗಿ ನಿನಗೇ ಗೊತ್ತು........ ನೀನು ಯಾರು ಅಂತ ?

ಮಿಾನ : ಅದೇ ಹೇಳಿದೆನಲ್ಲ ನಾನು.......ನೀನು........

ಲಲಿತ : ನೀನೇ ಹೇಳು, ನಾನೇನು ಮಾಡಲಿ ಈಗ ?

ಮಿಾನ : ನನಗೆ ಗೊತ್ತಿಲ್ಲ........ಬರಲೆ ? ಸೀತ ಬರುತ್ತಿರುವ ಹಾಗಿದೆ........

*  *  *  *

ಸೀತೆ ನೀಡಿದ ಪಾನಕದ ಬಟ್ಟಲನ್ನು ಕೈಗೆ ತೆಗೆದುಕೊಂಡು ಅದನ್ನು ಕುಡಿದಳು.

'ಸೀತ, ನಿನ್ನ ಗಂಡ ಕಾಗದ ಬರೆದನೆ, ಅಮ್ಮ ?'

'ಇಲ್ಲ, ಯಾಕಮ್ಮ........?'

'ಹಾಗಾದರೆ ನಿನ್ನ ಕರೆಸಿಕೊಳ್ಳುವುದಿಲ್ಲ ಮತ್ತೆ, ಅನ್ನು !'

'ಏನಮ್ಮ ಇದು, ಮಾತು ?'

'ಹೋಗಲಿ ಬಿಡು........ಮಗು ಎಲ್ಲೆ ? ಅನ್ನ ಹಾಕಿದೆಯ ಅದಕ್ಕೆ ?'

'ತಟ್ಟೆಹಾಕಿ ನಿನಗೆ ಪಾನಕ ಕೊಡೋಣ ಅಂತ ಬಂದೆ.'

'ಹೋಗಮ್ಮ, ಬಡಿಸು ಹೋಗು. ಮಕ್ಕಳಿಗೆ [illegible] ಹಾಕಿದರೆ ಅವಕ್ಕೆ ನಿದ್ದೆ ಚೆನ್ನಾಗಿ ಬರುತ್ತೆ....ನಾನೂ ಮಲಕ್ಕೋತೀನಿ......

'ಹಾಗೇ ಮಾಡಮ್ಮ....ಹಾಸಿಗೆ ಬಿಚ್ಚಿಕೊಡಲೆ ?'

'ಏನೂ ಬೇಡ ತಾಯಿ....'

ಲಲಿತಮ್ಮ ಕಣ್ಣು ಮುಚ್ಚಿಕೊಳ್ಳುವದರಲ್ಲಿದ್ದಳು....

*  *  *

[ಬಾಗಿಲ ಹೊರಗಡೆ ಗಂಡಸರ, ಹೆಂಗಸರ ಗುಜುಗುಜು ಸದ್ದು. ಯಾರೋ ಒಬ್ಬರು ಕೊನೆಗೆ ಬಾಗಿಲನ್ನು ತಟ್ಟಿದಂತಾಗುತ್ತದೆ....]

ಲಲಿತ : ಯಾರು ?

ಧ್ವನಿ : ಒಬ್ಬರೇ ಇದೀರ, ಲಲಿತಮ್ಮ ? ಹಾಗೇ ಬಂದೆವು.

ಲಲಿತ : ಬನ್ನಿ ಲಕ್ಷ್ಮಂದೇವಮ್ಮ, ಬನ್ನಿ. ಇನ್ನೂ ಯಾರೋ ಇದ್ದಹಾಗಿದೆ ಜತೆಗೆ ?

ಲಕ್ಷ್ಮಂದೇವಮ್ಮ : (ಒಳಗೆ ಬರುತ್ತ) ನಾಗಮ್ಮ, ಸಾವಿತ್ರಮ್ಮ ಎಲ್ಲರೂ ಬಂದಿದಾರೆ.

ಲಲಿತ : ಹರಿಕಥೆ ಮುಗಿಸಿಕೊಂಡು ಮನೆಗೇ ಹೋಗಲಿಲ್ಲವೆ ?

ಲಕ್ಷ್ಮಂದೇವಮ್ಮ : ......ಇಲ್ಲ, ಹೀಗೇ ಬಂದೆವು....ನಿಮ್ಮ ಕಥೆ ಕೇಳೋಣ ಅಂತ.

ಲಲಿತ : ಬನ್ನಿ ಒಳಗೆ ಸಾವಿತ್ರಮ್ಮ, ನಾಗಮ್ಮ !

ಸಾವಿತ್ರಮ್ಮ : (ಬಾಗಿಲಿನಿಂದಲೆ) ನಾವು ಮರ್ಯಾದಸ್ಥರ ಮನೇಗೇ ಮಾತ್ರ ಬಂದು ಹೋಗಿ ಮಾಡೋದು ಲಲಿತಮ್ಮ, ಕ್ಷಮಿಸಿ.

ನಾಗಮ್ಮ : ಇದೇನಿದು, ಸಾವಿತ್ರಮ್ಮ, ಲಲಿತಮ್ಮ ಅಂತ ಕರೀತೀರಿ. ಅವರ ಹೆಸರು ಮೀನಾಕ್ಷಮ್ಮ, ಅಲ್ಲವೆ ?

[ಎಲ್ಲರೂ ನಗುತ್ತಾರೆ]

ಗಂಡಸಿನ ಧ್ವನಿ : [ಒಳಗೆ ಬರುತ್ತ] ಎಲ್ಲಮ್ಮ ಅವನು—ನಿನ್ನ ಗಂಡ ಅನಿಸಿಕೊಂಡವನು ?

[ಅವನೂ ನಗುವನು]

ಲಲಿತ : ನೀವು ಯಾರು ?

ಗಂಡಸು : ನಾನೇ ? ನಾನು ಈ ಮನೆಯ ಮಾಲೀಕ. ಇಲ್ಲವೇ ಮನೆಯಲ್ಲಿ ಚಂದ್ರಶೇಖರಯ್ಯ ?

ಲಲಿತ : ಇಲ್ಲ, ಕೂತುಕೊಳ್ಳಿ, ಬಂದುಬಿಡ್ತಾರೆ ಈಗ.

ಗಂಡಸು : ಅವನಿಗೆ ಹೇಳಮ್ಮ, ಬಂದ ಕೂಡಲೆ ನಾಳೇನೇ ಈ ಮನೆಯನ್ನು ಖಾಲಿ ಮಾಡಿಬಿಡಬೇಕು ಅಂತ. ಸದ್ಗೃಹಸ್ಥರಿಗೆ ಮಾತ್ರ ನಾವು ಮನೆಯನ್ನು ಬಾಡಿಗೆಗೆ ಕೊಡೋದು.

ಇನ್ನೊಬ್ಬ ಗಂಡಸಿನ ಧ್ವನಿ : ಚಂದ್ರಶೇಖರಯ್ಯನವರೆ !

ಲಲಿತ : ಯಾರು ? ಕ್ಷಮಿಸಿ, ನೋಡಲೇ ಇಲ್ಲ......ಸೀತ, ನೋಡಿ, ನಿಮ್ಮ ಅತ್ತೆ, ಮಾವ ಎಲ್ಲ ಬಂದಿದಾರೆ—ನಿನ್ನ ಕರೆದುಕೊಂಡು ಹೋಗುವುದಕ್ಕೆ !

ಆತ : ಕ್ಷಮಿಸಿ, ಆದಕ್ಕಲ್ಲ ನಾವು ಬಂದದ್ದು. ಅವಳಿಗೂ ನಮಗೂ ಇನ್ನು ಯಾವ ತರಹದ ನೆಂಟಸ್ತನವೂ ಇಲ್ಲ ಅಂತ ಹೇಳಿ ಹೋಗೋಣ ಅಂತ ಬಂದಿದ್ದು. ನಮ್ಮ ಹುಡುಗನಿಗೆ ಬೇರೆ ಕಡೆ ಹೆಣ್ಣು ಗೊತ್ತುಮಾಡಿದ್ದೇವೆ. ಮದುವೆಗೆ ಬರ್ತೀರಲ್ಲ ?

ಲಲಿತ : ಅಯ್ಯೋ, ಹಾಗೆ ಮಾಡಬೇಡಿ. ನಿಮ್ಮ ಕಾಲಿಗೆ ಬೀಳ್ತೇನೆ.

ಆತನ ಹೆಂಡತಿ : ಹಾದರಕ್ಕೆ ಹುಟ್ಟಿದ ಹುಡುಗಿಯನ್ನು ನಮ್ಮ ಸೊಸೆ ಅಂತ ಹೇಗಮ್ಮ ಇಟ್ಟುಕೊಳ್ಳೋದು, ಲಲಿತಮ್ಮ....ಅಲ್ಲ, ಮೀನಾಕ್ಷಮ್ಮ ?

ಆತ : ಬಾರೆ, ಇನ್ನೇಕೆ ಮಾತು ?....ಹೋಗ್ತೇವಮ್ಮ....

[ಹೆಂಗಸರೂ, ಗಂಡಸರೂ ಹೊರಡುವರು.]

ಲಲಿತ : ಅಯ್ಯೋ, ಅಯ್ಯೋ........ನನ್ನ ತಪ್ಪಿಗೆ ಅವಳಿಗೆ-ಏನೂ ಅರಿಯದ ಆ ಹುಡುಗಿಗೆ—ಶಿಕ್ಷೆ ಮಾಡುತ್ತಾರೆಯೆ ?

ಧ್ವನಿ : (ಬಾಗಿಲಿನಲ್ಲಿ) ನಿನಗೂ ಶಿಕ್ಷೆ ಕಾದಿದೆ, ನಿನ್ನ ತಪ್ಪಿಗೆ, ಮೀನ !

ಲಲಿತ : ನೀವು ಯಾರು ?

ಧ್ವನಿ : ನಾನೇ ? ನೀನು ಸತ್ತ ಮೇಲೆ ನನ್ನ ಹತ್ತಿರಕ್ಕೇ ಬರೋದು. ನಾನು....ಯಮ ! ನಿನಗೆ, ನಿನ್ನಂತಹವಳಿಗೆ ಕುದಿಯುವ ಎಣ್ಣೆ ಬಾಣಲೆಯಲ್ಲಿ ಸ್ನಾನ ಮಾಡಿಸುವುದೂ ನಾನೆ. ಗೊತ್ತಾಯಿತೆ ?

ಲಲಿತ : ನಾನು ಈಚೆಗೆ ದೇವರ ಪೂಜೆ ಮಾಡ್ತಿದ್ದೇನೆ. ಒಪ್ಪತ್ತು ಊಟ ಬಿಟ್ಟಿದ್ದೇನೆ. ಇಷ್ಟು ಮಾಡಿದರೂ ಪಾಪಕ್ಕೆ ಪ್ರಾಯಶ್ಚಿತ್ತವಾಗಿಲ್ಲವೆ ? ದೇವರಿಗೆ ಕನಿಕರ ಬಂದಿಲ್ಲವೆ ?

ಯಮ : ಸಾಕೇ ಅಷ್ಟು ಪ್ರಾಯಶ್ಚಿತ್ತ ನೀನು ಮಾಡಿದ ಪಾಪಕ್ಕೆ ? ಚೆನ್ನಾಯ್ತು !

[ಚಪ್ಪಾಳೆ ಹೊಡೆಯುತ್ತಾನೆ. ಇಬ್ಬರು ಬಂದು ಉತ್ತರವಾಗಿ ನಿಲ್ಲುತ್ತಾರೆ.]

ಇವಳನ್ನು ಹಗ್ಗ ಕಟ್ಟಿ ಬಾಣಲೆಗೆ ಹಾಕಿ....

ಲಲಿತ : ಬೇಡ, ಬೇಡ......ಅಯ್ಯೋ, ಅಯ್ಯೋ......

ಬಿಡಿಸೆ ಸೀತ. ಬಿಡಿಸೋ ಚಂದ್ರು......ಅಯ್ಯೋ......!

* * *

ಅವಳ ಕೂಗಾಟವನ್ನು ಕೇಳಿ ಧಾವಿಸಿಬಂದು ಸೀತೆ ನೆಲದ ಮೇಲೆ ಹುಳುವಿನಂತೆ ವಿಲವಿಲ ಹೊರಳುತ್ತ, ಕೆಟ್ಟದಾಗಿ ಕಿರುಚುತ್ತ ಇರುವ ತಾಯಿಯನ್ನು ಹಿಡಿದೆತ್ತುವ ಪ್ರಯತ್ನದಲ್ಲಿರುವಲ್ಲಿ ಚಂದ್ರಶೇಖರಯ್ಯ, ಡಾಕ್ಟರರ ಜೊತೆಗೇ ಬರುತ್ತಾರೆ.

ಇನ್ನೂ ಕಿರುಚುತ್ತಿರುವ, ನರಳುತ್ತಿರುವ ಅವಳನ್ನು ಮಂಚದ ಮೇಲೆ ಮಲಗಿಸುವ ಹೊತ್ತಿಗೆ ಬಾಗಿಲನ್ನು ತಳ್ಳಿಕೊಂಡು ಸೀತಳ ಗಂಡ ಬರುತ್ತಾನೆ. ಒಳಗೆ ಬಂದ ಅವನಿಗೆ ಏನ್ನೊಂದೂ ಅರ್ಥವಾಗುವುದಿಲ್ಲ. ಲಲಿತಮ್ಮನೇ ಕಣ್ಣು ಬಿಟ್ಟು ಅವನನ್ನು ಮಾತನಾಡಿಸುತ್ತಾಳೆ.

'ನಿನ್ನ ದಮ್ಮಯ್ಯ ಕಣಪ್ಪ. ಸೀತನ್ನ ಕರೆದುಕೊಂಡು ಹೋಗು......'

'ಅವನು ಬಂದಿರೋದೇ ಅದಕ್ಕೆ ಕಣೆ. ನೀನು ಮಲಗಿಕೋ......' ಗಂಡನ ಸಮಾಧಾನ ಅವಳ ಕಿವಿಗೆ ಬೀಳಲೇ ಇಲ್ಲ.

ಅಳಿಯನ ಕಾಲಿಗೆ ಸಾಷ್ಟಾಂಗ ನಮಸ್ಕಾರ ಮಾಡಿದವಳೇ ಹೇಳಿದಳು.

'ಬೇರೆ ಮದುವೆ ಮಾಡಿಕೊಳ್ಳುವುದಿಲ್ಲ ಅಂತ ಹೇಳು, ಕೃಷ್ಣಮೂರ್ತಿ......'

ಅರ್ಥವಾಗದೆ ಮೂಕನಾಗಿ ನಿಂತಿದ್ದ ಅಳಿಯನನ್ನು ಚಂದ್ರಶೇಖರಯ್ಯನವರು ಕೇಳಿದರು.

'ನೀನೊಂದು ಕಾಗದ ಬರೆಯಬಾರದಾಗಿತ್ತೇ, ಅಪ್ಪ ?'

ಅಳಿಯ ಸೀತೆಯ ಕಡೆ ತಿರುಗಿದ.

'ಇವತ್ತು, ನಾಳೆ ಅಂತಂದುಕೊಂಡು ಬರೆಯಲೇ ಇಲ್ಲ. ಅದಕ್ಕೂ ಇದಕ್ಕೂ ಏನು ಸಂಬಂಧ, ಸೀತ ?'

ಬಿಕ್ಕಿ, ಬಿಕ್ಕಿ ಅಳುತ್ತಿದ್ದ ಸೀತೆ ಉತ್ತರಕೊಡಲಿಲ್ಲ......

ಡಾಕ್ಟರು ನಡುವೆ ಮಾತನಾಡಿದರು.

'ಆವರೆದುರಿಗೆ ಯಾವ ಚರ್ಚೆಯೂ ಬೇಡ, ಚಂದ್ರಶೇಖರಯ್ಯನವರೆ. ದಯ ವಿಟ್ಟು ಒಂದು ಗಾಡಿಯನ್ನೋ, ಟ್ಯಾಕ್ಸಿಯನ್ನೊ ತನ್ನಿ. ಆಸ್ಪತ್ರೆಗೆ ಕರೆದುಕೊಂಡು ಹೋಗೋಣ.'

'ನಾನು ಹೋಗಿ ತರ್ತೀನೆ. ನೀವು ಇಲ್ಲೇ ಇರಿ.'

ಅಳಿಯ ಮಾವನಿಗೆ ಹೇಳಿದ.

'ಮೆಂಟಲ್ ಹಾಸ್ಪಿಟಲ್ಲಿಗೆ, ಕೃಷ್ಣಮೂರ್ತಿ!' ಚಂದ್ರಶೇಖರಯ್ಯನವರು ಅಳಿಯನಿಗೆ ಸೂಚಿಸಿದರು.

ಕೃಷ್ಣಮೂರ್ತಿ ಹೊರಟ.

ಲಲಿತ ಕೂಗುತ್ತಲೇ ಇದ್ದಳು.

'ಆಯ್ಯೋ, ಆಯ್ಯೋ, ಹೋಗೇಬಿಟ್ಟ! ಸೀತನ್ನ ಇಲ್ಲೇ ಬಿಟ್ಟು ಹೋಗೇ ಬಿಟ್ಟ........!!'

—ಬಿ. ಸಿ. ರಾಮಚಂದ್ರಶರ್ಮ

# ನಲ್ಲಿಯಲ್ಲಿ ನೀರು ಬಂದಿತು !!!

ಆರು ಮನೆಗಳ ಸಾಲು ವಠಾರದಲ್ಲಿ ಸೀತಮ್ಮ ಮತ್ತು ರಂಗಮ್ಮನ ಮನೆಗಳು ಒಂದು ಗೋಡೆಯ ಆಚೆಯೀಚೆಯವು. ಸೀತಮ್ಮನ ಮನೆಯಲ್ಲಿ ಕುಳಿತ ರಂಗಮ್ಮ ಹರಟೆ ಕೊಚ್ಚುತ್ತಿದ್ದಳು.

ಕೆಂಪು ಮೋಡ ಪಡುವಣದಲ್ಲಿ ಕರಿ ರೂಪ ತಳೆದು ತಾಸೆರಡು ಇವರ ಮಾತಿನ ಹೊರಳಾಟದಲ್ಲಿ ಕಂಡೂ ಕಾಣದಂತೆ ಮಾಯವಾಗಿತ್ತು.

ಸೀತಮ್ಮನ ಬಸಿರೊಳಗೆ ಜೀವವೊಂದು ಹೊರಳಾಡಿತು............ಇಂದೋ ನಾಳೆಯೊ.......ಎನ್ನುವಂತಿತ್ತು.

'ಬಹಳ ದಿಗಿಲಾಗುತ್ತರೀ........ರಂಗಮ್ಮ.......'

ಹೆತ್ತು ಹೆತ್ತ ರಂಗಮ್ಮನ ಮುಂದೆ ನಾಚಿಕೆಯಿಂದ ಅಂದಳು—ಏನಾಗಬಹುದು 'ಅಂದು' ಎಂಬುದನ್ನು ಕೇಳಿ ತಿಳಿದಿದ್ದವಳು ಅನುಭವಿಸದೇ ಇದ್ದುದರಿಂದ ಈ ವರೆಗೂ........

'ಹಾಗೆಲ್ಲ ದಿಗಿಲುಪಟ್ಕೊಬಾರ್ದು ತಾಯಿ.......'

ಹೆತ್ತ ಹತ್ತರದಲ್ಲಿ ಏಳನ್ನೇ ಉಳಿಸಿಕೊಂಡಿದ್ದ ಆಕೆ ಧೈರ್ಯ ಕೊಡುವ ಮಾತನ್ನು ಎಸೆದಳು.......ಕತ್ತಲ ಕೋಣೆಯಲ್ಲಿ ರೆಪ್ಪೆಯಾಡಿಸದ ಜೀವ ಹೊರಳಿದುದರಿಂದ ತಾಯಿ ದೇಹಕ್ಕೆ ನೋವು ಆಗಿತ್ತು........ಕೆಂಪೇರಿದ ಮುಖವನ್ನು ತಗ್ಗಿಸಿದಳು........ನಾಚಿಕೆ ಬಂದು ತುಟಿ ಎರಡಾಗಲು ಬಿಡಲಿಲ್ಲ.

ಒಣಗಿದ ಬರಿದಾದ ಅನ್ನದ ಪಾತ್ರೆಯನ್ನು 'ನೆನೆಸಲು' ಅಡಿಗೆ ಮನೆಗೆ ಮೆಲ್ಲ ನೆದ್ದು ಹೋದಳು ಸೀತಮ್ಮ, ನೀರಿಗೆಂದು ನಲ್ಲಿ ತಿರುಗಿಸಿದಾಗ ಅಚ್ಚರಿಯಾಯಿತು.... ದಾರವಾಗಿ ಸುರಿಯುತ್ತಿದ್ದ ನೀರನ್ನು ಕಂಡು....ಘಳಿಗೆಯರಡರಲ್ಲಿ ಸುರಿಯುವ ದಾರವೂ ನಿಲ್ಲಬಹುದೆನ್ನಿಸಿತು.

'ನೀರು ನಿಲ್ಲೋ ಹಾಗಿದೆ ರಂಗಮ್ಮ.......'

ಕೆಟ್ಟ ವಾರ್ತೆಯೊಂದು ಕಿವಿಗೆ ಬಿದ್ದಂತೆ, ಕುಳಿತ ತಳಕ್ಕೆ ಬಿಸಿಯೇರಿದಂತೆ ಎದ್ದೋಡಿದಳು ಮನೆಗೆ—ರಂಗಮ್ಮ, ಕೊಡವನ್ನು ನಲ್ಲಿಯ ಬುಡದಲ್ಲಿಟ್ಟು ನಲ್ಲಿ

ತಿರುಗಿಸಿದಳು. ಧೈರ್ಯವಾಯಿತು-ಹುರಿಯಷ್ಟು ಗಾತ್ರ ಸುರಿಯುತ್ತಿದ್ದ ನೀರನ್ನು ನೋಡಿ.

ಹಾಗಲ್ಲಿ ನಲ್ಲಿ ತಿರುಗಿಸಿದುದರಿಂದ ಸೀತಮ್ಮನ ಮನೆಯ ನಲ್ಲಿ ಕೋಪಿಸಿ ಕೊಂಡಿತು-ಕೂಗಿತು.

'ಕೊರ್''''......'

ಸೀತಮ್ಮ ನೋಡಿದಳು......ಹಿಂದೆ ಬದುಕಿದ್ದ ಅಜ್ಜ ಮರಣ ಶಯ್ಯೆಯಲ್ಲಿ ಉಬ್ಬಸದಿಂದ ನರಳಿದಾಗ ಅವನ ಮೂಗಿನಿಂದ ಇಂಥದೇ ಒಡಕು ಸ್ವರ ಹೊರಟಿತ್ತು.

ದಾರವಾಗಿದ್ದುದ್ದು ಹನಿಯಾಯಿತು......ಕೊನೆಗದೂ ನಿಂತಿತು.

ಎಂದೂ ಹೀಗೆಯೆ......

ಆಚೆ ಮನೆಯಲ್ಲಿ ನಲ್ಲಿ ತಿರುಗಿಸಿದಾಗ ಇವಳ ಮನೆಯ ನಲ್ಲಿ 'ಗೊರ್' ಎಂದು ಗುರುಗುಟ್ಟಿ ಮುಷ್ಕರ ಹೂಡುವುದು......ಪಾಪವೆನಿಸಿ ಆಕೆ ಬಿಟ್ಟರೆ ಇಲ್ಲಿ ನೀರು ಬರ ಬಹುದು—ಅಷ್ಟೆ.

ನೀರು ತುಂಬಿಡಲು ಮರೆತುದುದು ಆಕಸ್ಮಿಕವಾಗಿ......ಹಾಗೆ ಮರೆತುದೇ ಅಚಾ ತುರ್ಯವಾಯಿತು......ನೀರು ನುಂಗಿ ನಿಂತ ನಲ್ಲಿಯನ್ನೇ ದೀಪದ ಬೆಳಕಿನಲ್ಲಿ ನೋಡು ತ್ತಿದ್ದ ಸೀತಮ್ಮನಿಗೆ ರಂಗಮ್ಮನ ಮನೆಯಲ್ಲಿ ಬುಳುಬುಳೆಂದು ನೀರು ಕೊಡದಲ್ಲಿ ತುಂಬಿಕೊಳ್ಳುತ್ತಿದ್ದುದು ಕೇಳಿಸದೇ ಇರಲಿಲ್ಲ......ಬಿಂದಿಗೆ ಮುಕ್ಕಾಲು ತುಂಬಿ ಕತ್ತಿನ ವರೆಗೂ ನೀರು ಏರುತ್ತಿದ್ದ ಸದ್ದು ಆಲಿಸಿದಾಗ; ಇನ್ನು ಆಕೆ ನಲ್ಲಿ ನಿಲ್ಲಿಸಬಹುದೆಂದು ಯೋಚಿಸಿದಳು......ಆದರೆ ಬಿಂದಿಗೆ ತುಂಬಿದಾಗ ಅದರ ನೀರನ್ನು ಹಂಡೆಗೆ ಸುರಿದು ಪುನಃ ನಲ್ಲಿಯ ಬುಡಕ್ಕೆ ಬಿಂದಿಗೆಯಿಟ್ಟ ಸದ್ದು ಕೇಳಿದಾಗ ತನ್ನ ಎಣಿಕೆ ತಪ್ಪೆಂದು ಗ್ರಹಿಸಿದಳು......ಬಸಿರೊಳಗೆ ಭಾರ ಇದ್ದುದರಿಂದ ನಿಲ್ಲಲಾರದೆ ಅಲ್ಲೆ ಕುಳಿತಳು...... ನೋವು ಈಗೊಮ್ಮೆ ಆಗೊಮ್ಮೆ ಕಾಣಿಸಿಕೊಳ್ಳುತ್ತಿತ್ತು.

'ಕುಡಿಯೋಕ್ಕೆ ತೊಟ್ಟು ನೀರಿಲ್ಲ......ಬಿಡ್ತೀರಾ ರಂಗಮ್ಮಾ......'

ರಂಗಮ್ಮನಿಗೆ ಕೇಳುವಂತೆ ಏರುದನಿಯಲ್ಲಿ ಕೂಗಿದಳು.

ರಂಗಮ್ಮ ಎಣಿಸುತ್ತಿದ್ದಳು—ಹಂಡೆ ತುಂಬಲು ನಾಲ್ಕು ಬಿಂದಿಗೆ......ಕೊಳತಪ್ಪ ಲೆಗೆ ಎರಡು......ದೊಡ್ಡ ಬಾನಿಗೆ......

'ನಾಳೆ ನೀರು ಹಾಕ್ತೀಯಾ ?'

ಆಶ್ಚರ್ಯದಿಂದ ಗಂಡನ ಕಡೆ ನೋಡಿದ್ದಳು........

'ಯಾವ ದೇವ್ರು ನಿಮಗಿಂಥಾ ಬದ್ಧಿ ಕೊಟ್ನೊ........ಸಧ್ಯ ಹಾಕ್ಕೊಳ್ಳಿ........'

ಪತಿರಾಯ ಬೆಳಿಗ್ಗೆಯಷ್ಟೇ ನುಡಿದಿದ್ದರು........ಹಂಡೆಗೆ ನೀರು ತುಂಬುವಾಗ ಆ ನೆನಪು ಆಯಿತು........ಸಧ್ಯ ಹಂಡೆ ಕೊಳತಪ್ಪಲೆ ತುಂಬುವಷ್ಟಾದರೂ ನೀರು ಬಂದರೆ ಬೆಳಿಗ್ಗೆ 'ಅವರಿಗೆ' ನೀರು ಹಾಕಬಹುದು........ಹಾಳುಮುಂಡೇದು........ಇಂದೇ ನಿಲ್ಲ ಬೇಕೆ ?........

'ರ್ರೀ ರಂಗಮ್ಮ........ಸ್ವಲ್ಪ ನೀರು ಬಿಡ್ರಿ........ಕುಡಿಯೋಕ್ಕೆ ತೊಟ್ಟು ಇಲ್ಲ........'

ತಾರಸ್ಥಾಯಿಯಲ್ಲಿ ಸೀತಮ್ಮ ಕಿರುಚಿದುದು ನೀರು ಸುರಿಯುವ ಸದ್ದಿಗೂ ಮಿಗಿಲಾಗಿ ಕೇಳಿತು........

[ಅಬ್ಬಾ!........ಎಷ್ಟು ಜೋರಾಗಿ ಹೊಡ್ಕೊತ್ತಾಳೆ ಬಾಯಿ ಬಡ್ಕಿ?........']

'ಬಿಡ್ತೀನಿ ತಾಳ್ರಿ........' ಈಕೆಯೂ ಅಷ್ಟೇ ಜೋರಾಗಿ ಉತ್ತರಿಸಿದಳು........

'ಕೊನೆಗೂ ಕೇಳಿಸ್ತಲ್ಲ........ಅಬ್ಬಾ........ಸ್ವಲ್ಪ ನೀರು ಬಿಡೀಂದ್ರೆ ಹೇಗೆ ಆಡ್ತಾರಪ್ಪ........ಏನು ತಲೆಮೇಲೆ ಹಾಕ್ಕೊಂಡು ಹೋಗ್ತಿದ್ರೆ........' ನಲ್ಲಿಯ ದಂಡೆಯಮೇಲೆ ಕುಳಿತ ಸೀತಮ್ಮ ಯೋಚಿಸಿದಳು—ನಾಲ್ಕು ನಾಲ್ಕು ಬಾರಿ ಕೂಗಿದ ನಂತರ ಆಕೆ ಉತ್ತರಿಸಿದುದಕ್ಕಾಗಿ.

ಮತ್ತೂ ಮೂರು ನಿಮಿಷವಾಯಿತು........

ಸಣ್ಣಗೆ ನೋವು ಕಾಣಿಸಿಕೊಂಡಿತು........ಮುಖದಲ್ಲಿ ಕಂಡೂ ಕಾಣದಂತೆ ಬೆವರು ಮೂಡಿತು....ಜೊತೆ ಜೊತೆಯಲ್ಲೇ ಭಯವೂ ಆಯಿತು........ಪತಿರಾಯ ಊರಲ್ಲಿಲ್ಲ........ಬೆಳಿಗ್ಗೆಯಷ್ಟೇ ದೊಡ್ಡ ಸಾಹೇಬರೊಡನೆ ದೂರದೂರಿಗೆ ಇನ್‌ಸ್ಪೆಕ್ಷನ್ನಿಗೆಂದು ಹೋಗಿದ್ದರು. ಅವರಿರುವಾಗಲೇ ನೋವು ಕಾಣಿಸಿಕೊಂಡಿದ್ದರೆ ಪ್ರಯಾಣವನ್ನು ತಪ್ಪಿಸಬಹುದಿತ್ತು....'ರೆ' ಪ್ರಪಂಚದಲ್ಲಿ ತೇಲಾಡುವಷ್ಟರಲ್ಲೇ ನೆನಪಾಗಿ ಕೂಗಿದಳು........

'ರ್ರೀ........ಸ್ವಲ್ಪ ನೀರು ಬಿಡ್ರಿ........'

ಆಕೆಯ ಹೆಸರನ್ನೂ ಕೂಗಿ ಕರೆಯುವ ಸಂಯಮವನ್ನು ಕಳೆದು ಕೊಂಡಳು.

'ಸರಿ........ಇದ್ದದ್ದೇ........ಇನ್ನು ಮೂರೂ ಕೊಡ ಆದಮೇಲೆ ಮಹಾರಾಯ್ತಿ ಹಾಗೆ ಎಲ್ಲಾ ನೀರನ್ನೂ ಅವಳೇ ಕುಡೀಲಿ........ಯಾರು ಬೇಡವೆಂದರು ?........ನಾನೇನು ತಲೇಮೇಲೆ ಹೊತ್ಕೊಂಡು ಹೋಗಬೇಕೆ ?........'

ಗೊಣಗುಟ್ಟಿದ ರಂಗಮ್ಮ ಮತ್ತೆ ಕೂಗಿ ಹೇಳಿದಳು—

'ಆಯ್ತೂರೀ........ಬಿಟ್ಟೇನೀ........'—'ಅಯ್ಯೋ, ಯಾಕೆ ಹೊಡ್ಕೊಳ್ತಿ'—ಎನ್ನುವ ಧಾಟಿಯಲ್ಲೇ.

ಹಾಗೆ ಕೂಗು ಹಾಕುವಾಗಲೇ ಕೂಸಿನ ಕಿರಿಬೆರಳ ಗಾತ್ರದಲ್ಲಿ ಸುರಿಯುತ್ತಿದ್ದ ನೀರಿಗೂ ಕ್ಷಯವಾಗಿ ಕೊನೆಗೆ ನಿಂತಿತು.

ನಲ್ಲಿ ಕೂಗಿತು........'ಗೊರ್""........'

'ಥತ್ !........ಇನ್ನೆರಡು ಕೊಡವಾಗಿದ್ರೆ ಸಾಕಾಗಿತ್ತು........ಹಾಳು ಮುಂಡೇದು'—ನಲ್ಲಿ ಕೆಲಸಗಾರರಿಗೂ ಕೂಡಿಸಿಯೇ ಹಿಡಿ ಶಪಿಸಿದಳು ರಂಗಮ್ಮ.

ನೀರು ನಿಂತಿದ್ದುದು ಕೇಳಿಸಿತು—ಸೀತಮ್ಮನಿಗೆ. 'ಕೊನೆಗೂ ನಿಲ್ಲಿಸಿದರಲ್ಲ' ನಲ್ಲಿಯನ್ನು ತಿರುಗಿಸಿದಳು.

ನೀರು ನಿಂತಿತ್ತು !

ಸೀತಮ್ಮನಿಗೆ ವ್ಯಥೆಯಾಯಿತು........ದುಃಖವಾಯಿತು........

'ಛೆ!........ಆಕೆಗೆ ಅಷ್ಟೂ ಕರುಣೆ ಬರಲಿಲ್ಲ !........ಕುಡಿಯೋದಕ್ಕೆ ನೀರಿಲ್ಲಾಂದ್ರೂ ನಿಲ್ಲಿಸಲಿಲ್ಲವಲ್ಲ!......ಒಂದೆರಡು ಚೊಂಬಿನಷ್ಟಾದರೂ ಆಗಿದ್ದರೆ ಸಾಕಿತ್ತು........'......ಯೋಚಿಸುತ್ತಲೇ ಮತ್ತೆ ಕೂಗಿದಳು.

'ರ್ರೀ........ಸ್ವಲ್ಪ ಬಿಡ್ರಿ........'—ಸಹನೆ ಮೀರಿ, ದುಃಖ ಎದೆಯಲ್ಲಿ ಒತ್ತಿ ಬಂದಿದ್ದರೂ, ಕೋಪ ಮೈಯುದ್ದಕ್ಕೂ ಮಿಂಚಿದ್ದರೂ ತೋರಗೊಡದೆ ಕೂಗಿದಳು.

'ನಿಲ್ಸಿದೀನ್ರೀ........'

ದಿಗಿಲಾಯಿತು ಸೀತಮ್ಮನಿಗೆ........ಯೋಚಿಸಿದಂತೆಯೇ ನೀರು ಪೂರ್ತಿ ನಿಂತು ಹೋಗಿತ್ತು.

'ಅಬ್ಬಾ, ಕೊನೆಗೂ ಹಟ ಸಾಧಿಸಿದರಲ್ಲ ಆಕೆ!'—ಎಂದೆನಿಸಿತು. ಕಣ್ಣಿನಲ್ಲಿ ಹನಿಯೊಂದು ತುಳುಕಿತು. 'ಹೆತ್ತು ಹೆತ್ತವರಾದರೇನು ?—ಕರುಳಿಗೆ ಮಾತ್ರ ಮರುಕವಿಲ್ಲ'—ಎಂದುಕೊಂಡಳು.

ನೋವು ಮತ್ತೆ ಕಾಣಿಸಿಕೊಂಡಿತು. ಹಸಿವು ಪೈಪೋಟಿ ಹೂಡಿತ್ತು. ಮೆಲ್ಲನೆ ಹೊರಳಿ ತಟ್ಟೆಯನ್ನಿಟ್ಟುಕೊಂಡಳು. ಚೊಂಬೊಂದರಲ್ಲಿ ಹಗಲಿನಲ್ಲೇ ನೀರಿಟ್ಟಿದುದು

ನೆನಪಿಗೆ ಬಂದಿತು. ಆಸೆಗಣ್ಣಿನಿಂದ ಮೂಲೆಯಲ್ಲಿದ್ದ ಚೊಂಬನ್ನು ನೋಡಿದಳು. ತುಂಬ ಅಲ್ಲದಿದ್ದರೂ ಮುಕ್ಕಾಲು ಚೊಂಬು ನೀರಿತ್ತು. ತುಸು ಧೈರ್ಯವಾಯಿತು.

ಅನ್ನ ಬಡಿಸಿಕೊಂಡು ಅರ್ಧ ಊಟವಾಗುವಾಗಲೇ ಮತ್ತೊಮ್ಮೆ ನೋವು ಹೆಚ್ಚಿತು........

'ಹಾಗೇನಾದ್ರೂ ನೋವು ಕಾಣಿಸಿಕೊಂಡ್ರೆ ಸ್ವಲ್ಪ ಜೀರಿಗೆ ಕಷಾಯ ಮಾಡಿ ಕುಡೀರಿ........ಹಾಗೂ ನಿಲ್ದೆ ಇದ್ರೆ ಬಂದು ಕರೀರಿ........ಬರ್ತೀನಿ.......'

ಮೊನ್ನೆಯಷ್ಟೆ ಸೂಲಗಿತ್ತಿ ಸುಂದರಮ್ಮ ಮನೆಗೆ ಬಂದು ತನ್ನನ್ನು ಪರೀಕ್ಷಿಸಿ ಹೋಗುವಾಗ ನುಡಿದಿದ್ದರು.

'ಹೆದರಿಕೆ ಏನೂ ಇಲ್ಲವಷ್ಟೆ ?'

'ಛೆ!........ನಾನಿಲ್ವೆ ?.......'

ಪತಿ ಕೇಳಿದುದಕ್ಕೆ ಸುಂದರಮ್ಮ ಹಾಗೆ ಧೈರ್ಯವಿತ್ತಿದ್ದರು.......ಪಾಪ........ಎಷ್ಟು ಒಳ್ಳೆಯವರಾಕೆ ?........ತನಗೆ ತಾಯಿಯಿಲ್ಲ........ತವರಿಗೆ ಕರೆಸಿಕೊಳ್ಳುವಷ್ಟು ಇರುವ ತಂದೆಗೆ ಚೈತನ್ಯವಿಲ್ಲವೆಂದಾಕೆಗೆ ತಿಳಿದಾಗ, ಹೆತ್ತಮ್ಮನಿಗೂ ಮಿಗಿಲಾಗಿ ಮರುಗಿದ್ದರು.

ನೆನಪು ಒಡೆಯಿತು........

ಕಷಾಯ ಮಾಡಿಕೊಳ್ಳಬೇಕು........ಕೈಯಲ್ಲಾಗದು ಎಂದು ಮನವರಿಕೆಯಾದಾಗ ರಂಗಮ್ಮನಿಗೆ ಕರೆಯುವುದೇ ಎಂದು ಒಮ್ಮೆ ಯೋಚಿಸಿದಳು. ಮರುಕ್ಷಣವೇ ಸ್ವಾಭಿಮಾನ ಕೆರಳಿತು....'ಉಹುಂ.... ಬೇಡ........ಚೊಂಬು ನೀರಿಗಾಗಿ ಎಷ್ಟೆಲ್ಲ ಆಡಿದ ರಾಕೆ ? ನಾನಾಗಿ ಏಕೆ ಕೂಗಲಿ ?...?....' ಎನಿಸಿತು.

ನೋವಿನಿಂದಾಗಿ ಅನ್ನ ಗಂಟಲಿಗಿಳಿಯಲಿಲ್ಲ......ಎದ್ದು ಕೈತೊಳೆದು, ಕಷ್ಟ ದಿಂದಲೇ ಅಗ್ಗಿಷ್ಟಿಕೆ ಹಚ್ಚಿ ಎರಡು ಲೋಟ ನೀರನ್ನು ಕುದಿಸಿ ಕಷಾಯ ಮಾಡಿ ದಳು....

ನಲ್ಲಿಯಲ್ಲಿ ನೀರು ನಿಲ್ಲುವಾಗಲೇ ರಂಗಮ್ಮನಿಗೆ ಕೋಪಉಕ್ಕೇರಿತ್ತು....ಇನ್ನೊಂ ದೆರಡು ಬಿಂದಿಗೆ ಎನ್ನುವಷ್ಟರಲ್ಲೆ ನೀರು ನಿಂತಿತ್ತು. ಅಷ್ಟರಲ್ಲೇ ಸೀತಮ್ಮನ ಕೂಗು ಕೇಳಿಸಿತು. ಮೈ ಉರಿಯುರಿಯಾಯಿತು. ನೀರು ನಿಂತಿತೆಂದು ತಾನು ಯೋಚಿಸು ವಾಗಲೇ ಅವಳು ಹಾಗೆ 'ನೀರು ನಿಲ್ಲಿಸಿ'—ಎಂದು ಕೂಗಿ ಕೆಣಕುವುದೇ ?........ 'ಹೊಟ್ಟೆ ಉರಿದುಕೊಂಡ್ಲು...... ಈಗ ಸಾಯ್ಲಿ ನೋಡೋಣ......'—ಎನ್ನಿಸಿತು. ತುಂಬಿಟ್ಟ ಹಂಡೆ, ಪಾತ್ರೆಗಳಿಗೆ ಮುಚ್ಚಿ, ಗುಟುಕು ನೀರು ಕುಡಿದು, ದೀಪವಾರಿಸಿ ಹಜಾರಕ್ಕೆ

ಬಂದಳು......ಆಗಲೇ ಪತಿರಾಯರು ಗೊರಕೆ ಹೊಡೆಯುತ್ತಿದ್ದರು......ಮಕ್ಕಳು ಕನಸು ಕಾಣುತ್ತಿದ್ದರು......ಗೋಡೆಗೆ ಸಿಕ್ಕಿಸಿದ್ದ ಬುಡ್ಡಿಯನ್ನು ತೆಗೆದುಕೊಂಡು ರೂಮಿಗೆ ಹೋಗಿ ಗಂಟೆ ನೋಡಿದಳು. ಹನ್ನೊಂದೂವರೆಯಾಗಿತ್ತು. ಪುನಃ ಹಜಾರಕ್ಕೆ ಬಂದು ಹಾಸಿಗೆಯನ್ನು ಬಿಡಿಸಿದಳು. ಹಾಸಿಗೆ ಬಿಡಿಸುವಾಗ ಅನ್ನಿಸಿತು—'ಆಕೆ ನೀರಿಲ್ಲವೆಂದು ಹೊಡ್ಕೊಂಡ್ರು......ಕೇಳಿದರೆ ಚೊಂಬು ನೀರು ಕೊಡುತ್ತಿರಲಿಲ್ಲವೆ ?...... ಏನಿಲ್ಲದಿದ್ದರೂ ಜಂಭವೊಂದಿಷ್ಟಾದರೂ ಇದೆ......ಹುಂ......ಯಾರು ಕೇಳ್ತಾರೆ ಇದನ್ನೆಲ್ಲ......ಸೆಟೆದು ಕೂತರೆ ಕೂರಲಿ....ಯಾರಿಗೆ ನಷ್ಟ ? ನೀರು! ನಿಂತದ್ದು ನನ್ನ ತಪ್ಪೆ ?....'

ಹಾಸಿಗೆ ಹೊರಳಿಸಿ ಧೂಳು ಕೊಡಹಿದಳು....ತಟಕ್ಕನೆ ಹಾಲು ಮುಚ್ಚಿಡದೇ ಇದ್ದುದು ನೆನಪಾಗಿ ಅಡಿಗೆ ಮನೆಗೋಡಿದಳು—

ಮಾಡಿದ ಕಷಾಯವನ್ನು ಆರಿಸಿ, ಕುಡಿದು ಹೊರಬಂದು ಹಾಸಿಗೆ ಬಿಚ್ಚಿ ರಗ್ಗನ್ನು ಝಾಡಿಸಿದಳು ಸೀತಮ್ಮ—

'ನಾನಿನ್ನು ನಾಲ್ಕು ದಿನ ಊರಲ್ಲಿರೋಲ್ಲ ತಾಯಿ—ದಯವಿಟ್ಟು ಆಕೇನ ನೋಡ್ಕೊಳ್ಳೋಭಾರ ತಮ್ದು—ರಾತ್ರಿ ನೀವು ನಮ್ಮನೇಲಿ ಸ್ವಲ್ಪ ಮಲ್ಕೊಂಡಿದ್ರೆ—'

'ಅಯ್ಯೋ ಅದ್ಕೇನು—ನಾನೇನು ಮನುಷ್ಯಳಲ್ಲವೇ......ಖಂಡಿತಾ ಮಲ್ಕೋತೀನಿ—ನೀವು ನಿರಾತಂಕವಾಗಿ ನಿಮ್ಮ ಕೆಲ್ಸಕ್ಕೆ ಹೋಗಿ—ನನ್ನ ಮಕ್ಳಲ್ಲಿ ಒಬ್ಳು ನಿಮ್ಮ ಸೀತಮ್ಮ—'

ದೂರದೂರಿಗೆ ಪತಿರಾಯ ಹೋಗುವ ಮುನ್ನ ಆಕೆಯನ್ನು ಕರೆದು ನುಡಿದು, ತನಗೆ ಸಂತೈಸಿ, ಧೈರ್ಯ ತುಂಬಿ, ಕಾಲು ಕಿತ್ತುದುದು—ಎಲ್ಲ ನೆನಪಿಗೆ ಬಂದಿತು...... ಪಾಪ—ಅವರು ದೂರದಲ್ಲಿದ್ದರೂ ಮನಸ್ಸು ಮನೆಯನ್ನೇ ಕುರಿತು ಚಿಂತಿಸುತ್ತಿರಬಹುದೆಂದು ಎದೆ ನುಡಿಯಿತು—ಅಂತೆಯೇ ಕತ್ತಲಲ್ಲಿ ತಾನೊಬ್ಬಳೇ ಇರಬೇಕಾದ ಪರಿಸ್ಥಿತಿಯನ್ನು ಯೋಚಿಸಿದಾಗ ತುಡಿಯುವ ಎದೆಯಲ್ಲಿ ಭಯ ತುಂಬಿತು. ಆಕೆಯನ್ನು ಮಲಗಲು ಕರೆಯುವುದೇ ಎಂದು ಯೋಚಿಸುವಾಗ, ಮತ್ತೊಂದು ಮನಸ್ಸು 'ಉಹುಂ......ನೋಡೋಣ......ಆಕೆಯೇ ಬರಬಹುದು......ಬೆಳಿಗ್ಗೆಯಷ್ಟೇ ತನ್ನ ಗಂಡನೊಂದಿಗೆ ಹಾಗೆ ಧೈರ್ಯ ಕೊಟ್ಟಿರಲಿಲ್ಲವೆ ?......ಅದು ನೆನಪಿರದೇ ಇರುತ್ತದೆಯೇ......' ......ಎಂದಿತು.

ಭಯದ ನಡುವೆಯೇ ಬಂದ ಬಿಗುಮಾನ ಭೂತವಾಯಿತು......

ಬೇಕೆಂದೇ ರಗ್ಗನ್ನು ಮತ್ತೊಮ್ಮೆ ಬಿರುಸಾಗಿ ಝಾಡಿಸಿದಳು ಆಕೆಗೆ ಕೇಳಿಸ ಲೆಂದು. ಸದ್ದು ಕೇಳಿ ಬರಬಹುದು........

ಹಾಗೊಂದು ವೇಳೆ ಬಾರದಿದ್ದರೆ ?

ಆಗ ತಾನೇ ಕೂಗುವುದೆ ? ಅಥವಾ........

ಹಾಸಿಗೆಯ ಮೇಲು ಹೊದಿಕೆಯನ್ನು ಝಾಡಿಸುವವರೆಗೂ ಪ್ರಶ್ನೆಗೆ ಉತ್ತರಿಸ ಲೆತ್ನಿಸಿದಳು...... ಅಸ್ಪಷ್ಟ ಉತ್ತರ ಭಯಾನಕವಾಗಿತ್ತು........ಗೌರವಕ್ಕೆ ಕಮ್ಮಿಯೆನಿಸಿ ಕೊಂಡು ಕರೆಯುವುದೂ ಆಗದ ಮಾತು. ಹಾಗೆಂದು ಒಬ್ಬಳೇ ಮಲಗುವುದೂ ಅಸಾಧ್ಯದ ವಿಷಯ........ಹೊಟ್ಟೆಯೊಳಗಿನ ನೋವು ಒಮ್ಮೊಮ್ಮೆ ಅವಳ ನಿಶ್ಚಯವನ್ನು ಸಡಿಲಿಸುತ್ತಿತ್ತು—ಧೈರ್ಯವನ್ನು ಕರಗಿಸುತ್ತಿತ್ತು......'ಥೂ, ಹಾಳು ನೋವು........' ಎಂದೆಂದುಕೊಳ್ಳುವಾಗಲೇ ನೋವು ಕಳೆದು ಮುಂದೆ ತಾನು ಕಾಣಬಹುದಾದ ದೃಶ್ಯವನ್ನು ಕಲ್ಪಿಸಿಕೊಂಡಾಗ ಮೈಯುದ್ದಕ್ಕೂ ನಾಚಿಕೆ ಹರಿದಂತಾಯಿತು........ದೀಪ ಚಿಕ್ಕದುಮಾಡಿ ಹಾಸಿಗೆಯ ಮೇಲೆ ಮೈಯಾನಿಸಿ, ಮಂದ ಬೆಳಕಿನಲ್ಲಿ ಬೆಣ್ಣೆ ಮಗು ವಿನ 'ಆ' ಫೋಟೋವನ್ನು ನೋಡುತ್ತ ಆಕೆ ಬರುವುದನ್ನೇ ಕಾಯುತ್ತಿದ್ದಳು....

ರಗ್ಗು ಝಾಡಿಸಿದುದು ರಂಗಮ್ಮನಿಗೂ ಕೇಳಿಸಿತ್ತು.

'ಏನು....ಕೇಳಿಸ್ತು......'

'ಏನು ?.......'

'ರಾತ್ರಿ ಅವಳ ಮನೇಲಿ ಮಲ್ಕೋತೀನಿ.......'

'ಅದೇನು ?........'

'ಆತ ಊರಲಿಲ್ಲ—ಹೇಳಿ ಹೋದ್ರು—ಪಾಪ ದಿನ ತುಂಬ್ದೋಳು—'

'ಆಗ್ಲಿ—ಅದ್ಕೇನು—'

ಹಗಲಿನೂಟವಾಗುವಾಗಲೇ ಪತಿಯಿಂದ ಅನುಮತಿ ಪಡೆದಿದ್ದಳು. ಸೀತಮ್ಮ ರಗ್ಗು ಝಾಡಿಸಿದಾಗ ಅದು ನೆನಪಿಗೆ ಬಂದೇ ಬಂದಿತು. ಆದರೂ ಸುಮ್ಮನಿದ್ದಳು—ಅವಳಿಗೆ ಕೋಪ ಬಂದರೆ ತಾನೇನು ಮಾಡಲು ಸಾಧ್ಯ !—ಇಷ್ಟು ಸಣ್ಣ ವಿಷಯ ಕ್ಕೆಲ್ಲ ಕೋಪಿಸಿಕೊಂಡಳೆಂದರೆ ಯಾರಾದರೂ ನಕ್ಕಾರು—ಸೆಟೆದು ಕೂತರೆ ಕೂರಲಿ—ತನಗೇನು ಅಗತ್ಯ ಹೋಗಿ ದಮ್ಮಯ್ಯ ಗುಡ್ಡೆ ಹಾಕಿ ಮಾತನಾಡಲು ?—ಚೋಟುದ್ದದವಳಿಗೆ ಹತ್ತು ಹೆತ್ತ ತಾನು ಹೆದರುವುದೆ ?—

ದೀಪ ದೊಡ್ಡದಾಗಿಯೇ ಉರಿಯುತ್ತಿತ್ತು. ಬೆಳಗಿನಿಂದ ಕೆಲಸಮಾಡಿ ಸೋತ ಮೈ ಹಾಸಿಗೆಗಾಗಿ ಹಾತೊರೆಯುತ್ತಿತ್ತು. ಹಾಸಿಗೆಯಮೇಲೆ ಕುಳಿತವಳು ಹಾಗೆಯೇ ಮಲಗಿದ ಮಗುವನ್ನು ಸ್ವಲ್ಪಸರಿಸಿ, ದೀಪವನ್ನು ಕೈದೂರವಾಗಿಟ್ಟು ಮೈ ಚಾಚಿದಳು—ಹಾಯೆನಿಸಿತು—

—ದೀಪ ದೊಡ್ಡದಾಗಿಯೇ ಉರಿಯುತ್ತಿತ್ತು—

ನಿದ್ದೆಯಿಂದ ಕಣ್ಣು ಊದಿದ್ದರೂ ಪ್ರಯತ್ನಿಸಿ ದೊಡ್ಡದು ಮಾಡಿಕೊಂಡೇ ಕಾಯುತ್ತಿದ್ದಳು, ಆಕೆಯೇಕೂಗಲೆಂದು—

'ಅಯ್ಯೋ—ಅಯ್ಯೋ—ನಾ ಸತ್ತೆ—'

............

ಮಗುವನ್ನಾಡಿಸುತ್ತಿದ್ದ ರಂಗಮ್ಮ ಕಿವಿಯುದ್ದ ಮಾಡಿದಳು—

'ಅಯ್ಯೋ—ಅಯ್ಯೋ....'......

ಸೂರು ನಡುಗಿತು—ನೆಲ ಆಡಿತು—

ರೂಮಿನ ತುಂಬ ಹೊಗೆ ಹೆಪ್ಪುಗಟ್ಟಿ ಉಸಿರು ಸಿಂತಿತು—

ಸುತ್ತ ಮಕ್ಕಳು ನಗುತ್ತಿದ್ದರು—

ಹ ಹ್ಹ ಹ್ಹ ಹ್ಹ ಹ್ಹ—ಹ್ಹ ಹ್ಹ ಹ್ಹ ಹ್ಹ....

ಘಳಿಗೆಯೂ ಕಳೆಯಲಿಲ್ಲ—ಸೀತಮ್ಮನ ಪತಿ ಎದುಗುನಿಂತು ಬೆಂಕಿ ಕಣ್ಣು ಬಿರಿದ—

ನರ್ಸ್ ಕಿಡಿಕಿಡಿಯಾಗಿ ನೋಡಿದಳು......

ತನ್ನ ಪತಿ ನುಂಗುವಂತೆ ದೃಷ್ಟಿಸಿದ........

'ಏನ್ರೀ—ಕತ್ತೆ ಹಾಗಿದೀರಿ....ಸ್ವಲ್ಪ ನೋಡ್ಕೊಳ್ಳೋಕೆ ಆಗಲಿಲ್ಲವೆ ?—'

'ಆಷ್ಟ್ಯಾಕ್ರಿ ಹೆತ್ರಿ ?—ಸುಡ್ರಿ....'......

'ಅಯ್ಯೋ ರಾಕ್ಷಸೀ!....'....

ರಂಗಮ್ಮ ಕೈಬೀಸಿ ಎಲ್ಲರನ್ನೂ ಜಡಿಯಲೆತ್ನಿಸಿದಳು......ಕೈ ಮೇಲೆ ಏಳಲೊಲ್ಲದು—

ಸೀತಮ್ಮ ಬಿದ್ದಿದ್ದಾಳೆ......

ರಕ್ತದ ಕೆರೆಯಲ್ಲಿ ಈಜುತ್ತಿದ್ದಾಳೆ ರಂಗಮ್ಮ—

ಹುಟ್ಟಿದ ಮಗು ಕಣ್ಣು ಬಿಟ್ಟು ಬೊಬ್ಬೆಯಿಕ್ಕುತ್ತಿದೆ......

ಸೂರು ನಡುಗುತ್ತಿದೆ....

............

ಧಡಕ್ಕನೆ ಎಚ್ಚರವಾಯಿತು ರಂಗಮ್ಮನಿಗೆ—ಕಣ್ಣು ಬಿಟ್ಟ ಕೂಡಲೇ ದೊಡ್ಡದಾಗಿ ಉರಿಯುತ್ತಿದ್ದ ದೀಪದ ಬೆಳಕು ಭಯಂಕರವಾಗಿ ಕಂಡಿತು....ಪಕ್ಕದಲ್ಲಿದ್ದ ಮಗು ಕಿರುಚುತ್ತಿತ್ತು....ಅಳುವ ಮಗುವನ್ನು ತೊಡೆಯಮೇಲೇರಿಸಿಕೊಂಡು ತಟ್ಟಿದಳು......ನಿದ್ದೆಯ ಪರೆ ಜಾರಿ ತನ್ನ ಅರಿವು ಹತ್ತಿದಾಗ ಧೈರ್ಯವಾಯಿತು.... ಮಗುವು ಮಲಗಿತು....ರೂಮಿಗೆ ಹೋಗಿ ಗಂಟೆನೋಡಿದಾಗ ತನ್ನ ಕಣ್ಣನ್ನು ತಾನೇ ನಂಬಲಿಲ್ಲ....ಆಗಲೆ ನಾಲ್ಕೂವರೆಯಾಗಿತ್ತು....ಹೊರಗೆ ಅಲ್ಲಲ್ಲಿ ಕಾಗೆ ಕೂಗುವುದು ಕೇಳಿಸುತ್ತಿತ್ತು. ಬುದ್ಧಿ ತಿಳಿಯಾಗುವ ಹೊತ್ತಿಗೆ ರಾತ್ರಿ ನಡೆದುದು ಜ್ಞಾಪಕವಾಗಿ ಎದೆ ಬಿಗಿಯಿತು. 'ಅಂತೂ ವೊಂದು ಹಿಡಿದಳು ಹುಡುಗಿ. ತನಗೆ ವಯಸ್ಸಾಗಿ ದಂಡ. ಹೆಂಗಸಿಗೆ ಅಷ್ಟೊಂದು ಶಾತ್ಯವಿರಬಾರದು'....ಎನಿಸಿತು. ಮೆಲ್ಲನೆದ್ದು ಹೋಗಿ ಹಂಡೆಯೊಲೆಗುರಿಯಿಕ್ಕಿದಳು.

ನೀರು ಕಾಯುವವರೆಗೂ ಮನೆಗೆಲಸ ಮಾಡುತ್ತಿದ್ದಳು. ಪದೇ ಪದೇ ಸೀತಮ್ಮನ ಮನೆಯ ಬಾಗಿಲನ್ನು ನೋಡುತ್ತಿದ್ದಳು....

ಪತಿರಾಯ ಬಚ್ಚಲಿನಿಂದ ಎದ್ದರು. ಒದ್ದೆಮಾಡಿದ್ದ ಟವೆಲನ್ನು ಒಗೆಯಲು ವಠಾರದವರೆಲ್ಲರಿಗೂ ಒಂದೇ ಆದ ನಲ್ಲಿಯ ಬುಡದಲ್ಲಿದ್ದ ಕಲ್ಲಿನ ಬಳಿ ಕೊಂಡೊಯ್ದಳು. ನಲ್ಲಿಯಲ್ಲಿ ನೀರಿನ್ನೂ ಬಂದಿರಲಿಲ್ಲ. ಎಂತಲೇ, ಒಳಗಿನಿಂದ ಒಂದ ತಪ್ಪಲೆ ನೀರು ತಂದಿಟ್ಟುಕೊಂಡಳು....

ಬಟ್ಟೆಯೊಗೆಯುವ ಸದ್ದಿನಿಂದ ಸೀತಮ್ಮನಿಗೂ ಎಚ್ಚರವಾಯಿತು. ಕಣ್ಣು ಬಿಟ್ಟಾಗ ದೀಪ ಸಣ್ಣದಾಗಿ ಉರಿಯುತ್ತಿತ್ತು. ಏನೋ ನೆನಪಾಗಿ ಮೈ ಜುಮ್ಮೆಂದಿತು......ಸಧ್ಯ !—ನೋವೂ ನಿಂತಿತ್ತು. ಮೆಲ್ಲನೆದ್ದು ಹಿಂದಿನ ಬಾಗಿಲು ತೆರೆದು ಬಚ್ಚಲಿಗೆ ಹೋದಳು. ಹೋಗುವಾಗ ತಿರುಗಿ ನೋಡಿದಳು. ರಂಗಮ್ಮನನ್ನು ನೋಡಿದ ಕೂಡಲೇ ರಾತ್ರಿಯಾದುದೆಲ್ಲ ನೆನಪಾಗಿ ಎದೆ ಹಿಂಡಿತು. ಮೌನದಿಂದ ಒಳಹೋಗಿ ಹಂಡೆಯಲ್ಲಿ ಬಗ್ಗಿ ನೋಡಿದಳು. ತಳ ಹಿಡಿದಿದ್ದ ನೀರು ಅವಳ ಮುಖ

ವನ್ನು ಅರ್ಧಮಾತ್ರ ಬಿಂಬಿಸಿ ಕೆಣಕಿತು. ಖಾಲಿ ಬಿಂದಿಗೆಯನ್ನು ಸೊಂಟಕ್ಕೇರಿಸಿದಳು–ಮೂರು ಮನೆಯಾಚೆಯಿರುವ ಬಾವಿಯಿಂದ ನೀರು ತರಲು.

ಬಚ್ಚಲು ಮನೆಯಿಂದ ಹೊರಬಂದು ರಂಗಮ್ಮನ ಮುಂದೆಯೇ ಮೌನವಾಗಿ ಮುಂದುವರೆದಳು–ತಲೆ ತಗ್ಗಿಸಿಕೊಂಡು.

'ಬಿಂದಿಗೇನ ಇಲ್ಲಿ ಕೊಡು, ಸೀತಮ್ಮ—'

ರಂಗಮ್ಮ ನುಡಿದಳು.

ಈಕೆ ಕಿವುಡಿಯಂತೆ ಹೆಜ್ಜೆಯೊಂದನ್ನು ಮುಂದಿಟ್ಟಾಗ, ರಂಗಮ್ಮ ಸೀತಮ್ಮನ ಕಂಕುಳಲ್ಲಿದ್ದ ಖಾಲಿ ಬಿಂದಿಗೆಯ ಬಾಯಿಗೆ ಕೈಯಿಟ್ಟಳು—

ಎದುರಿಗಿದ್ದ ನಲ್ಲಿ 'ಕೊರ್ ' ' ' ' ' ಎಂದು ಕೂಗಿತು.

ಮುಂಜಾವಿನ ನೀರು ಬಲು ರಭಸದಿಂದ ಕಲ್ಲಮೇಲೆ ಸುರಿಯಿತು. ಸುರಿದ ನೀರು ಆಳುದ್ದ ಚಿಮ್ಮಿ ಇಬ್ಬರ ಮುಖಕ್ಕೂ ಸಿಂಪಡಿಸಿತು. ಸೀತಮ್ಮ ರಂಗಮ್ಮನ ಮುಖವನ್ನು ನೋಡಿದಳು. ರಂಗಮ್ಮನ ಕಣ್ಣಲ್ಲಿ ಕಂಡೂಕಾಣದಂತೆ ಹನಿಯೊಂದು ತುಳುಕಿ ದೃಷ್ಟಿ ಮಸಕಾಯಿತು. ಮುಖವನ್ನು ಆತ್ತ ಹೊರಳಿಸಿದಳು !!!

—ಸದಾಶಿವ

# ಅನುಬಂಧ—೧

## ಈ ಹತ್ತು ವರ್ಷಗಳಲ್ಲಿ ಸಣ್ಣಕತೆಗಳನ್ನು ಪ್ರಕಟಿಸತೊಡಗಿರುವ ಲೇಖಕರ ಅಕಾರಾದಿ ಪಟ್ಟಿ

(ದಪ್ಪ ಅಕ್ಷರದಲ್ಲಿ ಅಚ್ಚಾಗಿರುವ ಹೆಸರುಗಳ ಕತೆಗಾರರ ಕತೆಗಳು ಈ ಸಂಕಲನದಲ್ಲಿ ಸೇರಿವೆ)

| | | |
|---|---|---|
| ೧ | 'ಅಚಲ' | ಕಲಂಕ |
| ೨ | ಅಣ್ಣಾರಾಯ ಮಿರ್ಜಿ | ಪ್ರಣಯ ಸಮಾಧಿ (೧೯೪೯) ; ವಿಜಯ ಶ್ರೀ (೧೯೫೧) |
| ೩ | ಅಂಣಿಗೇರಿ ಕೆ. ಎಲ್. | ಅವಳೇ ನನ್ನ ಪ್ರೇಯಸಿ (೧೯೫೭) |
| ೪ | ಅನುಪಮಾ | ಕಣ್ಮಣಿ (೧೯೫೩) |
| ೫ | **ಅನಂತನಾರಾಯಣ, ಎಸ್.** | ಮೈಥಿಲಿ (೧೯೫೦) ; ಬಯಕೆಯ ಬೇಲಿ (೧೯೫೧); ಬೆಳುದಿಂಗಳ ರಾತ್ರಿಯಲ್ಲಿ (೧೯೫೧) |
| ೬ | **ಅನಂತಮೂರ್ತಿ, ಯು. ಆರ್.** | ಎಂದೆಂದೂ ಮುಗಿಯದ ಕತೆ (೧೯೫೫) |
| ೭ | ಅನಂತಪದ್ಮನಾಭ ಸೋಗಾಲ | |
| ೮ | ಅರಗ ಸೂ. ವೆಂ. | ನಿಟ್ಟುಸಿರು (೧೯೫೩) |
| ೯ | 'ಅಶ್ವತ್ಥ' | ಸಣ್ಣಕತೆಗಳು (೧೯೪೭) ; ಬಾಳಹೊಳೆ (೧೯೫೧) ; ಸಣ್ಣಕತೆಗಳು (೧೯೫೨) ; ಜೀವನ (೧೯೫೭) |
| ೧೦ | ಆನಂದ ವರ್ಟಿ | |
| ೧೧ | ಇಂದಿರಾಬಾಯಿ, ವೈ. ವಿ. | ಲತಾ (೧೯೫೨) |
| ೧೨ | ಇದಿನಬ್ಬ, ಬಿ. ಎಂ. | ಬಾಳಿನ ಚಿತ್ರಗಳು (೧೯೪೯) |
| ೧೩ | 'ಇಂದಿರಾತನಯ' | ಮಾರಿಯೌತಣ (೧೯೫೦) |
| ೧೪ | **ಈಶ್ವರನ್ ಹಿರೇಮಲ್ಲೂರ** | ಹಾಲಾಹಲ (೧೯೪೬); ವಿಷನಿಮಿಷಗಳು (೧೯೪೬); ರಾಜಾರಾಣಿ ದೇಖೋ (೧೯೪೯) |
| ೧೫ | ಉಮಾದೇವಿ | ಸಣ್ಣಕತೆಗಳು (೧೯೫೪) |
| ೧೬ | ಉಮಾಪತಿಶೆಟ್ಟಿ | |
| ೧೭ | ಎಕ್ಕುಂಡಿ, ಸುಬ್ಬಣ್ಣ ರಂಗನಾಥ | |
| ೧೮ | ಉಷಾದೇವಿ | |
| ೧೯ | ಕಾತ್ಯಾಯಿನಿ, ಎಚ್. ಎಸ್. | ಮಾಲಾ ಮತ್ತು ಇತರ ಕತೆಗಳು (೧೯೫೩) |
| ೨೦ | ಕಿದಿಯೂರು, ಎಚ್. ಆರ್. | ಬಡವರ ಹೆಣ್ಣು (೧೯೫೨) |
| ೨೧ | 'ಕುಮುದಪ್ರಿಯ' | ಗೊಂಚಲು (೧೯೫೬) |
| ೨೨ | **ಕುಲಕರ್ಣಿ, ದ. ಬಾ.** | ಹಾಸುಹೊಕ್ಕು (೧೯೫೧) ; ಕಪ್ಪುಹುಡುಗಿ (೧೯೫೬) |
| ೨೩ | **ಕುಲಕರ್ಣಿ, ಸಿ. ಎಸ್.** | |

೨೪ ಕೃಷ್ಣಭಟ್, ಎಸ್. ಹಳಮೆಗಳು (೧೯೪೭)
೨೫ ಕೃಷ್ಣರಾವ್ ದೇವಳಿ
೨೬ ಕೃಷ್ಣರಾವ್ ನಾಡಿಗೇರ್ ರನ್ನಗನ್ನಡಿ
೨೭ ಕೃಷ್ಣಮೂರ್ತಿ ಕಿತ್ತೂರ ಹಂಬಲ (೧೯೫೧)
೨೮ ಕೇಶವ್, ಎ. ಒಂದೇ ದಾರಿ (೧೯೪೬)
೨೯ ಗಣಪತಿ, ಬಿ. ಡಿ. ಕುಸುಮಚಯ (೧೯೫೧)
೩೦ ಗಣಪತಿ ಮೊಳೆಯಾಲ
೩೧ ಗದಗಕರ್, ಎನ್. ಎಸ್. ಕೊನೆಯ ಕಾಣಿಕೆ (೧೯೫೨)
೩೨ ಗಿರಿ, ವಿ. ಆರ್. ವಿ. ದೈವ್ವದ ದೈವ್ವ (೧೯೫೭)
೩೩ ಗೀತಾದೇವಿ ಕುಲಕರ್ಣಿ ತೇಲಿಹೋದ ಮೋಡ (೧೯೫೭)
೩೪ 'ಗೋಪೀನಾಥ'
೩೫ ಗೋಪೀನಾಥ, ಆಚಾರ್ಯ, ಕೆ.
೩೬ ಗೋಪಾಲಕೃಷ್ಣ, ಕೆ. ಆರ್.
೩೭ ಗೋವಿಂದಭಟ್, ಕೈತಂಜೆ ಕಾಳಿಗೆ ಕಾಣಿಕೆ
೩೮ ಗೋವಿಂದಮೂರ್ತಿ ದೇಸಾಯಿ
೩೯ 'ಚದುರಂಗ' ಸ್ವಪ್ನಸುಂದರಿ (೧೯೪೮); ಶವದಮನೆ (೧೯೫೦); ಇಣಿಕುನೋಟ (೧೯೫೦); ಬಂಗಾರದ ಗೆಜ್ಜೆ (೧೯೫೧)
೪೦ ಚೆನ್ನಬಸಪ್ಪ, ಕೋ. ಗಡೀಪಾರು (೧೯೫೦); ನಮ್ಮೂರ ದೀಪ (೧೯೫೪)
೪೧ ಕುಮಾರಿ 'ಚಂದ್ರಿಕಾ' ಸಂಗಾತಿ (೧೯೪೮)
೪೨ ಚಂದ್ರಶೇಖರ, ಎಚ್. ವಿ. ಭವತಿ ಭಿಕ್ಷಾಂ ದೇಹಿ (೧೯೫೭)
೪೩ ಚಂದ್ರಶೇಖರ, ಸಿ. ಬಿ.
೪೪ ಚೌಡಪ್ಪರೆಡ್ಡಿ, ಕೆ. ಸಿ.
೪೫ ಜಯಲಕ್ಷ್ಮಿ, ಎಂ. ಕೆ.
೪೬ ಜಯಲಕ್ಷ್ಮೀದೇವಿ, ಸಿ. ಎನ್. ಅನಾಮಿಕಾ (೧೯೫೭)
೪೭ ಜಯಲಕ್ಷ್ಮಮ್ಮ
೪೮ ಜೋಶಿ, ಶಂ. ಬಾ. ಚಿನ್ನದ ಪದಕ (೧೯೫೧); ಹೊಸಬೆಳಕು (೧೯೫೨); ಕನಸಿನ ಕನ್ನಡಿ (೧೯೫೬)
೪೯ ತಿಪ್ಪಯ್ಯ, ಎಚ್.
೫೦ ತ್ರಿವೇಣಿ
೫೧ ದೀಕ್ಷಿತ್, ಸಿ. ಕೆ. ಪುತ್ರೋತ್ಸವ (೧೯೫೦)
೫೨ ದೀಕ್ಷಿತ್, ದಾಶರಥಿ
೫೩ ದೇಸಾಯಿ ದತ್ತಮೂರ್ತಿ
೫೪ ದೇವರಾಯ ಬಾಗಲೋಡಿ ಹುಚ್ಚ ಮುನಸೀಫ (೧೯೪೯); ಆರಾಧನಾ (೧೯೫೪)
೫೫ ದೇವೀರಪ್ಪ, ಎಚ್. ಎಸ್. ಸುವರ್ಣ ಸಂಪುಟ
೫೬ ದೇವೇಂದ್ರಕುಮಾರ ಹಕಾರಿ

| | | |
|---|---|---|
| ೫೭ | ನಮಿರಾಜ ಮಲ್ಲ, ಸೇವ | ಲೋಹದ ಜೀವ |
| ೫೮ | ನರೇಂದ್ರಬಾಬು, ಎಂ. | ಸಂಪಿಗೆ (೧೯೫೧) |
| ೫೯ | 'ನವಗಿರಿ ನಂದ' | |
| ೬೦ | ನರ್ಸಪ್ಪ, ಬಿ. | ಪ್ರತಿಧ್ವನಿ |
| ೬೧ | ನಾಗರಾಜ್, ಬಿ. ಆರ್. | |
| ೬೨ | ನಾಗರಾಜ, ತ. ರಾ. | |
| ೬೩ | ನಾಗರಾಜನ್, ಕೆ. ಎಸ್. | |
| ೬೪ | ನಾಗರಾಜರಾವ್, ಹ. ವೆಂ. | ಕತ್ತಲ ಬೆಳಕು (೧೯೫೧) |
| ೬೫ | ನಾಗೇಶ, ಹ. ವೆಂ. | |
| ೬೬ | ನಾಯಕ್, ಹಾ. ಮಾ. | ನಮ್ಮ ಮನೆಯ ದೀಪ (೧೯೫೬) |
| ೬೭ | ನಾಯಕ್ ಎಂ. ವಿ. | ಹೃದಯವೀಣೆ (೧೯೫೪) |
| ೬೮ | ನಾಯಕ್, ಎಸ್. ಜಿ. | ಸದಾ ಸುಮಂಗಲೆ (೧೯೫೫) |
| ೬೯ | ನಾರಾಯಣರಾವ್, ಜಿ. ಟಿ. | ವನಸುಮ (೧೯೫೧); ಕೊಡಗಿನ ಕತೆಗಳು (೧೯೫೪) |
| ೭೦ | ನಾರಂಗಿಭಟ್ಟ | ಧಕ್ಷಿಣಧ್ರುವ ನಕ್ಕಾಗ (೧೯೫೫) |
| ೭೧ | ನಿರಂಜನ | ಐ. ಎನ್. ಎ. (ಸಂಧಿಕಾಲ) (೧೯೪೫); ರಕ್ತ ಸರೋವರ; ಅನ್ನಪೂರ್ಣ; ಕೊನೆಯ ಗಿರಾಕಿ (೧೯೫೩); ವಾರದ ಹುಡುಗ (೧೯೫೭) |
| ೭೨ | ನಿಶಾಕಾಂತ | ಉಬ್ಬರ ಇಳಿತ |
| ೭೩ | ಜಿ. ಶಂ. ಪರಮಶಿವಯ್ಯ | ಕಾವಲುಗಾರ (೧೯೫೬) |
| ೭೪ | ಪಾರ್ವತಿ, ಎಚ್. ಎಸ್. | |
| ೭೫ | ಪುಟ್ಟಪ್ಪ, ಪಾಟೀಲ | ದೋಣಿ ಸಾಗಲಿ (೧೯೫೭) |
| ೭೬ | ಪುರಂದರ ರೈ. ಅಗ್ರಾಲ | ರಸಾಯನ (೧೯೫೩) |
| ೭೭ | 'ಪ್ರಕಾಶ' | ಕಲಾವಿದ (೧೯೫೪) |
| ೭೮ | ಪ್ರಮೀಳಾ, ಪಿ. ಜಿ. | ಶರಪಂಜರ |
| ೭೯ | ಬಸವರಾಜ್, ಜಿ. | ಮುಗುಳು ನಗೆ (೧೯೪೭) |
| ೮೦ | ಬಸವರಾಜ ಕಟ್ಟೀಮನಿ | ಕಾರವಾನ್ (೧೯೪೫); ಗುಲಾಬಿ ಹೂ (೧೯೪೬); ಆಗಸ್ಟ್ ೯ (೧೯೪೬); ಸೆರೆಯ ಹೊರಗೆ (೧೯೪೯); ಜೋಳದ ಬೆಳೆಯ ನಡುವೆ (೧೯೫೩) |
| ೮೧ | ಬಾಲಕೃಷ್ಣ, ಕುಲನರ್ಮ | |
| ೮೨ | ಬೀಚಿ, ಬಳ್ಳಾರಿ | |
| ೮೩ | ಬೆಲ್ಲದ, ಜಿ. ಆರ್. | |
| ೮೪ | ಬೆಳ್ಳುಬ್ಬಿ, ಕೆ. ಆರ್. | ಮುದ್ದಿನ ಕುಳ್ಳಿ (೧೯೪೮) |
| ೮೫ | ಬಿಂದುಮಾಧವ, ಕುಲಕರ್ಣಿ | ಗೇಣು ಹೊಟ್ಟೆಗಾಗಿ; ಹಾಡುವ ಹುಡುಗಿ; ಅರೆ ಯಾಳು (೧೯೫೦); ಗುಕ್ಕ (೧೯೫೨) |
| ೮೬ | ಭಟ್, ಕೆ. ಎನ್. | ಪಂಚಭಕ್ಷ್ಯ (೧೯೫೪) |
| ೮೭ | ಭಟ್, ಪ. ಸು. | ಸುಡುವಣ (೧೯೫೮); ಹಕ್ಕಿನ ಹೋರಾಟ (೧೯೪೪) |

| | | |
|---|---|---|
| ೮೮ | ಭಟ್, ಎಸ್. ಪಿ. | ಸೆರೆಮನೆಯ ಹುಡುಗಿ; ತೇರಿನ ಉಡುಗರೆ (೧೯೫೪) |
| ೮೯ | ಭಟ್, ವಿ. ಜಿ. | ಸಹ್ಯಾದ್ರಿ; ಉತ್ತರ ಕನ್ನಡದ ಜೀವನ ಚಿತ್ರಗಳು; ದಿವ್ಯ ಕತೆಗಳು; ಪೆದ್ದಂ ಕತೆಗಳು (೧೯೫೨) |
| ೯೦ | ಮಹಾದೇವ ಬಣಕಾರ | ಲೋಕದ ಕಣ್ಣು (೧೯೫೪) |
| ೯೧ | ಮಹಾಬಲೇಶ್ವರ ಭಟ್, ಟಿ. | ಗುಲಾಬಿ (೧೯೪೭) |
| ೯೨ | ಮಾನಪ್ಪ, ಕೆ. | ತ್ರಿವೇಣಿ; ಗಂಟಲಲ್ಲಿ ಗಾಳ (೧೯೪೭) |
| ೯೩ | ಮುಳಿಯ | ಪ್ರವಾಹದಲ್ಲಿ ಪ್ರತಿಬಿಂಬ (೧೯೫೪) |
| ೯೪ | ಯಶವಂತ ಚಿತ್ತಾಲ | |
| ೯೫ | ಯೋಗೀಶರಾವ್, ಪಣಂಬೂರು | ಮಗಳಲ್ಲ ಹೆಂಡತಿ (೧೯೪೮) |
| ೯೬ | ರತ್ನಾಶಾಸ್ತ್ರಿ | |
| ೯೭ | ರಾಘವ, ಜಿ. ಟಿ. | |
| ೯೮ | ರಾಜಗೋಪಾಲ, ಕ. ವೆಂ. | ಎಣಿಸದ ಹಣ (೧೯೪೯); ರಾಗ ಜಯಂತಿ (೧೯೫೪) |
| ೯೯ | ರಾಜಲಕ್ಷ್ಮಿ, ಎನ್. ರಾವ್. | ಸಂಗಮ (೧೯೫೬) |
| ೧೦೦ | ರಾಜೇಶ್ವರಿ ನರಸಿಂಹಮೂರ್ತಿ | ಬೆಳುದಿಂಗಳ ರಾತ್ರಿ (೧೯೫೭) |
| ೧೦೧ | ರಾಮಕೃಷ್ಣ ಭಟ್, ಕೆ. ಎಸ್. | ಧನಿಕ |
| ೧೦೨ | ರಾಮಕೃಷ್ಣಯ್ಯಶೆಟ್ಟಿ, ಕಾರ್ಯಹಳ್ಳಿ | ಜೀವನ ಮತ್ತು ಕತೆಗಳು (೧೯೪೯); ಅವಳ ಹುಚ್ಚು (೧೯೫೦) |
| ೧೦೩ | ರಾಮಚಂದ್ರ ಕೊಟ್ಟಲಗಿ | ಗೀಚುಗೆರೆ (೧೯೫೩) |
| ೧೦೪ | ರಾಮಚಂದ್ರ ಯರ್ಮುಂಜ | ಚಿಕಿತ್ಸೆಯ ಹುಚ್ಚು (೧೯೫೪) |
| ೧೦೫ | ರಾಮಚಂದ್ರಶರ್ಮ, ಬಿ. ಸಿ. | ಮಂದಾರ ಕುಸುಮ (೧೯೫೩); ಏಳನೇ ಜೀವ (೧೯೫೫) |
| ೧೦೬ | ರಾಮಮೂರ್ತಿ ಎಂ. | |
| ೧೦೭ | ರಾಮರಾವ್, ಆರ್. ಎಸ್. | ಸೇಡು (೧೯೪೭) |
| ೧೦೮ | ರಾಮಸ್ವಾಮಯ್ಯ, ತ. ಸು. | ಅಡ್ಡಿಕೆಯ ಕಳುವು |
| ೧೦೯ | ರಾಮು, ಲಕ್ನೋ | |
| ೧೧೦ | ರಾವ್, ಎನ್. ವಿ. | ಬದುಕಿನ ಚಿತ್ರಗಳು (೧೯೫೬) |
| ೧೧೧ | ರಾವ್, ಆರ್. ಎ. | ಯುದ್ಧರಂಗದಿಂದ (೧೯೪೯) |
| ೧೧೨ | ಲಲಿತಮ್ಮ, ಆರ್. | ಬಾಗಿನ (೧೯೫೫) |
| ೧೧೩ | ಲಲಿತಾಂಬ | ವಿಮೋಚನೆ (೧೯೫೪) |
| ೧೧೪ | 'ಲಂಕೇಶ' | |
| ೧೧೫ | 'ವರಗಿರಿ' | ಪ್ರೇಮತರಂಗ (೧೯೫೦) |
| ೧೧೬ | ವರದರಾಜ ಹುಯಿಲಗೋಳ | ಫಲಸಂಚಯ; ಚಂದ್ರತಾರೆ (೧೯೫೦); ಬಾಗಿಲು ತೆರೆದಿತ್ತು (೧೯೫೩) |
| ೧೧೭ | ವಸುದೇವ ಭೂಪಾಲಂ | ಸಿಡಿಲು (೧೯೪೭) |
| ೧೧೮ | ವಾಡಪ್ಪಿ, ಬಿ. ಆರ್. | ಯಾರು ಹೊಣೆ (೧೯೪೯); ಜೀವನ ರಂಗ (೧೯೩೫) |
| ೧೧೯ | ವಿಶಾಲಾಕ್ಷಿ ನಾರಾಯಣರಾವ್ | ಮೂಕ ಪ್ರೇಮ (೧೯೫೭) |